# 1058

# ಆಧ್ಯಾತ್ಮಿಕ ಪ್ರಶ್ನೆಗಳು – ಉತ್ತರಗಳು




ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org





# 1058

# ಆಧ್ಯಾತ್ಮಿಕ

# ಪ್ರಶ್ನೆಗಳು – ಉತ್ತರಗಳು


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಅಕ್ಟೋಬರ್–2016

ಪ್ರತಿಗಳು : 1000 **ಬೆಲೆ. 380/–**

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗ್ಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

## ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
ಓಉಖ ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

# ದೇವಾಲಯ ರಹಸ್ಯಗಳು

ಪ್ರಪಂಚ ಪಟದಲ್ಲಿ ಭಾರತದೇಶ ಆಧ್ಯಾತ್ಮಿಕಕ್ಕೆ ಹುಟ್ಟಿದ ಮನೆಯಂತೆ ಹೇಳಿದ್ದರೂ ದಕ್ಷಿಣ ಭಾರತದೇಶ ಸ್ವಚ್ಛವಾದ ದೈವ ಜ್ಞಾನಕ್ಕೆ ಬೆನ್ನೆಲುಬಿನಂತಹದು. ದಕ್ಷಿಣ ಭಾರತದೇಶದಲ್ಲಿ ನಿರ್ಮಿಸಲಾಗಿರುವ ದೇವಾಲಯಗಳು, ಸೃಷ್ಠಿ ಆದಿಯಲ್ಲಿ ದೇವರ ಜ್ಞಾನಕ್ಕೆ ಸಂಕೇತಗಳಾಗಿ ಮತ್ತು ಸಂದೇಶಗಳಾಗಿ ಪ್ರಕಾಶಿಸುತ್ತಿವೆ. ದೇವಾಲಯಗಳಲ್ಲಿನ ವಿಧಿವಿಧಾನಗಳಿಗೆ ಸರಿಯಾದ ಅರ್ಥ ತಿಳಿಯದ ದುರದೃಷ್ಟಕರ ಪರಿಸ್ಥಿತಿಯಲ್ಲಿ ಈದಿನ ನಾವಿದ್ದೇವೆ. ನಮ್ಮ ನಂತರ ಪೀಳಿಗೆಯವರು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಲಾರದ ಸ್ಥಿತಿಯಲ್ಲಿ ದೇವಾಲಯಗಳ ನಿರ್ಮಾಣವನ್ನು ಕೈಯ್ಯಾರಾ ನಾವೇ ಪ್ರಶ್ನಾರ್ಥಕ ಮಾಡಿಕೊಳ್ಳುತ್ತಿದ್ದೇವೆ. ಆಧ್ಯಾತ್ಮಿಕ ರಹಸ್ಯಗಳನ್ನು ದೇವಾಲಯಗಳಲ್ಲಿ ಹೆಜ್ಜೆ ಹೆಜ್ಜೆಗೂ ಆದಿನದ ಜ್ಞಾನಿಗಳು ನಿಕ್ಷಿಪ್ತ ಮಾಡಿರುವಾಗ, ಅವುಗಳನ್ನು ಅನ್ವೇಷಿಸುವವರಿಗೆ ಆ ರಹಸ್ಯಗಳು ತಿಳಿಯದಂತಾಗಿರುವ ಸಮಯದಲ್ಲಿ ಮರುಭೂಮಿಯಲ್ಲಿ ಒಯಾಸಿಸ್ಸಿನ ಹಾಗೆ ಲಭಿಸುವ ಅಪರೂಪವಾದ ಆಧ್ಯಾತ್ಮಿಕ ಗ್ರಂಥವೇ **"ದೇವಾಲಯ ರಹಸ್ಯಗಳು."**

ಈ ಗ್ರಂಥದಲ್ಲಿ ದೇವಾಲಯ ಗೋಪುರದಿಂದ ಹಿಡಿದು ಗರ್ಭಗುಡಿಯಲ್ಲಿ ಸಾಕಾರ ಪ್ರತಿಮೆವರೆಗೂ, ಮತ್ತೂ ಆ ಪ್ರತಿಮೆಗೆ ಮಾಡುವ ಪೂಜಾ ವಿಧಾನದಲ್ಲಿನ ಪ್ರತಿಯೊಂದು ಕಾರ್ಯಕ್ಕೂ ಸುಲಭ ಶೈಲಿಯಲ್ಲಿ, ಶಾಸ್ತ್ರಬದ್ಧವಾದ ವಿವರ ಕೊಡಲಾಗಿದೆ. ಇಲ್ಲಿಯವರೆಗೂ ಯಾರೂ ಬಿಚ್ಚಿ ಹೇಳಲಾರದ ಆಧ್ಯಾತ್ಮಿಕ ರಹಸ್ಯಗಳ ಗುಟ್ಟನ್ನು ಮೊಟ್ಟಮೊದಲ ಬಾರಿ ಪ್ರಬೋಧಾನಂದ ಯೋಗೀಶ್ವರರು ಪ್ರಪಂಚಕ್ಕೆ ತಿಳಿಯುವಂತೆ ಮಾಡಿದ್ದಾರೆ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ರಚನಾಕಾರರ ಮೊದಲ ಮಾತು



ಓದುವವರಿಗೆ ನಾವು ಮೊದಲನೆಯದಾಗಿ ತಿಳಿಸುವ ವಿಷಯವೇನೆಂದರೆ! ಈ ಪುಸ್ತಕದಲ್ಲಿ ಕೇವಲ ಆಧ್ಯಾತ್ಮಿಕಕ್ಕೆ ಸಂಬಂಧಿಸಿದ 1058 ಪ್ರಶ್ನೆಗಳು ಅದಕ್ಕೆ ಉತ್ತರಗಳು ಇವೆ. ಈ ಪ್ರಶ್ನೆ – ಉತ್ತರಗಳನ್ನು ಎರಡು ಭಾಗಗಳಾಗಿ ಬರೆಯಲಾಗಿದೆ. ಮೊದಲ ಭಾಗದಲ್ಲಿ 388 ಪ್ರಶ್ನೆಗಳು ಇತರರು ನಮ್ಮನ್ನು ಕೇಳಿರುವಂತಹವು. ಹಾಗೆ ಎರಡನೆಯ ಭಾಗದಲ್ಲಿ 670 ಪ್ರಶ್ನೆಗಳು ನಾವು ಇತರರನ್ನು ಕೇಳಿರುವಂತಹವು. ಮೊದಲ ಭಾಗದಲ್ಲಿ ಇತರರು ಕೇಳಿರುವ ಪ್ರಶ್ನೆಗಳಿಗೂ, ಎರಡನೆಯ ಭಾಗದಲ್ಲಿ ನಾವು ಕೇಳಿರುವ ಪ್ರಶ್ನೆಗಳಿಗೂ ಉತ್ತರಗಳನ್ನು ನಾವೇ ಬರೆದಿದ್ದೇವೆ. ಇನ್ನು ಸ್ವಲ್ಪ ವಿವರವಾಗಿ ಹೇಳಬೇಕೆಂದರೆ 1988 ರಿಂದ 1992 ರ ವರೆಗು ನಮ್ಮಿಂದ ಪ್ರಚುರಿತವಾದ **“ಪ್ರಬೋಧಾತ್ಮಜಮ್”** ಎನ್ನುವ ಮಾಸಪತ್ರಿಕೆಯಿಂದ ಓದುಗರು ನಮ್ಮನ್ನು ಕೇಳಿರುವ ಪ್ರಶ್ನೆಗಳಿಗೆ ಪತ್ರಿಕಾ ಮೂಲಕವಾಗಿ ಉತ್ತರವನ್ನು ತಿಳಿಸುತ್ತಿದ್ದೆವು. ಆ ಪ್ರಶ್ನೆ – ಉತ್ತರಗಳನ್ನೆ ಮೊದಲನೆಯ ಭಾಗವಾಗಿ ಮುದ್ರಿಸಿದ್ದೇವೆ. ಇನ್ನು ಎರಡನೇಯ ಭಾಗದಲ್ಲಿನ ಪ್ರಶ್ನೆಗಳನ್ನು ನಾವು 1986 ರಿಂದ ನಡೆಸುತ್ತಿರುವ ಜ್ಞಾನ ಪರೀಕ್ಷೆಗಳಲ್ಲಿ ಕೊಟ್ಟಿರುವವು. ನಾವು ಕೇಳಿರುವ ಪ್ರಶ್ನೆಗಳಿಗೆ ನಂತರ ನಾವೇ ಉತ್ತರವನ್ನು ಸಹ ವಿವರವಾಗಿ ತಿಳಿಸಿದ್ದೇವೆ. ಆ ಪ್ರಶ್ನೆಗಳೆಲ್ಲವನ್ನು ಸೇರಿಸಿ ಆಧ್ಯಾತ್ಮಿಕ ಪ್ರಶ್ನೆ – ಉತ್ತರಗಳು ಎನ್ನುವ ಈ ಪುಸ್ತಕವನ್ನು ತಯಾರಿಸಿದ್ದೇವೆ. ಆತ್ಮ ಜ್ಞಾನಕ್ಕೆ ಸಂಬಂಧಿಸಿದ ಪ್ರಶ್ನೆಗಳಾಗಿದ್ದರಿಂದ ಇದಕ್ಕೆ ಆ ಹೆಸರನ್ನು ಇಡಲಾಗಿದೆ.

ಆಧ್ಯಾತ್ಮಿಕದಲ್ಲಿ ಮನುಷ್ಯನಿಗೆ ಎಷ್ಟೋ ಪ್ರಶ್ನೆಗಳು ಬರುವುದು ಸಹಜ. ಪ್ರಶ್ನೆಗಳು ಬರುವುದು ಸಹಜವೇ ಆದರೂ ಕೆಲವರು ಎಲ್ಲಾ ಪ್ರಶ್ನೆಗಳಿಗು ಉತ್ತರವನ್ನು ಹುಡುಕುವುದಿಲ್ಲ. ಕೆಲವರು ಮಾತ್ರ ಪ್ರಶ್ನೆಗಳಿಗೆ ಉತ್ತರ ಸಿಗುವವರೆಗೂ ಅನ್ವೇಷಿಸುತ್ತಾರೆ. ಅಂತವರಿಗೆ ಗುರುಗಳು ಹಾಗೂ ಸ್ವಾಮಿಗಳಿಂದ ಉತ್ತರ ಸಿಗದಿದ್ದರೆ ಅವರು ದೇವರೇ ಇಲ್ಲವೆನ್ನುವ ನಿರ್ಧಾರಕ್ಕೆ ಬಂದು ನಾಸ್ತಿಕರಾಗಿದ್ದಾರೆ. ಉತ್ತರಗಳನ್ನು ಪೂರ್ತಿ ತಿಳಿಯದೇ ಸರಿಮಾಡಿಕೊಳ್ಳುವವರು ಆಸ್ತಿಕರಾಗಿ ಉಳಿದಿದ್ದಾರೆ. ಸರಿಯಾದ ವಿವರದೊಂದಿಗೆ ಉತ್ತರ ತಿಳಿದುಕೊಳ್ಳದೆ ಯಾರು ಏನು ಹೇಳಿದರು ನಂಬುವ ಆಸ್ತಿಕರಿಗಿಂತ ಪೂರ್ತಿ ವಿವರಕ್ಕಾಗಿ ಅನ್ವೇಷಿಸುತ್ತ ಸರಿಯಾದ ಉತ್ತರ ಕೊಡದಿರುವಾಗ ಎಂತವರನ್ನಾದರೂ ಒಪ್ಪಿಕೊಳ್ಳದವರೇ ಮೇಲೆಂದುಕೋಳ್ಳುತ್ತೇವೆ. ಪ್ರಶ್ನೆಗೆ ಉತ್ತರವಿಲ್ಲದೆ ಆಧ್ಯಾತ್ಮಿಕವೆಲ್ಲಾ ಕಲ್ಪಿತವೆನ್ನುವ ಭಾವದಿಂದ ಕೆಲವರು ನಾಸ್ತಿಕರಾಗಿದ್ದಾರೆ, ಆದರೆ ಉತ್ತರ ಸಿಕ್ಕರೆ ಜ್ಞಾನಮಾರ್ಗದಲ್ಲಿ ಈಗಿರುವ ಆಸ್ತಿಕರಿಗಿಂತಲು ಮುಂದಿರುತ್ತಾರೆ. ಹಿಂದೆ ನಾವು ಸಹ ಅನೇಕ ಸ್ವಾಮಿಗಳನ್ನು ಹಾಗೂ ಗುರುಗಳನ್ನು ಕೆಲವು ಪ್ರಶ್ನೆಗಳನ್ನು ಕೇಳಿದ್ದೇವೆ. ಆದರೆ ಅವರಿಂದ ಭಾವಪೂರ್ಣವಾದ

ಉತ್ತರ ಬರಲಿಲ್ಲ. ಕೊನೆಗೆ ನಮ್ಮ ಪ್ರಶ್ನೆಗಳಿಗೆ ಯಾರೂ ಉತ್ತರವನ್ನು ಹೇಳದ ಕಾರಣ ಸತ್ಯವೇನೋ ನಾವೇ ತಿಳಿದುಕೊಂಡು ಎಲ್ಲರಿಗೂ ಎಲ್ಲ ಪ್ರಶ್ನೆಗಳಿಗೂ ಉತ್ತರ ತಿಳಿಸಬೇಕೆಂದುಕೊಂಡಿದ್ದೇವೆ. ನನ್ನಂತೆ ಪ್ರಶ್ನೆ ಕೇಳಿ ಉತ್ತರಸಿಗದೇ ನಿರುತ್ಸಾಹದಿಂದ ಯಾರು ಇರಬಾರದೆಂದುಕೊಂಡಿದ್ದೇವೆ, ನಮ್ಮ ಧ್ಯೇಯದಲ್ಲಿ ಯಾರು ಯಾವ ವಿಧವಾಗಿ ಪ್ರಶ್ನೆ ಕೇಳಿದರು ಉತ್ತರ ಕೊಡಬೇಕೆಂದುಕೊಂಡಿದ್ದೇವೆ. ಆ ಉದ್ದೇಶದಿಂದಲೇ ಈ ಪುಸ್ತಕವನ್ನು ಬರೆಯಲಾಗಿದೆ. ಈ ಪುಸ್ತಕದಲ್ಲಿ ನಾಸ್ತಿಕರು, ಆಸ್ತಿಕರು ಕೇಳಿರುವಂತಹ 1058 ಪ್ರಶ್ನೆಗಳು ಇವೆ. ಕೆಲವರ ಊಹೆಗೂ ಸಹ ಬರಲಾರದ ಪ್ರಶ್ನೆಗಳನ್ನು ಸಹ ನಾವೇ ಪ್ರಶ್ನಿಸಿ ಅದಕ್ಕೆ ಉತ್ತರಗಳನ್ನು ಕೊಟ್ಟಿರುವುದು ಸಹ ನಡೆದಿದೆ.

ಎಷ್ಟೋ ವಿಧಗಳ ಪ್ರಶ್ನೆಗಳನ್ನು ಅವುಗಳಿಗೆ ಉತ್ತರಗಳನ್ನು ತಿಳಿಸಿದರೂ ಸಹ, ಕೆಲವರು ಅವುಗಳನ್ನು ಅರ್ಥಮಾಡಿಕೊಳ್ಳದವರು ಸಹ ಇದ್ದಾರೆ. ಅಂತವರು ಅವರಿಗೆ ಸಂಬಂಧವಿಲ್ಲದ ಅವರಿಗೆ ಉಪಯೋಗವಿಲ್ಲದ ಕೆಲವು ಪ್ರಶ್ನೆಗಳನ್ನು ಹಿಡಿದುಕೊಂಡು, ಅವುಗಳಿಗೆ ಉತ್ತರಗಳನ್ನು ಕೇಳುವರು. ಆ ಪ್ರಶ್ನೆಗಳಿಗೆ ದೇವರೇ ಇಳಿದು ಬಂದರೂ ಉತ್ತರ ಹೇಳಲಾರ. ಅಂತಹ ಪ್ರಶ್ನೆಗಳಿಗೆ ಉತ್ತರವೇ ಇರುವುದಿಲ್ಲ. ಅಂತಹ ಉಪಯೋಗವಿಲ್ಲದ ಪ್ರಶ್ನೆಗಳನ್ನು ಹಿಡಿದುಕೊಂಡು ಸಮಯವನ್ನು ವ್ಯರ್ಥ ಮಾಡಿಕೊಳ್ಳುತ್ತಿದ್ದಾರೆ. ಉತ್ತರಗಳಿಲ್ಲದ ಪ್ರಶ್ನೆಗಳು ಹೇಗಿರುತ್ತವೆಂದು ಕೆಲವರು ಕೇಳಬಹುದು. ಅಂತವುಗಳಿಗೆ ಒಂದು ಉದಾಹರಣೆಯಾಗಿ ಒಂದು ಪ್ರಶ್ನೆಯನ್ನು ಹೇಳುತ್ತೇನೆ ನೋಡಿ. ಒಂದು ಜೋಳದ ದಂಟನ್ನು ಕರು ತಿನ್ನುತ್ತಿದೆ. ಜೋಳದ ದಂಟು ಒಂಬತ್ತು ಅಡಿ ಉದ್ದವಿದೆ. ಕರು ಮೂರು ಅಡಿ ಉದ್ದವಿದೆ. ಮೂರು ಅಡಿ ಉದ್ದವಿರುವ ಕರು, ಒಂಬತ್ತು ಅಡಿ ದಂಟನ್ನು ತಿನ್ನುವಾಗ, ಮುಂದೆ ಬಾಯಿಂದ ಒಳಗೆಹೋಗುವ ದಂಟು, ಹಿಂದೆ ಬರುತ್ತಿಲ್ಲವೆಂದು ಕೇಳುವವರಿದ್ದಾರೆ. ಅವರ ಉದ್ದೇಶದಲ್ಲಿ ಕರು ಆರು ಅಡಿ ದಂಟನ್ನು ತಿಂದಾಗ ಮುಂದೆ ಬಾಯಿ ಕಡೆ ಮೂರು ಅಡಿ ಕಾಣಿಸುತ್ತಿದೆ ಹಿಂದೆ ಮೂರು ಅಡಿ ಕಾಣಿಸಬೇಕಲ್ಲವೆ! ಎನ್ನುವುದು ಅವರ ಭಾವ. ಹಾಗೆ ಕಾಣಿಸುವುದಿಲ್ಲವೆಂದು ಹೇಳಿದರೂ ಅದು ಅವರಿಗೆ ಉತ್ತರವೆನಿಸುವುದಿಲ್ಲ. ಕಾಣಿಸುತ್ತೆ ಎಂದು ಹೇಳಿದರೇನೇ ಅವರ ದೃಷ್ಠಿಯಲ್ಲಿ ಉತ್ತರವಾಗುತ್ತದೆ. ಅಂತವರಿಗೆ ಈ ಲೋಕದಲ್ಲಿ ಎಲ್ಲೂ ಉತ್ತರ ಸಿಗುವುದಿಲ್ಲ. ಇಂತಹ ಪ್ರಶ್ನೆಗಳನ್ನು ಸಪ್ಪೆದಂಟಿನ ಪ್ರಶ್ನೆಗಳೆನ್ನಬಹುದು. ಅವರಿಗೆ ಸತ್ಯವನ್ನು ಹೇಳಿದರೆ ಅರ್ಥವಾಗುವುದಿಲ್ಲ. ಹಾಗಿರುವಾಗ ಅವರ ಪ್ರಶ್ನೆಗೆ ಉತ್ತರವೇ ಇರುವುದಿಲ್ಲ.

ಉತ್ತರ ಹೇಳಿದರು ಅರ್ಥವಾಗದವರು ಅವರ ಪ್ರಶ್ನೆಗಳಿಗೆ ಉತ್ತರವೇ ಇಲ್ಲವೆಂದುಕೊಳ್ಳುತ್ತಾರೆ. ಅಂತವರು ಎರಡು ವಿಧಗಳಲ್ಲಿ ಇದ್ದಾರೆ. ಒಂದು ವಿಧದವರು ಸಪ್ಪೆ ದಂಟಿನ ಪ್ರಶ್ನೆಗಳನ್ನು ಕೇಳುವವರು. ಎರಡನೇ ವಿಧದವರು ಧರ್ಮ ವಿರುದ್ಧ ಪ್ರಶ್ನೆಗಳಿರುವವರು. ಸಪ್ಪೆ ದಂಟು ಪ್ರಶ್ನೆಗಳ ಉದಾಹರಣೆ ಹೇಳಿಕೋಂಡಿದ್ದೇವೆ ಅಲ್ಲವೆ! ಈಗ ಎರಡನೇ ವಿಧವಾದ ಧರ್ಮವಿರುದ್ದ ಪ್ರಶ್ನೆ ಕೇಳುವವರನ್ನು ಹೇಳುತ್ತೇವೆ ನೋಡಿ. ದೇವರಿಗೆ ಸಂಬಂಧಿಸಿರುವವು ಧರ್ಮಗಳು. ಪರಮಾತ್ಮ ಭೂಮಿಯಮೇಲೆ ಬಂದಾಗ ಆತನು ತನ್ನ ಧರ್ಮಗಳನ್ನೇ ತಿಳಿಸಿ ಹೋಗುವನು. ಆತನು ಭೂಮಿಯಮೇಲೆ ಇದ್ದಾಗ ಧರ್ಮಗಳನ್ನೇ ಆಚರಿಸುವನು. ಅಂತಹ ಧರ್ಮಗಳು ಮಾನವನಿಗೆ ಅರ್ಥವಾಗದಿದ್ದಾಗ ಕೇಳಿ ತಿಳಿಯಬೇಕು. ಹಾಗೆ ತಿಳಿದುಕೊಳ್ಳದೆ ಭಗವಂತನು ನಡೆದ ನಡಿಗೆಯನ್ನೇ ತಪ್ಪು ಎನ್ನುತ್ತಿದ್ದಾರೆ. ಧರ್ಮ ವಿರುದ್ಧವಾದ ಪ್ರಶ್ನೆಗಳನ್ನು ಕೇಳುತ್ತಾರೆ. ಧರ್ಮ ಬದ್ಧವಾಗಿ ಶಾಸ್ತ್ರ ಬದ್ಧವಾಗಿ ಸಮಾಧಾನ ಹೇಳಿದರೂ ಧರ್ಮ ವಿರುದ್ಧ ಭಾವದಲ್ಲಿ ಇರುವವರಿಗೆ ಅದು ಉತ್ತರವೇ ಅಲ್ಲ ಎಂದುಕೊಳ್ಳುತ್ತಾರೆ. ಅವರ ಭಾವ ಹೇಗಿರುತ್ತದೆಂದು ಸ್ವಲ್ಪ ವಿವರಿಸಿಕೊಂಡು ನೋಡುವುದಾದರೆ, ಅವರು ಪ್ರಪಂಚ ಧರ್ಮಗಳನ್ನು ತೆಗೆದುಕೊಂಡು, ಪರಮಾತ್ಮ ಧರ್ಮಗಳ ಜೊತೆ ಹೋಲಿಸಿಕೊಂಡು, ಎರಡೂ ಒಂದೇ ವಿಧವಾಗಿ ಇರಬಹುದಲ್ಲವೆ! ಎಂದುಕೊಳ್ಳುತ್ತಾರೆ. ಪ್ರಪಂಚ ಧರ್ಮಗಳಿಗೂ ಪರಮಾತ್ಮ ಧರ್ಮಗಳಿಗೂ ಹೋಲಿಕೆ ಇರುವುದಿಲ್ಲವೆನ್ನುವ ಮಾತು ಅವರಿಗೆ ತಿಳಿಯದೇ ಒಂದು ಸಲ ಒಂದು ಕೆಲಸವನ್ನು ಮಾಡಿದವನು ನಂತರ ಯಾವಾಗಾದರು ಆ ಕೆಲಸ ಮಾಡಬಹುದಲ್ಲವೇ! ಎಂದು ಒಂದು ಸಲ ಕನ್ನಡಿಯಿಂದ ಒಂದು ವಸ್ತುವನ್ನು ನೋಡಿದಾಗ ಆ ಕನ್ನಡಿಯಿಂದಲೇ ಯಾವಾಗಾದರು ಯಾವ ವಸ್ತುವನ್ನಾದರು ನೋಡಬಹುದಲ್ಲವೆ! ಎಂದು ಪ್ರಪಂಚ ಧರ್ಮವನ್ನು ತೆಗೆದುಕೊಂಡು ಕೇಳುತ್ತಾರೆ. ಒಂದು ಸಲ ಒಬ್ಬ ರೋಗಿಯ ರೋಗವನ್ನು ಗುಣಪಡಿಸಿದ ಯೋಗಿ ಎಂದಾದರು ಯಾವ ರೋಗಿಯನ್ನಾದರು ಗುಣಪಡಿಸಬಹುದಲ್ಲವೆ! ಎಂದು ಯೇಸುಪ್ರಭು ಕುರುಡನನ್ನು, ಕುಷ್ಠ ರೋಗಿಯನ್ನು ವಾಸಿ ಮಾಡಿ ಸತ್ತವನನ್ನು ಸಹ ಬದುಕಿಸಿದ್ದಾನೆನ್ನುತ್ತಾರೆ. ಉಳಿದ ಕುಷ್ಠ ರೋಗಿಗಳನ್ನು, ಉಳಿದ ಕುರುಡರನ್ನು, ಉಳಿದ ಸತ್ತವರನ್ನು ಏಕೆ ವಾಸಿಮಾಡಲಿಲ್ಲ, ಇತರರ ಸಾವನ್ನು ಪಾರು ಮಾಡಿದವನು ಆತನೇಕೆ ಸಾವನ್ನು ತಪ್ಪಿಸಿಕೊಳ್ಳಲಿಲ್ಲ. ಎಂದು ಪ್ರಾಪಂಚಿಕ ಸೂತ್ರಗಳನ್ನು ಪರಮಾತ್ಮ ಸೂತ್ರಗಳೊಂದಿಗೆ ಹೋಲಿಸಿ ಜ್ಞಾನ ಮತ್ತು ಜ್ಞಾನ ಶಕ್ತಿ ಎಲ್ಲಾ ಬೂಟಾಟಿಕೆ ಎನ್ನುತ್ತಾರೆ. ಪರಮಾತ್ಮ ಜ್ಞಾನವು ಜ್ಞಾನಶಕ್ತಿ ಪ್ರಪಂಚದಲ್ಲಿನ ಶಕ್ತಿಯಂತೆ ಇರಬೇಕೆನ್ನುವುದು ಅವರ ಭಾವನೆ. ಪರಮಾತ್ಮ ಧರ್ಮ ಬೇರೆ, ಪ್ರಪಂಚ ಧರ್ಮ ಬೇರೆ ಎಂದು ಹೇಳಿದರೂ

ಅವಗಾಹನೆಯಾಗದೆ ಜ್ಞಾನವೆನ್ನುವುದೆ ಬೂಟಾಟಿಕೆ ಎನ್ನುತ್ತಾರೆ. ಪ್ರಪಂಚ ಅವಗಾಹನೆಯಾದಂತೆ ಪರಮಾತ್ಮ ಸಹ ಅವಗಾಹನೆಯಾಗ ಬೇಕೆನ್ನುವುದು ಅವರ ಭಾವ. ಅವರ ಭಾವನೆ ಪ್ರಕಾರ ಸರಿಯಾದ ಉತ್ತರವು ಸಹ ಅವರಿಗೆ ಸರಿಅಲ್ಲವೆಂದು ತಿಳಿಯುತ್ತದೆ. ಅಂತವರಿಗೆ ಉತ್ತರ ಸಿಗುವುದಿಲ್ಲ.

ಈ ಎರಡು ವಿಧದವರಿಗೆ ಎಲ್ಲೂ ಉತ್ತರ ಸಿಗುವುದಿಲ್ಲ. ನಾವು ಈ ಪುಸ್ತಕದಲ್ಲಿ ಬಹಳ ಮಟ್ಟಿಗೆ ಎಲ್ಲರಿಗೂ ಅರ್ಥವಾಗುವಂತೆ ಪ್ರಶ್ನೆ – ಉತ್ತರಗಳನ್ನು ಹೊಂದಿಸಿದ್ದೇವೆ. ನಮ್ಮ ಪ್ರಶ್ನೆಗಳಿಗೆ ಒಂದು ಪದ ಅಥವಾ ಒಂದು ವಾಕ್ಯದಲ್ಲಿಯೇ ಉತ್ತರವಿದೆ. ಆ ಉತ್ತರವನ್ನು ವಿವರಿಸಿಕೊಂಡರೆ ಸ್ವಲ್ಪ ದೊಡ್ಡದಾಗುತ್ತದೆ. ಅರ್ಥಮಾಡಿಕೊಳ್ಳುವವರಿಗೆ ಒಂದು ಮಾತು ಅಥವಾ ಒಂದು ಪದದಲ್ಲಿಯೇ ಅರ್ಥವಾಗುತ್ತದೆ. ಅರ್ಥವಾಗದವರಿಗೆ ವಿವರವನ್ನು ಓದಬೇಕಾಗಿರುತ್ತದೆ. ನಮ್ಮ ಭಾವನೆಯಲ್ಲಿ ಎಲ್ಲರೂ ವಿವರವನ್ನು ಓದುವುದೇ ಒಳ್ಳೆಯದೆಂದುಕೊಳ್ಳುತ್ತೇವೆ. ಹಾಗೆ ಓದುವುದರಿಂದ ಆ ಪ್ರಶ್ನೆಯಲ್ಲಿ ಎಂತಹ ಸಂಶಯ ಇರುವುದಿಲ್ಲ. 1058 ಪ್ರಶ್ನೆಗಳಿಗೆ ಉತ್ತರ ಓದಿದ ನಂತರ ಯಾರ ತಲೆಯಲ್ಲಿಯೂ ಎಂತಹ ಪ್ರಶ್ನೆ ಉಳಿಯದೇ ಹೋಗುತ್ತದೆಂದು, ಸಂಪೂರ್ಣ ಆಧ್ಯಾತ್ಮಿಕ ವಿದ್ಯೆ ಎಲ್ಲವೂ ತಿಳಿಯುವುದೆಂದು ನಮ್ಮ ಉದ್ದೇಶ. ಆಧ್ಯಾತ್ಮಿಕದಲ್ಲಿ ಯಾರಿಗೆ ಯಾವ ಪ್ರಶ್ನೆ ಬಂದರೂ ಆ ಪ್ರಶ್ನೆಗೆ ಉತ್ತರ ಈ ಪುಸ್ತಕದಲ್ಲಿ ತಪ್ಪದೇ ಇರುವುದೆಂದು ನಾವು ಭಾವಿಸಿದ್ದೇವೆ. ಈ ಪುಸ್ತಕದಲ್ಲಿನ ಮೊದಲನೆಯ ಭಾಗ ಎಲ್ಲರ ತಲೆಯಲ್ಲಿ ಬರುವ ಪ್ರಶ್ನೆಗಳಾದರೆ, ಎರಡನೆಯ ಭಾಗದಲ್ಲಿ ನಮ್ಮೊಬ್ಬರ ತಲೆಯಲ್ಲಿರುವವು ಮಾತ್ರವೇ ಎಂದು ತಿಳಿಸುತ್ತಿದ್ದೇವೆ. ನಿಮ್ಮ ತಲೆಯಲ್ಲಿನ, ನಮ್ಮ ತಲೆಯಲ್ಲಿನ ಪ್ರಶ್ನೆಗಳು ಆಧ್ಯಾತ್ಮಿಕವನ್ನು ಸಂಪೂರ್ಣವಾಗಿ ಪ್ರಶ್ನಿಸಿ ಇನ್ನೊಂದು ಪ್ರಶ್ನೆ ಉಳಿಯದಂತೆ ಮಾಡಿವೆ ಎಂದುಕೊಳ್ಳುತ್ತೇವೆ. ಈ ಪುಸ್ತಕವನ್ನು ಓದಿ ಬ್ರಹ್ಮ ವಿದ್ಯೆಯಲ್ಲಿ ಪ್ರಶ್ನೆಗಳು ಹೀಗಿರುತ್ತವೆಂದು ಉತ್ತರಗಳು ಸಹ ಈ ವಿಧವಾಗಿ ಇರುತ್ತವೆಂದು ತಿಳಿಯಬೇಕೆಂದು ಕೋರುತ್ತಿದ್ದೇವೆ.

ಇಂತಿ

**ತ್ರಿಮತ ಐಕ್ಯೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ**

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

रेल राज्य मंत्री
भारत सरकार
नई दिल्ली-110 001
Minister of State for Railways
Government of India
New Delhi-110 001

## ಬಂಡಾರು ದತ್ತಾತ್ರೇಯ

(ಭಾರತ ರೈಲ್ವೇ ಸಹಾಯ ಮಂತ್ರಿ)

## ಪರಿಚಯ

ಆಧ್ಯಾತ್ಮಿಕತೆ ಬರವಾಗಿ ಹೋಗುತ್ತಿರುವ ಈ ದಿನಗಳಲ್ಲಿ ಈ ಪುಸ್ತಕವು ಬಿಡುಗಡೆ ಆಗಿರುವುದು ಬಹಳ ಸಂತೋಷಿಸಬೇಕಾದ ವಿಷಯ. ಈ ಪುಸ್ತಕದಲ್ಲಿ 1058 ಪ್ರಶ್ನೆಗಳಿರುವುದು ನೋಡಿದರೆ ಬ್ರಹ್ಮ ವಿದ್ಯೆಯಲ್ಲಿ ಇಷ್ಟು ಪ್ರಶ್ನೆಗಳಿರುತ್ತವಾ ಎಂದು ಆಶ್ಚರ್ಯವಾಗುತ್ತದೆ. ಪ್ರಪಂಚ ವಿದ್ಯೆಗಳಲ್ಲಿ ಯಾವ ವಿಷಯದಲ್ಲಿಯೂ ಇಲ್ಲದ ಇಷ್ಟು ಪ್ರಶ್ನೆಗಳನ್ನು ನೋಡಿದರೆ ಎಲ್ಲಾ ವಿದ್ಯೆಗಳಿಗಿಂತಲು ಬ್ರಹ್ಮವಿದ್ಯೆ ಬಹಳ ದೊಡ್ಡದೆನ್ನುವ ವಿಷಯ ಜ್ಞಾಪಕಕ್ಕೆ ಬಾರದೆ ಇರುವುದಿಲ್ಲ.

ಪ್ರಶ್ನೆಗಳು ಕೇಳಬಾರದು ನಾವು ಹೇಳುವುದು ಮಾತ್ರ ಕೇಳಬೇಕೆಂದು ಹೇಳುವ ಗುರುಗಳಿರುವ ಈ ಕಾಲದಲ್ಲಿ, ಪ್ರಜೆಗಳಿಂದ ಪ್ರಶ್ನೆಗಳನ್ನು ಕೇಳಿಸಿಕೊಂಡು, ಅವರಿಗೆ ಬ್ರಹ್ಮ ವಿದ್ಯೆಯಲ್ಲಿ ಏನು ಅವಗಾಹನೆ ಆಗಲಿಲ್ಲವೋ ತಿಳಿದುಕೊಂಡು, ಅವರ ಪ್ರಶ್ನೆಗಳಿಗೆ ಉತ್ತರಿಸಿ ಪ್ರಜೆಗಳೆಲ್ಲರಿಗೂ ಸಹ ಬ್ರಹ್ಮವಿದ್ಯೆಯಲ್ಲಿ ಆಸಕ್ತಿಯನ್ನು ಕಲ್ಪಿಸುವುದು ಬಹಳ ದೊಡ್ಡ ವಿಶೇಷವೇ ಎಂದು ಹೇಳಬಹುದು.

ಗುರುಗಳು ಶಿಷ್ಯರು ಎನ್ನುವ ಸಾಂಪ್ರದಾಯ ಹಿಂದೂ ಮತದಲ್ಲಿದ್ದರೂ ಶಿಷ್ಯರಿಗೆ ಗುರುಗಳ ಹತ್ತಿರ ಬೇಕಾಗಿರುವುದು ಉಪದೇಶ, ಗುರುಗಳಿಗೆ ಶಿಷ್ಯರಿಂದ ಬೇಕಾಗಿರುವುದು ಕಾಣಿಕೆಗಳು. ಅದಕ್ಕಿಂತ ದೊಡ್ಡ ಸಂಬಂಧವು ಗುರು ಶಿಷ್ಯರ ಮಧ್ಯೆ ಏನು ಇರುವುದಿಲ್ಲ. ಇಲ್ಲಿ **ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು** ಗುರು ಶಿಷ್ಯರ ಸಂಬಂಧವು ಉಪದೇಶ ಕಾಣಿಕೆಗಳಿಂದ ಸರಿಹೋಗುವುದಿಲ್ಲವೆಂದು

ತಿಳಿದು, ಸಮಯದೊರಕಿದಾಗಲೆಲ್ಲಾ ಜ್ಞಾನವನ್ನು ಬೋಧಿಸುವುದು ಗುರುಗಳ ಕರ್ತವ್ಯವೆಂದು, ಹಾಗೆ ಬೋಧಿಸುವುದಲ್ಲದೆ ಶಿಷ್ಯರು ಎಲ್ಲಿಯವರೆಗು ಅವಗಾಹನೆ ಮಾಡಿಕೊಂಡಿದ್ದಾರೆಂದು ಅವರಿಗೆ ಬರವಣಿಗೆ ಪರೀಕ್ಷೆಗಳು  ನಿರ್ವಹಿಸುವುದು, ಪರೀಕ್ಷಾನಂತರ ಪ್ರಶ್ನೆಗಳನ್ನು ಉತ್ತರಗಳನ್ನು ವಿವರವಾಗಿ ಹೇಳಿ ಅವನ್ನು ಪುಸ್ತಕ ರೂಪದಲ್ಲಿ ಕೊಟ್ಟಿರುವುದು ನೋಡಿದರೆ, ಈ ಪದ್ಧತಿಯನ್ನು ಎಲ್ಲರೂ ಎಲ್ಲಾಕಡೆ ಆಚರಿಸಿದರೆ ಭಾರತ ದೇಶದಲ್ಲಿ ದೇವರ ಬಗ್ಗೆ ಅಜ್ಞಾನವೇ ಇರುವುದಿಲ್ಲವೆಂದು ಕೊಳ್ಳುತ್ತೇನೆ.

ಮನುಷ್ಯನಲ್ಲಿ ದೈವ  ಜ್ಞಾನವಿಲ್ಲದೆ ಹೋಗಿ ಮತ ದ್ವೇಷಗಳನ್ನು ಹೆಚ್ಚಿಸಿಕೊಂಡು, ಮತ ಸಾಮರಸ್ಯವಿಲ್ಲದೇ ಹೋದ ಈ ಕಾಲದಲ್ಲಿ, ಆಧ್ಯಾತ್ಮಿಕವೆಂದರೆ ಏನೆಂದು ತಿಳಿಯದ ಪ್ರಸ್ತುತ ಪರಿಸ್ಥಿತಿಯಲ್ಲಿ, ಇಂತಹ ಪುಸ್ತಕ ಬಿಡುಗಡೆ ಆಗುವುದು ಬಹಳ ಸಂತೋಷದಾಯಕವಾದ ವಿಷಯ.

ನಿತ್ಯವು ಎಷ್ಟೋ ಸಾಮಾಜಿಕ ವಿಷಯಗಳಲ್ಲಿ ಮುಳುಗಿ ತೇಲುತ್ತಿರುವ ನಮ್ಮನ್ನು **"ಆಧ್ಯಾತ್ಮಿಕ ಪ್ರಶ್ನೆಗಳು–ಉತ್ತರಗಳು"** ಎನ್ನುವ  ಈ ಪುಸ್ತಕಕ್ಕೆ ಪರಿಚಯವನ್ನು ಬರೆಯ ಬೇಕೆಂದು ಕೇಳಿ ನಮ್ಮ ದೃಷ್ಟಿಯನ್ನೂ ಸಹ ಸ್ವಲ್ಪ ಹೊತ್ತು ಜ್ಞಾನ ವಿಷಯಗಳಲ್ಲಿ ತೊಡಗಿಸಿಕೊಳ್ಳುವಂತೆ ಮಾಡಿ, ಈ ಪುಸ್ತಕಕ್ಕೆ ಪರಿಚಯ ವಾಕ್ಯಗಳನ್ನು ಬರೆಯಲು ಅವಕಾಶವನ್ನು ಕೊಟ್ಟಿರುವುದಕ್ಕೆ ಆಚಾರ್ಯ ಪ್ರಬೋಧಾನಂದ ಯೊಗೀಶ್ವರರಿಗೆ  ನಮ್ಮ ಕೃತಜ್ಞತೆಗಳನ್ನು ತಿಳಿಸುತ್ತಾ..



ಇಂತಿ

**(ಬಂಡಾರುದತ್ತಾತ್ರೇಯ)**

ಭಾರತ ರೈಲ್ವೇ ಸಹಾಯ ಮಂತ್ರಿ

# ಆಧ್ಯಾತ್ಮಿಕ ಪ್ರಶ್ನೆಗಳು – ಉತ್ತರಗಳು

## ಮೊದಲನೆಯ – ಭಾಗ

ಈ ಮೊದಲನೆಯ ಭಾಗದಲ್ಲಿ 388 ಪ್ರಶ್ನೆಗಳು ಎಷ್ಟೋ ಜನ ಓದುಗರು ಕೇಳಿರುವವು. ಒಬ್ಬೊಬ್ಬರು ಒಂದು ಪ್ರಶ್ನೆ ಯಿಂದ ಹತ್ತು ಪ್ರಶ್ನೆಗಳವರೆಗು ಕೇಳಿದ್ದಾರೆ. ಯಾರು ಯಾವ ಪ್ರಶ್ನೆ ಕೇಳಿರುವುದು ತಿಳಿಯುವುದಕ್ಕೆ ಆ ಪ್ರಶ್ನೆಗಳ ಮೇಲ್ಭಾಗದಲ್ಲಿ ಅವರ ಹೆಸರು, ಊರಿನ ಹೆಸರನ್ನೂ ಸಹ ಬರೆಯಲಾಗಿದೆ. ಎಷ್ಟೋ ಜನ ಎಷ್ಟೋ ಸಂಶಯಗಳಿಂದ ಅನೇಕ ವಿಧವಾಗಿ ಕೇಳಿರುವ ಪ್ರಶ್ನೆಗಳೆಲ್ಲ ಮೊದಲನೆ ಭಾಗದಲ್ಲಿಯೇ ಜೋಡಿಸಿದ್ದೇವೆ. ಎರಡನೆಯ ಭಾಗದಲ್ಲಿರುವ 670 ಪ್ರಶ್ನೆಗಳು ನಮ್ಮ ತಲೆಯಿಂದ ಬಂದಿರುವವು. ಅವು ಅರ್ಥವಾಗಬೇಕೆಂದರೆ ಮೊದಲು ಮೊದಲನೆಯ ಭಾಗದಲ್ಲಿರುವ ಪ್ರಶ್ನೆಗಳು ಅರ್ಥವಾಗಬೇಕಾಗಿದೆ. ಮೊದಲನೆಯ ಭಾಗದಲ್ಲಿರುವ ಉತ್ತರಗಳು ಅರ್ಥವಾದರೆ ನಮ್ಮ ಭಾವ ಸ್ವಲ್ಪ ತಿಳಿದಂತಾಗುತ್ತದೆ. ತದನಂತರ ಸ್ವಲ್ಪ ಕಷ್ಟವಾದ ನಮ್ಮ ಪ್ರಶ್ನೆಗಳು ಸುಲಭವಾಗಿ ಅರ್ಥವಾಗುತ್ತವೆ. ಮೊದಲನೆಯದಾಗಿ ನಿಮ್ಮಿಂದ ಬಂದಿರುವ ಪ್ರಶ್ನೆಗಳು ನಿಮಗೆ ಅರ್ಥವಾದರೆ ನಂತರ ನಮ್ಮಿಂದ ಬಂದಿರುವ ಪ್ರಶ್ನೆಗಳು ಅರ್ಥವಾಗುತ್ತವೆ. ಆದಕಾರಣ ಪ್ರಪ್ರಥಮವಾಗಿ ಮೊದಲನೆಯ ಭಾಗ ಓದಿ ನಂತರ ಎರಡನೆಯ ಭಾಗವನ್ನು ಪ್ರವೇಶಿಸಬೇಕೆಂದು ಕೋರುತ್ತೇವೆ.

**ಆದಿಲಕ್ಷ್ಮೀ, ಮೇಲಾಲತ್ತೂರು, ರಾಯವೇಲೂರು (ಜಿಲ್ಲಾ)**

**1. ದೇವರಿದ್ದಾನೆಂದು ಹೇಳುತ್ತಾರೆ ಇದ್ದರೆ ಏಕೆ ಕಾಣಿಸುವುದಿಲ್ಲ?**

**ಉ.** ಹಾರದಲ್ಲಿ ದಾರವಿದೆ, ಆದರೆ ಕಾಣಿಸುವುದಿಲ್ಲ. ಹಾಗೆ ದೇವರಿದ್ದಾನೆ ಆದರೆ ಕಾಣಿಸುವುದಿಲ್ಲ. ಕಾಣಿಸುವುದೆಲ್ಲ ಪ್ರಪಂಚವೇ. ಕಾಣಿಸದವನೇ ದೇವರು, ದೇವರು ಒಂದು ವಸ್ತು ಅಲ್ಲ, ಒಂದು ಪದಾರ್ಥವು ಅಲ್ಲ, ಒಂದು ಆಕಾರವು ಇಲ್ಲ, ಒಂದು ಹೆಸರು ಅಲ್ಲ, ಒಂದು ಸ್ಥಾನವು ಅಲ್ಲ, ಸ್ತ್ರೀ ಅಲ್ಲ, ಪುರುಷನು ಅಲ್ಲ, ಹೋಲಿಸಿ ಹೇಳುವುದಕ್ಕೆ ಈ ಪ್ರಪಂಚದಲ್ಲಿ ಯಾವುದಕ್ಕೂ ಸರಿಸಾಟಿ ಯಾದವನು ಅಲ್ಲ. ಬಣ್ಣ, ರುಚಿ, ವಾಸನೆ, ಆಕಾರ ಇಲ್ಲದವನು, ಇಂದ್ರಿಯಗಳೆನ್ನುವ ಕಣ್ಣಿಗೆ ಕಾಣಿಸುವ ದೃಶ್ಯವಲ್ಲ, ಕಿವಿಗೆ ಕೇಳಿಸುವ ಶಬ್ದವಲ್ಲ, ಮೂಗಿಗೆ ತಿಳಿಯುವ ವಾಸನೆಯೂ ಅಲ್ಲ, ನಾಲಿಗೆಗೆ ತಿಳಿಯುವ ರುಚಿಯು ಅಲ್ಲ, ಚರ್ಮಕ್ಕೆ ತಿಳಿಯುವ ಸ್ಪರ್ಶವಲ್ಲ, ಇಂದ್ರಿಯಾಗೋಚರನು. ಆದ್ದರಿಂದ ಇಂದ್ರಿಯಗಳಿಗೆ ಸಂಬಂಧವಿರುವವರೆಗೂ ಯಾರಿಗೂ ತಿಳಿಯುವುದಿಲ್ಲ. ಇಂದ್ರಿಯ ವಿಷಯಗಳಿಗೆ

ಅತೀತನಾಗಿರುವಾಗಲೆ ಇಂದ್ರಿಯಾತೀತನಾದ ದೇವರು ತಿಳಿಯುವನು. ಆದ್ದರಿಂದ ಇಂದ್ರಿಯ ವಿಷಯಗಳಲ್ಲೇ ಎಲ್ಲಾ ವೇಳೆಯಲ್ಲಿ ಸಂಬಂಧವಿರುವವರಿಗೆ ತಿಳಿಯುವವನಲ್ಲ. ಹೂವಿನ ಹಾರಕ್ಕೆ ಆಧಾರವಾಗಿರುವ ದಾರವನ್ನು ಹಾರದಲ್ಲಿಯೇ ಹುಡುಕಿದರೆ ಸಿಗುವಹಾಗೆ ಎಲ್ಲಾ ಶರೀರಗಳಿಗೂ ಆಧಾರವಾದ ದೇವರನ್ನು ಶರೀರದಲ್ಲೇ ಹುಡಿಕಿ ತಿಳಿದುಕೊಳ್ಳಬೇಕು.

**ಸಿ.ನಾರಾಯಣ ರೆಡ್ಡಿ. ತಾಡಿಪತ್ರಿ**

**2. ಬಹಳ ಜನರು ಪಾಪವನ್ನು ಮಾತ್ರವೇ ಕರ್ಮವೆನ್ನುತ್ತಾರೆ. ಪುಣ್ಯವನ್ನು ಏನನ್ನಬಹುದು?**

ಉ. ಬಹಳ ಜನ ಪಾಪವನ್ನು ಉದ್ದೇಶಿಸಿ ಕರ್ಮ ಎನ್ನುವುದು ವಾಸ್ತವ. ಕರ್ಮವೆಂದರೆ ಒಂದು ಪಾಪವೇ ಅಲ್ಲ, ಪಾಪ ಮತ್ತು ಪುಣ್ಯ ಇವೆರಡರ ಮಿಶ್ರಣವನ್ನು ಕರ್ಮ ಎಂದು ತಿಳಿಯಬೇಕು. ಪುಣ್ಯ ಸುಕರ್ಮ, ಪಾಪ ದುಷ್ಕರ್ಮ. ಸುಕರ್ಮವಾದರೂ, ದುಷ್ಕರ್ಮವಾದರೂ ಕರ್ಮ ಒಂದೇ ಆಗುತ್ತದೆ.

**ಪಿ. ಧನಲಕ್ಷ್ಮೀ, ಕರ್ನೂಲ್**

**3. ಗುರುವಿಗೆ ಗುಣಗಳು ಇರುತ್ತವೆಂದು ತಿಳಿಸಿದ್ದೀರ. ಗುಣಗಳು ಇರುವಾಗ ಗುರು ಹೇಗಾಗುತ್ತಾನೆ?**

ಉ. ಶರೀರವು ಕದಲುತ್ತಾ ಒಂದು ಕೆಲಸ ಮಾಡುತ್ತಿದೆ ಯೆಂದರೆ ಒಳಗೆ ಆ ಕೆಲಸಕ್ಕೆ ಕಾರಣವಾದ ಗುಣ ಕೆಲಸಮಾಡುತ್ತಿರುತ್ತದೆ. ಆ ಗುಣ ಕರ್ಮದಿಂದಲೇ ಪ್ರೇರೇಪಿಸಲ್ಪಟ್ಟಿರುತ್ತದೆ. ಪ್ರತಿಕಾರ್ಯಕ್ಕು ಕರ್ಮವೇ ಮೂಲ ಕಾರಣ. ಕರ್ಮ ಗುಣಗಳಿಂದ ಶರೀರವನ್ನು ಶಾಶಿಸುಸುತ್ತದೆ. ಗುಣಗಳಿಗೆ ಅನುಗುಣವಾಗಿ ಶರೀರ ಕೆಲಸ ಮಾಡುತ್ತಿದೆ. ಗುರುವು ಸಹ ಶರೀರದಿಂದಲೇ ಕಾರ್ಯವನ್ನು ಮಾಡುತ್ತಿದ್ದಾನೆ. ಆದ್ದರಿಂದ ಸೂತ್ರದ ಪ್ರಕಾರ ಗುರುಗಳ ಶರೀರದಲ್ಲಿಯೂ ಸಹ ಗುಣಗಳು ಕೆಲಸಮಾಡುತ್ತಿರುತ್ತವೆ. ಎಲ್ಲರಂತೆ ಗುಣಗಳು ಕರ್ಮದಿಂದಲೇ ಪ್ರೇರೇಪಿಸಲ್ಪಟ್ಟಿರುತ್ತವೆ. ಆದರೆ ನಡೆಯುವ ಕಾರ್ಯದಲ್ಲಿ ಹೊಸದಾಗಿ ಬರುವ ಕರ್ಮ ಗುರುವಿಗೆ ಅಂಟುವುದಿಲ್ಲ. ಸಾಮಾನ್ಯನಿಗೆ ಮಾಡುತ್ತಿರುವ ಕೆಲಸದಲ್ಲಿರುವ ಕರ್ಮ ಅಂಟುತ್ತದೆ. ಗುರು ಗುಣಗಳಿಂದ ಎಲ್ಲರಹಾಗೇ ಕೆಲಸ ಮಾಡಿದರು ಕರ್ಮ ಅಂಟುವುದಿಲ್ಲ. ಆದ್ದರಿಂದ ಗುರುವನ್ನು ಕರ್ಮಾತೀತನು, ಗುಣಾತೀತನು ಎನ್ನಲಾಗಿದೆ. ಕರ್ಮದಿಂದ ಉಂಟಾಗುವ ಗುಣಗಳು ಕೆಲಸಮಾಡಿದರೂ ಗುಣಗಳಿಂದ ಬರುವ ಕರ್ಮ ಅಂಟುವುದಿಲ್ಲ. ಆದ್ದರಿಂದ ಗುರುವನ್ನು ಗುಣಾತೀತನೆಂದು ಹೇಳಿದ್ದೇವೆ.

ಗುರುವಿನಲ್ಲಿ ಗುಣಗಳಿರುವುದಿಲ್ಲವೆಂದು ಹೇಳುವುದು ಸರಿಯಲ್ಲ. ಎಲ್ಲಾ ಗುಣಗಳಿಂದ ಎಲ್ಲಾ ಕೆಲಸಗಳು ಮಾಡುತ್ತಾ ಯಾವ ಕರ್ಮ ಅಂಟದವನು ಗುರು. ಗುರುವಾದವನು ಕರ್ಮ ಯೋಗಿಯಾಗಿ, ಕರ್ಮ ಅಂಟದವನಾಗಿ ಇರುತ್ತಾನೆ.

ಶರೀರದಲ್ಲಿ ಕರ್ಮ ಗುಣಗಳ ವಿಭಾಗ ತಿಳಿಯದ ಅಜ್ಞಾನಿಗಳು ಕೆಲಸ ಮಾಡುವವನು ಗುರುವಲ್ಲವೆಂದು ತಿಳಿದು, ಗುರುಗಳು ಯಾವ ಕೆಲಸ ಮಾಡದೆ ಎಲ್ಲರಿಗೂ ದೂರವಾಗಿ ಗುಹೆಗಳಲ್ಲಿಯೊ, ಕಾಡಿನಲ್ಲಿಯೊ ಇರುತ್ತಾರೆಂದುಕೊಳ್ಳುತ್ತಾರೆ.

**ಪದ್ಯ :** **ಗುಹೆಯೊಳಗೆ ಸೇರಿ ಗುರುಗಳನ್ನು**
**ಹುಡಿಕಿದರೇ ಕ್ರೂರ ಮೃಗವು ಕಂಡು**
**ತಡಮಾಡದೇ ಮೊದಲು ಮುಕ್ತಿ ಮಾರ್ಗವದೇ ತೋರಿಸುವುದು**
**ವಿಶ್ವದಾಭಿ ರಾಮ ಕೇಳೊ ವೇಮ.**

ಮೇಲಿನ ವಿಧವಾಗಿ ವೇಮನ ಯೋಗಿ ಕೂಡ ಹೇಳಿದ್ದಾನೆ. ಗುಹೆಗಳಲ್ಲಿ ಕಾಡಿನಲ್ಲಿ ಮೃಗಗಳಿರುತ್ತವೆ ಆದರೆ ಗುರುಗಳೇಕೆ ಇರುತ್ತಾರೆ? ಗುರು ಮನುಷ್ಯರ ನಡುವೆಯೇ ಇದ್ದು, ಎಲ್ಲರಂತೆ ಕಾಣಿಸುತ್ತಾ, ಎಲ್ಲರಂತೆ ಗುಣಗಳಿಂದ ಕೆಲಸಮಾಡುತ್ತಾ ಗುಣಾತೀತ ನಾಗಿರುತ್ತಾನೆ. ಗೀತೆಯಲ್ಲಿಯೂ ಸಹ ಕೆಲಸ ಬಿಟ್ಟವನು ಜ್ಞಾನಿಯಲ್ಲ ಎಂದು ಶ್ರೀ ಕೃಷ್ಣನು ಹೇಳಿದ್ದಾನೆ. ತಾವರೆ ಎಲೆ ನೀರಿನಲ್ಲಿದ್ದರು ತೇವಾಂಶ ಅಂಟದಹಾಗೆ ಗುರು ಗುಣಗಳಲ್ಲಿದ್ದರೂ ಗುಣಾತೀತನಾಗಿದ್ದಾನೆ.

**ಸಯ್ಯದ್ ವಲಿ, ರಾಜಮಂಡ್ರಿ**

**4. ದೇವರು ಒಬ್ಬನೇ ಆಗಿರುವಾಗ ಮತ ಕಲಹಗಳು ಏಕೆ ಇವೆ?**

ಉ. ದೇವರು ಒಬ್ಬನೇ ಎಂದು ತಿಳಿಯದಿರುವುದೆ ಕಲಹಗಳಿಗೆ ಕಾರಣ.

**ತುಲಸಿದಾಸು, ನರಸಾಪುರಮು**

**5. ಗುಣಗಳು ಎಷ್ಟು ಇವೆ?**

ಉ. ಆರು ಒಳ್ಳೆಯವು, ಆರು ಕೆಟ್ಟವು ಎರಡು ಗುಂಪುಗಳಾಗಿವೆ. ಒಂದೊಂದು ಗುಣ 9 ಭಾಗಗಳಾಗಿದ್ದು 12 X 9 = 108 ಗುಣಗಳಾಗಿ ಒಂದು ಗುಣಭಾಗದಲ್ಲಿವೆ. ಸಾತ್ವಿಕ ಗುಣದಲ್ಲಿ 108, ಹಾಗೆ ರಾಜಸ ಗುಣಭಾಗದಲ್ಲಿ 108, ತಾಮಸ ಗುಣಭಾಗದಲ್ಲಿ 108 ಗುಣಗಳುಇವೆ.

**ಜಿ.ವೆಂಕಟನಾರಾಯಣ, ಮಾಲ್ಯವಂತಮು**

**6. ಪ್ರಾಣ, ಜೀವಿಯು ಬೇರೆ ಬೇರೆಯಾಗಿದ್ದಾರಾ? ಬೇರೆಯಾಗಿದ್ದರೆ ಅವುಗಳಿಗಿರುವ ವ್ಯತ್ಯಾಸವೇನು?**

**ಉ.** ಪ್ರಾಣ ಬೇರೆ, ಜೀವಿಯು ಬೇರೆಯಾಗಿ ಇದ್ದಾರೆ. ಶರೀರದಲ್ಲಿ 25 ಭಾಗಗಳಲ್ಲಿ ಪ್ರಾಣ ಒಂದು ಭಾಗ, ಜೀವಿಯು ಒಂದು ಭಾಗ. ನಿರ್ಣಯವಾದ ಕೆಲಸ ಮಾಡುವ ಶರೀರ ಅವಯವವನ್ನು ನಿರ್ಣಯ ಭಾಗವಾಗಿ ತಿಳಿಸಿದ್ದೇವೆ. ಪ್ರಾಣ ನಿರ್ಣಯವಾದ ಕೆಲಸ ಮಾಡುತ್ತಿದೆ. ಹಾಗೆ ಜೀವಿಯು ನಿರ್ಣಯವಾದ ಕೆಲಸ ಮಾಡುತ್ತಿದ್ದಾನೆ. ಆದ್ದರಿಂದ ಪ್ರಾಣವನ್ನು, ಜೀವಿಯನ್ನು ಬೇರೆ ಬೇರೆ ಭಾಗಗಳಾಗಿ ಗುರುತಿಸುತ್ತೇವೆ. ಕೆಲವರು ಶರೀರದಲ್ಲಿನ ಪ್ರಾಣವನ್ನು ಜೀವವಾಗಿ ಹೋಲಿಸಿಕೊಂಡು ಪ್ರಾಣವೆಂದರೂ, ಜೀವವೆಂದರೂ ಒಂದೇ ಎನ್ನುವ ಯೊಚನೆಯಲ್ಲಿದ್ದಾರೆ, ಅದು ತಪ್ಪು ಭಾವ. ಪ್ರಾಣ ಜೀವ ಬೇರೆಬೇರೆಯೆಂದು ಗ್ರಹಿಸಬೇಕು. ಶರೀರದಲ್ಲಿ ಬೇರೆಯಾಗಿದ್ದರು ಪ್ರಾಣವಿದ್ದಾಗಲೆ ಜೀವವಿರುತ್ತದೆ, ಜೀವವಿದ್ದರೇನೇ ಪ್ರಾಣವಿರುತ್ತದೆ. ಈಗ ಪ್ರಾಣಕ್ಕೂ ಜೀವಿಗೂ ಇರುವ ವ್ಯತ್ಯಾಸವನ್ನು ಕೆಳಗೆ ನೋಡಬಹುದು.

| **ಜೀವಿಯು** | **ಪ್ರಾಣವು** |
|---|---|
| 1. ಜೀವಿಯು ಎಂದರೆ ಶೂನ್ಯ. | 1. ಪ್ರಾಣ ಎಂದರೆ ಗಾಳಿ. |
| 2. ಜೀವಿಯು ವಿಭಜಿಸಲ್ಪಡದೇ ಇರುವವನು. | 2. ಪ್ರಾಣವು ಐದು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಅವುಗಳನ್ನೇ ಪಂಚ ಪ್ರಾಣಗಳೆನ್ನುತ್ತೇವೆ. |
| 3. ಜೀವಿಯು ತಲೆಯಲ್ಲಿರುವ ಗುಣಚಕ್ರದ ಮೂರು ಯಾವದೋ ಒಂದು ಭಾಗದಲ್ಲಿದ್ದಾನೆ. | 3. ಪ್ರಾಣವು ಶರೀರವೆಲ್ಲಾ ವ್ಯಾಪಿಸಿರುವುದು. |
| 4. ಜೀವಿಯು ಒಂದು ಭಾಗವಾಗಿದ್ದು ಶರೀರದಲ್ಲಿನ ಕಾರ್ಯಗಳಿಗೆ ಯಾವ ಉಪಯೋಗಕ್ಕೆಬಾರದೆ ಸುಖದುಃಖಗಳನ್ನು | 4. ಪ್ರಾಣವು ಐದು ಭಾಗಗಳಾಗಿದ್ದು ಶರೀರದಲ್ಲಿ ಐದು ನಿರ್ಣಯವಾದ ಕೆಲಸಗಳನ್ನು ಮಾಡುತ್ತದೆ. ಅನುಭವಿಸುವುದಕ್ಕೆ ನಿಯಮಿಸಲ್ಪಟ್ಟಿದ್ದಾನೆ. |
| 5. ಜೀವವೇ ತಾನಾಗಿದ್ದಾನೆ. ಆದ್ದರಿಂದ ಯಾರೇ ಆಗಲಿ ತನ್ನನ್ನು ತಾನು ಸ್ಥಂಬಿಸಿ ಕೊಳ್ಳಲಾರ. | 5. ಶರೀರದಲ್ಲಿರುವ ಗಾಳಿಯನ್ನು ಸಾಧನೆಯಿಂದ ಸ್ಥಂಭಿಸಬಹುದು. |

| | |
|---|---|
| 6. ಶರೀರದಲ್ಲಿರುವ ಜೀವಿಯು ನಿದ್ರೆಯಲ್ಲಿ ಯಾವ ಅನುಭವವು ಇಲ್ಲದೆ ಇರುತ್ತಾನೆ. | 6. ಶರೀರದಲ್ಲಿರುವ ಐದು ಭಾಗಗಳ ಗಾಳಿ ಜೀವನವಿರುವವರೆಗೂ ಪ್ರತಿ ಕ್ಷಣವೂ ಕೆಲಸ ಮಾಡುತ್ತಲೇ ಇರುತ್ತದೆ. |

**ತೆನ್ಮಠಂ ಸತ್ಯಗೋಪಾಲಾಚಾರ್ಯರು, ನರಸಾಪುರಮು**

**7. ಜ್ಞಾನಿಗಳಾದವರು ಪೂರ್ವ ಜನ್ಮಗಳನ್ನು ನೋಡಿದ್ದಾರಾ? ಜ್ಞಾನಕ್ಕೂ, ಪೂರ್ವ ಜನ್ಮದ ಸ್ಮೃತಿಗೂ ಸಂಬಂಧವಿದೆಯಾ?**

ಉ. ಜ್ಞಾನಿಗಳಿಗಿಂತಲು ದೊಡ್ಡವರು ಯೋಗಿಗಳು. ಯೋಗಿಗಳಿಗೂ ಸಹ ಪೂರ್ವ ಜನ್ಮದ ವಿಷಯಗಳು ತಿಳಿಯದು. ಆದ್ದರಿಂದ ಜ್ಞಾನಿಗಳು ಪೂರ್ವ ಜನ್ಮದ ವಿಷಯಗಳನ್ನು ನೋಡಲಾರರು. ಜ್ಞಾನಕ್ಕೂ, ಪೂರ್ವ ಜನ್ಮದ ಸ್ಮೃತಿಗೂ ಎಂತಹ ಸಂಬಂಧವೂ ಇಲ್ಲ.

**8. ಪೂರ್ವ ಜನ್ಮಗಳನ್ನು ತಿಳಿದುಕೊಳ್ಳುವುದಕ್ಕೆ ಸಾಧನೆ ಮಾರ್ಗಗಳು ಇವೆಯಾ?**

ಉ. ಬ್ರಹ್ಮ ವಿದ್ಯೆಯಲ್ಲಿ ಜನ್ಮಗಳು ಕೊನೆಯಾಗುವುದಕ್ಕೆ ಸಾಧನೆಗಳಿವೆ. ಆದರೆ ಜನ್ಮಗಳನ್ನು ತಿಳಿದುಕೊಳ್ಳಲು ಯಾವ ವಿಧವಾದ ಸಾಧನೆಗಳು ಇಲ್ಲ. ಪ್ರಪಂಚ ವಿದ್ಯೆಗಳಲ್ಲಿ "ಹಿಪ್ನಾಟಿಜಂ" ನಿಂದ ತಿಳಿದುಕೊಳ್ಳಬಹುದೆಂದು ಹೇಳುತ್ತಿದ್ದಾರೆ. ಆದರೆ ಅದನ್ನೂ ಸಹ ನಾವು ನಂಬುವುದಿಲ್ಲ.

**9. ಬ್ರಹ್ಮರ್ಷಿಗಳಿಗೆ ಪುನರ್ಜನ್ಮ ಇದೆಯಾ?**

ಉ. ಕರ್ಮ ಪೂರ್ತಿಯಾಗಿ ಇಲ್ಲದೆ ಹೋಗುವವರೆಗೂ ಬ್ರಹ್ಮರ್ಷಿಗಳಿಗಾದರೂ ಜನ್ಮ ಇರುತ್ತದೆ. ಆತ್ಮವನ್ನು ತಿಳಿದಷ್ಟು ಮಾತ್ರವೇ ಕರ್ಮಗಳನ್ನು ಸುಡುವ ಶಕ್ತಿ ಏರ್ಪಡುತ್ತದೆ. ಕರ್ಮ ಎಲ್ಲವೂ ಒಂದೇ ಸಲ ಭಸ್ಮವಾಗುವುದಿಲ್ಲ. ತತ್ತ್ವಜ್ಞನಾದ (ಆತ್ಮ ದರ್ಶನವಾದ) ವನಿಗೆ ಆ ಜನ್ಮದಲ್ಲಿಯೇ ಮೋಕ್ಷ ಪ್ರಾಪ್ತಿಸುವುದೆಂದು ಹೇಳಲಾರೆವು. ಅದು ಅವನ ಕರ್ಮಉಳುವಿಕೆಯನ್ನು ಅನುಸರಿಸಿ ಇರುತ್ತದೆ. ಒಂದು ವೇಳೆ ಕರ್ಮವೆಲ್ಲವೂ ಆ ಜನ್ಮದಲ್ಲಿಯೇ ಇಲ್ಲದೆ ಹೋದರೆ ಆ ಜನ್ಮದಲ್ಲಿಯೇ ಮುಕ್ತಿ ಹೊಂದಬಹುದು. ಇಲ್ಲದಿದ್ದರೆ ಮರು ಜನ್ಮವಿರುತ್ತದೆ.

**10. ಪಾಪಾತ್ಮರು ಮತ್ತೆ ಯಾವಾಗ್ಯೂ ಮನುಷ್ಯನಾಗಿ ಹುಟ್ಟುವುದಿಲ್ಲವಾ? ಅವರಿಗೆ ಮುಕ್ತಿ ಇಲ್ಲವೆ?**

ಉ. ಪಾಪಾತ್ಮರು ಪುನಃ ಮನುಷ್ಯರಾಗಿ ಹುಟ್ಟಬಹುದು. ಪಾಪಾತ್ಮರು ಮಾನವರಾಗಿ ಹುಟ್ಟದಿದ್ದರೆ ಭೂಮಿಯಮೇಲೆ ಘೋರವಾದ ಬಾಧೆಗಳು, ರೋಗಗಳು ಅನುಭವಿಸುವವರು ಕಾಣಿಸುವುದಿಲ್ಲ. ಪಾಪಾತ್ಮರು ಅವರು ಮಾಡಿಕೊಂಡ ಪಾಪವನ್ನು ಮನುಷ್ಯರಲ್ಲಿ ಅನುಭವಿಸುವುದು ನೋಡುತ್ತಲೇ ಇದ್ದೇವೆ ಅಲ್ಲವೆ! ಪಾಪವನ್ನು ಮಾಡಿಕೊಂಡವರಿಗೆ ಪರಿಮಿತ ಜನ್ಮಗಳು ಇಲ್ಲ. ಯಾವ ಜನ್ಮಕ್ಕಾದರೂ ಹೋಗಬಹುದು. ಮಾನವ ಜನ್ಮಕ್ಕಾದರೂ ಬರಬಹುದು. ಅದು ಅವನ ಕರ್ಮವೇ ನಿರ್ಣಯಿಸುತ್ತದೆ.

ಪಾಪಾತ್ಮರಿಗೆ ಎಂದಿಗೂ ಮುಕ್ತಿ ಇಲ್ಲವೆನ್ನುವುದು ಅಸತ್ಯ. ಅನೇಕ ಜನ್ಮಗಳನಂತರ ವಾದರೂ ಅವರು ಪಾಪ ಇಲ್ಲದಂತವರಾಗಿ ಜ್ಞಾನವನ್ನು ಸಂಪಾದಿಸಿಕೊಂಡು ಮುಕ್ತರಾಗಬಹುದು.

**11. ಮರಣಿಸಿದನಂತರ ಆತ್ಮಇದೆ ಎಂದು ಕೆಲವರು, ಇಲ್ಲವೆಂದು ಕೆಲವರು ಎನ್ನುತ್ತಿದ್ದಾರೆ. ಯಾವುದು ನಿಜ?**

ಉ. ಮರಣವೆನ್ನುವುದು ಶರೀರಕ್ಕೇ ಹೊರತು ಆತ್ಮಕ್ಕಲ್ಲ. ಮರಣಿಸಿದ ನಂತರವೂ ಸಹ ಆತ್ಮ ಇದೆ. ಈ ಪ್ರಶ್ನೆ ಕೇವಲ ಜೀವಾತ್ಮನನ್ನು ಕುರಿತು ಕೇಳಿರುವುದೆಂದು ಲೆಕ್ಕಿಸಿ ಕೊಂಡಿದ್ದೇವೆ. ಆತ್ಮ ಎಲ್ಲಾ ಶರೀರಗಳಲ್ಲಿ ಇದೆ. ಜೀವಾತ್ಮ ಒಂದು ಶರೀರದಲ್ಲಿ ಮಾತ್ರವೇ ಇದೆ. ಬೇರೆ ಬೇರೆ ಶರೀರಗಳಲ್ಲಿ ಬೇರೆ ಬೇರೆ ಜೀವಾತ್ಮಗಳಿವೆ. ಉದ್ಯೋಗಿ ಉದ್ಯೋಗ ಮಾಡುವ ಊರನ್ನು ಆಗಾಗ ಬದಲಾಯಿಸಿದಂತೆ, ಜೀವಾತ್ಮ ನಿವಾಸವಿರುವ ಶರೀರಗಳನ್ನು ಆಗಾಗ ಬದಲಾಯಿಸುತ್ತದೆ. ಊರುಬದಲಾಯಿಸಿದ ಮಾತ್ರಕ್ಕೆ ಉದ್ಯೋಗಿ ಇದ್ದಾನೆ ಅಲ್ಲವೆ! ಹಾಗೇ ಇಲ್ಲಿ ಶರೀರ ಬದಲಿಸಿದ ಮಾತ್ರಕ್ಕೆ ಜೀವಾತ್ಮ ಬೇರೊಂದು ಕಡೆ ಇದ್ದಾನೆ. ಆದರೆ ಪೂರ್ತಿಇಲ್ಲವೆಂದು ಹೇಳಲಾರೆವು.

**ಚಿಂತಾ ನಾರಾಯಣ, ನರಸಾಪುರಮು**

**12. ಮಾನವನ ಬುದ್ಧಿ ಪ್ರಯತ್ನದಿಂದ ಯಾವುದಾದರೂ ಸಾಧಿಸಲ್ಪಡುತ್ತಿದೆಯೆ? ಅಥವಾ ಅವನ ಕರ್ಮಾನು ಸಾರ ವಾಗಿ ನಡೆಯುತ್ತಿದೆಯಾ?**

ಉ. ಕಾರ್ಯ ಸಾಧನೆಯಲ್ಲಿ ಉಪಯೋಗಪಡುವ ಬುದ್ಧಿಯೂ ಸಹ ಕರ್ಮ ವನ್ನನುಸರಿಸಿಯೆ ಇದೆಯೆಂದು ತಿಳಿಯಬೇಕು. ಕರ್ಮವನ್ನನುಸರಿಸಿ ಒಬ್ಬೊಬ್ಬನಿಗೆ ಒಂದೊಂದು ವಿಧವಾದ ಬುದ್ಧಿ ಇರುತ್ತದೆ. ಆದ್ದರಿಂದ ಒಬ್ಬೊಬ್ಬನು ಒಂದೊಂದು

ವಿಧವಾದ ಕೆಲಸವನ್ನು ಮಾಡುತ್ತಿದ್ದಾನೆ. ಯಾರ ಬುದ್ಧಿ ಅವರ ಸ್ವಂತವಲ್ಲ. ಅವರವರ ಬುದ್ಧಿ ಅವರವರ ಕರ್ಮಾನುಸಾರವಾಗಿ ಕೆಲಸ ಮಾಡುತ್ತದೆ. ಎಷ್ಟು ದೊಡ್ಡ ಬುದ್ಧಿವಂತಿಕೆಯಾದರೂ ಅವರ ಕರ್ಮಾನುಸಾರವೆಂದೇ ತಿಳಿಯಬೇಕು. ಆದ್ದರಿಂದ ಯಾವ ಕೆಲಸವಾದರು ಅವರ ಕರ್ಮಾನುಸಾರವೇಯೆಂದು ಹೇಳಬಹುದು.

**ಚಿಂತಾ ತುಲಸಿದಾಸು, ನರಸಾಪುರಮು**

13. **ಪರಮಾತ್ಮನಿಗೆ ಸಂಕಲ್ಪವಿದೆಯಾ?**

ಉ. ಇದೆ. ಪರಮಾತ್ಮನ ಸಂಕಲ್ಪ ಫಲಿತಾಂಶವೇ ಈ ಪ್ರಪಂಚವು. ಆದರೆ ನಮಗೆ ಬಂದಹಾಗೆ ಪರಮಾತ್ಮನಿಗೆ ಅನೇಕ ಸಂಕಲ್ಪಗಳು ಬರುವುದಿಲ್ಲ. ಒಂದು ಸಂಕಲ್ಪದ ಫಲಿತಾಂಶವೇ ಈ ಯಾವತ್ ಪ್ರಪಂಚವು ಪರಂಪರೆಯಾಗಿ ಸಾಗುತ್ತಿದೆ. ಇದಕ್ಕೆ ಪ್ರಮಾಣವು ಗೀತೆಯಲ್ಲಿನ **"ಮದ್ಭಾವಾ ಮಾನಸಾಜಾತಾ"** ಎನ್ನುವ ಶ್ಲೋಕವನ್ನು ನೋಡಬಹುದು.

**ಧನಲಕ್ಷ್ಮೀ, ಕರ್ನೂಲ್**

14. **ಕುಟುಂಬಕ್ಕೆ ಒಬ್ಬ ಯಜಮಾನ, ಊರಿಗೊಬ್ಬ ಪ್ರೆಸಿಡೆಂಟ್, ಮಂಡಲಕ್ಕೆ ಒಬ್ಬ ಮಂಡಲಾಧಿಪತಿ, ಜಿಲ್ಲೆಗೊಬ್ಬ ಕಲೆಕ್ಟರ್, ರಾಜ್ಯಕ್ಕೊಬ್ಬ ಮುಖ್ಯಮಂತ್ರಿ, ದೇಶಕ್ಕೊಬ್ಬ ಪ್ರಧಾನಿ ಇದ್ದ ಹಾಗೆ ಒಟ್ಟಾರೆ ಪ್ರಪಂಚಕ್ಕೆಲ್ಲಾ ಯಾರಾದರೂ ಅಧಿಪತಿ ಇದ್ದಾರಾ?**

ಉ. ಇದ್ದಾರೆ. ನೀವು ಹೇಳುವ ಅಧಿಕಾರಿಗಳೆಲ್ಲರು ಕೇವಲ ಮನುಷ್ಯರಿಗೆ ಮಾತ್ರ. ಮನುಷ್ಯರಿಗಲ್ಲದೆ ಯಾವತ್ ಪ್ರಪಂಚದಲ್ಲಿರುವ ಸರ್ವ ಜೀವರಾಶಿಗಳಿಗೂ ಅಧಿಪತಿ ಇದ್ದಾನೆ. ಆತನೆ ಪರಮಾತ್ಮ. ಆತನಿಗೆ ನಿಜವಾದ ಹೆಸರಿಲ್ಲ, ಆತನು ಕಾಣಿಸುವುದಿಲ್ಲ. ಭೂಮಿ ಮೇಲೆ ಕಾಣಿಸುವವರು ಮಾಡಲಾರದ ಪರಿಪಾಲನೆಯನ್ನು ಮಾಡುವವನು. ಸರ್ವಾಧಿಪತಿ ಪರಮಾತ್ಮ ಒಬ್ಬನೇ ಎಂದು ತಿಳಿಯಬೇಕು. ಅವನನ್ನೇ ಪುರುಷೋತ್ತಮನೆಂದು, ಖುದಾಎಂದು, ಎಹೋವಾ ಎಂದು, ಅಲ್ಲಾಯೆಂದು ಹೇಳಿಕೊಳ್ಳುತ್ತಿದ್ದೇವೆ.

**ಬಿ.ರವೀಂದ್ರಾ ರೆಡ್ಡಿ, ಚೆನ್ನೇಕೊತ್ತಪಲ್ಲಿ**

15. **ಕುಂಟರು, ಕುರುಡರು, ಅನಾಥರನ್ನು ನೊಡುತ್ತಿದ್ದೇವೆ. ಅವರು ಹೋದ ಜನ್ಮದಲ್ಲಿ ಪಾಪಮಾಡಿರುತ್ತಾರಾ?**

ಉ. ಬಾಧೆ ಯಾವುದಾದರು ಅದು ಪಾಪದ ಫಲಿತಾಂಶವೇ. ಕುಂಟರು, ಕುರುಡರು ಪಾಪ ಮಾಡಿದ್ದಾರೆ. ಆದ್ದರಿಂದಲೇ ಅವರಿಗೆ ಆ ಕರ್ಮವನ್ನನುಸರಿಸಿ ಅಂಗಲೋಪವೇರ್ಪಟ್ಟಿರುತ್ತದೆ. ಈ ಜನ್ಮದ ಅಂಗಲೋಪಕ್ಕೆ ಕಾರಣವಾದ ಪಾಪ ಹಿಂದಿನ ಜನ್ಮದ್ದೇ ಎಂದು ಹೇಳಲಾರೆವು. ಎರಡು ಜನ್ಮಗಳ ಹಿಂದಿನದೊ ಅಥವಾ ಮೂರು ಜನ್ಮಗಳ ಹಿಂದಿನದೊ, ಅದಕ್ಕಿಂತ ಹಿಂದಿನದೂ ಸಹ ಆಗಿರಬಹುದು. ವರಸೆ ಕ್ರಮವಾಗಿ ಬರುವ ಕರ್ಮ ಕಳೆದಿರುವ ಜನ್ಮಗಳದ್ದೆಯಾಗಲಿ ಆದರೆ ಹಿಂದಿನ ಜನ್ಮದ್ದೆಯೆಂದು ಹೇಳಲಾರೆವು.

**16. ನೈವೇದ್ಯಗಳನ್ನು ಪ್ರಸಾದವೆಂದು ನಾವೇ ಸ್ವೀಕರಿಸುವುದರಲ್ಲಿ ಅಂತರಾರ್ಥವಿದೆಯಾ?**

ಉ. ಇಲ್ಲ. ನೈವೇದ್ಯವನ್ನು ಭಾವಕ್ಕೋಸ್ಕರ ಇಡುತ್ತಿದ್ದೇವೆ. ದೇವರೇನು ತಿನ್ನುವುದಿಲ್ಲ ಅಲ್ಲವೆ! ಆ ಪದಾರ್ಥ ವ್ಯರ್ಥವಾಗದಂತೆ ನಾವೇ ತೆಗೆದುಕೊಳ್ಳುತ್ತಿದ್ದೇವೆ. ಪೂಜಾ ವಿಧಾನಕ್ಕೆ ಅರ್ಥವಿದೆ ನಾವು ತಿನ್ನುವುದರಲ್ಲಿ ಅರ್ಥವಿಲ್ಲ. ಪೂಜಾ ವಿಧಾನದ ಅರ್ಥ ತಿಳಿದು ಪೂಜೆ ಮಾಡಿದರೆ ಪದಾರ್ಥ ಪ್ರಸಾದವಾಗಿ ಬದಲಾಗುತ್ತದೆ. ಇಲ್ಲದಿದ್ದರೆ ಪದಾರ್ಥ ನೈವೇದ್ಯವಾಗಿ ಉಳಿಯುತ್ತದೆ. ಪ್ರಸಾದಕ್ಕೆ 798 ನೇ ಪ್ರಶ್ನೆಯಲ್ಲಿಯು ಉತ್ತರ ಹೇಳಲಾಗಿದೆ.

**ಚಿಂತಾ ಚೌಡಪ್ಪ, ನರಸಾಪುರಮು**

**17. ಒಬ್ಬ ವ್ಯಕ್ತಿ ರೋಗ ಬಾಧೆ ಅನುಭವಿಸುತ್ತಾ ನಮ್ಮ ಹಿರಿಯರು ಮಾಡಿದ ಪಾಪವನ್ನು ನಾನು ಅನುಭವಿಸುತ್ತಿದ್ದೇನೆಂದು ಹೇಳುತ್ತಿದ್ದಾನೆ. ವಾಸ್ತವವಾಗಿ ಹಿರಿಯರು ಮಾಡಿದ ಪಾಪ ಮಕ್ಕಳಿಗೆ ಅಂಟುತ್ತಿದೆಯಾ.?**

ಉ. ಯಾವುದೇ ವ್ಯಕ್ತಿ ತಿಂದ ಆಹಾರವನ್ನು ಆ ವ್ಯಕ್ತಿಯೇ ಜೀರ್ಣಿಸಿಕೊಳ್ಳಬೇಕು. ಒಂದುವೇಳೆ ತಿಂದ ಆಹಾರ ಜೀರ್ಣವಾಗದಿದ್ದರೆ ಆ ವ್ಯಕ್ತಿಯೇ ನೋವನ್ನು ಅನುಭವಿಸಬೇಕಾಗುತ್ತದೆ. ಆದರೆ ಅವನಿಗೆ ಬದಲು ಇನ್ನೊಬ್ಬನು ಬಾಧೆ ಬೀಳುವುದಿಲ್ಲ. ಹಾಗೇ ಯಾವ ವ್ಯಕ್ತಿ ಮಾಡಿಕೊಂಡ ಕರ್ಮವನ್ನು ಆ ವ್ಯಕ್ತಿಯೇ ಪುನಃ ಅನುಭವಿಸಬೇ ಕಾಗುತ್ತದೆ. ಅವನಿಗೆ ಬದಲು ಇನ್ನೊಬ್ಬನು ಅನುಭವಿಸುವುದಕ್ಕೆ ಅವಕಾಶವಿಲ್ಲ. ದೊಡ್ಡವರು ಮಾಡಿದ ಕರ್ಮ ಮಕ್ಕಳಿಗೆ ಅಂಟುವುದಾದರೆ ದೊಡ್ಡವರ ಜಾತಕವನ್ನು ನೋಡಿ ಮಕ್ಕಳ ಭವಿಷ್ಯವನ್ನು ಹೇಳಬೇಕಾಗುತ್ತದೆ. ಆದರೆ ಹಾಗೆ ನಡೆಯುತ್ತಿಲ್ಲ. ಯಾರ ಜಾತಕವನ್ನು ಅವರಿಗೇ ಹೇಳುತ್ತಿದ್ದಾರೆ ಅಲ್ಲವೆ!

ಪೂರ್ವದಲ್ಲಿ ವಾಲ್ಮೀಕಿ ನಾರದರ ಹತ್ತಿರ ಸಹ ಇದೇ ಸಂಶಯವನ್ನು ತಿಳಿಸಿದಾಗ ಅದಕ್ಕೆ ನಾರದನು ಯಾರು ಮಾಡಿದ ಕರ್ಮವನ್ನು ಅವರೆ ಅನುಭವಿಸಬೇಕಾಗಿದೆ. ನೀನು ಮಾಡಿಕೊಂಡ ಕರ್ಮವನ್ನು ನೀನೇ ಅನುಭವಿಸಬೇಕಾಗುತ್ತದೆಂದು ಹೇಳಿದಾಗ ಸಂಶಯ ತೀರದ ವಾಲ್ಮೀಕಿ ಅವರ ತಾಯಿ ತಂದೆಯರನ್ನು ಕೊನೆಗೆ ಹೆಂಡತಿಯನ್ನೂ ಸಹ ಕೇಳಿದನು. ನಾರದ ಮಹರ್ಷಿ ಹೇಳಿರುವ ವಾಕ್ಯವನ್ನೇ ಅವರೂ ಹೇಳಿದಾಗ ತಾನು ಮಾಡುತ್ತಿರುವ ಕರ್ಮವನ್ನು ನೆನಪಿಸಿಕೊಂಡು ಅವುಗಳಿಂದ ತಪ್ಪಿಸಿಕೊಳ್ಳುವುದಕ್ಕೆ ಜ್ಞಾನ ಮಾರ್ಗವನ್ನು ಅವಲಂಭಿಸಿದನು.

ಒಂದು ವೇಳೆ ತಾಯಿತಂದೆಯರು ಮಾಡಿರುವ ಪಾಪ ಮಕ್ಕಳಿಗೆ ಬಂದರೆ ಇರುವ ಸಂತತಿ ಎಲ್ಲವೂ ಸಮವಾಗಿ ಕರ್ಮ ಅನುಭವಿಸಬೇಕು, ಆದರೆ ಹಾಗೆ ನಡೆಯುತ್ತಿಲ್ಲ. ನಾಲ್ಕು ಜನ ಮಕ್ಕಳಲ್ಲಿ ಮೂವರು ಚೆನ್ನಾಗಿದ್ದರೆ ಒಬ್ಬನು ತೊಂದರೆಗಳಿಂದ ನಾನಾ ಭಾದೆಗಳನ್ನು ಅನುಭವಿಸುತ್ತಿರುತ್ತಾನೆ. ತಾಯಿ–ತಂದೆ ತಾತಂದಿರು ಒಳ್ಳೆಯವರಾಗಿ ಅವರು ಯಾವ ಪಾಪವನ್ನು ಮಾಡದಿದ್ದರೂ ಅವರ ಸಂತತಿ ಕೆಲವರು ಬಹಳ ನೋವನ್ನು ಅನುಭವಿಸುತ್ತಿದ್ದಾರೆ. ಕೆಲವರು ತಾಯಿ–ತಂದೆ ಎಷ್ಟೋ ಪಾಪಮಾಡಿದರೂ ಅವರ ಮಕ್ಕಳ ಜೀವನ ಯಾವ ನೋವಿಲ್ಲದೆ ಸುಖವಾಗಿ ಸಾಗುತ್ತದೆ. ಹೀಗೆ ಅನೇಕ ಯಥಾರ್ಥ ಸಂಘಟನೆಗಳಿಂದ ತಾಯಿತಂದೆಯರ ಪಾಪ ಮಕ್ಕಳಿಗೆ ಬರುವುದಿಲ್ಲವೆಂದು ತಿಳಿಯುತ್ತಿದೆ.

**ಚಿಪ್ಪಲ ಆದಿನಾರಾಯಣ, ನರಸಿಂಹುನಿಪಲ್ಲೆ.**

**18. ಭೂತ, ಭವಿಷ್ಯತ್, ವರ್ತಮಾನ ಕಾಲಗಳನ್ನು ತಿಳಿಯಲು ಜ್ಞಾನ ಉಪಯೊಗಕ್ಕೆ ಬರುತ್ತಾ?**

ಉ. ಜ್ಞಾನದಿಂದ ಭೂತ ಭವಿಷ್ಯತ್ ವರ್ತಮಾನ ಕಾಲಗಳು ತಿಳಿಯುವುದಿಲ್ಲ. ಜ್ಞಾನದಿಂದ ತಿಳಿಯುವುದು ತನ್ನಲ್ಲಿರುವ ಆತ್ಮ (ದೇವರು) ಒಬ್ಬನೇ ಎಂದು ತಿಳಿಯಬೇಕು.

**19. ಆತ್ಮ, ಅನಾತ್ಮ ಎಂದರೆ ಏನು?**

ಉ. ಆತ್ಮ ಎಂದರೆ ಸರ್ವ ಜೀವ ಶರೀರಗಳಿಗೂ ಚಲಿಸುವ ಶಕ್ತಿಯನ್ನು ಕೊಡುವುದು. ಅನಾತ್ಮ ಎಂದರೆ ಆತ್ಮ ಅಲ್ಲದಿರುವುದು, ಅದಕ್ಕಿಂತಲೂ ಬೇರೆ ಯಾಗಿರುವುದು ಪರಮಾತ್ಮವೆಂದು ಅರ್ಥ.

**20. ಮಾನವನು ಐದು ನೂರು ವರ್ಷಗಳು ಬದುಕಬಲ್ಲನಾ?**

ಉ. ಶ್ವಾಸವನ್ನು ಬಂಧಿಸಿ ಎಷ್ಟು ವರ್ಷಗಳಾದರೂ ಇರಬಹುದು.

**21. ಗಾಳಿಯಲ್ಲಿ ಪರಮಾತ್ಮ ಎಲ್ಲಿರುತ್ತಾನೆ?**

ಉ. ಗಾಳಿಯಲ್ಲಿಯೇ ಅಲ್ಲದೇ ಶೂನ್ಯದಲ್ಲಿಯೂ ಸಹ ಪರಮಾತ್ಮ ಅಣುಅಣುವಿನಲ್ಲಿ ವ್ಯಾಪಿಸಿದ್ದಾನೆ. ಕಣ್ಣಿಗೆ ಕಾಣಿಸನು ಆದುದರಿಂದ ನೋಡಲಾರೆವು.

**ಕೆ.ಗಂಗಪ್ಪ, ಕಿರಿಕೆರ**

**22. ಭಗವಂತನು ಸಾಕಾರನಾ? ನಿರಾಕಾರನಾ? ವಿವರವಾಗಿ ತಿಳಿಸಬೇಕೆಂದು ಕೋರುತ್ತಿದ್ದೇವೆ.**

ಉ. ಭಗವಂತನು ಸಾಕಾರನೇ, ನಿರಾಕಾರನಲ್ಲ. ನಿರಾಕಾರನು ಪರಮಾತ್ಮ. ನಿರಾಕಾರವಾದ ಪರಮಾತ್ಮ ಒಂದು ಶರೀರವನ್ನು ಧರಿಸಿ ಹುಟ್ಟಿದಾಗ ಭಗವಂತನಾಗುತ್ತಾನೆ. 'ಭಗ' ಎಂದರೆ ಜನ್ಮಸ್ಥಾನ. (ಸ್ತ್ರೀ ಗರ್ಭ ಸ್ಥಾನ). ಭಗವಂತನೆಂದರೆ ಸ್ತ್ರೀ ಗರ್ಭದಿಂದ (ಸಜೀವವಾಗಿ) ಹುಟ್ಟಿದವನೆಂದು ಅರ್ಥ. ಶರೀರವನ್ನು ಧರಿಸಿದವನನ್ನೇ ಭಗವಂತನೆನ್ನುವುದು ನಡೆಯುತ್ತಿದೆ ಶರೀರ ಆಕಾರ ವಿಲ್ಲದ ನಿರಾಕಾರವನ್ನು ಪರಮಾತ್ಮ ಎನ್ನುವುದು ನಡೆಯುತ್ತಿದೆ. ಶ್ರೀ ಕೃಷ್ಣನು ಸಾಕಾರನಾದ್ದರಿಂದ ಭಗವಂತನೆಂದು ಕರೆಯುತ್ತಿದ್ದೇವೆ.

**ಬಿ.ರವೀಂದ್ರ ರೆಡ್ಡಿ, ಚೆನ್ನೇಕೊತ್ತಪಲ್ಲಿ.**

**23. ಯೋಗಗಳು ಎಷ್ಟು ? ಅವು ಯಾವುವು ?**

ಉ. ಯೋಗಗಳು ಎರಡು ವಿಧಗಳು. ಅವು 1) ರಾಜಯೋಗ (ಕರ್ಮಯೋಗ) 2) ಬ್ರಹ್ಮ ಯೋಗ (ಜ್ಞಾನಯೋಗ) ಎಂದು ಹೇಳುತ್ತಾರೆ. ಅಹಂಕಾರದ ಮೇಲೆ ಆಧಾರಪಟ್ಟಿರುವುದು ರಾಜಯೋಗ. ಮನಸ್ಸಿನ ಮೇಲೆ ಆಧಾರಪಟ್ಟಿರುವುದು ಬ್ರಹ್ಮಯೋಗ. ಈ ಎರಡು ಮಾರ್ಗಗಳು ಹೊರತು ಕರ್ಮನಾಶವಾಗುವ ವಿಧಾನ ಯಾವುದು ಇಲ್ಲ. ದೇವರ ಧರ್ಮಗಳಿಗೆ ಸಂಬಂಧಿಸಿರುವವು ಈ ಎರಡು ಯೋಗಗಳೇ. ಧರ್ಮಗಳಿಗೆ ಅತೀತವಾಗಿರುವುದು ಸಹ ಒಂದು ಯೋಗವಿದೆ. ಅದೇ ಭಕ್ತಿ ಯೋಗವೆಂದು ಹೇಳಲಾಗಿದೆ.

ರಾಜಯೋಗ ವಿಧಾನದಿಂದ ಆಗಾಮಿ ಕರ್ಮ (ನಡೆಯುತ್ತಿರುವ ಕೆಲಸದಲ್ಲಿ ಬರುವ ಕರ್ಮ) ನಾಶವಾಗುತ್ತದೆ. ಬ್ರಹ್ಮ ಯೋಗ ವಿಧಾನದಿಂದ ಸಂಚಿತ ಕರ್ಮ ನಾಶನವಾಗುತ್ತದೆ.

**ಸಿ.ಚಿದಂಬರ ರೆಡ್ಡಿ, ಅನಂತಪುರಮು**

**24. ನಮ್ಮ ಹಿಂದೆ ಬರುವುದು ಜ್ಞಾನ ಧನವೆಂದು, ಖರ್ಚಾಗುವುದಿಲ್ಲವೆಂದು ಹೇಳುತ್ತಾರೆ ಹಾಗೇ ಅಜ್ಞಾನವು ಜನ್ಮ ಜನ್ಮಗಳಿಗೂ ಏಕೆ ಅಂಟಿಕೊಂಡು ಇರುವುದಿಲ್ಲವೋ ತಿಳಿಸಿ?**

ಉ. ಅಜ್ಞಾನವೇಕೆ ಅಂಟಿಕೊಂಡಿರುವುದಿಲ್ಲ? ತಪ್ಪದೇ ಅಂಟಿಕೊಂಡಿರುತ್ತದೆ. ಜನ್ಮ ಸಂಸ್ಕಾರವನ್ನನುಸರಿಸಿ ಜ್ಞಾನವಿದ್ದಹಾಗೆ ಅಜ್ಞಾನವೂ ಸಹ ಇರುತ್ತದೆ. ಯಾವ ಗುಣದಲ್ಲಿ ಮರಣಿಸಿದ ಜೀವಿಯು ಪುನಃ ಆ ಗುಣದಲ್ಲಿಯೇ ಜನ್ಮಿಸುವನೆಂದು ಗೀತೆಯಲ್ಲಿ ದೇವರೂ ಸಹ ಹೇಳಿದ್ದಾನೆ.

**25. ನಿಮ್ಮ ಹತ್ತಿರ ಬಂದಿರುವ ಆಶ್ರಿತರ ಮನೋಭಾವಗಳ ಕುರಿತು ಸ್ವಾಮಿಯವರ ವಿಧಾನ ಎಂತಾದ್ದು?**

ಉ. ಅವರವರ ಮನೋಭಾವವನ್ನನುಸರಿಸಿ ತಕ್ಕಂತೆ ನಮ್ಮ ವಿಧಾನವಿರುತ್ತದೆ. ಮೂಢರಿಗೆ ಮೂಢನಾಗಿ, ಜ್ಞಾನಿಗಳಿಗೆ ಜ್ಞಾನಿಯಾಗಿ, ಅಜ್ಞಾನಿಗಳಿಗೆ ಅಜ್ಞಾನಿಯಾಗಿ ಕಾಣಿಸುತ್ತೇವೆ. ಪ್ರತ್ಯೇಕಿಸಿ ಸ್ವಾಮಿಯಾಗಿ ಕಾಣಿಸುವುದಿಲ್ಲ.

**26. ಒಬ್ಬರ ಕರ್ಮವನ್ನು ಇನ್ನೊಬ್ಬರು ಹಂಚಿಕೊಳ್ಳುತ್ತಾರಂತಾರೆ. ಅದು ಎಷ್ಟರ ಮಟ್ಟಿಗೆ ನಿಜ?**

ಉ. ಹಾಗೆ ಹಂಚಿಕೊಳ್ಳುವುದು ದುಸ್ಸಾಧ್ಯ. ಯಾರ ಕರ್ಮವನ್ನು ಅವರೇ ಅನುಭವಿಸಬೇಕು. ಆದರೆ ಅವನ ಬದಲು ಇನ್ನೊಬ್ಬನು ಅನುಭವಿಸಲಾರನು.

**27. ದೈವ ಶಕ್ತಿ ಎಂದರೇನು? ಮಾನವನು ಆ ಶಕ್ತಿಯನ್ನು ಯಾವಾಗ ಹೊಂದುತ್ತಾನೊ ವಿವರವಾಗಿ ತಿಳಿಸಿ?**

ಉ. ಪಾಪ ಪುಣ್ಯ ಕರ್ಮವನ್ನು ಸುಟ್ಟುಹಾಕುವ ಅಗ್ನಿಯೇ ದೈವಶಕ್ತಿ ಅದನ್ನು ಮಾನವನು ಯೋಗವನ್ನು ಆಚರಿಸಿದಾಗಲೆ ಹೊಂದುತ್ತಾನೆ.

**28. ದೈವಜ್ಞಾನವನ್ನು ಹೊಂದುವುದು ಹೇಗೆ? ಹಾಗೆ ಹೊಂದಿದವನಿಗೆ ಪ್ರಯೋಜನವೇನು?**

ಉ. ದೈವಜ್ಞಾನದ ಮೇಲೆ ಶ್ರದ್ಧೆ ಇರುವಾಗ ಹಂತ ಹಂತವಾಗಿ ಜ್ಞಾನವನ್ನು ಹೊಂದಬಹುದು. ಜ್ಞಾನವನ್ನು ಹೊಂದುವುದರಿಂದ ಮಾನವನು ತನ್ನನ್ನು ತಾನು ತಿಳಿದುಕೊಳ್ಳುತ್ತಾನೆ. ಯೋಗವನ್ನಾಚರಿಸಿ ಕರ್ಮವನ್ನು ಸುಟ್ಟುಕೊಳ್ಳುತ್ತಾನೆ.

**29. ನಿಜವಾದ ಮನಶ್ಶಾಂತಿ ಮಾನವನಿಗೆ ಯಾವಾಗ ದೊರೆಯುತ್ತದೆ?**

ಉ. ತನ್ನಲ್ಲಿ ಯಾವುದೇ ಪ್ರಾಪಂಚಿಕ (ಐಹಿಕ) ವಿಷಯಗಳು ಜ್ಞಾಪಕಕ್ಕೆ ಬಾರದಿದ್ದಾಗ.

**30. “ಪೆಂಜೀಕಟಿಕವ್ವಲ ನೆವ್ವಂಡೇ ಕಾಕೃತಿ ವೆಲಯುನತನಿನೇ ಸೇವಿಂತುನ್” ಇವನ್ನು ನಿರ್ವಹಿಸಿ ಆಳುವವನು ಯಾರೋ ಆತನ ಬಗ್ಗೆ ತಿಳಿಸಿ?**

ಉ. ಯಾವ ಗುಣಜ್ಞಾಪಕ ಇಲ್ಲದ ನಿರ್ವಿಕಾರವಾದ ಸ್ಥಿತಿಯನ್ನು ಪೆಂಜೀಕಟಿ ಎಂದು ಪೋತನರವರು ವರ್ಣಿಸಿದ್ದಾರೆ. ಅಂತಹ ಸ್ಥಿತಿ ಲಭಿಸಿದ ನಂತರವೇ ನಿಜವಾದ ದೈವವು (ಆತ್ಮ) ತಿಳಿಯುತ್ತದೆ. ಆದ್ದರಿಂದ ಪೆಂಜೀಕಟಿ ಕವ್ವಲ ಎಂದು ವರ್ಣಿಸಿದ್ದಾರೆ. ಆತ್ಮ ಎಲ್ಲರಲ್ಲಿ ಒಂದಾಗಿದೆ. ಆದ್ದರಿಂದ ಏಕಾಕೃತಿ ಯಾಗಿರುವುದು ಎಂದಿದ್ದಾರೆ. ಎಲ್ಲರಲ್ಲಿಯು ಸರ್ವವ್ಯಾಪಿಯಾಗಿ ಇರುವ ದೈವವನ್ನೇ ನಾನು ಆರಾಧಿಸುತ್ತೇನೆಂದು ಪೋತನ ಹೇಳಿದ್ದಾನೆ.

**31. ಮುಕ್ತಿ ಕಾಂತವನ್ನು ಕುರಿತು ವಿವರಿಸಿ?**

ಉ. ಮುಕ್ತಿಕಾಂತವನ್ನು ಕುರಿತು ನಾನೇ ಅಲ್ಲ ಯಾರು ಹೇಳಲಾರರು. ಅದನ್ನು ಏನೂ ಹೇಳಲಾರದ ಸ್ಥಿತಿಯನ್ನೇ ಕಾಂತ ಎಂದಿದ್ದಾರೆ. ಆದರೆ ನಿಜವಾಗಿ ಅದು ಕಾಂತ ಕೂಡ ಅಲ್ಲ, ಸತ್ಯವನ್ನು ಹೇಳಬೇಕೆಂದರೆ ಅದು ಏನು ಅಲ್ಲದ್ದು.

**32. “ಮೂವರು ಮೂರ್ತಿಗಳನ್ನು ನೋಡುವುದು! ಮೂಲವನ್ನು ತಿಳಿಯುವ ದಾರಿ!” ಎಂದಿದ್ದಾರೆ. ಮೂವರು ಯಾರು? ಮೂಲವು ಏನು?**

ಉ. ತಾಮಸ, ರಾಜಸ, ಸಾತ್ವಿಕ ಗುಣಗಳನ್ನು ಮೂವರು ಮೂರ್ತಿಗಳಾಗಿ ವರ್ಣಿಸಿದ್ದಾರೆ. ಮೂರು ಗುಣಗಳ ನಂತರವಿರುವ ಆತ್ಮವನ್ನು ಮೂಲವೆಂದು ಹೇಳಿದ್ದಾರೆ. ಮೂರುಗುಣಗಳನ್ನು ಬಿಟ್ಟು ಆತ್ಮವನ್ನು ಸೇರಬೇಕೆನ್ನುವುದೇ ಮೇಲಿನ ಮಾತಿನ ಅರ್ಥ.

**33. "ಓಂ" ಕಾರ ಸ್ವರೂಪವೇನಾ ದೈವವು? ಅಥವಾ ಓಂಕಾರದ ನಂತರ ದೈವವಿದೆಯಾ ತಿಳಿಸಿ?**

ಉ. ಓಂ ಕಾರಕ್ಕೆ ಆಧಾರವಾಗಿರುವುದು ದೈವವು. ಓಂ ಕಾರವನ್ನು ಹೇಳಿಸುವ ಶಕ್ತಿಯೇ ದೈವವು. ನಮ್ಮ ಶರೀರದಲ್ಲಿನ ಶ್ವಾಸದಲ್ಲಿ ಓಂಕಾರ ಶಬ್ದವು ಮೊಳಗುತ್ತಿದೆ. ಆ ಶ್ವಾಸಕ್ಕೆ ಚೈತನ್ಯ ಶಕ್ತಿಯಾದ ಆತ್ಮವೇ ದೈವವು.

**34. ಮಾನವನು ದೈವವಾಗಿ ಪೂಜಿಸಲ್ಪಡಬೇಕು, ಅದು ಹೇಗೆ ಸಾಧ್ಯವೊ ತಿಳಿಸಿರಿ?**

ಉ. ಮಾನವನು ದೈವವಾಗಿ ಬದಲಾದಾಗ ಸಾಧ್ಯವಾಗುತ್ತದೆ. ದೈವವಾಗಿ ಬದಲಾಗಬೇಕೆಂದರೆ ಸಂಪೂರ್ಣವಾಗಿ ಜ್ಞಾನವನ್ನು ತಿಳಿದು ಯೋಗಿಯಾಗಿ ಆತ್ಮ ಶಕ್ತಿಯನ್ನು ಸಂಪಾದಿಸ ಬೇಕಾಗುತ್ತದೆ.

**ಟಿ.ರಂಗನಾಥಂ, ದಂಪೆಟ್ಲ.**

**35. ಜ್ಞಾನವನ್ನು ತಿಳಿದು ಪದ್ಧತಿಯ ಪ್ರಕಾರ ಧ್ಯಾನವನ್ನು ಮಾಡಿದರೆ ಕರ್ಮ ತೊಲಗುತ್ತದೆ ಎಂದಿದ್ದಾರೆ. ಆದ್ದರಿಂದ ದಯಮಾಡಿ ಧ್ಯಾನವನ್ನು ಮಾಡುವ ಪದ್ಧತಿಯನ್ನು ತಿಳಿಸಬೇಕೆಂದು ಕೋರುತ್ತಿದ್ದೇವೆ?**

ಉ. ***"ಶ್ರೇಯೋಹಿ ಜ್ಞಾನ ಮಭ್ಯಾಸಾತ್"*** ಎಂದು ಗೀತಯಲ್ಲಿಯೂ ಸಹ ಇದೆ. ಅಭ್ಯಾಸಮಾಡುವುದಕ್ಕಿಂತ ಮೊದಲು ಜ್ಞಾನವನ್ನು ತಿಳಿಯಬೇಕೆಂದಿದ್ದಾರೆ ಹಿರಿಯರು. ದಾರಿ ತಿಳಿಯದ ಮುನ್ನ ಪ್ರಯಾಣ ಸಾಗುವುದಿಲ್ಲ ಅಲ್ಲವೆ! ಹಾಗೆಯೇ ಜ್ಞಾನವು ತಿಳಿಯದ ಮುನ್ನ ಧ್ಯಾನವೂ ಸಹ ಸಾಗುವುದಿಲ್ಲ. ಆದ್ದರಿಂದ ಮೊದಲು ಜ್ಞಾನವನ್ನು ತಿಳಿದುಕೊಂಡರೆ ಧ್ಯಾನ ಮಾಡುವ ಪದ್ಧತಿ ಹೇಗಿರುವುದೋ ತಿಳಿಯುತ್ತದೆ.

ಒಂದು ವಿಧವಾಗಿ ಹೇಳಬೇಕೆಂದರೆ ನಿನ್ನಲ್ಲಿರುವ ಮನಸ್ಸನ್ನು ನೀನು ಕೆಲಸ ಮಾಡದೆ ನಿಲ್ಲಿಸುವುದನ್ನೇ ಧ್ಯಾನ ಅಥವಾ ಯೊಗಸಾಧನೆ ಆಗುತ್ತದೆ. ಹಾಗೆ ಮನಸ್ಸನ್ನು ಜಯಿಸಬೇಕೆಂದರೆ ಮೊದಲು ಮನಸ್ಸಿನ ವಿಷಯವನ್ನು ಪೂರ್ತಿಯಾಗಿ ತಿಳಿದಿರಬೇಕು. ಒಬ್ಬ ಶತ್ರುವನ್ನು ಗೆಲ್ಲಬೇಕೆಂದರೆ ಯಾವ ವಿಧದಲ್ಲಿ ಅವನ ವಿಷಯಗಳನ್ನು ಶೇಖರಿಸಿ ಅವನು ಎಲ್ಲಿರುವುದು, ಎಷ್ಟು ಜನರೊಂದಿಗೆ ಇರುವುದು, ಅವರ ಹತ್ತಿರ ಯಾವ ಆಯುಧಗಳಿರುವುದು, ಯಾವಾಗ ಆಯುಧಗಳಿರುವುದಿಲ್ಲವೆಂದು ತಿಳಿದುಕೊಂಡಂತೆ

ಮನಸ್ಸಿನ ಬಗ್ಗೆ ಪೂರ್ತಿಯಾಗಿ ತಿಳಿದುಕೊಂಡಾಗ ಧ್ಯಾನ ಮಾಡುವುದೂ ಸಹ ತಿಳಿಯುತ್ತದೆ. ಆದ್ದರಿಂದ ಮೊದಲು ಸಂಪೂರ್ಣ ಜ್ಞಾನಿಗಳಾಗಿ ನಂತರ ಸಂಪೂರ್ಣ ಯೋಗಿಗಳಾಗಬಹುದು.

**ಬಿ. ರವೀಂದ್ರ ರೆಡ್ಡಿ, ಚೆನ್ನೇಕೊತ್ತಪಲ್ಲಿ.**

**36. ದೇವಾಲಯಗಳ ಮುಂಭಾಗದಲ್ಲಿ ಮತ್ತು ದೇವಾಲಯಗಳಲ್ಲಿ ಜೀವ ಹಿಂಸೆ ಮಾಡುತ್ತಿದ್ದಾರೆ. ಹಾಗೆ ಮಾಡಬೇಕೆಂದು ಯಾವ ದೇವರಾದರು ಹೇಳಿದ್ದಾನಾ?**

ಉ. ಪರಮಾತ್ಮ ಹೊರತು ಎಷ್ಟೊ ದೇವತೆಗಳನ್ನು ಮಾನವನು ಆರಾಧಿಸುತ್ತಿದ್ದಾನೆ. ಆ ದೇವತೆಗಳಲ್ಲಿ ಮಹಾದೇವತೆಗಳು, ಕ್ಷುದ್ರ ದೇವತೆಗಳೆಂದು ಎರಡು ವಿಧಗಳಾಗಿ ಇವೆ. ಮಹಾದೇವತೆಗಳೆನ್ನುವವರಿಗೆ ಬಲಿ ಎನ್ನುವ ಹೆಸರಲ್ಲಿ ಜೀವಹಿಂಸೆ ಪೂಜೆ ಮಾಡುವುದಿಲ್ಲ. ಕ್ಷುದ್ರ ದೇವತೆಗಳೆನ್ನುವವರಿಗೆ ಮಾತ್ರ ಪೂಜಾ ವಿಧಾನದಲ್ಲಿ ಜೀವಹಿಂಸೆ ಮಾಡುತ್ತಿದ್ದಾರೆ. ಕ್ಷುದ್ರ ದೇವತೆಗಳು ಇನ್ನೊಬ್ಬರ ಶರೀರಗಳನ್ನು ಆಕ್ರಮಿಸಿ ಜೀವಿಗಳನ್ನು ತಮಗೆ ಅರ್ಪಿಸಬೇಕೆಂದು ಕೋರುತ್ತಿವೆ. ಆದ್ದರಿಂದ ಅವು ಹೇಳಿದ ಹಾಗೆ ಕೆಲವರು ಕ್ಷುದ್ರ ದೇವಾಲಯಗಳ ಹತ್ತಿರ ಜೀವಹಿಂಸೆ ಮಾಡುತ್ತಿದ್ದಾರೆ. ಯಾವುದು ಏನಾದರೂ ಜೀವ ಹಿಂಸೆ ಮಾಡುವವರಿಗೆ ಪಾಪವೇ ಬರುತ್ತದೆ. ಅದರ ವಿವರ ತಿಳಿಯದವರು ಮೂರ್ಖತ್ವದಿಂದ ಮಾಡುತ್ತಾ ಹೊಗುತ್ತಿದ್ದಾರೆ.

**ಕೆ.ಶಿವರಾಮು, ಎರ್ರಗುಂಟ್ಲ.**

**37. ಗುರುವು ಶಿಷ್ಯನನ್ನು ಹುಡುಕಬೇಕಾ? ಶಿಷ್ಯನು ಗುರುವನ್ನು ಹುಡುಕಬೇಕಾ? ತಿಳಿಸಿರೆಂದು ಪ್ರಾರ್ಥನೆ?**

ಉ. ಗುರುವು ಶಿಷ್ಯನನ್ನು ಹುಡುಕಬೇಕೆಂದರೆ ಶಿಷ್ಯರನ್ನು ಹುಡುಕುವುದಕ್ಕೆ ಗುರುವಿನ ಆಯುಸ್ಸು ಮುಗಿದುಹೋಗುತ್ತದೆ. ಇನ್ನು ಜ್ಞಾನವನ್ನು ಬೊಧಿಸುವುದು ಯಾವಾಗ? ಹಸಿವಿನಿಂದ ನರಳುತ್ತಿರುವವರ ಹತ್ತಿರಕ್ಕೆ ಹುಡುಕುತ್ತಾ ಅನ್ನವನ್ನು ನೀಡುವವನು ಬರುತ್ತಾನೆನ್ನುವುದು ಎಷ್ಟು ಸಮಂಜಸವೊ ಹಾಗೆಯೇ ಶಿಷ್ಯರ ಹತ್ತಿರಕ್ಕೆ ಗುರು ಬರುತ್ತಾನೆನ್ನುವ ಮಾತು ಸಹಾ ಅಷ್ಟೇ ಸಮಂಜಸ. ಒಬ್ಬನನ್ನು ಎಲ್ಲರೂ ಹುಡುಕಬಹುದು ಆದರೆ ಎಲ್ಲರನ್ನು ಒಬ್ಬನು ಹುಡುಕುವುದೆಂದರೆ ಸಾದ್ಯವೇನಾ? ಶಾಸ್ತ್ರಾನುಸಾರವಾಗಿ ಶಿಷ್ಯನೇ ಗುರುವನ್ನು ಅನ್ವೇಷಿಸಬೇಕು. ಆಗಲೇ ಗುರುವಿನ ಮೇಲೆ ಭಯ, ಭಕ್ತಿ, ಸೇವಾ ಭಾವವು

ಏರ್ಪಡುತ್ತದೆ. ಹುಡುಕುತ್ತಾ ಹುಡುಕುತ್ತಾ ಸಿಕ್ಕಿದ ವಸ್ತುವನ್ನು ಭದ್ರವಾಗಿ ಬಚ್ಚಿಟ್ಟುಕೊಳ್ಳುತ್ತೇವೆ ಅಲ್ಲವೆ! ಹಾಗೆಯೇ ಹುಡುಕಿದರೆ ಸಿಕ್ಕಿರುವ ಗುರುವನ್ನು ಎಂದಿಗೂ ಬಿಡಲಾರೆವು. ಹುಡುಕದೆ ಗುರುವೇ ತನ್ನ ಬಳಿಗೆ ಬಂದರೆ ನಿರ್ಲಕ್ಷ್ಯವಾಗಿ ನೋಡುವ ಶಿಷ್ಯರಿದ್ದಾರೆ. ಆದ್ದರಿಂದ ಗೀತಾ ಶಾಸ್ತ್ರದಲ್ಲಿ "ತದ್ವಿದ್ಧಿ" ಎನ್ನುವ ಶ್ಲೋಕದ ಪ್ರಕಾರ ಶಿಷ್ಯನೇ ಗುರುವಿನ ಹತ್ತಿರ ಸೇರಬೇಕಾಗಿದೆ.

**38. ಮಾಯೆಯನ್ನು ಜಯಿಸುವುದು ಹೇಗೆ?**

ಉ. ನನ್ನನ್ನು ಶರಣು ಹೊಂದಿದವರು ಮಾತ್ರವೇ ಮಾಯೆಯನ್ನು ಜಯಿಸಬಲ್ಲರೆಂದು ***"ಮಾ ಮೇವ ಯೇ ಪ್ರಪದ್ಯನ್ತೇ ಮಾಯಾ ಮೇತಾಂ ತರನ್ತಿತೇ"*** ಎಂದು ದೇವರು ಹೇಳಿದ್ದಾನೆ ಅಲ್ಲವೆ! ದೇವರ ಧರ್ಮಗಳನ್ನು ಆಶ್ರಯಿಸುವುದಾಗಲಿ, ಭಗವಂತನನ್ನು ಆಶ್ರಯಿಸುವುದಾಗಲಿ ಮಾಡಬಹುದು.

**39. ಮನಸ್ಸನ್ನು ಬಂಧಿಸುವುದು ಹೇಗೆ?**

ಉ. ಮನಸ್ಸಿಗೆ ಸಂಬಂಧಿಸಿದ ಜ್ಞಾನವನ್ನು ಸಂಪೂರ್ಣವಾಗಿ ತಿಳಿದುಕೊಂಡು ಅಭ್ಯಾಸವನ್ನು ಮಾಡಿದರೆ ಸಾಧ್ಯವಾಗುತ್ತದೆ.

**40. ಪ್ರಳಯ ಆದ ನಂತರ ಸೃಷ್ಠಿ ಏಕೆ ಬಂದಿದೆ?**

ಉ. ಬ್ರಹ್ಮಚಕ್ರ ತಿರುಗುತ್ತಿದೆ. ಆದ್ದರಿಂದ ಸಾವಿರ ಯುಗಗಳಿಗೊಮ್ಮೆ ಪ್ರಳಯ. ಸಾವಿರ ಯುಗಗಳಿಗೆ ಒಮ್ಮೆ ಪ್ರಭವವು ನಡೆಯುತ್ತಿದೆ. ನಮಗೆ ಹಗಲು ರಾತ್ರಿ ಏರ್ಪಡುವಂತೆ ಪ್ರಳಯ, ಪ್ರಭವಗಳೂ ಅವಷ್ಯಕ್ಕವೇ ನಡೆಯುತ್ತಿವೆ.

**41. ಜ್ಞಾನವು ಏನನ್ನು ಆಚರಿಸಿದರೆ ಬರುತ್ತದೆ?**

ಉ. ಆಚರಿಸಿದರೆ ಬರುವುದು ಜ್ಞಾನವಲ್ಲ. ಜ್ಞಾನ ಗುರುಗಳ ಹತ್ತಿರ ವಿನಯವಾಗಿದ್ದು ಶ್ರದ್ಧೆಯಿಂದ ತಿಳಿದುಕೊಳ್ಳುವುದರಿಂದಾಗಲಿ, ಮಸ್ತಕಗಳು ಓದುವುದರಿಂದಾಗಲಿ ಬರುತ್ತದೆ. ಶ್ರದ್ಧೆ ಇದ್ದಷ್ಟು ಜ್ಞಾನವು ಲಭಿಸುತ್ತದೆ. ಜ್ಞಾನವನ್ನು ಆಚರಿಸಿದರೆ ಬರುವುದು ಯೋಗ.

**ತೆನ್ಮಠಂ, ಸತ್ಯಗೋಪಾಲಾಚಾರ್ಯರು, ನರಸಾಪುರ.**

**42. ಸರ್ವರಕ್ಷಕರಾದ ಶಿವಕೇಶವಾದಿ ಪ್ರಧಾನ ದೇವತೆಗಳಿರುವಾಗ ಪುನಃ ಗ್ರಾಮ ದೇವತೆಗಳನ್ನು ಏಕೆ ಪೂಜಿಸಬೇಕು? ಪ್ರಾಣಿ ಬಲಿಯನ್ನು ಏಕೆ ಕೊಡಬೇಕು?**

ಉ. ಸರ್ವ ಪ್ರಪಂಚಕ್ಕೆ ಮೂಲ ಆದಿಶಕ್ತಿಯಾದ ಪರಮಾತ್ಮ ಇರುವಾಗ ಎಲ್ಲರು ಆತನನ್ನೇ ಪೂಜಿಸದೇ ಎಷ್ಟೋ ದೇವತೆಗಳನ್ನು ಪೂಜಿಸುವುದು, ಅವರವರ ಗುಣಗಳ ಸಂಸ್ಕಾರವೆಂದು ತಿಳಿಯಬೇಕು. ಬಹು ದೇವತೆಗಳನ್ನು ಆರಾಧಿಸುವುದಕ್ಕಿಂತ ಒಬ್ಬ ದೇವರನ್ನೇ ಆರಾಧಿಸುವುದು ಒಳ್ಳೆಯದೆಂದು ಶಾಸ್ತ್ರವೂ ತಿಳಿಸುತ್ತಿದೆ. ಬಹು ದೇವತಾ ಪೂಜೆ ಪ್ರಾಣಿ ಬಲಿಗಳು ಮಾನವನನ್ನು ತಪ್ಪುದಾರಿಯನ್ನು ಹಿಡಿಸುತ್ತಿವೆ.

**43. ಶಿವ ಕೇಶವರನ್ನು ಆರಾಧಿಸುವ ಭಕ್ತರು ಮರಣಿಸಿದ ನಂತರ ಅವರಿಗೆ ಯಾವ ಮಾರ್ಗ ಲಭಿಸುತ್ತದೆ?**

ಉ. ***"ಯಾನ್ತಿ ದೇವ ವ್ರತಾನ್ ದೇವಾನ್"*** ಎನ್ನುವ ಹಾಗೆ ಶಿವಕೇಶವರನ್ನು ಆರಾಧಿಸಿದವರು ಅವರು ಶಿವಕೇಶವರನ್ನೇ ಸೇರುತ್ತಾರೆ.

**44. ಪಾಪಗಳು ಮಾಡಿದವರನ್ನು ನಿರ್ಣಯಿಸುವುದಕ್ಕೆ ಶಿಕ್ಷಿಸುವುದಕ್ಕೆ ಅಧಿಕಾರ ಯಮಧರ್ಮರಾಜನಿಗೆ ಹೊರತು ಇತರರಿಗೆ ಇಲ್ಲವೆ?**

ಉ. ನಿಜ ಹೇಳಬೇಕೆಂದರೆ ಯಮಧರ್ಮರಾಜನೇ ಇಲ್ಲ. ನಾವು ಮಾಡಿಕೊಂಡ ಪಾಪ, ಪುಣ್ಯಗಳು ಎರಡೂ ನಮ್ಮ ಕಪಾಳದಲ್ಲಿರುವ ಕರ್ಮಚಕ್ರದಲ್ಲಿ ಸೇರಿ ಪ್ರತಿಷ್ಠಿಸಲ್ಪಟ್ಟು ಪುನಃ ಮರುಜನ್ಮದಲ್ಲಿ ಕಷ್ಟ ಸುಖ ರೂಪವಾಗಿ ಆಚರಣೆಗೆ ಬರುತ್ತಿವೆ. ಆದ್ದರಿಂದ ಯಮಲೋಕದಲ್ಲಿ ಇರುವವೆಂಬ ಸಂಘಟನೆಗಳೆಲ್ಲವನ್ನು ಇಲ್ಲಿಯೇ ನೋಡುತ್ತಿದ್ದೇವೆ. ಕಾಲವೇ ಕಾಲನಾಗಿ ಭೂಮಿ ಮೇಲೆಯೇ ಬಾಧಿಸುತ್ತಿದ್ದಾನೆಂದು ತಿಳಿಯಬೇಕು. ಕರ್ಮ ಚಕ್ರಕ್ಕೆ ಸಾಕ್ಷಿಯಾಗಿ ಇರುವ ಆತ್ಮೇ ಯಮಧರ್ಮರಾಜ, ಕರ್ಮ ಚಕ್ರವೇ ಚಿತ್ರ ಗುಪ್ತನ ಗ್ರಂಥವಾಗಿ ಇದೆ.

**45. ಆತ್ಮ ಎಲ್ಲಕಡೆ ತುಂಬಿರುವಾಗ ಎಲ್ಲಾ ಪ್ರಾಣಿಗಳಿಗೂ ಮುಕ್ತಿ ಇರಬೇಕು. ಆಗಿರುವಾಗ ವೃಕ್ಷಗಳಿಗೂ, ಪಶುಪಕ್ಷ್ಯಾದಿಗಳಿಗೂ ಮುಕ್ತಿ ಇದ್ದ ಹಾಗೇ ಅಲ್ಲವೆ! ತಿಳಿಸಬೇಕು?**

ಉ. ಸಿದ್ಧಾಂತದ ಪ್ರಕಾರ ಯಾವ ಜೀವಿ ಯಾದರೂ ಆತ್ಮವನ್ನು ಆರಾಧಿಸಿ ಮುಕ್ತಿ ಹೊಂದಬಹುದು. ಆದರೇ ಎಷ್ಟೋ ಯೋಚಿಸುವ ಬುದ್ಧಿ ಇರುವ ಮನುಷ್ಯರೇ ಬ್ರಹ್ಮ ವಿದ್ಯೆ ಕಲಿಯಲಾರದೆ, ಅರ್ಥವಾಗದೆ ಆಚರಣೆ ಇಲ್ಲದೆ ಮುಕ್ತಿ ಹೊಂದಲಾರದೆ ಇದ್ದಾರೆ. ಬುದ್ಧಿ ಕಡಿಮೆ ಇರುವ ಜನ್ಮಗಳಾದ ಉಳಿದ ಜೀವರಾಶಿಗಳು ಜ್ಞಾನವನ್ನು ತಿಳಿದುಕೊಳ್ಳಲಾರವು ಆದರೆ ಮನುಷ್ಯರಿಗಿಂತ ಮುಕ್ತಿ ಮಾರ್ಗದಲ್ಲಿ ಮುಂದಿರುವವೆಂದು

ಹೇಳಬಹುದು. ಮಾನವನಿಗಿಂತ ಉಳಿದವುಗಳು ಕರ್ಮ ಸಂಪಾದಿಸುವುದರಲ್ಲಿ ಕಡಿಮೆ, ಕರ್ಮ ಅನುಭವಿಸುವುದರಲ್ಲಿ ಹೆಚ್ಚು. ಮಾನವರಿಗೆ ಇದ್ದಷ್ಟು ಬಂಧನಗಳು ಗುಣಗಳ ಪ್ರೇರಣೆ ಅವುಗಳಿಗಿರುವುದಿಲ್ಲ. ಯಾವಾಗಾದರೂ ಉಳಿದ ಪಶು ಪಕ್ಷಿಮೃಗಾದಿಗಳು ವೃಕ್ಷಲತಾದಿಗಳು ಮೋಕ್ಷವನ್ನು ಹೊಂದಬೇಕಾಗಿದ್ದೇ.

**46. ಬ್ರಹ್ಮ ಪ್ರಳಯದಲ್ಲಿ ಆತನನ್ನು ಆಶ್ರಯಿಸಿದ ಜ್ಞಾನವಂತರು (ಉಪಾಸಕರು) ಜೀವಿಸಿರುತ್ತಾರಾ? ಅವರಿಗೆ ಮುಕ್ತಿ ಉಂಟಾಗುತ್ತದಾ?**

**ಉ.** ಪ್ರಳಯ ಸಂಭವಿಸಿದರೂ ಕರ್ಮ ಯಾವ ಮಾತ್ರವು ಶೇಷವಿಲ್ಲದೆ ಹೋಗಿದ್ದರೆ ಮುಕ್ತಿ ಹೊಂದುವರು. ಕರ್ಮ ಸ್ವಲ್ಪ ಶೇಷವಿದ್ದರೂ ಪುನಃ ಪ್ರಭವದಲ್ಲಿ ಹುಟ್ಟಬೇಕಾಗುತ್ತದೆ. ಎಷ್ಟು ಉಪಾಸಕರಾದರು ಕರ್ಮವನ್ನನುಸರಿಸಿಯೇ ಮುಕ್ತಿ ಅಥವಾ ಜನ್ಮವಿರುತ್ತದೆ. ಆದ್ದರಿಂದ ಯೋಗಿಗಳೆಲ್ಲರೂ ಕರ್ಮ ನಾಶಮಾಡುವ ಆರಾಧನೆಯಾದ ಯೋಗವನ್ನೇ ಆಚರಿಸುತ್ತಾರೆ.

**ಪಿ. ಪುಲ್ಲಯ್ಯ, ತೇರನ್ನಪಲ್ಲಿ**

**47. ಸ್ವಾಮಿ! ಯಾವ ಬೀಜ ಹಾಕಿದರೆ ಆ ಗಿಡವೇ ಬೆಳೆಯುತ್ತದೆ ಅಲ್ಲವೆ! ಹಾಗೇ ಮನುಷ್ಯರು ಸತ್ತ ಮೇಲೆ ಮನುಷ್ಯ ಜನ್ಮಕ್ಕೆ, ಆಕಳು ಸತ್ತರೆ ಮತ್ತೆ ಆಕಳು ಜನ್ಮಕ್ಕೆ ಹೋಗುತ್ತಿದ್ದಾರೆಂದು, ಒಂದು ಜಾತಿ ಇನ್ನೊಂದು ಜಾತಿಯಲ್ಲಿ ಜನ್ಮಿಸುವುದಿಲ್ಲವೆಂದು ಕೆಲವರು ಹೇಳುತ್ತಿದ್ದಾರೆ. ಇದು ನಿಜವೇನಾ? ತಿಳಿಸಬೇಕೆಂದು ಪ್ರಾರ್ಥನೆ.**

**ಉ.** ಯಾವ ಬೀಜ ಹಾಕಿದರೇ ಆ ಮೊಳಕೆಯೇ ಬರುತ್ತದೆ. ಬೀಜವು ಸ್ಥೂಲ ಆಕಾರವಿರುವುದು, ಕಣ್ಣಿಗೆ ಕಾಣಿಸುತ್ತದೆ. ಹಾಗೆಯೇ ಆ ಬೀಜಕ್ಕೆ ಬರುವ ಮೊಳಕೆ ಸಹ ಕಣ್ಣಿಗೆ ಕಾಣಿಸುತ್ತದೆ. ಆದ್ದರಿಂದ ಯಾವ ಬೀಜಕ್ಕೆ ಅದೇ ಮೊಳಕೆ ಎನ್ನುತ್ತಿದ್ದೇವೆ. ಮನುಷ್ಯನು ಸ್ಥೂಲವಾಗಿ ಕಣ್ಣಿಗೆ ಕಾಣಿಸುತ್ತಿದ್ದಾನೆ, ಅವನಿಗೆ ಹುಟ್ಟುವ ಶಿಶು ಸಹ ಕಣ್ಣಿಗೆ ಕಾಣಿಸುತ್ತಿದ್ದಾನೆ. ಆದ್ದರಿಂದ ಮನುಷ್ಯನಿಗೆ ಮನುಷ್ಯ, ಪ್ರಾಣಿಗಳಿಗೆ ಪ್ರಾಣಿಗಳು ಹುಟ್ಟುತ್ತಿದ್ದಾವೆನ್ನುವುದರಲ್ಲಿ ತಪ್ಪಿಲ್ಲ. ಆದರೆ ಇಲ್ಲಿ ಸಮಸ್ಯೆ ಏನೆಂದರೆ ಸ್ಥೂಲವಾಗಿರುವ ಶರೀರವಲ್ಲದೆ, ಸೂಕ್ಷ್ಮವಾಗಿ ಕಾಣಿಸದ ಜೀವಾತ್ಮದ ವಿಷಯ ಬೇಕಾಗಿದೆ. ಆದುದರಿಂದ ಮೇಲಿನ ಉದಾಹರಣೆ ಸರಿಹೋಗುವುದಿಲ್ಲ. ಮನುಷ್ಯನ ಶರೀರಕ್ಕೆ ಮನುಷ್ಯ ಶರೀರವೇ ಹುಟ್ಟಿದರೂ, ಹುಟ್ಟಿರುವ ಶಿಶುವಿನೊಳಗೆ ಹಿಂದಿನ ಜನ್ಮದಲ್ಲಿನ ಯಾವ ಜಾತಿ ಶರೀರ ಧರಿಸಿರುವ ಜೀವರಾಶಿಯಾದರು ಪ್ರವೇಶಿಸಿ ಇರಬಹುದು.

ಹುಟ್ಟಿರುವ ಮಾನವ ಶಿಶುವಿನಲ್ಲಿ ಇಂತಹ ಜೀವಿಯೇ ಪ್ರವೇಶಿಸಿದ್ದಾನೆಂದು ಯಾರು ನಿರ್ಣಯಿಸಲಾರರು. ಅಂತಹದರಲ್ಲಿ ಮಾನವನು ಪುನಃ ಮಾನವನಾಗಿ ಹುಟ್ಟುತ್ತಾನೆಂಬುವುದು ಸತ್ಯಕ್ಕೆ ದೂರವಾದದ್ದು. ಕರ್ಮವನ್ನನುಸರಿಸಿ ಮನುಷ್ಯ ಜನ್ಮದಲ್ಲಿನ ಜೀವಾತ್ಮ ಪುನಃ ಮನುಷ್ಯ ಜನ್ಮಕ್ಕಾದರೂ ಬರಬಹುದು ಅಥವಾ ಇತರ ಜನ್ಮಕ್ಕಾದರೂ ಹೋಗಬಹುದು ಆದ್ದರಂದ ಕರ್ಮಾನುಸಾರವೇ ಜನ್ಮಗಳು ಆದರೆ ಕಳೆದ ಶರೀರವನ್ನನು ಸರಿಸಿ ಜನ್ಮಗಳು ಇರುವುದಿಲ್ಲ.

**48. ಸರ್ವ ಜೀವಿಗಳಲ್ಲಿ ಆತ್ಮ ಒಂದೇ ಇದ್ದರೂ ವೃಕ್ಷಗಳಲ್ಲಿ ಚೈತನ್ಯವಿಲ್ಲವೆಂದು ಕೆಲವರು ಹೇಳುತ್ತಿದ್ದಾರೆ. ತಮ್ಮ ಅಭಿಪ್ರಾಯವೇನೆಂದು ಕೋರುತ್ತಿದ್ದೇವೆ.**

ಉ. ಆತ್ಮ ಚೈತನ್ಯ ಸ್ವರೂಪ. ಎಲ್ಲದರಲ್ಲಿ ಆತ್ಮ ಇದ್ದಾಗ ಎಲ್ಲದರಲ್ಲಿ ಚೈತನ್ಯವಿರುತ್ತದೆ. ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗುವ ಚಲನವಿಲ್ಲದ ಮಾತ್ರಕ್ಕೆ ಚೈತನ್ಯವೇ ಇಲ್ಲವೆಂದು ಹೇಳುವುದು ಸಮಂಜಸವಲ್ಲ. ಚೈತನ್ಯವಿಲ್ಲದೆ ಗಿಡ ಬೆಳೆಯಲಾರದು. ಚೈತನ್ಯವಿಲ್ಲದೆ ಭೂಮಿಯಿಂದ ನೀರನ್ನು, ಗಾಳಿಯಿಂದ ಕಾರ್ಬನ್ ಡೈ ಆಕ್ಸೈಡನ್ನು ಗ್ರಹಿಸಿ ಸೂರ್ಯರಶ್ಮಿಯಿಂದ ಹಿಟ್ಟಿನ ಪದಾರ್ಥಗಳನ್ನು ಎಲೆಗಳಲ್ಲಿ ತಯಾರು ಮಾಡಿಕೊಳ್ಳಲಾರವು. ಮುಟ್ಟಿದರೆಮುನಿ ಗಿಡವನ್ನು ತಾಕಿದಕೂಡಲೆ ಎಲೆಗಳೆಲ್ಲವೂ ಮುದಿರಿಕೊಳ್ಳುತ್ತದೆ ಅಲ್ಲವೆ! ಚೈತನ್ಯ ವಿಲ್ಲದೇ ಹಾಗೆ ಮುದಿರಿಕೊಳ್ಳವುದಿಲ್ಲ. ಆದ್ದರಿಂದ ಗಿಡಗಳಲ್ಲಿಯೂ ಸಹ ಚೈತನ್ಯವಿದೆ ಎಂದು ಹೇಳಬಹುದು.

**ಯಂ. ನಾಗಭೂಷಣಂ, ಧರ್ಮವರಂ**

**49. ಧ್ಯಾನವೆಂದರೆ ಏನು? ಯೋಗ ವೆಂದರೆ ಏನು? ಇವೆರಡರ ವ್ಯತ್ಯಾಸವನ್ನು ವಿವರವಾಗಿ ತಿಳಿಸಬೇಕೆಂದು ಕೋರುತ್ತಿದ್ದೇವೆ.**

ಉ. ಧ್ಯಾಸ ಅಥವಾ ಮನೋ ಜ್ಞಾಪಕ ಎನ್ನುವುದು ನಮ್ಮ ಶರೀರದಲ್ಲಿ ಇದೆ. ಮನೋ ಜ್ಞಾಪಕ ಯಾವ ಕಡೆ ಮರಳಿದರೆ ಧ್ಯಾಸ (ಗಮನ) ಅಲ್ಲಿಗೆ ಹೋಗಿದೆ ಎನ್ನುವುದಿದೆ. ನಮಗೆ ಹೆಚ್ಚಾಗಿ ವಿಷಯ ಧ್ಯಾಸಗಳೆ ಇರುತ್ತವೆ. ಐದು ಜ್ಞಾನೇಂದ್ರಿಯಗಳಿಗೆ ಸಂಬಂಧಿಸಿದ ಧ್ಯಾಸಗಳನ್ನು ವಿಷಯಧ್ಯಾಸಗಳೆನ್ನುತ್ತಿದ್ದೇವೆ. ಮೊದಲು ಆತ್ಮ ಜ್ಞಾನವನ್ನು ಸಂಪಾದಿಸಿಕೊಂಡ ವ್ಯಕ್ತಿ ತನ್ನ ಧ್ಯಾಸವನ್ನು ಇಂದ್ರಿಯ ವಿಷಯಗಳಿಂದ ಮರಳಿಸುವುದಕ್ಕೆ ಮಾಡುವ ಪ್ರಯತ್ನವೇ ಧ್ಯಾನ. ಧ್ಯಾಸ ಎನ್ನುವ ಪದದಿಂದ ಹುಟ್ಟಿರುವುದೇ ಧ್ಯಾನ. ಹೊರಗಿನ ಧ್ಯಾಸವನ್ನು ಅಂತರ್ಮುಖವಾಗಿ ಮರಳಿಸುವುದನ್ನು ಧ್ಯಾನ ಎನ್ನುತ್ತಿದ್ದೇವೆ. ಇದೇ ಯೋಗಸಾಧನೆ ಎಂದು ಕೂಡ ಹೇಳಬಹುದು.

ಧ್ಯಾನದಿಂದ ಲಭಿಸುವುದು ಯೋಗ. ಕುದಿಯುವ ಅಕ್ಕಿಗೂ ನಮ್ಮ ಕೈಗೂ ಮಧ್ಯ ಇರುವ ಸೌಟಿನಂತದ್ದು ಧ್ಯಾನ. ಸೇರಬೇಕಾದ ಗಮ್ಯಕ್ಕೆ ಸೇರೆಬೇಕಾದವನಿಗೂ ಮಧ್ಯೆ ಇರುವ ದಾರಿಯನ್ನು ಧ್ಯಾನ ಎನ್ನುತ್ತಿದ್ದೇವೆ. ಕುದಿಯುವ ಅಕ್ಕಿ ಯೋಗವಾದರೆ, ಕೈ ಜ್ಞಾನ, ಜ್ಞಾನಕ್ಕೆ ಯೋಗಕ್ಕೆ ಮಧ್ಯೆ ಸೌಟಿನ ಹಾಗೆ ಧ್ಯಾನವಿದೆ. ಕೈ ಇಲ್ಲದೆ ಸೌಟು ತನ್ನಷ್ಟಕ್ಕೆ ತಾನೇ ಕುದಿಯುವ ಅಕ್ಕಿಯೊಳಗೆ ಹೋಗುವುದಿಲ್ಲ. ಆದ್ದರಿಂದ ಧ್ಯಾನಕ್ಕಿಂತ ಮೊದಲು ಜ್ಞಾನ ಶ್ರೇಷ್ಠ. ಅದರ ನಂತರ ಧ್ಯಾನ ಶ್ರೇಷ್ಠವೆಂದು ಗೀತೆಯಲ್ಲಿ ಸಹ ತಿಳಿಸಿದ್ದಾರೆ. ಜ್ಞಾನ ವಿಲ್ಲದೆ ಧ್ಯಾನ ಎಷ್ಟು ಮಾತ್ರ ಯೋಗಕ್ಕೆ ಸೇರಿಸುವುದಿಲ್ಲ. ಈಗಿನ ಕಾಲದಲ್ಲಿ ಜ್ಞಾನವಿಲ್ಲದೇ ಬಹಳ ಜನ ಧ್ಯಾನ ಮಾಡುತ್ತಿದ್ದಾರೆ. ಅಂತವರು ನಿಜವಾದ ಯೋಗವನ್ನು ಹೊಂದಲಾರರು. ನಿನ್ನಲ್ಲಿನ ಆತ್ಮವನ್ನು ಸೇರಿದಾಗ ಇರುವ ಸ್ಥಿತಿಯನ್ನೇ ಯೋಗವೆನ್ನುತ್ತೇವೆ. ಯೋಗ ಸಮಯದಲ್ಲಿ ಯೋಗಶಕ್ತಿ ಲಭಿಸುತ್ತಿರುತ್ತದೆ.

**ಬಿ.ಮೊಹನ್ ರಾವ್, ಹಸ್ತಿನಾಪುರಮು**

**50. ರೂಪ, ಆಕಾರ ವಿಲ್ಲದ ಪರಿಪೂರ್ಣವನ್ನು ಆಕಾರವಿರುವ ಮನುಷ್ಯ ಹೇಗೆ ತಿಳಿಯುತ್ತಾನೆ?**

ಉ. ಆಕಾರವಿರುವ ಮಾನವನು ಯೋಗವನ್ನಾಚರಿಸುತ್ತಾ ಪೂರ್ತಿಯಾಗಿ ಕರ್ಮವನ್ನು ನಾಶಮಾಡಿಕೊಂಡಾಗ, ಕರ್ಮ ಎಷ್ಟು ಮಾತ್ರವು ಶೇಷವಿಲ್ಲದೆ ಹೋದಾಗ, ಶರೀರವನ್ನು ಬಿಟ್ಟು ನಿರ್ವಿಕಾರ ಪರಿಪೂರ್ಣದಲ್ಲಿ ಐಕ್ಯವಾಗಿ ತಾನೇ ಪರಿಪೂರ್ಣ ಪರಬ್ರಹ್ಮವಾಗಿ ಹೋಗುತ್ತಾನೆ. ಆಗಲೇ ಪರಿಪೂರ್ಣ ಪರಬ್ರಹ್ಮವನ್ನು ತಿಳಿಯಲಾಗುತ್ತದೆ. ಆದರೆ ಶರೀರವಿರುವಾಗ ನಿರ್ವಿಕಾರ ಪರಮಾತ್ಮನನ್ನು ಯಾರೂ ತಿಳಿಯುವುದಿಲ್ಲ. ಶರೀರ ಇರುವಾಗ ಯೋಗವನ್ನು ಆಚರಿಸಿದರೆ ಆತ್ಮ ತಿಳಿಯುತ್ತದೆ, ಆದರೆ ಪರಮಾತ್ಮ ತಿಳಿಯುವುದಿಲ್ಲ.

**51. ಯೋಗಿ ತ್ರಿ ಅವಸ್ಥಾತೀತನು. ಅಂತಹ ಯೋಗಿ ಅವಸ್ಥೆಗಳು ಹೊಂದುವುದು ಹೇಗೆ?**

ಉ. ಅಖಂಡವಾದ ಯೋಗವನ್ನು ಯೋಗಿ ಆಚರಿಸಲಾರನು. ಆದ್ದರಿಂದ ಯೋಗಾವಸ್ಥೆ ಮುಗಿದಕೂಡಲೇ ತ್ರಿ ಅವಸ್ಥೆಯನ್ನು ಹೊಂದುತ್ತಿದ್ದಾನೆ. ಎಂತಹ ಯೋಗಿ ಆದರೂ ತ್ರಿ ಅವಸ್ಥೆಗಳನ್ನು ಅನುಭವಿಸುವುದು ಸಹಜ. ಒಂದೇ ಅವಸ್ಥೆಯಲ್ಲಿರುವುದು ಅಪರೂಪ.

**52. ಜ್ಞಾನಿ ಮರಣಕ್ಕೂ ಅಜ್ಞಾನಿ ಮರಣಕ್ಕೂ ಭೇದವೇನಿದೆ?**

ಉ. ಜ್ಞಾನಿ ಅಜ್ಞಾನಿಯ ಮರಣಗಳಿಗೆ ಯಾವ ಭೇದವಿರುವುದಿಲ್ಲ. ಕರ್ಮ ಶೇಷವಿಲ್ಲದ ಯೋಗಿಗೆ, ಕರ್ಮ ಶೇಷ ವಿರುವ ಯೋಗಿಗೆ ಮರಣದಲ್ಲಿ ಭೇದವಿರುತ್ತದೆ. ಕರ್ಮ ಶೇಷವಿಲ್ಲದ ಯೋಗಿ ಸೂರ್ಯ ಪ್ರಕಾಶ ಚೆನ್ನಾಗಿ ಇರುವ ಹಗಲು, ಶುಕ್ಲಪಕ್ಷ, ಉತ್ತರಾಯಣ ವಿರುವ ಸಮಯದಲ್ಲಿಯೇ ಮರಣಿಸುತ್ತಾನೆ. ಕರ್ಮಶೇಷ ವಿರುವ ಯೋಗಿ ಆ ಸಮಯವನ್ನು ತಪ್ಪಿ ಮರಣಿಸುತ್ತಾನೆ.

**ಯಮ್. ವೆಂಕಟರಾಮುಡು, ಬೆಂಗಳೂರು**

**53. ಒಕಟಿ ಗೊನಿ ರೆಂಟಿ ನಿಶ್ಚಲ ಯುಕ್ತಿ ಜೇರ್ಚಿ**
**ಮೂಟಿನಾಲ್ಗಿಂಟಕಡು ವಸ್ಯಮುಲುಗ ಜೇಸಿ**
**ಯೈದಿಟನಿ ಗೆಲ್ಚಿ ಯಾರಿಂಟನನಚಿ**
**ಯೇಡು ವಿಡಚಿ ವರ್ತಿಂಚುವಾಡು ವಿವೇಕ ಧನುಡು.**

**ಈ ಪದ್ಯಕ್ಕೆ ವಿವರವನ್ನು ತಿಳಿಸಬೇಕೆಂದು ಕೋರುತ್ತಿದ್ದೇವೆ.**

ಉ. ನಮ್ಮ ಶರೀರದಲ್ಲಿ ಅಂತರೇಂದ್ರಿಯಗಳಿಗೂ, ಬಾಹ್ಯೇಂದ್ರಿಯಗಳಿಗೂ ಮಧ್ಯೆ ಇರುವುದು ಮನಸ್ಸು. ಮನಸ್ಸು ಒಂದು ಕೆಲಸ ಮಾಡಿದರೆ ನಮ್ಮ ಶರೀರದಲ್ಲಿ ಸ್ಥೂಲ ಸೂಕ್ಷ್ಮ ಅವಯವಗಳೆಲ್ಲವು ಕೆಲಸ ಮಾಡುತ್ತವೆ. ಅದು ಒಂದು ನಿಂತುಹೋದರೆ ಎಲ್ಲವೂ ನಿಂತುಹೋಗುತ್ತವೆ. ಆದ್ದರಿಂದ ಎಲ್ಲದಕ್ಕಿಂತ ಮುಖ್ಯವಾದದು ಮನೋ ನಿಲುಗಡೆಯೆಂದು ಹಿರಿಯರು ಹೇಳಿದ್ದಾರೆ. ಈ ಪದ್ಯದಲ್ಲಿ ಆ ವಿಷಯವನ್ನೇ ತಿಳಿಸಿದ್ದಾರೆ.

| | |
|---|---|
| ಒಕಟಿ ಗೊನಿ | = ಮನಸ್ಸೊಂದನ್ನು ಬಂಧಿಸಿ |
| ಎರಡು ನಿಶ್ಚಲ ಯುಕ್ತಿ ಸೇರಿಸಿ | = ಆತ್ಮ ಜೀವಾತ್ಮಗಳನ್ನು ಒಂದಾಗಿ ಮಾಡಿ |
| ಮೂರು | = ಮೂರು ಗುಣಗಳು |
| ನಾಲ್ಕು | = ಮೂರು ಗುಣಭಾಗಗಳ ನಂತರ ವಿರುವ ನಾಲ್ಕನೇ ಸ್ಥಾನವಾದ ಆತ್ಮ ಸ್ಥಾನದಲ್ಲಿ. |
| ಕಡುವಸ್ಯವಾಗಿ ಮಾಡಿ | = ಅಡಗಿಸಿ ಹಾಕಿ, |

| | | |
|---|---|---|
| ಐದನ್ನು ಗೆದ್ದು | = | ಐದು ಜ್ಞಾನೇಂದ್ರಿಯಗಳನ್ನು ಸ್ತಂಭಿಸಿ (ನಿಂತು ಹೋಗುವಂತೆ ಮಾಡಿ) |
| ಆರನ್ನು ಅಡಗಿಸಿ | = | ಗುಣ ಭಾಗದಲ್ಲಿರುವ ಆರು ಗುಣಗಳನ್ನು ಅಡಗಿಸಿ |
| ಏಳು ಬಿಟ್ಟು | = | ಸಪ್ತನಾಡಿ ಕೇಂದ್ರಗಳ ಕೆಲಸ ಬಿಟ್ಟು, |
| ವರ್ತಿಸುವವನು | = | ಯೋಗವನ್ನು ಹೊಂದಿದವನು, |
| ವಿವೇಕ ಧನವಂತನು | = | ಜ್ಞಾನ ಧನವನ್ನು ಹೊಂದಿದವನು. |

**ಭಾವಾರ್ಥ :** ಒಂದು ಮನಸ್ಸನ್ನು ನಿಲ್ಲಿಸುವುದರಿಂದ ಶರೀರ ಅಂತರ್ಭಾಗದಲ್ಲಿರುವವೆಲ್ಲವು ನಿಂತು ಹೋಗುತ್ತವೆ. ಆ ವಿಷಯವನ್ನೆ ಈ ಪದ್ಯದಲ್ಲಿ ವಿವರಿಸಲಾಗಿದೆ. ಮನಸ್ಸು ನಿಂತುಹೋದಾಗ ಜೀವಾತ್ಮ ಆತ್ಮದಲ್ಲಿ ಸೇರಿ ಇರುತ್ತದೆ. ಮೂರು ಗುಣಗಳು ನಾಲ್ಕನೆ ಸ್ಥಾನವಾದ ಆತ್ಮನಲ್ಲಿ ಲಯವಾಗಿ ಇರುತ್ತವೆ. ಬಾಹ್ಯೇಂದ್ರಿಯಗಳಾದ ಐದು ಜ್ಞಾನೇಂದ್ರಿಯ ಗಳು ಕೆಲಸ ಮಾಡದ ಸ್ಥಿತಿಯಲ್ಲಿ ಇರುತ್ತವೆ. ಗುಣಭಾಗಗಳಲ್ಲಿ ಆರು ಗುಣಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು ಅಡಗಿಹೋಗಿರುತ್ತವೆ. ಶರೀರದಲ್ಲಿ ಸಪ್ತನಾಡೀಕೇಂದ್ರಗಳ ಕೆಲಸ ಯಾವ ಮಾತ್ರವು ಇಲ್ಲದೆ ಇರುತ್ತದೆ. ಏಳು ಸ್ಥಾನಗಳ ಕೆಲಸವೂ ಸಹ ಇಲ್ಲ ಆದುದರಿಂದ ಅದನ್ನು ಯೋಗಸಿದ್ಧಿ ಎನ್ನುತ್ತಾರೆ. ಈ ಸ್ಥಿತಿಯನ್ನು ಹೊಂದಿದವನು ಸ್ವಲ್ಪ ಕಾಲಕ್ಕೆ ಶರೀರವನ್ನೂ ಸಹ ಬಿಟ್ಟು ಪರಮಾತ್ಮನಲ್ಲಿ ಐಕ್ಯವಾಗುತ್ತಾನೆ.

**54.** **ಕನ್ನೆವರುಡು ಚೇರಿ ಕಲಿಯಂಗ ನೊಕ್ಕಪ್ಪು**
**ಡುಚ್ಚ ಯಂದು ಪಿಂಡಮುದ್ಭವಿಂಚು**
**ಹೆಚ್ಚು ಕುಲಜುಡೆವಡು? ಹೀನುಡೆವಂಡುರಾ?**
**ವಿಶ್ವದಾಭಿರಾಮ ವಿನುರ ವೇಮ.**

**ದಯಮಾಡಿ ಈ ಪದ್ಯಕ್ಕೂ ಸಹ ಭಾವವನ್ನು ತಿಳಿಸಲು ಪ್ರಾರ್ಥನೆ.**

**ಉ.** ಪರಮಾತ್ಮ ಪುರುಷನು, ಪ್ರಕೃತಿ ಸ್ತ್ರೀಯೆಂದು ಗೀತೆಯಲ್ಲಿ ಹೇಳಲಾಗಿದೆ. ಸರ್ವ ಜೀವರಾಶಿಗಳಿಗೂ ತಾಯಿ ಪ್ರಕೃತಿ, ತಂದೆ ಪರಮಾತ್ಮ, ಪ್ರಕೃತಿ ಪರಮಾತ್ಮ ಸೇರುವಿಕೆ

ಯಿಂದಲೇ ಚೈತನ್ಯವಾದ ಜೀವ ಶರೀರಗಳು ಭೂಮಿಮೇಲೆ ಉದ್ಭವಿಸಿವೆ. ಪ್ರಕೃತಿಯಿಂದ ಶರೀರವು, ಪರಮಾತ್ಮನಿಂದ ಚೈತನ್ಯವೂ ಲಭಿಸುತ್ತವೆ. ಹುಟ್ಟಿರುವ ಪ್ರತಿಜೀವಿ ಕರ್ಮ ಬಂಧನದಲ್ಲಿ ಸಿಲುಕಿ ಜೀವನವನ್ನು ಸಾಗಿಸುತ್ತಿದ್ದಾನೆ. ಈ ವಿಧವಾಗಿ ಜನ್ಮತಃ ಎಲ್ಲಾ ಜೀವರಾಶಿಗಳು ಸಮಾನವೇ. ಆದರೇ ಮೇಲು ಕೀಳು ಎನ್ನುವ ಎರಡು ಕುಲಗಳು ಆದಿಯಿಂದಲೇ ಇವೆ. ಅವು ಯಾವೆಂದು ನಿನಗೆ ತಿಳಿದಿದೆಯಾ ಎಂದು ವೇಮನ ಪ್ರಶ್ನಿಸುತ್ತಿದ್ದಾನೆ. ನಿನಗೆ ತಿಳಿದಿದೆಯಾ? ತಿಳಿಯದಿದ್ದರೆ ಸ್ವಲ್ಪ ತಿಳಿಯ ಬೇಕೆಂದರೆ ಪರಮಾತ್ಮನ ಕಡೆ ಪ್ರಯಾಣಿಸುವವನು ಉನ್ನತ ಕುಲದವನು. ಪ್ರಕೃತಿ ಕಡೆ ಪ್ರಯಾಣಿಸುವವನು ಹೀನಕುಲದವನು. ಮೇಲಿನ ಪದ್ಯದಲ್ಲಿ ಕನ್ಯೆ ಎಂದರೆ ಪ್ರಕೃತಿ, ವರನೆಂದರೆ ಪರಮಾತ್ಮ ಎಂದು ತಿಳಿಯಬೇಕು. ಪಿಂಡವೆಂದರೆ ಶರೀರ, ಉಚ್ಚದಲ್ಲೆಂದರೆ ಕರ್ಮದಲ್ಲೆಂದು ತಿಳಿಯಬೇಕು.

**ಚಿದಂಬರರೆಡ್ಡಿ, ಅನಂತಪುರಮು**

**55. ಅಚಲ ಯೋಗವೆಂದರೇನು? ಅದರಿಂದ ಮೋಕ್ಷವನ್ನು ಹೇಗೆ ಹೊಂದಬಹುದು?**

ಉ. ಅಚಲವೆನ್ನುವುದು ಯೋಗವಲ್ಲ. ಅಚಲವೆಂದರೆ ಪರಮಪದ ಅಥವಾ ಮೋಕ್ಷ ವೆಂದು ಹೇಳಬಹುದು, ವಾಸ್ತವವಾಗಿ ಅಚಲವೆನ್ನುವುದು ಏನೂ ಅಲ್ಲದ ಪರಮಾತ್ಮವೆಂದು ಅರ್ಥ. ಸರ್ವ ಯೋಗಿಗಳಿಗೂ ಅದೇ ಗಮ್ಯ (ಗುರಿ), ಅದನ್ನು ಅಚಲವೆಂದು ಹೇಳಬೇಕು. ಅಚಲವೆನ್ನುವುದು ಮಾರ್ಗವಲ್ಲ ಗಮ್ಯವೆಂದು ತಿಳಿಯಬೇಕು. ಅಚೇಲವೆನ್ನುವ ಪದ ಅಚಲ ಎನ್ನುವ ಪದವಾಗಿ ಬದಲಾಗಿದೆ.

**56. ಸಾಂಖ್ಯ ತಾರಕ ಅಮನಸ್ಕಗಳೆಂದರೆ ಏನು?**

ಉ. ಸಾಂಖ್ಯವೆಂದರೆ ಶರೀರ ಯಂತ್ರಾಂಗವೆಲ್ಲವೂ ತಿಳಿದು ಯೋಗವನ್ನು ಆಚರಿಸುವುದು, ತಾರಕವೆಂದರೆ ನಮ್ಮ ಶರೀರದಲ್ಲಿನ ಶ್ವಾಸ ಆಧಾರದಿಂದ ಯೋಗವನ್ನು ಆಚರಿಸುವುದು, ಅಮನಸ್ಕವೆಂದರೆ ಮನೋ ಸಂಕಲ್ಪಗಳನ್ನು ಅಡಗಿಸಿ ಹಾಕಿ ಮನಸ್ಸನ್ನು ಆತ್ಮದ ಕಡೆ ಮರಳಿಸುವುದು. ಇವನ್ನೆ ಸಾಂಖ್ಯ, ತಾರಕ, ಅಮನಸ್ಕ ಯೋಗಗಳೆನ್ನುತ್ತಾರೆ. ಈ ಯೋಗಗಳಿಂದ ಸಿದ್ಧಿಸುವುದೇ ಅಚಲವು. ಪೂರ್ವಕಾಲದಲ್ಲಿ ಅಚಲವನ್ನು ಅಚೇಲವೆನ್ನುತ್ತಿದ್ದರು.

**57. ಆದಿಶಕ್ತಿ, ಪರಾಶಕ್ತಿ, ಮಹಾಶಕ್ತಿ ಯ ಬಗ್ಗೆ ವಿವರಿಸಿ?**

ಉ. ಆದಿಶಕ್ತಿ ಎಂದರೂ, ಪರಾಶಕ್ತಿ ಎಂದರೂ, ಮಹಾಶಕ್ತಿ ಎಂದರೂ, ಪರಮಾತ್ಮ ಶಕ್ತಿಯೇಯೆಂದು, ಇವು ಮೂರು ಒಂದೇಯೆಂದು ತಿಳಿಯಬೇಕು.

**58. ಪುರಾಣಗಳನ್ನು ಅನುಸರಿಸಿಯಾದರು, ಶಾಸ್ತ್ರಗಳನ್ನು ಅನುಸರಿಸಿಯಾದರೂ ಕೆಲವರು ನಿತ್ಯ ಜೀವನವನ್ನು ನಡೆಸಲಾರರು ಅವರ ಬಗ್ಗೆ ನಿಮ್ಮ ಉದ್ದೇಶವೇನು?**

ಉ. ಮೊದಲು ಭಕ್ತಿ ನಂತರ ಜ್ಞಾನ ಮನುಷ್ಯನಿಗೆ ತಪ್ಪದೇ ಇರಬೇಕು. ಭಕ್ತಿಯನ್ನು ಬೋಧಿಸುವ ಪುರಾಣಗಳನ್ನಾದರು, ಜ್ಞಾನವನ್ನು ಬೋಧಿಸುವ ಶಾಸ್ತ್ರಗಳನ್ನಾದರೂ ಆಚರಿಸದವನು ನಿಷ್ಪ್ರಯೋಜಕನು. ಯಾವುದೋ ಒಂದನ್ನು ಆಚರಿಸಬೇಕು.

**ತೆನ್ಮಠಂ ಸತ್ಯಗೋಪಾಲಾಚಾರ್ಯರು, ನರಸಾಪುರಮು**

**59. ಮುಕ್ತಿಯನ್ನು ಹೊಂದಬೇಕೆಂದರೆ ಯೋಗ ಸಾಧನೆಗಳು ಯಾವುವು?**

ಉ. 1) ಕರ್ಮಯೋಗ 2) ಜ್ಞಾನಯೋಗ ಇವನ್ನೇ ರಾಜಯೋಗ, ಬ್ರಹ್ಮಯೋಗ ಗಳೆಂದೂ ಸಹ ಹೇಳುತ್ತಾರೆ. ಈ ಎರಡು ಯೋಗಗಳೆ ಅಲ್ಲದೆ ಮತ್ತೊಂದು ಭಕ್ತಿಯೋಗ ಮಾರ್ಗವೂ ಸಹ ಇದೆ.

**60. ವಿಗ್ರಹಾರಾಧನೆ ಪದ್ಧತಿಯನ್ನು ಏಕೆ ಪ್ರವೇಶ ಇಟ್ಟಿದ್ದಾರೆ?**

ಉ. ನಿರಾಕಾರವಾದ ಆತ್ಮವನ್ನು ತಿಳಿಯುವುದಕ್ಕೆ ವಿಗ್ರಹಾರಾಧನೆಯನ್ನು ಆಚರಣೆಗೆ ತಂದಿದ್ದಾರೆ. ಪದ್ಧತಿಗಳನ್ನು ತಿಳಿದು ವಿಗ್ರಹಾರಾಧನೆಯನ್ನು ಮಾಡಿದರೆ ಜ್ಞಾನವಾಗುತ್ತದೆ. ತಿಳಿಯದೇ ಮಾಡಿದರೆ ಮೂಢನಂಬಿಕೆಯಾಗುತ್ತದೆ. ನಮ್ಮ ರಚನೆ ಗಳಲ್ಲಿನ **"ದೇವಾಲಯ ರಹಸ್ಯಗಳು"** ಎನ್ನುವ ಪುಸ್ತಕವನ್ನು ಓದಿದರೂ ವಿಗ್ರಹಾರಾಧನೆಯ ಅಂತರಾರ್ಥವನ್ನು ತಿಳಿಯಬಹುದು.

**61. ಸಾಕಾರದಿಂದಲೇ ಭಕ್ತಿ ಉಂಟಾಗುತ್ತದೆ ಎನ್ನುವುದು ನನ್ನ ಭಾವನೆ, ಇಲ್ಲಾ ನಿರಾಕಾರದಿಂದಲೇ ಭಕ್ತಿ ಬರುತ್ತದೆ ಎನ್ನುವುದು ಇನ್ನೊಬ್ಬರ ವಾದ ನೀವೇನನ್ನುತ್ತೀರಿ?**

ಉ. ನಿರಾಕಾರವೆಂದರೆ ಆಕಾರ ಇಲ್ಲದವನೆಂದು ಅರ್ಥ. ಆಕಾರ ಇಲ್ಲದವನನ್ನು ಆಕಾರದೊಂದಿಗೆ ನೋಡುವುದನ್ನು ಸಾಕಾರ ವೆನ್ನುತ್ತೇವೆ. ನಿರಾಕಾರನಿಗೆ ಸಾಕಾರರೂಪವನ್ನು ಪ್ರತಿಮೆ ರೂಪದಲ್ಲಿ ಕಲ್ಪಿಸಿ ಕೆಲವರು ತೋರಿಸಿದ್ದಾರೆ. ಇನ್ನೊಂದು ವಿಧವಾಗಿ ನಿರಾಕಾರನಾದ

ಪರಮಾತ್ಮ ಅವತಾರವನ್ನೆತ್ತಿ ಮನುಷ್ಯನಾಗಿ ಹುಟ್ಟಿದಾಗ ಆ ಆಕಾರವನ್ನೂ ಸಹ ಸಾಕಾರವೆಂದಿದ್ದಾರೆ. ಇದನ್ನನುಸರಿಸಿ ಸಾಕಾರವೆಂದರೆ ಎರಡು ವಿಧವೆಂದು ತಿಳಿದು ಹೋಗಿದೆ. ಭಕ್ತಿಯನ್ನುವುದು ನಂಬಿಕೆಯನ್ನನುಸರಿಸಿ ಇರುತ್ತದೆ. ಕೆಲವರಿಗೆ ಸಾಕಾರವಾದ ಕದಲದ ಪ್ರತಿಮೆಗಳ ಮೇಲೆ ಭಕ್ತಿ ಇರುತ್ತದೆ. ಅವರಿಗೆ ಸಾಕಾರ ಭಗವಂತನ ಮೇಲೆ ಆಗಲಿ, ನಿರಾಕಾರದ ಮೇಲೆ ಆಗಲಿ ಭಕ್ತಿ ಇರುವುದಿಲ್ಲ. ಇನ್ನು ಸ್ವಲ್ಪ ಜನರಿಗೆ ಸಾಕಾರ ಭಗವಂತನ ಮೇಲೆ ಭಕ್ತಿ ಇದ್ದೂ ಸಾಕಾರವೇ ನಿರಾಕಾರವೆಂದು, ನಿರಾಕಾರವೇ ಸಾಕಾರವೆಂದು ತಿಳಿದಿರುತ್ತಾರೆ. ಅಂತವರಿಗೆ ಸಾಕಾರ ಪ್ರತಿಮೆಗಳಮೇಲೆ ಭಕ್ತಿ ಇರುವುದಿಲ್ಲ. ಪ್ರತಿಮೆಗಳಮೇಲೆ ಭಕ್ತಿ ಇರುವವರಿಗೆ ನಿರಾಕಾರದಮೇಲೆ ಆಗಲಿ, ಭಗವಂತನಾದ ಸಾಕಾರದ ಮೇಲೆ ಆಗಲಿ ಭಕ್ತಿ ಇರುವುದಿಲ್ಲ. ಹಾಗೇ ನಿರಾಕಾರದ ಮೇಲೆ ಭಕ್ತಿ ಇರುವವರಿಗೆ ಪ್ರತಿಮೆಗಳ ಮೇಲೆ ಇರುವುದಿಲ್ಲ. ಒಟ್ಟಾರೆ ಎರಡು ಪದ್ಧತಿಗಳಲ್ಲಿಯೂ ಭಕ್ತಿ ಏರ್ಪಡುತ್ತದೆಂದು ತಿಳಿಯುತ್ತಿದೆ.

**62. ಭಕ್ತಿಯಲ್ಲಿ ವಿಧಗಳಿವೆಯಾ?**

ಉ. ಭಕ್ತಿ ಯಲ್ಲಿ ಎಷ್ಟೋ ವಿಧಗಳಿವೆ. ಜ್ಞಾನ ಮಾತ್ರ ಸ್ವಲ್ಪ ವಿಧಗಳೇ ಇವೆ. ಯೋಗ ಎರಡು ವಿಧಗಳೇ ಇದೆ. ಮೂರನೆಯ ಯೋಗ ಪ್ರತ್ಯೇಕವಾಗಿ ಇದೆ.

**63. ಮನೋ ನಿಶ್ಚಲತೆ ಸಾಧನೆ ಸಮಯದಲ್ಲಿ ಭೌತಿಕ ವಿಷಯಗಳು ಉದ್ಭವಿಸಿ ಗಡಿಬಿಡಿ ಪಡಿಸುತ್ತಿರುತ್ತವೆ. ತರುಣೋಪಾಯವೇನು?**

ಉ. ಈ ವಿಷಯವನ್ನೇ ಅರ್ಜುನ ಪರಮಾತ್ಮನನ್ನು ಕೇಳಿದ್ದಾನೆ. ಭಗವಂತನು ಧೃಢವಾದ, ಅಭ್ಯಾಸ ಅವಶ್ಯಕ ಎಂದಿದ್ದಾನೆ.

**64. ತ್ರಿಮತಾಚಾರ್ಯರವರ ದ್ವೈತ ಅದ್ವೈತ ವಿಶಿಷ್ಟಾದ್ವೈತಗಳು ಮತಗಳಾಗಿ ಹೇಗೆ ರೂಪಾಂತರ ಹೊಂದಿವೆ?**

ಉ. ತ್ರಿಮತಾಚಾರ್ಯರವರ ಸಿದ್ಧಾಂತಗಳು ತ್ರಿವಿಧಗಳಾದರೂ ಅವರ ಮತಗಳು ಬೇರೆಯಲ್ಲ. ಅವರ ಮೂವರ ಮತ ಹಿಂದೂಮತವೇ.

**ಪರಿಮಿ ನಾಗರಾಜು, ಎ. ಕೊಂಡಾಪುರಮು**

**65. ವಿಗ್ರಹಾರಾಧನೆಯ ಬಗ್ಗೆ ನೀವು ಕೊಡುವ ಸಂದೇಶವೇನು?**

ಉ. ನಮ್ಮ ಸಂದೇಶ ಒಂದು ಗ್ರಂಥ ರೂಪವಾಗಿದೆ. ಅಷ್ಟು ದೊಡ್ಡ ಸಂದೇಶವನ್ನು ಇಲ್ಲಿ ವಿವರಿಸುವುದು ಕಷ್ಟ, ಆದ್ದರಿಂದ ನೀವು ನಮ್ಮ ರಚನೆಗಳಲ್ಲಿನ **"ದೇವಾಲಯ ರಹಸ್ಯಗಳು"** ಎನ್ನುವ ಪುಸ್ತಕವನ್ನು ಓದಿ ತಿಳಿಯಿರಿ.

**66. ದೇವರಿದ್ದಾನೆನ್ನುವುದಕ್ಕೆ ನಿದರ್ಶನವೇನು?**

ಉ. ದೇವರಿದ್ದಾನೆನ್ನುವುದಕ್ಕೆ ಪ್ರಬಲ ನಿದರ್ಶನ ನೀನೇ. ಆ ದೇವರಿದ್ದಾಗಲೆ ನೀನು ಇರುತ್ತೀಯ. ಆದ್ದರಿಂದ ದೇವರಿಗೆ ನಿದರ್ಶನ ನೀನೇ. ಆ ದೇವರನ್ನು ನಿಜವಾಗಿ ತಿಳಿಯಬೇಕೆಂದರೆ, ನಿನ್ನನ್ನು ನೀನು ಪರಿಶೋಧಿಸಿಕೊಂಡರೆ ನಿದರ್ಶನವೇ ಅಲ್ಲದೆ ನಿಜವಾಗಿಯೇ ತಿಳಿಯುವನು.

**67. ಅಷ್ಟಾದಶ ಪುರಾಣಗಳನ್ನು ಅಸತ್ಯವೆಂದಿದ್ದೀರ. ಭಗವದ್ಗೀತಾ ಶಾಸ್ತ್ರವನ್ನು ಸಹ ಅಸತ್ಯ, ಕವಿಗಳ ಕಲ್ಪನೆ ಎಂದು ಏಕೆ ಕರೆಯಬಾರದು?**

ಉ. ಪುರಾಣಗಳು ನಿರೂಪಣೆಗೆ ಬರುವುದಿಲ್ಲ. ಆದಕಾರಣ ಅಸತ್ಯವೆಂದಿದ್ದೇವೆ. ಗೀತಾ ಶಾಸ್ತ್ರವು ನಿರೂಪಣೆಗೂ ಅನುಭವಕ್ಕೂ ಬರುತ್ತದೆ. ಆದ್ದರಿಂದ ಕಲ್ಪನೆ, ಅಸತ್ಯವೆಂದು ಹೇಳಲಾರೆವು. ಚಂದ್ರನಲ್ಲಿರುವ ಮಚ್ಚೆಗಳ ಹಾಗೆ ಗೀತೆಯಲ್ಲಿಯೂ ಸಹ ಕಲ್ಪನೆ ಕವಿತ್ವ ಕಾಣಿಸುತ್ತದೆ. ಅದನ್ನು ತೆಗೆದು ಹಾಕಿ ಸಶಾಸ್ತ್ರೀಯವಾಗಿ ಬಹಿರ್ಗತ ಮಾಡಿರುವುದೇ ನಾವು ರಚಿಸಿದ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಗೀತಾ ಶಾಸ್ತ್ರವೆಂದು ಸತ್ಯವೆಂದು ತಿಳಿಯಬೇಕು.

**ಆದಿಮೂಲಮ್ ರೆಡ್ಡಿ, ಪೆದ್ದಮಿಟ್ಟೂರು, ತಮಿಳನಾಡು.**

**68. ದ್ವೈತ, ಅದ್ವೈತ ವೆಂದರೆ ಏನು?**

ಉ. ಜೀವಾತ್ಮ, ಆತ್ಮಬೇರೆ ಬೇರೆಯಾಗಿ ಇರುವುದು ದ್ವೈತ. ಜೀವಾತ್ಮ ಆತ್ಮವನ್ನು ಸೇರಿ ಒಂದಾಗಿ ಹೋಗುವುದನ್ನು ಅದ್ವೈತವೆಂದು ತಿಳಿಯಬೇಕು. ದ್ವೈತವೆಂದರೆ ಎರಡೆಂದು, ಅದ್ವೈತವೆಂದರೆ ಎರಡಲ್ಲದ ಒಂದೆಂದು ಅರ್ಥ.

**69. ಮೂರವಸ್ಥೆಗಳು ಎನ್ನುತ್ತಾರೆ ಅವು ಯಾವುವು ತಿಳಿಸಬೇಕೆಂದು ಕೊರುತ್ತೇವೆ?**

ಉ. 1) ಎಚ್ಚರ 2) ನಿದ್ರೆ 3) ಸ್ವಪ್ನ. ಇವೇ ಮೂರು ಅವಸ್ಥೆಗಳು. ಇವನ್ನು ಪ್ರತಿದಿನ ನಾವು ಅನುಭವಿಸುತ್ತಿದ್ದೇವೆ.

**ಯಮ್. ನಾಗಭೂಷಣಂ, ವಿಜಯನಗರ್, ಬೆಂಗಳೂರು.**

**70. ಗುರುವರ್ಯಾ! ಜ್ಞಾನಾರ್ಜನೆಗಾಗಿ ಗುರುಗಳನ್ನು ಆಶ್ರಯಿಸಿ ಶಿಷ್ಯನು ಪ್ರಣವ ಮಂತ್ರವಾದ "ಓಂ" ಎಂದಾಗಲಿ ಪಂಚಾಕ್ಷರಿಯಾದ "ಓಂ ನಮಃ ಶಿವಾಯ" ಆಗಲಿ, ಅಷ್ಟಾಕ್ಷರಿಯಾದ "ಓಂ ನಮೊ ನಾರಾಯಣ" ಎನ್ನುವ ಮೊದಲಾದ ಮಂತ್ರಗಳನ್ನು ಪಠಿಸಬೇಕಾ? ಅಥವಾ ಸರ್ವಕಾಲ ಸರ್ವಾವಸ್ಥೆಗಳಲ್ಲಿಯು ಗುರುನಾಮವನ್ನು ಉಚ್ಚರಿಸಬೇಕಾ? ಯಾವುದು ಶ್ರೇಷ್ಠವಾದುದು?**

ಉ. ನಿಜವಾಗಿ ಯಾವುದು ಶ್ರೇಷ್ಠವಾದುದು ಅಲ್ಲ. ಗುರು ತಿಳಿಸಿದ ಯೋಗವನ್ನು ನಿರಂತರ ಆಚರಿಸಬೇಕು, ಮಂತ್ರವನ್ನು ಜಪಿಸಬಾರದು. ನಿಜವಾದ ಜ್ಞಾನಿ ಮಂತ್ರಗಳಿಗೆ ಬಹಳ ದೂರವಾಗಿರುತ್ತಾನೆ. ನಿಜ ಗುರುಗಳು ಸಹ ಮಂತ್ರಗಳನ್ನು ಉಚ್ಚರಿಸ ಬೇಕೆಂದು ಹೇಳುವುದಿಲ್ಲ. ಗುರುಗಳು ದೇವರಲ್ಲಿ ಐಕ್ಯವಾಗುವ ಯೋಗವನ್ನೇ ಬೋಧಿಸುತ್ತಾರೆ. ಅದನ್ನೇ ಆಚರಿಸೆಂದು ಹೇಳುತ್ತಾರೆ. ಮಂತ್ರವನ್ನು ಹೇಳುವವನು ಮಧ್ಯಮನೆಂದು, ಸುಮ್ಮನಿರೆನ್ನುವವನು ಉತ್ತಮನೆಂದು ವೇಮನ ಯೋಗಿಯೂ ಸಹ ಹೇಳಿದ್ದಾನೆ.

**71. "ಮೇಲ್ಭಾಗಕ್ಕೆ ಬೇರುಗಳು ಕೆಳಕ್ಕೆ ಕೊಂಬೆಗಳು ವ್ಯಾಪಿಸಿಕೊಂಡ ಪುರಾತನವಾದ ಅಶ್ವರ್ಥ ವೃಕ್ಷವಿದು. ಇದೇ ಶುದ್ದವು, ಇದೇ ಬ್ರಹ್ಮ, ಅಮೃತವು ಯಾವುದು ಇದನ್ನು ಅತಿಕ್ರಮಿಸಲಾರದು. ಇದೇ ಆತ್ಮ" ಎಂದು ಯಾರೋ ಜ್ಞಾನ ಸಂಪನ್ನರು ಬರೆದಿದ್ದಾರೆ. ಅರ್ಥವಾಗಲಿಲ್ಲ ಆದ್ದರಿಂದ ನೀವು ವಿವರಿಸುತ್ತೀರೆಂದು ಕೋರುತ್ತಿದ್ದೇವೆ.**

ಉ. **ಶ್ಲೋ॥ ಊರ್ಧ್ವ ಮೂಲ ಮದಶ್ಯಾಖ ಮಶ್ವತ್ಥಂ ಪ್ರಾಹುರವ್ಯಯಮ್**
**ಚನ್ದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸವೇದ ವಿತ್.**

ಮೇಲ್ಭಾಗಕ್ಕೆ ಬೇರುಗಳು ಕೆಳಕ್ಕೆ ಕೊಂಬೆಗಳಾಗಿ ವೇದಗಳೇ ಎಲೆಗಳಾಗಿ ನೆಲಸಿರುವ ಅಶ್ವತ್ಥ ವೃಕ್ಷವನ್ನು ತಿಳಿದವನು ವೇದಗಳು ತಿಳಿದವನೇ ಎಂದು ಭಗವಂತನೆಂದಿದ್ದಾನೆ. ಅಶ್ವರ್ಥ ವೃಕ್ಷವೆಂದರೆ ನಮ್ಮ ಶರೀರದೊಳಗೆ ಗುಣ ಪ್ರಭಾವಗಳು ಇರುವ ನಾಡೀ ಮಂಡಲವು. ಇದು ಆತ್ಮವಲ್ಲ. ಪರಮಾತ್ಮ ಅಲ್ಲ, ಕೇವಲ ಗುಣ ಕರ್ಮ ಮಿಶ್ರಿತ ಪ್ರಭಾವ ಶರೀರಾಂತರ್ಗತ ಭಾಗ. ಇದನ್ನು ತಿಳಿದರೆ ಜನ್ಮಗಳಿಗೆ ಕಾರಣವಾದ ಎಲ್ಲಾ ಗುಣಗಳು, ಕರ್ಮ ತಿಳಿಯುತ್ತದೆ. ಆದ್ದರಿಂದ "ಸವೇದವಿತ್" ಎಂದಿದ್ದಾನೆ. ***"ತ್ರೈ ಗುಣ್ಯ ವಿಷಯಾವೇದಾ"*** ಎಂದು ಗೀತೆಯಲ್ಲಿ ಹೇಳಿರುವ ಹಾಗೆ ಮೂರು ಗುಣ ವಿಷಯಗಳೇ ವೇದಗಳು, ಆ

ಮೂರು ಗುಣಗಳಿಂದ ವೃದ್ಧಿ ಆಗುವ ಅಶ್ವರ್ಥ ವೃಕ್ಷವನ್ನು ತಿಳಿದವನು ವೇದಗಳನ್ನು ತಿಳಿದವನೇ ಆಗುತ್ತಾನೆ.

ಇಲ್ಲಿ ಅಶ್ವರ್ಥ ವೃಕ್ಷವು ಗುಣಗಳಿಗೆ ಸಂಬಂಧಿಸಿರುವುದೇ ಎಂದು ಪೂರ್ತಿಯಾಗಿ ತಿಳಿದು ಹೋಗುತ್ತಿದೆ. ಆದ್ದರಿಂದ ಅದು ಶುದ್ಧ ಬ್ರಹ್ಮವಲ್ಲ. ಪರಬ್ರಹ್ಮವೂ ಅಲ್ಲ. ಪರಮಾತ್ಮನನ್ನು ತಿಳಿಯಬೇಕೆನ್ನುವವನು ಗುಣ ರಾಹಿತ್ಯದಿಂದ ಈ ಅಶ್ವರ್ಥ ವೃಕ್ಷವನ್ನು ಕತ್ತರಿಸಿ ಹಾಕಬೇಕೆಂದು ಗೀತೆಯಲ್ಲಿ ಶ್ಲೋ. ***"ಅಶ್ವರ್ಥ ಮೇನಂ ಸುವಿರೋಢಮೂಲ ಮಸಂಗ ಶಸ್ತ್ರೇನ ಧೃಡೇನ ಚಿತ್ವಾ"*** ಎಂದು ದೇವರಂದಿದ್ದಾನೆ. ಅಂತಹದರಲ್ಲಿ ಅಶ್ವರ್ಥ ವೃಕ್ಷವು ಹೇಗೆ ದೇವರಾಗುತ್ತದೆ. ಅಶ್ವರ್ಥ ವೃಕ್ಷ ಕೇವಲ ಗುಣ ಕರ್ಮಗಳಿಂದ ಕೂಡಿಕೊಂಡಿರುವ ಶರೀರ ಯಂತ್ರಾಂಗ ಮಂಡಲವೆಂದು ತಿಳಿಯಬೇಕು. ಅದು ಪ್ರತಿಯೊಬ್ಬರಲ್ಲಿ ಇರುತ್ತದೆ. ಅದನ್ನು ನಾಶಮಾಡಿದವನೇ ಮೋಕ್ಷವನ್ನು ಹೊಂದುತ್ತಾನೆ.

**ಯಮ್. ಪುರುಶೋತ್ತಮನಾಯುಡು, ಕೂಚಿವಾರಿಪಲ್ಲಿ**

**72. ಭಗವಂತನು ಮನುಷ್ಯನಲ್ಲಿ ಇರುತ್ತಾನ?**

ಉ. ಭಗವಂತನು ಮನುಷ್ಯನಲ್ಲಿರುವುದಿಲ್ಲ. ಆತ್ಮ, ಪರಮಾತ್ಮ ಮನುಷ್ಯನಲ್ಲಿರುತ್ತಾರೆ. ಪರಮಾತ್ಮ ಅಂಶ ಪ್ರತ್ಯೇಕವಾಗಿ ಹುಟ್ಟಿದಾಗ ಭಗವಂತನು ಮನುಷ್ಯನಾಗಿ ಇರುತ್ತಾನೆ. ಅಷ್ಟೇ ಆಗಲಿ ಸಾಧಾರಣ ಮನುಷ್ಯ ಭಗವಂತನು ಅಲ್ಲ.

**73. ಭಗವಂತನನ್ನು ಪೂಜಿಸಿದವನಿಗೆ ಕಷ್ಟಗಳು ಹೆಚ್ಚಾಗಿರುತ್ತವೆನ್ನುತ್ತಾರೆ. ನಿಜವಾ?**

ಉ. ಶುದ್ಧ ಅಸತ್ಯ. ಬರುವ ಕಷ್ಟಗಳು ಭಗವಂತನನ್ನು ಪೂಜಿಸಿದರೂ, ಪೂಜಿಸದಿದ್ದರೂ ಬರುತ್ತವೆ. ಕಷ್ಟಸುಖಗಳು ಕರ್ಮವನ್ನನ್ನುಸರಿಸಿ ಇರುತ್ತವೆ. ಪೂಜೆಗಳು ಭಕ್ತಿಯನ್ನನುಸರಿಸಿ ಇರುವುದಿಲ್ಲ.

**74. ಮನುಷ್ಯನು ಮಣ್ಣಿನ ಕೊಡಕ್ಕೆ ಸಮಾನವೆನ್ನುತ್ತಾರೆ ಏಕೆ?**

ಉ. ಹೊಡೆದು ಹೋದರೆ ಕೆಲಸಕ್ಕೆ ಬಾರದ ಕೊಡದಂತೆ ಸತ್ತು ಹೋದರೆ ಯಾವುದಕ್ಕೂ ಕೆಲಸಕ್ಕೆ ಬಾರದ ಶರೀರವಿದೆ ಆದ್ದರಿಂದ ಹಾಗೆ ಎನ್ನುತ್ತಾರೆ.

**75. ಸ್ವಾಮಿ ನೀವು ಎಲ್ಲಿಯವರೆಗು ಓದಿಕೊಂಡಿದ್ದೀರಾ?**

ಉ. ನೀವು ಯಾವ ಓದನ್ನು ಕೇಳಿದ್ದೀರಿ! ಪ್ರಪಂಚ ಓದಾದರೆ 11ನೇ ತರಗತಿ, ಪರಮಾತ್ಮನ ಓದಾದರೆ ಮೂರನ್ನು ಪೂರ್ತಿ ಓದಿ ನಾಲ್ಕರಲ್ಲಿ ಇದ್ದೇನೆ. ಐದಕ್ಕೆ ಹೋಗಬೇಕು.

**ಯಮ್. ಖಾಜಾಮೈನುದ್ದೀನ್, ಗರುಗುಚಿಂತಲಪಲ್ಲೆ.**

**76. "ಕಾಮದಿಂದ ಅರ್ಥ ಲಭಿಸುತ್ತದೆ" ಎಂದು ನೀವಂದಿದ್ದೀರ. ಇದು ಎಲ್ಲಿಯವರೆಗು ಸಮಂಜಸ?**

ಉ. ಧರ್ಮಾರ್ಥ ಕಾಮ ಮೋಕ್ಷ ಎನ್ನುವುದು ಸಹಜ. ಇದರ ಅರ್ಥ ಧರ್ಮದಿಂದ ಅರ್ಥ, ಕಾಮ (ಆಸೆ) ದಿಂದ ಮೋಕ್ಷ ಲಭಿಸುತ್ತದೆಂದು ಹೇಳುತ್ತಾರೆ. ಮತ್ತೆ ಕೆಲವರು ಧರ್ಮದಿಂದ ಕೂಡಿಕೊಂಡ ಅರ್ಥ (ಧನ), ಧರ್ಮದಿಂದ ಕೂಡಿಕೂಂಡ ಕಾಮ, ಧರ್ಮದಿಂದ ಕೂಡಿಕೊಂಡ ಮೋಕ್ಷವೆಂದು ಸಹ ಹೇಳುತ್ತಾರೆ. ಈ ಎರಡು ಅರ್ಥಗಳು ಸರಿಯಲ್ಲ. ಏಕೆಂದರೆ! ಧರ್ಮದಿಂದ ಧನ ಬರುವುದಿಲ್ಲ. ಮೋಕ್ಷ ಹೇಗೆ ಲಭಿಸುತ್ತದೆಂದು ತಿಳಿಸುವುದೇ ಧರ್ಮ. ಧರ್ಮವು ಹಣ ಬರುವುದಕ್ಕೆ ಮಾರ್ಗವನ್ನು ತಿಳಿಸುವುದು ಅಲ್ಲ. ಧರ್ಮವೆಂದರೆ ದೇವರನ್ನು ತಿಳಿದುಕೊಳ್ಳುವ ಶಾಸನದೊಂದಿಗೆ ಕೂಡಿಕೊಂಡಿರುವುದು. ಆದ್ದರಿಂದ ಧರ್ಮಗಳಿಂದ ಧನ ಬರುವುದಿಲ್ಲ, ಧರ್ಮಾರ್ಥ ಎನ್ನುವ ಪದ ಸರಿಯಲ್ಲವೆಂದು ತಿಳಿಯಬೇಕು.

ಕಾಮವೆಂದರೆ ಆಸೆ, ಆಸೆಯಿಂದ ಪ್ರಪಂಚ ಧನವನ್ನು ಸಂಪಾದಿಸಿಕೊಳ್ಳಬಹುದು. ಆದರೆ ಮೋಕ್ಷ ಬರುವುದಿಲ್ಲ. ಆಸೆ ಒಂದು ಗುಣ. ಗುಣಗಳಿಂದ ಕರ್ಮ ಏರ್ಪಟ್ಟು ಜನ್ಮಕ್ಕೆ ಹೋಗುತ್ತಾನೆ. ಆದರೆ ಮೋಕ್ಷಕ್ಕೆ ಹೋಗುತ್ತಾನೆನ್ನುವುದು ಸಮಂಜಸವಲ್ಲ. ಆದ್ದರಿಂದ ಕಾಮ ಮೋಕ್ಷ ಎನ್ನುವ ಮಾತು ಸತ್ಯವಲ್ಲ. "ಧರ್ಮಾರ್ಥ ಕಾಮ ಮೋಕ್ಷ" ಎನ್ನುವ ವಾಕ್ಯ ಸರಿಯಲ್ಲದ ವಾಕ್ಯವೆನ್ನುವುದರಲ್ಲಿ ಸಂದೇಹವೇ ಇಲ್ಲ. ಧರ್ಮದಿಂದ ಮೋಕ್ಷ ತಿಳಿಯುತ್ತದೆ ಹಾಗೆ ಆಸೆಯಿಂದ ಧನವು ಲಭಿಸುತ್ತದೆ. ಆದ್ದರಿಂದ ***"ಕಾಮಾರ್ಥ ಧರ್ಮ ಮೋಕ್ಷ"*** ಎನ್ನುವುದು ಸರಿಯಾದ ವಾಕ್ಯ.

ಮತ್ತೆ ಕೆಲವರು ಧರ್ಮದೊಂದಿಗೆ ಕೂಡಿಕೊಂಡ ಕಾಮ ಧರ್ಮದಿಂದ ಕೂಡಿಕೊಂಡ ಅರ್ಥ (ಧನ), ಧರ್ಮದೊಂದಿಗೆ ಕೂಡಿಕೊಂಡ ಮೋಕ್ಷವೆನ್ನುವುದು ಸಹ ಸರಿಯಲ್ಲ. ಧರ್ಮಕ್ಕೆ ವಿರುದ್ದವಾಗಿ, ಜ್ಞಾನಕ್ಕೆ ನಿತ್ಯ ವೈರತ್ವ ಹೊಂದಿರುವುದು ಕಾಮವೆಂದು ಗೀತೆಯಲ್ಲಿ ವರ್ಣಿಸಲಾಗಿದೆ. ಧರ್ಮಕ್ಕೂ, ಕಾಮಕ್ಕೂ ಯಾವ ಮಾತ್ರ ಹೊಂದಾಣಿಕೆ ಆಗುವುದಿಲ್ಲ. ಆದ್ದರಿಂದ ಧರ್ಮ ದೊಂದಿಗೆ ಕೂಡಿಕೊಂಡ ಕಾಮವೆನ್ನುವುದು

ಸರಿಯಲ್ಲ. ಹಾಗೇ ಧರ್ಮದೊಂದಿಗೆ ಕೂಡಿಕೊಂಡ ಧನವೆನ್ನುತ್ತಾರೆ. ಧರ್ಮವು ಆತ್ಮ ವಿಷಯವನ್ನು ತಿಳಿಸುವುದೇ ಆಗಲಿ ಪ್ರಪಂಚ ಧನವನ್ನು ಸಂಪಾದಿಸುವುದರಲ್ಲಿ ಯಾವ ಮಾತ್ರ ಉಪಯೋಗಪಡುವುದಲ್ಲ. ಧರ್ಮಕ್ಕೆ, ಆತ್ಮಕ್ಕೇ ಸಂಬಂಧವಿದೆ. ಆದರೆ ಯಾವ ಪ್ರಪಂಚ ವಿಷಯಗಳೊಂದಿಗೆ ಸಂಬಂಧವಿಲ್ಲ. ಆದ್ದರಿಂದ ಧರ್ಮದೊಂದಿಗೆ ಕೂಡಿಕೊಂಡ ಧನವೆನ್ನುವುದರಲ್ಲಿ ಯಾವ ಅರ್ಥವಿಲ್ಲ. ಅದೇ ವಿಧವಾಗಿ ಧರ್ಮದಿಂದ ಕೂಡಿಕೊಂಡ ಮೋಕ್ಷವೆನ್ನುತ್ತೇವೆ. ಧರ್ಮ ತಿಳಿಯದೇ ಮೋಕ್ಷ ಬರುವುದಿಲ್ಲ. ಮೋಕ್ಷ ಯಾವಾಗಲೂ ಧರ್ಮಗಳ ಮೇಲೆ ಆಧಾರಬಿದ್ದಿದೆ. ಆದ್ದರಿಂದ ಧರ್ಮದೊಂದಿಗೆ ಕೂಡಿಕೂಂಡ ಮೋಕ್ಷ ಎಂದು ಹೇಳಬೇಕಾದ ಅವಶ್ಯಕತೆಯೇ ಇಲ್ಲ.

ನಿಜವಾಗಿ ಪೂರ್ವದಲ್ಲಿ ಧರ್ಮಾರ್ಥಕಾಮ ಮೋಕ್ಷಗಳೆಂದು ಯಾರೂ ಹೇಳಲಿಲ್ಲ. ಪೂರ್ವದಲ್ಲಿ ಹಿರಿಯರು **"ಕಾಮಾರ್ಥ ಧರ್ಮ ಮೋಕ್ಷ"** ಎನ್ನುತ್ತಿದ್ದರು. ಕಾಲಕ್ರಮವಾಗಿ ಆ ಮಾತು ಧರ್ಮಾರ್ಥ ಕಾಮ ಮೋಕ್ಷವಾಗಿ ಬದಲಾಗಿದೆ. ಕಾಮ ದಿಂದ ಧನ, ಧರ್ಮದಿಂದ ಮೋಕ್ಷ ಲಭಿಸುತ್ತದೆನ್ನುವ ಭಾವದಿಂದ ಅಂದಿನ ಹಿರಿಯರು ಕಾಮಾರ್ಥ ಧರ್ಮ ಮೋಕ್ಷವೆಂದಿದ್ದಾರೆ.

**ಚಂದಾ ಚಿನ್ನಮುನೆಪ್ಪ, ನರಸಾಪುರಮು**

77. **ಕುರುಡರಿಗೆ, ಕುಂಟರಿಗೆ, ಕುಷ್ಠ ರೋಗಿಗಳಿಗೆ ದಾನ ಮಾಡಿದರೆ ಪುಣ್ಯ ಬರುತ್ತದೆಂದು ಬಹಳ ಜನ ಹೇಳುತ್ತಾರೆ. ಈಮಾತು ನಿಜವೇನಾ?**

**ಉ.** ಗೀತಾ ಶಾಸ್ತ್ರದಲ್ಲಿ ಕೊಡುವದಾನ ಯಾರಿಗೆ ಕೊಡಬೇಕೆಂದು ಆಲೋಚಿಸಿ ದಾನಕ್ಕೆ ಪಾತ್ರನಾ, ಪಾತ್ರನಲ್ಲವಾ ಎಂದು ಯೋಚಿಸಿ ಪಾತ್ರನಾದಾಗಲೆ ಕೊಡು ಎಂದಿದ್ದಾನೆ. ಅಷ್ಟು ಆಳವಾಗಿ ಹೇಳುವುದರಲ್ಲಿ ಏನೋ ಒಂದು ಅರ್ಥವಿರುತ್ತದೆ ಅಲ್ಲವೆ! ಏಕೆ ಅಷ್ಟು ಯೋಚನೆಯಾಗಿ ಹೇಳಿದ್ದಾನೆಂದರೆ ಕೊಡುವ ದಾನದಲ್ಲಿ ಪುಣ್ಯವು ಬರುತ್ತದೆ, ಮತ್ತು ಪಾಪವುಬರುತ್ತದೆ. ಪುಣ್ಯ ಬರುವುದರಿಂದ ನಮಗೆತೊಂದರೆ ಇಲ್ಲ. ಆದರೆ ಪಾಪ ಬರುವುದರಿಂದ ಅದರ ಫಲಿತಾಂಶವಾಗಿ ಕಷ್ಟಗಳನ್ನನುಭವಿಸಬೇಕಾಗಿ ಬರುತ್ತದೆ. ಆದ್ದರಿಂದ ಯೋಚಿಸಿ ದಾನ ಮಾಡೆಂದಿದ್ದಾನೆ.

ನೀನು ಕೊಡುವ ದಾನ ಒಳ್ಳೆಯ ಕೆಲಸಕ್ಕೆ ಉಪಯೋಗವಾದರೆ ನಿನಗೆ ಪುಣ್ಯ ಬರುತ್ತದೆ. ಅಥವಾ ಕೆಟ್ಟ ಕೆಲಸಕ್ಕೆ ಉಪಯೋಗಿಸಿದರೆ ಪಾಪ ಬರುತ್ತದೆ ಇದು ಸೂತ್ರ. ಈ ಸೂತ್ರದ ಪ್ರಕಾರ ನೀವೇ ದಾನಗಳ ವಿಷಯ ಲೆಕ್ಕಿಸಿಕೊಳ್ಳಬಹುದು. ಕುರುಡ, ಕುಂಟರಿಗೆ

ಕೊಡುವ ದಾನ ದೊಡ್ಡದಾಗಿ ಇರುವುದಿಲ್ಲ. ಏನು ಕೊಟ್ಟರು ಒಂದು ಹೊತ್ತು ಊಟಕ್ಕೆ ಕೊಡುತ್ತೇವೆ. ಆ ದಾನ ಅವನ ಹಸಿವನ್ನು ತೀರಿಸುತ್ತದೆ. ಮೂರು ಗಂಟೆಗಳ ಕಾಲ ಅವನನ್ನು ಹಸಿವಿನಿಂದ ಕಾಪಾಡುತ್ತಿದೆ. ಆದ್ದರಿಂದ ಪುಣ್ಯವೇ ಬರುತ್ತದೆ. ಆದರೆ ಅವನು ತಿಂದು ಸುಮ್ಮನಿರದೆ ಹೊಟ್ಟೆ ತುಂಬಿದನಂತರ ಮೂರು ಗಂಟೆಗಳ ಕಾಲದಲ್ಲಿ ಯಾವುದಾದರು ಕೆಟ್ಟ ಕೆಲಸ ಮಾಡಿದ್ದಾನಾ! ಅದರಲ್ಲಿ ಭಾಗವಾಗಿ ನಿನಗೂ ಸಹ ಪಾಪಬರುತ್ತದೆ. ಆದ್ದರಿಂದ ಕುರುಡ, ಕುಂಟರು ಎನ್ನುವುದು ಮುಖ್ಯವಲ್ಲ. ಅವರು ನಡೆದುಕೊಳ್ಳುವ ಪ್ರವರ್ತನೆ ಮುಖ್ಯವೆಂದು ತಿಳಿಯಬೇಕು.

ಈ ವಿಷಯ ಸರ್ವ ಸಾಧಾರಣ ವ್ಯಕ್ತಿಗೆ ಅನ್ವಯಿಸುತ್ತದೆ. ಅಹಂಕಾರವನ್ನು ಅಣಗಿಸಿ ಕರ್ಮ ಯೋಗವನ್ನಾಚರಿಸುವವನಿಗೆ ಮೇಲೆ ಹೇಳಿರುವ ಹಾಗೆ ಪಾಪವಾಗಲಿ, ಪುಣ್ಯವಾಗಲಿ ಬರುವುದಿಲ್ಲ. ಅಂಥವನು ದಾನ ಮಾಡುವುದರಲ್ಲೇ ಅಲ್ಲದೆ ಯಾವ ಕಾರ್ಯ ಮಾಡಿದರು ಅವನಿಗೆ ಪಾಪ ಪುಣ್ಯ ಅಂಟುವುದಿಲ್ಲ.

**ಯಮ್. ಖಾಜಾಮೈನುದ್ದೀನ್. ಗರುಗುಚಿಂತಲಪಲ್ಲಿ**

**78. "ಅಂಡ, ಪಿಂಡ, ಬ್ರಹ್ಮಾಂಡವು ನಿಶ್ಶಬ್ದದಲ್ಲಿ ನಿಕ್ಷಿಪ್ತವಾಗಿವೆ" ವಾಸ್ತವವೇನಾ?**

**ಉ.** ಅಂಡವೆಂದರೆ ಮೊಟ್ಟೆಯಿಂದ ಹುಟ್ಟಿರುವವು. ಪಿಂಡವೆಂದರೆ ಪಿಂಡ(ಗರ್ಭ)ದಿಂದ ಹುಟ್ಟಿರುವವು. ಹಾಗೇ ಬ್ರಹ್ಮಾಂಡವೆಂದರೆ ಗಿಡ ಮರ ಮೊದಲಾದ ಕಾಣಿಸುವ ಪ್ರಕೃತಿಯೆಲ್ಲಾ ಇರುವವರೆಂದು ಅರ್ಥ. ಹುಟ್ಟಿರುವ ಜೀವರಾಶಿಗಳೆಲ್ಲವನ್ನು ಪ್ರಪಂಚವನ್ನು ವಿಭಜಿಸಿ ಹೇಳುವುದನ್ನೇ ಅಂಡ ಪಿಂಡ ಬ್ರಹ್ಮಾಂಡವೆಂದು ಕರೆಯುತ್ತಿದ್ದಾರೆ. ಹುಟ್ಟಿರುವ ಜೀವರಾಶಿಗಳು ನಿಶ್ಶಬ್ದದೊಂದಿಗೆ ಯಾವ ಮಾತ್ರವೂ ಕೂಡಿಕೊಂಡಿಲ್ಲ. ಎಲ್ಲವೂ ಶಬ್ದದೊಂದಿಗೆ ಕೂಡಿಕೊಂಡಿವೆ. ಪ್ರಕೃತಿಯಿಂದ ಹುಟ್ಟಿರುವುದು ಶರೀರ. ಆ ಶರೀರಗಳ ಹುಟ್ಟುವಿಕೆಯನ್ನನು ಸರಿಸಿ ಅಂಡ ಪಿಂಡ ಬ್ರಹ್ಮಾಂಡವೆನ್ನುತ್ತಿದ್ದೇವೆ. ಪ್ರಕೃತಿ ಶರೀರದೊಳಗಿನ ಒಂದು ಭಾಗ ಶಬ್ದವು. ಶಬ್ದ ಶರೀರಗಳಲ್ಲಿ ಒಂದು ಭಾಗವಾದಾಗ ಅಂಡ ಪಿಂಡ ಬ್ರಹ್ಮಾಂಡವು ನಿಶ್ಶಬ್ದದಿಂದ ಇಲ್ಲವೆಂದು ಹೇಳಬಹುದು.

ಪ್ರಪಂಚವೆಲ್ಲಾ ಮುಗಿದು ಪ್ರಳಯವೇರ್ಪಟ್ಟಾಗ ಅಂಡ, ಪಿಂಡ ಬ್ರಹ್ಮಾಂಡವೆಲ್ಲವು ಎಂದರೇ ಯಾವತ್ ಪ್ರಪಂಚವೆಲ್ಲವು ಅವ್ಯಕ್ತವಾಗಿ ಹೋಗುತ್ತಿದೆ. ಕಣ್ಣಿಗೆ ಕಾಣಿಸದೇ ಹೋದ ಆ ಸ್ಥಿತಿಯನ್ನು ಏನೂ ಹೇಳದಿರುವುದು. ಆಗ ಅಕಾಶವೇ ಇಲ್ಲ ಆದಕಾರಣ ಅದು ಯಾವ ಶೂನ್ಯವಾಗಿರುತ್ತದೋ ಹೇಳಲಾರೆವು. ಆಗ ಪ್ರಕೃತಿಯೇ ಇಲ್ಲ. ಆದುದರಿಂದ

ನಿಶ್ಶಬ್ದವೆನ್ನುವ ಮಾತು ಸಹ ಹೇಳಲಾಗದೇ ಇದೆ. ಆದ್ದರಿಂದ ಅಂಡ, ಪಿಂಡ ಬ್ರಹ್ಮಾಂಡವಿರುವಾಗ ಎಲ್ಲಾ ಶಬ್ದದೊಂದಿಗೆ ಕೂಡಿಕೊಂಡಿದೆ. ಅಂಡ, ಪಿಂಡ ಬ್ರಹ್ಮಾಂಡ ಇಲ್ಲದಂತಹ ಸ್ಥಿತಿಯೇನೊ ಊಹಿಸಲಾಗದು. ನಿಶ್ಶಬ್ದವೆಂದು ಸಹ ನಿರ್ಣಯಿಸಲಾರದ ಅಗಮ್ಯಗೋಚರವಾದದ್ದು.

**ಪೊತ್ತೂರು ಕ್ರಿಷ್ಣಯ್ಯ, ಬಿ.ಪಪ್ಪೂರು**

**79. ಮಾನವನು ಹಿಂದಿನ ಜೀವನದಲ್ಲಿ ಮಾಡಿಕೊಂಡ ಪಾಪವನ್ನು ಈಗ ಪುಣ್ಯ ಕಾರ್ಯಗಳು ಮಾಡುವುದರಿಂದ, ತೀರ್ಥ ಯಾತ್ರೆಗಳು ಮಾಡುವುದರಿಂದ, ಯಜ್ಞಯಾಗಾದಿ ಗಳು, ವ್ರತ ಆಚರಣೆಗಳು ಮಾಡುವುದರಿಂದ ಪರಿಹಾರವಾಗುತ್ತದೆಯಾ?**

**ಉ.** ಮಾನವನು ಜೀವನದಲ್ಲಿ ಮಾಡಿಕೊಂಡ ಪಾಪ ಎಂತಹ ಪುಣ್ಯಕಾರ್ಯಗಳಿಂದ ತೊಲಗುವುದಿಲ್ಲ. ಪುಣ್ಯ ಕಾರ್ಯಗಳು ಮಾಡುವುದರಿಂದ ಪುಣ್ಯ ಬರುತ್ತದೆ. ಪಾಪಕಾರ್ಯ ಗಳು ಮಾಡುವುದರಿಂದ ಪಾಪ ಬರುತ್ತದೆ. ತೀರ್ಥ ಯಾತ್ರೆಗಳಿಂದ ಮತ್ತು ಯಜ್ಞಯಾಗಾದಿ ಗಳಿಂದ ವ್ರತದಿಂದ ವಿಶೇಷವಾದ ಪುಣ್ಯ ಬರುತ್ತದೆ. ಜೀವನದಲ್ಲಿ ನಡೆಯುವ ಕಾಲದಲ್ಲಿ ಪಾಪವಾಗಲಿ, ಪುಣ್ಯವಾಗಲಿ ನಿನ್ನ ತಲೆಯಲ್ಲಿನ ಕರ್ಮಚಕ್ರ ದೊಳಗೆ ಸೇರುತ್ತಲೇ ಇರುತ್ತದೆ. ಪಾಪದಿಂದ ಪುಣ್ಯ, ಪುಣ್ಯದಿಂದ ಪಾಪ ತೆಗೆದು ಹಾಕಲು ಸಾದ್ಯವಿಲ್ಲ. ಪಾಪವಾದರು ಹಾಗೇ ಪುಣ್ಯವಾದರು ಒಂದು ಜ್ಞಾನಾಗ್ನಿಯಿಂದ ಮಾತ್ರವೇ ದಹಿಸಲ್ಪಡುವುದು. ಇನ್ನು ಇತರ ಯಾವ ಕಾರ್ಯಗಳಿಂದಲೂ ತೆಗೆದು ಹಾಕಲು ಸಾಧ್ಯವಿಲ್ಲ.

ಈ ಕಾಲದಲ್ಲಿ ಪಾಪ ಮಾಡಿದವರು ಅದರ ಪರಿಹಾರಾರ್ಥ ದಾನ ಮಾಡುವುದು, ಅಭಿಷೇಕಗಳನ್ನು ಮಾಡಿಸುವುದು, ಅನೇಕ ಪುಣ್ಯಕ್ಷೇತ್ರಗಳನ್ನು ದರ್ಶಿಸುವುದು ಮೊದಲಾದವು ಗಳೆಲ್ಲವನ್ನು ಮಾಡುತ್ತಿದ್ದಾರೆ. ಹಾಗೆ ಮಾಡುವುದರಿಂದ ಪುಣ್ಯ ಬರುತ್ತದೆ. ಆದರೆ ಪಾಪ ಹೋಗುವುದಿಲ್ಲವೆಂದು ಅವರಿಗೆ ತಿಳಿಯದು. ಗೀತೆಯಲ್ಲಿ ದೇವರು ನಾನು ಯಾರ ಪಾಪವನ್ನು, ಯಾರ ಪುಣ್ಯವನ್ನು ತೊಲಗಿಸುವುದಿಲ್ಲವೆಂದು ಹೇಳಿದ್ದಾನೆ. ವಾಸ್ತವವಾಗಿ ಜ್ಞಾನದಿಂದಲೇ ಪಾಪ ಮತ್ತು ಪುಣ್ಯ ಹೋಗುತ್ತದೆ. ಆದರೆ ಜ್ಞಾನಾಗ್ನಿ ಇಲ್ಲದವನಿಗೆ ಯಾವ ವಿಧವಾಗಿಯೂ ಕರ್ಮ ಹೋಗುವುದಿಲ್ಲ. ಕಡೆಗೆ ಮಾಡಿಕೊಂಡ ಕರ್ಮವನ್ನು ತಪ್ಪದೇ ಅನುಭವಿಸಬೇಕಾಗುತ್ತದೆ. ಆದ್ದರಿಂದಲೇ ಹಿರಿಯರು ಕರ್ಮವನ್ನು ವಿಷ್ಣು, ಈಶ್ವರ, ಬ್ರಹ್ಮರೂ ಸಹ ಅನುಭವಿಸದೇ ತಪ್ಪಿಸಿಕೊಳ್ಳಲಾರರೆಂದು ಹೇಳಿದ್ದಾರೆ.

**ಕೆ. ಸೀತಾರಾಮಯ್ಯ, ಪ್ರೊದ್ದುಟೂರು.**

**80. ಭಗವಂತನು ಸಾಕ್ಷಿಭೂತನು, ನಿಮಿತ್ತಮಾತ್ರನು ಎಂದು ಹಿರಿಯರು ಹೇಳುವುದನ್ನು ಕೇಳಿದ್ದೇವೆ. ನಮ್ಮ ಕರ್ಮದಿಂದ ನಮಗೆ ಜನ್ಮಗಳು ಬರುವವೆಂದು ಹೇಳುವರು. ಅಂತದರಲ್ಲಿ ಭಗವಂತನನ್ನು ಧ್ಯಾನಿಸುವುದರಿಂದ ಪ್ರಯೊಜನವಿಲ್ಲ. ಪೂಜಿಸದಿದ್ದರೂ ನಷ್ಟ ಇರುವುದಿಲ್ಲ ಅಲ್ಲವೇ! ಅಂತಹ ಪರಿಸ್ಥಿತಿಗಳಲ್ಲಿ ಭಗವಂತನನ್ನು ಏಕೆ ಪೂಜಿಸಬೇಕೊ ಹೇಳಬೇಕೆಂದು ಕೋರುತ್ತಿದ್ದೇವೆ.**

ಉ. ಭಗವಂತನೆಂದರೆ ಭಗದಿಂದ ಹುಟ್ಟಿದವನೆಂದು ಅರ್ಥ. ಧರ್ಮ ಸಂಸ್ಥಾಪನಾರ್ಥ ವಾಗಿ ಪರಮಾತ್ಮ ಹುಟ್ಟಿರುವ ಸಾಕಾರ ರೂಪವನ್ನೇ ಭಗವಂತ ಎನ್ನುತ್ತಾರೆ. ನಿರಾಕಾರವಾದ ಆತ್ಮವನ್ನು ಸಾಕ್ಷಿಭೂತನೆಂದು ಹಿರಿಯರೆನ್ನುತ್ತಾರೆ. ಆದರೆ ಭಗವಂತನನ್ನು ಸಾಕ್ಷಿಭೂತನೆಂದು ಕರೆಯಬಾರದು. ನಿಮ್ಮ ಉದ್ದೇಶದಲ್ಲಿ ದೇವರ ಬಗ್ಗೆ ಕೇಳಿರುವ ಪ್ರಶ್ನೆ ಯಾದ್ದರಿಂದ ಭಗವಂತನೆನ್ನುವ ಪದದ ಹತ್ತಿರ ಆತ್ಮ ಅಥವಾ ದೇವರೆಂದು ಬರೆದುಕೊಂಡರೂ ಪ್ರಶ್ನೆ ಸಾರಾಂಶವಾದ ಅರ್ಥದಿಂದ ಕೂಡಿಕೊಂಡಿರುವುದಾಗುತ್ತದೆ.

ವಾಸ್ತವವಾಗಿ ಕರ್ಮ ದಿಂದಲೇ ನಮಗೆ ಸರ್ವವೂ ದೊರೆಯುತ್ತಿವೆ. ಗೀತೆಯಲ್ಲಿ ಸಾಕಾರವಾದ ಭಗವಂತನೂ ಸಹ ನಾನು ಯಾರ ಕರ್ಮವನ್ನು ತೆಗೆದುಹಾಕುವನಲ್ಲವೆಂದು ಕರ್ಮ ಸನ್ಯಾಸ ಯೋಗವೆನ್ನುವ ಅಧ್ಯಾಯದಲ್ಲಿ 15ನೇ ಶ್ಲೋಕದಲ್ಲಿ **"ನಾದತ್ತೇಕಸ್ಯಚಿ ತ್ಪಾಪಂನಚೈವಸುಕೃತಂ ವಿಭುಃ"** ಎಂದಿದ್ದಾನೆ. ತಪ್ಪು ಮಾಡಿದ್ದೇನೆಂದು ಎಷ್ಟು ನಮಸ್ಕಾರಗಳು ಮಾಡಿದರು ದೇವರು ಪಾಪವನ್ನು ತೆಗೆದು ಹಾಕುವುದಿಲ್ಲ. ಅಂತಹದರಲ್ಲಿ ದೈವವನ್ನು ಏಕೆ ಆರಾಧಿಸಬೇಕೆನ್ನುವ ಪ್ರಶ್ನೆ ಉದ್ಭವಿಸದೇ ಇರುವುದಿಲ್ಲ. ಆ ವಿಧವಾದ ವಿಮರ್ಶೆ ಬಂದಾಗಲೇ ಮಾನವನಿಗೆ ಜ್ಞಾನ ಉತ್ಪನ್ನವಾಗುತ್ತದೆ.

ದೇವರು ಕರ್ಮಕ್ಕೆ ದೂರವಾಗಿರುವವನು. ಕರ್ಮ ಎಲ್ಲವೂ ಪ್ರಕೃತಿಗೆ ಸಂಭಂದಿಸಿ ಇರುತ್ತದೆ. ಪ್ರಕೃತಿ ಪರಿಪಾಲನೆಯಲ್ಲಿರುವ ಕರ್ಮವನ್ನು ದೇವರು ತೆಗೆದುಹಾಕುವುದಿಲ್ಲ. ಕರ್ಮದಿಂದ ಹೊರಬೀಳಬೇಕೆಂದರೆ ದೇವರೇ ಒಂದು ಮಾರ್ಗವನ್ನು ತಿಳಿಸಿದ್ದಾನೆ. ಆ ಮಾರ್ಗವನ್ನು ಅನುಸರಿಸಿದಾಗ ಮಾತ್ರವೇ ಮಾನವನು ಕರ್ಮದಿಂದ ಹೊರಬೀಳುವನು. ಆ ಮಾರ್ಗವನ್ನೇ "ಯಜ್ಞ ಕರ್ಮ" ಎನ್ನುತ್ತಿದ್ದೇವೆ. ದೇವರು ಕರ್ಮವನ್ನು ತೆಗೆದುಹಾಕದಂತೆ ಕರ್ಮದಿಂದ ಹೊರಬೀಳುವ ಮಾರ್ಗವನ್ನು ತಿಳಿಸಿರುವುದರಿಂದ ಮಾನವನು ಸಂತೋಷ ಪಡಬೇಕಾಗಿದೆ.

ದೈವ ಜ್ಞಾನವನ್ನು ತಿಳಿದು ದೇವರನ್ನು ಮನಸ್ಸಿನ ಮೂಲಕ ಧ್ಯಾನಿಸುವುದರಿಂದ ನಮ್ಮ ಶರೀರದಲ್ಲಿ ಯೋಗಾಗ್ನಿ ಎನ್ನುವುದು ಉದ್ಭವಿಸುತ್ತದೆ. ಆ ಯೋಗಾಗ್ನಿ ಕರ್ಮವನ್ನು ಸುಡಬಲ್ಲದು. ಆ ವಿಧವಾಗಿ ಕರ್ಮವನ್ನು ಸುಡುವ ವಿಧಾನವನ್ನೇ ಯಜ್ಞಕರ್ಮ ಅಥವಾ ಜ್ಞಾನ ಯಜ್ಞವೆಂದು ಹೇಳುತ್ತಾರೆ. ದೇವರು ಸ್ವತಃವಾಗಿ ಕರ್ಮವನ್ನು ತೆಗೆದುಹಾಕುವುದಿಲ್ಲ. ಆದರೆ ದೈವ ಧ್ಯಾನದಿಂದ ಜನಿಸುವ ಯೋಗಶಕ್ತಿಯಿಂದ ಕರ್ಮ ಸುಟ್ಟುಹೋಗುತ್ತದೆ. ಆದ್ದರಿಂದ ದೇವರನ್ನು ಧ್ಯಾನಿಸಬೇಕಾಗಿದೆ.

**"ಜ್ಞಾನಾಗ್ನಿ ಸರ್ವ ಕರ್ಮಾಣಿ ಭಸ್ಮಸಾತ್"** ಎನ್ನುವ ಗೀತಾ ವಾಕ್ಯದ ಪ್ರಕಾರ ಜ್ಞಾನದಿಂದ ಉದ್ಭವಿಸಿದ ಅಗ್ನಿಯಿಂದಲೇ ಕರ್ಮ ಸುಟ್ಟುಹೋಗುತ್ತದೆ. ಮತ್ತೆ ಯಾವ ಇತರ ವಿಧಾನದಿಂದಲೂ ಹೋಗದು. ಆದ್ದರಿಂದ ಜ್ಞಾನವನ್ನು ತಿಳಿದು ಪದ್ಧತಿಯ ಪ್ರಕಾರ ದೈವ ಧ್ಯಾನವನ್ನು ಮಾಡಿದರೆ ಕರ್ಮ ತೊಲಗುತ್ತದೆ. ಹಾಗಲ್ಲದೆ ಎಷ್ಟು ಹರಕೆ ಹೊತ್ತುಕೊಂಡರು ದೈವವು ಕರ್ಮವನ್ನು ತೊಲಗಿಸಲಾರದು.

**81. ತಾರೀಖು 28–02–1988 ಪ್ರಭೋದಾತ್ಮಜಮ್ ಮಾಸಪತ್ರಿಕೆ ಸಂಪಾದಕೀಯದಲ್ಲಿ ಅಪಾಯ ತಿಳಿಯದ ಸಣ್ಣ ಮಕ್ಕಳಿಗೆ ಗುಮ್ಮ ಬರುತ್ತಾನೆಂದು ಅಸತ್ಯವನ್ನು ಹೇಳಿ ಭಯವಿಟ್ಟು ರಕ್ಷಣೆ ಮಾಡುತ್ತೇವೆಂದು, ಅದೇ ವಿಧವಾಗಿ ಯಾವ ಭಕ್ತಿ ಇಲ್ಲದವರಿಗೆ ಕಲ್ಪಿತ ಪುರಾಣಗಳನ್ನು ಹೇಳಿ ಆಸೆ ಕಲ್ಪಿಸಿ ಭಕ್ತಿ ಮಾರ್ಗವನ್ನು ಅವಲಂಭಿಸುವಂತೆ ಮಾಡಿ, ಅಜ್ಞಾನಕ್ಕೆ ದೂರ ಮಾಡುತ್ತಾರೆಂದು ಬರೆದಿದ್ದೀರಾ. ಆ ಉದಾಹರಣೆ ನಮಗೆ ಬಾಧೆಯನ್ನು ಉಂಟುಮಾಡಿದೆ. ಪುರಾಣಗಳು ಕಲ್ಪಿತವಾದರೂ ಅವು ಹಿರಿಯರು ಮಾನವನಿಗೆ ಭಕ್ತಿಯನ್ನು ಕಲ್ಪಿಸುವುದಕ್ಕೆಂದು ಬರೆದಿದ್ದೀರಿ. ಪುರಾಣಗಳು ಅಸತ್ಯಗಳಲ್ಲವೆಂದು ನಮ್ಮ ಭಾವ. ದೇವರನ್ನು ಮಾನವನು ಅರ್ಥಿ, ಅರ್ಥಾರ್ಥಿ, ಜೆಜ್ಞಾಸಿ, ಜ್ಞಾನಿ ಯಾಗಿ ಆರಾಧಿಸುತ್ತಾರೆಂದು ನಿಮ್ಮಂತಹ ಹಿರಿಯರು ಹೇಳುತ್ತಾರೆ. ಅರ್ಥಾರ್ಥಿಗೆ ಪುರಾಣಗಳೇ ಆಧಾರವಲ್ಲವೇ! ಪುರಾಣಗಳು ಹೇಗೆ ಅಸತ್ಯಗಳೋ ತಿಳಿಸಬೇಕೆಂದು ಕೋರುತ್ತಿದ್ದೇವೆ.**

ಉ. ಪುರಾಣಗಳು ಕೆಟ್ಟವೆಂದು ನಾವು ಹೇಳಲಿಲ್ಲ. ಅಸತ್ಯಗಳಾದರೂ ಮೂಢನನ್ನು ಭಕ್ತಿವಂತನಾಗಿ ಮಾಡುವುದಕ್ಕೆ ಹಿರಿಯರು ಬರೆದಿದ್ದಾರೆಂದು ಹೇಳಿದ್ದೇವೆ. ನೋವು ಪಡಬೇಕಾದ ವಿಷಯ ಇದರಲ್ಲೇನಿದೆ? ಇನ್ನೂ ಮುಂದಕ್ಕೆ ಹೋಗುವ ವಿಷಯವಿದೆ. ಆದ್ದರಿಂದ ಸಂತೋಷಿಸದೆ ನೋವಾಗುತ್ತಿದೆಯೆಂದು ಬರೆದಿರುವುದನ್ನು ನೋಡಿದರೆ ನೀವು ಪುರಾಣ ವಿಷಯಗಳಲ್ಲಿ ಬಹಳ ಆಳವಾಗಿದ್ದಂತೆ ತಿಳಿಯುತ್ತದೆ.

ವಾಸ್ತವವಾಗಿ ಪುರಾಣಗಳಿಂದ ಏನೂ ತಿಳಿಯದವರು ಆಸೆಗೋಸ್ಕರ ಭಕ್ತರಾಗುತ್ತಿದ್ದಾರೆ. ಪುರಾಣಗಳಿಂದ ಭಕ್ತರಾದವರು ಆತ್ಮ ಜ್ಞಾನವನ್ನು ತಿಳಿದುಕೊಳ್ಳಬೇಕೆಂದು ಪ್ರಯತ್ನವನ್ನು ಮಾಡಿ ಜ್ಞಾನಿಗಳಾಗದೆ ನಾಸ್ತಿಕರಾಗುತ್ತಿದ್ದಾರೆ. ಜ್ಞಾನ ಮಾರ್ಗದಲ್ಲಿ ಬಂದಿರುವ ಅನೇಕ ಸಂಶಯಗಳನ್ನು ಪುರಾಣಗಳು ತೀರಿಸದೇ ಹೋದರೂ, ಪುರಾಣಗಳು ಅನೇಕ ಸಂಶಯಗಳನ್ನು ಕಲ್ಪಿಸಿ, ಕಡೆಗೆ ದೇವರೇ ಇಲ್ಲವೆಂದೆನ್ನುವವರಾಗಿ ಬದಲಾಯಿಸುತ್ತಿವೆ. ಈ ದಿನ ನಾಸ್ತಿಕರನ್ನು ನೋಡಿರಿ ಅವರಿಗೆ ಶಾಸ್ತ್ರ ಒಂದಿದೆ ಎಂದು ತಿಳಿಯದೇ ಪುರಾಣ ವಿಷಯಗಳ ಆಧಾರದಿಂದಲೇ ದೇವರಿಲ್ಲವೆಂದು ವಾದಿಸುತ್ತಾರೆ. ಅವರಿಗೆ ಶಾಸ್ತ್ರ ಯಾವುದೋ ಪುರಾಣ ಯಾವುದೋ ತಿಳಿಯದು. ಬಹುಶ ಪ್ರಚಾರದಲ್ಲಿರುವ ಪುರಾಣಗಳನ್ನು ಆಧಾರ ಮಾಡಿಕೊಂಡು ವಾದಿಸುವುದೇ ಅವರ ಕೆಲಸವಾಗಿ ಹೋಗಿದೆ. ಪುರಾಣ ವಿಷಯದಿಂದ ಅವರ ಪ್ರಶ್ನೆಗೆ ಉತ್ತರವಿಲ್ಲ. ಆದ್ದರಿಂದ ನಾಸ್ತಿಕರನ್ನು ಆಸ್ತಿಕರಾಗಿ ಬದಲಾಯಿಸದ ಸ್ಥಿತಿಯಲ್ಲಿ ನಮ್ಮ ಹಿರಿಯರಿದ್ದಾರೆ.

ನಾವು ಅಂತಹ ಸ್ಥಿತಿ ಇಂದೂ ಮತದಲ್ಲಿ ಬರಬಾರದೆಂದು ನಾಸ್ತಿಕರನ್ನೂ ಸಹ ಆಸ್ತಿಕರಾಗಿ ಮಾಡುವ ಶಾಸ್ತ್ರಗಳನ್ನೆ ಬೋಧಿಸುತ್ತಿದ್ದೇವೆ. ಅಂತಹ ಸಂದರ್ಭದಲ್ಲಿ ಪುರಾಣಗಳನ್ನು ಕುರಿತು ವಾಸ್ತವವನ್ನು ಹೇಳಬೇಕಾಗಿ ಬರುತ್ತದೆ. ಹಾಗಲ್ಲದೆ ಹೋದರೆ ಇಂದೂ ಮತವು ಕ್ಷೀಣಿಸಿ ಇತರ ಮತಗಳಲ್ಲಿ ಲೀನವಾಗುವುದಕ್ಕೆ ಅವಕಾಶವಿದೆ. ಅಂತದರಲ್ಲಿ ಇಂದೂ ಮತವನ್ನು ರಕ್ಷಿಸಲು ಇರುವ ಏಕೈಕ ಮಾರ್ಗ ಶಾಸ್ತ್ರ ಪ್ರಚಾರ ಹೊರತು ಮತ್ತೆ ಏನು ಇಲ್ಲ. ಆದ್ದರಿಂದ ಪುರಾಣಗಳಿಂದ ದೂರಮಾಡಿ ಶಾಸ್ತ್ರಗಳಕಡೆ ಮರಳಿಸುವುದೇ ನಮ್ಮ ಮುಖ್ಯ ಉದ್ದೇಶವಾದ್ದರಿಂದ ಪುರಾಣಗಳನ್ನು ವಿಮರ್ಶಿಸಬೇಕಾಗಿ ಬಂದಿದೆಯೆಂದು ತಿಳಿಸುತ್ತಿದ್ದೇವೆ. ಪುರಾಣಗಳಿಗಿಂತ ಸಾರಾಂಶವನ್ನು ಕೊಡುವ ಶಾಸ್ತ್ರವನ್ನು ತಿಳಿಯುವುದರಿಂದ ಸಂತೋಷಿಸಬೇಕು ಆದರೆ ಬಾಧೆ ಏಕೆ?

ಶಾಸ್ತ್ರಗಳಿಗೂ ಪುರಾಣಗಳಿಗೂ ಬಹಳ ಭೇದವಿದೆ. ಪುರಾಣಗಳು ಕೇವಲ ಕಲ್ಪಿತಗಳು. ಶಾಸ್ತ್ರಗಳು ಕಲ್ಪಿತಗಳಲ್ಲ. ಶಾಸ್ತ್ರಗಳೆಂದರೆ ಶಾಸನಗಳನ್ನು ತಿಳಿಸುವವು. ಶಾಸನವೆಂದರೆ ನಾವು ಮಾಡುವ ಕೆಲಸ ಯಾವುದಾದರೂ ಈ ವಿಧವಾಗಿಯೇ ನಡೆಯಬೇಕೆಂದು ಮಾಡಿರುವ ನಿಬಂಧನೆ ಎಂದು ತಿಳಿಯಬೇಕು. ಯಾವ ವಿಷಯಗಳಿಗಾದರೂ ಸಿದ್ಧಾಂತಗಳನ್ನು ತಿಳಿಸುವ ಶಾಸನಗಳಿರುವ ಗ್ರಂಥವನ್ನೇ ಶಾಸ್ತ್ರ ಎಂದು ಕರೆಯುತ್ತೇವೆ. ಪುರಾಣಗಳು ಯಾವ ವಿಧವಾದ ಶಾಸನಗಳೊಂದಿಗೆ ಕೂಡಿಕೊಂಡಿರುವುದಿಲ್ಲ. ಚರಿತ್ರೆಯನ್ನು ಆಧಾರವಾಗಿ ತೆಗೆದುಕೊಂಡು ಅದಕ್ಕೆ ಎಷ್ಟೋ

ಕಲ್ಪಿತಗಳನ್ನು ಮಾಡಿ ಬರೆಯಲ್ಪಟ್ಟಿರುವವೇ ಪುರಾಣಗಳು ಮತ್ತು ಇತಿಹಾಸಗಳು. ಪುರಾಣಗಳು ವಿಚಾರಣೆ ವಿಮರ್ಶೆಗಳಿಗೆ ನಿಲ್ಲುವುದಿಲ್ಲ. ಶಾಸ್ತ್ರಗಳು ಕಲ್ಪಿತಗಳಲ್ಲ ಆದುದರಿಂದ ಎಂತಹ ವಿಚಾರಣೆಗಾದರೂ ನಿಲ್ಲುತ್ತವೆ. ಶಾಸ್ತ್ರಗಳ ಸಿದ್ಧಾಂತಗಳು ಎಂದಿಗೂ ಬದಲಾಗುವುದಿಲ್ಲ. ಉದಾಹರಣೆಗೆ ಗಣಿತ ಶಾಸ್ತ್ರದಲ್ಲಿ 3X3=9 ಎಂದು ಇದೆ. ಅದು ಎಂದಿಗೂ ಹಾಗೇ ಇರುತ್ತದೆ. ಅದು ಎಂದಿಗೂ ಬದಲಾಗುವುದಿಲ್ಲ. ಗುಣಿಸಿದರೂ, ಭಾಗಿಸಿದರೂ, ಕೂಡಿದರೂ, ತೆಗೆದು ಹಾಕಿದರೂ ಅದರ ಬೆಲೆ ಬದಲಾಗದೆ ಇರುತ್ತದೆ.

ಪುರಾಣಗಳು ಕಲ್ಪಿತಗಳಾಗಿ ಏಕೆ ಇವೆಯೆಂದರೆ ಸಣ್ಣ ಮಕ್ಕಳಿಗೆ ಖಾಲಿ ಕೈಯನ್ನು ಹಿಡಿಕೆಯಾಗಿ ಹಿಡಿದುಕೊಂಡು ತೋರಿಸಿ ಕಡ್ಲೆ ಕೊಡ್ತೀನಿ ಹತ್ತಿರಬಾ ಎಂದು ಕರೆದಹಾಗೆ, ಮೂಢರಾಗಿ, ಭಕ್ತಿ ಹೀನರಾಗಿ ಇರುವ ಪ್ರಜೆಗಳಲ್ಲಿ ಮೊದಲು ಭಕ್ತಿ ಬೀಜವನ್ನು ನಾಟುವುದಕ್ಕೆ, ಜ್ಞಾನಕ್ಕೆ ದೂರವಾಗಿರುವವರನ್ನು ಹತ್ತಿರ ಮಾಡುವುದಕ್ಕೆ, ಕಲ್ಪಿತಗಳು ಮಾಡಿ ಪುರಾಣಗಳನ್ನು ನಮ್ಮ ಹಿರಿಯರು ಸೃಷ್ಟಿಸಿದ್ದಾರೆಂದು ತಿಳಿಯುತ್ತಿದೆ. ಪುರಾಣಗಳು, ಶಾಸ್ತ್ರಗಳು ತಿಳಿಯದವರಿಗೆ ಮಾತ್ರ ಅವಶ್ಯ. ಜ್ಞಾನದಲ್ಲಿ ಪ್ರವೇಶಿಸಿ ಮುಂದಕ್ಕೆ ಹೋಗುವವರು ಪುರಾಣಗಳನ್ನು ಪೂರ್ತಿಯಾಗಿ ಬಿಡುವುದು ಒಳ್ಳೆಯದು. ಈ ಕಾಲದಲ್ಲಿ ಕೆಲವು ಪ್ರಜೆಗಳಲ್ಲಿ ಪುರಾಣಗಳ ಪ್ರಭಾವ ಪೂರ್ತಿಯಾಗಿ ಬೇರೂರಿದೆ. ಆದ್ದರಿಂದ ಪುರಾಣ ಆಚಾರಗಳ ಪ್ರಕಾರ ಪ್ರವರ್ತಿಸುತ್ತಾ ಇದಕ್ಕಿಂತಾ ಮೀರಿದ ಭಕ್ತಿ ಮಾರ್ಗ ಇಲ್ಲವೆಂದು ಪೂರ್ತಿಯಾಗಿ ಹಾಳಾಗುತ್ತಿದ್ದಾರೆ. ಜ್ಞಾನ ಮಾರ್ಗವನ್ನು ಯಾವ ಮಾತ್ರವೂ ಗುರುತಿಸದಂತಿದ್ದಾರೆ. ಕೆಲವರು ಗುರುಗಳಿಂದ ಜ್ಞಾನವನ್ನು ಹೊಂದಿ ಯಾವಾಗಲೋ ಒಂದುಸಲ ಪುರಾಣ ವಿಷಯಗಳು ತಿಳಿದ ಕೂಡಲೇ ತನಗಿರುವ ಜ್ಞಾನದ ಮೇಲಿರುವ ನಂಬಿಕೆಯನ್ನು ಬಿಟ್ಟು ಅಜ್ಞಾನ ಮಾರ್ಗದಲ್ಲಿ ವರ್ತಿಸುತ್ತಿದ್ದಾರೆ. ನಿಜವಾಗಿ ನೋಡಿದರೆ ಪುರಾಣಗಳಿಂದ ಒಂದು ಒಳಿತು ಎರಡು ಕೆಡಕಾಗಿ ಇವೆ. ಪುರಾಣಗಳ ವಿಷಯಗಳ ಪ್ರಭಾವಗಳು ತಿಳಿಯದವರು ಜ್ಞಾನ ಮಾರ್ಗದಿಂದಲೂ ಸಹ ಭ್ರಷ್ಟರಾಗುವುದಕ್ಕೆ ಅವಕಾಶವಿದೆ. ಆದ್ದರಿಂದ ಪುರಾಣಗಳಲ್ಲಿನ ವಾಸ್ತವವನ್ನು ವಿಮರ್ಶಿಸಲಾಗಿದೆಯೆಂದು ತಿಳಿಯಬೇಕು. ನಾನು ಪುರಾಣಗಳನ್ನು ವಿಮರ್ಶಿಸುವುದು ನಿಮಗೆ ಜ್ಞಾನ ತಿಳಿದು ಮೋಕ್ಷ ಬರುವುದಕ್ಕಾಗಲಿ, ನನಗೆ ಮೋಕ್ಷಬರುವುದಕ್ಕೆ ಅಲ್ಲವೆಂದು ತಿಳಿದುಕೊಳ್ಳಿ.

ಪುರಾಣಗಳು ಭಕ್ತಿಯನ್ನು ಬೋಧಿಸುವವಾಗಿ ಇವೆ. ಆದರೆ ಜ್ಞಾನಕ್ಕೆ ಬಹಳ ಆತಂಕವಾಗಿವೆ. ಶಕುನಿ ದುರ್ಯೋಧನನಿಗೆ ಒಳ್ಳೆಯದು ಮಾಡುವಂತೆ ನಟಿಸುತ್ತಾ ಕೇಡನ್ನು ಮಾಡಿದ ಹಾಗೆ ನಮ್ಮ ಪುರಾಣಗಳು ಸಹ ಮಾನವನಿಗೆ ಒಳ್ಳೆಯದನ್ನು ಮಾಡುವಹಾಗೆ

ಇವೆ. ಆದರೆ ಅವುಗಳಿಂದ ಕಡೆಗೆ ಅಜ್ಞಾನವೇ ಉಳಿಯುತ್ತದೆ. ಪುರಾಣಗಳು ಒಟ್ಟು ಹದಿನೆಂಟು ಇವೆ. ಅವುಗಳನ್ನೇ ಅಷ್ಟಾದಶ ಪುರಾಣಗಳು ಎಂದು ಕರೆಯುತ್ತಿದ್ದಾರೆ. ಅವು 1) ಬ್ರಹ್ಮ ಪುರಾಣ 2) ಪದ್ಮ ಪುರಾಣ 3) ವಿಷ್ಣು ಪುರಾಣ 4) ಶಿವ ಪುರಾಣ 5) ಭಾಗವತ 6) ನಾರದಪುರಾಣ 7) ಮಾರ್ಕಂಡೇಯ ಪುರಾಣ 8) ಅಗ್ನಿ ಪುರಾಣ 9) ಭವಿಷ್ಯತ್ಪುರಾಣ 10) ಬ್ರಹ್ಮಕೈವರ್ತನ ಪುರಾಣ 11) ಲಿಂಗ ಪುರಾಣ 12) ವರಾಹ ಪುರಾಣ 13) ಸ್ಕಂದ ಪುರಾಣ 14) ವಾಮನ ಪುರಾಣ 15) ಕೂರ್ಮಪುರಾಣ 16) ಮತ್ಸ್ಯ ಪುರಾಣ 17) ಗರುಡ ಪುರಾಣ 18) ಬ್ರಹ್ಮಾಂಡ ಪುರಾಣ. ಇವು ಅಲ್ಲದೆ ಉಪ ಪುರಾಣಗಳು ಅನೇಕವಾಗಿ ಇವೆ. ಈ ಹದಿನೆಂಟು ಪುರಾಣಗಳು ಭಕ್ತಿಯನ್ನು ಬೋಧಿಸುತ್ತಿವೆ. ಇವುಗಳಲ್ಲಿ ಭಾಗವತ ಬಹಳ ಹೆಸರು ಹೊಂದಿದೆ. ಇವು ಅನೇಕ ವ್ರತಗಳಿಂದ, ವಿವಿಧ ಆಚಾರ ಆರಾಧನೆಗಳಿಂದ ಕೂಡಿಕೊಂಡು ಇವೆ. ಜ್ಞಾನವನ್ನು ಬೋದಿಸುವ ಶಾಸ್ತ್ರಗಳಿಗೆ ಸ್ವಲ್ಪ ವಿರುದ್ಧವಾಗಿ ಪುರಾಣಗಳು ಬೋಧಿಸುತ್ತಿವೆ. ಶಾಸ್ತ್ರಗಳು ಆರು ಮಾತ್ರವೇ ಇವೆ. ಬ್ರಹ್ಮ ವಿದ್ಯೆಗೆ ಸಂಬಂಧಿಸಿದ ಶಾಸ್ತ್ರಗಳಲ್ಲಿ ಮುಖ್ಯವಾದುದು ಈಗ ನಮ್ಮೆಲ್ಲರಿಗೂ ಹತ್ತಿರವಾಗಿರುವ ಭಗವದ್ಗೀತಾ ಶಾಸ್ತ್ರವೇ. ಬ್ರಹ್ಮ ವಿದ್ಯೆ ನಿಲಯವೆಂದು, ಯೋಗಶಾಸ್ತ್ರವೆಂದು ಹೆಸರು ಹೊಂದಿದೆ ಮತ್ತು ಪರಮಾತ್ಮನೇ ಸ್ವತಃ ಹೇಳಿರುವುದಾದ ಭಗವದ್ಗೀತಾ ಶಾಸ್ತ್ರಕ್ಕೇ ವಿರುದ್ಧವಾಗಿ ಪುರಾಣಗಳು ಬೋದಿಸುತ್ತಿವೆ. ಆದ್ದರಿಂದ ಪುರಾಣಗಳು ಕೆಲವನ್ನು ವಿಮರ್ಶಿಸಬೇಕಾದ ಅವಶ್ಯಕತೆ ಬಂದಿದೆ. ವಿಮರ್ಶೆ ಮಾಡದಿದ್ದರೆ ಭಗವದ್ಗೀತೆಯನ್ನು ಬಿಟ್ಟು ಕೆಲವರು ಪುರಾಣಗಳನ್ನೇ ಅನುಸರಿಸಿ ಜ್ಞಾನಮಾರ್ಗದಲ್ಲಿ ಹಾಳಾಗುವುದಕ್ಕೆ ಕಾರಣವಿದೆ.

**ಉದಾಹರಣೆಗೆ:–** ಶಿವ ಪುರಾಣಾಂತರ್ಗತವಾದ ಮಾಘ ಪುರಾಣದಲ್ಲಿ ಒಂದು ವಿಷಯ ಹೀಗಿದೆ. ರಾಮನು ಅಯೋಧ್ಯೆಗೆ ಮರಳಿ ಬಂದು ರಾಜ್ಯವನ್ನು ಆಳುತ್ತಿರುವ ಸಮಯದಲ್ಲಿ, ಧರ್ಮವು ನಾಲ್ಕು ಪಾದಗಳಿಂದ ನಡೆಯುತ್ತಿರುವ ಸಮಯದಲ್ಲಿ, ಒಬ್ಬ ಬ್ರಾಹ್ಮಣ ಕುಟುಂಬದಲ್ಲಿ 5 ವರ್ಷ ವಯಸ್ಸಿರುವ ಬ್ರಾಹ್ಮಣ ಕುಮಾರನು ಮರಣ ಹೊಂದಿದ್ದಾನಂತೆ. ಆಗ ಆ ಕುಮಾರನ ತಂದೆ ಆ ಶವವನ್ನು ತೆಗೆದುಕೊಂಡು ಬಂದು ರಾಮನ ಮಂದಿರದ ಮುಂದಿಟ್ಟು ಅಳುತ್ತಾ ಅಯ್ಯೋ ಕುಮಾರಾ! ನಿನಗಿಷ್ಟರಲ್ಲೇ ನೂರು ವರ್ಷಗಳ ಆಯು ತೀರಿತಾ! ತಾಯಿ – ತಂದೆ ಸಜೀವರಾಗಿದ್ದು ಮಕ್ಕಳು ಮರಣ ಹೊಂದುವ ಅನ್ಯಾಯ ಈ ಅಯೋಧ್ಯಯಲ್ಲಲ್ಲದೆ ಇನ್ನೂ ಎಲ್ಲಾದರೂ ಇದೆಯಾ! ಓ ರಾಮಚಂದ್ರ ಪ್ರಭೋ! ನಾವು ಪುತ್ರ ಶೋಕದಿಂದ ಹೀಗೆ ಕರಿಯುತ್ತಿದ್ದರೆ, ಈ ಅನ್ಯಾಯ

ನಡೆಯುವುದಕ್ಕೆ ಏನು ಕಾರಣವೆಂದು ವಿಚಾರಿಸದೇ ಅರಮನೆಯಲ್ಲಿ ಕುಳಿತಿರುವುದೇನಾ ನಿನ್ನ ರಾಜ್ಯ ಪಾಲನೆಯಲ್ಲಿನ ಪ್ರತ್ಯೇಕತೆ? ಇದೇನಾ ಧರ್ಮ? ಇದೇನಾ ರಾಜನೀತಿ? ನಾವು ಹೀಗೆ ಶೋಕಿಸುತ್ತಾ ಇರಬೇಕಾಗಿದ್ದೇನಾ ಎಂದು ಬ್ರಾಹ್ಮಣನು ಅಳುತ್ತಿರುವಾಗ, ಆಗ ರಾಮನು ಮಹಡಿ ಇಳಿದು ಬಂದು ಶೋಕಿಸಬೇಡವೆಂದು ಹೇಳಿ, ಈ ಅನ್ಯಾಯಕ್ಕೆ ಕಾರಣವನ್ನು ವಿಚಾರಿಸುತ್ತೇನೆಂದು ಪುಷ್ಪಕ ವಿಮಾನವನ್ನು ಏರಿ, ಎಲ್ಲಿ ಅಧರ್ಮ ನನ್ನ ರಾಜ್ಯದಲ್ಲಿ ತಲೆತ್ತಿದೆಯೋ, ಅಲ್ಲಿಗೆ ಹೋಗೆಂದು ವಿಮಾನವನ್ನು ಆಜ್ಞಾಪಿಸಿದಾಗ ವಿಮಾನ ಆಕಾಶ ಮಾರ್ಗದಲ್ಲಿ ಹೋಗಿ ಒಂದು ಕಡೆ ಇಳಿಯಿತು. ಆಗ ರಾಮನು ಅಲ್ಲಿ ಪರಿಶೀಲಿಸಿದಾಗ ಒಬ್ಬನು ತಪಸ್ಸನ್ನು ಮಾಡುತ್ತಿದ್ದನು. ಆತನನ್ನು ರಾಮನು ಸಮೀಪಿಸಿ ಅಯ್ಯಾನೀನು ಯಾರು? ಏಕೆ ನೀವು ತಪವನ್ನಾಚರಿಸುತ್ತಿದ್ದೀರೆಂದು ಕೇಳಿದಾಗ, ಆತನು ರಾಮಚಂದ್ರಾ ನಾನು ಶಂಭುಕುಂಡನೆನ್ನುವ ಶೂದ್ರನು, ದೇಹದೊಂದಿಗೆ ಸಹ ಸ್ವರ್ಗಕ್ಕೆ ಹೋಗುವ ಉದ್ದೇಶದಿಂದ ತಪವನ್ನಾಚರಿಸುತ್ತಿದ್ದೇನೆಂದು ಉತ್ತರ ಹೇಳಿದನಂತೆ. ಅದಕ್ಕೆ ರಾಮಚಂದ್ರನು "ನೀನು ಶೂದ್ರನಾದ ಕಾರಣ ತಪವನ್ನಾಚರಿಸುವುದಕ್ಕೆ ಅನರ್ಹನು. ನೀನು ಮಾಡುತ್ತಿರುವ ತಪಸ್ಸು ಅಧರ್ಮಯುತ, ಶೂದ್ರನಾದ ನೀನು ತಪವನ್ನಾಚರಿಸುವುದರಿಂದ ನಮ್ಮ ರಾಜ್ಯದಲ್ಲಿ ಒಬ್ಬ ವಿಪ್ರ ಕುಮಾರನು ಮರಣಿಸಿದ್ದಾನೆ. ಈ ಅಧರ್ಮ ಕಾರ್ಯವನ್ನು ಮಾಡಿರುವುದಕ್ಕೆ ನಿನ್ನ ಶಿರಸ್ಸನ್ನು ಖಂಡಿಸುತ್ತಿದ್ದೇನೆ, ಇದರಿಂದ ನೀನು ಕೋರುತ್ತಿರುವ ಮೋಕ್ಷ ಲಭಿಸುತ್ತದೆ" "ಧರ್ಮರಕ್ಷಣೆ ಜರುಗುತ್ತದೆ" ಎಂದು ಆತನ ಶಿರಸ್ಸನ್ನು ಖಂಡಿಸಿದಂತೆ ಬರೆಯಲಾಗಿದೆ. ಈ ಕಥೆಯಲ್ಲಿ ಶರೀರದಿಂದ ಸ್ವರ್ಗಕ್ಕೆ ಹೊಗಬೇಕೆಂದು ಶೂದ್ರನು ಕೇಳಿರುವಹಾಗೆ ಇದೆ. ರಾಮನು ನೀನು ಕೋರುತ್ತಿರುವ ಮೋಕ್ಷ ಕೊಡುವೆನೆಂದು ಹೇಳಿದಂತೆ ಇದೆ. ಅವನು ಕೋರಿಕೊಂಡಿರುವುದು ಸ್ವರ್ಗ ಆದರೆ ಮೊಕ್ಷವಲ್ಲ ಅಲ್ಲವೆ! ಅದೂ ಶರೀರದೊಂದಿಗೆ. ರಾಮನು ಕೊಟ್ಟಿರುವುದು ಮೋಕ್ಷ. ಈ ಕಥೆಯಲ್ಲಿ ಸ್ವರ್ಗಕ್ಕೂ ಮೋಕ್ಷಕ್ಕೂ ಭೇದವೇ ಇಲ್ಲದಂತೆ ಇದೆ. ಈ ಪುರಾಣವನ್ನು ಬರೆದವರಿಗೆ ಸ್ವರ್ಗಕ್ಕೂ ಮೋಕ್ಷಕ್ಕೂ ಭೇದ ತಿಳಿದಿಲ್ಲ. ಇದರಲ್ಲಿ ಶಾಸ್ತ್ರ ವಿರುದ್ಧವೇನೆಂದರೆ! ಶೂದ್ರನು ತಪವನ್ನಾಚರಿಸಬಾರದೆನ್ನುವ ಮಾತು. ಪರಮಾತ್ಮನನ್ನು ತಿಳಿದುಕೊಳ್ಳುವ ನಿಮಿತ್ತ ಮಾನವನನ್ನು ಪವಿತ್ರ ಮಾಡುವ ಸಾಧನೆಗಳಲ್ಲಿ ತಪಸ್ಸು ಒಂದು. ಅಂತಹ ತಪಸ್ಸು ಶೂದ್ರನು ಮಾಡಬಾರದೆನ್ನುವುದಕ್ಕೆ ಯಾವ ಪ್ರಮಾಣವು ಇಲ್ಲ. ಸರ್ವ ಮಾನವರು ಭಕ್ತಿ ಸಾಧನೆಗಳು ಮಾಡಬಹುದೆನ್ನುವುದಕ್ಕೆ ಪ್ರಮಾಣವು ಇದೆ. ಗೀತಾಶಾಸ್ತ್ರದಲ್ಲಿ ರಾಜ ವಿದ್ಯಾ ರಾಜ ಗುಹ್ಯ ಯೋಗದಲ್ಲಿ **"ಮಾಂ ಹಿ ಪಾರ್ಥ! ವ್ಯ ಪಾಶ್ರಿತ್ಯ ಯೇಪಿಸ್ಯುಃ ಪಾಪಯೋನಯಃ ಸ್ತ್ರೀ ಯೋವೈ ಶ್ಯಾಸ್ತಥಾ ಶೂದ್ರಾಸ್ತೇಪಿ ಯಾನ್ತಿ ಪರಾಂಗತಿಮ್"** ನನ್ನನ್ನು ಪೂಜಿಸುವುದರಿಂದ

ಪಾಪಯೋನಿಯಲ್ಲಿ ಹುಟ್ಟಿದರೂ, ಸ್ತ್ರೀಯರು, ವೈಶ್ಯರು, ಶೂದ್ರರೂ ನನ್ನ ಅನುಗ್ರಹವನ್ನು ಹೊಂದಿರುವವರಾಗಿ ಮುಕ್ತಿಯನ್ನು ಹೊಂದುತ್ತಿದ್ದಾರೆಂದು ಪರಮಾತ್ಮ ಹೇಳಿದ್ದಾನೆ. ಯೋಗಶಾಸ್ತ್ರವಾದ ಭಗವದ್ಗೀತೆಗೆ ವಿರುದ್ಧವಾಗಿ ಶೂದ್ರನು ತಪವನ್ನು ಆಚರಿಸಬಾರದೆನ್ನುವುದು ಅಧರ್ಮ. ಶಾಸ್ತ್ರಕ್ಕೆ ವಿರುದ್ದವಾದ ಮಾತುಗಳನ್ನು ಪುರಾಣಗಳು ಹೇಳುತ್ತಿವೆ. ಇದರಿಂದ ಶಾಸ್ತ್ರಗಳಿಗೆ ದೊಡ್ಡ ಆತಂಕವೇರ್ಪಡುತ್ತಿದೆ. ಇರುವ ವಾಸ್ತವಿಕತೆ ಮಣ್ಣುಪಾಲಾಗಿ ಹೋಗುತ್ತಿದೆ. ಮೇಲಿನ ಕಥೆಯಲ್ಲಿ ಸ್ವರ್ಗವನ್ನು ಶೂದ್ರನು ಕೋರಿರುವುದಾಗಿ ಇದೆ. ರಾಮನು ನೀ ಕೇಳಿರುವ ಮೋಕ್ಷವನ್ನು ಕೊಡುತ್ತಿದ್ದೇನೆಂದು ಹೇಳಿದಂತೆ ಇದೆ. ಇಲ್ಲಿ ಮೋಕ್ಷ, ಸ್ವರ್ಗ ಎರಡಕ್ಕೂ ಭೇದವಿಲ್ಲವೆಂದು ವ್ಯಕ್ತವಾಗುತ್ತಿದೆ. ಇದರಿಂದ ಮೋಕ್ಷವೊಂದರ ನಿಜಸ್ಥಿತಿ ನಾಶವಾಗಿ ಹೋಗುತ್ತಿದೆ. ಸ್ವರ್ಗ ಮೋಕ್ಷ ಎರಡು ಒಂದೇ ಎನ್ನುವ ಭಾವನೆ ಪ್ರಜೆಗಳಲ್ಲಿ ಹುಟ್ಟುತ್ತಿದೆ. ಜ್ಞಾನ ಮಾರ್ಗದಲ್ಲಿ ಹೋಗುವ ಕೆಲವರಿಗೆ ಮೋಕ್ಷ ಸ್ವರ್ಗಗಳು ಎರಡು ಒಂದೇಯೆಂದು ತಿಳಿಯುವುದರಿಂದ ನಾವು ಮಾಡುವ ಸಾಧನೆ ಎಲ್ಲವೂ ಸುಖಗಳಿಗೊಸ್ಕರವಾ? ಪರಲೋಕ ಪ್ರಾಪ್ತಿ ಗೋಸ್ಕರನಾ? ಎಂದು ಅವರಷ್ಟಕ್ಕೆ ಅವರು ಹಿಂದೆಜ್ಜೆ ಹಾಕುವ ಸ್ಥಿತಿ ಏರ್ಪಡುತ್ತದೆ. ಜನ್ಮ ರಾಹಿತ್ಯವೆಂದರೇ ಏನು? ಎನ್ನುವ ಪ್ರಶ್ನೆ ಉದ್ಭವಿಸಿ ಅವರನ್ನು ಪೀಡಿಸಲು ಶುರು ಮಾಡುತ್ತದೆ. ಗೀತಾ ಶಾಸ್ತ್ರದಲ್ಲಿ ಮೋಕ್ಷವೆನ್ನುವುದು ನಾಶವಾಗದ ಸ್ಥಿತಿಯಾಗಿ ಇದ್ದು, ಪರಲೊಕವಲ್ಲದ್ದು, ಕಾಲಪ್ರಮಾಣವಿಲ್ಲದ್ದು, ಸುಖ ದುಃಖಗಳಿಗೆ ಅಂಟದಿರುವುದೆಂದು ತಿಳಿಸಿರುವಾಗ, ಈ ಪುರಾಣಗಳಲ್ಲಿ ಅದಕ್ಕೆ ವಿಲಕ್ಷಣವಾಗಿ ಇರುವುದು ಹೇಗಿದೆಯೋ ನೋಡಿರಿ.

ಮಾರ್ಕಂಡೇಯ ಪುರಾಣದಲ್ಲಿ ಯಮಧರ್ಮರಾಜ ಮಾರ್ಕಂಡೇಯನನ್ನು ಕೊಂಡೊಯ್ಯುವುದಕ್ಕೆ ಬಂದಾಗ, ಆ ಸಮಯದಲ್ಲಿ ಮಾರ್ಕಂಡೇಯ ಶಿವಲಿಂಗವನ್ನು ತಬ್ಬಿಕೊಂಡು ಕದಲದೇ ಇದ್ದನೆಂದು, ಯಮಧರ್ಮರಾಜ ಮಾರ್ಕಂಡೇಯನ ಕೊರಳಿಗೆ ಪಾಶವನ್ನು ಹಾಕಿ ಎಳಿಯುತ್ತಿರುವಾಗ, ಈಶ್ವರನು ಪ್ರತ್ಯಕ್ಷವಾಗಿ ನನ್ನ ಭಕ್ತನನ್ನು ಎಳಿಯುವುದಕ್ಕೆ ನಿನಗೆ ಎಷ್ಟು ಭಯವಿಲ್ಲವೆಂದು ಯಮಧರ್ಮರಾಜನನ್ನು ತನ್ನ ಎಡ ಕಾಲಿನಿಂದ ಹೊಡೆದಂತೆ, ಆ ಏಟಿಗೆ ಯಮಧರ್ಮರಾಜನು ಮೂರ್ಛೆ ಹೋದನೆಂದು, ದೇವತೆಗಳ ಪ್ರಾರ್ಥನೆಯಿಂದ ಯಮಧರ್ಮರಾಜನಿಗೆ ಈಶ್ವರನೇ ಪುನಃ ಜ್ಞಾಪಕವು ಬರುವ ಹಾಗೆ ಮಾಡಿದನೆಂದು, ಮೇಲಕ್ಕೆದ್ದ ಯಮಧರ್ಮರಾಜನಿಗೆ ನನ್ನ ಭಕ್ತನಾದ ಮಾರ್ಕಂಡೇಯನ ಹತ್ತಿರಕ್ಕೆ ನೀನು ಬರಬಾರದು. ಮಾರ್ಕಂಡೇಯನು ಚಿರಂಜೀವಿಯಾಗಿ ಇರುವನೆಂದು ಹೇಳಿದಂತೆಯು, ಮತ್ತು ಮಾರ್ಕಂಡೇಯನೇ ಅಲ್ಲದೆ ಯಾರಾದರೂ ಶಿವ ಭಕ್ತರಾದವರ

ಹತ್ತಿರಕ್ಕೆ ಹೋಗಬಾರದೆಂದು ಈಶ್ವರನು ಯಮಧರ್ಮರಾಜನಿಗೆ ಹೇಳಿದಂತೆ ಇದೆ. ಈ ವಿಷಯವು **"ಜಾತಸ್ಯ ಹಿದ್ರುವೋ ಮೃತ್ಯು ರ್ಧ್ರುವಂ ಜನ್ಮ ಮೃತಸ್ಯಚ"** ಎಂದು ಇರುವ ಗೀತಾ ಧರ್ಮಕ್ಕೆ ವಿರುದ್ಧವಾಗಿದೆ. ಕೆಲವರು ಗೀತೆಯನ್ನೇ ಏಕೆ ಪ್ರಮಾಣವಾಗಿ ತೆಗೆದುಕೊಳ್ಳಬೇಕೆಂದು ಪುರಾಣಗಳನ್ನು ಏಕೆ ತೆಗೆದುಕೊಳ್ಳಬಾರದೆಂದು ಕೇಳಬಹುದು. ಮತ್ತು ಎಷ್ಟೋ ಪುರಾಣಗಳು ಹೇಳಿರುವ ವಾಕ್ಕನ್ನು ತಗೆದು ಹಾಕುವುದು, ಭಗವದ್ಗೀತೆ ಒಂದನ್ನು ಮಾತ್ರ ಮುಂದಕ್ಕೆ ತರುವುದು, ಗೀತೆ ಮೇಲೆ ಪಕ್ಷಪಾತವಿರುವುದೆಂದೆ ಹೇಳಬಹುದು. ಅದಕ್ಕೆ ಸಮಾದಾನ ಯಾವುದು ನಿಜವೊ ಅದನ್ನೇ ತಿಳಿಸಿದರೆ ಅವರು ಒಪ್ಪಿಕೊಳ್ಳುವರು. ನಿಜವಲ್ಲದ್ದನ್ನು ಹೇಗೆ ಒಪ್ಪಿಕೊಳ್ಳಲು ಸಾಧ್ಯ. ಕೆಲವರು ನುಡಿಯುವ ಮಾತು ನಿಜ, ಒಬ್ಬನಾಡುವ ಮಾತು ನಿಜವಲ್ಲವೆಂದು ಹೇಗೆ ಹೇಳಲಾಗುತ್ತದೆ. ಒಬ್ಬನು ಹೇಳಿದಷ್ಟು ಮಾತ್ರಕ್ಕೆ ನಿಜವು ಸುಳ್ಳಾಗುತ್ತದೆಯಾ! ಹತ್ತು ಮಂದಿ ಹೇಳಿರುವ ಮಾತ್ರಕ್ಕೆ ಸುಳ್ಳು ನಿಜವಾಗುತ್ತದೆಯಾ! ಪ್ರತಿಯೊಂದನ್ನು ಯೋಚಿಸಿ ನಿಜಯಾವುದು ಸುಳ್ಳಾವುದು ಎಂದು ವಿಶದೀಕರಿಸಿದಾಗ ವಾಸ್ತವ ತಿಳಿಯುತ್ತದೆ. ಕೇಳಿರುವುದೆಲ್ಲವನ್ನು ಕುರುಡರಾಗಿ ನಂಬುತ್ತಾ ಹೋದರೂ ವಾಸ್ತವವನ್ನು ತಿಳಿಯಲಾರರು. ಮಾರ್ಕಂಡೇಯನು ಚಿರಂಜೀವಿಯಾದರೆ ಈಗಲೂ ಇರಬೇಕಾಗಿತ್ತು ಅಲ್ಲವೆ! ಈಗ ಮಾರ್ಕಂಡೇಯನು ಎಲ್ಲಿ ಇಲ್ಲದ ಹಾಗೆ ತಿಳಿಯುತ್ತಿದೆ. ಮತ್ತು ಶಿವ ಭಕ್ತರನ್ನು ಯಮನು ಬಿಟ್ಟು ಬಿಡಬೇಕೆಂದರೆ ಅವರಿಗೆ ಮರಣ ಬರಬಾರದು ಅಲ್ಲವೆ! ಈಗ ಶಿವ ಭಕ್ತರಾದವರೂ ಸಹ ಎಲ್ಲರೂ ಮರಣ ಹೊಂದುತ್ತಲೇ ಇದ್ದಾರೆ ಅಲ್ಲವೆ! ಆದ್ದರಿಂದ ಮಾರ್ಕಂಡೇಯನ ಕಥೆ ಹೇಗೆ ನಿಜವಾಗುತ್ತದೆ. ಈ ಕಥೆ ನಿಜವಾಗ ದಿದ್ದರೂ **"ಹುಟ್ಟಿದವನು ಮರಣಿಸಬೇಕಾದ್ದೇ, ಮರಣಿಸಿದವನು ಪುನಃ ಹುಟ್ಟ ಬೇಕಾದ್ದೇ"** ಎನ್ನುವ ಗೀತಾ ವಾಕ್ಯಕ್ಕೆ ಎಷ್ಟೋ ವಿರುದ್ದವಾಗಿ ಇದೆ. ಆದ್ದರಿಂದ ಮಾರ್ಕಂಡೇಯ ಪುರಾಣವೂ ಸಹ ಶಾಸ್ತ್ರ ವಿರುದ್ದವಾಗಿದೆಯೆನ್ನುವುದಕ್ಕೆ ಎಂತಹ ಸಂದೇಹವೂ ಇಲ್ಲ.

ಸಾವಿತ್ರಿ ಪುರಾಣದಲ್ಲಿ ಸಾವಿತ್ರಿಯ ಪತಿಯಾದ ಸತ್ಯವಂತನ ಪ್ರಾಣವನ್ನು ಯಮ ಧರ್ಮರಾಜನು ತೆಗೆದುಕೊಂಡು ಹೋಗುವಾಗ, ಸಾವಿತ್ರಿ ಪತಿಯ ಪ್ರಾಣಕೋಸ್ಕರ ಯಮಧರ್ಮರಾಜನನ್ನು ಹಿಂಬಾಲಿಸಿದಳೆಂದು, ಕೊನೆಗೆ ಯಮನು ಎಷ್ಟು ಭಯ ಪಡಿಸಿದರೂ ಕೇಳದೆ ಯಮಪಟ್ಟಣದವರೆಗು ಯಮನ ಹಿಂದೆಹೋಗಿ, ಯಮಪುರಿಯಲ್ಲಿ ಯಮನಿಂದಲೇ ಪುತ್ರ ಸಂತತಿ ವರವನ್ನು ಪಡೆದು, ಕಡೆಗೆ ಪತಿಯನ್ನು ಬಿಡಿಸಿಕೊಂಡು ಬಂದಳೆಂದು ಇದೆ. ಈ ಕಥೆಯಲ್ಲಿ ಯಮಲೋಕವೆನ್ನುವುದು ನಿಜವಾಗಿ ಇದೆಯೆಂದು,

ಅದಕ್ಕೆ ರಾಜನಾದ ಯಮಧರ್ಮರಾಜ ಜೀವಿಗಳನ್ನು ಕೊಂಡೊಯ್ಯುತ್ತನೆಂದು ತಿಳಿಯುತ್ತಿದೆ. ಈ ಪುರಾಣಗಳ ಪ್ರಭಾವದಿಂದಲೇ ಇಂದಿನ ಮನುಷ್ಯರಲ್ಲಿ ಯಮಲೋಕವಿದೆಯಂದು, ಅಲ್ಲಿ ಪಾಪಗಳಿಗೆ ಶಿಕ್ಷೆ ಹಾಕಲಾಗುತ್ತದೆ ಎನ್ನುವ ವಿಷಯ ಪೂರ್ತಿಯಾಗಿ ಜೀರ್ಣಿಸಿ ಕೊಂಡಿದೆ. ಈ ವಿಧವಾಗಿ ಯಮಲೋಕವೆನ್ನುವುದು ಬೇರೆ ಇದೆಯೆಂದು ತಿಳಿಯುವು ದರಿಂದ ಮನುಷ್ಯನಲ್ಲಿ ಪಾಪ ಭೀತಿಯೆನ್ನುವುದು ಯಾವ ಮಾತ್ರವೂ ಇಲ್ಲದೆ ಹೋಗಿದೆ. ಪ್ರತಿ ಒಬ್ಬರೂ ಎಷ್ಟು ದೊಡ್ಡ ಪಾಪವನ್ನಾದರೂ ಭಯವಿಲ್ಲದೆ ಮಾಡುತ್ತಿದ್ದಾರೆ. ಯಮ ಲೋಕಕ್ಕೆ ಹೋದ ದಿನ ಅಲ್ಲವೆ ಪಾಪವನ್ನು ಅನುಭವಿಸುವುದು. ಯಾವಾಗಲೋ ಬರುವ ಕಷ್ಟಗಳಿಗೆ ಈ ದಿನ ಬರುವ ಸುಖಗಳನ್ನು ಏಕೆ ಬಿಡಬೇಕು. ಯಮಲೋಕ ಇರುತ್ತದೆಂದು ತಿಳಿದುಕೊಳ್ಳುತ್ತೇವೆ, ಆದರೆ ಯಾರಾದರೂ ನೋಡಿ ಬಂದಿದ್ದಾರಾ? ಒಂದು ವೇಳೆ ಇದೆಯೆಂದುಕೊಳ್ಳೋಣ ಆದರೂ ಅಲ್ಲಿ ಏನು ಅನುಭವಿಸುವುದು ನಮಗೆ ತಿಳಿಯದು ಅಲ್ಲವೆ! ಒಂದು ವೇಳೆ ಅನುಭವಿಸಿದರೂ ಅಲ್ಲಿಯ ವಿಚಾರ ಇಲ್ಲಿ ಜ್ಞಾಪಕಕ್ಕೆ ಇರುವುದಿಲ್ಲ. ಅಲ್ಲವೆ! ಜ್ಞಾಪಕ ಇಲ್ಲದ್ದನ್ನು ಯಾರೂ ನೋಡದದ್ದನ್ನು ಇದೆಯೆಂದು ಊಹಿಸಿಕೊಂಡು ನಮಗೆ ಅನುಕೂಲವಾದ ಕೆಲಸವನ್ನು ಪಾಪವೆಂದು ಬಿಡುವುದು ಬುದ್ಧಿ ಕಡಿಮೆ ಎನ್ನುವವರು ಬಹಳ ಜನ ಇದ್ದಾರೆ. ಕೆಲವರು ನೀನು ಮಾಡುವ ಪಾಪದ ಕೆಲಸಕ್ಕೆ ಚಿತ್ರಹಿಂಸೆ ಯಮಲೋಕದಲ್ಲಿ ಅನುಭವಿಸುತ್ತೀಯಾ ಎಂದು ಹೇಳಿದರೂ ಅಲ್ಲಿಗೆ ಹೋದಾಗ ಅನುಭವಿಸುತ್ತೇನೆ ಎಂದು ಹೇಳುವವರಿದ್ದಾರೆ. ಈ ವಿಧವಾಗಿ ಮನುಷ್ಯರಲ್ಲಿ ಪಾಪಭೀತಿ ಇಲ್ಲದೆ ಹೋಗುವುದಕ್ಕೆ ಕಾರಣ ಪುರಾಣಗಳೇ. ಯಮಲೋ ಕವೆನ್ನುವುದು ಭೂಮಿ ಮೇಲೆನೇ ಇದೆಯೆಂದು, ಪ್ರತಿ ಕ್ಷಣವು ನಾವು ಅನುಭವಿಸುವ ಕಷ್ಟಗಳೇ ಯಮಬಾಧೆಗಳೆಂದು ತಿಳಿಯದೆ ಹೋಗಿರುವುದರಿಂದ, ಮನುಷ್ಯನು ಭಯವಿಲ್ಲದೆ ಯಾವ ಕೆಲಸವನ್ನಾದರೂ ಮಾಡುವುದಕ್ಕೆ ಹಿಂಜರಿಯುವುದಿಲ್ಲ. ಪುರಾಣದಲ್ಲಿ ಯಮಲೋಕವೆನ್ನುವುದು ಎಲ್ಲೋ ಇದೆಯೆಂದು, ಮನುಷ್ಯರಿಗೆ ಭಯ ಇಡಬೇಕೆಂದು, ಪುರಾಣಗಳನ್ನು ಬರೆದವರ ಊಹೆ ಇರಬಹುದು ಆದರೆ ಅವರಂದುಕೊಂಡಹಾಗಲ್ಲದೆ ಅದಕ್ಕೆ ವಿರುದ್ಧವಾಗಿ ಪ್ರಜೆಗಳಲ್ಲಿ ಭಯವೇ ಇಲ್ಲದೇ ಹೋಗಿದೆ. ಯಥಾರ್ಥವಾಗಿ ಯಮಲೋಕವು ಭೂಮಿ ಮೇಲೆನೇ ಇದೆ ಎಂದು ತಿಳಿದ ದಿನ, ಯಮಲೋಕದಲ್ಲಿರುವ ಬಾಧೆಗಳೆಲ್ಲವೂ ಇಲ್ಲಿ ಭೂಮಿಯ ಮೇಲೆನೇ ಇವೆ ಎಂದು ತಿಳಿದದಿನ, ಪ್ರತ್ಯಕ್ಷವಾಗಿ ಒಂದು ಗಾಡಿ ಕೆಳಗೆ ಬಿದ್ದು ಛಿದ್ರ ಛಿದ್ರವಾದ ಶರೀರವನ್ನು ನೋಡಿ ಇದೇ ಯಮಬಾಧೆ, ಇದು ನಾವು ಮಾಡಿಕೊಂಡ ಪಾಪ ಫಲಿತವೆ ಎಂದು ತಿಳಿದ ದಿನ ಪಾಪಭೀತಿ ಏರ್ಪಡುತ್ತದೆ. ಯಮ ಲೋಕದಲ್ಲಿ ಇವೆಯೆಂದು ತಿಳಿದುಕೊಂಡರು ನಾಯಿಗಳು ಕಚ್ಚುವುದು, ಹಾವುಗಳು

ಕಚ್ಚುವುದು, ಚೇಳುಗಳು ಕುಟುಕುವುದು, ಭರ್ಜಿಯಿಂದ ಇರಿಯುವುದು, ಎಣ್ಣೆಯಲ್ಲಿ ಬೇಯುವುದು, ಬೆಂಕಿಯಲ್ಲಿ ಸುಡುವುದು, ವಾಹನಕೆಳಗೆ ಬೀಳುವುದು, ಕಟ್ಟಿಗೆಯಿಂದ ಹೊಡೆಯುವುದು, ಕತ್ತಿಯಿಂದ ಕಡಿಯುವುದು ಪ್ರಾಣಿಗಳಿಂದ ಹಿಂಸಿಸುವುದು ಮೊದಲಾದ ಎಲ್ಲವು ಇಲ್ಲಿಯೇ ಪ್ರತ್ಯಕ್ಷವಾಗಿ ನಡೆಯುತ್ತಿವೆ ಎಂದು ತಿಳಿದದಿನ ಮನುಷ್ಯರಲ್ಲಿ ಪಾಪಭೀತಿ ಹುಟ್ಟಬಹುದು. ಪಾಪಕ್ಕೆ ಇರುವ ಪ್ರತಿ ಫಲ ಎಂತದೊ ನಿಜವಾಗಿ ತಿಳಿದ ದಿನ ಮನುಷ್ಯನು ಪಾಪ ಮಾಡುವುದಕ್ಕೆ ಆಲೋಚಿಸುತ್ತಾನೆ. ಪಾಪ ಮಾಡುವವರು ಕಡಿಮೆ ಆಗುತ್ತಾರೆ.

ಈಗ ಭೂಮಿಮೇಲೆ ಪಾಪ ಮಾಡುವವರು ಹೆಚ್ಚಾಗಿದ್ದಾರೆಂದರೆ ಪುರಾಣಗಳ ಪ್ರಭಾವವೇ ಎಂದು ತಿಳಿದುಕೊಳ್ಳಿ. ಪುರಾಣಗಳು ನಮಗೆ ಒಳ್ಳೆಯದೇ ಮಾಡುತ್ತವೆಂದು ಕೆಲವರ ಅಭಿಪ್ರಾಯ ಇರಬಹುದು. ಆದರೆ ಪುರಾಣಗಳು ನಮಗೆ ಹೆಚ್ಚಾಗಿ ನಷ್ಟವನ್ನೆ ಕೈಗೂಡಿಸಿವೆಯೆಂದು ಒತ್ತಿ ಹೇಳಬಹುದು. ಭಕ್ತಿ ಬೀಜವನ್ನು ನಾಟುವುದಕ್ಕೆ ಪ್ರಯತ್ನಿಸಿದ ಪುರಾಣಗಳು ಕಡೆಗೆ ಮನುಷ್ಯನನ್ನು ದೇವರ ಜ್ಞಾನಕ್ಕೆ ದೂರಮಾಡುತ್ತಿವೆ ಎಂದು ಹೇಳಬಹುದು.

ಪಂಚಮ ವೇದವೆಂದು ಹೆಸರು ಹೊಂದಿರುವ ಭಾಗವತದಲ್ಲಿ ಅಜಾಮೀಲೋಪಾಖ್ಯಾನದಲ್ಲಿ ಅಜಾಮೀಲನು ತನ್ನ ಜೀವನ ಕಾಲದಲ್ಲಿ ಎಷ್ಟೋ ಪಾಪ ಕೃತ್ಯಗಳನ್ನು ಮಾಡಿ ಭಯಂಕರ ಪಾಪವನ್ನು ಸಂಪಾದಿಸಿಕೊಂಡು ಇರುವವನಾಗಿ, ಸ್ವಲ್ಪ ಕಾಲಕ್ಕೆ ಮರಣ ಸಮಯ ಬಂದಾಗ, ಆ ಸಮಯದಲ್ಲಿ ಮಂಚದ ಮೇಲೆ ಮಲಗಿರುವ ವನಾಗಿ ನಾರಾಯಣ ಎನ್ನುವ ಹೆಸರಿರುವ ತನ್ನ ಸಣ್ಣ ಕುಮಾರನಮೇಲೆ ಬಹಳ ಪ್ರೀತಿ ಇರುವದರಿಂದ, ಅವನನ್ನು ನೋಡಬೇಕೆನ್ನುವ ಆಸೆಯಿಂದ ನಾರಾಯಣ ಎಂದು ಕರೆದನಂತೆ. ಅವಸಾನ ದಶೆಯಲ್ಲಿ ನಾರಾಯಣ ಎನ್ನುವುದರಿಂದ ವೈಕುಂಠದಿಂದ ವಿಷ್ಣು ದೂತರು ಅವನನ್ನು ಕೊಂಡೊಯ್ಯುವುದಕ್ಕೆ ಬಂದರಂತೆ, ಅವನು ಜೀವನ ಕಾಲದಲ್ಲಿ ಬಹಳ ಪಾಪ ಮಾಡಿದವನಾದ್ದರಿಂದ ಯಮಲೋಕದಿಂದ ಯಮ ಭಟರು ಬಂದರಂತೆ. ಅಲ್ಲಿಗೆ ಬಂದ ವಿಷ್ಣು ದೂತರು ಅಜಾಮೀಲನು ಅಂತ್ಯದಲ್ಲಿ ನಾರಾಯಣ ಎಂದಿದ್ದಾನೆ ಆದ್ದರಿಂದ ನಮ್ಮ ಲೋಕಕ್ಕೆ ತೆಗೆದುಕೊಂಡು ಹೊಗುತ್ತೇವೆಂದು ಯಮದೂತರ ಹತ್ತಿರ ಹೇಳಿದರಂತೆ. ಅದಕ್ಕೆ ಯಮದೂತರು ಇವನು ಬಹಳ ಪಾಪವನ್ನು ಮಾಡಿದ್ದಾನೆ ಯಮಲೊಕಕ್ಕೇ ತೆಗೆದುಕೊಂಡು ಹೊಗುತ್ತೇವೆಂದು ವಾದಿಸಿದರಂತೆ. ಈ ವಿಧವಾಗಿ ಅಜಾಮೀಲನ ಕಥೆ ಇದೆ. ಹೀಗೆ ಅಜಾಮೀಲನು ತನ್ನ ಕುಮಾರನನ್ನು ಕರೆದರೇ ಯಾರನ್ನು ಕರೆದಿದ್ದಾನೆಂದು ಗ್ರಹಿಸದೇ ತನ್ನ ದೂತರನ್ನು ಕಳಿಸಿದ ವಿಷ್ಣು ಅಷ್ಟು ಅವಗಾಹನೆ ಇಲ್ಲದವನಾಗಿ ಇರುತ್ತಾನಾ!

ಯಾರು ಯಾವ ಭಾವವನ್ನು ಅಂತ್ಯದಲ್ಲಿ ಹೊಂದಿರುತ್ತಾನೊ ಅದನ್ನೇ ಹೊಂದುವನೆಂದು ಶಾಸ್ತ್ರವಿದೆ ಅಲ್ಲವೆ! ಅಜಾಮೀಲನು ಕರೆದುಕೊಂಡಿರುವುದು ತನ್ನ ಕುಮಾರನನ್ನಾದರೆ ವಿಷ್ಣು ದೂತರು ಏಕೆ ಬರಬೇಕು?

**"ಯಂ ಯಂ ವಾಪಿಸ್ಮರನ್ ಭಾವಂ ತ್ಯ ಜತ್ಯನ್ತೇ ಕಲೇ ಬರಮ್,**
**ತಂ ತಮೇ ವೈತಿ ಕೊಂತೇಯ, ಸದಾ ತದ್ಭಾವ ಭಾವಿತಃ"**

ಎನ್ನುವ ಗೀತಾವಾಕ್ಯಕ್ಕೆ ಅಜಾಮೀಲನ ಕಥೆ ವಿರುದ್ಧವಾಗಿದೆ. ಶರೀರವನ್ನು ಬಿಟ್ಟು ಹೋಗುವಾಗ ಯಾವುದು ಸ್ಮರಣೆಗೆ ಬರುತ್ತದೊ ಅದನ್ನೇ ಅವನು ಹೊಂದುವನೆಂದು ಇದೆ. ಹಾಗಲ್ಲದೆ ಅಂದುಕೊಂಡಿರುವುದು ಕುಮಾರನನ್ನು, ಫಲಿತವಾಗಿ ಬಂದಿರುವುದು ವಿಷ್ಣು ದೂತರು. ಅಂದರೆ ಮನುಷ್ಯರ ಬಗ್ಗೆ ದೇವರು ಇಟ್ಟಿರುವ ಸಿದ್ಧಾಂತಗಳನ್ನು ಆತಂಕ ಪಡಿಸುವುದೇ ಆಗಲಿ ಬೇರೆ ಅಲ್ಲ. ಧರ್ಮಕ್ಕೆ ಮುಪ್ಪು ತರುವ ಕಥೆಗಳನ್ನು ನಾವು ಯಾವ ಮಾತ್ರವು ಒಪ್ಪಿಕೊಳ್ಳುವುದಿಲ್ಲ.

ಅಜಾಮೀಲನ ಕಥೆಯಿಂದ ಬಹಳ ಜನ ಪ್ರಾಣ ಹೋಗುವಾಗ ದೇವರನ್ನು ಸ್ಮರಿಸಿಕೊಂಡರೇ ಸಾಕು ಅಲ್ಲವೆ! ಈಗಿನಿಂದಲೇ ಏಕೆ ಅಂದುಕೊಳ್ಳಬೇಕು? ಈಗಿನಿಂದ ದೈವಸ್ಮರಣೆ ನಮ್ಮ ಕೆಲಸಗಳಿಗೆ ಆತಂಕವಾಗಿ ಇರುತ್ತದೆ. ಅಜಾಮೀಲನು ಸ್ಮರಿಸಿಕೊಂಡಹಾಗೆ ಅಂತಿಮ ಸಮಯದಲ್ಲಿ ದೇವರನ್ನು ನೆನೆದರೆ ಸುಲಭವಾಗಿ ದೈವ ಸಾನ್ನಿಧ್ಯವನ್ನು ಸೇರಬಹುದೆಂದು ಭ್ರಮಿಸುತ್ತಿದ್ದಾರೆ. ತಿಳಿದವರು ಜ್ಞಾನದ ಬಗ್ಗೆ ಬೋಧಿಸಿ ಈಗಿನಿಂದ ಸಾಧನೆ ಮಾಡೆಂದು ಹೇಳಿದರೆ ಆ ಮಾತನ್ನು ಕೇಳದೆ ಭಾಗವತದಲ್ಲಿ ಅಜಾಮೀಲನು ಎಷ್ಟೋ ಕೆಟ್ಟವನಾಗಿದ್ದರೂ ಅಂತ್ಯದಲ್ಲಿ ನಾರಾಯಣ ಎಂದ ಮಾತ್ರಕ್ಕೆ ವಿಷ್ಣು ದೂತರು ಬಂದರಂತೆ. ಆ ವಿಧವಾಗಿಯೇ ನಾವೂ ಅಂತ್ಯದಲ್ಲಿ ತಿಳಿದುಕೊಳ್ಳುತ್ತೇವೆ. ಈ ವಿಷಯ ನಿಮಗೆ ತಿಳಿಯದೇ ಈಗಿನಿಂದ ಪ್ರಯತ್ನವನ್ನು ಮಾಡೆಂದು ಹೇಳುತ್ತಿದ್ದೀರೆಂದು ಅಣಕಿಸುತ್ತಿದ್ದಾರೆ. ಗೀತೆಯಲ್ಲಿ ಅಕ್ಷರ ಪರಬ್ರಹ್ಮ ಯೋಗದಲ್ಲಿ ಹೇಳಿದ **"ತಸ್ಮಾ ತ್ಸರ್ವೇಸು ಕಾಲೇಸು ಮಾಮನುಸ್ಮರ ಯುಧ್ಯಚ, ಮಯ್ಯರ್ಪಿತ ಮನೊ ಬುದ್ಧಿರ್ಮಾಮೇ ವೈಷ್ಯಸ್ಯ ಸಂಶಯಃ"** ಸರ್ವ ಕಾಲದಲ್ಲಿ ಮನಸ್ಸು, ಬುದ್ಧಿಯನ್ನು ನನ್ನ ಮೇಲಿಟ್ಟು ನನ್ನನ್ನೇ ಸ್ಮರಿಸುತ್ತಿರುವುದರಿಂದ ಕೊನೆಗೆ ನನ್ನನ್ನೇ ಸೇರಬಹುದು" ಎನ್ನುವ ಮಾತು ಇವರಬಗ್ಗೆ ಆಗಿದೆ. ಒಂದು ಪುರಾಣಕಥೆ ಶಾಸ್ತ್ರವಾದ ವಾಕ್ಯವನ್ನೇ ಕೆಳಬೀಳುಸುತ್ತಿದೆ. ಕೆಲವರು ಪುರಾಣಗಳ ಕಡೆ ಮರಳಿ ಶಾಸ್ತ್ರಗಳನ್ನೇ ಅಣಕಿಸುತ್ತಿದ್ದಾರೆ. ಪುರಾಣಗಳನ್ನು ನಂಬಿ ಸಣ್ಣ ದಾರದಿಂದ ಪರ್ವತದ ಮೇಲೇರ

ಬಹುದೆಂದು ಹಾಳಾಗುತ್ತಿದ್ದಾರೆ. ಅಂತಹವರನ್ನು ಸರಿ ಮಾಡುವ ನಿಮಿತ್ತ ನಾವು ಪುರಾಣಗಳನ್ನು ವಿಮರ್ಶಿಸಲಾಗಿದೆ.

ವರಾಹ ಪುರಾಣಾಂತರ್ಗತವಾದ ಗೀತಾ ಮಹತ್ವದಲ್ಲಿ ವಿಷ್ಣು ಭೂದೇವಿಗೆ ಭಗವದ್ಗೀತೆಯ ಮಹಿಮೆಯನ್ನು ವಿವರಿಸಿ ಹೇಳುತ್ತಾ, ಗೀತೆಯನ್ನು ಅಧ್ಯಯನ ಮಾಡುವುದರಿಂದ ಪುಣ್ಯ ಲಭಿಸುತ್ತದೆಂದು, ಗಂಗಾ ಸ್ನಾನ ಫಲಿತವು ಲಭಿಸುತ್ತದೆಂದು, ಸೋಮ ಯಾಗ ಫಲಿತ ಲಭಿಸುತ್ತದೆಂದು, ಕೈಲಾಸದಲ್ಲಿ ಪ್ರಥಮ ಗಣದಲ್ಲಿ ನಿವಾಸ ಲಭಿಸುತ್ತದೆಂದು, ಮನ್ವಂತರ ವರೆಗೂ ಮಾನವ ಜನ್ಮವೇ ಪ್ರಾಪ್ತಿಸುತ್ತದೆಂದು, ಚಂದ್ರಲೋಕಪ್ರಾಪ್ತಿ, ವೈಕುಂಠಪ್ರಾಪ್ತಿ ಯಾಗುವುದೆಂದು ಹೇಳಿದಂತೆ ಇದೆ. ಈ ಮಾತಿನೊಂದಿಗೆ ಹೇಳಿರುವ ಮಹಿಮೆಗಳ ಮೇಲೆ ಮಾನವರು ಆಸೆಯಿಂದಲೆ ಗೀತೆಯನ್ನು ಪಠಿಸುತ್ತಾರೆ, ಆದರೆ ಮೋಕ್ಷ ಲಭಿಸುತ್ತದೆನ್ನುವ ಉದ್ದೇಶ ಅವರಲ್ಲಿ ಯಾವ ಮಾತ್ರವೂಇಲ್ಲ ಗೀತೆಯನ್ನು ಓದಿ ಗೀತಾ ಮಹಿಮೆಯನ್ನು ಓದದವನಿಗೆ ಯಾವ ಫಲ ಇರುವುದಿಲ್ಲವೆಂದು, ಫಲಶೂನ್ಯವಾಗುವ ಕಾರ್ಯವನ್ನು ಮಾಡಿದವನಾಗುವನೆಂದು ಗೀತಾ ಮಹಿಮೆಯಲ್ಲಿ ಬರೆದಿರುವ ಕಾರಣದಿಂದ ಗೀತಾ ಮಹಿಮೆಯನ್ನು ತಪ್ಪದೆ ಓದ ಬೇಕೆಂದು, ಪ್ರಜೆಗಳು ಗೀತೆಗಿಂತಲು ಗೀತಾ ಮಹಿಮೆಯನ್ನೇ ಮುಖ್ಯವೆಂದು ತಿಳಿಯುತ್ತಾರೆ. ಆಗ ಗೀತಾ ಮಹತ್ವದ ಮುಂದೆ ಗೀತೆಯೆ ಕಡಿಮೆ ಎನ್ನುವ ಭಾವ ಏರ್ಪಡುತ್ತದೆ. ಬ್ರಹ್ಮ ವಿದ್ಯೆಯಾದ ಗೀತೆಗೆ ದೊಡ್ಡ ಲೋಪ ಗೀತಾಮಹತ್ವದಿಂದ ಏರ್ಪಡುತ್ತಿದೆ. ಗೀತಾ ಮಹತ್ವವನ್ನೇ ಮುಖ್ಯವಾಗಿ ಲೆಕ್ಕಿಸಿಕೊಂಡವರು, ಅದರಲ್ಲಿ ಹೇಳಿದಂತೆ ಗೀತೆಯನ್ನು ಓದುವುದರಿಂದ ಫಲ ಬರುತ್ತದೆಂದೇ ಪೂರ್ತಿಯಾಗಿ ನಂಬುತ್ತಿದ್ದಾರೆ. ಗೀತೆ ಪುಣ್ಯ ಪಾಪಗಳೆನ್ನುವ ಬಂಧಗಳನ್ನು ತೊಲಗಿಸುವುದಕ್ಕೆ, ಮೋಕ್ಷವನ್ನು ಪ್ರಾಪ್ತಿಸುವುದಕ್ಕೆ ಇದೆ. ಹಾಗಲ್ಲದೆ ಸೋಮಯಾಗ ಪುಣ್ಯ, ಗಂಗಾ ಸ್ನಾನ ಪುಣ್ಯ ಬರುವಂತೆಮಾಡಿ ಚಂದ್ರಲೋಕ ಪ್ರಾಪ್ತಿ, ವೈಕುಂಠಪ್ರಾಪ್ತಿ ಆಗುವಂತೆ ಮಾಡುತ್ತದೆನ್ನುವುದು ಯೋಗಶಾಸ್ತ್ರಕ್ಕೆ ದೊಡ್ಡ ಕಳಂಕವನ್ನು ಮಾಡಿದಂತಾಗುತ್ತದೆ. ಬ್ರಹ್ಮ ವಿದ್ಯಾ ಧರ್ಮ ಶಾಸ್ತ್ರಕ್ಕೆ ಗೀತಾ ಮಹಿಮೆಯಿಂದ ಅಧರ್ಮಗಳನ್ನು ಅಂಟಿಸುವುದು ಸರಿಯಾದ ಕೆಲಸವಲ್ಲ.

ಭಗವದ್ಗೀತೆ ಒಂದು ಯೋಗ ಶಾಸ್ತ್ರ, ಗೀತಾಮಹತ್ವ ವರಾಹ ಪುರಾಣ. ಗೀತೆ ಯೊಂದರ ಮಹತ್ವವು ಪ್ರಕಾಶಿಸುವ ನಿಮಿತ್ತ ಮೇಲೆ ಕಾಣಿಸಿದರು, ಒಳಗೆ ಗೀತೆಯ ಮೇಲೆಯೇ ಅನುಮಾನವನ್ನು ಉಂಟುಮಾಡುವ ಗೀತಾ ಮಹತ್ವವನ್ನು ಏನನ್ನಬೇಕೊ! ಅದಕ್ಕೆ ನಾನು ದುರ್ಯೋಧನನ ಒಳಿತು ಕೋರುವ ಶಕುನಿಯಂತವು ಪುರಾಣಗಳೆಂದು

ಹೇಳುತ್ತಿದ್ದೇನೆ. ಶಕುನಿ ಮಾತುಗಳು, ಕೆಲಸಗಳು ದುರ್ಯೋಧನನನ್ನು ಒಳಿತು ಕೋರುವವಾಗಿ ಮೇಲಕ್ಕೆ ಕಾಣಿಸಿದರೂ ಕೊನೆಗೆ ಫಲಿತವು ದುರ್ಯೋಧನನ ನಾಶನವೇ. ಆ ವಿಧವಾಗಿಯೇ ಪುರಾಣಗಳ ಮಾತುಗಳು ಭಕ್ತಿಯನ್ನು ಬೋಧಿಸಿ ಜ್ಞಾನಿಯಾಗಿ ಮಾಡುವ ಹಾಗೆ ಮೇಲಕ್ಕೆ ಕಾಣಿಸಿದರೂ ಅವುಗಳಿಂದ ಕಡೆಗೆ ಉಳಿಯುವುದು ಅನೇಕ ಸಂಶಯಗಳಿಂದ ಕೂಡಿರುವ ಅಜ್ಞಾನವೇ.

ಭಾಗವತದಲ್ಲಿ ಹಿರಣ್ಯಕಶಿಪನು ಬ್ರಹ್ಮನ ಕುರಿತು ಮರಣವನ್ನು ಜಯಿಸಲು ಹತ್ತು ಸಾವಿರ ವರ್ಷಗಳು ತಪಸ್ಸನ್ನು ಮಾಡಿರುವುದಾಗಿ ಇದೆ. ವರವನ್ನು ಪಡೆದು ಮನೆಗೆ ಬಂದಾಗ ಮಗನಿಗೆ ಐದುವರ್ಷಗಳೆಂದು ಇದೆ. ತಪಸ್ಸಿಗೆ ಹೋಗುವಾಗ ಹೆಂಡತಿ ಗರ್ಭಿಣಿ ಯಾಗಿದ್ದೂ ಸಾವಿರ ವರ್ಷಗಳು ತಪಸ್ಸನ್ನು ಮಾಡಿ ಮುಗಿಸಿದನಂತರ ಕುಮಾರನಿಗೆ ಐದು ವರ್ಷಗಳ ವಯಸ್ಸೆನ್ನುವುದು ಎಷ್ಟು ನಿಜ. ಎಷ್ಟು ಪುರಾಣಗಳಾದರೂ ಇಷ್ಟು ಅಸತ್ಯಗಳಾ! ಇದರಿಂದ ಇಂದೂ ಮತ ಪರಮತಗಳಿಗಿಂತಲೂ ಕಡಿಮೆ ಅಲ್ಲವೆ! ನಿನ್ನ ದೇವರೆಲ್ಲಿದ್ದಾನೆಂದು ಹಿರಣ್ಯಕಶಿಪನ ಮಾತಿಗೆ ಪ್ರಹ್ಲಾದನು ಅಲ್ಲಿರುವನು, ಇಲ್ಲಿರುವುದಿಲ್ಲ ವೆನ್ನುವ ಸಂದೇಹ ಬೇಡವೆಂದು ಸಮಾಧಾನಕೊಟ್ಟನು. ಆ ಮಾತು ನಿಜವೆಂದು ನಂಬಿದವನಿಗೆ ಗಜೇಂದ್ರ ಮೋಕ್ಷದಲ್ಲಿ ವೈಕುಂಠಪುರದಲ್ಲಿ ಆ ಮಹಡಿಯಲ್ಲಿ ಅಂದಿರುವ ಮಾತು ಕೇಳುತ್ತಲೇ ಮೊದಲು ಪ್ರಹ್ಲಾದನ ಮಾತು ಸತ್ಯವಾ ಅಥವಾ ಅಸತ್ಯವಾ ಎಂದು ಅಲ್ಲಿಯೇ ಆ ಪುರಾಣದ ಮೇಲೆ ಅಪನಂಬಿಕೆ ಏರ್ಪಡುತ್ತದೆ. ಈ ವಿಧವಾಗಿ ಇರುವುದು ಇಂದೂ ಮತಕ್ಕೆ ಕ್ಷೇಮವೇನಾ?

ವಾಮನ ಘಟ್ಟದಲ್ಲಿ ಬಲಿ ಚಕ್ರವರ್ತಿ ಕೊಟ್ಟಿರುವ ಮೂರು ಹೆಜ್ಜೆಯ ದಾನವನ್ನು ವಾಮನನು ಅಳತೆ ಮಾಡುತ್ತಾ ಒಂದು ಹೆಜ್ಜೆ ಆಕಾಶಕ್ಕೆ ಮತ್ತೊಂದು ಹೆಜ್ಜೆ ಭೂಮಂಡಲಕ್ಕೆ ಇಟ್ಟಾಗ ಸಮಸ್ತ ಭೂಭಾಗವು ಎರಡನೆಯ ಪಾದಕ್ಕೇ ಸರಿಹೋದಾಗ ಭೂಮಿ ಮೇಲಿರುವ ಬಲಿ ಚಕ್ರವರ್ತಿ ಹೇಗೆ ಉಳಿದಿದ್ದನು. ಮೂರನೆಯ ಪಾದ ಬಲಿಚಕ್ರವರ್ತಿಯ ತಲೆ ಮೇಲೆ ಇಟ್ಟಿದ್ದಾನೆನ್ನುವುದಕ್ಕೆ ಬಲಿಚಕ್ರವರ್ತಿ ನಿಂತುಕೊಳ್ಳಲು ಸ್ವಲ್ಪವಾದರೂ ಭೂಮಿಇದ್ದರೇ ತಾನೆ ಅದು ಸಾಧ್ಯ. ಯೋಚಿಸುವವರಿಗೆ ಸಂಶಯಗಳು ಬರುತ್ತವೆ. ಆದ್ದರಿಂದಲೇ ಇಂದೂ ಮತದಲ್ಲಿ ನಾಸ್ತಿಕರು ತಯಾರಾಗಿದ್ದಾರೆ. ಮತ್ತ್ಯಾವ ಇತರ ಮತದಲ್ಲಿ ನಾಸ್ತಿಕರಿಲ್ಲ. ಒಂದು ಹಿಂದೂ ಮತದಲ್ಲಿ ಮಾತ್ರ ನಾಸ್ತಿಕರಿದ್ದಾರೆಂದರೆ ಅದು ನಮ್ಮ ಪುರಾಣಗಳ ಪ್ರಚಾರದಿಂದ, ಶಾಸ್ತ್ರಗಳು ತಿಳಿಯದೇ ಹೋಗುವುದರಿಂದ ಎಂದು ತಿಳಿಯಬೇಕು. ಈಗಲಾದರೂ ಹಿರಿಯರು, ಗುರುಗಳು, ಪುರಾಣಗಳು ಎಷ್ಟು ಅವಶ್ಯವೆಂದು ಗ್ರಹಿಸಿ,

ಪುರಾಣಗಳು ಹೇಳಬೇಕಾದವರಿಗೆ ಪುರಾಣಗಳು ಹೇಳಿ, ನಂತರ ಶಾಸ್ತ್ರಗಳು ತಿಳಿಸಬೇಕೆಂದು ಸವಿನಯವಾಗಿ ತಿಳಿಸುತ್ತಿದ್ದೇವೆ.

ನಮ್ಮ ಅನುಭವದಲ್ಲಿ ಶಾಸ್ತ್ರವನ್ನು ಹೇಳಿ ನಾಸ್ತಿಕರನ್ನು ಸಹ ಆಸ್ತಿಕರಾಗಿ ಮಾಡಿದ್ದೇವೆ. ಆದ್ದರಿಂದ ಪುರಾಣಗಳನ್ನು ವಿಮರ್ಶಿಸಿದ್ದೇವೆಂದು ತಿಳಿದುಕೊಳ್ಳದೇ ವಿಶಾಲವಾದ ಭಾವದೊಂದಿಗೆ ಅರ್ಥ ಮಾಡಿಕೊಳ್ಳುತ್ತೀರೆಂದು, ಇಂದೂ ಮತವನ್ನು ಉದ್ಧರಿಸುವಿರೆಂದು ತಿಳಿಯುತ್ತೇವೆ.

**ಕೆ. ಸೀತಾರಾಮಯ್ಯ, ಶ್ರೀರಾಮುಲಪೇಟ, ಪ್ರೊದ್ದುಟೂರು**

**82. ಪುರಾಣಗಳು ಪ್ರತಿ ಮಾನವನಿಗು ಪ್ರಾರಂಭ ವಿದ್ಯೆ. ಆ ನಂತರ ಶಾಸ್ತ್ರವಿದ್ಯೆ ಅವಶ್ಯಕವೆಂದು ನಮ್ಮ ಉದ್ದೇಶ. ನೀವು 18 ಪುರಾಣಗಳ ಹೆಸರನ್ನು ತಿಳಿಸಿದ್ದೀರಿ. ಹಾಗೇ ಶಾಸ್ತ್ರದ ವಿವರಗಳನ್ನು ಸಹ ತಿಳಿಸಬೇಕೆಂದು ಕೋರುತ್ತಿದ್ದೇವೆ?**

**ಉ.** ವಿಜ್ಞಾನವಂತರಾದ ತಮ್ಮಂತವರು ಗ್ರಹಿಸುತ್ತೀರೆನ್ನುವ ಭಾವದಿಂದ ಪುರಾಣ ವಿವರವನ್ನು ತಿಳಿಸಿದ್ದೇವೆ. ಅದರಲ್ಲಿ ನಾವೂ ಸಹ ಪುರಾಣಗಳು ಪ್ರಾಥಮಿಕ ವಿದ್ಯೆಯೆಂದೇ ತಿಳಿಸಿದ್ದೇವೆ. ಸಾಧಾರಣ ಮಾನವನಿಗೆ ಜ್ಞಾನ ಗ್ರಹಿಸದ ಸ್ಥಿತಿಯಲ್ಲಿ ಪುರಾಣಗಳು ಅವಶ್ಯವೆಂದು ಹೇಳಿದ್ದೇವೆ ಅಲ್ಲವೆ!

ಈಗ ನೀವು ಕೇಳಿರುವುದರಿಂದ ಶಾಸ್ತ್ರ ವಿಷಯಗಳನ್ನು ತಿಳಿಸಬೇಕಾಗಿದೆ. ಸವ್ಯ (ಸೂಕ್ತ) ವಾದ ನಿಮ್ಮ ಪ್ರಶ್ನೆಗಳಿಂದ ಎಷ್ಟೋ ಜನಕ್ಕೆ ಸತ್ಯವನ್ನು ತಿಳಿಯುವ ಅವಕಾಶ ಬಂದಿದೆ. ಆದ್ದರಿಂದ ಸಂತೋಷವಾಗಿ ತಿಳಿಸುತ್ತಿದ್ದೇವೆ. ಶಾಸ್ತ್ರಗಳು ಅರು ಇವೆ. ಅವುಗಳನ್ನೆ ಷಟ್ ಶಾಸ್ತ್ರಗಳೆನ್ನುತ್ತಾರೆ. ಸಿದ್ಧಾಂತ ನಿಬಂಧನೆಗಳಿಂದ ಕೂಡಿಕೊಂಡಿರುವುದೇ ಶಾಸ್ತ್ರ. ಆದ್ದರಿಂದ ಶಾಸನಗಳಿಂದ ಕೂಡಿಕೊಂಡಿರುವುದೇ ಶಾಸ್ತ್ರವೆಂದು ಹಿರಿಯರೆನ್ನುತ್ತಾರೆ. ಶಾಸನದಿಂದ ಹುಟ್ಟಿರುವ ಪದವೇ ಶಾಪ. ಶಾಪವೆಂದರೆ ಖಚಿತವಾಗಿ ನಡೆಯುವದೆಂದು ನಮಗೆ ತಿಳಿದಿರುವ ವಿಷಯವೇ. ಹಾಗೇ ಶಾಸನವೆಂದರೇ ಎಳ್ಳಷ್ಟೂ ತಪ್ಪದೇ ನಡೆಯುವುದೆಂದು ಅರ್ಥ ಅಂತಹ ಶಾಸನಗಳೊಂದಿಗೆ ಕೂಡಿಕೊಂಡಿರುವುದೇ ಶಾಸ್ತ್ರ. ಉದಾಹರಣೆಗೆ **"ಜಾತಸ್ಯ ಹಿ ಧೃವೋ ಮೃತ್ಯು"** (ಹುಟ್ಟಿದವನು ಮರಣಿಸಲೇ ಬೇಕು) ಎನ್ನುವ ಮಾತು ತಪ್ಪದೆ ನಡೆಯುತ್ತಿದೆ ಅಲ್ಲವೆ! ಹಾಗೇ 5 x 4 = 20 ಎಂದು ಗಣಿತ ಶಾಸ್ತ್ರದಲ್ಲಿ ಇದೆ. ಅದು ಯಾವ ದೇಶದಲ್ಲಾದರೂ ಜಾರಿಗೆ ಬರುತ್ತಿದೆ. ಈ ವಿಧವಾಗಿ

ಬದಲಾಗದೆ ನಿರೂಪಣೆಗೆ ಬರುವ ನಿರ್ಣಯವಾದ ಶಾಸನಗಳೊಂದಿಗೆ ಕೂಡಿಕೊಂಡಿರುವುದೇ ಶಾಸ್ತ್ರ.

ಶಾಸ್ತ್ರಗಳು ಆರು ಎಂದು ಹೇಳಿದ್ದೇವೆ ಅಲ್ಲವೆ! ಅವು 1) ಗಣಿತ ಶಾಸ್ತ್ರ, 2) ಜ್ಯೋತಿಷ್ಯ ಶಾಸ್ತ್ರ, 3) ಖಗೋಳ ಶಾಸ್ತ್ರ, 4) ರಸಾಯನ ಶಾಸ್ತ್ರ, 5) ಭೌತಿಕ ಶಾಸ್ತ್ರ, 6) ಯೋಗ ಶಾಸ್ತ್ರ. ಇವುಗಳಿಗೆ ಅನುಬಂಧವಾದವು ಸಹ ಕೆಲವು ಇವೆ. ಉದಾಹರಣೆಗೆ ವಾಸ್ತು ಶಾಸ್ತ್ರವೆನ್ನುವುದು ಇದೆಯೆಂದುಕೊಳ್ಳಿ ಅದು ಬೇರೆ ಶಾಸ್ತ್ರವಲ್ಲ. ಜ್ಯೋತಿಷ್ಯ ಶಾಸ್ತ್ರದಲ್ಲಿನ ಭಾಗವೇ ವಾಸ್ತುಶಾಸ್ತ್ರವೆಂದು ತಿಳಿಯಬೇಕು. ಹಾಗೇ ವೃಕ್ಷಶಾಸ್ತ್ರವೆಂದು ಒಂದಿದೆಯೆಂದುಕೊಳ್ಳಿ ಅದು ಭೌತಿಕ ಶಾಸ್ತ್ರಕ್ಕೆ ಅನುಬಂಧವಾಗಿರುವುದೇ ಆಗಲಿ ಬೇರೆ ಅಲ್ಲವೆಂದು ತಿಳಿಯಬೆಕು. ಇನ್ನೂ ಅನೇಕವಾಗಿ ಶಾಸ್ತ್ರಗಳು ಅಲ್ಲದಿದ್ದರೂ ಶಾಸ್ತ್ರಗಳೆನ್ನುವ ಹೆಸರಲ್ಲಿ ಚಲಾವಣೆ ಆಗುವ ಪುಸ್ತಕಗಳು ಸಹ ಇವೆ. ಅವುಗಳನ್ನು ನಮ್ಮ ಜ್ಞಾನದಿಂದ ಶಾಸ್ತ್ರಗಳು ಹೌದಾ ಅಲ್ಲವಾ! ಎಂದು ತಿಳಿದುಕೊಳ್ಳಬಹುದು.

ಶಾಸ್ತ್ರಗಳು ಆರು ಬೇರೆ ಬೇರೆಯಾಗಿ ಇದ್ದರೂ ಒಂದಕ್ಕೊಂದು ಸಂಬಂಧವನ್ನು ಹೊಂದಿವೆ. ಗಣಿತ ಶಾಸ್ತ್ರಕ್ಕೂ, ಜ್ಯೋತಿಷ್ಯ ಶಾಸ್ತ್ರಕ್ಕೂ ಸಂಬಂಧವಿದೆ. ಹಾಗೇ ಜ್ಯೋತಿಷ್ಯ ಶಾಸ್ತ್ರಕ್ಕೂ ಖಗೋಳ ಶಾಸ್ತ್ರಕ್ಕೂ ಸಂಬಂಧವಿದೆ. ಖಗೋಳಕ್ಕೆ ರಸಾಯನ ಶಾಸ್ತ್ರ, ರಸಾಯನ ಶಾಸ್ತ್ರಕ್ಕೆ ಭೌತಿಕ ಶಾಸ್ತ್ರ, ಭೌತಿಕ ಶಾಸ್ತ್ರಕ್ಕೂ ಯೋಗ ಶಾಸ್ತ್ರಕ್ಕೂ ಸಂಬಂಧವು ಏರ್ಪಟ್ಟಿದೆ.

ಎಲ್ಲಾದಕ್ಕಿಂತ ಮುಖ್ಯವಾದುದು ಕೊನೆಯದು ಯೋಗಶಾಸ್ತ್ರ. ಅದು ಎಲ್ಲಾ ಮತದವರಿಗೂ ಇದೆ. ಒಂದೊಂದು ಮತದವರು ಒಂದೊಂದು ಹೆಸರನ್ನಿಟ್ಟುಕೊಂಡು ಆ ಶಾಸ್ತ್ರವನ್ನು ಕರೆಯುತ್ತಿದ್ದಾರೆ. ಹಾಗೆ ಇಂದೂ ಮತದಲ್ಲಿಯೂ ಸಹ ಭಗವದ್ಗೀತೆ ಎನ್ನುವ ಹೆಸರಲ್ಲಿ ಯೋಗಶಾಸ್ತ್ರವಿದೆ. ಅದು ಕೇವಲ ಇಂದೂಗಳಿಗೇ ಅಲ್ಲದೆ ಸರ್ವ ಜೀವರಾಶಿಗಳಿಗೂ ಅನ್ವಯಿಸುವ ಹಾಗೆ ಇದೆ. ಎಲ್ಲಾ ಶಾಸ್ತ್ರಗಳಿಗಿಂತಲೂ ಯೋಗ ಶಾಸ್ತ್ರ ಉನ್ನತವಾದದ್ದು, ಪವಿತ್ರವಾದದ್ದು ಆದ್ದರಿಂದ ಸರ್ವಶಾಸ್ತ್ರ ಶಿರೋಮಣಿ ಗೀತೆ ಎನ್ನುತ್ತಿದ್ದಾರೆ. ಉಳಿದ ಐದು ಶಾಸ್ತ್ರಗಳು ಇದರಲ್ಲಿ ಮಿಳಿತವಾಗಿವೆ. ಆದ್ದರಿಂದ **"ಸರ್ವ ಶಾಸ್ತ್ರಮಯಿ ಗೀತೆ"** ಎಂದು ಹಿರಿಯರನ್ನುತ್ತಿದ್ದಾರೆ.

ಶಾಸ್ತ್ರಗಳ ಕುರಿತು ನಾವು ಹೇಳುವ ವಿಷಯ ಕೇಳಿದ್ದೀರಿ ಅಲ್ಲವೆ! ಈಗ ಮತ್ತೆ ಕೆಲವರು ಶಾಸ್ತ್ರಗಳ ಬಗ್ಗೆ ಬರೆದಿರುವ ವಿಷಯವನ್ನು ಸಹ ಸ್ವಲ್ಪ ತಿಳಿಸುತ್ತೇವೆ. ಈ ಎರಡು ವಿಷಯಗಳಿಗೂ ನೀವು ತಕ್ಕಡಿಯಂತವರು. ಯಾವುದು ಭಾರ(ಸತ್ಯ)ವಿರುವ ವಿಷಯವೊ ನೀವೆ ಅಲೋಚಿಸಿರಿ.

1. ಶಿಕ್ಷ, 2. ವ್ಯಾಕರಣ 3. ಛಂದ 4. ನಿರುಕ್ತ 5. ಜ್ಯೋತಿಷ್ಯ 6. ಕಲ್ಪ. ಇವು ಷಟ್ ಶಾಸ್ತ್ರಗಳೆಂದು ಎನ್ನುವುದಿದೆ. ಇವುಗಳಲ್ಲಿ ಐದನೆಯದು ಜ್ಯೋತಿಷ್ಯ ಹೊರತು ಉಳಿದಿರುವವೆಲ್ಲಾ ಹೇಗೆ ಶಾಸ್ತ್ರಗಳೊ ನಮಗೆ ಅರ್ಥವಾಗಲಿಲ್ಲ. ಅವುಗಳ ಬಗ್ಗೆ ಇನ್ನೂ ವಿವರವನ್ನು ಕೇಳಿದರೆ ಹೀಗಿವೆ.

**1. ಶಿಕ್ಷ :** ಇದರಲ್ಲಿ ವೇದ ಶಬ್ದಗಳವೊಂದರ ಅಕ್ಷರಗಳ ಸ್ಥಾನ ಜ್ಞಾನಗಳನ್ನು ಉದಾತ್ತ, ಅನುದಾತ್ತ, ಸ್ವರಿತ, ಸ್ವರಗಳ ಜ್ಞಾನವನ್ನು ಹೇಳಲಾಗುವುದು. ಉದಾತ್ತವೆಂದರೆ ಉಚ್ಚ, ಅನುದಾತ್ತವೆಂದರೆ ನೀಚ, ಸ್ವರಿತವೆಂದರೆ ಸಮಾನ ಎಂದು ತಿಳಿಯಬೇಕು. ಈ ಶಿಕ್ಷಾ ಶಾಸ್ತ್ರವನ್ನು ವ್ಯಾಸ ಶಿಕ್ಷಾ, ಭರದ್ವಾಜ ಶಿಕ್ಷಾ, ನಾರದ ಶಿಕ್ಷಾ ಎನ್ನುವ ಮೂರು ವಿಧಗಳಾಗಿ ಹೇಳುತ್ತಿದ್ದಾರೆ.

**2. ವ್ಯಾಕರಣ :** ಇದರಲ್ಲಿ ವೇದ ಶಬ್ದದಿಂದ ಪ್ರಕೃತಿ ಪ್ರತ್ಯಜ್ಞಾನವನ್ನು ವಿವರಿಸಲಾಗಿದೆ.

**3. ಛಂದ :** ಇದರಲ್ಲಿ ವೇದಗಳು ಹೇಳಲಾಗಿರುವ ಗಾಯತ್ರಿ ಮೊದಲಾದ ಛಂದಗಳ ಪರಿಜ್ಞಾನ ವಿರುತ್ತದೆ.

**4. ನಿರುಕ್ತ :** ಇದರಲ್ಲಿ ವೇದ ಮಂತ್ರಗಳಿಂದ ಬರುವ ಪ್ರಯೋಜನವನ್ನು ಸ್ಪಷ್ಟ ಪಡಿಸುವ ನಿಮಿತ್ತ. ಅಪ್ರಸಿದ್ಧ ಪದಗಳಿಂದ ಅರ್ಥಗಳು ಬೋಧಿಸಲ್ಪಟ್ಟಿವೆ. ಮತ್ತು ವೇದ ಶಬ್ದ ವಿವರಣೆ ಶಾಖೆ ಪೂರ್ಣ ನಿರುಕ್ತವೂ ಇದರಲ್ಲಿವೆ.

**5. ಜ್ಯೋತಿಷ್ಯ :** ಇದರಲ್ಲಿ ವೈದಿಕ ಕರ್ಮಗಳನ್ನು ಆರಂಭಿಸುವುದಕ್ಕೆ ತಕ್ಕ ಮುಹೂರ್ತ ಜ್ಞಾನವನ್ನು ಆ ಮುಹೂರ್ತ ಬಲವನ್ನು, ಭವಿಷ್ಯತ್ ಸೂಚನೆಗಳು ವಿವರಿಸಲ್ಪಟ್ಟಿವೆ.

**6. ಕಲ್ಪ :** ಇದರಲ್ಲಿ ವೇದಗಳಲ್ಲಿ ಹೇಳಿರುವ ಯಜ್ಞ ಕರ್ಮಗಳನ್ನನುಷ್ಠಿಸುವ ರೀತಿಯನ್ನು ಬೋಧಿಸುವುದು ಇದೆ.

ನೋಡಿದ್ದೀರಾ ಇವು ನಮ್ಮ ಶಾಸ್ತ್ರಗಳ ವಿಷಯಗಳು. ಮುಂದೆ ಬಂದ ಕಿವಿಗಿಂತಲೂ ಹಿಂದೆ ಬಂದಿರುವ ಕೊಂಬುಗಳು ಉದ್ದ ಅಲ್ಲವೆ! ಎಂದು ಹೀಯಾಳಿಸದೆ ಹಿಂದೆ ಬಂದಿರುವವಾದರೂ ಕಿವಿಗಿಂತಲೂ ಬಲವಾಗಿರುವವು, ಉದ್ದವಿರುವವೆನ್ನುವ ಮಾತು ನಿಜವೇಯೆಂದು ಸತ್ಯವನ್ನು ಗ್ರಹಿಸಬೇಕೆಂದು ಕೋರುತ್ತಿದ್ದೇವೆ. ಹಾಗೇ ಮೊದಲು ಹೇಳಿರುವ ಹಿರಿಯರಿಗಿಂತಲೂ ಈಗ ನೀನು ಹೇಳುವ ಮಾತು ಮುಖ್ಯನಾ? ಎಂದು

ಹೇಳದೇ ಮುಂದೆ ಹಿಂದೆಯಿಂದ ಕೆಲಸವಿಲ್ಲದೇ ಸತ್ಯ ಒಂದೇ ನಿತ್ಯವಾಗಿರುವುದೆಂದು ತಿಳಿಯಬೇಕು.

**83. ಜನನ ಮರಣಗಳಿಗೆ ಕಾರಕನು ಈಜನ್ಮ ಪರಂಪರೆಯಲ್ಲಿ ಜೀವಿಯೊಬ್ಬನೆ ಅಲ್ಲವೆ! ಜನ್ಮ ಪರಂಪರೆಯಲ್ಲಿ ಆ ಜೀವಿಯು ಮಾಡಿರುವ ಕರ್ಮವನ್ನನುಸರಿಸಿ ಜನ್ಮ ಬರುವುದೆಂದು ಹಿರಿಯರಿಂದ ಕೇಳಿದ್ದೇವೆ. ಆ ಜನ್ಮ ಮಾನವ ಜನ್ಮ ಆಗಬಹುದು, ಪಶು ಪಕ್ಷ್ಯಾದಿಗಳು, ಕ್ರಿಮಿಕೀಟಕಗಳ ಜನ್ಮವಾಗಬಹುದು ಆದರೆ ಇಷ್ಟು ಮಾನವರ ಜನ ಸಂಖ್ಯೆ ಬೆಳೆಯುವುದಕ್ಕೆ ಕಾರಣ ತಿಳಿಸಲು ಪ್ರಾರ್ಥನೆ, 20/30 ವರ್ಷಗಳ ಕೆಳಗೂ, ಇಂದಿಗೂ ಜನಸಂಖ್ಯೆ ಬಹಳ ಹೆಚ್ಚಾಗಿದೆ ಇದಕ್ಕೆ ಕಾರಣವನ್ನು ತಿಳಿಸಬೇಕಾಗಿ ಪ್ರಾರ್ಥನೆ?**

ಉ. ಈ ಪ್ರಶ್ನೆಗೆ ಉತ್ತರ ನಿಮ್ಮ ಪ್ರಶ್ನೆಯಲ್ಲೇ ಇದೆ. ಜನ್ಮ, ಮಾನವ ಜನ್ಮ ಆಗಬಹುದು, ಪಶುಪಕ್ಷಿ, ಕ್ರಿಮಿ ಕೀಟಕವಾದರೂ ಆಗಬಹುದೆಂದಿದ್ದೀರಲ್ಲವೆ! ಕರ್ಮವನ್ನನುಸರಿಸಿ ಕ್ರಿಮಿ ಕೀಟಕ ಪಶು ಪಕ್ಷಿ ಶರೀರಗಳಲ್ಲಿನ ಜೀವಾತ್ಮ ಮಾನವ ಜನ್ಮ ತೆಗೆದುಕೊಂಡಿರಬಹುದು ಅಲ್ಲವೆ! ಆದ್ದರಿಂದ ಮನುಷ್ಯ ಜಾತಿಯ ಸಂಖ್ಯೆ ಹೆಚ್ಚಾಗಿದೆ.

ಜೀವಿಯು ಮಾಡಿರುವ ಕರ್ಮವನ್ನನುಸರಿಸಿ ಜನ್ಮ ಬರುವುದೆಂದು ನಿಮ್ಮ ಪ್ರಶ್ನೆಯಲ್ಲೇ ಇದೆಯಲ್ಲವೆ! ಆ ಮಾತು ನಿಜ. ಪಶು ಪಕ್ಷಿ ಮೃಗಗಳಾಗಿ ಇರುವ ಜೀವಿಗಳ ಪುಣ್ಯ ಫಲ ವಿಶೇಷದಿಂದ ಮನುಷ್ಯ ಜನ್ಮಕ್ಕೆ ಬಂದಿವೆಯೆಂದುಕೊಳ್ಳುತ್ತೇವೆ. ನೀವು ಹೇಳಿರುವ ಹಾಗೆ 20–30 ವರ್ಷಗಳಲ್ಲಿ ಮನುಷ್ಯರ ಸಂಖ್ಯೆ ಹೆಚ್ಚಾಗಿದೆ, ನಾವು ಹೇಳಿದಂತೆ ಕಾಡಿನಲ್ಲಿ ಪಕ್ಷಿಗಳ, ಮೃಗಗಳ ಸಂಖ್ಯೆ ಕಡಿಮೆ ಆಗಿದೆ. ಅಸಲಿಗೆ ಕೆಲವು ಜಾತಿಗಳು ಬಹಳ ಕಡಿಮೆ ಇವೆ ಎಂದು ಸರ್ಕಾರದವರು ಅವುಗಳನ್ನು ಸ್ವಯಂ ರಕ್ಷಣೆ ಮಾಡುತ್ತಿದ್ದಾರೆ.

ಮನುಷ್ಯನು ಮನುಷ್ಯನಾಗಿ, ಪ್ರಾಣಿ ಪ್ರಾಣಿಯಾಗಿಯೇ ಜನ್ಮ ತೆಗೆದುಕೊಳ್ಳುವು ದೆಂದು, ಮನುಷ್ಯನು ಜಂತು ಜನ್ಮದಲ್ಲಿ, ಜಂತು ಮನುಷ್ಯ ಜನ್ಮ ದೊಳಗೆ ಬರುವುದಿಲ್ಲವೆಂಬ ವಾದನೆಯನ್ನು ಬ್ರಹ್ಮ ಕುಮಾರಿ ಸಮಾಜದವರು ಹೇಳುತ್ತಿದ್ದಾರೆ. ಆದರೆ ಅದು ಅಸತ್ಯ. ಶಾಸ್ತ್ರಬದ್ಧವಲ್ಲದ ಮಾತೆಂದು ತಿಳಿಯಬೇಕು.

**84) ನನ್ನ ಸ್ನೇಹಿತನು ದೊಡ್ಡ ಧನಿಕನು, ವ್ಯಾಪಾರಿ, ಒಳ್ಳೆ ಧಾರ್ಮಿಕನು ಸತ್ಯ ಭಾವನೆಗಳಿರುವ ವ್ಯಕ್ತಿ ತಿಳಿದವರೆಲ್ಲರು ಒಳ್ಳೆಯವನೆಂದು ಕೊಂಡಾಡಿದ ಅ ವ್ಯಕ್ತಿ 30 ವರ್ಷಗಳ ವಯಸ್ಸಿನಲ್ಲಿ ಆತನ ಫ್ಯಾಕ್ಟರೀ ಕೂಲಿಗಾರರ ಕೆಲವರಿಂದ ಕೊಲೆ ಆಗಿದ್ದಾನೆ. ಫ್ಯಾಕ್ಟರೀ**

**ಕೂಲಿಗಾರರೆಲ್ಲರೂ ಬಹಳ ಒಳ್ಳೆಯ ವ್ಯಕ್ತಿ ಎಂದು ಬಾಧೆಬಿದ್ದರು, ಇದಕ್ಕೆ ಎಂದರೆ ಈ ಅಕಾಲ ದುರ್ಮರಣಕ್ಕೆ ಕಾರಣ ತಿಳಿಸಬೇಕೆಂದು ಕೋರಿದ್ದೇನೆ?**

**ಉ.** ಪ್ರತಿಯೊಂದು ಕೆಲಸಕ್ಕೂ ಒಂದು ಕಾರಣವಿರುತ್ತದೆ. ಅದನ್ನೆ ಕರ್ಮ ಎನ್ನುತ್ತೇವೆ. ಕರ್ಮವಿಲ್ಲದೆ ಪ್ರಪಂಚದಲ್ಲಿ ಯಾವ ಕಾರ್ಯ ನಡಿಯುವುದಿಲ್ಲ. ನಿನ್ನ ಸ್ನೇಹಿತನ ಹತ್ಯೆಗೆ ಹೊರಗಿನ ರೂಪಗಳು ಎಷ್ಟಿದ್ದರೂ ಎಲ್ಲದಕ್ಕು ಕಾರಣ ಕಣ್ಣಿಗೆ ಕಾಣಿಸದ ಕರ್ಮವೆಂದೇ ತಿಳಿಯಬೇಕು. ನಿಮ್ಮ ಸ್ನೇಹಿತನು ಒಳ್ಳೆಯವನು ಎಂದಿದ್ದೀರಿ. ಆದ್ದರಿಂದ ಎಲ್ಲಾ ವಿಧಗಳಲ್ಲಿ ಆತನಿಗೆ ಈ ಜನ್ಮದಲ್ಲಿ ಪುಣ್ಯವೆ ಬಂದಿರುತ್ತದೆ. ಇಷ್ಟು ಒಳ್ಳೆಯವನಿಗೆ ದಾನ, ದಯೆ ಗುಣಗಳಿರುವವನಿಗೆ ಕೊಲೆಯಾಗುವ ದುಷ್ಕರ್ಮ ಏಕೆ ಹಿಡಿದಿದೆ ಎಂದು ನಿಮ್ಮ ಮನಸ್ಸಿನಲ್ಲಿ ಪ್ರಶ್ನೆ ಉದ್ಭವಿಸಿದೆ. ನಾವು ಮಾಡುವ ಕೆಲಸಗಳಲ್ಲಿ ದುಷ್ಕರ್ಮ, ಸತ್ ಕರ್ಮಎಂದು ಎರಡು ವಿಧಗಳಾಗಿ ಕರ್ಮಗಳಿವೆ. ಅವುಗಳನ್ನೇ ಪಾಪ, ಪುಣ್ಯ ಎನ್ನುತ್ತೇವೆ. ನಿಮ್ಮ ಸ್ನೇಹಿತನು ಈ ಜನ್ಮದಲ್ಲಿ ನಿಮ್ಮ ಮಾತಿನ ಪ್ರಕಾರ ಪುಣ್ಯವನ್ನೇ ಹೊಂದಿರಬಹುದು. ಈ ಜನ್ಮದ ಪುಣ್ಯ ಫಲ ನಂತರ ಬರುವ ಜನ್ಮಗಳಲ್ಲಿ ಅಚರಣೆಗೆ ಬರುತ್ತದೆ. ಆದ್ದರಿಂದ ಅತನು ಸಂಪಾದಿಸಿದ ಪುಣ್ಯಕ್ಕೂ, ಹತ್ಯೆಗೂ ಯಾವ ಸಂಬಂಧವೂ ಇಲ್ಲ.

ಹತ್ಯೆಗೆ ಸಂಬಂಧವಿರುವ ಕರ್ಮ ಹಿಂದಿನ ಜನ್ಮಗಳಲ್ಲಿ ಆತನು ಸಂಪಾದಿಸಿಕೊಂಡಿರುವುದೆಂದು ತಿಳಿಯಬೇಕು. ಹಿಂದಿನ ಜನ್ಮಗಳ ಸಂಚಿತ ಈ ಜನ್ಮದ ಪ್ರಾರಬ್ಧವಾಗಿ ಬದಲಾಗಿ ಹತ್ಯಾ ಕಾರ್ಯಕ್ಕೆ ಕಾರಣವಾಗಿದೆ. ವಿವರವಾಗಿ ಹೇಳಬೇಕೆಂದರೆ ನಾವು ಈ ಜನ್ಮದಲ್ಲಿ ಮಾಡಿಕೊಂಡಿರುವ ಪುಣ್ಯವಾಗಲಿ, ಪಾಪವಾಗಲಿ ಈ ಜನ್ಮದಲ್ಲೇ ಅನುಭವಿಸಲಾರೆವು. ಈಗ ಕಣ್ಣಿಗೆ ತಿಳಿಯದಂತೆ ಬರುವ ಪಾಪ ಪುಣ್ಯಗಳು ನಂತರ ಜನ್ಮಗಳಲ್ಲಿ ಅನುಭವಕ್ಕೆ ಬರುತ್ತದೆ. ಈ ಜನ್ಮದಲ್ಲಿ ನಾವು ಅನುಭವಿಸುವ ಸುಖ ದುಃಖಗಳೆಲ್ಲವೂ ಕಳೆದ ಜನ್ಮಗಳಲ್ಲಿ ನಾವು ಸಂಪಾದಿಸಿಕೊಂಡಿರುವವೆಂದೇ ತಿಳಿಯಬೇಕು. ಉದಾಹರಣೆಗೆ ಮೂರು ತಿಂಗಳ ಶಿಶುವಿಗೆ ಭಯಂಕರವಾದ ವ್ಯಾದಿ ಸಂಭವಿಸಿ ಆ ಶಿಶು ವಿಪರೀತ ಬಾಧೆಯನ್ನು ಅನುಭವಿಸುತ್ತಿದ್ದಾನೆ, ನಿಜವಾಗಿ ಆ ಶಿಶು ಈ ಜನ್ಮದಲ್ಲಿ ಯಾವ ಕಾರ್ಯವೂ ಮಾಡಿಲ್ಲ. ಪಾಪವಾಗಲಿ, ಪುಣ್ಯವಾಗಲಿ ಸಂಪಾದಿಸಿಕೊಂಡಿಲ್ಲ. ಈ ಜನ್ಮದಲ್ಲಿ ಯಾವ ಪಾಪವು ಮಾಡದವನಿಗೆ ಭಯಂಕರವಾದ ಬಾಧೆ ಏಕೆ ಬಂದಿದೆಯೆಂದು ಯೋಚಿಸಿದರೆ ಹಿಂದಿನ ಜನ್ಮದ ಕರ್ಮವೇ ಕಾರಣವೆಂದು ತಿಳಿಯುತ್ತಿದೆ. ಈ ವಿಧವಾಗಿ ಈ ಜನ್ಮದಲ್ಲಿನ ಪ್ರತಿಯೊಂದು ಸಂಘಟನೆ ಹಿಂದಿನ ಜನ್ಮದಲ್ಲಿನ ಕರ್ಮ ಕಾರಣದಿಂದಲೇ ನಡೆಯುತ್ತಿವೆ.

ಬಹುಶ ಕೆಲವು ಜನ್ಮಗಳ ಹಿಂದೆ ನಿಮ್ಮ ಸ್ನೇಹಿತನು ಈ ಜನ್ಮದಲ್ಲಿನ ಸಂಘಟನೆಗೆ ಕಾರಣವಾದ ಕರ್ಮ ಸಂಪಾದಿಸಿರಬಹುದು. ಅದು ಕಾಲಕ್ರಮವಾಗಿ ಈ ಜನ್ಮದಲ್ಲಿ ಅನುಭವಕ್ಕೆ ಬಂದಿದೆ. ಎಷ್ಟು ಒಳ್ಳೆಯವನಿಗಾದರೂ ಹಿಂದಿನ ಜನ್ಮಗಳ ಪಾಪ ಫಲದಿಂದ ಕಷ್ಟಗಳು ಎಂತಹ ಕೆಟ್ಟವನಿಗಾದರು ಹಿಂದಿನ ಜನ್ಮಗಳ ಪುಣ್ಯ ಫಲಗಳಿಂದ ಸುಖಗಳು ಅನುಭವಿಸುವುದು ನಾವು ನೋಡುತ್ತಿರುವ ಸತ್ಯವೆ ಅಲ್ಲವೆ!

ಒಂದು ಕಡೆ ಅನುಭವಕ್ಕೆ ಬಂದು ಕರ್ಮ ಮುಗಿಯುತ್ತಿದ್ದರೆ ಮತ್ತೊಂದು ಕಡೆ ಹೊಸ ಕರ್ಮವನ್ನು ಮಾನವನು ಸಂಪಾದಿಸಿಕೊಳ್ಳುತ್ತಿದ್ದಾನೆ. ಆದ್ದರಿಂದ ಕರ್ಮ ಕಾರಣದಿಂದಲೇ ನಡೆದ ಹತ್ಯೆ ಕಾರ್ಯದಲ್ಲಿ ಹತ್ಯೆ ಮಾಡಿದವರು ಸಹ ಕರ್ಮ ಸಂಪಾದಿಸಿಕೊಳ್ಳುವುದು ನಡೆದಿರುತ್ತದೆ. ಮತ್ತೇ ಆ ಕರ್ಮ ಬರುವ ಜನ್ಮಗಳಲ್ಲಿ ಅವರನ್ನೂ ಸಹ ಹತ್ಯೆಗೆ ಗುರಿ ಮಾಡುತ್ತದೆ. ಇದು ಕರ್ಮ ಸಿದ್ಧಾಂತ. ಕರ್ಮದಿಂದ ನಡೆಯುವ ಪ್ರತಿಯೊಂದು ಕೆಲಸವನ್ನು ತಾನೇ ಮಾಡುತ್ತಿದ್ದೇನೆಂದು ಭಾವಿಸುವ ಪ್ರತಿಯೊಬ್ಬರಿಗೂ ಹೊಸ ಕರ್ಮ ಬರುತ್ತಲೇ ಇರುತ್ತದೆಂದು ಯೋಗಶಾಸ್ತ್ರ ತಿಳಿಸುತ್ತಿದೆ. ಹಾಗಲ್ಲದೆ ಕರ್ಮಯೋಗವನ್ನಾಚರಿಸುತ್ತಾ ಪ್ರಪಂಚದಲ್ಲಿ ಯಾವ ಕಾರ್ಯವನ್ನು ಮಾಡಿದರೂ ಕೊನೆಗೆ ಹತ್ಯೆ ಮಾಡಿರುವ ಕರ್ಮ ಅಂಟುವುದಿಲ್ಲವೆಂದು ಯೋಗ ಶಾಸ್ತ್ರವೇ ತಿಳಿಸುತ್ತಿದೆ. ಹತ್ಯೆ ಮಾಡಿದವರು ಬಹುಶ ಕರ್ಮ ಯೋಗಿಗಳಾಗಿ ಇರುವುದಿಲ್ಲ ಎಂದುಕೊಳ್ಳುತ್ತೇನೆ ಆದ್ದರಿಂದ ಅವರಿಗೆ ಮತ್ತೆ ಕರ್ಮ ಬಂಧನವಿರುತ್ತದೆ.

ನೀವು ಹೇಳುವ ವಿಧಾನವನ್ನನುಸರಿಸಿ ನಿಮ್ಮ ಸ್ನೇಹಿತನು ಅಕಾಲ ಮರಣವನ್ನು ಹೊಂದಿದ್ದಾನೆ. ಆದ್ದರಿಂದ ಆತನಿಗೆ ಕಾಲಮರಣ ಸಂಭವಿಸುವವರೆಗು ಬೇರೆ ಜನ್ಮಕ್ಕೆ ಹೋಗದೆ ಸೂಕ್ಷ್ಮರೂಪವಾಗಿ ಈ ಜನ್ಮದಲ್ಲೇ ಇರುತ್ತಾನೆ. ಆತನ ದೃಷ್ಟಿಗೆ ನೀವು ಕಾಣಿಸುತ್ತಲೇ ಇರುತ್ತೀರ. ಆದರೆ ಆತನು ನಿಮ್ಮ ಕಣ್ಣಿಗೆ ಕಾಣಿಸುವುದಿಲ್ಲ. ಅಷ್ಟು ಮಾತ್ರಕ್ಕೆ ಆತನು ಇಲ್ಲವೆಂದುಕೊಳ್ಳಬೇಡಿ. ಆತನು ನಿಮ್ಮ ಮಧ್ಯದಲ್ಲೇ ಇರುತ್ತಾನೆ.

**ಆದಿಮೂಲಮ್ ರೆಡ್ಡಿ, ಪೆದ್ದಮಿಟ್ಟೂರು, ತಮಿಳನಾಡು**

**85) ರುದ್ರಾಕ್ಷ ಕಾಯಿಗಳನ್ನು ಧರಿಸುವುದರಿಂದ ಲಾಭವೇನು?**

**ಉ.** ರುದ್ರ ವೆಂದರೆ ನಾಶ. ರುದ್ರ ಭೂಮಿ ಎಂದರೇ ಶರೀರಗಳು ನಾಶನವಾಗುವ ಭೂಮಿ, ಎಂದರೆ ಸ್ಮಶಾನ. ರುದ್ರನೆಂದರೆ ರುದ್ರ ಭೂಮಿಯಲ್ಲಿ ಸಂಚರಿಸುವವನು ಶಂಕರನು (ಶಿವ) ಎಂದು ಅರ್ಥ. ರುದ್ರ ಭೂಮಿಯಲ್ಲಿ ಭೂತ, ಪ್ರೇತ, ಪಿಶಾಚಿಗಳು, ಯಕ್ಷ ಕಿನ್ನರ

ಕಿಂಪುರುಷರು, ಗರುಡ ಗಂಧರ್ವ ಗ್ರಹಗಳು, ಮುಂತಾದವು ನಿವಾಸ ಮಾಡುತ್ತಿವೆ. ಅವೆಲ್ಲವುಗಳಿಗೆ ರುದ್ರನು ಅಧಿಪತಿ. ಆ ರುದ್ರನು ಧರಿಸಿದ ಮಣಿಗಳನ್ನು ರುದ್ರಾಕ್ಷಗಳೆಂದು ಕರೆಯುತ್ತಾರೆ. ಆ ರುದ್ರಾಕ್ಷಗಳನ್ನು ನಾವು ಧರಿಸುವುದರಿಂದ ಪಿಶಾಚಿ ಗಣಗಳ ಬಾಧೆ ಇರುವುದಿಲ್ಲವೆಂದು ಪೂರ್ವಜರು ತಿಳಿದುಕೊಳ್ಳುತ್ತಿದ್ದರು. ರುದ್ರಾಕ್ಷಗಳನ್ನು ಪಿಶಾಚಿಗಣಗಳು ರುದ್ರನೊಂದಿಗೆ ಸಮಾನವಾಗಿ ನೋಡಿಕೊಳ್ಳುತ್ತವೆಂದು ಪೂರ್ವದಲ್ಲಿ ಎಂದುಕೊಳ್ಳುತ್ತಿದ್ದರು. ರಕ್ಷಣೆ ನಿಮಿತ್ತ ರುದ್ರನ ಹೆಸರೊಂದಿಗೆ ಧರಿಸುವ ಕಾಯಿಯಾದ್ದರಿಂದ ಅವನನ್ನು ರುದ್ರಾಕ್ಷ ಎನ್ನುತ್ತಾರೆ. ಒಂದು ಯಂತ್ರವನ್ನು (ತಾಯತವನ್ನು) ಧರಿಸುವುದನ್ನು ಸಹ ರಕ್ಷ ಕಟ್ಟಿಕೊಳ್ಳುವುದೆಂದು ಎನ್ನುತ್ತಾರೆ. ತಾಯತವನ್ನು ಕಟ್ಟಿಕೊಳ್ಳುವುದು ಸಹ ಪಿಶಾಚಿಗಣ ಪೀಡೆಗಳ ನಿವಾರಣೆಗೋಸ್ಕರವೆಂದು ಎಲ್ಲರಿಗೂ ತಿಳಿದಿರುವುದು. ಅಂತಹ ರಕ್ಷಣೆ ನಿಮಿತ್ತವೆ ರುದ್ರಾಕ್ಷವನ್ನು ಕಟ್ಟಿಕೊಳ್ಳುತ್ತಿದ್ದರು. ಆದ್ದರಿಂದ ಅದನ್ನು ರುದ್ರ ರಕ್ಷ ಎಂದೂ ಸಹ ಬಿಡಿಸಿ ಹೇಳುತ್ತಿದ್ದರು. ಅದು ಇರುವುದರಿಂದ ರುದ್ರನೇ ತಮ್ಮ ಬಳಿ ಇದ್ದು ರಕ್ಷಣೆ ಕೊಡುವನೆಂದು ಧೈರ್ಯದಿಂದ ಇರುತ್ತಿದ್ದರು. ಪೂರ್ವದಲ್ಲಿ ಪಿಶಾಚಿ ಬಾಧೆಗಳು ಇರುವವರು ಮತ್ತು ಅವುಗಳಿಗೆ ಭಯಬೀಳುವವರು ಕಟ್ಟುಕೊಳ್ಳುತ್ತಿದ್ದರು. ಕಾಲ ಕಳೆದಂತೆ ಭಾವನೆಗಳು ಬದಲಾಗಿವೆ. ಶಿವನು ಧರಿಸಿದ್ದಾನಲ್ಲವೆ ಎಂದು ಶಿವ ಭಕ್ತರು ಧರಿಸಲು ಪ್ರಾರಂಬಿಸಿದ್ದಾರೆ. ಕಡೆಗೆ ವೇದಾಂತಿಗಳು, ಸ್ವಾಮಿಗಳು ಧರಿಸಲು ಪ್ರಾರಂಭಿಸಿದ್ದಾರೆ. ಇವರೆಲ್ಲರನ್ನು ನೋಡಿದ ಮಾನವನು ರುದ್ರಾಕ್ಷ ಪಿಶಾಚಿ ಗಣ ನಿಮಿತ್ತವೆಂದು ತಿಳಿಯದೆ ರುದ್ರಾಕ್ಷಗಳು ಧರಿಸಿದವರಿಗೆಲ್ಲ ನಮಸ್ಕರಿಸಲು ಶುರು ಮಾಡಿದ್ದಾನೆ. ಈ ವಿಧವಾಗಿ ರುದಾಕ್ಷ ಅರ್ಥ ಯಾವಾಗಲೋ ಬದಲಾಗಿದೆ. ರುದ್ರಾಕ್ಷಗಳು ಧರಿಸುವುದರಿಂದ ಇನ್ನೂ ಕೆಲವು ಶರೀರ ಅರೋಗ್ಯಗಳು ಸಹ ಗುಣವಾಗುತ್ತವೆ. ಎಲ್ಲವುಕ್ಕಿಂತ ಮುಖ್ಯವಾಗಿ ದೆವ್ವಗಳ ಬಾಧೆ ಭಯಕ್ಕೆ ಅವುಗಳನ್ನು ಬಳಸಬಹುದು. ದೆವ್ವಗಳಿಗೆ ಭಯಬೀಳುವವರು ಬಳಸಿದರೇ ಫರವಾಗಿಲ್ಲ ಆದರೆ ಜ್ಞಾನ ಇರುವವರೂ ಸಹ ರುದ್ರಾಕ್ಷಗಳನ್ನು ಧರಿಸುವುದು ಆಶ್ಚರ್ಯವಾಗುತ್ತದೆ. ಒಬ್ಬರು ಧರಿಸುವುದನ್ನು ನೋಡಿ ಇನ್ನೊಬ್ಬರು ಧರಿಸುತ್ತಿದ್ದಾರೆ. ಆದರೆ ನಿಜವಾದ ಅರ್ಥ ತಿಳಿದು ಧರಿಸುತ್ತಿಲ್ಲ.

**ಕೆ. ಸೀತಾರಾಮಯ್ಯ, ಶ್ರೀ ರಾಮುಲ ಪೆಟ, ಪ್ರೊದ್ದುಟೂರು**

**86) ಪೂರ್ವ ಜನ್ಮದಲ್ಲಿನ ಕರ್ಮಗಳು ಈ ಜನ್ಮದಲ್ಲಿ ಅನುಭವಿಸದೆ ತಪ್ಪುವುದಿಲ್ಲವೆಂಬ ವಿಷಯ ಸತ್ಯ, ಆದರೆ ಈ ಜನ್ಮದಲ್ಲಿ ದೈವ ಕಾರ್ಯಗಳಾಗಲಿ ಮಾನವನಿಗೆ ಕಷ್ಟದಲ್ಲಿ ಒಳ್ಳೆಯದು ಮಾಡಿದರೂ, ಒಳ್ಳೆ ಕಾರ್ಯಗಳು ಆಗಲಿ ಇನ್ನೂ ಮನೋನಿಷ್ಠೆಯಿಂದ ಮಾಡಿದ**

**ಜಪತಪಗಳಿಂದ ಈ ಜನ್ಮದಲ್ಲಿನ ಕರ್ಮ ತೀವ್ರತೆ ಸ್ಥಗಿತವಾಗುವುದಿಲ್ಲವೆ? ಮಾಡಿರುವ ಪಾಪ ಈ ಜನ್ಮದಲ್ಲಿ ಮಾಡಿರುವ ಸತ್ಕರ್ಮ ಪುಣ್ಯದಿಂದ ಕಡಿಮೆ ಯಾಗುವುದಿಲ್ಲವೆ? ಪಾಪಕ್ಕೆ ಪುಣ್ಯ ಸರಿಮಾಡಬಹುದಾ! ತಪ್ಪದೇ ಪಾಪವನ್ನು ಅನುಭವಿಸಲೇಬೇಕಾ?**

ಉ. ಈ ಜನ್ಮದಲ್ಲಿ ಒಳ್ಳೆದು ಮಾಡಿದರೇ ಪುಣ್ಯ, ಕೆಡಕು ಮಾಡಿದರೆ ಪಾಪ ಸಂಭವಿಸುತ್ತವೆ. ಈ ಜನ್ಮದಲ್ಲಿ ಎಷ್ಟು ಸತ್ಕರ್ಮ ಪುಣ್ಯವನ್ನು ಮಾಡಿಕೊಂಡರು ಅದು ವರಸೆ ಕ್ರಮದಲ್ಲಿ ಸೇರಿ ನಂತರ ಅನುಭವಕ್ಕೆ ಬರುತ್ತದೆ. ಪಾಪಕ್ಕೆ ಪುಣ್ಯವನ್ನು ಸರಿ ಮಾಡುವುದು ಕರ್ಮ ಸಿದ್ಧಾಂತದಲ್ಲಿ ಇಲ್ಲ. ಟೇಪ್‌ರಿಕಾರ್ಡರ್‌ನಲ್ಲಿ ಶಬ್ದವು ರಿಕಾರ್ಡ್ ಆದಹಾಗೇ ಕರ್ಮಚಕ್ರದಲ್ಲಿ ಕರ್ಮ ರಿಕಾರ್ಡ್ ಆಗುತ್ತಿರುತ್ತದೆ. ಟೇಪು ತಿರುಗುತ್ತಿದ್ದರೆ ಮೊದಲು ಹಾಡಿರುವ ಹಾಡು ಮೊದಲು ಹಿಂದೆ ಹಾಡಿದ ಹಾಡು ಹಿಂದೆ ಬರುವಹಾಗೆ, ಮುಂಚೆ ಮಾಡಿಕೊಂಡ ಪಾಪ ಕಷ್ಟರೂಪವಾಗಿ ಅನುಭವಿಸಿದ ನಂತರ ಈಗ ಮಾಡಿಕೊಂಡ ಪುಣ್ಯವು ನಂತರ ಜನ್ಮದಲ್ಲಿ ಸುಖ ಅನುಭವವಾಗಿ ತಟಸ್ಥಿಸುತ್ತದೆ. ಈ ಜನ್ಮದಲ್ಲಿ ಎಷ್ಟು ದೈವಾರಾದನೆ ಮಾಡಿದರು, ಎಷ್ಟು ಪುಣ್ಯಕಾರ್ಯಗಳು ಮಾಡಿದರು ಹಿಂದಿನ ಜನ್ಮದ ಕರ್ಮವನ್ನು ಎಳ್ಳಷ್ಟು ಕಡಿಮೆ ಮಾಡಿಕೊಳ್ಳಲಾರೆವು. ಕರ್ಮವನ್ನು ನಾಶಮಾಡುವುದು ಜ್ಞಾನಾಗ್ನಿಯೊಂದು ಹೊರತು ಮತ್ತೊಂದು ಇಲ್ಲ. ಕರ್ಮನಾಶದ ವಿವರ ತಿಳಿಯಬೇಕೆಂದರೆ ನಮ್ಮ ರಚನೆಗಳಲ್ಲಿ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಯನ್ನು ಓದಿ.

**87. ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮ "ಚಾತುರ್ವರ್ಣಂ ಮಯಾ ಸೃಷ್ಟಂ ಗುಣ ಕರ್ಮ ವಿಭಾಗ ಶಃ" ಎಂದಿದ್ದಾನೆ. ಶ್ರೀ ಸ್ವಾಮಿಯವರೂ ಸಹ ಕುಲ,ಮತಗಳನ್ನು ನಾವು ಏರ್ಪಡಿಸಿಕೊಂಡಿರುವವೆಂದು ಬರೆದಿದ್ದಾರೆ. ಆದರೆ "ಚಾತುರ್ವರ್ಣಂ ಮಯಾ ಸೃಷ್ಟಂ" ಎನ್ನುವದನ್ನು ವಿವರಿಸಬೇಕೆಂದು ಕೋರುತಿದ್ದೇವೆ?**

ಉ. **"ಚಾತುರ್ವರ್ಣಂ"** ಎಂದು ಗೀತೆಯಲ್ಲಿ ದೇವರು ಹೇಳಿದ್ದಾನೆ. ವಾಸ್ತವವೇ ನಾವು ಸಹ ಒಪ್ಪಿಕೊಳ್ಳುತ್ತೇವೆ. ಆತನು ಹೇಳಿರುವ ಮಾತಲ್ಲಿ ನಾಲ್ಕು ಇಂತಹ ಕುಲಗಳೆಂದು ಮಾತ್ರ ಇಲ್ಲ ಅಲ್ಲವೆ!. ಆ ಶ್ಲೋಕದಲ್ಲಿ ಇಲ್ಲದ ಕುಲಗಳನ್ನು ನಾವೇ ಊಹಿಸಿಕೊಂಡು ಹೆಸರಿಟ್ಟುಕೊಳ್ಳುವುದಲ್ಲದೆ ಮೇಲಾಗಿ ಆತನು ಹೇಳಿದ್ದಾನೆಂದು ದೇವರನ್ನು ನಿಂದಿಸುವುದು ಒಳ್ಳೆಯದಾ? ಆತನು ಆ ವರ್ಣಗಳನ್ನು ಸಹ **"ಗುಣಕರ್ಮ ವಿಭಾಗಶಃ"** ಎಂದಿದ್ದಾನೆ. **"ಕಾರ್ಯವಿಭಾಗಶಃ"** ಅನ್ನಲಿಲ್ಲ. ಈ ಶ್ಲೋಕವೆ ಅಲ್ಲ ಗೀತೆಯಲ್ಲಿ ಬಹಳ ಭಾಗ ಭೂಮಿಯ ಮೇಲೆ ಇಲ್ಲಿಯವರೆಗು ಯಾರಿಗೂ ಅರ್ಥವಾಗಿಲ್ಲವೆಂದು ನಮ್ಮ ಭಾವನೆ. ನಾವು

ಆಪಾದಿಸಿಕೊಂಡ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರ ಕುಲಗಳು ಅಲ್ಲದೇ ಚಾತುರ್ವರ್ಣ್ಯಂ ಎನ್ನುವ ಪದದ ಭಾವ ಏನೆಂದು ನಿಮಗೆ ಸಂಶಯ ಬಂದಿರಬಹುದು

ನಮ್ಮ ಶರೀರದಲ್ಲಿ ಕರ್ಮ ಇರುವುವು, ಕರ್ಮ ಇಲ್ಲದಿರುವುದು ಒಟ್ಟು ನಾಲ್ಕು ಭಾಗಗಳಿವೆ. ಕರ್ಮ ಇರುವವು ಮೂರು, ಕರ್ಮ ಇಲ್ಲದಿರುವುದು ಒಂದು. ಈ ಒಟ್ಟು ನಾಲ್ಕು ಭಾಗಗಳನ್ನು ಗುರುತಿಸುವುದಕ್ಕೆ ಅವಕಾಶ ಇರುವ ನವಿಲು ಗರಿಯನ್ನು ಕೃಷ್ಣನು ಧರಿಸಿ ತೋರಿಸಿದ್ದಾನೆ. ಇವುಗಳನ್ನೇ ಹೊರಗಿನಿಂದ 1. ತಾಮಸ ಗುಣ ಭಾಗ, 2. ರಾಜಸ ಗುಣ ಭಾಗ 3. ಸಾತ್ವಿಕ ಗುಣ ಭಾಗ 4. ಗುಣ ರಹಿತ (ಆತ್ಮ) ಭಾಗ ಎನ್ನುತ್ತೇವೆ. ಇವನ್ನು ಕರ್ಮ ಗುಣಗಳಿಂದ ವಿಭಾಗಿಸಿ ಹೇಳಿಕೊಳ್ಳುತ್ತಿದ್ದೇವೆ. ಆದ್ದರಿಂದಲೆ **"ಗುಣ ಕರ್ಮ ವಿಭಾಗಶಃ"** ಎಂದು ಗೀತೆಯಲ್ಲಿ ಹೇಳಿದ್ದಾರೆ. ನಮ್ಮ ಶರೀರದಲ್ಲಿನ ನಾಲ್ಕು ಭಾಗಗಳನ್ನು ಚಿತ್ರ ಪಟದಲ್ಲಿ ನೋಡಬಹುದು. ಹೊರಗಿಂದ ಮೊದಲನೆಯದು ತಾಮಸ ಗುಣಭಾಗ, ಎರಡನೆಯದು ರಾಜಸ ಗುಣಭಾಗ, ಮೂರನೆಯದು ಸಾತ್ವಿಕ ಗುಣಭಾಗ ನಾಲ್ಕನೆಯದು ಗುಣ ರಹಿತ ಭಾಗ ಮೂರು ಭಾಗಗಳಲ್ಲಿ ಗುಣಗಳಿರುವವು, ನಾಲ್ಕನೆಯ ಭಾಗದಲ್ಲಿ ಆತ್ಮ ಇರುವುದು. ಇವುಗಳನ್ನನುಸರಿಸಿ ಮನುಷ್ಯರನ್ನು ನಾಲ್ಕು ವರ್ಣಗಳಾಗಿ ವಿಭಜಿಸಬಹುದು. 1. ತಾಮಸರು 2. ರಾಜಸರು 3. ಸಾತ್ವಿಕರು 4. ಯೋಗಿಗಳು.




**ಗುಣ ಚಕ್ರ**

ಇವುಗಳೇ ದೇವರು ಹೇಳಿರುವ ನಾಲ್ಕು ವರ್ಣಗಳು. ಇವುಗಳನ್ನೇ ದೇವರು ನವಿಲು ಗರಿಯಿಂದ ತೋರಿಸಿರುವ ನಾಲ್ಕು ವರ್ಣಗಳು.

ದೇವರು ಏನು ತಿಳಿಸಿದರೂ ಜ್ಞಾನಪರವಾಗಿ ತಿಳಿಸುವನು ಆದರೆ, ಮಾನವರು ಏರ್ಪಡಿಸಿಕೊಂಡ ಕುಲ ಮತಗಳನ್ನು ತಿಳಿಸುವನಾ! ಅತನೇ ಮಾನವರಲ್ಲಿ ಕುಲ ಭೇದಗಳು ಕಲ್ಪಿಸಿ ಇವನಿಗೆ ಒಳ್ಳೆ ಕೆಲಸ, ಇವರಿಗೆ ಕೆಟ್ಟ ಕೆಲಸವೆಂದು ನಿರ್ಣಯಿಸುವನಾ!! ದೇವರು ಏನು ತಿಳಿಸಿದರೂ ಉನ್ನತ ವಿಷಯಗಳನ್ನೆ ತಿಳಿಸುವನು.

**88) ಗೃಹ ವಾಸ್ತು ಶಾಸ್ತ್ರವೊಂದರ ಫಲಿತಗಳು ಗೃಹ ಯಜಮಾನನ ಜೀವನದ ಮೇಲೆ ಕೆಲಸ ಮಾಡುತ್ತವಾ? ಗೃಹ ಯಜಮಾನನ ಜಾತಕ ಚೆನ್ನಾಗಿದ್ದರೆ ಮನೆಯ ವಾಸ್ತು ದೋಷಗಳು ಯಜಮಾನನ ಜೀವನದ ಮೇಲೆ ಕೆಲಸ ಮಾಡುತ್ತವೆಯಾ?**

ಉ. ಮಾನವನು ಹುಟ್ಟಿದಾಗಿನಿಂದ ಮರಣಿಸುವವರೆಗೂ ಪ್ರಾರಬ್ದ ಕರ್ಮ ಅಧೀನದಲ್ಲಿ ಇರುವನು. ಪ್ರತಿ ಕ್ಷಣವು ಪ್ರತಿಯೊಂದು ಕೆಲಸವನ್ನು ಕರ್ಮವೇ ನಡೆಸುತ್ತದೆ. ಯೋಗ ಶಾಸ್ತ್ರರೀತ್ಯ ಜೀವಿಯನ್ನು ಸುಖದಲ್ಲಿ ಇಡುವುದಕ್ಕೂ ಕಷ್ಟದಲ್ಲಿಡುವುದಕ್ಕೂ ಕರ್ಮವೇ ಕಾರಣವಾಗಿರುವಾಗ ಗೃಹ ಫಲಿತ ಮಾನವನ ಸುಖ ದುಃಖಗಳಿಗೆ ಕಾರಣವೆನ್ನುವುದು ಪೂರ್ತಿ ಅಸತ್ಯ. ಮಾನವನ ಜಾತಕವನ್ನು ಯಾವ ಫಲಿತಗಳು ಯಾವ ದೋಷಗಳು ಬದಲಾಯಿಸಲಾರವು. ಹಾಗೆ ಬದಲಾಯಿಸುವ ಶಕ್ತಿ ಮಾನವನ ಕೈಯಲ್ಲಿದ್ದರೆ ಕರ್ಮದಿಂದ ಕೆಲಸವಿಲ್ಲದೆ ತಮ್ಮಷ್ಟಕ್ಕೆ ತಾವೇ ಜೀವನವನ್ನು ಸುಖವಾಗಿ ಮಾಡಿಕೊಳ್ಳಬಹುದು ಅಲ್ಲವೆ! ನಡೆಯುತ್ತಿರುವವರೆಗೂ ತನ್ನ ಬುದ್ದಿ ದೊಡ್ಡದೆಂದು, ನಡೆಯದಿರುವಾಗ ಕರ್ಮವೆಂಬ ಮಾನವನು ಸೃಷ್ಟಿಸಿಕೊಂಡ ಗೃಹಗಳು ಜಾತಕಗಳನ್ನು ಬದಲಾಯಿಸುತ್ತವೆ ಎನ್ನುವ ಮಾತು ಹಾಸ್ಯಾಸ್ಪದ. ಕರ್ಮವನ್ನು ಹೊರತು ಯಾವ ಫಲಿತಗಳು ಮಾನವನನ್ನು ಬದಲಾಯಿ ಸಲಾರವು. **"ಸರ್ವಂ ಕರ್ಮಮಯಂ"** ಎಂದು ತಿಳಿಯಬೇಕು.

**89) ವಾಸ್ತು ಶಾಸ್ತ್ರ ದೋಷವಿದ್ದರೆ ಆ ಮನೆ ಬಿಡಬೇಕೆ? ಆ ದೋಷಗಳಿಗೆ ಯಾವುದಾದರೂ ಪರಿಹಾರವಿದೆಯಾ? ಮತ್ಸ್ಯ ಕೂರ್ಮ ಯಂತ್ರಗಳಿಂದ ದೋಷಗಳನ್ನು ಪರಿಹಾರ ಮಾಡಬಹುದಾ?**

ಉ. ವಾಸ್ತು ಶಾಸ್ತ್ರವೆನ್ನುವುದು ಜ್ಯೋತಿಷ್ಯ ಶಾಸ್ತ್ರದಲ್ಲಿನ ಒಂದು ಭಾಗ. ಅದು ಅಳತೆ, ಆಯಗಳು, ಮೂಲೆಗಳು ಎನ್ನುವ ಪದ್ಧತಿಯಲ್ಲಿ ಇರುವುದಿಲ್ಲ. ಮಾನವನ

ವಾಸ್ತು ಜಾತಕ ಚಕ್ರದಲ್ಲಿ ನಿರ್ಣಯಿಸಿ ಇರುತ್ತದೆ. ಅದನ್ನನುಸರಿಸಿ ಇವನಿಗೆ ಇಂತಹ ಮನೆ ಇರುತ್ತದೆಂದು ಹೇಳಬಹುದು. ಒಂದು ವೇಳೆ ಜಾತಕದಲ್ಲಿ ವಾಸ್ತು ದೋಷವಿದ್ದರೆ ಇವನ ಮನೆ ಸರಿಇರುವುದಿಲ್ಲ. ಅದರಲ್ಲಿ ಸೌಕರ್ಯಗಳು ಇರುವುದಿಲ್ಲವೆಂದು ಸಹ ಹೇಳಬಹುದು. ವಾಸ್ತು ದೋಷಗಳಿದ್ದರೆ ಜಾತಕದಲ್ಲೇ ಇರುತ್ತವೆ. ಅಂತಹ ದೋಷ ವಿದ್ದರೆ ಅವು ತಪ್ಪದೆ ನಡೆಯುತ್ತವೆ. ಯಾವ ಮಾನವನು ತಪ್ಪಿಸಿಕೊಳ್ಳಲಾರನು. ಕೆಲವರು ಮನೆಯಲ್ಲಿ ದೋಷವಿದೆ ಯೆಂದು ಅವನ್ನು ಶಾಂತಿಗಳಿಂದ ಇಲ್ಲದೆ ಅಳತೆ, ಮೂಲೆಗಳು ಬದಲಾಯಿಸುವುದರಿಂದ ಸರಿಮಾಡಬಹುದು ಎನ್ನುತ್ತಿರುತ್ತಾರೆ. ಜಾತಕ ಚಕ್ರದಲ್ಲಿ ಕರ್ಮ ಸರಿ ಇಲ್ಲದವರೆಗೂ ಯಾರೂ ಯಾವ ಶಾಂತಿಗಳಿಂದಲೂ, ಯಾವ ಯಂತ್ರಗಳಿಂದಲೂ ಅವನ್ನು ನಿವಾರಿಸಲಾರರು. ಯಂತ್ರಗಳು ಭೂತ ಪ್ರೇತ ಪಿಶಾಚಿಗಳ ಮೇಲೆ ಕೆಲಸ ಮಾಡುತ್ತದೆ. ಆದರೆ ಮನೆ ಯಜಮಾನ ಜಾತಕ ಚಕ್ರದ (ಕರ್ಮ ಚಕ್ರ) ಮೇಲೆ ಕೆಲಸ ಮಾಡುವುದಿಲ್ಲ.

ಕೆಲಸ ವಿಲ್ಲದ ಪಂಡಿತರು ಕೆಲವರು ವಾಸ್ತುಶಾಸ್ತ್ರವೆಂದು ಒಂದನ್ನು ಸೃಷ್ಟಿಸಿ ಅದಕ್ಕೆ ಬೀದಿಗಳು, ಸಂದಿಗಳು, ಮೂಲೆಗಳು, ಅಳತೆಗಳು, ಹೆಚ್ಚು ತಗ್ಗುಗಳೆಂದು ಹೇಳಿ ಮನುಷ್ಯನಿಗೆ ಅನುಮಾನಗಳನ್ನು ಕಲ್ಪಿಸಿ, ಅದನ್ನು ಸರಿ ಮಾಡುವುದಕ್ಕೆ ಅವುಗಳ ವಿವರ ತಿಳಿದವರು ನಾವಿದ್ದೇವೆಂದು ಕುರುಡರಾಗಿ ನಂಬುವ ಪ್ರಜೆಗಳನ್ನು ತಮ್ಮ ಸುತ್ತಲೂ ತಿರುಗಿಸಿಕೊಳ್ಳುತ್ತ ವ್ಯಾಪಾರ ಜೀವನವನ್ನು ನಡೆಸುತ್ತಿದ್ದಾರೆ.

ಸ್ಥಾನ ಬಲವಾಗಲಿ, ತನ್ನ ಬಲ ಅಲ್ಲವೆಂದು ವೇಮನ ಹೇಳಿರುವ ಪದ್ಯಗಳನ್ನು ಸಹ ಪ್ರಮಾಣವಾಗಿ ತೊರಿಸುತ್ತಾ, ತನ್ನ ಜಾತಕ ಬಲಕ್ಕಿಂತಲೂ ಸ್ಥಾನವಾದ ಮನೆ ಬಲ ದೊಡ್ಡದೆಂದು ಬುಕಾಯಿಸುತ್ತಾರೆ. ತಾನೆಂದರೆ ಜೀವಾತ್ಮನಾ? ಅಥವಾ ಶರೀರವಾ? ಶರೀರವು ನಿವಾಸಿಸುವುದು ಮನೆಯಾದರೆ, ಜೀವಾತ್ಮ ಶರೀರದಲ್ಲಿನ ಗುಣಚಕ್ರದಲ್ಲಿ ನಿವಾಸವಿರುವನು. ವೇಮನ ಹೇಳಿರುವುದು ಶರೀರಕ್ಕಾ, ಒಳಗಿರುವ ಜೀವಾತ್ಮಕ್ಕಾ ಎಂದು ತಿಳಿಯದವರು ಆತನ ಪದ್ಯಗಳನ್ನು ಏಕೆ ಬಳಸಿಕೊಳ್ಳಬೇಕು? ವೇಮನ ಹೇಳಿರುವುದು ಜಾತಕ ಚಕ್ರದಲ್ಲಿನ 12 ಸ್ಥಾನಗಳ ಬಲವೇ ಆಗಲಿ ಬಾಹ್ಯವಿರುವ ಮನೆ ಬಲವಲ್ಲ. ಜ್ಯೋತಿಷ್ಯ ಶಾಸ್ತ್ರದಲ್ಲಿ 4ನೇ ಮನೆಯಲ್ಲಿ ಗುರುವು, 5ನೇ ಮನೆಯಲ್ಲಿ ಶನಿ ಎನ್ನುವುದು ಅಥವಾ 4ನೇ ಸ್ಥಾನದಲ್ಲಿ ಗುರುವು, 5ನೇ ಸ್ಥಾನದಲ್ಲಿ ಶನಿ ಎನ್ನುವುದು ಕೇಳಿದ್ದೇವೆ ಅಲ್ಲವೆ! ಮನೆ, ಸ್ಥಾನ ಎಂದರೆ ಮೇಷ ವೃಷಭಾದಿ ಸ್ಥಾನಗಳನ್ನೇ ಮನೆಗಳೆಂದು ತಿಳಿಯಬೇಕು.

ವಾಸ್ತು ಶಾಸ್ತ್ರೀಯವಾದುದಲ್ಲ. ಆದ್ದರಿಂದ ಜ್ಯೋತಿಷ್ಯ ಶಾಸ್ತ್ರಕ್ಕೆ ಸಂಬಂಧವಿಲ್ಲ. ಪ್ರತ್ಯೇಕ ಶಾಸ್ತ್ರವಾಗಿ ಹುಟ್ಟಿರುವ ಗೃಹ ವಾಸ್ತುಶಾಸ್ತ್ರ ಸಿದ್ಧಾಂತಗಳೊಂದಿಗೆ ಕೂಡಿಕೊಂಡಿರು ವುದು ಅಲ್ಲವೆ ಅಲ್ಲ. ಇದು ನಿರೂಪಣೆಗೆ ಬಾರದ ಮಾತುಗಳಿಂದ ಕೂಡಿಕೊಂಡಿರುವುದು. ಆದ್ದರಿಂದ ಇದು ಶಾಸ್ತ್ರವಲ್ಲ. ಮಾನವನ ಮನೆಯೊಂದರ ವಿಷಯ ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಜಾತಕ ಕುಂಡಲಿಯಲ್ಲೇ ಇರುತ್ತದೆಂದು, ಅದರಿಂದಲೇ ಮನೆ ಫಲಿತಗಳು, ದೋಷಗಳು ಗ್ರಹಿಸಲಾಗುತ್ತದೆಂದು ತಿಳಿಯಬೇಕು.

**90) ಮಾನವನು ಮಾಡಿಕೊಂಡ ಕರ್ಮದಿಂದ ಜನ್ಮ ಬರುತ್ತದೆ. ಹಿಂದಿನ ಕರ್ಮದಿಂದ ಈ ಜನ್ಮದಲ್ಲಿ ಫಲಿತಗಳು ನಡೆಯುತ್ತಿವೆ ಎಂದು ತಮ್ಮಂತಹ ಮಹಾತ್ಮರು ಹೇಳುತ್ತಾರೆ. ಅಂತಹ ಪರಿಸ್ಥಿತಿಗಳಲ್ಲಿ ಗೃಹವಾಸ್ತು ದೋಷ ಮನುಷ್ಯನ ಜೀವನದಲ್ಲಿ ಜನ್ಮತಃ ಬಂದಿರುವ ಕರ್ಮಗಳ ಮೇಲೆ ಕೆಲಸ ಮಾಡುತ್ತದಾ?**

**ಉ.** ಕರ್ಮ ಸಿದ್ಧಾಂತಗಳ ಪ್ರಕಾರ ಕರ್ಮದಿಂದ ಜನ್ಮ, ಕರ್ಮ ದಿಂದ ಜನ್ಮದಲ್ಲಿನ ಸುಖ ದುಃಖಗಳು ಮೊದಲಾದ ಜೀವನವಿರುತ್ತದೆ. ಅಂತಹ ಪರಿಸ್ಥಿತಿಯಲ್ಲಿ ಜನ್ಮತಃ ಬಂದಿರುವ ಕರ್ಮವನ್ನು ಯಾರೂ ಬದಲಾಯಿಸಲಾರರು. ಯಾವ ದೋಷ ನಿವಾರಣೆಗಳು ಮಾನವನ ಕರ್ಮದ ಮೇಲೆ ಕೆಲಸ ಮಾಡುವುದಿಲ್ಲ. ಇದಕ್ಕೂ ಮೊದಲು ಹೇಳಿದ್ದೇವಲ್ಲ ಅಸಲು ವಾಸ್ತು ದೋಷಗಳು ಇಲ್ಲ. ಕರ್ಮ ದೋಷಗಳೇ ಮಾನವನಿಗಿರುವವೆಂದು, ನನಗೆ ತಿಳಿದ ಒಂದು ವಿಷಯ ಉದಾಹರಣೆಗೆ ತಿಳಿಸುತ್ತಿದ್ದೇನೆ. ಒಂದು ಗ್ರಾಮದಲ್ಲಿ ಒಬ್ಬ ಧನಿಕನಿಗೆ ಕರ್ಮ ಪ್ರಕಾರ ಕಷ್ಟಗಳು ಪ್ರಾರಂಭವಾದವು. ಆ ಸಮಯದಲ್ಲಿ ಆತನಿಗೆ ತಾನು ನಿವಾಸಿಸುವ ಮನೆಯಲ್ಲಿ ದೋಷವಿದೆಯೆಂದು ವಾಸ್ತು ತಿಳಿದವರು ಹೇಳಿದ್ದಾರೆ. ಆಗ ಆ ಮನೆ ಬಿಟ್ಟು ವಾಸ್ತು ಶಾಸ್ತ್ರಜ್ಞರ ಸಲಹೆ ಮೇರೆಗೆ ಹೊಸ ಮನೆ ಕಟ್ಟಿಸಿದ್ದಾನೆ. ಆ ಮನೆಯಲ್ಲಿ ನಿವಾಸ ವಿರುವ ಆತನಿಗೆ ಮೊದಲು ಬಂದಹಾಗೆ ಕಷ್ಟ ನಷ್ಟಗಳು ಮತ್ತೇ ಮತ್ತೇ ಬರುತ್ತಲೇ ಇದ್ದವು. ತಿಳಿದವರನ್ನು ಕೇಳಿದರೇ ದಶ ಸರಿಯಿಲ್ಲವೆಂದಿದ್ದಾರೆ. ಮತ್ತೆ ಕೆಲವರ ಸಲಹೆಯಿಂದ ಆ ಮನೆಯೂ ಸಹ ಬಿಟ್ಟು ಮತ್ತೊಂದು ಮನೆ ಸೇರಿದ ಆತನಿಗೆ ಹಾಗೆಯೇ ಕಷ್ಟಗಳಿರುವುದರಿಂದ ಕರ್ಮವೇ ಕಾರಣವಾಗಲಿ ಮನೆ ಅಲ್ಲವೆಂದು ಆತನು ತಿಳಿದುಕೊಂಡನು.

ಜಾತಕ ಚಕ್ರದಲ್ಲಿ ಸ್ಥಾನಗಳ ಬಲವೇ ಆಗಲಿ, ನನ್ನ ಬಲವೇನು ಅಲ್ಲವೆಂದು, ನಾನು ಶರೀರದಿಂದ ಬರುವ ಕಷ್ಟ ಸುಖಗಳ ಅನುಭೂತಿಯನ್ನು ಅನುಭವಿಸುವ

ಜೀವಾತ್ಮನೆಂದು ಗ್ರಹಿಸಿಕೊಂಡು ಒಂದು ಜ್ಞಾನಾಗ್ನಿ ಹೊರತು ಕರ್ಮವನ್ನು ಯಾವ ಕ್ರಿಯೆಗಳು ಬದಲಾಯಿಸಲಾರವೆಂದು ತಿಳಿಯಬೇಕು.

**ಡಿ. ಅನೂರಾಧ, ಧರ್ಮವರಮು**

**91) ಶ್ರೀ ರಾಮಕೃಷ್ಣ ಪರಮಹಂಸ, ಅವರ ಶಿಷ್ಯರು, ಶ್ರೀ ವೀರಬ್ರಹ್ಮೆಂದ್ರ ಸ್ವಾಮಿಯವರು ವಿಗ್ರಹಾರಾಧಕರೇ. ವಿಗ್ರಹಾರಾದನೆ ಸರಿಯಲ್ಲವೆಂದು ಬ್ರಹ್ಮ ಸಮಾಜದಲ್ಲಿ ಸೇರಿದ ಕೇಶವ ಚಂದ್ರಸೇನ ಸಹ ಶ್ರೀ ಪರಮಹಂಸರಿಂದ ಬದಲಾಗಿದ್ದಾರೆ. ವಿಗ್ರಹಾರಾಧನೆಯ ಮೂಲವಾಗಿ ಬ್ರಹ್ಮವನ್ನೇ ಸೇರಿದ ದೊಡ್ಡ ಮಹಾನುಭಾವರೆಲ್ಲ ನಿಮ್ಮ ದೃಷ್ಟಿಯಲ್ಲಿ ಎಂಥವರು. ವಿಗ್ರಹಾರಾದನೆ ಏಕೆ ಮಾಡಬಾರದು?**

ಉ. ನಾವು ಯಾವಾಗಲೂ ವಿಗ್ರಹಾರಾಧನೆ ಒಳ್ಳೆಯದಲ್ಲ ಮಾಡಬೇಡ ಎಂದು ಹೇಳಲಿಲ್ಲ. ನಮ್ಮ ಉದ್ದೇಶವನ್ನು ನೀವು ಪೂರ್ಣ ಅವಗಾಹನೆ ಮಾಡಿಕೊಂಡಿಲ್ಲವೆಂದು ತಿಳಿಸುತ್ತಿದ್ದೇವೆ. ನಮ್ಮ ಉದ್ದೇಶವನ್ನು ಇನ್ನೊಮ್ಮೆ ನಿಮಗೆ ತಿಳಿಸುತ್ತೇವೆ. ಅರ್ಥವಿಲ್ಲದ ವಿಗ್ರಹಾರಾಧನೆ ಮಾಡಬಾರದು. ಅರ್ಥ ತಿಳಿದು ಮಾಡಬೇಕೆಂದು ಹೇಳಿದ್ದೇವೆ. ಅರ್ಥವಿಲ್ಲದ ಆಚರಣೆ ನಿಷ್ಪ್ರಯೋಜನೆ ಅಲ್ಲವೆ! ಆದ್ದರಿಂದ ಅಚರಣೆಗೆ ಅರ್ಥ ತಿಳಿದಾಗ, ತಿಳಿದುಕೊಳ್ಳುವವರೆಗೂ ಆ ಕೆಲಸ ಬಿಟ್ಟು ತಿಳಿದನಂತರ ಮಾಡಬಹುದೆಂದಿದ್ದೇವೆ. ಎತ್ತು ಈನಿದೆ ಎಂದರೇ ಕೊಟ್ಟಿಗೆಗೆ ಕಟ್ಟು ಎನ್ನುವುದು ಸಮಂಜಸವೇನಾ? ಸರಿಅಲ್ಲ ಅಲ್ಲವೆ! ಎತ್ತು ಹೇಗೆ ಈನಿದೆ ಎಂದು ವಿವರಣೆ ತಿಳಿಯದೇ ಕಾಣಿಸಿದ ಕರುವನ್ನು ಕಟ್ಟಿ ಹಾಕಿದರೆ ಸರಿ ಅಲ್ಲವೆಂದು ಹೇಳುವುದು ತಪ್ಪಲ್ಲ. ಕರುವನ್ನು ಆಕಳು ಈನಿದೆ ಎಂದು ತಿಳಿದು ಕಟ್ಟಿ ಹಾಕಿದರೇ ಫರವಾಗಿಲ್ಲ. ಇರುವುದು ಒಂದಾದರೆ ಅಂದುಕೊಳ್ಳುವುದು ಬೇರೊಂದಾದರೇ ಅದು ತಪ್ಪೆಂದು ಹೇಳುವುದರಲ್ಲಿ ನಮ್ಮ ತಪ್ಪಿಲ್ಲ. ಇಂದಿನ ಸಮಾಜದಲ್ಲಿ ದೇವಾಲಯಗಳು ಕೋರಿಕೆಗಳು ಕೋರುವ ಕೇಂದ್ರಗಳಾಗಿ, ಪೂಜಾರಿಗಳು ದೇವರುಗಳಿಗೆ ರೆಕಮಂಡೇಷನ್ ಮಾಡುವವರಾಗಿ, ದೇವರುಗಳು ಕೋರಿಕೆಗಳು ತೀರಿಸುವರಾಗಿ, ನಾವು ಸಮರ್ಪಿಸುವ ನೈವೇದ್ಯಗಳು, ಹರಕೆಗಳು ಅವರಿಗೆ ಕೊಡುವ ಪ್ರತಿಫಲಿತಗಳಾಗಿ ಲೆಕ್ಕಿಸಿ ಪೂಜೆಗಳು ಮಾಡುವುದಕ್ಕಿಂತ ಪೂರ್ತಿ ಬಿಡುವುದು ಒಳ್ಳೆಯದು. ಆ ವಿಧವಾಗಿ ಪೂಜೆಗಳು ಮಾಡಿದರು ದೇವರಿಗೆ ಯಾವ ಅರ್ಥವಿಲ್ಲದೇ ಹೋಗುತ್ತದೆ.

ತೆಂಗಿನಕಾಯಿಯನ್ನು ಹೊಡೆಯಬೇಕೆಂದಿದ್ದೇವೆ ಆದರೆ ಅರ್ಥ ತಿಳಿದು, ದೀಪ ಇಡಬೇಕೆಂದಿದ್ದೇವೆ ಆದರೆ ಅರ್ಥ ತಿಳಿದು, ನೈವೇದ್ಯ ಇಡಬೇಕೆಂದಿದ್ದೇವೆ ಅದೂ ಸಹ

ಅರ್ಥ ತಿಳಿದು, ಹಾಗೆ ವಿಗ್ರಹವನ್ನೂ ಆರಾಧಿಸಬೇಕೆಂದಿದ್ದೇವೆ. ಪೂರ್ವಕಾಲದಲ್ಲಿ ಹಿರಿಯರು ಯಾವ ದೃಷ್ಟಿಯಿಂದ ದೇವಾಲಯಗಳನ್ನು ಸ್ಥಾಪಿಸಿದ್ದಾರೊ ಆ ಭಾವದಿಂದಲೇ ಪೂಜೆ ಮಾಡೆಂದಿದ್ದೇವೆ. ಭಾವ ಇಲ್ಲದ ಪೂಜೆ, ಅರ್ಥತಿಳಿಯದ ಆಚರಣೆ ವ್ಯರ್ಥವೆಂದಿದ್ದೇವೆ. ಕೋರಿಕೆಗಳಿಗಾಗಿಯೇ ದೇವತೆಗಳು ದೇವಾಲಯಗಳು ಪೂಜೆಗಳು ಎಂದರೆ ಅವುಗಳನ್ನು ನಾವು ಪೂರ್ತಿಯಾಗಿ ನಿರಾಕರಿಸುತ್ತೇವೆ. ನೀವು ಪೂರ್ತಿ ದೇವಾಲಯಗಳ ವಿಷಯ ವಿಗ್ರಹಾರಾಧನೆ ವಿಷಯ ತಿಳಿಯಬೇಕೆಂದರೆ ನಮ್ಮ ರಚನೆಗಳಲ್ಲಿ **"ದೇವಾಲಯ ರಹಸ್ಯಗಳು"** ಎನ್ನುವ ಗ್ರಂಥವನ್ನು ಓದಿರಿ.

**92) ಸಮಾಜದಲ್ಲಿ ಶಕುನ, ಅಪಶಕುನಗಳು ಎಲ್ಲಿ ನೋಡಿದರೂ ಇವೆ. ಹಲ್ಲಿ ಮೇಲೆ ಬಿದ್ದರೆ ಸ್ನಾನ ಮಾಡಬೇಕೆನ್ನುತ್ತಾರೆ, ವಾಸ್ತವವಾಗಿ ಶಕುನಗಳಿವೆಯಾ?**

ಉ. ವಾಸ್ತವವಾಗಿ ಹೇಳಬೇಕೆಂದರೆ ಶಕುನಗಳು ಎನ್ನುವವು ಮೂಢ ನಂಬಿಕೆಗಳು. ನಾವು ಮಾಡಿಕೊಂಡಿರುವ ಕರ್ಮದ ಪ್ರಕಾರ ಪ್ರತಿಯೊಂದು ನಡೆಯುತ್ತವೆ. ಕೆಡಕು ನಡೆದರೂ ಒಳ್ಳೆಯದು ನಡೆದರೂ ಅದು ಎಲ್ಲವೂ ನಮ್ಮ ಕರ್ಮ ಕಾರಣದಿಂದಲೇ ನಡೆಯುತ್ತಿದೆ. ಶಕುನಗಳು ನಮ್ಮ ಕರ್ಮವನ್ನು ಬದಲಾಯಿಸಲಾರವು. ನಿತ್ಯ ಜೀವನದಲ್ಲಿ ನಡೆಯುವ ಒಳ್ಳೆಯ ಕೆಡಕುಗಳನ್ನು ಶಕುನಗಳೊಂದಿಗೆ ಹೋಲಿಸಿಕೊಂಡರೆ ನಿಜವೇ ಎನಿಸುತ್ತದೆ. ಪ್ರತಿ ದಿನ ನಮಗೆ ಒಳ್ಳೆದು ಕೆಟ್ಟದು ನಡೆಯುತ್ತಲೇ ಇದೆ ಅಲ್ಲವೆ! ಆದರೆ ಪ್ರತಿದಿನ ಒಳ್ಳೆ ಕೆಟ್ಟ ಶಕುನಗಳು ನಮಗೆ ಕಾಣಿಸುವುದಿಲ್ಲ ಅಲ್ಲವೆ! ಆದ್ದರಿಂದ ವಾಸ್ತು ಶಾಸ್ತ್ರವಿರುವ ಹಾಗೇ ಶಕುನ ಶಾಸ್ತ್ರವೂ ಸಹ ಹೊತ್ತು ಹೋಗದ ಹಿರಿಯರು ತಯಾರಿಸಿದ್ದಾರೆ. ವಾಸ್ತವವಾಗಿ ಅವು ಶಾಸ್ತ್ರಗಳಲ್ಲ. ಅವನ್ನು ತಮ್ಮಂತವರು ನಂಬಬೇಕಾಗಿಲ್ಲ. ಹಲ್ಲಿ ಚರ್ಮದ ಮೇಲೆ ಸಣ್ಣ ಸಣ್ಣ ವಿಷಗ್ರಂಥಿಗಳಿರುತ್ತವೆ. ಅದು ಬೀಳುವುದರಿಂದ ಅದರ ವಿಷ ನಮ್ಮ ಚರ್ಮಕ್ಕೆ ಅಂಟಿಕೊಂಡಿರಬಹುದು, ಆದ್ದರಿಂದ ಸ್ನಾನ ಮಾಡಬೇಕೆಂದಿದ್ದಾರೆ. ಈ ವಿವರ ತಿಳಿಯದೆ ಅದಕ್ಕೆ ಒಂದು ಶಕುನವನ್ನು ಸೃಷ್ಟಿಸಿದ್ದಾರೇನೊ. ಆದರೆ ಸ್ನಾನ ಮಾಡುವುದರಿಂದ ಭೌತಿಕ ಶಾಸ್ತ್ರದ ಪ್ರಕಾರ ಒಳ್ಳೆಯದು.

**93) ವಿವಾಹ ಶುಭಕಾರ್ಯಗಳಲ್ಲಿ ರೇಶ್ಮೆ ಬಟ್ಟೆಗಳನ್ನು ಧರಿಸುವುದು ಶುಭವಾಗಿ ತಿಳಿಯುತ್ತಾರೆ, ಪವಿತ್ರವೆನ್ನುತ್ತಾರೆ. ರೇಶ್ಮೆ ಹುಳಗಳನ್ನು ಸಾಯಿಸುವುದರಿಂದ ಬರುವುದು ರೇಶ್ಮೆ. ಅದು ಹಿಂಸೆಯಲ್ಲವೆ? ಹಿಂಸೆಯಿಂದ ತಯಾರಾಗಿರುವ ರೇಶ್ಮೆ ಹೇಗೆ ಪವಿತ್ರವಾಗಿ ಭಾವಿಸಲಾಗಿದೆ.**

ಉ. ರೇಶ್ಮೆ ಬಟ್ಟೆಗಳು ಪವಿತ್ರವೆನ್ನುವುದಕ್ಕೆ ಯಾವ ಆಧಾರವು ಇಲ್ಲ. ದುಡ್ಡಿರುವವರು ದರ್ಪವನ್ನು ತೋರಿಸುಕೊಳ್ಳುವುದಕ್ಕೆ ರೇಶ್ಮೆ ಬಟ್ಟೆಗಳು ಕೆಲಸಕ್ಕೆ ಬರುತ್ತವಾಗಲಿ ಪವಿತ್ರತೆಯನ್ನು ತೋರಿಸುವುದಕ್ಕೆ ಅಲ್ಲವೆಂದು ತಿಳಿಯಬೇಕು.

**94) ನೀವು "ಪ್ರಬೋಧಾತ್ಮಜಮ್" ಮಾಸಪತ್ರಿಕೆಯಲ್ಲಿ ಶಾಸ್ತ್ರವೆಂದರೆ ಎಂದಿಗೂ ಬದಲಾಗುವುದಿಲ್ಲ, ನಿರೂಪಣೆಗೆ ಬರುವುದು, ಹೇತುವಾದಕ್ಕೆ ನಿಂತು ಸಮಾಧಾನ ಹೇಳುವುದೆಂದು ಬರೆದಿದ್ದೀರಿ. ಶಾಸ್ತ್ರಗಳಲ್ಲಿ ಜ್ಯೋತಿಷ್ಯ ಶಾಸ್ತ್ರವೂ ಸಹ ಒಂದೆಂದು ನೀವೆ ಎಂದಿದ್ದೀರಿ. ಅಂತಹದರಲ್ಲಿ ಜ್ಯೋತಿಷ್ಯ ಶಾಸ್ತ್ರ ಹೇತುವಾದಕ್ಕೆ ಎದುರು ನಿಂತು ಸಮಾಧಾನ ಹೇಳಬೇಕು. ಆದರೆ "ಸೋವಿಯಟ್ ಲಾಂಡ್ ನೆಹ್ರೂ ಅವಾರ್ಡು" ಗ್ರಹೀತ ಮತ್ತು ಬಲ್ಗೇರಿಯಾ ಸರ್ಕಾರ "ಜಾರ್ಜಿ ಡಿಮಿಟ್ರೋವ್" ಸ್ವರ್ಣ ಪದಕ ಗ್ರಹೀತರಾದ ಶ್ರೀ ಜೆ. ನರೇಂದ್ರದೇವ್ ಅವರು 30 ವರ್ಷಗಳು ಕೃಷಿಮಾಡಿ ಬರೆದ "ವಿಶ್ವ ವಿಜ್ಞಾನ ದರ್ಶಿನಿ" ಎನ್ನುವ ಗ್ರಂಥದಲ್ಲಿ ಜ್ಯೋತಿಷ್ಯ ಶಾಸ್ತ್ರವೆಂಬ ವಿಭಾಗದಲ್ಲಿ ಈ ವಿದವಾಗಿ ತಿಳಿಸಿದ್ದಾರೆ.**

## ಶಾಸ್ತ್ರಜ್ಞರ ಖಂಡನೆ

**ಸೂರ್ಯ ಚಂದ್ರ ಗ್ರಹಗಳ ಕದಲಿಕೆಯನ್ನನುಸರಿಸಿ ಮನುಷ್ಯ ಜೀವನ ವಿಧಾನ ಇರುತ್ತದೆನ್ನುವುದು ಅಸತ್ಯವೆಂದು, ಜ್ಯೋತಿಷ್ಯ ಅಶಾಸ್ತ್ರೀಯವಾದದೆಂದು, ಆಧಾರವಿಲ್ಲದ ಕಟ್ಟುಕಥೆ ಮಾತ್ರವೆಂದು, 192 ಮಂದಿ ಶಾಸ್ತ್ರಜ್ಞರು ವಿವರಿಸುತ್ತಾ "ಅಬ್ಜೆಕ್ಷನ್ ಟು ಆಸ್ಟ್ರಾಲಜೀ" ಎನ್ನುವ ಪ್ರಕಟಣೆ ಬಿಡುಗಡೆ ಮಾಡಿದ್ದಾರೆ. ಅದರ ಮೇಲೆ ಸಹಿ ಮಾಡಿದವರಲ್ಲಿ ಪ್ರಪಂಚ ಪ್ರಸಿದ್ಧಿಯಾದ ಖಗೋಳ ಶಾಸ್ತ್ರಜ್ಞರು, ಅಂತರಿಕ್ಷ ಪರಿಶೋಧನೆಯಲ್ಲಿ ವಿವಿಧ ರಂಗಗಳ ನಿಪುಣರೂ ಇದ್ದಾರೆ. ಆ ಪತ್ರದ ಮೇಲೆ ಸಹಿ ಮಾಡಿದವರಲ್ಲಿ 19 ಜನ "ನೋಬಲ್" ಬಹುಮಾನವನ್ನು ಹೊಂದಿದ ಶಾಸ್ತ್ರಜ್ಞರು ಸಹ ಇದ್ದಾರೆ. ಜ್ಯೋತಿಷ್ಯಕ್ಕೆ ಸೈಂಟಿಫಿಕ್ ಆಧಾರ ಯಾವ ಮಾತ್ರವೂ ಇಲ್ಲವೆಂದು ಅವರು ತಮ್ಮ ಪ್ರಕಟಣೆಯಲ್ಲಿ ತಿಳಿಸಿದ್ದಾರೆ.**

**ಮೇಲಿನ ವಿಧವಾಗಿ ಆ ಗ್ರಂಥದಲ್ಲಿ ಇದೆ. ಪ್ರಜೆಗಳು ಯಾವುದನ್ನು ನಂಬಬೇಕು? ಪ್ರಜೆಗಳು ಅಸಲು ಯಾವ ಮಾರ್ಗದಲ್ಲಿ ಹೋಗಬೇಕೋ ತಿಳಿಯದೆ ಅವರವರ ಸ್ವಂತ ಅಭಿಪ್ರಾಯದ ಪ್ರಕಾರ ನಡೆಯುತ್ತಾ ಹೋಗುತ್ತಿದ್ದರೆ ಇದಕ್ಕೆ ಜವಾಬ್ದಾರಿ ಯಾರು? ಆಧಾರ ಇಲ್ಲವೆಂದು ಹೇಳಿದ ಶಾಸ್ತ್ರಜ್ಞರಾ? ಶಾಸ್ತ್ರಜ್ಞರಿಗೆ ಉತ್ತರ ಹೇಳಲಾಗದಿರುವ ಜ್ಯೋತಿಷ್ಯರಾ? ಯಾರು ಜವಾಬ್ದಾರರು? ದಯೆಮಾಡಿ ಸರ್ವಜ್ಞರು ಮತ್ತು ಸತ್ಯವನ್ನೇ ಪ್ರಕಟಿಸುವ ನೀವು ಈ ವಿಷಯವಾಗಿ ಪೂರ್ತಿ ವಿವರಗಳೊಂದಿಗೆ ವಿವರಿಸುತ್ತೀರೆಂದು ಎದುರು ನೊಡುತ್ತೇವೆ.**

**ಉ.** ನೀವು ಬಹಳ ದೊಡ್ಡ ಪ್ರಶ್ನೆ ಹಾಕಿ ನಮ್ಮ ಮೆದುಳಿಗೆ ಸ್ವಲ್ಪ ಕೆಲಸವನ್ನು ಕಲ್ಪಿಸಿದ್ದೀರಿ. ಉತ್ತರ ಕೇಳಿದ್ದು ನೀವೇ ಆದರೂ ನಾನು ಹೇಳಬೇಕಾಗಿರುವುದು ಮೇಧಾ ಶಕ್ತಿಯಲ್ಲಿ ಅತಿರಥ ಮಹಾರಥರಾದ ಶಾಸ್ತ್ರಜ್ಞರಿಗೆ ನಿಜವಾಗಿ ಹೇಳಬೇಕಾದ ಬಾಧ್ಯತೆ ಜ್ಯೋತಿಷ್ಯ ಶಾಸ್ತ್ರಜ್ಞರದು. ನಾನು ಜ್ಯೋತಿಷ್ಯ ಶಾಸ್ತ್ರ ಪರಿಶೋಧಕನು ಅಲ್ಲ, ಶಾಸ್ತ್ರಜ್ಞನು ಅಲ್ಲ. ನಾನು ಕೇವಲ ಯೋಗ ಶಾಸ್ತ್ರ ಪರಿಶೋಧಕನು. ಇದು ನಮ್ಮ ಯೋಗ ಶಾಸ್ತ್ರದಲ್ಲಿನ ಪ್ರಶ್ನೆಯಲ್ಲ. ಆದರೂ ನಿಮ್ಮ ಪ್ರಶ್ನೆ ಸಮಂಜಸವಾದದ್ದು ಆದ್ದರಿಂದ ನಿಮ್ಮ ಪ್ರಶ್ನೆಗೆ ಉತ್ತರ ಹೇಳುತ್ತಿದ್ದೇನೆ.

ಪ್ರಜೆಗಳನ್ನು ತಪ್ಪುದಾರಿ ಹಿಡಿಸುವುದಕ್ಕೆ ಜವಾಬ್ದಾರರು ಜ್ಯೋತಿಷ್ಯ ಶಾಸ್ತ್ರವನ್ನು ವಿಮರ್ಶಿಸಿದ ಶಾಸ್ತ್ರಜ್ಞರಾ? ಜ್ಯೋತಿಷ್ಯರಾ? ಎಂದಿದ್ದೀರಿ ಅಲ್ಲವೆ! ಸತ್ ವಿಮರ್ಶೆ ಎಂದರೆ ಹೇತು ಬದ್ದವಾಗಿ ವಿಮರ್ಶಿಸುವುದರಲ್ಲಿ ಶಾಸ್ತ್ರಜ್ಞರದು ತಪ್ಪಿಲ್ಲ. ಅವರಿಗೆ ಹೇತುಬದ್ದವಾಗಿ ಸಮಾಧಾನ ಹೇಳಲಾರದ ಜ್ಯೋತಿಷ್ಯರದೆ ಬಾಧ್ಯತೆ. ಆದರೆ ಈಗಿನ ಕಾಲದಲ್ಲಿ ಯಾರು ಜ್ಯೋತಿಷ್ಯರೋ ತಿಳಿದುಕೊಳ್ಳಲಾರೆವು. ಗಿಳಿ ಶಾಸ್ತ್ರವೆಂದು ಗಿಳಿಯಿಂದ ಚೀಟಿ ತೆಗಿಸುವ ವರಿಂದ ಹಿಡಿದು ಕವಡೆ ಹಾಕಿ ಹೇಳುವವರು, ಪುಸ್ತಕದಲ್ಲಿ ಕಡ್ಡಿ ಇಟ್ಟು ಹೇಳುವವರು ವಿಧ ವಿಧವಾದ ಜ್ಯೋತಿಷ್ಯರು ತಯಾರಾಗಿ ಜ್ಯೋತಿಷ್ಯ ಶಾಸ್ತ್ರ ಹುಳುಕು ಹಿಡಿದು ಹೋಗಿದೆ. ಆದಿತ್ಯಾದಿ ಗ್ರಹಗಳ ವಿವರ ತಿಳಿದು ಅವುಗಳ ಮೂಲವಾಗಿಯೆ ಜ್ಯೋತಿಷ್ಯವಿದೆ ಎಂದು ತಿಳಿದವರೂ ಸಹ ಇದ್ದಾರೆ. ನಿಜವಾದ ಜ್ಯೋತಿಷ್ಯರು ಸೂರ್ಯ ಚಂದ್ರ ಗ್ರಹಗಳನ್ನು ಆಧಾರ ಮಾಡಿಕೊಂಡವರೇ. ಅವರಲ್ಲಿ ಜ್ಯೋತಿಷ್ಯ ಶಾಸ್ತ್ರವನ್ನು ಸ್ಪಷ್ಟವಾಗಿ ತಿಳಿದವರು ಕೆಲವರಿರುವಾಗ, ಅನೇಕ ಕಾರಣಗಳಿಂದ ಪೂರ್ತಿ ಶಾಸ್ತ್ರವನ್ನು ತಿಳಿಯದವರೂ ಸಹ ಕೆಲವರಿದ್ದಾರೆ. ಮುಖ್ಯವಾದ ಕಾರಣ ಆರ್ಥಿಕ ಲೋಪ, ಯಾವ ಸರ್ಕಾರವೂ ಜ್ಯೋತಿಷ್ಯ ಶಾಸ್ತ್ರಕ್ಕೆ ಬೆಲೆ ಕೊಟ್ಟಿಲ್ಲ. ಅದರಲ್ಲಿ ಪರಿಚಯವಿರುವವರನ್ನು ಯಾರೂ ಪೋಷಿಸುತ್ತಿಲ್ಲ. ಜ್ಯೋತಿಷ್ಯರೆಂದರೆ ಹೊಟ್ಟೆ ಪಾಡಿಗೆ ಯಾವೋ ನಾಲ್ಕು ಮಾತುಗಳನ್ನು ಹೇಳುವವರಾಗಿ ಸಮಾಜ ಲೆಕ್ಕಿಸುತ್ತಿರುವುದರಿಂದ ಯಾರೂ ಮುಂದೆ ಹೋಗದೇ ಇದ್ದಾರೆ. ಯಾವುದು ಏನಾದರೂ ಪ್ರಜೆಗಳಲ್ಲಿ ಜ್ಯೋತಿಷ್ಯರ ಮೇಲೆ ನಂಬಿಕೆ ಇದೆ. ಜ್ಯೋತಿಷ್ಯರಿಗೆ ಸಮಾಜದಲ್ಲಿ ಬೆಲೆ ಇದೆ. ಇದು ಜ್ಯೋತಿಷ್ಯರ ವಿಷಯ.

ಮತ್ತೆ ಖಗೋಳ ಶಾಸ್ತ್ರಜ್ಞರ ವಿಷಯವೆಂದರೆ, ಅವರು ವಿಸ್ತೃತವಾದ ಪರಿಶೋಧನೆ ಗಳು ಮಾಡುತ್ತಾ ಕಡೆಗೆ ಅನಂತಾಕಾಶದಲ್ಲಿ "ಬ್ಲಾಕ್ ಹೋಲ್"ನ್ನು ಕಂಡು ಹಿಡಿದಿದ್ದಾರೆ. ಪೂರ್ವಕಾಲದಿಂದ ಇವರೂ ಸಹ ಅನೇಕ ವಿಧವಾದ ಪರಿಶೋಧನೆಗಳು ಮಾಡುತ್ತಲೇ ಇದ್ದಾರೆ. ಒಬ್ಬ ಖಗೋಳ ಶಾಸ್ತ್ರಜ್ಞನು ಕಂಡುಹಿಡಿದ ವಿಷಯ ಅದು ಆಗ ಸತ್ಯವೆಂದು

ನಿರೂಪಿಸಲ್ಪಟ್ಟರೂ, ಮತ್ತೊಬ್ಬ ಶಾಸ್ತ್ರಜ್ಞನು ಇನ್ನೂ ದೊಡ್ಡ ಪರಿಶೋಧನೆ ಮಾಡಿ ಮೊದಲು ಕಂಡಿಡಿದ ಸಿದ್ಧಾಂತಕ್ಕೆ ಅನುಸಂಧಾನವಾಗಿ ಇನ್ನೂ ಕೆಲವು ವಿಷಯಗಳನ್ನು ತಿಳಿದುಕೊಂಡು ನಿರೂಪಿಸಿ ಮೊದಲನೆಯ ಶಾಸ್ತ್ರಜ್ಞನಿಗಿಂತಲೂ ಮುಂದೆ ಹೋಗುತ್ತಿದ್ದಾನೆ. ಆಗ ಮೊದಲು ಕಂಡುಹಿಡಿದ ಸಿದ್ಧಾಂತ ಖಂಡಿಸಲ್ಪಟ್ಟು ಅದಕ್ಕಿಂತಲೂ ಸತ್ಯವಾದ ಸಿದ್ಧಾಂತ ಹೊರಬರುವುದರಿಂದ ಮೊದಲು ಮಾಡಿರುವ ಸಿದ್ಧಾಂತ ಮರೆಯಾಗಿ ಹೋಗುತ್ತಿದೆ. ಈ ವಿದವಾಗಿ ಶಾಸ್ತ್ರಜ್ಞರು ಬಹಿರ್ಗತ ಮಾಡಿದ ಎಷ್ಟೋ ಸಿದ್ಧಾಂತಗಳನ್ನು ಬದಲಾಯಿಸು ವಂತಹ ಹೊಸ ಸತ್ಯವಾದ ಸಿದ್ಧಾಂತಗಳು ಕಂಡುಹಿಡಿಯುತ್ತಿದ್ದಾರೆ.

ಉದಾಹರಣೆಗೆ 05–08–1988 ಬೆಳಿಗ್ಗೆ ವಾರ್ತಾ ಪತ್ರಿಕೆಯಲ್ಲಿ ಪ್ರಕಟಿತವಾದ "ನ್ಯೂಟನ್ ಸಿದ್ಧಾಂತಕ್ಕೆ ಸವಾಲ್" ವಾರ್ತೆ ಓದಿದರೇ ನಾವು ಹೇಳಿರುವ ಹಾಗೆ ಸತ್ಯವಲ್ಲದ ಸಿದ್ಧಾಂತಗಳು ಮಾಯವಾಗುತ್ತವೆಂದು ತಿಳಿಯುತ್ತದೆ. 300 ವರ್ಷಗಳ ಕೆಳಗೆ ಪ್ರತಿಪಾದಿಸಿದ ಗುರುತ್ವಾಕರ್ಷಣ ಸಿದ್ಧಾಂತ ಪೂರ್ತಿಯಾಗಿ ಸತ್ಯ ಅಲ್ಲವೆಂದು ಇಂದಿನ ಶಾಸ್ತ್ರಜ್ಞರು ತಿಳಿಸುತ್ತಿದ್ದಾರೆ. ಗ್ರೀನ್ ಲಾಂಡ್‌ನಲ್ಲಿ ಮಂಜು ಪ್ರಾಂತ್ಯದಲ್ಲಿ ಭೂಮಿ ಮೇಲ್ಭಾಗದಿಂದ ಒಂದು ಮೈಲು ಆಳದವರೆಗೂ ಹಾಕಿದ ದೊಡ್ಡ ರಂದ್ರದಲ್ಲಿ ಶಾಸ್ತ್ರಜ್ಞರು ಮಾಡಿದ ಪರಿಶೋಧನೆಯಲ್ಲಿ ಒಳಗೆ ಹೋಗುವ ಸ್ವಲ್ಪ ಗುರುತ್ವಾಕರ್ಷಣೆಯಲ್ಲಿ ಬದಲಾವಣೆಗಳು ಬರುತ್ತವೆಂದ ನ್ಯೂಟನ್ ಸಿದ್ಧಾಂತ ನಿರೂಪಣೆಗೆ ಬಂದಿಲ್ಲವಂತೆ. ಈ ವಿಧವಾಗಿ ಕೆಲವು ಸಿದ್ಧಾಂತಗಳು ಖಂಡಿಸುವುದಕ್ಕೆ ಕಾರಣ ಸಿದ್ಧಾಂತಕ್ಕೆ ಪೂರ್ತಿ ಅನುಸಂಧಾನ ವಿಷಯಗಳು ತಿಳಿಯದೇ ಹೋಗುವುದೇ ಕಾರಣ. ಎಲ್ಲಾ ವಿಷಯಗಳು ತಿಳಿದ ದಿನ ಹಿಂದಿನ ಸಿದ್ಧಾಂತ ಬದಲಾಗುತ್ತದೆ. ಇವು ಖಗೋಳ ಶಾಸ್ತ್ರಜ್ಞರ ಅವಸ್ಥೆಗಳು.

ಖಗೋಳ ಶಾಸ್ತ್ರಜ್ಞರ ವಿಷಯವನ್ನು ಅವಗಾಹನೆ ಮಾಡಿಕೊಂಡರೆ ಆ ಶಾಸ್ತ್ರದಲ್ಲಿ ಕೆಲವು ವಿಷಯಗಳಲ್ಲಿ ಸತ್ಯವನ್ನು ತಿಳಿದುಕೊಂಡು ಪ್ರಕಟಿಸಿದ್ದಾರೆ. ಇನ್ನೂ ಎಷ್ಟೋ ವಿಷಯಗಳಲ್ಲಿ ಖಗೋಳ ಶಾಸ್ತ್ರಜ್ಞರು ತಿಳಿದುಕೊಳ್ಳಬೇಕಾಗಿದೆ. ಎಷ್ಟೋ ವಿಷಯಗಳು ಖಗೋಳದಲ್ಲಿ ಊಹೆಯಾಗಿ ಉಳಿದಿವೆ. ಉದಾ : ಉತ್ತರ ಅಮೆರಿಕಕ್ಕೆ ಸುಮಾರು 1500 ಮೈಲು ದೂರದಲ್ಲಿ ಅಟ್ಲಾಂಟಿಕ್ ಮಹಾಸಮುದ್ರದಲ್ಲಿ "ಬೆರ್ಮುಡಾ" ಎನ್ನುವ ಹೆಸರಾಗಿ ಗುರುತಿಸಿದ ತ್ರಿಕೋನಾಕೃತಿಯಲ್ಲಿರುವ ಸಮುದ್ರ ಸ್ಥಳವೊಂದರ ಪ್ರಭಾವ ಇವತ್ತಿಗೂ ಅಂತ್ಯ ದೊರೆಯುತ್ತಿಲ್ಲ. ಸೂರ್ಯ ಕುಟುಂಬದಲ್ಲಿ ಗ್ರಹ ಕಿರಣಗಳು ಬೀಳುವ ಭೂಗೋಳದಲ್ಲಿನ ಸ್ವಲ್ಪ ಸಮುದ್ರ ಭಾಗದಲ್ಲಿನ ವಿಷಯ ಅಗಮ್ಯಗೋಚರವಾಗಿ ಶಾಸ್ತ್ರಜ್ಞರ ಪಾಲಿಗೆ ನಿಂತುಹೊಗಿದೆ. ಆ ಸಮುದ್ರ ಸ್ಥಳ ಪರಿಧಿಯೊಳಗೆ ಹೋಗುವ ಹಡುಗುಗಳಾಗಲಿ,

ಮೇಲೆ ಅಕಾಶದಲ್ಲಿ ಹೋಗುವ ವಿಮಾನಗಳಾಗಲಿ, ಅದೃಶ್ಯವಾಗಿ ಹೋಗುವುದೇ ಅಲ್ಲಿನ ವಿಶೇಷವಾಗಿರುವಾಗ, ಅದು ಅರ್ಥವಾಗದಿರುವಾಗ, ಖಗೋಳಕ್ಕಿಂತ ಮೊದಲು ಕಂಡುಹಿಡಿದ ಜ್ಯೋತಿಷ್ಯ ಹೇಗೆ ಅರ್ಥವಾಗುತ್ತದೆ. "ಫ್ಲಯಿಂಗ್ ಸಾಸರ್ಸ್" ಹಾರುವ ತಟ್ಟೆಗಳ ಬಗ್ಗೆ ಬಹಳ ಸಲ ಕೇಳಿದ್ದೇವೆ. ಅವನ್ನು ಒಂದು ಸಂದರ್ಭದಲ್ಲಿ ಯುದ್ಧ ವಿಮಾನಗಳೂ ಸಹ ಹಿಂಬಾಲಿಸಿದ್ದವು. ಅವನ್ನು ಹಿಡಿದುಕೊಳ್ಳುವುದೊ ಅಥವ ನಾಶಮಾಡುವುದೋ ಎಂದು ಹಿಂಬಾಲಿಸಿದವರಿಗೆ ಅವನ್ನು ಸಮೀಪಿಸಿದಾಗ ನೀಲಿ ಬಣ್ಣದ ಹೊಗೆ ಅವುಗಳಿಂದ ಬಂದು ಅವು ಅದೃಶ್ಯವಾಗಿವೆ ಎಂದೂ ಸಹ ಓದಿದ್ದೇವೆ. ಅವುಗಳ ಬಗ್ಗೆಯೂ ಸಹ ಊಹೆಗಳೇ ಇವೆ.

ಈ ವಿಧವಾಗಿ ಖಗೋಳದಲ್ಲಿ ಎಷ್ಟೋ ತಿಳಿಯದ ವಿಷಯಗಳು ಇಟ್ಟುಕೊಂಡು ಶಾಸ್ತ್ರಗಳಲ್ಲಿ ಒಂದಾದ ಜ್ಯೋತಿಷ್ಯ ಶಾಸ್ತ್ರವನ್ನು ಖಂಡಿಸುವುದು ಸಮಂಜಸವಲ್ಲ. ಮೇಲೆ ತಿಳಿಸಿದ ವಿಷಯಗಳೆಲ್ಲವುಗಳಿಗೂ ಉತ್ತರ ಹೇಳದೇ ಹೋದರೂ ಖಗೋಳ ಶಾಸ್ತ್ರಕ್ಕೆ ಅಬ್ಜೆಕ್ಷನ್ ನಾವೂ ಸಹ ಪ್ರಕಟಿಸಬಹುದಲ್ಲವೇ! ಅದರೆ ನಾವು ಯಾವ ಶಾಸ್ತ್ರವನ್ನೂ ತೆಗೆದುಹಾಕುವುದಿಲ್ಲ. ಶಾಸ್ತ್ರ ಈದಿನ ಅರ್ಥವಾಗದಿದ್ದರೂ ನಾಳೆಗಾದರೂ ಅರ್ಥವಾಗುತ್ತದೆ. ಶಾಸ್ತ್ರ ಯಾವತ್ತಿಗೂ ಸತ್ಯವಾದದ್ದು. ಆದರೆ ಅದನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಸ್ವಲ್ಪ ಸಮಯ ಬೇಕಾಗುತ್ತದೆ. ಅದನ್ನು ಪೂರ್ತಿ ತಿಳಿದುಕೊಳ್ಳುವ ತಾಳ್ಮೆ ಇಲ್ಲದೆ ಶಾಸ್ತ್ರವೇ ಇಲ್ಲವೆನ್ನುವುದು ಸರಿಯಲ್ಲ. ಯಾವಾಗ ಜ್ಯೋತಿಷ್ಯ ಶಾಸ್ತ್ರ ಸುಳ್ಳಾಗುತ್ತದೋ ಆಗ ಖಗೋಳಶಾಸ್ತ್ರವೂ ಸಹ ಸುಳ್ಳಾಗುತ್ತದೆ. ಆರು ಶಾಸ್ತ್ರಗಳು ಒಂದಕ್ಕೊಂದು ಅನು ಸಂಧಾನವಾಗಿವೆ ಆದುದರಿಂದ ಯಾವ ಶಾಸ್ತ್ರವೂ ಖಂಡಿಸಲ್ಪಡುವುದಿಲ್ಲ.

ಜ್ಯೋತಿಷ್ಯ ಶಾಸ್ತ್ರ ಎರಡು ಭಾಗಗಳಾಗಿ ಇದೆ. ಸ್ವಲ್ಪ ಗಣಿತ ಶಾಸ್ತ್ರದೊಂದಿಗೆ ಕೂಡಿಕೊಂಡಿದೆ. ಮತ್ತೆ ಸ್ವಲ್ಪ ಶಾಸ್ತ್ರ ಫಲಿತಗಳೊಂದಿಗೆ ಕೂಡಿಕೊಂಡಿದೆ. ಈಗಿನ ಕಾಲದಲ್ಲಿ ಜ್ಯೋತಿಷ್ಯ ಶಾಸ್ತ್ರ ಫಲಿತದಭಾಗ ಜ್ಯೋತಿಷ್ಯರಿಗೆ ಪೂರ್ತಿ ಅವಗಾಹನೆ ಇಲ್ಲದ ಕಾರಣ ಗ್ರಹಗಳ ಸ್ಥಿತಿಗತಿಗಳನ್ನನುಸರಿಸಿ ಈ ಫಲಿತ ನಡೆಯುತ್ತಿದೆಂದು ಹೇಳಿ ನಿರೂಪಿಸಲಾರದೆ ಹೋಗುತ್ತಿದ್ದಾರೆ. ಆದ್ದರಿಂದ ಖಗೋಳ ಶಾಸ್ತ್ರಜ್ಞರು ಗ್ರಹಗಳಿಗೆ ಮನುಷ್ಯನ ಜೀವನದ ಫಲಿತಗಳಿಗೆ ಸಂಬಂಧವಿಲ್ಲವೆಂದು ವಾದಿಸಿರಬಹುದು.

ಮುಖ್ಯವಾಗಿ ತಿಳಿದುಕೊಳ್ಳಬೇಕಾದ ವಿಷಯ ಪ್ರತಿ ಜೀವ ರಾಶಿಯ ತಲೆ ಭಾಗದಲ್ಲಿ ಸೂಕ್ಷ್ಮವಾಗಿರುವ 12 ಭಾಗಗಳ ಚಕ್ರದಲ್ಲಿ 9 ಗ್ರಹಗಳು ಪ್ರತಿಬಿಂಬಿಸಿವೆಯೆಂದು

ಅವುಗಳಿಂದ ಪ್ರತಿ ಜೀವರಾಶಿ ಕದಲಿಕೆಗಳು ನಡೆಯುತ್ತಿವೆಯೆಂದು. ಆಕಾಶದಲ್ಲಿರುವ ಗ್ರಹಗಳನ್ನು, ಮನುಷ್ಯನನ್ನು ಬಾಹ್ಯವಾಗಿ ನೋಡಿದರು ಮಧ್ಯೆ ಇರುವ ಸಂಬಂಧ ತಿಳಿಯುವುದಿಲ್ಲವೆಂದು ಅಷ್ಟು ಮಾತ್ರಕ್ಕೆ ಜ್ಯೋತಿಷ್ಯ ಅಸತ್ಯ ಅಲ್ಲವೆಂದು ಖಗೋಳ ಶಾಸ್ತ್ರಜ್ಞರಿಗೆ ತಿಳಿಸುತ್ತಿದ್ದೇವೆ.

**95) ಮಾಂಸಾಹಾರದಿಂದ ತಾಮಸ ಗುಣಗಳು ಬರುವ ಅವಕಾಶವಿದೆ ಅನ್ನುತ್ತಿದ್ದಾರೆ. ಆದ್ದರಿಂದ ನಾನು ಮಾಂಸಾಹಾರವನ್ನು ಬಿಟ್ಟಿದ್ದೇನೆ. ಹಸುವಿಗು, ಹುಲಿಗೂ ಇರುವ ವ್ಯತ್ಯಾಸ ಅವುಗಳ ಅಹಾರ ವಿಧಾನವೇ ಅನಿಸುತ್ತದೆ. ಇದೇ ಪ್ರಶ್ನೆ ಬೇರೊಬ್ಬರನ್ನು ಕೇಳಿದರೆ "ಏಸು ಪ್ರಭು ಮಾಂಸಾಹಾರಿ ಅಲ್ಲವೆ! ಆತನಲ್ಲಿ ಎಷ್ಟೋ ದೊಡ್ಡ ದೈವ ಗುಣಗಳಿರುವವಲ್ಲವೆ ಏನನ್ನುತ್ತೀರೆಂದು ಪ್ರಶ್ನಿಸಿದ್ದಾರೆ" ಸಮಾದಾನ ಹೇಳಲಾರದಿದ್ದೇನೆ. ನೀವು ಸಂದೇಹವನ್ನು ಬಗೆಹರಿಸುತ್ತೀರೆಂದು ಪ್ರಾರ್ಥಿಸುತ್ತೇನೆ.**

**ಉ.** ನಾವು ತೆಗೆದುಕೊಳ್ಳುವ ಆಹಾರ ಕೇವಲ ಸ್ಥೂಲ ಶರೀರಕ್ಕೇ ಸಂಬಂಧವಿರುತ್ತದೆ. ಶರೀರ ಸ್ಥೂಲ, ಸೂಕ್ಷ್ಮವೆಂದು ಬೇರೆಯಾಗಿರುವಾಗ ಆಹಾರಗಳೂ ಸಹ ಬೇರೆ ಬೇರೆಯಾಗಿ ಇವೆ ಎಂದು ತಿಳಿಯಬೇಕು. ನಾವು ತೆಗೆದುಕೊಳ್ಳುವ ಆಹಾರದಲ್ಲಿ ಶರೀರ ಪೋಷಕ ಪದಾರ್ಥಗಳಿರುತ್ತವೆ. ಅವು ಜೀರ್ಣವಾಗಿ ಸಣ್ಣ ಕರುಳಿನ ಸೂಚಿಕೆಯಿಂದ ಪಿತ್ತಕೋಶವ (ಲಿವರ್) ನ್ನು ಸೇರಿ ಅಲ್ಲಿ ಶುದ್ಧಿಯಾಗಿ ನಂತರ ಶರೀರ ಧಾತುಗಳಲ್ಲಿ ಸೇರಿ ಶರೀರ ಆರೋಗ್ಯವನ್ನು ಕಾಪಾಡುತ್ತದೆ. ತಿನ್ನುವ ಆಹಾರಗಳನ್ನನುಸರಿಸಿ ಶರೀರ ಆರೋಗ್ಯ, ಅನಾರೋಗ್ಯಗಳು, ಬಲ ಬಲಹೀನಗಳಿರುತ್ತವೆ. ಆದರೆ ತಿನ್ನುವ ಆಹಾರ ಮನಸ್ಸನ್ನು ನಿಗ್ರಹಿಸಲಾರದು, ಬುದ್ಧಿಯನ್ನು ಬದಲಾಯಿಸಲಾರದು. ಗುಣಗಳನ್ನು ಸ್ಥಂಬಿಸಲಾರದು. ಆಹಾರಕ್ಕೂ ಮನಸ್ಸಿಗೂ ಗುಣಗಳಿಗೂ ಎಂತಹ ಸಂಬಂಧವೂ ಇಲ್ಲ.

ಒಳ್ಳೆಯವರ ಸಹವಾಸ, ಒಳ್ಳೆಯದನ್ನು ಕೇಳುವುದು, ಒಳ್ಳೆಯದನ್ನು ನೋಡುವುದು, ಸದ್ಬೋದನೆಗಳು ಸತ್‌ಸಾಂಗತ್ಯವು, ಇವೇ ಮನಸ್ಸಿಗೆ ಒಳ್ಳೆಯ ಆಹಾರ. ಇವುಗಳಿಂದ ಮನಸ್ಸು ಒಳ್ಳೆಯದಾಗಿ ಬದಲಾಗಿ ಒಳ್ಳೆಯ ಗುಣಗಳೆ ಅಭ್ಯಾಸವಾಗುತ್ತವೆ. ಕೆಟ್ಟದ್ದನ್ನು ನೋಡುವುದು, ಕೇಳುವುದು ಕೆಟ್ಟವರ ಸಹವಾಸ ಅಜ್ಞಾನ ಬೋಧನೆಗಳು ಇವೆಲ್ಲವೂ ಮನಸ್ಸಿಗೆ ಕೆಟ್ಟ ಆಹಾರ. ಇವುಗಳಿಂದ ಮನಸ್ಸು ಕೆಟ್ಟದಾಗಿ ಬದಲಾಗಿ ಕೆಟ್ಟ ಗುಣಗಳೇ ಬರುತ್ತವೆ. ಸ್ಥೂಲ ಶರೀರಕ್ಕೆ ಆಹಾರ ಪ್ರಧಾನವಾದಂತೇ ಸೂಕ್ಷ್ಮವಾದ ಮನಸ್ಸು ಬುದ್ಧಿಗೆ ಅಭ್ಯಾಸಗಳು ಆಹಾರವಾಗಿ ಇವೆಯೆಂದು ತಿಳಿದುಕೊಳ್ಳಿ.

ಗೀತೆಯಲ್ಲಿ ಸಾತ್ವಿಕಾಹಾರದಿಂದ ಸಾತ್ವಿಕ ಗುಣಗಳು, ರಾಜಸಾಹಾರದಿಂದ ರಾಜಸ ಗುಣಗಳು, ತಾಮಸಾಹಾರದಿಂದ ತಾಮಸ ಗುಣಗಳು ಬರುತ್ತವೆಂದು ಇರುವಹಾಗೆ ಬಹಳ ಜನ ತಿಳಿಸುತ್ತಿದ್ದಾರೆ. ಸಂಸ್ಕೃತವನ್ನು ಕನ್ನಡದಲ್ಲಿ ಅನುವದಿಸಿದ ಸ್ವಾಮಿಗಳು ಕೆಲವರು ಗೀತೆಯಲ್ಲಿ ಆಹಾರವನ್ನನುಸರಿಸಿ ಗುಣಗಳಿವೆಯೆಂದು ಬರೆದಿದ್ದಾರೆ. ತಿಳಿಯದವರೆಲ್ಲರೂ ಅದೇ ನಿಜವೆಂದು ನಂಬುತ್ತಿದ್ದಾರೆ. ಸಂಸ್ಕೃತ ಪಾಂಡಿತ್ಯವಿರುವ ಗುರುಗಳೂ ಸಹಾ ಆ ವಿಧವಾಗಿಯೇ ಹೇಳಿ ಗೀತೆಯನ್ನು ಅವರಿಗೆ ಅನುಕೂಲವಾಗಿ ಬದಲಾಯಿಸಿಕೊಂಡಿದ್ದಾರೆ.

ಗೀತೆಯಲ್ಲಿ ಗುಣಗಳನ್ನನುಸರಿಸಿ ಆಹಾರವಿದೆಯೆಂದು ದೇವರು ತಿಳಿಸಿದ್ದಾನೆ. ಆದರೆ ಆಹಾರವನ್ನನುಸರಿಸಿ ಗುಣಗಳಿವೆಂದು ತಿಳಿಸಿಲ್ಲ. "ಸಾತ್ವಿಕ ಪ್ರಿಯಾ:" ಎಂದರೇ ಸಾತ್ವಿಕ ಗುಣವಿರುವವರಿಗೆ ಪ್ರಿಯಾವಾದದ್ದೆಂದು ಏಕೆ ಯೊಚಿಸಬಾರದು. ಹಾಗೇ ತಾಮಸ ಪ್ರಿಯಮ್ ಎಂದಾಗ ಮೊದಲು ಗುಣಗಳಿಂದ ಆಹಾರದ ಮೇಲೆ ಪ್ರೀತಿ ಬರುತ್ತದೆಂದು ಏಕೆ ಅರ್ಥ ಮಾಡಿಕೊಳ್ಳಬಾರದು.

ಕರ್ಮದಿಂದ ಸರ್ವವು ಲಭಿಸುತ್ತಿದೆ. ಹಾಗೇ ಆಹಾರವೂ ಸಹ ಲಭಿಸುತ್ತಿದೆ. ನಿನಗೆ ರುಚಿಕರವಾದ ಆಹಾರದಮೇಲೆ ಪ್ರೀತಿ ಇದ್ದರೂ ಕರ್ಮಾನುಸಾರ ಅದು ಲಭಿಸದಿರುವಾಗ, ಕೆಟ್ಟ ಆಹಾರವೇ ಲಭಿಸಿದಾಗ, ಪ್ರೀತಿಯನ್ನನುಸರಿಸಿ ಸಾತ್ವಿಕ ಗುಣವಿರುವವನಾಗೆ ಲೆಕ್ಕಿಸಿ ಕೊಳ್ಳಬೇಕು. ಆದರೆ ಕರ್ಮ ವಶದಲ್ಲಿ ಕೆಟ್ಟ ಆಹಾರವನ್ನು ತಿಂದ ಮಾತ್ರಕ್ಕೆ ತಾಮಸನಾಗಿ ಲೆಕ್ಕಿಸಬಾರದು. ಹಾಗೇ ಕೆಟ್ಟ ಆಹಾರದ ಮೇಲೆ ಪ್ರೀತಿ ಇದ್ದರು, ಕರ್ಮರಿತ್ಯಾ ಒಳ್ಳೆ ಆಹಾರವೆ ಲಭಿಸಿದರು, ಅವನನ್ನು ಮಾತ್ರ ತಾಮಸನಾಗಿಯೇ ಲೆಕ್ಕಿಸಬೆಕು. ಆದರೆ ಸಾತ್ವಿಕನಾಗಿ ಲೆಕ್ಕಿಸಬಾರದು. ಪ್ರೀತಿಯನ್ನನುಸರಿಸಿ ಗುಣವನ್ನು, ಕರ್ಮವನ್ನನುಸರಿಸಿ ಅಹಾರಗಳು ಇರುತ್ತವೆಂದು ತಿಳಿಯಬೇಕು. ಗೀತೆಯಲ್ಲಿಯೂ ಸಹ ತಿನ್ನುವವನು ಎಂದು ಹೆಳದೇ ಪ್ರೀತಿ ಇರುವವನು ಎಂದು ಹೇಳುವುದನ್ನು ಗಮನಿಸಬೇಕು.

ಯೋಗಿಗಳು ಮಿತ ಆಹಾರವನ್ನು ತೆಗೆದುಕೊಳ್ಳಬೇಕೆಂದು ಗೀತೆಯಲ್ಲಿ ದೇವರು ಹೇಳಿದ್ದಾನೆ. ಆದರೆ ಇಂತಹ ಆಹಾರ ತೆಗೆದುಕೊಳ್ಳಬೇಕೆಂದು, ಇಂತಹ ಆಹಾರ ತೆಗೆದುಕೊಳ್ಳಬಾರದೆಂದು ತಿಳಿಸಿಲ್ಲ. ದೇವರು ಮಿತಾಹಾರವೆಂದಿದ್ದಾನೆ ಆದರೆ ಅದನ್ನು ಮೀರಿ ತಿಳಿಸಿಲ್ಲವೇ! ದೇವರಿಗೆ ತಿಳಿಯದೇ!! ಸರ್ವವು ತಿಳಿದಿರುವುದರಿಂದ!!! ಕರ್ಮದಿಂದಲೇ ಒಳ್ಳೆದು ಕೆಟ್ಟದು ಆಹಾರ ಲಭಿಸುತ್ತದೆಂದು ತಿಳಿದಿರುವುದರಿಂದ ಆತನು

ಆಹಾರ ನಿಯಮಗಳನ್ನು ಇಡಲಿಲ್ಲ. ಅನುಭವದಿಂದ ತಿಳಿದುಕೊಂಡರೂ ಒಳ್ಳೆಯ ಆಹಾರವನ್ನು ತೆಗೆದುಕೊಳ್ಳುವ ಧನಿಕರೆಲ್ಲರೂ ಸಾತ್ವಿಕರಾಗಿದ್ದಾರಾ? ಇಲ್ಲ, ಅದ್ದರಿಂದ ಆಹಾರವನ್ನನುಸರಿಸಿ ಗುಣಗಳಿಲ್ಲವೆಂದು ತಿಳಿಯುತ್ತಿದೆ. ಕೆಟ್ಟವನಿಗಾದರೂ ಒಳ್ಳೆಯ ಆಹಾರ ಲಭಿಸುವುದು ಅವನ ಪುಣ್ಯವೆಂದು ತಿಳಿಯುತ್ತದೆ. ಮತ್ತು ಒಂದೇತರದ ಆಹಾರವನ್ನು ಭುಜಿಸುವ ಸೈನಿಕರೆಲ್ಲರಿಗೂ ಒಂದೇ ಗುಣ ಇಲ್ಲ. ಅದ್ದರಿಂದ ಆಹಾರವನ್ನನುಸರಿಸಿ ಗುಣಗಳಿಲ್ಲವೆಂದು, ಗುಣಗಳನ್ನನುಸರಿಸಿ ಆಹಾರದಮೇಲೆ ಪ್ರೀತಿ ಇದೆಯೆಂದು, ಆಹಾರ ಲಭಿಸುವುದು ಕರ್ಮವನ್ನನುಸರಿಸಿ ಇರುತ್ತದೆಂದು ತಿಳಿಯಬೇಕು.

**ನರ್ಮದಮ್ಮ, ತಾಡಿಪತ್ರಿ**

**96) ಸೂಕ್ಷ್ಮದಲ್ಲಿ ಮೋಕ್ಷವೆನ್ನುತ್ತಾರೆ ನಿಜವೇನಾ?**

**ಉ.** ಸರ್ವ ಪ್ರಪಂಚಕ್ಕೆಲ್ಲಾ ಅಧಿಪತಿ, ಸರ್ವಾಂತರ್ಯಾಮಿ, ಅನಂತನಾದ ಪರಮಾತ್ಮವೊಂದರ ಸಾಕಾರ(ಮನುಷ್ಯರೂಪ)ವನ್ನು ಯಾರಾದರೆ ಕಂಡುಕೊಳ್ಳುತ್ತಾನೋ ಅವನಿಗೆ ಯಾವ ಯೋಗ ಸಾಧನೆಯಿಂದ, ಯಾವ ಜ್ಞಾನ ವಿಷಯಗಳೊಂದಿಗೆ ಸಂಬಂದವಿಲ್ಲದೇ, ಎಂತಹ ಕೃಷಿಯನ್ನು ಮಾಡದೇ ಮೋಕ್ಷವನ್ನು ಹೊಂದುತ್ತಿದ್ದಾನೆ. ಅದನ್ನೇ ಸೂಕ್ಷ್ಮದಲ್ಲಿ ಮೋಕ್ಷವೆನ್ನುತ್ತಾರೆ. ಕೆಲವು ಜನ್ಮಗಳಸಹಿತ ಕೃಷಿಮಾಡಿದರೂ ಲಭಿಸದ ಮೋಕ್ಷವು ಸುಲಭವಾಗಿ ಲಭಿಸುವುದನ್ನೇ ಸೂಕ್ಷ್ಮದಲ್ಲಿ ಮೋಕ್ಷವೆನ್ನುತ್ತಾರೆ. ಉದಾ: ಭೀಷ್ಮನು ಅಂತಹ ಮೋಕ್ಷವನ್ನೇ ಶ್ರೀ ಕೃಷ್ಣ ಪರಮಾತ್ಮನಿಂದ ಹೊಂದಿದ್ದಾನೆ.

**ಪೆದ್ದಕೋಟ್ಲ ಮೊಹನ್, ಧರ್ಮವರಂ**

**97) ಮಾನವನು ಸಂತತಿಗೋಸ್ಕರ ಏಕೆ ತಾಪತ್ರಯಪಡುತ್ತಾನೆ?**

**ಉ.** ಮನುಷ್ಯನಲ್ಲಿ ಅರು ಮುಖ್ಯವಾದ ಗುಣಗಳಿವೆ. ಅದರಲ್ಲಿ ಪ್ರಮುಖ ಪಾತ್ರವಹಿಸುವ ಮೋಹವೆನ್ನುವ ಗುಣವಿದೆ. ಅ ಗುಣ ನನ್ನದೆನ್ನುವ ಭಾವದೊಳಗೇ ಮುಳಿಗಿಸುತ್ತದೆ. ನನ್ನದೆನ್ನುವ ಪ್ರತಿಯೊಂದು ಮೋಹಗುಣದಿಂದಲೇ ಉಂಟಾಗುತ್ತಿದೆ. ಆ ಗುಣವೇ ನನ್ನ ಮಕ್ಕಳೆನ್ನುವ ಬಂಧವನ್ನು ಕಲ್ಪಿಸಿ ಸಂತತಿಗೋಸ್ಕರ ತಾಪತ್ರಯ ಪಡುವಹಾಗೆ ಮಾಡುತ್ತಿದೆ. ಕರ್ಮಾನುಸಾರವೇ ಪ್ರತಿಯೊಂದು ಲಭಿಸುತ್ತಿವೆ. ಕರ್ಮಪ್ರಕಾರವೇ ಸಂತತಿ ಲಭಿಸುತ್ತದೆ. ತಾಪತ್ರಯಪಟ್ಟಷ್ಟು ಮಾತ್ರಕ್ಕೆ ಸಂತತಿ ಉಂಟಾಗುತ್ತದೆನ್ನುವ ನಂಬಿಕೆ ಇಲ್ಲ. ಪ್ರಾಪ್ತಾನುಸಾರವೇ ಸಂತತಿ ಸಂಸಾರವಿರುತ್ತದೆ.

**ನರ್ಮದಮ್ಮ, ತಾಡಪತ್ರಿ**

**98) ಭಗವಂತನೇ ಹೇಳಿಸಿದ್ದಾನೆಂದು ಹೇಳುತ್ತಾರೆ. ನಿಜವಾಗಿ ಭಗವಂತನು ಮನುಷ್ಯರಿಂದ ಹೇಳಿಸುತ್ತಾನಾ?**

ಉ. ಅಸಂಭವ. ಭಗವಂತನು ಸಾಕಾರನು, ನಿರಾಕಾರನಲ್ಲ. ಶರೀರವನ್ನು ಧರಿಸಿದ ಪರಮಾತ್ಮನನ್ನು ಭಗವಂತನೆನ್ನುವುದು ನಡೆಯುತ್ತಿದೆ. ಇನ್ನೊಬ್ಬರ ಶರೀರದಲ್ಲಿನ ಬಾಯಿ ಮಾತನ್ನು ಸಾಕಾರನಾದ ಭಗವಂತನು ಹೇಗೆ ಹೇಳಿಸುತ್ತಾನೆ. ಗುಣಗಳಿಂದ ಪ್ರೇರೇಪಿತವಾಗಿ ಮಾತನಾಡುವ ಮನುಷ್ಯನು ಭಗವಂತನು ಹೇಳಿಸುತ್ತಿದ್ದಾನೆಂದು ದೇವರ ಮೇಲೆ ಅಪವಾದವನ್ನು ಹಾಕುವುದು ಕ್ಷಮಿಸಲಾರದ ಪಾಪವನ್ನು ಹೊತ್ತುಕೊಳ್ಳುವುದೇ ಆಗಲಿ ಬೇರೆಯಲ್ಲ.

**99) "ಸರ್ವ ಭೂತಸ್ಥ ಮಾತ್ಮಾನಂ ಸರ್ವ ಭೂತಾನಿ ಚಾತ್ಮನಿ**
**ಯೀಕ್ಷತೇ ಯೋಗ ಯುಕ್ತಾತ್ಮಾ ಸರ್ವತ್ರ ಸಮದರ್ಶನಃ"**

**ಈ ಶ್ಲೋಕದ ಪ್ರಕಾರ ಯೋಗವನ್ನಾಚರಿಸುವವನು ಎಲ್ಲರನ್ನು ಸಮಾನವಾಗಿ ನೋಡಬೇಕೆಂದು, ಎಲ್ಲರಲ್ಲಿ ಆತ್ಮ ಇದೆ ಎಂದು, ಎಲ್ಲರೂ ಆತ್ಮ ಸಂಬಂಧಿಕರೆಯೆಂದು, ಇನ್ನೊಬ್ಬನು ನಿಂದಿಸಿದರೂ ಆತ್ಮೇ ತನ್ನನ್ನು ನಿಂದಿಸಿದೆಎಂದು ತಿಳಿದುಕೊಳ್ಳಬೇಕೆಂದು ಹೇಳುತ್ತಾರೆ ನಿಜವೆನ್ನುತ್ತೀರಾ?**

**ಉ.** ದೇವರು ಹೇಳಿರುವ ಶ್ಲೋಕವೇನೋ ಚೆನ್ನಾಗಿದೆ ಆದರೆ ಅರ್ಥಮಾಡಿಕೊಳ್ಳುವ ಮನುಷ್ಯನ ಬುದ್ಧಿಹೀನತೆ ಇದರಲ್ಲಿ ಕಾಣಿಸುತ್ತಿದೆ. ಯೋಗ ಯುಕ್ತಾತ್ಮಾ ಎಂದು ಶ್ಲೋಕದಲ್ಲಿ ಇದೆ. ಯಾವ ಯೋಗ ಯುಕ್ತನೆಂದು ಯೋಚಿಸುವುದು ಮನುಷ್ಯನ ಕರ್ತವ್ಯ. ಮೇಲಿನ ಶ್ಲೋಕ ಬಾಹ್ಯ ಸಂಬಂಧವನ್ನು ತ್ಯಜಿಸಿದ ಬ್ರಹ್ಮಯೋಗಿಗಳಿಗೆ ಹೇಳಿರುವುದು. ಆದರೆ ಹೊರಗಿನ ಪ್ರಪಂಚ ಸಂಬಂಧವಿರುವ ಕರ್ಮ ಯೋಗಿಗಳಿಗೆ ಅದು ಅನ್ವಯಿಸುವುದಿಲ್ಲ.

ಬ್ರಹ್ಮಯೋಗಿಗಳಿಗೆ ಮಿತ್ರ ಶತ್ರು ಭೇದಗಳು ಇಲ್ಲ. ಅವರು ಆತ್ಮದ ಮೇಲೆನೇ ದೃಷ್ಟಿಯನ್ನಿಟ್ಟು ಬಾಹ್ಯ ಪ್ರಪಂಚವನ್ನೇ ಮರೆತಿರುತ್ತಾರೆ. ಕರ್ಮ ಯೋಗಿಗಳಿಗೆ ಮಿತ್ರ ಶತ್ರು ಭೇದಗಳಿರುತ್ತವೆ. ಆದ್ದರಿಂದ ಗೀತೆಯಲ್ಲಿ ದೇವರೇ ರಾಕ್ಷಸರಾದವರನ್ನು ಪಾಪಯೋನಿಗಳಲ್ಲಿ ಹುಟ್ಟಿಸಿ ಜ್ಞಾನವೊಂದರ ದಡ (ಗಟ್ಟು) ಸಿಗದಹಾಗೆ ಮಾಡುತ್ತೇನೆಂದು ದೈವಾಸುರ ಸಂಪದ್ವಿಭಾಗ ಯೋಗವೆನ್ನುವ ಅಧ್ಯಾಯ 19, 20ನೇ ಶ್ಲೋಕಗಳಲ್ಲಿ ಹೇಳಿದ್ದಾನೆ.

ಎಲ್ಲರು ಅಲ್ಲಿ ದೇವರಿಗೆ ಸಮಾನವಾಗಿ ಇಲ್ಲವಲ್ಲವೆ? ದೇವತೆಗಳು ರಾಕ್ಷಸರು ಎನ್ನುವ ಬೇದ ಆತನಿಗೆ ಏಕೆ ಉಂಟಾಗಿದೆ ಇದಕ್ಕೆ ಸಮಾಧಾನ ಹೇಳಬಲ್ಲಿರಾ? ಮೊದಲು ಗೀತೆಯಲ್ಲಿ ಹೇಳಿದ ಕರ್ಮ ಬ್ರಹ್ಮ ಯೋಗಗಳ ಬಗ್ಗೆ ತಿಳಿದುಕೊಂಡು, ಯಾರಿಗೆ ಯಾವ ಶ್ಲೋಕ ಅನ್ವಯಿಸುತ್ತದೆಂದು ಆಲೋಚನೆಮಾಡಿ. ಆಗ ತಿಳಿಯುತ್ತದೆ ಗೀತೆಯೊಂದರ ರಹಸ್ಯ, ಗೀತೆಯನ್ನು ಅರ್ಥ ಮಾಡಿಕೊಳ್ಳದವರು ಹೇಳಿದ ಮಾತುಗಳು ಶಾಸ್ತ್ರಬದ್ಧವಾಗಿ ಹೇತುಬದ್ಧವಾಗಿ ನಿಲ್ಲುವುದಿಲ್ಲ.

**100) ರಾಹು ಕೇತುಗಳ ಹುಟ್ಟು ಪುರಾಣಗಳಲ್ಲಿ ಇದೆ. ನೀವೇನೊ ಪುರಾಣಗಳು ಅಸತ್ಯವೆಂದು ಹೇಳಿದ್ದೀರಿ. ಜ್ಯೋತಿಷ್ಯ ಶಾಸ್ತ್ರದಲ್ಲಿ ರಾಹು ಕೇತುಗಳಿದ್ದಾರೆಂದು ಹೇಳುತ್ತಿದ್ದಾರೆ. ಅಂತಹದರಲ್ಲಿ ರಾಹು ಕೇತುಗಳನ್ನು ನಂಬಬೇಕಾ, ಬಿಡಬೇಕಾ?**

ಉ. ಪುರಾಣಗಳ ಮಾತು ಅಸತ್ಯ. ರಾಹು ಕೇತುಗಳ ವಿಷಯ ನಿಜ ಹೇಳಿದರೇ ಅರ್ಥವಾಗುವುದಿಲ್ಲವೆಂದು ನನ್ನ ಮಾತೇ ಸುಳ್ಳೆಂದುಕೊಳ್ಳುತ್ತಾರೆಂದು 10 ವರ್ಷಗಳ ಕೆಳಗೇ ನಾವು ರಾಹು ಕೇತುಗಳ ಹುಟ್ಟಿನ ಕಥೆ ಪುರಾಣ ಸಂಬಂಧವೆಂದೇ ಹೇಳಿದ್ದೇವೆ. ಆದರೆ ಈದಿನ ಪೂರ್ತಿಯಾಗಿ ಖಂಡಿಸುತ್ತಾ ಸತ್ಯವನ್ನೇ ಪ್ರಕಟಿಸಬೇಕೆಂದು ತಿಳಿಸುತ್ತಿದ್ದೇವೆ. ರಾಹು ಕೇತುಗಳು ಖಗೋಳದಲ್ಲಿ ಸೂರ್ಯ ಕುಟುಂಬದೊಳಗೆ ಮಧ್ಯದಲ್ಲಿ ಬಂದಿರುವವರು. ಅವುಗಳಿಗೆ ನಿಜವಾಗಿ ಸ್ಥೂಲಶರೀರವೆ ಇಲ್ಲ. ಕೇವಲ ಸೂಕ್ಷ್ಮ ಶರೀರಗಳು ಮಾತ್ರವೇ ಇವೆ. ಖಗೋಳದಲ್ಲಿ ನಡೆಯುವ ಬದಲಾವಣೆಗಳಿಂದ ರಾಹು ಕೇತು ಛಾಯಾಗ್ರಹಗಳು ಮಧ್ಯದಲ್ಲಿ ಸೂರ್ಯ ಕುಟುಂಬದೊಳಗೆ ಪ್ರವೇಶಿಸಿವೆ. ವಿಚಿತ್ರವೇನೆಂದರೆ ಉಳಿದ ಏಳು ಗ್ರಹಗಳಿಗಿಂತಲೂ ಈ ಎರಡು ಗ್ರಹಗಳು ಬಹಳ ಶಕ್ತಿವಂತವಾದವು. ನಿಜ ಹೇಳಬೇಕೆಂದರೆ ರಾಹು ಕೇತುಗಳು ಗುರು ಶನಿ ಪಾರ್ಟಿಗಳಲ್ಲಿ ಆ ಗ್ರಹಗಳ ಮೇಲೆ ಅಧಿಪತ್ಯವನ್ನು ವಹಿಸಿ ಅವುಗಳ ಗಮನಗಳಲ್ಲಿ ಬದಲಾವಣೆ ನಡೆಯದಂತೆ ನೋಡುತ್ತಿವೆ. ಮನುಷ್ಯನ ಜೀವನಕ್ಕೆ ಸಪ್ತ ಗ್ರಹಗಳಿಗೆ ಮಧ್ಯೆ ರಾಹು ಕೇತುಗಳಿಂದ ಪೂರ್ತಿ ಸಂಬಂಧವೇರ್ಪಟ್ಟಿದೆ. ಅವುಗಳ ವಿಷಯ ಬಹಳ ಇದೆ. ಆದ್ದರಿಂದ ಇಷ್ಟಕ್ಕೆ ಮುಗಿಸುತ್ತಾ ಅವು ಶಾಸ್ತ್ರಬದ್ಧವಾಗಿರುವವೆಂದು ತಿಳಿಸುತ್ತಿದ್ದೇವೆ.

**101) ವಿಷ್ಣು, ಈಶ್ವರ, ಬ್ರಹ್ಮ ಸಾಮಾನ್ಯ ದೇವತೆಗಳಾಗಿ ನೀವು ತಿಳಿಸಿದ್ದೀರ. ಗೀತೆಯಲ್ಲಿ ಬ್ರಹ್ಮ ಹಗಲು, ಬ್ರಹ್ಮರಾತ್ರಿ ಎಂದು ದೊಡ್ಡದಾಗಿ ನೀವೇ ತಿಳಿಸಿದ್ದೀರಿ. ಕಾರಣ?**

ಉ. ಗೀತೆ ಹೇಳಿದ ಬ್ರಹ್ಮನಿಗೂ ತ್ರಿಮೂರ್ತಿಗಳ ಬ್ರಹ್ಮನಿಗೂ ಬಹಳ ವ್ಯತ್ಯಾಸವಿದೆ. ಗೀತೆಯಲ್ಲಿ ಪರಮಾತ್ಮನಿಗೆ ಬ್ರಹ್ಮ ಎಂದು ಹೆಸರು ಇಡಲಾಗಿದೆ. ಆದ್ದರಿಂದ ಗೀತೆಯಲ್ಲಿ ಬ್ರಹ್ಮನನ್ನು ದೊಡ್ಡದಾಗಿ ಹೇಳಿದ್ದೇವೆ. ಬ್ರಹ್ಮ ಎಂದರೆ ಹಿರಿಯ ಎನ್ನುವ ಅರ್ಥವಿದೆ. ಗೀತೆಯಲ್ಲಿ ಹೇಳಿದ ಬ್ರಹ್ಮನನ್ನು ಪರಮಾತ್ಮನಾಗಿ ಅರ್ಥ ಮಾಡಿಕೊಳ್ಳಬೇಕು.

**102) ಶಾಸ್ತ್ರಜ್ಞರು ಬುಧ ಗ್ರಹದ ಮೇಲೆ ಮನುಷ್ಯರಿದ್ದಾರೆಂದು ತಿಳಿಸಿದ್ದಾರೆ. ಅವರು ದೇವತೆಗಳಾಗಿರುತ್ತಾರಾ?**

ಉ. ಬುಧ ಗ್ರಹದ ಮೇಲೆ ಮನುಷ್ಯರಿದ್ದಾರೇನೋ ಎಂದು ಶಾಸ್ತ್ರಜ್ಞರು ಊಹಿಸಿ ಇರಬಹುದು. ಆದರೆ ಅಲ್ಲಿ ಮನುಷ್ಯರಿಲ್ಲ. ದೇವತೆಗಳೆನ್ನುವವರು ಗುಣಗಳನ್ನನುಸರಿಸಿ ಅವರಿಗಿರುವ ದೈವಶಕ್ತಿಯನ್ನನುಸರಿಸಿ ಇರುತ್ತಾರೆ ಆದರೆ ಇತರೆ ಗ್ರಹಗಳ ಮೆಲೆ ಇರುವವರು ದೇವತೆಗಳಲ್ಲ.

**103) ಕೆಲವರು ಭೂಮಿಯ ಮೇಲೆ ಸ್ವಲ್ಪ ಎತ್ತರದಲ್ಲಿ ಯಾವ ಆಧಾರವಿಲ್ಲದೆ ಕುಳಿತುಕೊಂಡು ಯೋಗವನ್ನಾಚರಿಸಿದ್ದಾರೆಂದು ಕೇಳಿದ್ದೇವೆ ನಿಜವಿರುತ್ತದೆಯಾ?**

ಉ. ಇರಬಹುದು. ಅದು ಪ್ರಾಣಾಯಾಮವನ್ನು ಮಾಡುವವರಿಗೆ ಸಾಧ್ಯವಾಗುತ್ತದೆ. ಶರೀರದಲ್ಲಿನ ಗಾಳಿ ಪೀಡನಶಕ್ತಿಗೆ ಶರೀರ ಮೇಲೆ ಎದ್ದು ಗಾಳಿಯಲ್ಲಿ ತೇಲಾಡುತ್ತದೆ.

**ಪುರುಷೋತ್ತಮನಾಯುಡು, ಕೂಚಿವಾರಿಪಲ್ಲಿ**

**104) ಪ್ರಬೋಧಾನಂದ ಸ್ವಾಮಿಯವರೆ ನಿಮಗೆ ದೇವರು ಕಾಣಿಸಿದರೆ ಏನು ಕೇಳಬೇಕೆಂದುಕೊಂಡಿದ್ದೀರಿ?**

ಉ. ದೇವರು ಕಾಣಿಸುವುದಿಲ್ಲಪ್ಪಾ! ಕಾಣಿಸುವವನು ಕೇಳಿಸುವವನು ದೇವರಲ್ಲ. ಕರ್ಮಪ್ರಕಾರ ಎಲ್ಲವು ನಡೆಯುತ್ತವೆನ್ನುವ ನಿಶ್ಚಯದಲ್ಲಿ ಇರಬೇಕು, ಆದರೆ ಕೋರಿಕೆಗಳು ಕೋರುವ ಆಸೆಯಲ್ಲಿ ಇರಬಾರದು.

**105) ದೇವರು ಒಬ್ಬನೇ ಎನ್ನುತ್ತಾರೆ ಆದರೆ ತ್ರಿಮೂರ್ತಿಗಳು ಮುವ್ವರಿದ್ದಾರೆ ಅಲ್ಲವೆ! ಅವರೇನಾಗುತ್ತಾರೆ?**

ಉ. ದೇವರಿಗೆ ಆಕಾರವಿಲ್ಲ. ತ್ರಿಮೂರ್ತಿಗಳಿಗೆ ಆಕಾರವಿದೆ ಆದ್ದರಿಂದ ಅವರು ನಮ್ಮಂತಹ ವ್ಯಕ್ತಿಗಳೆ. ನಮಗಿಂತ ಯೋಗಶಕ್ತಿ ಹೆಚ್ಚಾಗಿ ಇರುವವರೆಂದು ಹೇಳಬಹುದು.

ಇವರನ್ನು ಪರಮಾತ್ಮನೊಂದಿಗೆ ಹೋಲಿಸಬಾರದು. ಸಾಧಾರಣ ದೇವತೆಗಳಾಗಿ ಹೇಳಬಹುದು.

**106) ದೇವರಿಲ್ಲದೆ ಮನುಷ್ಯನು, ಮನುಷ್ಯನಿಲ್ಲದೆ ದೇವರು ಇದ್ದಾನಾ?**

ಉ. ತಲೆ ಇಲ್ಲದೆ ಶರೀರ, ಶರೀರವಿಲ್ಲದೆ ತಲೆ ಇರುತ್ತದಾ? ಹಾಗೇ ದೇವರು ಮನುಷ್ಯನು ಇದ್ದಾರೆ.

**ನಾರಾಯಣ ಶಂಕರನಾರಾಯಣ, ರಾಜಂಪೇಟ**

**107) ಕುಲ ಭೇದಗಳು ಮೊದಲೇ ಬಂದಿವೆ ಎನ್ನುತ್ತಿವೆ ಗೀತೆಯಲ್ಲಿನ ಕೆಲವು ಶ್ಲೋಕಗಳು ಅದಕ್ಕೆ ನಿಮ್ಮ ಸಮಾಧಾನ?**

ಉ. ಶಾಸ್ತ್ರ ವಾಕ್ಯದಿಂದ ಖಂಡಿಸಲಾಗದಿರುವುದೇ ಶಾಸ್ತ್ರವಾಗುತ್ತದೆ. ನೀವು ಹೇಳಿದ ಕೆಲವು ಶ್ಲೋಕಗಳು ಗೀತೆಯಿಂದಲೇ ಖಂಡಿಸಲ್ಪಡುತ್ತಿವೆ. ಆದ್ದರಿಂದ ಅವು ಗೀತೆ ಅಲ್ಲವೆಂದು ಹೇಳುತ್ತಿದ್ದೇವೆ. ಗೀತಾವಾಕ್ಯದಿಂದ ಖಂಡಿಸಲ್ಪಡುವುದು ಗೀತೆಯಲ್ಲಿರುವ ಶಾಸ್ತ್ರವಲ್ಲ, ನಿರೂಪಣೆಗೆ ಬರುವುದಿಲ್ಲ. ಗೀತೆಯಲ್ಲಿ ಕುಲ ಭೇದಗಳು ಇಲ್ಲ, ಗೀತೆಯಲ್ಲಿ ಗುಣ ಭೇದಗಳಿವೆಯೆಂದು ತಿಳಿಯಬೇಕು.

**ಪಿ. ರಾಂಬೊಜ್ಜಿ, ಧರ್ಮವರಮು**

**108) ಧ್ಯಾನ ಮಾಡುವಾಗ ಲೌಕಿಕ ವಿಷಯಗಳೇ ಜ್ಞಾಪಕಕ್ಕೆ ಬರುತ್ತವೆ ಅವುಗಳನ್ನು ನಿರೋಧಿಸಲು ಮಾರ್ಗ ಯಾವುದು?**

ಉ. ಗೀತೆಯಲ್ಲಿ ಭಗವಂತನು ಹೇಳಿದಹಾಗೆ ವೈರಾಗ್ಯ ಅಭ್ಯಾಸಗಳಿಂದಲೇ ಸಾಧ್ಯವಾಗುತ್ತದೆ.

**ಇಲ್ಲೂರು ಸೂರ್ಯನಾರಾಯಣ ಶೆಟ್ಟಿ, ಗುಂತಕಲ್**

**109) ನಿಮ್ಮ "ಪ್ರಬೋಧಾತ್ಮಜಮ್" ಪತ್ರಿಕೆ ಮೇಲೆ ಹಿಂದೂ, ಮುಸ್ಲಿಂ, ಕ್ರೈಸ್ತ ಮತಗಳಿಗೆ ಸಂಬಂಧಿಸಿದ ಚಿತ್ರವನ್ನು ಹಾಕಿದ್ದೀರ. ಅದು ಯಾವ ಧರ್ಮಾಚರಣೆಯೊ ತಿಳಿಸಬೇಕು.**

ಉ. ಅದು ನನ್ನ ಸ್ವಹಸ್ತಗಳಿಂದ ಹಾಕಿರುವ ಚಿತ್ರ. ಅದರಲ್ಲಿ ಇರುವವು ಎಷ್ಟು

ಮತಗಳಾದರೂ ಮತಗಳ ಧ್ಯೇಯ ದೈವ ಸಾಮೀಪ್ಯವನ್ನು ಸೇರುವುದೆ, ಆದ್ದರಿಂದ ಆತ್ಮ ಧರ್ಮದ ಪ್ರಕಾರ ಆ ಚಿತ್ರವನ್ನು ಅದರಲ್ಲಿ ಹಾಕಲಾಗಿದೆ. ಓಂ ಕಾರದಲ್ಲಿಯೇ ಉಳಿದ ಎರಡು ಚಿತ್ರಗಳು ಸೇರಿ ಇವೆ ಆದ್ದರಿಂದ ನಿಮಗೆ ಓಂಕಾರವೇ ದೇವರಾದರೇ, ಪೂಜ್ಯನೀಯವಾದರೆ ಎಲ್ಲಾ ಮತಗಳು ದೇವರೊಳಗಿನವೇ, ದೇವರು ಎಲ್ಲಾ ಮತದವನೇ, ಒಂದೊಂದು ಮತಕ್ಕೆ ಒಂದೊಂದು ದೇವರು ಇಲ್ಲವೆಂದು, ಎಲ್ಲರಿಗೂ ಒಬ್ಬನೇ ದೇವರೆಂದು ತಿಳಿಯಬೇಕು. ದೇವರ ಒಂದು ಅಂಶದಿಂದಲೇ ಈ ಜಗತ್ತೆಲ್ಲವೂ ಇದೆ, ಆದ್ದರಿಂದ ಎಲ್ಲಾ ಮತಗಳು ಆ ಒಂದು ಅಂಶದಲ್ಲಿರುವವೇ ಆದ್ದರಿಂದ ಏಕಾತ್ಮತಾ ಧರ್ಮದ ಪ್ರಕಾರ ಆ ಚಿತ್ರ ಹಾಕಲಾಗಿದೆ.

**110) ಆತ್ಮ ಎಂತದ್ದು?**

ಉ. ಎಲ್ಲಾ ಶರೀರಗಳಲ್ಲಿ ಜೀವಾತ್ಮದ ಜೊತೆಗೆ ಸೂಕ್ಷ್ಮವಾಗಿ ಇರುವ ನಾಶನವಿಲ್ಲದ ಅಂಶ ಆತ್ಮ.

**111) ಪರಬ್ರಹ್ಮ ವೊಂದರ ರೂಪ ಹೇಗಿರುತ್ತದೆ?**

ಉ. ಪರಬ್ರಹ್ಮಗೆ ಆಕಾರವಿಲ್ಲ.

**112) ಗುರುವನ್ನು ದೂಷಿಸಿದವರಿಗೆ ಏನು ಸಂಪ್ರಾಪ್ತಿಸುತ್ತದೆ?**

ಉ. ಕ್ಷಮಿಸಲಾರದ ಪಾಪ.

**113) ಶಿಷ್ಯನನ್ನು ದೂಷಿಸಿದ ಗುರುವಿಗೆ ಏನು ಸಂಪ್ರಾಪ್ತಿಸುತ್ತದೆ?**

ಉ. ಗುರು ಶಿಷ್ಯನನ್ನು ದೂಷಿಸುವುದು ಭಾವ್ಯ, ಸವ್ಯ. ಆದ್ದರಿಂದ ಪಾಪವನ್ನು ಕ್ಷಮಿಸಬಲ್ಲ ಶಕ್ತಿ ಬರುತ್ತದೆ. ಗುರು ಶಿಷ್ಯನಿಗೆ ಶಿಕ್ಷಣ ಕೊಡುವುದರಲ್ಲಿ ದೂಷಣೆಗಳಿರಬಹುದು. ಶಿಕ್ಷೆಯಿಂದ ಶಿಕ್ಷಣ ಅನ್ನುವ ಪದ ಶಿಷ್ಯ ಎನ್ನುವ ಪದ ಹುಟ್ಟಿದೆ. ಆದ್ದರಿಂದ ಶಿಕ್ಷಣದಲ್ಲಿ ದೂಷಣೆ ಸಹ ಇರಬಹುದು.

**114) ಮಾಯೆ ಯಾರ ಸ್ವಾಧೀನದಲ್ಲಿದೆ?**

ಉ. ಪ್ರಕೃತಿ ಪರಮಾತ್ಮನ ಸ್ವಾಧೀನದಲ್ಲಿ ಇದೆ. ಆದ್ದರಿಂದ ಮಾಯೆಯೂ ಸಹ ಪರಮಾತ್ಮನ ಸ್ವಾಧೀನದಲ್ಲಿ ಇದೆ.

**ಬಿ. ಸಾಂಬಶಿವ, ಅನಂತಪುರಮು**

**115) ಆರ್ಯಾ!**

**ಶ್ಲೋ॥ ಈಶ್ವರ ಸ್ಸರ್ವ ಭೂತಾನಾಂ ಹೃದ್ದೇ ಶೇರ್ಜುನತಿಷ್ಠತಿ!**
**ಬ್ರಾಮಯನ್ ಸರ್ವ ಭೂತಾನಿಯಂತ್ರಾ ರೂಢಾನಿಮಾಯಯಾ**

"ಸಂಸಾರ ಯಂತ್ರದಲ್ಲಿ ಅಂಟಿಕೊಂಡಿರುವ ಈ ಚರಾಚರ ಭೂತಗಳನ್ನು ತನ್ನ ಮಾಯಾ ಶಕ್ತಿಯಿಂದ ಆಡಿಸುತ್ತಾ ಪರಮೇಶ್ವರನು ಹೃದಯಗಳಲ್ಲಿ ನಿಂತಿರುವನು ಎಂದು ಗೀತಾ ವಾಕ್ಯವು" ಆದರೇ ಆ ಹೃದಯ ಸ್ಥಾನಯಾವುದು? ಜೀವಿಗಳ ಶರೀರಗಳಲ್ಲಿ ಈಶ್ವರನು ನಿವಾಸಿಸುವ ಸ್ಥಾನಯಾವುದು? ಎನ್ನುವ ವಿಷಯ ಭಿನ್ನಾಭಿಪ್ರಾಯಗಳಾಗಿದೆ?

1. (ಎ). **ತೈತ್ತೀರೀಯೊಪನಿಷತ್ತು :** ಪದ್ಮಕೋಶ ಪ್ರತೀಕಾರಂ ಹೃದಯಂ ಚಾಪ್ಯಥೋ ಮುಖಂ

(ಬಿ). **ಸುಚೋಲೋಪನಿಷತ್ತು :** ಹೃದಯಸ್ಯ ಮಧ್ಯೇಲೋ ಹಿತಂ ಮಾಂಸ ಪಿಂಡಂ ಮಧ್ಯೇ ಎನ್ನುವ ಶ್ಲೋಕಗಳಲ್ಲಿ ಜೀವಿಗಳ ಕಂಠಕ್ಕೆ ಗೇಣು ಕೆಳಗೆ ನಾಭಿಗೆ ಗೇಣು ಮೇಲಿನ ಭಾಗದಲ್ಲಿ ಮಾಂಸ ಪಿಂಡಮಯವಾಗಿ ಅಲ್ಲಾಡುತ್ತಿರುವ ತಾವರೆ ಕಮಲಾಕೃತಿಯಲ್ಲಿರುವ ಅದರಲ್ಲಿ ಮಧ್ಯೆ ರಂದ್ರದಲ್ಲಿರುವ ಜಲದಲ್ಲಿ ಈಶ್ವರನು ಪ್ರಕಾಶಿಸುತ್ತಿದ್ದಾನೆ. ಅದುವೆ ಹೃದಯ ಪದ್ಮವೆಂದು ನಿರ್ಣಯಿಸಲಾಗಿದೆ.

2. (ಎ). **ಉಮಾಸಹಸ್ರ ಗ್ರಂಥದಲ್ಲಿ**
***ತಸ್ಯ ದಕ್ಷಿಣತೋ ಧಾಮ ಹೃತ್ಪೀಠೆನೈವ ವಾಮತಃ***
***ತಸ್ಮಾತ್ ಪ್ರವಹತಿ ಜ್ಯೋತಿ ಸಹಸ್ರಾರಂ ಸುಷುಮ್ನಯಾ***

**"ಈಶ್ವರನು (ಆತ್ಮ) ಸ್ವತಃವಾಗಿ ಪ್ರಕಾಶಿಸುವ ಕಡೆ ದಹರಾಕಾಶವೆನ್ನುವ ಹೆಸರಿರುವ ಹೃದಯ. ಇದು ವಕ್ಷ ಸ್ಥಳಕ್ಕೆ ಬಲಗಡೆ ಇದೆ." ಎಂದು ಉದ್ಘಾಟಿಸುತ್ತದೆ. ಭಗವದ್ಗೀತಾ ಚಾರ್ಯನು ಹೇಳಿದ ಈಶ್ವರನು ವಾಸಿಸುವ ಜೀವಿಗಳ ಹೃದಯ ಸ್ಥಾನ ಯಾವುದು? ಸಹಸ್ರಾರದಲ್ಲಿರುವ ಪರಮಾತ್ಮ (ಗುರು) ಸ್ಥಾನಕ್ಕೆ ಹೃದಯ ಕಮಲ ಮದ್ಯವರ್ತಿ ಈಶ್ವರನಿಗೆ ಸಮನ್ವಯ ಹೇಗೆ?**

ಉ. ಉಪನಿಷತ್ತುಗಳೆಂದರೇ ನೂರಕ್ಕೆ ನೂರು ಪಾಲು ಸತ್ಯವೆಂದು ನಂಬುವವರು

ಬಹಳ ಜನ ಇದ್ದಾರೆ. ಆದ್ದರಿಂದ ಉಪನಿಷತ್ ವಾಕ್ಯರೀತಿ ಗುಂಡಿಗೆಯನ್ನೇ ಹೃದಯವಾಗಿ ಎಲ್ಲರೂ ಲೆಕ್ಕಿಸುತ್ತಿದ್ದಾರೆ. ವಾಸ್ತವವಾಗಿ ಗುಂಡಿಗೆಗೂ ಹೃದಯಕ್ಕೂ ಸಂಭಂದವೇ ಇಲ್ಲ. ಅವು ಎರಡು ಬೇರೆ ಬೇರೆಯಾಗಿವೆ. ಅವುಗಳ ಕೆಲಸದೊಳಗೆ ಭೇದವಿದೆ. ಗುಂಡಿಗೆ ರಕ್ತವನ್ನು ಮಾತ್ರ ಪಂಪ್ ಮಾಡುತ್ತಿದೆ. ಅದು ಕೆಲಸ ಮಾಡುವುದಕ್ಕೂ ಸಹ ಒಂದು ಶಕ್ತಿ ಬೇಕು, ಆ ಶಕ್ತಿ ಬ್ರಹ್ಮನಾಡಿಯಿಂದ ಬರುತ್ತಿದೆ. ಆದ್ದರಿಂದ ಗುಂಡಿಗೆ ಸ್ವಯಂಶಕ್ತಿ ಇಲ್ಲದಿರುವುದೆಂದು ತಿಳಿಯುತ್ತಿದೆ. ಚೈತನ್ಯವೇ ಇಲ್ಲದಿರುವುದು ಅದರಲ್ಲಿ ಆತ್ಮ ನಿವಾಸವಿದೆ ಎನ್ನುವುದು ಅಸತ್ಯವಾಗುತ್ತದೆ. ಆತ್ಮ ಚೈತನ್ಯ ಸ್ವರೂಪವಾಗಿರುವುದು. ಆತ್ಮ ಚೈತನ್ಯದಿಂದಲೆ ಜೀವರಾಶಿಗಳ ಶರೀರಗಳು ಚಲಿಸುತ್ತಿವೆ. ಅಂತಹದರಲ್ಲಿ ಬೇರೆ ಕಡೆ ಯಿಂದ ಪ್ರವಹಿಸುವ ಆತ್ಮ ಶಕ್ತಿಯಿಂದ ಚಲಿಸುವ ಗುಂಡಿಗೆಯಲ್ಲಿ ಆತ್ಮ ಕೇಂದ್ರವಾಗಿ ಇದೆಯನ್ನುವುದು ಅಸತ್ಯವಾಗುತ್ತದೆ.

ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗವೆನ್ನುವ ಅಧ್ಯಾಯದಲ್ಲಿ 15 ನೇ ಶ್ಲೋಕ **"ಸರ್ವಸ್ಯ ಚಾಹಂ ಹೃದಿಸನ್ನಿ ವಿಷ್ಟೋ ಮತ್ತಃ ಸ್ಮೃತಿರ್ ಜ್ಞಾನ ಮಪೋಹನಂಚ"** ನಾನು (ಆತ್ಮ) ಸರ್ವ ಜೀವಿಗಳ ಹೃದಯ ಸ್ಥಾನಗಳಲ್ಲಿ ಇದ್ದೇನೆ. ನನ್ನಿಂದಲೇ ಜ್ಞಾಪಕ, ಜ್ಞಾನವು, ಊಹೆ ಉಂಟಾಗುತ್ತಿವೆ. ಎನ್ನುವ ದೇವರ ವಾಕ್ಯದ ಪ್ರಕಾರ ಗುಂಡಿಗೆಯಲ್ಲಿ ದೇವರು ಇಲ್ಲವೆಂದು ತಿಳಿಯುತ್ತಿದೆ. ಗುಂಡಿಗೆಯಿಂದ ಜ್ಞಾನ, ಜ್ಞಪ್ತಿ, ಊಹೆಗಳು ಬರುವುದಿಲ್ಲ ಆದ್ದರಿಂದ ಗುಂಡಿಗೆಗೂ ಹೃದಯಕ್ಕೂ ಭೇದವಿದೆಯೆಂದು ತಿಳಿಯುತ್ತಿದೆ. ಎಲ್ಲಾದರೆ ಹೃದಯವಿದೆಯೊ ಅಲ್ಲಿಂದಲೇ ಜ್ಞಾಪಕ ಊಹೆಗಳು ಬರುತ್ತಿವೆಂದು ಮೇಲಿನ ಶ್ಲೋಕದ ಪ್ರಕಾರ ತಿಳಿಯುತ್ತಿದೆ. ಆದ್ದರಿಂದ ಜ್ಞಾಪಕ ಜ್ಞಾನ ಊಹೆಗಳು ಬರುವ ಮೆದುಳನ್ನೇ ಹೃದಯವೆಂದು ಶಾಸ್ತ್ರಬದ್ದವಾಗಿ ಹೇಳಬಹುದು. ಶರೀರ ಮದ್ಯದಲ್ಲಿರುವ ಮೆದುಳಿನಿಂದ ಕೆಳಗೆ ವ್ಯಾಪಿಸಿದ ಬ್ರಹ್ಮನಾಡಿಯನ್ನೇ ಹೃದಯವೆಂದು ಹೇಳಬಹುದು. ದೇವರಶಕ್ತಿ ನಿವಾಸವಿರುವ ನಾಡಿ ಆದ್ದರಿಂದ ಇದನ್ನು ಬ್ರಹ್ಮನಾಡಿ ಎನ್ನುವುದು ನಡೆಯುತ್ತಿದೆ. ಆ ಶಕ್ತಿಗೆ ಮೂಲಸ್ಥಾನ ಮೆದುಳು. ಆದ್ದರಿಂದ ಒಟ್ಟಾರೆ ಮೆದುಳು ಅದರಿಂದ ಬಂದಿರುವ ಬೆನ್ನೆಲುಬನ್ನೇ ಹೃದಯವೆಂದು ಹೇಳಬಹುದು. ಮೆದುಳು ಅದರ ನಾಡಿ ಬೆನ್ನೆಲುಬಿನಿಂದಲೇ ಸರ್ವ ಜೀವರಾಶಿಗಳು ಚಲಿಸಲ್ಪಡುತ್ತಿವೆ. ಆದ್ದರಿಂದ ನಾನು ಹೃದಯ ಸ್ಥಾನದಲ್ಲಿದ್ದು ಜಾದುಗಾರ ಗೊಂಬೆಗಳನ್ನು ಆಡಿಸುವ ರೀತಿಯಲ್ಲಿ ಕಾಣಿಸದೆ ಆಡಿಸುತ್ತಿದ್ದೇನೆಂದು ಗೀತೆಯಲ್ಲಿ ಹೇಳಿದ್ದಾನೆ.

ನೀವು ಹೇಳಿದ 1) ತೈತ್ತೀರೀಯೊಪನಿಷತ್ ಶ್ಲೋಕದಲ್ಲಿ ಹೃದಯ ಪದ್ಮಾಕಾರವಾಗಿದ್ದೂ ಅದೋ ಮುಖವಾಗಿ ವ್ಯಾಪಿಸಿಕೊಂಡಿದೆ ಎಂದು ಇದೆ. ಪದ್ಮದ ಹಾಗೆ ಇರುವುದು ಮೆದುಳು ಅದರಿಂದ ಹೊರಟಿರುವ ನಾಡಿ ಅದೋ ಮುಖವಾಗಿ ಇದೆ ಆದ್ದರಿಂದ ಆ ಶ್ಲೋಕ ಸರಿಹೋಗಿದೆ. ಎಷ್ಟು ವಿಧಗಳಾಗಿ ಪರಿಶೋಧನೆ ಮಾಡಿದರೂ ಹೃದಯವೆನ್ನುವ ಪದ ಮೆದಳಿಗೇ ಅನ್ವಯಿಸುತ್ತದೆ ಹೊರತು ಗುಂಡಿಗೆಗೆ ಮಾತ್ರ ಅನ್ವಯಿಸುವುದಿಲ್ಲವೆಂದು ತಿಳಿಯಬೇಕು. ಹೃದಯವೇ ಗುಂಡಿಗೆ ಎಂದು ಹೇಳುವವರ ವಾದನೆಯನ್ನು ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗವೆನ್ನುವ ಅಧ್ಯಾಯದಲ್ಲಿ 15 ನೇ ಶ್ಲೋಕ ಒಂದೇ ಖಂಡಿತ್ತದೆ.

**ಯಂ. ರಾಮಕ್ರಿಷ್ಣಯ್ಯ, ಬಿ. ಪಪ್ಪೂರು**

**116) ಮಾನವನು ಹುಟ್ಟಿದಾಗಿಂದ ಮಾನವನಲ್ಲಿ ಬೆಳಯದೇ ಇರುವುದು ಸ್ಥಗಿತವಾಗದಿರುವುದುಯಾವುದು? ಎಂದು ಪ್ರಶ್ನಿಸಿದರೆ ಪರಮಾತ್ಮ ಎಂದು ಹೇಳಲಾಗಿದೆ. ಆದರೆ ನಮ್ಮ ನಂಬಿಕೆ ಶರೀರದೊಳಗಿನ ಶ್ವಾಸ ಎಂದು ಇದೆ ನೀವೇನನ್ನುತ್ತೀರಾ?**

ಉ. ಪರಮಾತ್ಮ ಎನ್ನುವ ಸಮಾಧಾನವೇ ಸರಿಯಾದುದು. ಮಾನವನು ಹುಟ್ಟಿದಾಗಿಂದ ಬೆಳೆಯದಿರುವುದು ಸ್ಥಗಿತವಾಗದಿರುವುದು ಪರಮಾತ್ಮ ಸಂಬಂಧವಾದುದೇ ಆಗಲಿ ಪ್ರಕೃತಿ ಸಂಬಂಧವಲ್ಲ. ಶ್ವಾಸ ಪ್ರಕೃತಿಯೊಂದಿಗೆ ತಯಾರಾಗಿದೆ ಆದ್ದರಿಂದ ಅದು ಒಂದು ಸಲ ಬೆಳೆಯುವುದು ಒಂದುಸಲ ಇಳಿಯುವುದು ನಡಿಯುತ್ತಿದೆ. ಮನಸ್ಸು ಏಕಾಗ್ರತೆಯನ್ನು ಹೊಂದಿದಾಗ ಶ್ವಾಸ ಕಡಿಮೆಯಾಗುವುದು, ಮನಸ್ಸು ಉದ್ರೇಕ ಹೊಂದಿದಾಗ ಶ್ವಾಸ ಹೆಚ್ಚಾಗುವುದು. ಆದ್ದರಿಂದ ಶ್ವಾಸ ಬೆಳೆಯುವುದು ಇಳಿಯುವುದೆಂದು ತಿಳಿಯಬೇಕು.

**ಧೂಳಿಪಾಟಿ ಶ್ರೀನಿವಾಸಯ್ಯ, ರಾಜಂಪೇಟ**

**117) ದೇವರು ನಮ್ಮ ಮನೆಯಲ್ಲಿ ಜೊತೆಯಲ್ಲಿ ನಮ್ಮ ಹಿಂದೆ ಸರ್ವತ್ರ ಇದ್ದಾನೆ ಎನ್ನುವ ಸತ್ಯವನ್ನು ಮಾನವರು ತಿಳಿದು ತಿಳಿಯದೇ ಎಲ್ಲೋ ದೇವರಿದ್ದಾನೆನ್ನುವ ಭಾವದಿಂದ ದೂರ ಪ್ರದೇಶಗಳಿಗೆ ಪುಣ್ಯಕ್ಷೇತ್ರಗಳಿಗೆ ಹೋಗುತ್ತಿದ್ದಾರೆ. ಹಾಗೆ ಹೋಗುವುದಕ್ಕೆ ಕಾರಣವೇನು?**

ಉ. ಎಲ್ಲಾಕಡೆ ದೇವರಿದ್ದಾನೆನ್ನುವ ಸತ್ಯ ತಿಳಿಯದೇ ಹೋಗಿರುವುದು ಒಂದು ಕಾರಣ. ಆ ಕಾರಣಕ್ಕಿಂತಲೂ ದೊಡ್ಡದು ಮಾನವನಲ್ಲಿ ಆಸೆ ಎನ್ನುವ ಗುಣ ಅಲ್ಲಿಗೆ ಹೋದರೆ ಏನೋ ನೆರವೇರುತ್ತದೆ ಎನ್ನುವ ಭಾವವನ್ನು ಕಲ್ಪಿಸಿ ಕಷ್ಟ ನಷ್ಟಗಳನ್ನಾದರೂ

ಸಹಿಸಿ ಅಲ್ಲಿಗೆ ಹೋಗುವಹಾಗೆ ಮಾಡುತ್ತಿದೆ. ನಿಜ ಜ್ಞಾನವಿರುವವನು ಯಾವ ಕ್ಷೇತ್ರಗಳಿಗೂ ಹೋಗುವ ಅವಶ್ಯವಿಲ್ಲ. ತಿಳಿದವನಿಗೆ ಶರೀರವೇ ದೇವಾಲಯ ಅದರಲ್ಲಿನ ಆತ್ಮವೇ ದೇವರು.

**118) ನೀವು ಹಿಂದಿನ ಸಂಚಿಕೆಯಲ್ಲಿ ಮಂತ್ರ ಜಪಕ್ಕಿಂತಲೂ ಯೋಗಸಾಧನೆಯೇ ಮುಖ್ಯವೆಂದಿದ್ದೀರ. ವೃದ್ಧಾಪ್ಯದಲ್ಲಿರುವ ಮಾನವನು ಶರೀರ ಸಹಕರಿಸದೇ ಇರುವುದರಿಂದ ಯೋಗವನ್ನಾಚರಿಸಲಾರನು ಅಲ್ಲವೆ! ಅಂತಹವನು ಆತ್ಮಾನಂದವನ್ನು ಪರಬ್ರಹ್ಮ ಐಕ್ಯವನ್ನು ಹೊಂದುವುದಕ್ಕೆ ಸಾಧ್ಯವಾಗುತ್ತದೆಯಾ?**

ಉ. ಪರಮಾತ್ಮನನ್ನು ಹೊಂದುವುದಕ್ಕೆ ಎರಡೇ ಮಾರ್ಗಗಳಿವೆ ಎಂದು ಬಹಳ ಸಲ ನಾವು ಹೇಳಿದ್ದೇವೆ. ಒಂದು ಆಸನವನ್ನು ಹಾಕಿ ಮನೋ ನಿಗ್ರಹವನ್ನು ಹೊಂದಿ ಆತ್ಮವನ್ನು ಸೇರುವ ಯೋಗ. ಅದನ್ನೇ ಬ್ರಹ್ಮಯೋಗ ಎನ್ನುತ್ತಾರೆ. ಎರಡನೆಯದು ಆಸನವನ್ನು ಹಾಕದೇ ಮನೋ ನಿಗ್ರಹದಿಂದ ಕೆಲಸವಿಲ್ಲದೆ ಕೇವಲ ಅಹಂಕಾರವನ್ನು ಅಡಗಿಸಿ ಹಾಕಿ ಎಲ್ಲಾ ಕೆಲಸಗಳನ್ನು ಮಾಡುವುದು, ಇದನ್ನೇ ಕರ್ಮಯೋಗವೆನ್ನುತ್ತಾರೆ. ವೃದ್ಧರಿಗೆ ಬ್ರಹ್ಮಯೊಗವನ್ನಾಚರಿಸಲು ಶರೀರ ಸಹಕರಿಸುವುದಿಲ್ಲ ಆದ್ದರಿಂದ ಕರ್ಮ ಯೋಗವನ್ನು ಆಚರಿಸಬಹುದು. ಎಲ್ಲಾ ವಯಸ್ಕರಿಗೂ ಅನುಕೂಲವಾದದು ಕರ್ಮಯೋಗ. ಮನೋ ನಿಗ್ರಹದ ಮೇಲೆ ಆಧಾರಪಟ್ಟಿರುವುದು ಬ್ರಹ್ಮಯೋಗ. ಅಹಂಕಾರ ನಿಗ್ರಹದ ಮೇಲೆ ಆಧಾರಪಟ್ಟಿರುವುದು ಕರ್ಮಯೋಗವೆಂದು ತಿಳಿಯಬೇಕು.

**ಬಿ. ಕಾಟಮಯ್ಯ, ಬಿ.ಪಪ್ಪೂರು**

**119) ರಾಜಯೋಗಿ, ಬ್ರಹ್ಮಯೋಗಿ ಇವರಿಬ್ಬರಲ್ಲಿ ಯಾರು ಅದ್ವೈತನು?**

ಉ. ಜೀವಾತ್ಮ ಆತ್ಮ ಏಕವಾಗಿರುವವನೇ ಅದ್ವೈತನು. ಆದ್ದರಿಂದ ಬ್ರಹ್ಮಯೋಗಿಯೆ ಅದ್ವೈತನಾಗುತ್ತಾನೆ. ರಾಜಯೋಗಿ ಅದ್ವೈತನಲ್ಲ.

**120) ಮದುವೆ ಆಗದವರನ್ನು ಬ್ರಹ್ಮಚಾರಿ ಎನ್ನುತ್ತಾರೆ. ಮದುವೆ ಮಾಡಿಕೊಂಡವರನ್ನೂ ಸಹ ಬ್ರಹ್ಮಚಾರಿ ಎನ್ನುತ್ತಾರಾ?**

ಉ. ಬ್ರಹ್ಮಚಾರಿ ಎನ್ನುವ ಪದ ಮದುವೆಯನ್ನನುಸರಿಸಿ ಇರುತ್ತದೆಂದು ಬಹಳ ಜನರ ಅಭಿಪ್ರಾಯ. ಆದರೆ ಮದುವೆ ಮಾಡಿಕೊಳ್ಳದವನಿಗೂ ಬ್ರಹ್ಮಚಾರಿ ಪದಕ್ಕೂ

ಯಾವ ಸಂಬಂಧವೂ ಇಲ್ಲ. ಬ್ರಹ್ಮವೊಂದರ ಆಚರಣೆಯನ್ನು ಆಚರಿಸುವವನು ಬ್ರಹ್ಮಚಾರಿ ಆಗುತ್ತಾನೆ. ಅಂದರೆ ದೇವರು ಹೇಳಿರುವಹಾಗೆ ಜ್ಞಾನದ ಪ್ರಕಾರ ನಡೆದುಕೊಳ್ಳುವವನು ಬ್ರಹ್ಮಚಾರಿ ಆಗುತ್ತಾನೆ. ವಿವಾಹ ಆದವನಾಗಲಿ, ಆಗದವನಾಗಲಿ ಜ್ಞಾನದ ಪ್ರಕಾರ ನಡೆದಾಗಲೇ ಬ್ರಹ್ಮಚಾರಿ ಆಗುತ್ತಾನೆ. ಹಾಗೆ ನಡೆದುಕೊಳ್ಳದ ವಿವಾಹಿತರಾಗಲಿ ಅವಿವಾಹಿತರಾಗಲಿ ಬ್ರಹ್ಮಚಾರಿಗಳಾಗುವುದಿಲ್ಲ. ಬ್ರಹ್ಮಚಾರಿಯೆನ್ನುವ ಪದದಲ್ಲೇ ಇದೆ ಅದರಲ್ಲಿನ ಅರ್ಥ.

**121) ಜೀವಾತ್ಮ, ಅತ್ಮ, ಪರಮಾತ್ಮ ಬೇರೆಬೇರೆಯಾಗಿ ಇದ್ದಾರೆಂದು ನೀವೇ ತಿಳಿಸಿದ್ದೀರಿ, ಇವರು ಮುವ್ವರೂ ಒಂದಾಗಿ ಹೋಗುವುದು ಯಾವಾಗ?**

**ಉ.** ಜೀವಿಯು ಮೋಕ್ಷವನ್ನು ಹೊಂದಿದಾಗ.

**122) ಪಂಚ ಭೂತಗಳಿಗೂ ಆತ್ಮಕ್ಕೂ ವ್ಯತ್ಯಾಸವಿದೆಯಾ?**

**ಉ.** ಪಂಚಭೂತಗಳು ನಾಶವಾಗುವವು, ಆತ್ಮ ನಾಶವಾಗದೇ ಇರುವುದು ಅಷ್ಟೇ ವ್ಯತ್ಯಾಸ.

**123) ಪಂಚ ಭೂತಗಳಿಂದ ಶರೀರ ತಯಾರಾಗಿದೆ ಎಂದು ನೀವೇ ತಿಳಿಸಿದ್ದೀರಿ. ಅದು ಯಾವ ವಿಧವಾಗಿಯೋ ವಿವರವಾಗಿ ತಿಳಿಸಬೇಕು?**

**ಉ.** ದೇಹ ನಿರ್ಮಾಣ.

ಪ್ರಕೃತಿ ಎಂದರೇ ಪಂಚಭೂತಗಳೆಂದು ಅರ್ಥ. ಅವು 1. ಆಕಾಶ, 2. ಗಾಳಿ, 3. ಅಗ್ನಿ 4. ನೀರು, 5. ಭೂಮಿ. ಈ ಐದು ಭಾಗಗಳಿಂದ ಏರ್ಪಟ್ಟಿರುವುದೇ ಪ್ರಪಂಚ. ಪಂಚವೆಂದರೆ ಐದೆಂದು, ಪ್ರ ಎಂದರೇ ಹುಟ್ಟಿರುವುದೆಂದು ಅರ್ಥ. ಈ ಐದರಿಂದ ಏರ್ಪಟ್ಟಿರುವುದನ್ನೆ ಪ್ರಪಂಚವೆನ್ನುವ ಹೆಸರನ್ನು ಇಡಲಾಗಿದೆ. ಪಂಚ ಭಾಗಗಳು ಇರುವ ಪ್ರಕೃತಿ, ಎರಡು ವಿದಗಳಾಗಿ ಇದೆ. 1. ಬದಲಾಗದೇ ಇರುವ ಪ್ರಕೃತಿ, 2. ಬದಲಾಗುವ ಪ್ರಕೃತಿ. ಬದಲಾಗದೇ ಇರುವ ಪ್ರಕೃತಿ ಎಂದರೆ ಈದಿನ ನಮಗೆ ಗೋಚರವಾಗುವ ಆಕಾಶ,ಗಾಳಿ, ಅಗ್ನಿ, ನೀರು, ಭೂಮಿ. ಇವು ಪ್ರಪಂಚ ಹುಟ್ಟಿದಾಗಿಂದ ಪ್ರಪಂಚ ಅಂತ್ಯದವರೆಗೂ ಒಂದೇ ಧರ್ಮವನ್ನು ಹೊಂದಿಇರುತ್ತವೆ. ಉದಾಹರಣೆಗೆ ಅಗ್ನಿ ಸುಡುತ್ತದೆ ಅಲ್ಲವೆ! ಅದು ಎಂದಿಗೂ ಆ ಸ್ವಭಾವವೇ ಹೊಂದಿರುತ್ತದೆ. ಈಗ ನಾವು ಮುಖ್ಯವಾಗಿ ತಿಳಿದುಕೊಳ್ಳಬೇಕಾಗಿರುವುದು ಬದಲಾವಣೆ ಹೊಂದುವ ಪ್ರಕೃತಿಯನ್ನು.

ಬದಲಾವಣೆ ಹೊಂದುವ ಪ್ರಕೃತಿ (ಪ್ರಪಂಚ) ಜೀವರಾಶಿಗಳು ಶರೀರ ರೂಪಗಳಾಗಿ ಇದೆ. ಪಂಚ ಭೂತಗಳಿಂದಲೇ ಶರೀರಗಳು ತಯಾರಾಗಿವೆ. ಪಂಚಭೂತ ನಿರ್ಮಿತವಾದ ಶರೀರಗಳು ಬಾಲ್ಯ, ಯವ್ವನ, ಕೌಮಾರ್ಯ, ವೃದ್ಧಾಪ್ಯವೆನ್ನುವ ಬದಲಾವಣೆಗಳಾಗಿ ನಿತ್ಯವೂ ಪ್ರತಿ ಕ್ಷಣವೂ ಬದಲಾವಣೆಯೊಂದಿಗೆ ಕೂಡಿಕೊಂಡಿವೆ. ಆದ್ದರಿಂದ ಶರೀರ ನಿರ್ಮಾಣವಾದ ಪಂಚ ಭೂತಗಳನ್ನು ಬದಲಾಗುವ ಪ್ರಕೃತಿ ಎನ್ನುತ್ತಿದ್ದೇವೆ. ಬದಲಾಗುವ ಪ್ರಕೃತಿಯಿಂದ ಶರೀರಗಳು ಹೇಗೆ ತಯಾರಾಗಿವೆಯೆಂದು ತಿಳಿದುಕೊಳ್ಳುವುದು ಇಲ್ಲಿ ಮುಖ್ಯಾಂಶ.

ಬದಲಾಗುವ ಪ್ರಕೃತಿಯಾದ ಪಂಚಭೂತಗಳು ಒಂದೊಂದು ಐದು ಭಾಗಗಳಾಗಿ ವಿಭಜನೆಯಾಗಿವೆ. ಆಗ ಒಟ್ಟು 25 ಭಾಗಗಳಾಗಿವೆ.

**ಆಕಾಶ 5 ಭಾಗಗಳು** **(ಆಕಾಶ 1+1+1+1+1 = 5)**

**ಗಾಳಿ 5 ಭಾಗಗಳು** **(ಗಾಳಿ 1+1+1+1+1 = 5)**

**ಅಗ್ನಿ 5 ಭಾಗಗಳು** **(ಅಗ್ನಿ 1+1+1+1+1 = 5)**

**ನೀರು 5 ಭಾಗಗಳು** **(ನೀರು 1+1+1+1+1 = 5)**

**ಭೂಮಿ 5 ಭಾಗಗಳು** **(ಭೂಮಿ 1+1+1+1+1 = 5)**

ಒಟ್ಟು 25 ಭಾಗಗಳಾಗಿವೆ ಅಲ್ಲವೆ! ಅದರಲ್ಲಿ ಆಕಾಶ ಮೊದಲನೆಯ ಭಾಗ, ಗಾಳಿ ಎರಡನೆಯ ಭಾಗ, ಅಗ್ನಿ ಮೂರನೆಯ ಭಾಗ, ನೀರು ನಾಲ್ಕನೆಯ ಭಾಗ, ಭೂಮಿ ಐದನೆಯ ಭಾಗ ಒಂದೊಂದು 5 ಭಾಗಗಳಾಗಿ ವಿಭಜನೆಯಾಗಿವೆ. ಇಲ್ಲಿ ಪಂಚ ಭೂತಗಳ 1ನೇ, 2ನೇ, 3ನೇ, 4ನೇ, 5ನೇ ಭಾಗಗಳು ಮಾತ್ರವೇ ಪುನಃ 5 ಭಾಗಗಳಾಗಿ ವಿಭಜನೆಯಾಗಿವೆಂದು ಗಮನಿಸಬೇಕು. ಪಂಚ ಭೂತಗಳಲ್ಲಿ ಪ್ರತಿಯೊಂದರಲ್ಲಿ 4 ಭಾಗಗಳ ವಿಭಜನೆ ಉಳಿದಿವೆ. ಈಗ ವಿಭಜನೆ ಆಗಿರುವವು 25, ವಿಭಜನೆಯಾಗದಿರುವವು 20 ಭಾಗಗಳು ಇವೆ. ಆಕಾಶ 1ನೇ ಭಾಗ, ಗಾಳಿ 2ನೇ ಭಾಗ, ಅಗ್ನಿ 3ನೇ ಭಾಗ, ನೀರು 4ನೇ ಭಾಗ, ಭೂಮಿ 5ನೇ ಭಾಗಗಳು ವಿಭಜನೆಯಾಗಿರುವವು 25 ಪದಾರ್ಥಗಳು, ಉಳಿದ ವಿಭಜನೆ ಯಾಗದ 20 ಪದಾರ್ಥಗಳೊಂದಿಗೆ ಸೇರಿ ಬದಲಾವಣೆ ಹೊಂದಿ ಹೊಸ ಪದಾರ್ಥಗಳಾಗಿ ಏರ್ಪಟ್ಟ ಭಾಗಗಳೆ ಶರೀರ ಅವಯವಗಳು. ಒಂದು ಪದಾರ್ಥ ಇನ್ನೊಂದು ಪದಾರ್ಥದೊಂದಿಗೆ ಸೇರಿದಾಗ ಹೊಸ ಪದಾರ್ಥ ಏರ್ಪಡುತ್ತದೆನ್ನುವ ಸೈನ್ಸು ಸೂತ್ರದ ಪ್ರಕಾರ ಐದು ಭಾಗಗಳ ವಿಭಜನೆಯಾದ 25 ಭಾಗಗಳು ಉಳಿದ 25

ಭಾಗಗಳೊಂದಿಗೆ ಸೇರಿದಾಗ ಒಂದು ಹೊಸ ಭಾಗಗಳು ಏರ್ಪಟ್ಟಿವೆ. ಅವೇ ಶರೀರ ಭಾಗಗಳು. ಅದೇ ದೇಹ ನಿರ್ಮಾಣ. ಇಲ್ಲೊಂದು ಅನುಮಾನ ಬರಬಹುದು. ಅದು ಏನೆಂದರೆ! ವಿಭಜನೆಗಳು 25 ಇವೆ ಅಲ್ಲವೆ! ಉಳಿದ ವಿಭಜನೆ ಅಗದಿರುವವು 20 ಮಾತ್ರ ಅಲ್ಲವೆ ಆಗ 5 ಭಾಗಗಳು ಕಡಿಮೆಬರುತ್ತವೆ ಅಲ್ಲವೆ ಎಂದು ಸಂಶಯ ಬರುತ್ತದೆ. ಅದಕ್ಕೆ ಸಮಾಧಾನ ಕಡಿಮೆ ಆಗಿರುವ ಆ ಐದು ಭಾಗಗಳ ಸ್ಥಾನದಲ್ಲಿ ಆತ್ಮ ಅಂಶ ಸೇರಿದೆ. ಆದ್ದರಿಂದ ವಿಭಜನೆ ಆಗದ ಭಾಗಗಳು 20+ ಆತ್ಮ ಅಂಶ 5 ಭಾಗಗಳು ಒಟ್ಟು 25 ಭಾಗಗಳಾಗಿವೆ. ಈಗ ವಿಭಜನೆ ಯಾದ 25 ಭಾಗಗಳ ಪದಾರ್ಥಗಳು, ವಿಭಜನೆಯಾಗದ 20+5=25 ಪದಾರ್ಥಗಳು ಸೇರಿ ಶರೀರ ತಯಾರಾಗಿರುವ ವಿಧಾನವನ್ನು ಕೆಳಗೆ ತಿಳಿಸುತ್ತಿದ್ದೇವೆ.

**1**. ಆಕಾಶ ಮೊದಲನೆಯ ಭಾಗದಲ್ಲಿನ 1ನೇ ಭಾಗ + ಆತ್ಮ 1ನೇ ಅಂಶ = ಜೀವಾತ್ಮ
ಆಕಾಶ ಮೊದಲನೆಯ ಭಾಗದಲ್ಲಿನ 2ನೇ ಭಾಗ + ಗಾಳಿ 1ನೇ ಭಾಗ = ಮನಸ್ಸು
ಆಕಾಶ ಮೊದಲನೆಯ ಭಾಗದಲ್ಲಿನ 3ನೇ ಭಾಗ + ಅಗ್ನಿ 1ನೇ ಭಾಗ = ಬುದ್ಧಿ
ಆಕಾಶ ಮೊದಲನೆಯ ಭಾಗದಲ್ಲಿನ 4ನೇ ಭಾಗ + ನೀರು 1ನೇ ಭಾಗ = ಚಿತ್ತ
ಆಕಾಶ ಮೊದಲನೆಯ ಭಾಗದಲ್ಲಿನ 5ನೇ ಭಾಗ + ಭೂಮಿ 1ನೇ ಭಾಗ = ಅಹಂಕಾರ

ಈ ವಿಧವಾಗಿ ಆಕಾಶ ಮೊದಲನೆಯ ಭಾಗದಲ್ಲಿ 5 ವಿಭಜನೆಗಳಿಂದ ಹುಟ್ಟಿರುವವು ಐದು ಅಂತಃಕರಣಗಳು.

**2**. ಗಾಳಿ ಎರಡನೆಯ ಭಾಗದಲ್ಲಿನ 1ನೇ ಭಾಗ + ಆತ್ಮ 2ನೇ ಅಂಶ = ವ್ಯಾನ ವಾಯು
ಗಾಳಿ ಎರಡನೆಯ ಭಾಗದಲ್ಲಿನ 2ನೇ ಭಾಗ + ಆಕಾಶ 2ನೇ ಭಾಗ = ಸಮಾನ ವಾಯು
ಗಾಳಿ ಎರಡನೆಯ ಭಾಗದಲ್ಲಿನ 3ನೇ ಭಾಗ + ಅಗ್ನಿ 2ನೇ ಭಾಗ = ಉದಾನ ವಾಯು
ಗಾಳಿ ಎರಡನೆಯ ಭಾಗದಲ್ಲಿನ 4ನೇ ಭಾಗ + ನೀರು 2ನೇ ಭಾಗ = ಪ್ರಾಣ ವಾಯು
ಗಾಳಿ ಎರಡನೆಯ ಭಾಗದಲ್ಲಿನ 5ನೇ ಭಾಗ + ಭೂಮಿ 2ನೇ ಭಾಗ = ಅಪಾನ ವಾಯು

ಈ ವಿದವಾಗಿ ಗಾಳಿ ಎರಡನೆಯ ಭಾಗದಲ್ಲಿನ 5 ಭಾಗಗಳಿಂದ ಹುಟ್ಟಿರುವವು ಪಂಚ ವಾಯುಗಳು.

**3**. ಅಗ್ನಿ ಮೂರನೆಯ ಭಾಗದಲ್ಲಿನ 1ನೇ ಭಾಗ + ಆತ್ಮ 3ನೇ ಅಂಶ = ಕಣ್ಣು
ಅಗ್ನಿ ಮೂರನೆಯ ಭಾಗದಲ್ಲಿನ 2ನೇ ಭಾಗ + ಆಕಾಶ 3ನೇ ಭಾಗ = ಕಿವಿಗಳು
ಅಗ್ನಿ ಮೂರನೆಯ ಭಾಗದಲ್ಲಿನ 3ನೇ ಭಾಗ + ಗಾಳಿ 3ನೇ ಭಾಗ = ಚರ್ಮ
ಅಗ್ನಿ ಮೂರನೆಯ ಭಾಗದಲ್ಲಿನ 4ನೇ ಭಾಗ + ನೀರು 3ನೇ ಭಾಗ = ನಾಲಿಗೆ
ಅಗ್ನಿ ಮೂರನೆಯ ಭಾಗದಲ್ಲಿನ 5ನೇ ಭಾಗ + ಭೂಮಿ 3ನೇ ಭಾಗ = ಮೂಗು

ಈ ವಿಧವಾಗಿ ಅಗ್ನಿ ಮೂರನೆಯ ಭಾಗದಲ್ಲಿನ 5 ಭಾಗಗಳಿಂದ ಹುಟ್ಟಿರುವವು ಜ್ಞಾನೇಂದ್ರಿಯಗಳು.

**4**. ನೀರು ನಾಲ್ಕನೇ ಭಾಗದಲ್ಲಿನ 1ನೇ ಭಾಗ + ಆತ್ಮ 4ನೇ ಅಂಶ = ರುಚಿ
ನೀರು ನಾಲ್ಕನೇ ಭಾಗದಲ್ಲಿನ 2ನೇ ಭಾಗ + ಆಕಾಶ 4ನೇ ಭಾಗ = ಶಬ್ದ
ನೀರು ನಾಲ್ಕನೇ ಭಾಗದಲ್ಲಿನ 3ನೇ ಭಾಗ + ಗಾಳಿ 4ನೇ ಭಾಗ = ಸ್ಪರ್ಶ
ನೀರು ನಾಲ್ಕನೇ ಭಾಗದಲ್ಲಿನ 4ನೇ ಭಾಗ + ಅಗ್ನಿ 4ನೇ ಭಾಗ = ದೃಷ್ಠಿರೂಪ
ನೀರು ನಾಲ್ಕನೇ ಭಾಗದಲ್ಲಿನ 5ನೇ ಭಾಗ + ಭೂಮಿ 4ನೇ ಭಾಗ = ಗಂಧ

ಈ ವಿಧವಾಗಿ ನೀರು ನಾಲ್ಕನೆ ಭಾಗದಲ್ಲಿನ 5 ಭಾಗಗಳಿಂದ ತಯಾರಾಗಿರುವವು ಪಂಚತನ್ಮಾತ್ರಗಳು.

**5**. ಭೂಮಿ ಐದನೇ ಭಾಗದಲ್ಲಿನ 1ನೇ ಭಾಗ + ಆತ್ಮ 5ನೇ ಅಂಶ = ಗುದ
ಭೂಮಿ ಐದನೇ ಭಾಗದಲ್ಲಿನ 2ನೇ ಭಾಗ + ಆಕಾಶ 5ನೇ ಭಾಗ = ವಾಕ್ಕು
ಭೂಮಿ ಐದನೇ ಭಾಗದಲ್ಲಿನ 3ನೇ ಭಾಗ + ಗಾಳಿ 5ನೇ ಭಾಗ = ಕೈಗಳು
ಭೂಮಿ ಐದನೇ ಭಾಗದಲ್ಲಿನ 4ನೇ ಭಾಗ + ಅಗ್ನಿ 5ನೇ ಭಾಗ = ಪಾದಗಳು
ಭೂಮಿ ಐದನೇ ಭಾಗದಲ್ಲಿನ 5ನೇ ಭಾಗ + ನೀರು 5ನೇ ಭಾಗ = ಗುಹ್ಯ

ಈ ವಿಧವಾಗಿ ಭೂಮಿ ಐದನೆಯ ಭಾಗದಲ್ಲಿನ 5 ವಿಭಜನೆಯಾದ ಭಾಗಗಳಿಂದ ತಯಾರಾಗಿರುವವು 5 ಕರ್ಮೇಂದ್ರಿಯಗಳು.

84 ಲಕ್ಷ ವಿಧಗಳ ಜೀವರಾಶಿಗಳ ಶರೀರಗಳು ಮೇಲಿನ ವಿಧವಾಗಿ ತಯಾರಾಗಿವೆ. ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೇ ತಂದೆ ತಾಯಿಗೆ ಹುಟ್ಟಿರುವ ಮಗು ತಂದೆ ತಾಯಿ ಶರೀರ ಹೋಲಿಕೆಗಳಿರುವಹಾಗೆ ಪಂಚ ಭೂತಗಳಿಂದ ತಯಾರಾಗಿರುವ ಶರೀರ 25 ಭಾಗಗಳಲ್ಲಿ ಆ ಭೂತ ಭಾಗಗಳ ಲಕ್ಷಣಗಳು ಹೊಂದಿವೆ. ಉದಾಹರಣೆಗೆ

ಆಕಾಶ ಮೊದಲನೆ ಭಾಗ, ಗಾಳಿ ಮೊದಲನೆಯ ಭಾಗ ಸೇರಿ ತಯಾರಾದ ಮನಸ್ಸು ಆಕಾಶ ಗಾಳಿ ಲಕ್ಷಣಗಳು ಸೇರಿ ಇದೆ. ಆಕಾಶ (ಶೂನ್ಯ) ಕಾಣಿಸುವುದಿಲ್ಲ ಆದ್ದರಿಂದ ಆಕಾಶದಿಂದ ತಯಾರಾಗಿರುವವು ಕಾಣಿಸದ ಲಕ್ಷಣವನ್ನು ಹೊಂದಿದೆ. ಆದ್ದರಿಂದ ಮನಸ್ಸು ಕಾಣಿಸುವುದಿಲ್ಲ. ಹಾಗೇ ಗಾಳಿ ಲಕ್ಷಣ ಚಲಿಸುವುದು ಆದ್ದರಿಂದ ಮನಸ್ಸೂ ಸಹ ಚಂಚಲ ಸ್ವಭಾವವನ್ನು ಹೊಂದಿದೆ. ಈ ವಿಧವಾಗಿ ನಮ್ಮ ಶರೀರ ಭಾಗಗಳು ಪಂಚ ಭೂತಗಳ ಲಕ್ಷಣಗಳನ್ನು ಹೊಂದಿರುವುದೆಂದು ತಿಳಿಯಬೇಕು. ಬ್ರಹ್ಮ ವಿದ್ಯಾಭ್ಯಾಸದಲ್ಲಿ ಶರೀರ ನಿರ್ಮಾಣ ತಿಳಿಯುವುದು ಮುಖ್ಯ ಜ್ಞಾನ. ಈ ವಿಷಯ ತಿಳಿಯದೇ ಹೋದರೆ ಯಾರೂ ಜ್ಞಾನಿಗಳಲ್ಲವೆಂದು ಹಿರಿಯರು ಈ ವಿಧವಾಗಿ ಹೇಳಿದ್ದಾರೆ.

**ಪದ್ಯ :** **ಪಂಚ ತತ್ವಮುಲನು ಪಂಚೀಕರಿಂಚಕ**
**ಮಂಚಿ ಯತುಲಮನ್ನ ಮಾಟಲನ್ನ**
**ಕುಂಚಮಂದು ಗಜಮು ಗ್ರುಡ್ಡು ಪೆಟ್ಟಿನವಿದಂಬು**
**ಅಖಿಲ ಜೀವ ಸಂಗ ಆತ್ಮಲಿಂಗ**

"ಪಂಚ ಭೂತಗಳು ವಿಭಜನೆಯಾಗಿ ಶರೀರವು ಹೇಗೆ ತಯಾರಾಗಿದೆ ಎಂದು ತಿಳಿಯದೇ ಹೋದರೆ ಆನೆ ಪುಟ್ಟಿ ಕೆಳಗೆ ಮೊಟ್ಟೆ ಇಡುತ್ತದೆನ್ನುವುದು ಎಷ್ಟು ಸತ್ಯವೋ ಅಂತವರು ಜ್ಞಾನಿಗಳೆನ್ನುವ ಮಾತೂ ಸಹ ಅಷ್ಟೇ ಸತ್ಯವಾಗುತ್ತದೆ." ಆದ್ದರಿಂದ ಬ್ರಹ್ಮ ವಿದ್ಯೆಯಲ್ಲಿ ಪ್ರಾಥಮಿಕ ಪಾಠವಾದ ಶರೀರ ನಿರ್ಮಾಣವನ್ನು ಎಲ್ಲರೂ ತಿಳಿಯಿರಿ ಇತರರಿಗೆ ತಿಳಿಸಿರಿ.

**ವಿ. ಶಂಕರನಾರಾಯಣ ಬಿ.ಎ., ಧರ್ಮವರಮು**

**124) ಸಂಪೂರ್ಣ ಜ್ಞಾನಿಗಳಾದ ಮೇಲೆ ದೈವ ಧ್ಯಾನ ಮಾಡೆಂದಿದ್ದಾರೆ. ನಾವು ಸಂಪೂರ್ಣ ಜ್ಞಾನವನ್ನು ಹೊಂದಿದ್ದೇವೆಂದು ಯಾವ ವಿಧವಾಗಿ ತಿಳಿಯಬೇಕು. ಜ್ಞಾನಕ್ಕೆ ಏನಾದರೂ ಹದ್ದು ಇದೆಯಾ? ತಿಳಿಸಲು ಪ್ರಾರ್ಥನೆ.**

ಉ. ಸಂಶಯ ರಹಿತವಾಗಿ ಸವಿವರವಾಗಿ ಆತ್ಮ ವಿಷಯಗಳು ತಿಳಿದಾಗಲೆ ಸಂಪೂರ್ಣ ಜ್ಞಾನವೆನ್ನಲಾಗುತ್ತದೆ. ಆತ್ಮ ಸಂಬಂಧವಾದ ಪ್ರತಿ ಪ್ರಶ್ನೆಗೂ ಸಮಾಧಾನವನ್ನು ಹುಡುಕದೇ ಯಾರಿಗಾದರೆ ಬರುತ್ತದೆಯೊ ಅವನನ್ನೇ ಸಂಪೂರ್ಣ ಜ್ಞಾನಿ ಎನ್ನುವೆವು. ಅಂತಹ

ಸಂಪೂರ್ಣ ಜ್ಞಾನಿಗಳನ್ನು ತಿಳಿಯುವ ನಿಮಿತ್ತ ಜ್ಞಾನ ಪರೀಕ್ಷೆ ನಾವು ನಿರ್ವಹಿಸುತ್ತಾ ಇರುತ್ತೇವೆ.

**125) ಶ್ವಾಸವನ್ನು ಬಂಧಿಸಿ ಎಷ್ಟು ನೂರು ವರ್ಷಗಳಾದರೂ ಇರಬಹುದು, ಆದರೆ ಈ ದೇಹಕ್ಕೆ ಮರಣವಿದೆ ಅಲ್ಲವೆ! ಅಷ್ಟು ನೂರು ವರ್ಷಗಳವರೆಗೂ ಭೌತಿಕ ದೇಹ ಹೇಗಿರುತ್ತದೆ?**

ಉ. ನಮ್ಮ ಶರೀರಕ್ಕೆ ಶ್ವಾಸ ಸಂಖ್ಯೆಯನ್ನು ಅನುಸರಿಸಿಯೇ ಮರಣ ಸಂಭವಿಸುತ್ತದೆ. ಪ್ರಾರಬ್ಧದ ಪ್ರಕಾರ ಎಷ್ಟು ಶ್ವಾಸಗಳು ನಿಯಮಿಸಲ್ಪಟ್ಟಿವೆಯೊ ಎಲ್ಲ ಮುಗಿಯುವವರೆಗೂ ದೇಹಕ್ಕೆ ಮರಣವಿಲ್ಲ. ಶ್ವಾಸ ನಿಲ್ಲಿಸುವುದಕ್ಕೆ ಮುನ್ನ ಯಾವ ವಯಸ್ಸಿರುತ್ತದೆಯೋ ನಿಲ್ಲಿಸಿದನಂತರ ಎಷ್ಟುಕಾಲವಾದರೂ ಅದೇ ವಯಸ್ಸೇ ಇರುತ್ತದೆ. ಶ್ವಾಸ ನಡೆಯುವಾಗಲೇ ವಯಸ್ಸೂ ನಡೆಯುತ್ತದೆಂದು ತಿಳಿಯಬೇಕು.

**126) ಹುಟ್ಟಿದ ಕೂಡಲೇ ಪ್ರತಿ ಶಿಶುವು "ಕೇರ್" ಎಂದು ಅರಚುತ್ತಾರೆ. ಇದು ಯಾವ ಭಾಷೆಯಪದ ಹಾಗೆ ಅರಚುವುದಕ್ಕೆ ಕಾರಣವೇನು?**

ಉ. ಹುಟ್ಟಿರುವ ಮಗು ಅರಚುವುದು ಒಂದು "ಕೇರ್" ಎನ್ನುವುದಲ್ಲದೇ "ಕ್ವಾ"ಎಂದು, ಊಂಗ ಎಂದು ವಿಧವಿಧವಾಗಿ ಅರಚುತ್ತಿರುತ್ತಾರೆ. ಪ್ರಪಂಚದಲ್ಲಿ ಸುಮಾರು ಎರಡು ಸಾವಿರ ಭಾಷೆಗಳಲ್ಲಿ ಯಾವ ಭಾಷೆಗಾದರೂ ಆ ಪದಗಳು ಸಂಬಂಧಿಸಿ ಇರುತ್ತವೆ. ಅಷ್ಟು ಮಾತ್ರಕ್ಕೆ ಇವರು ಅರಚುವಿಕೆಗೆ ಅರ್ಥಗಳಿಲ್ಲ. ಅವರು ಅರ್ಥದೊಂದಿಗೆ ಅರಚುವುದಿಲ್ಲ. ಇರುವ ಸ್ಥಿತಿಯನ್ನು ಕಳೆದುಕೊಂಡು ಹೊಸ ಸ್ಥಿತಿಯನ್ನು ಹೊಂದಿ ದಿಕ್ಕು ತಿಳಿಯದ ಅಯೋಮಯ ಸ್ಥಿತಿಯಲ್ಲಿ ಅರಚುವ ಕೂಗೇ ಆಗಲಿ ಬೇರೆಯಲ್ಲ. ಒಂದೇ ಸಲ ಹಳೆ ಇಂದ್ರಿಯಗಳ ಸಂಬಂಧವನ್ನು ಕಳೆದುಕೊಂಡು ಸಾಮರ್ಥ್ಯವಿಲ್ಲದ ಎಳೆಯದಾದ ಹೊಸ ಇಂದ್ರಿಯಗಳ ಸಂಬಂಧ ಏರ್ಪಡುವುದನ್ನು ಜನ್ಮ ಎನ್ನುತ್ತೇವೆ. ಜನ್ಮ ಸಮಯದಲ್ಲಿ ಹಳೆಯವುಗಳನ್ನು ಕಳೆದುಕೊಂಡಿರುವೆನೆಂಬ ಜ್ಞಾಪಕ ಸಹ ಇಲ್ಲದ ಜೀವಿಯು ಅರ್ಥವಿಲ್ಲದೆ ಅರಚುವರು. ಅವುಗಳಿಗೆ ನಮ್ಮ ಹಿರಿಯರು ಕೆಲವರು ನಾನೆಲ್ಲಿಗೆ ಬಂದಿದ್ದೇನೆಂದು, ನನ್ನ ಇಂದ್ರಿಯಗಳು ಇಲ್ಲವೆಂದು ವಿಧ ವಿಧವಾದ ಅರ್ಥಗಳು ಹೇಳಿದ್ದಾರೆ. ಆದರೆ ಆಗಿನ ಜೀವಾತ್ಮನಿಗೆ ಯಾವ ಯೋಚನೆ ಆಗಲಿ, ಪ್ರಶ್ನಿಸುವ ಬುದ್ಧಿ ಅಗಲಿ ಯಾವ ಮಾತ್ರವೂ ಇಲ್ಲ. ಆದ್ದರಿಂದ ನಾವು ಅರ್ಥಗಳು ಹೇಳಿಕೊಂಡರೂ ಅವನು ಮಾತ್ರ ಯಾವ ಅರ್ಥದಿಂದಲೂ ಅರಚುತ್ತಿಲ್ಲ.

**127) ಆಹಾರದಲ್ಲಿ ಉಪ್ಪು ಹುಳಿ ಕಾರ ಕಡಿಮೆ ಮಾಡಿದರೇ ಕಾಮ (ಸ್ತ್ರೀ ಸಂಬಂಧ ಆಸೆ) ಕಡಿಮೆ ಆಗುತ್ತೆನ್ನುತ್ತಾರೆ ನಿಜವೇನಾ?**

ಉ. ಆಹಾರ ಶರೀರ ಆರೋಗ್ಯ ಅನಾರೋಗ್ಯಗಳ ಮೇಲೆ ಕೆಲಸ ಮಾಡುತ್ತದೆ. ಮಾನಸಿಕವಾಗಿ ಗುಣಗಳ ಮೇಲೆ ಯಾವ ಕೆಲಸ ಮಾಡುವುದಿಲ್ಲ. ಆಹಾರ ಲೋಪದಿಂದ ಶರೀರಕ್ಕೆ ಸ್ತ್ರೀ ಸಂಯೋಗ ಕಾರ್ಯವನ್ನು ಮಾಡಲಾರದ ಬಲಹೀನ ಸ್ಥಿತಿ ಏರ್ಪಡಬಹುದು. ಆದರೆ ಗುಣ ಮಾತ್ರ ಒಳಗೆ ಇದ್ದೇ ಇರುತ್ತದೆ. ಆಹಾರ ಬದಲಾವಣೆ ಯಿಂದ ಶರೀರ ಬಲಾಬಲವಾಗಿ ಬದಲಾಗಬಹುದು ಆದರೇ ಶರೀರದಲ್ಲಿನ ಗುಣ ಬದಲಾಗುವುದಿಲ್ಲ. ಹುಣಿಸೆ ಸತ್ತರೂ ಹುಳಿ ಸಾಯುವುದಿಲ್ಲ ಅಂದಹಾಗೆ ಶರೀರ ಕೃಶಿಸಿದರೂ ಅದರಲ್ಲಿನ ಗುಣಗಳು ಕೃಶಿಸುವುದಿಲ್ಲ. ಆದ್ದರಿಂದ ನಿಮ್ಮಂತಹ ಯುವಕರು ಅನುಭವಕ್ಕೆ ಬಾರದ, ಶಾಸ್ತ್ರವಲ್ಲದ, ಮೂಢ ನಂಬಿಕೆಗಳಾದ ಮಾತುಗಳನ್ನು ಖಂಡಿಸಿ ನಿರೂಪಣೆಗೆ ಬರುವ ವಿಷಯಗಳ ಮೇಲೆ ಆಧಾರವಾಗಿರಬೇಕು. ಎಷ್ಟೋ ಉನ್ನತವಾದ ದೈವಜ್ಞಾನ ಅಶಾಸ್ತ್ರೀಯ ಮಾತುಗಳೊಂದಿಗೆ ಮೂಢ ನಂಬಿಕೆಗಳೊಂದಿಗೆ ಈದಿನ ತುಂಬಿ ಇದೆ. ಆದ್ದರಿಂದ ಹೇತುವಾದಕ್ಕೆ ನಿಲ್ಲದೇ ಹೋಗುತ್ತಿದೆ. ನಿಮ್ಮಂತಹ ಯುವಕರು ಹೇತುಬದ್ಧವಲ್ಲದ ಮಾತುಗಳನ್ನು ಖಂಡಿಸಿ ದೈವ ವಿಷಯಗಳಿಗೆ ಬೆಳಕನ್ನು ಕೊಡುತ್ತೀರೆಂದು ಕೋರುತ್ತಿದ್ದೇವೆ.

**128) ಸ್ವಾಮಿ! ದೇವರು ಇದ್ದಾನೆಂದು ಹೇಳುತ್ತಾರೆ ಅಲ್ಲವೆ! ಅ ದೇವರು ಎಲ್ಲಿ ಇದ್ದಾನೆ. ಆತನಿಗೆ ಆಕಾರವೇನಾದರೂ ಇದೆಯಾ?**

ಉ. ದೇವರು ಸರ್ವ ಜೀವರಾಶಿಗಳ ಶರೀರಗಳಲ್ಲಿ ಇದ್ದಾನೆ. ಆ ದೇವರಿಗೆ ಆಕಾರವಿಲ್ಲ.

**129) ಮಾನವನು ಮರಣಿಸಿದ ನಂತರ ಆತನ ತಲೆ ಹಿಂದಿನ ಭಾಗದಲ್ಲಿ ದೀಪವನ್ನು ಹಚ್ಚುತ್ತಾರೆ. ಇದಕ್ಕೆ ಕಾರಣವೇನಾದರೂ ಇದೆಯಾ?**

ಉ. ಪೂರ್ವ ಕಾಲದಲ್ಲಿ ಹಿರಿಯರು ಮಾಡಿದ ಪ್ರತಿಯೊಂದಕ್ಕೂ ಅರ್ಥವಿರುತ್ತಿತ್ತು. ಆದರೆ ಈಗ ಅದು ಲೋಪಿಸಿದೆ. ಮುಖ್ಯವಾಗಿ ಪೂರ್ವಕಾಲದಲ್ಲಿ ಪರಕಾಯ ಪ್ರವೇಶ ವಿದ್ಯೆ ಕಲಿತವನು ಶರೀರವನ್ನು ಬಿಟ್ಟು ಇನ್ನೊಂದು ಶರೀರವನ್ನು ಆಶ್ರಯಿಸಿದಾಗ ಆ ಶರೀರದ ತಲೆ ಹಿಂದೆ ದೀಪವನ್ನು ಇಡುತ್ತಿದ್ದರು. ಆ ವಿಧವಾಗಿ ಇಡಬೇಕೆಂದು ಶರೀರವನ್ನು ಬಿಟ್ಟುಹೋಗುವವನೇ ಹೇಳಿರುತ್ತಿದ್ದನು. ಅದೂ ರಾತ್ರಿಹೊತ್ತು ಮಾತ್ರ ಆ ವಿಧವಾಗಿ ಇಡುತ್ತಿದ್ದರು. ಹಗಲು ಅವಶ್ಯವಿಲ್ಲ. ಶರೀರ ಬಿಟ್ಟವನು ತಿರುಗಿ ಶರೀರವನ್ನು ಸೇರಬೇಕೆಂದರೆ

ಕತ್ತಲಲ್ಲಿ ತನ್ನ ಶರೀರವನ್ನು ಗುರುತಿಸಲಾರನು ಆದ್ದರಿಂದ ಬೆಳಕಿಗೋಸ್ಕರ ಆ ವಿಧವಾಗಿ ಇಡುತ್ತಿದ್ದರು. ಶರೀರದ ಮುಖವನ್ನು ನೋಡಿಯೇ ತಾನೆ ಯಾರಾಗಿರುವುದು ಗುರುತಿಸಬಲ್ಲೆವು. ಆದ್ದರಿಂದ ಮುಖ ಕಾಣಿಸುವಹಾಗೆ ತಲೆಗೆ ಹತ್ತಿರವಾಗಿ ಚೆಂಬನ್ನಾಗಲಿ ಕುಡಿಕೆಯನ್ನಾಗಲಿ ಬೋರ್ಲವಿಟ್ಟು ಅದರಮೇಲೆ ದೀಪವನ್ನಿಟ್ಟು ಮುಖ ಸ್ಪಷ್ಟವಾಗಿ ಕಾಣಿಸುವಹಾಗೆ ಇಡುತ್ತಿದ್ದರು. ಆ ವಿಧವಾಗಿ ಇಡುವುದರಿಂದ ಮತ್ತೇ ಶರೀರವನ್ನು ಸೇರುವವನಿಗೆ ಯಾವ ತೊಂದರೆ ಇರುವುದಿಲ್ಲ. ಇದು ಪೂರ್ವಕಾಲದ ಪದ್ಧತಿ ಈಗ ಸತ್ತುಹೋದವರಿಗೂ ಸಹ ದೀಪವನ್ನಿಡಲು ಶುರು ಮಾಡಿದ್ದಾರೆ. ಒಬ್ಬರನ್ನು ನೋಡಿಕೊಂಡು ಒಬ್ಬರು ಮಾಡುತ್ತಿದ್ದಾರೆ, ಏಕೆ ಮಾಡುತ್ತಿದ್ದೇವೆಂಬ ಯೋಚನೆ ಮನುಷ್ಯನಿಗೆ ಬರಲಿಲ್ಲ. ನಿಮ್ಮಂತಹ ಜಿಜ್ಞಾಸಿಗಳು ಕೇಳಿರುವುದರಿಂದ ನಾವು ಇರುವ ಸತ್ಯವನ್ನು ಹೇಳಿದರೂ ಈಗಿನ ಮನುಷ್ಯನು ಕೇಳಿಸಿಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಹಿರಿಯರು ಮಾಡಿರುವುದು ನಾವೂ ಮಾಡಬೇಕೆನ್ನುವ ರೋಗ ಜಾಡ್ಯವಾಗಿ ವ್ಯಾಪಿಸಿದೆ. ಪೂರ್ವದ ಹಿರಿಯರು ಏಕೆ ಮಾಡಿದ್ದಾರೆ, ಯಾವ ಸಂದರ್ಭದಲ್ಲಿ ಮಾಡಿದ್ದಾರೆ ಎನ್ನುವ ಯೋಚನೆ ಸ್ವಲ್ಪವಾದರೂ ಇಲ್ಲ.

**130) ಮನುಷ್ಯನು ಸತ್ತುಹೋದಮೇಲೆ ಅವನಲ್ಲಿರುವಂತಹ ಜೀವಾತ್ಮ ಎಲ್ಲಿಗೆ ಪಯಣಿಸುತ್ತಿದೆ? ಮನುಷ್ಯನಲ್ಲಿ ಇರುವುದು ಗಾಳಿ ಎಂದು ಕೆಲವರು ಜೀವಿ ಎಂದು ಕೆಲವರು ಎನ್ನುತ್ತಿದ್ದಾರೆ. ಜೀವಿಗೂ ಗಾಳಿಗೂ ಏನಾದರೂ ವ್ಯತ್ಯಾಸವಿದೆಯಾ?**

ಉ. ಮನುಷ್ಯನು ಸತ್ತುಹೋದಮೇಲೆ ಅ ಜೀವಿ ಕರ್ಮಾನುಸಾರವಾಗಿ ತಕ್ಷಣವೇ ಮತ್ತೊಂದು ಶರೀರವನ್ನು ಧರಿಸುವುದು ನಡೆಯುತ್ತಿದೆ. ಮನುಷ್ಯನಲ್ಲಿ ಗಾಳಿಯನ್ನು ಪ್ರಾಣ ಎನ್ನುತ್ತಾರೆ. ಅದು ನಮ್ಮ ಮೂಗಿನ ರಂಧ್ರದೊಳಗೆ ಚಲಿಸುವಾಗ ಪ್ರಾಣ ಇದೆ ಯೆಂದು, ಚಲಿಸದಿರುವಾಗ ಪ್ರಾಣವಿಲ್ಲವೆಂದು ತಿಳಿಯುತ್ತಾರೆ. ನಮ್ಮ ಶರೀರದಲ್ಲಿನ ಪಂಚ ವಾಯುಗಳನ್ನೇ ಪಂಚ ಪ್ರಾಣವೆಂದು ಸಹ ಕರೆಯುತ್ತಾರೆ. ಗಾಳಿ ಬೇರೆ, ಜೀವಿ ಬೇರೆ. ಜೀವಿಗೂ ಪ್ರಾಣಕ್ಕೂ ಎಷ್ಟೋ ವ್ಯತ್ಯಾಸವಿದೆ. ಗಾಳಿಯೂ ಸಹ ಅಲ್ಲದ ಆತ್ಮ ತತ್ವವು ಜೀವಾತ್ಮ.

**131) ಸ್ವಾಮಿ! ಹೆಂಗಸರು ಗಂಡನನ್ನು ಕಳೆದುಕೊಂಡ ಮೇಲೆ ನಿತ್ಯ ಧರಿಸುತ್ತಿರುವ ಬಳೆ, ಕುಂಕುಮ, ಹೂವು, ಗಂಡನ ಜೊತೆ ಕಳೆದುಕೊಳ್ಳುತ್ತಾರೆ ಕಾರಣವೇನು?**

ಉ. ಗಂಡ ಇಲ್ಲವೆನ್ನುವ ಗುರುತಿಗೆ ಗಂಡನ ಜೊತೆಗೆ ಬಂದಿರುವ ತಾಳಿ,

ಕಾಲುಂಗುರವನ್ನು ಗಂಡ ಸತ್ತುಹೋದಮೇಲೆ ತೆಗೆಯಬಹುದು. ಬಳೆ ಮೊದಲಿನಿಂದ ಬಂದಿರುವವು. ಕುಂಕುಮ ಹೂವು ಕೇವಲ ದೇವರ ನಿಮಿತ್ತ ಇಟ್ಟಿರುವ ವಸ್ತುಗಳು ಅವುಗಳಿಗೆ ಗಂಡನಿಗೆ ಸಂಬಂಧವಿಲ್ಲ. ಅದರೂ ಮನುಷ್ಯನು ಗಂಡನಿಲ್ಲದ ಸ್ತ್ರೀಯನ್ನು ಅಂದ ಹೀನ ಮಾಡಬೇಕೆನ್ನುವ ಉದ್ದೇಶದಿಂದ ಮಾಡಿರುವ ಆಚಾರವೇ ಆಗಲಿ ಮತ್ತೆ ಬೇರೆಯಲ್ಲ. ಬ್ರಾಹ್ಮಣರಲ್ಲಿ ಬಹಳ ವಿಪರೀತವಾಗಿ ತಲೆ ಕೂದಲನ್ನೂ ಸಹ ಕಳೆದುಕೊಳ್ಳಬೇಕಾಗುತ್ತದೆ. ಹಾಗೇ ಬಣ್ಣ ಬಣ್ಣದ ಸೀರೆಗಳನ್ನೂ ಸಹ ಬಿಟ್ಟು ಕಾಷಾಯ ವಸ್ತ್ರಗಳಿಗೆ ಹತ್ತಿರವಿರುವ ಕೆಂಪು ವಸ್ತ್ರಗಳನ್ನು ಧರಿಸಬೇಕಾಗುತ್ತದೆ. ಅಷ್ಟೇ ಅಲ್ಲದೇ ವಿಧವೆ ಮುಖವನ್ನು ನೋಡಬಾರದೆಂದು ಅಪಶಕುನವೆಂದು ಗಂಡನನ್ನು ಕಳೆದುಕೊಂಡು ಮಾನಸಿಕ ಬಾಧೆಗೆ ಗುರಿಯಾದ ಸ್ತ್ರೀಯನ್ನು ಬಹಳ ನೀಚವಾಗಿ ನೋಡುವುದು ಸಹ ನಡೆಯುತ್ತಿದೆ. ಕೆಲವು ಪ್ರಾಂತಗಳಲ್ಲಿ ವಿಧವೆಯನ್ನು ನೆಂಟರೂ ಸಹ ಮನೆಯೊಳಗೆ ಕರೆದುಕೊಳ್ಳುವುದಿಲ್ಲ.

ಸಾಟಿ ಮನುಷ್ಯನಾಗಿ ಹುಟ್ಟಿ ಎಷ್ಟೋ ಸೇವೆಗಳನ್ನು ಮಾಡಿದ ಸ್ತ್ರೀಯನ್ನು ಮನುಷ್ಯನು ಸ್ವಾರ್ಥ ಬುದ್ಧಿಯಿಂದ ಅನುಮಾನಿಸಿ ಅಂದಹೀನವಾಗಿ ಮಾಡಬೇಕೆನ್ನುವ ಉದ್ದೇಶ ಹೊರತು ಚಿಕ್ಕವಯಸ್ಸಿನಿಂದ ಇರುವ  ಕೂದಲೂ ಬೊಟ್ಟನ್ನು ಬದಲಾಯಿಸುವುದರಲ್ಲಿ ಯಾವ ಅರ್ಥವು ಇಲ್ಲ. ಇದೆಲ್ಲವೂ ಕಪಟವೆಂದು ತಿಳಿದ ಹಿರಿಯರು ಸಾಯುವ ಮುನ್ನ ತಮ್ಮ ಹೆಂಡತಿಯರನ್ನು ಮುಂಡೆಯಾಗಬೇಡವೆಂದು ಹೇಳಿರುವ ಸಂಘಟನೆಗಳೂ ಸಹ ಇವೆ.

**132) ಭಾರತದಲ್ಲಿ ಅರ್ಜುನನನ್ನು ಕೃಷ್ಣನನ್ನು ನರನಾರಾಯಣರೆನ್ನುವರು. ಏಕೆ? ನರನಿಗೂ ನಾರಾಯಣನಿಗೂ ವ್ಯತ್ಯಾಸವೇನಿದೆ?**

**ಉ.** ನಾರಾಯಣನೆಂದರೇ ನಾಶನವಿಲ್ಲದವನೆಂದು, ನರನೆಂದರೇ ನಾಶನವಿರುವವನೆಂದು ಕೆಲವರು ಹೇಳುತ್ತಿದ್ದಾರೆ. ಪರಮಾತ್ಮನೇ ಮಾನವನಾಗಿ ಬಂದಾಗ ಮಾನವನ ಪರಿಧಿಯಲ್ಲೆ ಇದ್ದು ಧರ್ಮಗಳನ್ನು ತಿಳಿಸುವನು. ಸಾಮಾನ್ಯ ಮನುಷ್ಯನು ಹುಟ್ಟಿ ಎಷ್ಟು ದೊಡ್ಡ ಯೋಗಿಯಾಗಿ ಬದಲಾದರೂ ಕೇಳಿರುವ ಧರ್ಮಗಳನ್ನು ಪ್ರಚಾರ ಮಾಡಬಲ್ಲನು ಆದರೆ  ನಶಿಸಿದ ಧರ್ಮಗಳನ್ನು ಪುನಃ ತಿಳಿಸಲಾರನು. ನರನಿಗೂ ನಾರಾಯಣನಿಗೂ ಅಷ್ಟೇ ವ್ಯತ್ಯಾಸ.

**ಪಿ.ಯನ್. ವೆಂಕಟನಾಯುಡು, ಕೂಚಿವಾರಿಪಲ್ಲಿ**

**133) ಹಣ ಯಾರಿಗೆ ಕಹಿ. ಎಲ್ಲರಿಗೂ ಹಣ ಮುಖ್ಯ. ಮತ್ತೆ ಹಣ ಇಲ್ಲದವರ್ಯಾರು?**

ಉ. ತೃಪ್ತಿ ಇಲ್ಲದವನು ಎಂದಿಗೂ ಹಣ ಇಲ್ಲದವನೇ.

**134) ದೇಹವೇ ದೇವಾಲಯ ಜೀವಾತ್ಮನೆ ಸನಾತನ ದೈವ ಎನ್ನುತ್ತಾರೆ. ಮತ್ತೆ ದೇವರೆಲ್ಲಿದ್ದಾನೆ?**

ಉ. ದೇಹ ದೇವಾಲಯ ಆಗಬಹುದು ಜೀವಾತ್ಮ ದೇವರು ಅಲ್ಲ. ಆತ್ಮ ದೇವರಾಗಿ ಶರೀರ ದೇವಾಲಯದಲ್ಲಿ ಇದ್ದರೆ ಅ ದೇವರನ್ನು ಅದೇ ಗುಡಿಯಲ್ಲಿ ಭಕ್ತನಾದ ಜೀವಾತ್ಮ ಪೂಜಿಸಬೇಕು. ಆದ್ದರಿಂದ ದೇಹ ದೇವಾಲಯ, ಜೀವಾತ್ಮ ಪೂಜಿಸುವವನು, ಆತ್ಮ ದೇವರು, ಇದು ಸರಿಯಾದ ಪದ್ಧತಿ. ಹಾಗಲ್ಲದೆ ಜೀವಾತ್ಮನೇ ದೇವರಾದರೆ ಪೂಜಾರಿ ಇಲ್ಲದ ಗುಡಿ ದೇಹವಾಗುತ್ತದೆ. ಆದ್ದರಿಂದ ಜೀವಾತ್ಮನೇ ದೈವವೆನ್ನುವ ಮಾತು ಅಸತ್ಯ.

**135) ದೇವರನ್ನು ನಂಬಿದವನು ಕೆಡುವುದಿಲ್ಲ ಎಂದು ಹೇಳುತ್ತಾರೆ. ಮತ್ತೆ ದೇವರನ್ನು ನಂಬಿ ಕೆಟ್ಟವರೂ ಇದ್ದಾರಲ್ಲವೆ?**

ಉ. ತನ್ನನ್ನು ನಂಬಿದವನು ಪ್ರಪಂಚದಲ್ಲಿ ಚೆನ್ನಾಗಿರುವನೆಂದು, ನಂಬದೇ ಇರುವವನು ಕೆಡುವನೆಂದು ದೇವರು ಎಲ್ಲೂ ಹೇಳಲಿಲ್ಲ. ನಂಬಿದವನಿಗೆ ಮೋಕ್ಷ, ನಂಬದವನಿಗೆ ಕರ್ಮ ಜನ್ಮಗಳು ಲಭಿಸುತ್ತವೆಂದು ಹೇಳಿದ್ದಾನೆ. ಆದರೇ ಲಾಭ ಬರುತ್ತದೆ, ನಷ್ಟ ಬರುವುದಿಲ್ಲ, ಸುಖಬರುತ್ತದೆ, ಕಷ್ಟಬರುವುದಿಲ್ಲವೆಂದು ಹೇಳಲಿಲ್ಲ.

**136) ನಾನು ದೇವರನ್ನು ಪೂಜಿಸುವಾಗ ಮನಸ್ಸಿನಲ್ಲಿ ಹುಚ್ಚು ಆಲೋಚನೆಗಳು ಬರುತ್ತವೆ ಅವು ಬಾರದಂತೆ ಮಾಡಿಕೊಳ್ಳಬೇಕೆಂದರೇ ಏನು ಮಾಡಬೇಕು?**

ಉ. ಮನಸ್ಸಿನಲ್ಲಿ ಹುಚ್ಚು ಆಲೋಚನೆಗಳೆಂದಿದ್ದೀಯ ಅಲ್ಲವೆ! ಆ ನಿನ್ನಲ್ಲಿನ ಮನಸ್ಸಿನ ಬಗ್ಗೆ ಸಂಪೂರ್ಣವಾಗಿ ತಿಳಿದುಕೋ ಆ ನಂತರ ಎಲ್ಲಾ ಆಲೋಚನೆಗಳೂ ಬಾರದಂತೆ ಹೋಗುವ ವಿಧಾನ ಸುಲಭವಾಗಿ ತಿಳಿಯುತ್ತದೆ.

**ಎ. ನಲ್ಲಪ್ಪ. ಕೊರ್ರಕೋಡು**

**137) ತಿರುಪತಿ ದೇವರಿಗೆ ಆತನು ಕೇಳದಿದ್ದರೂ ಲಕ್ಷ ಹಾಕಿ ಬರುತ್ತಾರೆ. ಸಾಟಿ ಮಾನವನು ಕಷ್ಟದಲ್ಲಿದ್ದು ಅವಶ್ಯಕ್ಕಾಗಿ ಹತ್ತು ರೂ. ಕೊಡೆಂದು ಕೇಳಿದರೂ ಕೊಡುವುದಿಲ್ಲ ಏಕೆ ಸ್ವಾಮಿ?**

ಉ. ಕದಲುವ ಮನುಷ್ಯನಿಗಿಂತಲೂ ಕದಲದ ಆ ಕಲ್ಲು ಬಹಳ ಲಾಭವನ್ನು ಕೈಗೂಡಿಸುತ್ತದೆಂದು ಅವರ ನಂಬಿಕೆ. ಆದ್ದರಿಂದ ಕಷ್ಟಬೀಳುವ ಮನುಷ್ಯನನ್ನು ಬಿಟ್ಟು ಕಷ್ಟ ಪಡದ ಆ ಪ್ರತಿಮೆಗೆ ಮನುಷ್ಯರೇ ಬಹಳ ಲಾಭವನ್ನು ಕೈಗೂಡಿಸುತ್ತಾರೆ. ಸತ್ಯವನ್ನು ಹೇಳಬೇಕೆಂದರೇ ಮನುಷ್ಯನಿಗೆ ಪ್ರತಿಯೊಂದು ಕರ್ಮ ಪ್ರಕಾರವೇ ಲಭ್ಯವಾಗುತ್ತದೆ. ಅದು ತಿಳಿಯದ ಮನುಷ್ಯ ನಾವು ಮುಗಿದರೂ ಮುಗಿಯದಿದ್ದರೂ ಬರುವ ಅದನ್ನು ಆ ದೇವರೇ ಕೊಟ್ಟಿದ್ದಾನೆಂದು ಭ್ರಮಿಸಿ ಇಲ್ಲದಕ್ಕೆ ಆಸೆಪಟ್ಟು ಇರುವುದನ್ನು ಕೊಟ್ಟು ಬರುತ್ತಿದ್ದಾನೆ.

**ತೆನ್ಮಠಂ ಸತ್ಯಗೋಪಾಲಾಚಾರ್ಯರು, ನರಸಾಪುರಮು**

**138) ಸುಖ ದುಃಖ, ಹಸಿವು ದಾಹ, ಧನ ಕಾಂಕ್ಷೆ, ಕಾಮ ಕ್ರೋಧ, ಜನನಮರಣಗಳು ಬಾಧಿಸದ ಮಾರ್ಗವನ್ನು ತಿಳಿಸಿರಿ.**

ಉ. ಜ್ಞಾನ ತಿಳಿದು ಧರ್ಮ ಮಾರ್ಗವನ್ನನುಸರಿಸಿದಾಗ ಲಭಿಸುವ ಮೋಕ್ಷಗಮ್ಯವು ಒಂದೇ ನೀವು ಕೇಳಿದ ಸ್ಥಿತಿಯನ್ನು ಕೊಡುವ ಏಕೈಕ ಸ್ಥಾನ.

**139) ಅದೃಶ್ಯವಾದ ದೇಹಕ್ಕೆ ಪಿತೃ ದೇವತಾ ಪ್ರೀತಿಯಿಂದ ಶ್ರಾದ್ದ, ಪಿಂಡ ಪ್ರದಾನಗಳು ಹಾವ್ಯ ಕಾವ್ಯಗಳು ಏಕೆ ಆಚರಿಸಬೇಕು?**

ಉ. ಯಾರೋ ಹೇಳಿದ್ದಾರೆಂದು ಎಲ್ಲರೂ ಮಾಡುತ್ತಿದ್ದಾರೆ. ಅವೆಲ್ಲವೂ ಅವಶ್ಯವಿಲ್ಲ ವೆಂದು ನಮ್ಮ ಭಾವ. ಸತ್ತುಹೋಗುವ ಮುನ್ನವೇ ಚೆನ್ನಾಗಿ ನೋಡಿಕೊಂಡರೆ ಚೆನ್ನಾಗಿರುವುದು. ಬದುಕಿದ್ದಾಗ ಅನ್ನ ನೀಡದವನು ಸತ್ತುಹೋದಮೇಲೆ ಪಿಂಡ ಪ್ರಧಾನವೆಂದು ಎಲ್ಲಾ ಅಡಿಗೆಗಳನ್ನು ಮಾಡಿಟ್ಟರೂ ಕಾಗೆಗಳು, ಹದ್ದುಗಳು ತಿನ್ನಬೇ ಕಾಗಿರುವುದೇ ಆಗಲಿ ಏನು ಪ್ರಯೋಜನ ವಿರುವುದಿಲ್ಲ.

**140) ಜೀವಾತ್ಮ ಪ್ರೇತವಾಗಿ ಬದಲಾಗುವುದಕ್ಕೆ ಕಾರಣವೇನು? ಪ್ರೇತ ರೂಪ ವಿಮೋಚನೆಗೆ ವಿಧಿಗಳಾವವು?**

ಉ. ಪ್ರಾರಬ್ದದಲ್ಲಿ ಶಾರೀರಕ ಕರ್ಮ ಮುಗಿದು ಮಾನಸಿಕ ಕರ್ಮ ಮಾತ್ರ ಉಳಿದವರಿಗೆ ಮರಣದ ನಂತರ ಪ್ರೇತವಾಗುವುದು ಇದೆ. ವಿಮೋಚನೆಗಾಗಿ ಯಾವ ವಿಧಿಗಳು ಉಪಯೋಗವಾಗುವುದಿಲ್ಲ. ಅವರ ಕರ್ಮ ಮುಗಿದಾಗಲೇ ವಿಮೋಚನೆಯಾಗಿ ಮರುಜನ್ಮಕ್ಕೆ ಹೋಗುವನು.

**141) ಜೀವಾತ್ಮ ಯಾವ ಕೋರಿಕೆಯಿಂದ ಪ್ರಾಣ ಬಿಡುವನೋ ಪುನಃ ಆ ಕೋರಿಕೆ ತೀರಿಸುಕೊಳ್ಳುವುದಕ್ಕೆ ಅನುವಾದ ಶರೀರವನ್ನು ಧರಿಸುವನಾ?**

ಉ. ಅಂತ್ಯ ಸಮಯದಲ್ಲಿ ಇರುವ ಜ್ಞಾಪಕವನ್ನನುಸರಿಸಿ ಜನ್ಮ ಬರುವುದು ಸಹಜ, ಆ ಜ್ಞಾಪಕ ಬದುಕಿದ ಜೀವನ ಸಾರಾಂಶವನ್ನು ಅನುಸರಿಸಿ ಇರುತ್ತದೆ. ಅಂತ್ಯಕಾಲದಲ್ಲಿ ಯಾವ ಜ್ಞಾಪಕ ಇರುತ್ತದೋ ಆ ವಿಷಯ ಸಂಬಂಧ ಜನ್ಮ ಬರುತ್ತದೆಂದು ಶಾಸ್ತ್ರ ಸಿದ್ಧಾಂತ ಸಹ ಇದೆ. ಕೊನೆಯ ಜ್ಞಾಪಕ ದೈವದ ಮೇಲೆ ಇದ್ದರೆ ಶರೀರವನ್ನು ಧರಿಸದೆ ದೈವವನ್ನು ಸೇರುವನು. ಭಗವದ್ಗೀತೆ ಅಕ್ಷರ ಪರಬ್ರಹ್ಮ ಯೋಗದಲ್ಲಿ ಆರನೇ ಶ್ಲೋಕವನ್ನು ನೋಡಿದರೆ ಪೂರ್ತಿ ವಿವರ ಅರ್ಥ ಆಗಬಹುದು.

**142) ತಮಗೆ ಮಾಡಿದ ಒಳ್ಳೆಯದನ್ನು ಮರೆತುಹೋಗಿ ಕೃತಜ್ಞರಾಗಿ, ಉಪಕಾರ ಮಾಡಿದವರಿಗೇ ಅಪಕಾರವನ್ನು ಮಾಡುವ ಗುರುದ್ರೋಹಿಗಳು ಯಮದಂಡನೆಗೆ ಶಿಕ್ಷಾರ್ಹರಾ? ಅಥವಾ ಪ್ರೇತ ರೂಪಿಗಳಾಗುತ್ತಾರಾ?**

ಉ. ಪ್ರೇತ ರೂಪ ಮಾನಸಿಕ ಕರ್ಮದ ಮೇಲೆ ಆಧಾರಪಟ್ಟಿದೆ. ಆದ್ದರಿಂದ ಪ್ರೇತ ರೂಪ ಬರುವುದಿಲ್ಲ. ಮರುಜನ್ಮದಲ್ಲಿ ಭೂಮಿ ಮೇಲೆಯೇ ಯಮದಂಡನೆಗೆ (ಕರ್ಮ ಪ್ರಭಾವಕ್ಕೆ) ಗುರಿಯಾಗುತ್ತಾರೆ.

**143) ಪ್ರಕೃತಿ ಸಂಬಂಧ ಪ್ರಳಯ ಯಾವಾಗ ಬರುತ್ತದೆ?**

ಉ. ಗೀತೆಯಲ್ಲಿ ಹೇಳಿದಹಾಗೆ ಕಲಿಯುಗ 250 ಸಲ ನಡೆದಾಗ. 250ನೇ ಸಲ ನಡೆಯುವ ಕಲಿಯುಗ ಅಂತ್ಯದಲ್ಲಿ ಪ್ರಳಯ ಸಂಭವಿಸುತ್ತದೆ. ಅಂದರೆ ಒಟ್ಟು ಸಾವಿರ ಯುಗಗಳು ಕಳೆದಾಗ.

**ಸಿ. ಚಿದಂಬರ ರೆಡ್ಡಿ, ಅನಂತಪುರಂ**

**144) ಧ್ಯಾನ ವಿಲ್ಲದೆ ಯೋಗವನ್ನು ಸೇರಲಾರೆವಾ?**

ಉ. ಜ್ಞಾನವನ್ನು ಅಚರಿಸುವುದೇ ಧ್ಯಾನವೆನ್ನುತ್ತೇವೆ. ಅದು ಬ್ರಹ್ಮಯೋಗದಲ್ಲಿಯೇ ಮುಖ್ಯವಾಗಿ ಹೇಳಲಾಗುತ್ತಿದೆ. ಕಣ್ಣು ಇಲ್ಲದೇ ದೃಶ್ಯವನ್ನು ನೋಡದಹಾಗೆ ಧ್ಯಾನವಿಲ್ಲದೆ ಆತ್ಮನನ್ನು ತಿಳಿಯಲಾರೆವು.

**145) ಹಿಂದೆ ಕೇಳಿರುವ ಪ್ರಶ್ನೆ – ಉತ್ತರಗಳಲ್ಲಿ ಒಂದು ಪ್ರಶ್ನೆಗೆ ನಿಮ್ಮ ಸಮಾಧಾನ ಪರಮಾತ್ಮ ಓದಾದರೇ "ಮೂರು ಪೂರ್ತಿಮಾಡಿ ನಾಲ್ಕರಲ್ಲಿ ಇದ್ದೇನೆ ಐದಕ್ಕೆ ಹೋಗಬೇಕೆಂದು ಹೇಳಿದ್ದೀರಿ. ಮೂರು ನಾಲ್ಕು ಐದು ಎಂದರೆ ಏನೋ ಅರ್ಥ ಆಗಲಿಲ್ಲ. ತಿಳಿಸಲು ಪ್ರಾರ್ಥನೆ.**

ಉ. ಮೂರು ಗುಣ ಸ್ಥಾನಗಳನ್ನು ಬಿಟ್ಟು ನಾಲ್ಕನೆಯದಾದ ಆತ್ಮ ಸ್ಥಾನದಲ್ಲಿ ಇದ್ದೇನೆ. ಐದನೆಯದಾದ ಮೋಕ್ಷವನ್ನು ಹೊಂದಬೇಕೆಂದು ಬರೆದಿದ್ದೇವೆ. ಪರಮಾತ್ಮ ಓದು ಗುಣಗಳು ಆತ್ಮ ಪರಮಾತ್ಮ ಮೇಲೆ ಇರುತ್ತವೆ. ಆದ್ದರಿಂದ ನಾನು ಓದಿದರ ಬಗ್ಗೆ ಹೇಳಿದ್ದೇನೆ.

**146) ಪುತ್ರರು ಇಲ್ಲದವರಿಗೆ ಪುನ್ನಾಮ ನರಕವೆಂದಿದ್ದಾರೆ ನಿಜವೇನಾ?**

ಉ. ಶುದ್ಧ ಅಸತ್ಯ. ಯಾವನ ಕರ್ಮವನ್ನನುಸರಿಸಿ ಅವನಿಗೆ ನರಕವಿರುತ್ತದೆ. ಆದರೆ ಪುತ್ರರನ್ನು ಅನುಸರಿಸಿಯಾಗಲಿ ಮತ್ತು ಯಾವ ಇತರರನ್ನನುಸರಿಸಿಯಾಗಲಿ ಕರ್ಮ ಬದಲಾವಣೆ ಇರುವುದಿಲ್ಲ.

**147) ಬಾಲ್ಯದಲ್ಲಿ ಬಾಲ ಬಾಲಕಿಯರಿಗೆ ಆಧ್ಯಾತ್ಮಿಕ ಚಿಂತನೆಯ ಅವಶ್ಯಕತೆ ಇಲ್ಲವೆಂದು ಕೆಲವರು ಹಿರಿಯರು ಹೇಳುತ್ತಾರೆ ನಿಜವೇನಾ?**

ಉ. ಸ್ವಲ್ಪ ಕಾಲವೇ ಉಪಯೋಗಪಡುವ ಪ್ರಪಂಚ ವಿದ್ಯೆ ಕಲಿಯುವುದಕ್ಕೆ ಬಾಲ್ಯ ಬರುವುದಕ್ಕೆ ಮುನ್ನ ಶಿಶುದಶೆಯಲ್ಲಿಯೇ ಶುರು ಮಾಡುವ ಹಿರಿಯರು ಶಾಶ್ವತವಾದ ದೊಡ್ಡದಾದ ಬ್ರಹ್ಮ ವಿದ್ಯೆಯನ್ನು ಬಾಲ್ಯದಲ್ಲಿ ಏಕೆ ಕಲಿಯಬಾರದೆಂದಿದ್ದಾರೆಂದರೇ ಬ್ರಹ್ಮವಿದ್ಯೆ ಯೊಂದರ ಬೆಲೆ ಅವರಿಗೆ ತಿಳಿಯದು ಆದ್ದರಿಂದ ಅವರು ವಯಸ್ಸಿಗೆ ಹಿರಿಯರೇ ಆಗಲಿ ಬುದ್ದಿಗೆ ಹಿರಿಯರಲ್ಲ. ಬಾಲ್ಯದಿಂದ ಕಲಿಸಿದರೇನೇ ಬ್ರಹ್ಮ ವಿದ್ಯೆ ಚೆನ್ನಾಗಿ ಅಭ್ಯಾಸ ವಾಗುತ್ತದೆ. ಬ್ರಹ್ಮವಿದ್ಯೆ ಕಾಷಾಯ ವಸ್ತ್ರಗಳನ್ನು ಹಾಕಿಸುತ್ತದೆಂದು ಕೆಲವರು ಭಯದಿಂದ ಆ ವಿಧವಾಗಿ ಸಹ ಹೇಳಿರಬಹುದು. ನಿಜವಾದ ಬ್ರಹ್ಮವಿದ್ಯೆಯಲ್ಲಿ ಕಾಷಾಯವಸ್ತ್ರಗಳು ಹಾಕಬೇಕಾದ ಅವಶ್ಯಕತೆ ಇಲ್ಲ. ಈ ವಿಷಯದಲ್ಲಿ ಇಸ್ಲಾಮ್ ಮತವನ್ನು, ಕ್ರೈಸ್ತ ಮತವನ್ನು ನೋಡಿ ಕಲಿಯಬೇಕಾಗಿದೆ. ಅವರು ಸಣ್ಣ ವಯಸ್ಸಿನಿಂದಲೇ ಇಸ್ಲಾಮ್ ಬಗ್ಗೆ ಕ್ರೈಸ್ತವವನ್ನು ಕುರಿತು ಮಕ್ಕಳಿಗೆ ತಿಳಿಸುತ್ತಾರೆ.

**148) ಗ್ರಾಮ ದೇವತೆಗಳು, ಕ್ಷುದ್ರ ದೇವತೆಗಳು ಯಾರು? ಅವರಿಂದ ಮೋಕ್ಷವನ್ನು ಹೊಂದಬಹುದಾ?**

ಉ. ಗ್ರಾಮ ದೇವತೆಗಳು, ಕ್ಷುದ್ರ ದೇವತೆಗಳು ಇಬ್ಬರೂ ಒಂದೇ ಬೇರೆಬೇರೆಯಲ್ಲ. ಅವರಿಂದ ಕರ್ಮಗಳು ಬರುತ್ತವೆ ಆದರೇ ಮೋಕ್ಷ ಬರುವುದಿಲ್ಲ.

**ಜಿ. ಮಲ್ಲೇಶ್ವರಿ, ಮದ್ರಾಸು**

**149) ಕಾಲಕ್ರಮೇಣ ಧರ್ಮಗಳ ಸ್ಥಾನದಲ್ಲಿ ಅಧರ್ಮಗಳು ತಯಾರಾಗುತ್ತವೆಂದು ನೀವೇ ಹೇಳಿದ್ದೀರ ಅಂತದರಲ್ಲಿ ಏನೂ ತಿಳಿಯದ ನಾವು ಯಾವುದನ್ನು ಧರ್ಮ ಎಂದುಕೊಳ್ಳಬೇಕು?**

ಉ. ನಿರೂಪಣೆಗೆ ಬರುವುದು ಧರ್ಮ, ಬಾರದಿರುವುದು ಅಧರ್ಮ. ಆದ್ದರಿಂದ ಶಾಸ್ತ್ರದ ಪ್ರಕಾರ ನಿರೂಪಣೆಗೆ ಬರುವುದನ್ನೇ ಧರ್ಮವೆಂದು ತಿಳಿಯಬೇಕು.

**150) ಧರ್ಮವೆಂದರೇ ಏನು?**

ಉ. ದೇವರ ಬಗ್ಗೆ ತಿಳಿಸುವ ಶಾಸನ ಅಥವಾ ಸಿದ್ಧಾಂತ.

**151) ಕಾಲ ಬೆಲೆಯುಳ್ಳದ್ದಾ, ಜ್ಞಾನ ಬೆಲೆಯುಳ್ಳದ್ದಾ?**

ಉ. ಕಾಲವನ್ನು ತಿಳಿಸುವುದು ಜ್ಞಾನ. ಜ್ಞಾನ ತಿಳಿದನಂತರವೇ ಕಾಲವೆಂದರೇ ಏನೆಂದು ತಿಳಿಯುವುದು. ಆದ್ದರಿಂದ ಮೊದಲು ಜ್ಞಾನ ತದನಂತರ ಕಾಲ ದೊಡ್ಡದು. ಕಾಲವೇ ನಾನೆಂದು ಪರಮಾತ್ಮ ಗೀತೆಯಲ್ಲಿ ವಿಶ್ವರೂಪಸಂದರ್ಶನ ಸಮಯದಲ್ಲಿ ಉತ್ತರಹೇಳಿದ್ದಾನೆ. ದೈವ ಸ್ವರೂಪವಾದ ಕಾಲವೊಂದರ ನಿಜ ಸ್ವರೂಪವನ್ನು ತಿಳಿಯಬೇಕೆಂದರೆ ಮೊದಲು ಜ್ಞಾನ ಅವಶ್ಯಕತೆ.

**152) ಸೀನುಗಳು, ಕಟ್ಟಿಗೆಗಳು ಅಶುಭಗಳೆಂದು ವೀಳ್ಯದೆಲೆ, ತೆಂಗಿನಕಾಯಿ ಶುಭ ಸೂಚಕವೆಂದು ಭಾವಿಸುತ್ತಾರೆ ನಿಜವೇನಾ?**

ಉ. ಸೀನುಗಳು, ಕಟ್ಟಿಗೆಗಳು ಅಶುಭವಲ್ಲ. ವೀಳ್ಯದೆಲೆ, ತೆಂಗಿನಕಾಯಿ ಶುಭವಲ್ಲ. ಗ್ರಹಚಾರ ಸರಿಇಲ್ಲದಾಗ ಸೀನು, ಕಟ್ಟಿಗೆ ಅಶುಭವೆನಿಸುತ್ತದೆ. ಗ್ರಹಚಾರ ಚೆನ್ನಾಗಿದ್ದಾಗ ಎಲ್ಲಾ ಶುಭಗಳೇ ಆಗುತ್ತವೆ.

**153) ಕೆಲವು ಪಂಚಾಂಗಗಳಲ್ಲಿ ಇಂತಿಂತಹ ಸಮಯದಲ್ಲಿ ಪ್ರಯಾಣಿಸಿದರೇ ಚೆನ್ನಾಗಿರುತ್ತದೆಂದು, ಇದು ಒಳ್ಳೆಯ ಕಾಲ, ಇದು ಕೆಟ್ಟಕಾಲವೆಂದು ಬರೆದಿರುತ್ತಾರೆ. ಅದು ನಿಜವೇನಾ?**

ಉ. ಒಳ್ಳೆದು ಕೆಟ್ಟದು ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಪಂಚಾಂಗದಿಂದ ತಿಳಿದುಕೊಳ್ಳುವ ಫಲಿತಗಳೆಂದು, ನಾಮ ನಕ್ಷತ್ರಗಳನ್ನನುಸರಿಸಿ ನೋಡಿಕೊಳ್ಳಬಹುದೆಂದು ಬರೆದಿರುವವು ಸತ್ಯಗಳಲ್ಲ. ಪಂಚಾಂಗ ತಿಥಿ ವಾರ ನಕ್ಷತ್ರಗಳನ್ನು ಗಣಿತ ರೂಪವಾಗಿ ತಿಳಿಸ ಬಲ್ಲದು, ಆದರೆ ಫಲಿತಗಳನ್ನು ತಿಳಿಸುವುದಿಲ್ಲ. ಅದರಲ್ಲಿ ಇರುವವೆಲ್ಲ ಸತ್ಯ ಫಲಿತಗಳಲ್ಲ.

**154) ನಾವು ಮನಸ್ಸಿನಿಂದ ಮಾಡುವ ಪ್ರಾರ್ಥನೆಗಳು ಗುರುವಿಗೆ ಸೇರುತ್ತವೆಂದು ಅದರಿಂದ ಆಶೀರ್ವಾದಗಳು ಗುರುವಿನಿಂದ ಲಭಿಸುತ್ತವೆಂದು ನಮ್ಮ ನಂಬಿಕೆ ನೀವೇನೆನ್ನುತ್ತೀರ?**

ಉ. ಒಂದು ವಿಧವಾಗಿ ನಂಬಿಕೆ ಎನ್ನುವುದು ಬಹಳ ದೊಡ್ಡದು. ಆ ನಂಬಿಕೆ ಎಷ್ಟು ದೊಡ್ಡ ಕಾರ್ಯಗಳನ್ನಾದರೂ ಮಾಡಬಲ್ಲದು. ನಿಜ ಗುರುವು ನಿಮ್ಮಲ್ಲೇ ಇದ್ದಾನೆ ಆದರೆ ಆತನಿಗೆ ದಯೆಯಿಲ್ಲ ಆಶೀರ್ವಾದ ಕೊಡುವುದಿಲ್ಲ. ಹಾಗೆಂದು ಸುಮ್ಮನಿರುವವನೂ ಅಲ್ಲ. ನಿಮಗೆ ಆತನ ಮೇಲೆ ಎಷ್ಟು ಭಕ್ತಿ ಶ್ರದ್ಧೆ ಹೆಚ್ಚುತ್ತವೋ ಅಷ್ಟು ಜ್ಞಾನ ಆತನಿಂದ ಲಭಿಸಬಲ್ಲದು.

**155) ಸೂರ್ಯ ಗ್ರಹಣ ಸಮಯದಲ್ಲಿ ಕೆಲವು ಕಿರಣಗಳಿಂದ ಕೆಟ್ಟದು ನಡೆಯುತ್ತದೆಂದು, ಅದರ ದೋಷ ನಿವಾರಣೆಗೆ ಧರ್ಭೆಗಳನ್ನು ಎಲ್ಲದರಲ್ಲಿ ಹಾಕಬೇಕೆಂದು ಸ್ನಾನ ಮಾಡಬೇಕೆಂದು ಮನೆಯೆಲ್ಲಾ ತೊಳೆದುಕೊಳ್ಳಬೇಕೆಂದು ಬಹಳ ನಿಯಮಗಳನ್ನು ಹೇಳುತ್ತಾರೆ ಅವೆಲ್ಲಾ ಅವಶ್ಯವಾ?**

ಉ. ಸೂರ್ಯ ಗ್ರಹಣ ಸಮಯದಲ್ಲಿ ಸೂಕ್ಷ್ಮ ಕಿರಣಗಳು ಹರಡುವುದು ನಿಜವೇ ಆದರೆ ಅದರಿಂದ ಎಲ್ಲರಿಗೂ ಅಪಾಯ ಇರುವುದಿಲ್ಲ. ಜಾತಕರೀತ್ಯಾ ಸೂರ್ಯನು ವ್ಯತಿರೇಖಿಯಾಗಿ ಆರನೆ ಸ್ಥಾನದಲ್ಲಿ ಇರುವಾಗಾಗಲಿ ಆ ಸ್ಥಾನವನ್ನು ನೋಡುವುದಾಗಲಿ ನಡೆದರೂ ಅಂತಹವರಿಗೆ ಸೂರ್ಯ ಗ್ರಹಣ ಸಮಯದಲ್ಲಿ ಹರಡುವ ಕಿರಣಗಳಿಂದ ದೋಷವಿರಬಹುದು. ಉಳಿದವರಿಗೆ ಯಾವ ದೋಷವಿಲ್ಲ. ಆ ಕಿರಣಗಳು ಯಾವೇ ಆಗಲಿ ಮನುಷ್ಯನ ದೇಹದಮೇಲೆನೇ ಕೆಲಸ ಮಾಡುತ್ತವೆ. ಆದ್ದರಿಂದ ಎಲ್ಲದರಲ್ಲಿ ದರ್ಭೆಗಳು ಹಾಕುವುದರಿಂದ ಅರ್ಥವಿಲ್ಲ. ಕೆಲವು ರೋಗಗಳು ಇರುವವರು ಸೂರ್ಯ ಗ್ರಹಣ ಸಮಯದಲ್ಲಿ ಹೊರಗೆ ಸೂರ್ಯರಶ್ಮಿಯಲ್ಲಿ ಇರುವುದರಿಂದ ಅವರ ರೋಗಗಳು ನಿವಾರಣೆಯಾದ ಸಂಘಟನೆಗಳು ಇವೆ. ಆದ್ದರಿಂದ ಸೂರ್ಯ ಗ್ರಹಣ ಎಲ್ಲರಿಗೂ ಕೇಡು ಮಾಡುವದಲ್ಲ.

**156) ಗಿಡ ಮರಗಳಿಗೆ ಪ್ರಾಣವಿದೆ ಎಂದು ಹೇಳಿದ್ದೀರ. ನಮ್ಮ ಆಹಾರ ಅವುಗಳ ಮೇಲೆನೇ ಆಧಾರಬಿದ್ದಿದೆ. ಕೊನೆಗೆ ಸಾಂಬಾರು ತಿಂದರೂ ಅವನ್ನು ಬಾಧಿಸಿದವರಾಗುತ್ತೇವೆ. ಆಹಾರ ಪಚನಕ್ಕೆ ಉಪಯೋಗಿಸುವ ಸೌದೆಗಳು ಸಹ ಗಿಡ ಕತ್ತರಿಸದೇ ಬರೊಲ್ಲ. ಅಂತಹದರಲ್ಲಿ ನಮಗೆ ಪಾಪ ಬರುತ್ತದೆನ್ನುತ್ತೀರಾ?**

ಉ. ಹಿಂಸೆ ಎಂದ ಮೇಲೆ ಯಾವುದಾದರೂ ಹಿಂಸೆಯೇ ಅಲ್ಲವೆ! ಪಾಪ ಎಂದ ಮೇಲೆ ಯಾವುದಾದರೂ ಪಾಪವೇ ಅಲ್ಲವೆ! ನಾವು ಮಾಡುವ ಪ್ರತಿಯೊಂದು ಕೆಲಸಕ್ಕೂ ಪಾಪವೋ ಪುಣ್ಯವೋ ಇದ್ದೇ ಇರುತ್ತೇ. ಆದ್ದರಿಂದ ಹಿಂಸೆಗೆ ಪಾಪ ತಪ್ಪದೇ ಬರುತ್ತದೆ. ಹಾಗೆಂದು ಆಹಾರವನ್ನು ಬಿಡಲಾರೆವು. ಅಹಿಂಸೆಯಿಂದ ಇದ್ದು ಬದುಕ ಲಾರೆವು. ಇಂತಹ ಸಮಯದಲ್ಲಿ ಗೀತೆಯಲ್ಲಿ ದೇವರು ಹೇಳಿದ **"ಯಜ್ಞಾರ್ಥಾ ತ್ಕರ್ಮಣೋನ್ಯತ್ರ ಲೋಕೋಯಂ ಕರ್ಮಬನ್ಧನಃ"** ಎನ್ನುವ ವಿಧಾನವನ್ನು ಆಚರಿಸಿದರೇ ಯಾವ ಕರ್ಮ ಅಂಟದೇ ಬದುಕ ಬಹುದು.

**157) ವೀರಬ್ರಹ್ಮಯ್ಯನವರು ಏಳನೆಯ ಮಾಸದಲ್ಲಿಯೇ ಗರ್ಭದಲ್ಲಿ ಶಿಶುವಿಗೆ ಪ್ರಾಣ ಬರುತ್ತದೆಂದಿದ್ದಾರೆ. ನೀವೇನೊ ಗರ್ಭದಿಂದ ಶಿಶು ಹೊರಗೆ ಬಂದ ನಂತರ ಪ್ರಾಣ ಬರುತ್ತದೆ ಎಂದಿದ್ದೀರ. ಯಾವುದನ್ನು ನಂಬಬೇಕು?**

ಉ. ಕುರುಡರಾಗಿ ಯಾವುದನ್ನೂ ನಂಬಬೇಡಿ ಯಾವುದು ನಿರೂಪಣೆಗೆ ಬರುತ್ತದೋ ಅದನ್ನೇ ನಂಬಿರಿ. ವೀರಬ್ರಹ್ಮಯ್ಯನವರು ಭವಿಷ್ಯತ್ ಕಾಲದ ಬಗ್ಗೆ ತಾಳೆ ಎಲೆಗಳ ಮೇಲೆ ಬರೆದಿದ್ದಾರೆ ಆದರೇ ಗರ್ಭಸ್ಥ ಶಿಶುವಿನ ಕುರಿತು ಬರೆದಿಲ್ಲ. ಆತನು ಇರುವಾಗ ಆತನ ಬೋಧನೆಯನ್ನು ಕೇಳಿದವನು ಒಬ್ಬ ಸಿದ್ದಯ್ಯ ಮಾತ್ರ. ಆ ಬೋಧನೆ ಸಿದ್ದಯ್ಯನ ವರೆಗೆ ಪರಿಮಿತವಾಗಿದೆ. ಈದಿನ ಬ್ರಹ್ಮಯ್ಯನವರ ಹೆಸರಿಟ್ಟು ಬರೆದವರು ಆಕಾಲದವರಲ್ಲ. ಇವರು ಆತನ ಹೆಸರಿನಮೇಲೆ ಬರೆದಿರುವ ಬರಹಗಳು ಆತನ (ಬ್ರಹ್ಮಯ್ಯನವರ) ವಲ್ಲ. ಬ್ರಹ್ಮಯ್ಯನವರು ರಹಸ್ಯವಾಗಿ ಸಿದ್ದಯ್ಯನಿಗೆ ತಿಳಿಸಿದ ಷಟ್‌ಚಕ್ರ ವಿವರದ ಬಗ್ಗೆ ಆದಿನ ಕಳ್ಳನಂತೆ ಕೇಳಿದ ಕಕ್ಕಯ್ಯನಿಗೆ ಅರ್ಥವಾಗಲಿಲ್ಲ. ಆ ವಿಷಯವನ್ನು ಈಗಿನವರು ಹೇಗೆ ಬರೆಯಲಾಗುತ್ತದೆ? ಆತನು ತಾಳೆ ಎಲೆಗಳನ್ನು ಗ್ರಂಧರೂಪ ಮಾಡಿದ ಕಾಲ ಜ್ಞಾನ ಹೊರತು ಆತನ ಹೆಸರಿನ ಮೇಲೆಬರುವ ಕೆಲವು ವಿಷಯಗಳು ಗಿಡದ ಹೆಸರನ್ನು ಹೇಳಿ ಕಾಯಿಗಳನ್ನು ಮಾರಿಕೊಳ್ಳುವಂತದ್ದು. ಬ್ರಹ್ಮಯ್ಯನವರು ದೊಡ್ಡ ಯೋಗಿ. ಇವತ್ತಿಗೂ ಸಜೀವವಾಗಿ ಯೋಗದಲ್ಲಿರುವವನು. ಆತನು ಎಂದಿಗೂ ಅಸತ್ಯವಾಕ್ಯಗಳನ್ನು

ಹೇಳಿರುವುದಿಲ್ಲ. ನಿರೂಪಣೆಗೆ ಬಾರದ ವಿಷಯಗಳು ಆತನ ಹೇಸರಿನಮೇಲೆ ಕಲ್ಪಿಸಿದವೆಂದು ತಿಳಿಯಬೇಕು. ಶಿಶು ಜನ್ಮದ ಬಗ್ಗೆ ನಾವು ಪ್ರಕಟಿಸಿರುವುದು ನೂರುಪಾಲು ಶಾಸ್ತ್ರ ಬದ್ಧವಾದ ಸತ್ಯ. ಅದಕ್ಕೆ ಗೀತೆ ಆಧಾರವಾಗಿದೆ. ಈಗಲೂ ಪ್ರತ್ಯಕ್ಷವಾಗಿ ನಡೆಯುತ್ತಿದೆ.

**158) ಪ್ರತಿ ಜೀವಿ ಮರಣಿಸಿದ ಕೂಡಲೇ ಜನ್ಮಿಸುತ್ತಾನಾ ಅಥವಾ ಯಾವುದಾದರೂ ಲೋಕದಲ್ಲಿ ಕೆಲವು ಕಾಲವಿರುತ್ತಾನಾ?**

ಉ. ಸತ್ತುಹೋದ ಕ್ಷಣವೇ ಬೇರೆ ಶರೀರವನ್ನು ಧರಿಸುವುದು ನಡೆಯುತ್ತಿದೆ. ಬೇರೆ ಲೋಕಗಳಿಗೆ ಹೋಗುವುದು ಯಾವುದೂ ಇಲ್ಲ, ಬೇರೆ ಲೋಕಗಳು ಅಸಲಿಗೇ ಇಲ್ಲ. ಅಕಾಲ ಮೃತ್ಯುವನ್ನು ಹೊಂದಿದವರು ಮಾತ್ರ ಅವರ ಆಯುಸ್ಸು ಮುಗಿದು ಕಾಲ ಮರಣ ಬರುವವರೆಗೂ ಸೂಕ್ಷ್ಮವಾಗಿ ಇರುತ್ತಾರೆ. ಪೂರ್ತಿ ಮರಣ ಸಂಭವಿಸಿದ ನಂತರ ಹೊಸ ದೇಹವನ್ನು ಧರಿಸುತ್ತಾರೆ.

**159) ಅಂಗ ಸೌಷ್ಠವ ಇರುವವರಿಗೆ ಬೇಗ ಜ್ಞಾನ ಸಿಗುತ್ತದೆಂದು ಅಂದಹೀನವಾಗಿ ಮೆಳ್ಳಗಣ್ಣು, ಬೆಕ್ಕಿನ ಕಣ್ಣುಗಳು, ದಪ್ಪ ತುಟಿಗಳು ಇರುವವರಿಗೆ ಪರಮಾತ್ಮ ವಿಷಯಗಳು ಆಲಸ್ಯವಾಗಿ ತಿಳಿಯಲ್ಪಡುತ್ತದೆನ್ನುತ್ತಾರೆ ನಿಜವೇನಾ?**

ಉ. ಅಂಗ ಸೌಷ್ಠವಕ್ಕೂ ಜ್ಞಾನ ಅವಗಾಹನೆಗೂ ಸಂಬಂಧವೇ ಇಲ್ಲ.

**160) ರಾಮ ಕೃಷ್ಣ ಪರಮಹಂಸ, ರಮಣ ಮಹರ್ಷಿ, ವಿವೇಕಾನಂದ ಮೊದಲಾದವರು ದೊಡ್ಡ ಯೋಗಿಗಳೆಂದು ಅವರು ದೇವರಲ್ಲಿ ಐಕ್ಯವಾದವರೆಂದು ನಂಬುತ್ತಿದ್ದೇವೆ. ನೀವೇನನ್ನುತ್ತೀರ.**

ಉ. ಗೀತೆಯಲ್ಲಿ ದೇವರಲ್ಲಿ ಐಕ್ಯವಾಗುವ ಸಮಯ ಒಂದು ಸೂತ್ರದ ಪ್ರಕಾರ ನಿರ್ಣಯವಾಗಿದೆ. ಯೋಗಿಗಳಿಗೆ ಮಾತ್ರವೇ ಆ ಸೂತ್ರ ಅನ್ವಯಿಸುತ್ತದೆ. ಯೋಗಿಗಳು ಮರಣಿಸಿದ ಸಮಯವನ್ನು ಅನುಸರಿಸಿ ಅವರು ಮೋಕ್ಷವನ್ನು ಹೊಂದಿರುವುದು ಅಥವಾ ಜನ್ಮಕ್ಕೆ ಹೋಗಿರುವುದು ತಿಳಿದುಕೊಳ್ಳಬಹುದು. ಮೂವರು ರಾತ್ರಿಯ ಹೊತ್ತು ಮರಣಿಸಿದ್ದಾರೆ, ಆದ್ದರಿಂದ ಮೇಲಿನ ಮೂವರು ಮೋಕ್ಷಕ್ಕೆ ಹೋಗಿಲ್ಲ.

**ಯಂ. ಖಾಜಾಮೈನುದ್ದೀನ್, ಗರುಗುಚಿಂತಲಪಲ್ಲಿ**

**161) ಮನುಷ್ಯನಿಗೆ ಆಲೋಚನೆ ಮಾತುಗಳು ಬರುವುದರಿಂದ ಕುಲ ಮತ ವರ್ಗ**

**ವೈಷಮ್ಯಗಳಿಗೆ ದಾರಿ ಯಾಗುತ್ತದೆಂದು ಇಲ್ಲದಿದ್ದರೆ ಸರ್ವ ಮಾನವಜಾತಿ ಒಂದೇಏನೋ ಎಂದು ಎನಿಸುತ್ತದೆ. ನಿಮ್ಮ ಅಭಿಪ್ರಾಯ.**

ಉ. ನಿಮ್ಮ ಅಭಿಪ್ರಾಯವೇ ನನ್ನ ಅಭಿಪ್ರಾಯ ಗುಣಗಳಿಂದಲೇ ಪ್ರಪಂಚದಲ್ಲಿ ಮಾನವನು ಅನೇಕ ವಕ್ರ ಮಾರ್ಗವನ್ನು ಹಿಡಿಯುತ್ತಿದ್ದಾನೆ. ಅದರಲ್ಲಿ ಮತವು ಮತ್ತು ಮತ ದ್ವೇಶವೆನ್ನುವುದು ಸಹ ಒಂದು ವಕ್ರ ಮಾರ್ಗವೇ. ನೂರಕ್ಕೆ ನೂರು ಪಾಲು ಮನುಷ್ಯರೆಲ್ಲರೂ ಒಂದೇ ಆದರೆ ನಮ್ಮಲ್ಲಿನ ಗುಣಗಳೇ ಬೇರೆ ಬೇರೆಯಾಗಿ ಇವೆ.

**162) ಸ್ತ್ರೀಯರಲ್ಲಿ "Y Y" ಕ್ರೋಮೋಜೋಮುಗಳು, ಪುರುಷರಲ್ಲಿ "X Y" ಕ್ರೋಮೋಜೋಮುಗಳು ಇರುವುದನ್ನನುಸರಿಸಿ ಅವರಲ್ಲಿ ಸ್ತ್ರೀ ಪುರುಷ ಲಕ್ಷಣಗಳಿರುತ್ತವೆ. ಸ್ತ್ರೀ ಪುರುಷ ಜನನಕ್ಕೆ ಪುರುಷನೇ ಕಾರಣ ಭೂತನಾದಾಗ ಇದರಲ್ಲಿ ಸ್ತ್ರೀ ಪಾತ್ರ ಎಷ್ಟು?**

ಉ. ಈ ಪ್ರಶ್ನೆ ಭೌತಿಕ ಶಾಸ್ತ್ರಕ್ಕೆ ಸಂಬಂಧಿಸಿರುವುದು. ಮಾನವ ಜಾತಿ ಉತ್ಪತ್ತಿಗೆ ಪರುಷನ ಪಾತ್ರ ಸ್ವಲ್ಪವೇ ಸ್ತ್ರೀ ಪಾತ್ರವೆ ಬಹಳ ಇದೆ. ಸ್ತ್ರೀ ಪುರುಷ ಶರೀರಗಳು ಸ್ತ್ರೀ ಗರ್ಭದಲ್ಲಿನ ಕ್ರೋಮೋಜೋಮುಗಳ ಮೇಲೆ ಆಧಾರಪಟ್ಟು ತಯಾರಾಗುತ್ತಿವೆ. ಆದರೆ ಪುರುಷನ ಪಾತ್ರ ಅದರಲ್ಲಿ ಏನೂ ಇಲ್ಲ. ಪುರುಷ ವೀರ್ಯ ಕಣಗಳು ಸ್ತ್ರೀ ಪುರುಷ ಭೇದವಿಲ್ಲದವುಗಳಾಗಿ ಎಲ್ಲಾ ಒಂದೇ ರೀತಿ ಇರುತ್ತವೆ. ಆ ವೀರ್ಯಕಣಗಳು ಸ್ತ್ರೀ ಗರ್ಭದಲ್ಲಿ ಅಂಡದೊಂದಿಗೆ ಸೇರಿದನಂತರ ಗರ್ಭ ನಿಂತು, ಸ್ತ್ರೀ ಗರ್ಭದಲ್ಲಿರುವ ಕ್ರೋಮೋಜೋಮುಗಳ ಮೇಲೆ ಆಧಾರಪಟ್ಟು ಸ್ತ್ರೀ ಪುರುಷ ಶಿಶು ಶರೀರಗಳು ತಯಾರಾಗುತ್ತವೆ.

**163) ಪುರುಷನ ವೀರ್ಯ ಕಣದಿಂದ ಉದ್ಭವಿಸಿದ ಸ್ತ್ರೀ ಶರೀರದಲ್ಲಿ ತ್ವರಿತ ಆಲೋಚನೆ, ನಿರ್ಣಯ, ಚಿತ್ತಚಾಂಚಲ್ಯ, ಛಲ, ಇತರರ ಮಾತುಗಳ ಮೇಲೆ ಅತಿ ವೇಗವಾಗಿ ನಂಬಿಕೆ, ಶಕ್ತಿಯನ್ನು ಮೀರಿ ಕೆಲಸಗಳನ್ನು ಮಾಡುವುದು, ಹಿಂದೆ ಮುಂದೆ ಆಲೋಚಿಸದೇ ಕೆಲಸದಲ್ಲಿ ತೊಡುಗುವುದು, ಆಲೋಚನೆ ನಿರ್ಣಯದಲ್ಲಿ ಕಠಿಣ ವೈಖರಿ ಮೊದಲಾದವು ಪ್ರತ್ಯೇಕಿಸಿ ಇರುವುದರಲ್ಲಿ ನಿಮ್ಮ ಕೂಲಂಕುಶ ಅಭಿಪ್ರಾಯವನ್ನು ತಿಳಿಸಲು ಪ್ರಾರ್ಥನೆ.**

ಉ. ಸ್ತ್ರೀಯರಲ್ಲಿ ಮನಸ್ಸು ಬುದ್ಧಿ ಚಿತ್ತ ಅಹಂ ಈ ನಾಲ್ಕು ಪುರುಷರಿಗಿಂತಲೂ ಬಹಳ ಕಠಿಣವಾದವು ಮತ್ತೂ ಬಹಳ ಸುನ್ನಿತವಾಗಿ ಇವೆ. ಆದ್ದರಿಂದ ಪ್ರತ್ಯೇಕಿಸಿ ಅವರಲ್ಲಿ

ಮೇಲೆ ನೀವು ಹೇಳಿರುವ ಲಕ್ಷಣಗಳಿವೆ. ಸ್ತ್ರೀಯರಲ್ಲಿ ಇರುವಂತಹ ಸುನ್ನಿತ, ಸ್ತ್ರೀಯರಲ್ಲಿ ಇರುವಂತಹ ಕಠಿಣತ್ವ ಯಾವ ಪುರುಷರಲ್ಲಿ ಇಲ್ಲದಿರಬಹುದು.

**164) ಹೆಣ್ಣು ಶಿಶು ಗರ್ಭ ವಿಚ್ಛಿತ್ತಿಯಿಂದ ಕುಂಠಿತವಾಗುತ್ತಿರುವ ಸ್ತ್ರೀ ಜಾತಿಯಮೇಲೆ ನಿಮ್ಮ ಪ್ರಬೋಧಾತ್ಮಕ ಸಂದೇಶವೇನು?**

ಉ. ಕರ್ಮ ಕಾರಣ ದಿಂದ ಗುಣಗಳ ಪ್ರೇರೇಪಣೆಯಿಂದ ನಡೆಯುವ ಕೆಲಸವೆಂದು ನಮ್ಮ ಸಂದೇಶ. ಸ್ತ್ರೀ ಜಾತಿಯಿಲ್ಲದ ಜೀವನೋಪಾಯ ಅಸಾಧ್ಯವೆಂದೆನಿಸಿ ಆ ಕೆಲಸವನ್ನು ಬಿಡಿಸುವುದೂ ಸಹ ಕರ್ಮ ಕೈಯಲ್ಲೇ ಇದೆ.

**165) ಸ್ತ್ರೀ ಶಕ್ತಿ ಸ್ವರೂಪಿಣಿ, ಆದಿಶಕ್ತಿ ಎನ್ನುತ್ತಾರೆ. ಇದರ ಭಾವವೇನು?**

ಉ. ಅದು ಪ್ರಕೃತಿಗೆ ಇಟ್ಟಿರುವ ಹೆಸರು ವಾಸ್ತವವಾಗಿ ಶರೀರವಿರುವ ಸ್ತ್ರೀಗೆ ಅನ್ವಯಿಸುವುದಿಲ್ಲ. ದೇವರನಂತರ ದೇವರಂತದ್ದು ಪ್ರಕೃತಿ. ಪ್ರಕೃತಿಯನ್ನು ಸ್ತ್ರೀಯೊಂದಿಗೆ ಹೋಲಿಸಿ ಗೀತೆಯಲ್ಲಿ ಸಹ ಹೇಳಿದ್ದಾನೆ. ದೇವರ ವಿಷಯ ತಿಳಿಯದವರು ಸ್ತ್ರೀ ಶಕ್ತಿಸ್ವರೂಪಿಣಿ ಆದಿಶಕ್ತಿ ಎನ್ನುವುದರಲ್ಲಿ ತಪ್ಪಿಲ್ಲ.

**166) ಸ್ತ್ರೀ ದೃಷ್ಟಿ ಭಸ್ಮೀಪಟಲ, ಮಾತು ಪ್ರಳಯ, ನಡಿಗೆ ಚುಕ್ಕಾಣಿ ಇಲ್ಲದ ಹಡಗಿನಲ್ಲಿನ ಪ್ರಯಾಣ, ಇದು ಪುರುಷನಮೇಲೆ ಪ್ರಭಾವ. ಇದರಮೇಲೆ ತಮ್ಮ ಅಮೂಲ್ಯ ಸಂದೇಶವೇನು?**

ಉ. ಸ್ತ್ರೀಯರ ವ್ಯಾಮೋಹದಲ್ಲಿ ಬಿದ್ದ ಪುರುಷರಿಗೆ ಸ್ತ್ರೀ ದೃಷ್ಟಿ, ಮಾತು, ನಡವಳಿಕೆ ನೀವಂದಹಾಗೆ ಏನಾದರೂ ಆಗಬಹುದು. ಆದರೆ ಸ್ತ್ರೀ ವ್ಯಾಮೋಹ ವಿಲ್ಲದ ಪುರುಷರಿಗೆ ಸ್ತ್ರೀಯರ ದೃಷ್ಠಿಯಲ್ಲಿ ತಂಪು, ಮಾತುಗಳಲ್ಲಿ ಪ್ರಶಾಂತತೆ, ನಡವಳಿಕೆಯಲ್ಲಿ ಆದರಣೆ ಕಾಣಿಸುತ್ತವೆ.

**ಅನಸೂಯ, ನಂದ್ಯಾಲ**

**167) ತಾಯಿ ಗರ್ಭದಲ್ಲಿ ಶಿಶುವಿಗೆ ಗತ ಜನ್ಮದ ನೆನಪುಗಳು ಬರುತ್ತವೆಂದು ಕೆಲವು ಪುಸ್ತಕಗಳಲ್ಲಿ ಇದೆ. ಆ ವಿಷಯ ನಿಜವೇನಾ?**

ಉ. ಇದು ಅಸತ್ಯವಾದ ಮಾತು. ತಾಯಿ ಗರ್ಭದಲ್ಲಿನ ಶಿಶು ಶರೀರದಲ್ಲಿ ಜೀವಿಯೇ ಇಲ್ಲ. ನೀವು ನಮ್ಮ ರಚನೆಗಳಲ್ಲಿ **"ಜನನ ಮರಣ ಸಿದ್ಧಾಂತ"** ವೆನ್ನುವ ಪುಸ್ತಕವನ್ನು ಓದಿರಿ.

**ಮಂದುಲ ನಾರಾಯಣ, ಬಿಲ್ಕಲ ಗೂಡೂರು**

**168) ಮರಣಿಸಿದನಂತರ ಜೀವಿಯು ಯಮಲೋಕಕ್ಕೆ ಹೋಗಿ ಅಲ್ಲಿ ಪಾಪದ ಫಲವನ್ನು ಅನುಭವಿಸುತ್ತಾನೆಂದು, ಕುದಿಯುತ್ತಿರುವ ಎಣ್ಣೆಯಲ್ಲಿ ಹಾಕುತ್ತಾರೆಂದು, ಗರಗಸದಿಂದ ಕೊಯ್ಯುತ್ತಾರೆಂದು, ಅಗ್ನಿಯಲ್ಲಿ ಸುಡುತ್ತಾರೆಂದು, ಶೂಲದಿಂದ ಚುಚ್ಚುತ್ತಾರೆಂದು ಮೊದಲಾದವು ಇವೆ ಅಲ್ಲವೆ! ಇದು ನಿಜವೇನಾ?**

ಉ. ನಿಮ್ಮದು ಬಹಳ ಒಳ್ಳೆಯ ಪ್ರಶ್ನೆ. ಈ ವಿಷಯದಲ್ಲಿ ಬಹಳ ಜನ ನೀವು ಹೇಳಿರುವವೆಲ್ಲವೂ ಯಮಲೋಕದಲ್ಲಿವೆ ಎಂದು ತಪ್ಪಾಗಿ ತಿಳಿದುಕೊಳ್ಳುತ್ತಿದ್ದಾರೆ. ಆದರೆ ವಾಸ್ತವವಾಗಿ ಯಮಲೋಕವೆನ್ನುವುದು ಎಲ್ಲೋ ಇಲ್ಲ. ಅಲ್ಲಿ ಏನನ್ನೋ ಅನುಭವಿಸುತ್ತೇವೆನ್ನುವುದು ಏನೂ ಇಲ್ಲ. ಜೀವಿಗಳು ಮಾಡಿಕೊಂಡ ಪಾಪವನ್ನು ಭೂಮಿಯಮೇಲೆಯೇ ಮರು ಜನ್ಮದಲ್ಲಿ ಅನುಭವಿಸುತ್ತಿದ್ದಾರೆ. ನೀವು ಯಮಲೋಕದಲ್ಲಿವೆ ಎಂದು ಯಾವಾದರೇ ತಿಳಿಸಿದ್ದೀರೋ ಅವೆಲ್ಲವೂ ಭೂಮಿಯ ಮೇಲೆಯೇ ನೋಡಬಹುದು. ವೈದ್ಯರ ಸೂಜಿಗಳು ಕಬ್ಬಿಣದ ಶೂಲಗಳು ಅಲ್ಲವೆ! ಅಗ್ನಿಯಲ್ಲಿ ಸುಡುವವರಿಲ್ಲವೇ! ಎಣ್ಣೆಯಲ್ಲಿ ಸುಟ್ಟವರು ಇಲ್ಲವೇ! ಪಾರ್ಟೀಗಳಲ್ಲಿ ಶೂಲಗಳಿಂದ ಚುಚ್ಚಿಸಿಕೊಳ್ಳುವವರಿಲ್ಲವೇ! ಆದ್ದರಿಂದ ಭೂಮಿಯಮೇಲೆಯೇ ಯಥಾರ್ಥವಾಗಿ ಯಮಲೋಕ, ಸ್ವರ್ಗಲೋಕ ಎರಡು ಇವೆ. ಮಾನವನು ಎಲ್ಲಾದರೆ ಪಾಪ ಫಲಿತವಾದ ಕಷ್ಟವನ್ನು ಅನುಭವಿಸುತ್ತಿದ್ದಾನೋ ಆಗ ಅದು ಅವನಿಗೆ ಯಮಲೋಕ, ಎಲ್ಲಿ ಸುಖಪಡುತ್ತಿದ್ದಾನೊ ಆಗ ಅದು ಅವನಿಗೆ ಸ್ವರ್ಗಲೋಕವೆಂದು ತಿಳಿಯಬೇಕು. ಕಾಣಿಸದ ಅಸತ್ಯವನ್ನು ಬಿಟ್ಟು ಕಾಣಿಸುವ ಸತ್ಯವನ್ನು ನಂಬದೇ ಇದ್ದಾರೆ. ತಮ್ಮಂತವರು ಇದು ನಿಜವೆಂದು ಜ್ಞಾನ ನಿರೂಪಣೆಗೆ ಬರುವುದೆಂದು ತಿಳಿದಿದ್ದನ್ನು ಇತರರಿಗೆ ತಿಳಿಸಿರಿ.

**169) ಹೆಂಗಸರು ಗಂಡಸರು ಎಂದು ಮಾನವರಲ್ಲಿ ಎರಡು ಜಾತಿಗಳಿವೆ ಅಲ್ಲವೆ! ಅವರು ಮರಣಿಸಿದ ನಂತರ ಹೆಂಗಸರು ಗಂಡಸರಾಗಿ, ಗಂಡಸರು ಹೆಂಗಸರಾಗಿ ಹುಟ್ಟಬಹುದಾ?**

ಉ. ಶರೀರದಲ್ಲಿ ಇರುವ ಜೀವಿಗಳಿಗೆ ಹೆಣ್ಣು ಗಂಡು ಎನ್ನುವ ಯಾವ ಬೇಧವು ಇಲ್ಲ. ಶರೀರಗಳು ಮಾತ್ರವೇ ಹೆಣ್ಣು ಗಂಡು ಎಂದು ಬೇರೆಯಾಗಿ ಇವೆ. ಜೀವಿಯು ಮಾಡಿಕೊಂಡ ಕರ್ಮ ಪ್ರಕಾರ ಗಂಡಸರು ನಂತರ ಜನ್ಮದಲ್ಲಿ ಹೆಂಗಸರಾಗಿ, ಹೆಂಗಸರು ಗಂಡಸರಾಗಿಯೂ ಸಹ ಹುಟ್ಟಬಹುದು.

**ಕೆ. ಸೀತಾರಾಮಯ್ಯ, ಪ್ರೊದ್ದುಟೂರು**

**170) ಆರು ವರ್ಷಗಳ ಮಗು ಅಕಾಲ ಮರಣವಲ್ಲದೇ ಸಹಜ ಮರಣವನ್ನು ಹೊಂದಿದ್ದಾನೆ. ಅಷ್ಟು ಸಣ್ಣ ವಯಸ್ಸಿನಲ್ಲಿ ಮರಣಿಸುವುದಕ್ಕೆ ಕಾರಣವೇನು? ಈ ಜನ್ಮದಲ್ಲಿ ಪಾಪಪುಣ್ಯಗಳು ಮಾಡುವ ವಯಸ್ಸಲ್ಲ, ಆದ್ದರಿಂದ ಅವನಿಗೆ ಭವಿಷ್ಯತ್ ಜನ್ಮ ವಿಷಯವನ್ನು ತಿಳಿಸಬೇಕೆಂದು ಪ್ರಾರ್ಥನೆ.**

**ಉ.** ಸಂಚಿತ ಕರ್ಮದಿಂದ ನಿರ್ಣಯಿಸಿದ ಕರ್ಮವನ್ನು ಪ್ರಾರಬ್ಧ ಎನ್ನುತ್ತಾರೆ. ಅದು ಹುಟ್ಟಿದಾಗಿಂದ ಸಾಯುವವರೆಗು ನಿರ್ಣಯಿಸಿ ನಡೆಸುತ್ತದೆ. ನೀವು ತಿಳಿಸಿದ ಮಗುವಿಗೆ ಪ್ರಾರಬ್ಧದಲ್ಲಿ ಮನುಷ್ಯ ಜನ್ಮ ಅಷ್ಟಕ್ಕೆ ನಿರ್ಣಯವಾಗಿ ಇರುತ್ತದೆ. ಅವನ ಸಂಚಿತದಲ್ಲಿ ಮಾನವ ಜನ್ಮಕ್ಕೆ ಬೇಕಾದ ಕರ್ಮ ಆರುವರ್ಷಗಳೇ ಇರುತ್ತದೆ. ನಂತರ ಬೇರೆ ಜನ್ಮಕ್ಕೆ ಸರಿತೂಗುವ ಕರ್ಮ ವಿರುತ್ತದೆ. ಆದ್ದರಿಂದ ಮನುಷ್ಯ ಜನ್ಮ ಪ್ರಾರಬ್ಧ ಮುಗಿದ ಕೂಡಲೇ ಮರಣಿಸುತ್ತಾನೆ.

ಚಿಕ್ಕ ವಯಸ್ಸಿನಲ್ಲಿ ಪಾಪ ಪುಣ್ಯ ಸಂಪಾದಿಸಲಾರರು ಆದ್ದರಿಂದ ಈ ಆರು ವರ್ಷಗಳ ವಯಸ್ಸಿನಲ್ಲಿ ಕರ್ಮವನ್ನು ಅನುಭವಿಸುವುದೇ ನಡೆದಿದೆ ಆದರೇ ಹೊಸ ಅಗಾಮಿ ಕರ್ಮವನ್ನು ಸಂಪಾದಿಸಿರುವುದಿಲ್ಲ. ಒಂದು ಜನ್ಮದಲ್ಲಿ ಹೊಸ ಕರ್ಮವನ್ನು ಸಂಪಾದಿಸದಿದ್ದರೂ ಹಳೆ ಕರ್ಮ ಎಂದರೇ ಸಂಚಿತ ಕರ್ಮ ಕೆಲವು ಜನ್ಮಗಳಿಗೆ ಸರಿಹೋಗುವಷ್ಟು ಉಳಿದಿರುತ್ತದೆ. ಆದ್ದರಿಂದ ಆ ಮಗುವಿಗೆ ಅವನ ಸಂಚಿತಕರ್ಮದಿಂದಲೇ ಪ್ರಾರಬ್ಧ ನಿರ್ಣಯಿಸಲ್ಪಟ್ಟು ಎರಡನೆಯ ಜನ್ಮಕ್ಕೆ ಹೋಗಿರುತ್ತಾನೆ. ನಿಮಗೆ ಈ ವಿಷಯ ಚೆನ್ನಾಗಿ ಅರ್ಥವಾಗಬೇಕೆಂದರೇ ತ್ರಿ ಕರ್ಮಗಳ ವಿಷಯ ಚೆನ್ನಾಗಿ ತಿಳಿದಿರಬೇಕು. ಇಲ್ಲಿ ಸ್ವಲ್ಪ ತಿಳಿಸುತ್ತಿದ್ದೇವೆ.

**ಪ್ರಾರಬ್ಧ ಕರ್ಮ** : ಹುಟ್ಟಿದಾಗಿನಿಂದ ಮರಣಿಸುವವರೆಗೂ ಅನುಭವಿಸುವುದು.

**ಆಗಾಮಿಕ ಕರ್ಮ** : ಹುಟ್ಟಿದಾಗಿನಿಂದ ಮರಣಿಸುವವರೆಗೂ ಹೊಸದಾಗಿ ಸಂಪಾದಿಸಿಕೊಳ್ಳುವುದು.

**ಸಂಚಿತ ಕರ್ಮ** : ಜನ್ಮಗಳ ಪರಂಪರೆಯಲ್ಲಿ ಉಳಿದಿರುವುದು (ಜಮ ಖರ್ಚು ಹೋಗಿ ಉಳಿದಿರುವುದು)

ಒಂದು ಜನ್ಮದಲ್ಲಿ ಸಂಪಾದಿಸಿಕೊಂಡ ಆಗಾಮಿಕ ಕರ್ಮ ಕೂಡಲೇ ಸಂಚಿತಕರ್ಮ ಕೊನೆಯ ಭಾಗದಲ್ಲಿ ಸೇರಿ ಸಂಚಿತಕರ್ಮವಾಗಿ ಬದಲಾಗುತ್ತದೆ.

**171) ಭಾರತ ಭೂಮಿ ಪುಣ್ಯಭೂಮಿ ಎಂದು ಸರ್ವ ಮೋಕ್ಷ ಸಾಧಕರಿಗೆ ಭಾರತ ಭೂಮಿ ತಕ್ಕದ್ದೆಂದು, ಧರ್ಮಕ್ಕೆ, ಮೋಕ್ಷಸಾಧನೆಗೆ, ಜ್ಞಾನಸಮುಪಾರ್ಜನೆಗೆ ನಿವಾಸವೆಂದು ಹಿರಿಯರು ಹೇಳಿರುವರು. ಅಂತಹ ಭಾರತ ಭೂಮಿಯಲ್ಲಿ ಮನುಷ್ಯನು ತಿಳಿದು ಊಹಿಸಲಾರದ ಭರಿಸಲಾರದ ಕ್ಷಮಿಸಲಾರದ ತಪ್ಪುಗಳನ್ನು ಮಾಡುತ್ತಿದ್ದಾನೆ ಇದಕ್ಕೆ ಪರಿಹಾರ ಇದೆಯಾ?**

**ಉ.** ಪ್ರಪಂಚ ದೇಶಗಳಲ್ಲಿ ಯಾವ ದೇಶದಲ್ಲಾದರೂ ಮಾಡಿದ ತಪ್ಪನ್ನು ಅನುಸರಿಸಿ ಪಾಪ ಬಂದು ಸೇರುತ್ತದೆ. ಘೋರವಾದ ತಪ್ಪು ಮಾಡಿದಾಗ ಘೋರವಾದ ಪಾಪವೇ ಆಗಾಮಿಕ ಕರ್ಮವಾಗಿ ಬಂದು ಸಂಚಿತ ಕರ್ಮ ವರಸೆಯಲ್ಲಿ ಸೇರಿ ಪುನಃ ಪ್ರಾರಬ್ಧವಾಗಿ ಯಾವಾಗಲೋ ಒಂದು ಜನ್ಮದಲ್ಲಿ ವರಸೆ ಕ್ರಮದಲ್ಲಿ ಅನುಭವಕ್ಕೆ ಬರುತ್ತದೆ. ಆಗ ಮಾಡಿಕೊಂಡ ಜೀವಿಯು ಮಾಡಿಕೊಂಡಷ್ಟು ಅನುಭವಿಸುತ್ತಾನೆ. ಆಗ ಬಾಧೆಯನ್ನು ಅನುಭವಿಸುತ್ತಾ ಯಾವ ಜನ್ಮದ ಕರ್ಮವೋ ಎಂದರೂ, ನಾನೆಂತ ಪಾಪಿಯೋ ಎಂದರೂ, ಕರ್ಮ ಮಾತ್ರ ಅನುಭವಿಸುವವರೆಗೂ ಹೋಗದು. ಮಾಡಿಕೊಂಡವನು ಪುನಃ ಅನುಭವಿಸಿದಾಗಲೇ ಪರಿಹಾರವಾಗುತ್ತದೆ.

**ತಲ್ಲಂ ಸುಬ್ಬ ನರಸಿಂಹ್ಮಲು, ಪ್ರೊದ್ದುಟೂರು**

**172. ಜ್ಞಾನವನ್ನು ಯೋಗವನ್ನಾಗಿ ಬದಲಾಯಿಸುಕೊಳ್ಳುವುದು ಹೇಗೆ?**

**ಉ.** ಆತ್ಮ ಸಂಬಂಧ ವಿಷಯಗಳನ್ನು ತಿಳಿದುಕೊಳ್ಳುವುದೇ ಜ್ಞಾನ. ತಿಳಿದುಕೊಂಡ ವಿಷಯಗಳನ್ನು ಆಚರಣೆ ಮಾಡುವುದೆ ಯೋಗಸಾಧನೆ.

**173. ಯೋಗಗಳು ಅನೇಕವಾಗಿ ಇವೆ ಅಲ್ಲವೆ?**

**ಉ.** ದೇವರನ್ನು ತಿಳಿಯಲು ಇರುವವು ಎರಡೇ ಯೋಗಗಳು, ಜ್ಯೋತಿಷ್ಯದೊಳಗೆ ಹೋದರೇ ಯೋಗಗಳು ಬಹಳ ಇರುತ್ತವೆ. ಅವು ಪ್ರಪಂಚ ಸಂಬಂಧವಾಗಿರುವವು. ಇಲ್ಲಿ ನಮಗೆ ಬೇಕಾಗಿರುವವು ದೈವ ಸಂಬಂಧವಾದವು. 1. ಕರ್ಮಯೋಗ (ರಾಜಯೋಗ), 2. ಜ್ಞಾನಯೋಗ (ಬ್ರಹ್ಮಯೋಗ)

**174. ಜ್ಞಾನಾಗ್ನಿಯನ್ನು ನಿರೂಪಿಸಿದ ಬ್ರಹ್ಮಯ್ಯನವರು, ಯೇಸುಪ್ರಭು ಮೊದಲಾದ ಯೋಗಿಗಳು ಪೂರ್ವದಲ್ಲಿದ್ದರೆಂದು ತಿಳಿಸಿದ್ದೀರಿ. ಅಂತವರು ಮೋಕ್ಷಾಸಕ್ತಿ ಇರುವವರಿಗೆ ಜ್ಞಾನವನ್ನು ಯೋಗವಾಗಿ ಬದಲಾಯಿಸಿ ಬೋಧಿಸಿ ನಿರೂಪಣಾತ್ಮಕವಾಗಿ ಕರ್ಮನಾಶ ಮಾಡಬಹುದಾದ ಶಕ್ತಿಯನ್ನು ನಿರೂಪಿಸುವವರು ನಮಗೆ ಬೇಕು, ಎಲ್ಲಾದರೂ ಇದ್ದಾರಾ? ದಯಮಾಡಿ ತಿಳಿಸಲು ಪ್ರಾರ್ಥನೆ.**

ಉ. ಎಲ್ಲಿದ್ದಾರೊ ನಮಗೆ ತಿಳಿಯದು. ನಿಮಗೆ ಯೋಗಶಕ್ತಿಯನ್ನು ಸಂಪಾದಿಸಬೇಕೆನ್ನುವ ಆಸಕ್ತಿ ಇದ್ದರೆ, ನಿರೂಪಣಾತ್ಮಕವಾಗಿ ತಿಳಿದುಕೊಳ್ಳಬೇಕೆಂದರೇ ನಾವು ಅನುಸರಿಸುವ ಮಾರ್ಗವನ್ನೇ ನೀವೂ ಅನುಸರಿಸಿರಿ. ನಿಮಗೆ ಆ ಶಕ್ತಿ ನಿರೂಪಣೆಗೆ ಬರಬಹುದು. ನಾವು ಅಹಂಕಾರದಿಂದ ಈ ಮಾತನ್ನು ಹೇಳುತ್ತಿಲ್ಲ. ಇರುವ ಸತ್ಯವನ್ನು ತಿಳಿಸುತ್ತಿದ್ದೇವೆ. ಜ್ಞಾನಾಗ್ನಿ ನಿರೂಪಣಾರ್ಥಕವಾಗಿ ನಮ್ಮ ಹತ್ತಿರ ಬಹಳ ಜನರ ಕರ್ಮಗಳು ಸುಟ್ಟುಹೋದ ಸಂಘಟನೆಗಳು ಸಹ ನಡೆದಿವೆ.

**ಯಂ. ಮಾರುತಿನಾಯುಡು, ಕೂಚಿವಾರಿ ಪಲ್ಲಿ**

**175) ಜೀವಿಗಳ ಪ್ರಳಯ ಸಂಭವಗಳಿಗೆ ನನ್ನ ಪ್ರಕೃತಿಯೇ ಕಾರಣವೆಂದಿದ್ದಾನೆ ದೇವರು ಈ ವಿಷಯ ಜ್ಞಾನಿಗಳಿಗೇನಾ? ಅಥವಾ ಅಜ್ಞಾನಿಗಳಿಗೂ ಜ್ಞಾನಿಗಳಿಗೂ ಅನ್ವಯಿಸುತ್ತದಾ?**

ಉ. ಮೋಕ್ಷ ಹೊಂದದವರಿಗೆಲ್ಲರಿಗೂ ಅನ್ವಯಿಸುವ ಸೂತ್ರವಿದು. ಅಜ್ಞಾನಿಗಳಿಗೆ ಜ್ಞಾನಿಗಳಿಗೆ ಎಲ್ಲರಿಗೂ ಪ್ರಳಯ ತಪ್ಪುವುದಿಲ್ಲ, ಆದರೆ ಮೋಕ್ಷ ಹೊಂದಿದವರಿಗೆ ಪ್ರಳಯ ಇಲ್ಲ, ಪ್ರಭವವೂ ಇಲ್ಲ.

**176) ಬ್ರಹ್ಮರಾತ್ರಿ ಪ್ರಾರಂಭದಲ್ಲಿ ಜೀವಿಗಳೆಲ್ಲವೂ ಪ್ರಳಯ ಏಕೆ ಹೊಂದುತ್ತವೆ?**

ಉ. ಅದು ಸೃಷ್ಠಿ ವಿಧಾನ. ನಮಗೆ ರಾತ್ರಿ ಆದ ಕೂಡಲೇ ನಿದ್ರೆ ಬರುತ್ತದೆ ಅಲ್ಲವೆ! ಅದನ್ನು ನಿಲ್ಲಿಸಲು ಸಾಧ್ಯವಿಲ್ಲ ಅಲ್ಲವೆ! ರಾತ್ರಿ ಆದ ಕೂಡಲೆ ನಿದ್ರೆ ಏಕೆ ಬರುತ್ತದೋ ಹಾಗೆ ಬ್ರಹ್ಮರಾತ್ರಿಬಂದಾಗ ಪ್ರಳಯ ನಿರ್ಣಯಿಸಲ್ಪಟ್ಟಿದೆ.

**177) ಸಾವಿರ ಯುಗಗಳಿಗೆ ಎಷ್ಟು ವರ್ಷಗಳು?**

ಉ. 108 ಕೋಟಿ ವರ್ಷಗಳು. ಈ ಸಂಖ್ಯಯನ್ನನುಸರಿಸಿಯೇ ಮಂತ್ರಾರಾಧನೆಯಲ್ಲಿ 108 ಸಂಖ್ಯಗೆ ಹೆಚ್ಚಿನ ಬೆಲೆ ಇದೆ. ಈ ಸಂಖ್ಯೆ ಮರೆಯದಂತಿರಲು ಜಪಮಾಲೆಯಲ್ಲಿ 108 ಮಣಿಗಳ ಮಾಲೆ ಎಲ್ಲಾ ಮತದಲ್ಲಿ ಇರುವುದನ್ನು ಗಮನಿಸಬಹುದು.

**178) ಬ್ರಹ್ಮರಾತ್ರಿ ಬಂದಾಗ ಸೂರ್ಯ ಚಂದ್ರರು ಇರುವುದಿಲ್ಲವೆ?**

ಉ. ವಿಶ್ವವೇ ಇಲ್ಲದೆ ಹೋದಾಗ ಸೂರ್ಯ ಚಂದ್ರರು ಹೇಗಿರುತ್ತಾರೆ. ಸೂರ್ಯ ಚಂದ್ರರಾಗಲಿ, ನಕ್ಷತ್ರಗಳಾಗಲಿ, ಆಕಾಶವೇ ಆಗಲಿ ಏನು ಇರುವುದಿಲ್ಲ. ದೈವದಿಂದ ಸೃಷ್ಟಿ ಯೊಂದರ ಕ್ರಮವೇ ಹಾಗೆ ನಿರ್ಣಯಿಸಲ್ಪಟ್ಟಿದೆ.

**ಬಿ. ರವೀಂದ್ರ ರೆಡ್ಡಿ, ಚೆನ್ನೇಕೊತ್ತಪಲ್ಲಿ**

**179) ಯುಗ ಯುಗಗಳಲ್ಲಿ ಪರಮಾತ್ಮ ಭಗವಂತನಾಗಿ ಅವತರಿಸುತ್ತಾನೆಂದು ಹೇಳುತ್ತಾರೆ. ನಿಜವೇನಾ?**

ಉ. ಅಧರ್ಮಗಳು ಹೆಚ್ಚಾದಾಗ ಪರಮಾತ್ಮ ಭಗವಂತನಾಗಿ ಹುಟ್ಟುವುದು ವಾಸ್ತವವೇ. ಆದರೆ ಪ್ರತಿ ಯುಗದಲ್ಲಿ ಹುಟ್ಟಬಹುದು ಹುಟ್ಟದೇಇರಬಹುದು. ಒಂದು ಯುಗದಲ್ಲಿ ಎರಡು ಬಾರಿಯಾದರೂ ಹುಟ್ಟಬಹುದು ಅಥವಾ ಎರಡು ಯುಗಗಳಿಗೊಮ್ಮೆಯಾದರೂ ಹುಟ್ಟಬಹುದು. ಮುಖ್ಯವಾಗಿ ಅಧರ್ಮಗಳು ಹೆಚ್ಚಾದಾಗ ಹುಟ್ಟುವುದು ಮಾತ್ರ ವಾಸ್ತವ.

**ಇ. ಅಂಜಿನ ರೆಡ್ಡಿ, ಚಂದ್ರಗಿರಿ**

**180) ಪ್ರಬೋಧಾತ್ಮಜಮ್ ಪತ್ರಿಕೆಯಲ್ಲಿ ಕೂಚಿವಾರಿ ಹಳ್ಳಿ ಪುರುಷೋತ್ತಮ ನಾಯುಡು ಅವರ ಪ್ರಶ್ನೆಗೆ ಉತ್ತರವಾಗಿ ದೇವರು ಕಾಣಿಸುವುದಿಲ್ಲ. ದೃಷ್ಟಿಗೆ ಕಾಣಿಸುವವನು ದೇವರಲ್ಲವೆಂದು ಹೇಳಿದ್ದೀರಿ. ಒಂದು ಸಲ ವಿವೇಕಾನಂದನು ರಾಮಕೃಷ್ಣ ಪರಮಹಂಸನನ್ನು ಸಮೀಪಿಸಿ ತಾವು ದೇವರನ್ನು ನೊಡಿದ್ದೀರಾ ಎಂದು ಪ್ರಶ್ನಿಸಿದಾಗ ಉತ್ತರವಾಗಿ ಹೌದು ನೋಡಿದ್ದೇನೆ. ನಾನು ನಿನ್ನನ್ನು ಹೇಗೆ ನೋಡುತ್ತಿದ್ದೀನೋ ಹಾಗೇ ದೇವರನ್ನು ನೋಡಬಹುದು. ಎಂದು ಸಮಾಧಾನವನ್ನು ರಾಮಕೃಷ್ಣ ಕೊಟ್ಟಿದ್ದಾನೆ. ನಿಮ್ಮ ಉತ್ತರಕ್ಕೂ ರಾಮಕೃಷ್ಣ ಪರಮಹಂಸ ಉತ್ತರಕ್ಕೂ ಬಹಳ ವ್ಯತ್ಯಾಸವಿದೆ. ವಿವರಿಸಬೇಕೆಂದು ಕೋರುತ್ತಿದ್ದೇವೆ.**

ಉ. ಹೌದು ಆತನ ಉತ್ತರಕ್ಕೂ ನಮ್ಮ ಉತ್ತರಕ್ಕೂ ಬಹಳ ವ್ಯತ್ಯಾಸವಿದೆ. ಆತನು ಪರಮಹಂಸ, ನಾನು ಯೋಗಿ ಆದ್ದರಿಂದ ಬಹಳ ವ್ಯತ್ಯಾಸ ಬಂದಿದೆ. ನಮ್ಮ ಉತ್ತರದ ಪರವಾಗಿ ನಾವುಕೊಡುವ ವಿವರ ಏನೆಂದರೆ! ದೇವರು ಇಂದ್ರಿಯ ಅಗೋಚರನೆಂದು ಗೀತೆಯಲ್ಲಿ ದೇವರು ಸಹ ಹೇಳಿದ್ದಾನೆ. ಆದ್ದರಿಂದ ಇಂದ್ರಿಯಗಳಿಗೆ ತಿಳಿಯುವುದು ದೇವರಲ್ಲವೆನ್ನುವ ಸೂತ್ರದ ಪ್ರಕಾರ ಕಾಣಿಸುವುದೆಲ್ಲವೂ ದೇವರು ಅಲ್ಲವೆಂದು ಹೇಳಬಹುದು. ಹಾಗಾದರೆ ದೇವರೇ ಭಗವಂತನಾಗಿ ಹುಟ್ಟಿದಾಗ ಆ ಭಗವಂತನು ಕಣ್ಣಿಗೆ ಕಾಣಿಸುತ್ತಿದ್ದಾನೆ

ಅಲ್ಲವೆ! ಆಗ ದೇವರನ್ನು ನೋಡಿದಹಾಗೆ ಆಗುತ್ತದೆ ಅಲ್ಲವೆ ಎಂದು ಕೆಲವರಿಗೆ ಅನುಮಾನ ಬರಬಹುದು. ಅದಕ್ಕೆ ಸಮಾಧಾನವೇನೆಂದರೇ! ದೇವರು ಭಗವಂತನಾಗಿ ಬಂದರೂ ಮೇಲೆ ಕಾಣಿಸುವ ಶರೀರ ಪ್ರಕೃತಿಯದ್ದೇ ಆದುದರಿಂದ ದೇವರನ್ನು ನೋಡಲಾರೆವು. ಭಗವಂತನೇ ಎದುರುಗಡೆ ಬಂದಾಗ ಆ ಶರೀರ ಕಾಣಿಸುತ್ತದೆ ಆದರೇ ಅದರಲ್ಲಿನ ದೇವರು ಕಾಣಿಸುವುದಿಲ್ಲ ಅಲ್ಲವೆ! ಕಾಣಿಸುವುದೆಲ್ಲವೂ ಪ್ರಕೃತಿಯೇ, ಆದರೆ ಒಳಗಿನ ದೇವರು ಕಾಣಿಸುವುದಿಲ್ಲ. ಆದ್ದರಿಂದ ನಾವು ಕಾಣಿಸುವವನು ದೇವರು ಅಲ್ಲವೆಂದು ಹೇಳಿದ್ದೇವೆ. ದೇವರು ಕಾಣಿಸುವುದಿಲ್ಲ ಎನ್ನುವುದಕ್ಕೆ ಶಾಸ್ತ್ರ ಆಧಾರವಿದೆ. ದೇವರು ಕಾಣಿಸುತ್ತಾನೆನ್ನುವುದಕ್ಕೆ ಶಾಸ್ತ್ರ ಆಧಾರವಿಲ್ಲ. ಆಧಾರವಿರುವ ಮಾತು ನಿಜವೋ, ಆಧಾರವಿಲ್ಲದ ಮಾತು ನಿಜವೋ ನೀವೇ ಯೋಚಿಸಿ. ದೇವರು ಇಂದ್ರಿಯಾಗೋಚರನು ಅಂದರೆ ಇಂದ್ರಿಯಗಳಾದ ಕಣ್ಣಿಗೆ ಕಾಣಿಸುವುದಿಲ್ಲವೆನ್ನುವುದು ದೇವರೇ ಹೇಳಿದ ವಾಕ್ಯ. ಆದ್ದರಿಂದ ಯಾವುದು ನಿಜವೋ ಆಲೋಚಿಸಿರಿ.

**ಪಿ. ರಂಗಯ್ಯ, ಯು.ಡಿ.ಸಿ., ಮಡಕಶಿರ**

**181) ಜೀವನ್ಮುಕ್ತಿ ಎಂದರೆ ಏನು? ಪ್ರಸ್ತುತ ಪ್ರಪಂಚದಲ್ಲಿ ಜೀವನ್ಮುಕ್ತರು ಇರುವ ಅವಕಾಶವಿದೆಯಾ?**

**ಉ.** ಮುಕ್ತಿ ಎಂದರೆ ಬಿಡುಗಡೆ ಎಂದು ಅರ್ಥ. ಜೀವನ್ಮುಕ್ತಿ ಎಂದರೆ ಜೀವಿಯು ಶರೀರವೆನ್ನುವ ಸೆರೆಮನೆಯಿಂದ ಕರ್ಮ ಎನ್ನುವ ಶಿಕ್ಷೆ ಇಲ್ಲದೇ ಹೋದಾಗ ಹೊರ ಬೀಳುವುದೆಂದು ಅರ್ಥ. ಕರ್ಮ ಇರುವವರೆಗೂ ಶರೀರ ವಿರುತ್ತದೆ. ಕರ್ಮ ಮುಗಿದುಹೋದಾಗ ಶರೀರವಿಲ್ಲದೆ ಹೋಗಿ ಅ ಶರೀರದಲ್ಲಿ ಇರುವ ಜೀವಿಯು ಅಣುವಣುವಿನಲ್ಲಿ ಇರುವ ಪರಮಾತ್ಮನಲ್ಲಿ ವ್ಯಾಪಿಸಿಹೋಗುತ್ತದೆ. ಅದನ್ನೆ ಜೀವನ್ಮುಕ್ತಿ ಎಂದು ಕರೆಯುತ್ತಾರೆ. ಜೀವಿಯು ಮುಕ್ತಿ ಹೊಂದುವುದೇ ಜೀವನ್ಮುಕ್ತಿ ಎನ್ನುವ ಮಾತಿಗೆ ಅರ್ಥ. ಮುಕ್ತಿ ಹೊಂದಿದ ಜೀವಿಯು ಅನೂಹ್ಯವಾದ ಪರಮಾತ್ಮನಲ್ಲಿ ಐಕ್ಯವಾಗಿ ಇದ್ದು ಕಣ್ಣಿಗೆ ಕಣಿಸುವವನಲ್ಲ. ಆದ್ದರಿಂದ ಅವರು ಪ್ರಪಂಚದಲ್ಲಿ ದೃಶ್ಯರೂಪವಾಗಿ ಇರುವುದಿಲ್ಲ. ಆದ್ದರಿಂದ ಪ್ರಪಂಚದಲ್ಲಿ ಜೀವನ್ ಮುಕ್ತರೆನ್ನುವವರು ಇರುವ ಅವಕಾಶ ವಿಲ್ಲ.

**182) " ಓಂ ತ್ರಯಂ ಬಕಂ ಯಜಾಮಹೇ ಸುಗಂದಮ್ ಪುಷ್ಟಿ ವರ್ಧನಮ್**
**ವುರ್ವಾರು ಕಮಿಪ ಬಂದನಾತ್ ಮೃತ್ಯೋರ್ಮುಕ್ತೀಯ ಮಾಮೃತಾತ್"**

**ಇದನ್ನು ಮೃತ್ಯುಂಜಯ ಮಂತ್ರವೆಂದು ಹೇಳಿದ್ದಾರೆ. ಇದರ ಅರ್ಥ ತಿಳಿಸಬೇಕೆಂದು ಕೋರುತ್ತಿದ್ದೇವೆ.**

**ಉ.** ಅರ್ಥವಾ! ನಾನು ಸಂಸ್ಕೃತ ಪಂಡಿತನಲ್ಲ. ನಾನು ಕೇವಲ ಬ್ರಹ್ಮ ವಿದ್ಯಾ ಪಂಡಿತನು. ಆದ್ದರಿಂದ ಅರ್ಥ ಹೇಳಲಾರೆವು. ನೀವು ಕೇಳಿರುವುದರಿಂದ ಕಷ್ಟಪಟ್ಟು ಸ್ವಲ್ಪ ಅರ್ಥವನ್ನು ಹೇಳುತ್ತೇವೆ. ಅದರ ಸತ್ಯವನ್ನು ಪೂರ್ತಿ ಹೇಳಬಲ್ಲೆವು. ಶರೀರ ದೃಡವಾಗಿ ಬಲವಾಗಿ ತಯಾರಾಗಿ ಮೃತ್ಯು ಮೃತಿಸಿ ಅಮೃತವನ್ನು ಹೊಂದಿ ನಾನು ಸಜೀವವಾಗಿ ಇರುವೆನೆನ್ನುವ ಭಾವ ಮೇಲಿನ ಮಂತ್ರದಲ್ಲಿ ಸೇರಿದೆ.

ಇನ್ನು ಸತ್ಯ ಹೇಳಬೇಕೆಂದರೆ ಈ ಮಂತ್ರವನ್ನು 108 ಸಲ ಜಪಿಸಬೇಕೆಂದು ನಿಯಮ ಸಂಖ್ಯೆಯೂ ಸಹ ಇದೆ. ಈ ಮಂತ್ರವನ್ನು ಜಪಿಸುವವರು ಎಷ್ಟೋ ಇದ್ದಾರೆ. ಆದರೂ ಈ ಮಂತ್ರದಲ್ಲಿ ಮೃತ್ಯುವನ್ನು ಜಯಿಸುವ ಶಕ್ತಿ ಇಲ್ಲ. ಮೃತ್ಯುಂಜಯ ಅನ್ನುವುದು ಪ್ರಪಂಚದಲ್ಲಿ ಇಲ್ಲವೆ ಇಲ್ಲ. ಹುಟ್ಟಿರುವ ಪ್ರತಿ ಜೀವಿ ಮರಣಿಸಲೇ ಬೇಕೆನ್ನುವ ಯೋಗ ಶಾಸನವನ್ನು ಈ ಮಂತ್ರ ವ್ಯತಿರೇಕಿಸುತ್ತಿದೆ. ಈ ಮಂತ್ರ ಫಲ ಎಷ್ಟು ಮಾತ್ರ ನಿರೂಪಿಸಲ್ಪಡದೆ ಎನ್ನುವ ನಿರೂಪಣೆ ಸಹ ಒಂದು ತಿಳಿಸುತ್ತಿದ್ದೇವೆ. ಅನಂತಪುರ ನಿವಾಸಿಗಳಾದ ಟಿ.ಕೆ. ಕೋದಂಡರಾಮ ನಾಯುಡು ಅವರ ಹಿರಿಯ ಮಗಳು ಟಿ.ಕೆ. ಸರಸ್ವತಿ ಯಂ.ಯಸ್.ಸಿ., 1956 ರಲ್ಲಿ ಹೃಷೀಕೇಶ್ ಶಿವಾನಂದ ಸ್ವಾಮಿ ಅವರ ಹತ್ತಿರ ಉಪದೇಶವಾಗಿ ಮೇಲಿನ ಮಂತ್ರವನ್ನು ಸ್ವೀಕರಿಸಿ ನಿಯಮವನ್ನು ತಪ್ಪದೇ ಬೆಳಿಗ್ಗೆ ಸಾಯಂಕಾಲ ಜಪಿಸುತ್ತಾ ಇದ್ದಳು. 1957 ಆಗಷ್ಟು 3ನೇ ತಾರೀಖು ಮೇಲಿನ ಮಂತ್ರವನ್ನು ಎದುರಿಸಿದ ಮೃತ್ಯುವು ಆಕೆಯನ್ನು ಕಬಳಿಸಿ ಹಾಕಿದೆ. ಈ ಅನುಭವ ಮೇಲಿನ ಮಂತ್ರವೊಂದರ ಸಾರಾಂಶವನ್ನು ತಿಳಿಸುತ್ತಿದೆ ಆದ್ದರಿಂದ ನೀವೇ ಯೋಚಿಸಿರಿ.

**ದಂಡಾ ಜಯರಾಮ್, ಉರವಕೊಂಡ**

**183) ಮರಣಿಸಿದ ಜೀವಾತ್ಮಗಳು ಬದಿಕಿರುವ ಶರೀರದೊಳಗೆ ಆಹ್ವಾನಿಸುವುದನ್ನು ನೀವು ನಂಬುತ್ತೀರಾ?**

**ಉ.** ವಿಶ್ವಾಸಿಸುವುದಿಲ್ಲ. ಮರಣಿಸಿದ ಜೀವಾತ್ಮಗಳು ಆ ಕ್ಷಣವೇ ಮರುಜನ್ಮಕ್ಕೆ ಹೋಗುವವು ಆದರೆ ಬದುಕಿದವರೊಳಗೆ ಸೇರುವುದಿಲ್ಲ. ಮರಣಿಸದೇ ಸ್ಥೂಲಶರೀರವನ್ನು ಕಳೆದುಕೊಂಡು ಸೂಕ್ಷ್ಮ ಶರೀರವನ್ನು ಹೊಂದಿರುವವರು ಮಾತ್ರ ಬದುಕಿರುವ ಶರೀರದೊಳಗೆ ಪ್ರವೇಶಿಸುವ ಅವಕಾಶವಿದೆ. ಮರಣಿಸಿದರೂ ಮರುಜನ್ಮಕ್ಕೆ ಹೋಗದವರು

ಸಾಯದವರೊಂದಿಗೆ ಸಮಾನವೇ. ಅವರು ಕಾಲಮರಣವಲ್ಲದೇ ಅಕಾಲ ಮರಣವನ್ನು ಹೊಂದಿರುತ್ತಾರೆ. ಅಂತಹವರು ಇತರರ ಶರೀರದೊಳಗೆ ಪ್ರವೇಶಿಸುವುದಕ್ಕೆ ಅವಕಾಶವಿದೆ. ಈ ವಿಷಯ ಪೂರ್ತಿ ಅರ್ಥವಾಗಬೇಕೆಂದರೆ ನಮ್ಮ ರಚನೆಗಳಲ್ಲಿ **"ಪ್ರಬೋಧ" ಗ್ರಂಥದಲ್ಲಿ "ಗ್ರಹಗಳು ವಿಗ್ರಹಗಳು" ಎನ್ನುವ ಅಧ್ಯಾಯವನ್ನು ಓದಬೇಕು.**

**ಯಂ. ರಾಮಾರಾವು, ಕಲುಗೊಟ್ಲ**

**184)** **1. ನೀನು ಯಾರು?**

ಉ. ನಾನು ಜೀವಾತ್ಮ.

**2. ಎಲ್ಲಿಂದ ಬಂದಿದ್ದೀಯಾ?**

ಉ. ಪರಮಾತ್ಮನಿಂದ

**3. ಎಲ್ಲಿಗೆ ಹೋಗುವೆ?**

ಉ. ಪರಮಾತ್ಮನೊಳಗೇ.

**4. ಬಂದು ಹೋಗುವುದರಲ್ಲಿ ಆಂತರ್ಯವೇನಿದೆ?**

ಉ. ಕರ್ಮಗಳನ್ನನುಭವಿಸುವುದೇ.

**ಚಾಗಮು ನಾರಾಯಣ ರೆಡ್ಡಿ, ಟಿ. ತಿಮ್ಮಾಪುರ**

**185) ಭಾಗವತ 18 ಪುರಾಣದೊಳಗಿನದೆಂದು ನೀವು ಹೇಳಿದ್ದೀರಿ. ಅದು ಉಪ ಪುರಾಣ ದೊಳಗಿನದೆಂದು ತಿಳಿದಿದ್ದೇವೆ ನಮ್ಮ ಸಂದೇಹವನ್ನು ತೀರಿಸಲು ಪ್ರಾರ್ಥನೆ.**

**ಉ.** ಭಾಗವತ ಉಪ ಪುರಾಣವಲ್ಲ. ಇದರ ಪೂರ್ತಿ ಹೆಸರು ಭಾಗವತ ಪುರಾಣ. ಇದರಲ್ಲಿ 18 ಸಾವಿರ ಶ್ಲೋಕಗಳಿರುತ್ತವೆ. ಉಪ ಪುರಾಣಗಳು 1. ಸನತ್ಕುಮಾರ, 2. ನಾರಸಿಂಹನು, 3. ಸ್ಕಂದ, 4. ಶಿವ ದರ್ಶನ, 5. ದೌರ್ವಾಸ, 6. ನಾರದೀಯ, 7. ಕಪಿಲ, 8. ವಾಮನ, 9. ಔಶನ 10. ಬ್ರಹ್ಮಾಂಡ, 11. ವಾರುಣ, 12. ಕೌಶಿಕ, 13. ಲೈಂಗ, 14. ಸಾಂಬ, 15. ಸೌರವ, 16. ಪರಾಶರ, 17. ಮಾರೀಚ, 18. ಭಾರ್ಗವ. ಇವು ಮಾತ್ರ ಉಪ ಪುರಾಣಗಳು.

**186) ಭಾಗವತ ಕಲ್ಪಿತವಾದಾಗ ಭಗವದ್ಗೀತೆ ಹೇಗೆ ವಾಸ್ತವವಾಗುತ್ತದೆ? ಭಾರತಗಳು ಭಾಗವತಗಳನ್ನು ರಚಿಸಿರುವುದು ವ್ಯಾಸನೇ ಆದ್ದರಿಂದ ಭಾಗವತ ಕಲ್ಪನೆಯಾದರೇ ಭಾರತವೂ**

**ಕೂಡ ಕಲ್ಪನೆಯಾಗುತ್ತದೆ. ಭಾಗವತವನ್ನು ವಿಮರ್ಶಿಸಿದ ನೀವು ಭಾರತ ಯುದ್ಧಸಂದರ್ಭದಲ್ಲಿ ಕೃಷ್ಣನು ಅರ್ಜುನನಿಗೆ ಹೇಳಿದ ಕೆಲವು ಶ್ಲೋಕಗಳ (ಭಗವದ್ಗೀತೆ)ನ್ನು ಶಾಸ್ತ್ರವೆಂದು ಹೇಗೆ ಹೇಳುತ್ತಿದ್ದೀರಿ?**

ಉ. ನೋಡಿ ನಮ್ಮ ಮನೆಯ ಕೊಟ್ಟಿಗೆಯಲ್ಲಿ ಗ್ವಾದಲಿಗೆ ಕಟ್ಟಿಹಾಕುವವೆಲ್ಲವೂ ಪಶುಗಳೇ. ಕಟ್ಟಿ ಹಾಕುವವನು ಒಬ್ಬನೇ ಆದಷ್ಟು ಮಾತ್ರಕ್ಕೆ ಎಲ್ಲವೂ ಒಂದೇ ಅಲ್ಲ. ಅವುಗಳಲ್ಲಿ ಸ್ವಲ್ಪ ಎಮ್ಮೆ, ಸ್ವಲ್ಪ ಆಕಳು ಇರುತ್ತವೆ ಅಲ್ಲವೆ! ಹಾಗೇ ವ್ಯಾಸನೊಬ್ಬನೇ ಹೇಳಿದಷ್ಟು ಮಾತ್ರಕ್ಕೆ ಬರೆದಿರುವವೆಲ್ಲವೂ ಗ್ರಂಥಗಳೇ ಆದಷ್ಟು ಮಾತ್ರಕ್ಕೆ ಎಲ್ಲವೂ ಒಂದೇ ಅಲ್ಲ. ಅವುಗಳಲ್ಲಿ ಕೆಲವು ಸತ್ಯಗಳು ಕೆಲವು ಅಸತ್ಯಗಳು ಇರುತ್ತವೆ. ನಮ್ಮ ಮನೆಯಲ್ಲಿರುವವು ಪಶುಗಳೇ ಆದರೂ ಅವುಗಳಿಗೆ ಎಮ್ಮೆ ಆಕಳು ಎಂದು ಪ್ರತ್ಯೇಕವಾದ ಹೆಸರುಗಳನ್ನು ನಾವೇ ಇಟ್ಟಹಾಗೇ ಆದಿನ ಬರೆದ ಬರಹಗಳಿಗೆ ಆ ಹಿರಿಯರೇ 1. ಪುರಾಣಗಳು, 2. ಇತಿಹಾಸಗಳು ಎನ್ನುವ ಹೆಸರಿಟ್ಟಿದ್ದಾರೆ. ನೀವು ಅಂದುಕೊಂಡ ಭಾಗವತ ಭಾರತ ವ್ಯಾಸನೊಬ್ಬನೆ ಬರೆದರೂ ಭಾಗವತವನ್ನು ಪುರಾಣವೆಂದು, ಭಾರತವನ್ನು ಇತಿಹಾಸವೆನ್ನುವುದು ಎಲ್ಲರಿಗೂ ತಿಳಿದ ವಿಷಯವೇ. ಭಾಗವತ ಭಾರತಗಳನ್ನು ಎಂದಿಗೂ ಒಂದಾಗಿ ಹೋಲಿಸಬಾರದು. ನಡೆದ ಚರಿತ್ರೆಯನ್ನು ತಿಳಿಸುವುದು ಇತಿಹಾಸ, ಆದ್ದರಿಂದ ಇತಿಹಾಸವೆಂದು ಹೆಸರಾದ ಭಾರತ ಅಸತ್ಯವಲ್ಲ. ಅದರಲ್ಲಿನ ಗೀತೆ ಅಸತ್ಯವಲ್ಲ. ಗೀತೆ ಎಲ್ಲಾ ವಿಷಯಗಳನ್ನು ನಿರೂಪಿಸುತ್ತದೆ. ಎಲ್ಲಾ ವಿಷಯಗಳು ಶಾಸನಗಳಾಗಿ ಇವೆ. ಆದ್ದರಿಂದ ಗೀತೆಯನ್ನು ಯೋಗಶಾಸ್ತ್ರವಾಗಿ ವ್ಯಾಸನೇ ಪ್ರತಿ ಅಧ್ಯಾಯದ ಕೊನೆಯಲ್ಲಿ ತಿಳಿಸಿದ್ದಾನೆ. ವ್ಯಾಸ ವಿರಚಿತವಾದ ಗೀತೆ ಪ್ರತಿ ಅಧ್ಯಾಯದಲ್ಲಿ **"ಯೋಗ ಶಾಸ್ತ್ರೇ"** ಎನ್ನುವ ಮಾತನ್ನು ನೀವು ನೋಡಬಹುದು ಒಬ್ಬನೇ ಬರೆದಿದ್ದರಿಂದ ಭಾಗವತ ಕಲ್ಪನೆಯಾದರೇ ಭಾರತವೂ ಸಹ ಕಲ್ಪನೆಯೆನ್ನುವುದು, ಒಬ್ಬನೆ ಕಟ್ಟಿಹಾಕಿದ್ದಾನೆ ಆದ್ದರಿಂದ ಒಂದು ಎಮ್ಮೆಯಾದರೆ ಎಲ್ಲಾ ಎಮ್ಮೆಗಳೇ ಆಗಿರುತ್ತವೆಂದಹಾಗೆ ಇರುತ್ತದೆ.

**187.** **ಮೂರು ದಾರಿಗಳೊಳಗೆ ಮುಖ್ಯವಾದ**
**ಮಧ್ಯ ದಾರಿಯೆ ಒಳಗಿನ ನಾಗಕನ್ಯೆ**
**ತಿಳಿದು ಲೀನವಾದವನೆ ಯುಚಿತ ಯೋಗಿ**
**ನವ್ಯತರ ಬೋಗಿ ಶ್ರೀ ಸದಾನಂದಯೋಗಿ**

**ಇದರ ಭಾವವೇನು?**

ಉ. ನಮ್ಮ ಶರೀರದಲ್ಲಿ ಎಲ್ಲಾ ನಾಡಿಗಳ ಪೈಕಿ ಮುಖ್ಯವಾದ ನಾಡಿಗಳು ಮೂರು ಇವೆ. ಅವುಗಳನ್ನೆ ಸೂರ್ಯ ಚಂದ್ರ ಬ್ರಹ್ಮನಾಡಿಗಳೆಂದು ಕರೆಯುತ್ತಾರೆ. ಅವುಗಳಲ್ಲಿ ಮುಖ್ಯವಾದದು ಬ್ರಹ್ಮನಾಡಿ. ಇದರಲ್ಲಿಯೇ ತಲೆ ಯಿಂದ ಆತ್ಮ ಶಕ್ತಿ ಶರೀರವೆಲ್ಲಾ ಸಂಚರಿಸುವ ಚೈತನ್ಯವನ್ನು ಉಂಟುಮಾಡುತ್ತಿದೆ. ಈ ನಾಡಿಯಿಂದಲೇ ಉಸಿರಾಟದ ಚೀಲಗಳು ಕದಲಿ ಶ್ವಾಸ ಆಡುತ್ತಿದೆ. ಶ್ವಾಸಕ್ಕೆ ಕಾರಣವಾದ ಶಕ್ತಿ ಬ್ರಹ್ಮನಾಡಿಯಲ್ಲೇ ಇದೆ. ಆದ್ದರಿಂದ ಶ್ವಾಸವನ್ನು ಆಡಿಸುವ ಶಕ್ತಿಯನ್ನು ನಾಗ ಕನ್ಯೆಯಾಗಿ ಹೋಲಿಸಿ ಯಾರಾದರೇ ಸೂರ್ಯ ಚಂದ್ರ ನಾಡಿಗಳಿಗೆ ಮಧ್ಯೆ ಇರುವ ಬ್ರಹ್ಮನಾಡಿಯಲ್ಲಿ ತನ್ನ ಮನಸ್ಸು ಲಗ್ನಮಾಡುವನೋ, ಅವನು ಅಲ್ಲಿರುವ ಶಕ್ತಿಯನ್ನು (ಆತ್ಮವನ್ನು) ಹೊಂದಿ ಯೋಗಿಯಾಗಿ ಇದ್ದಾನೆನ್ನುವ ಅರ್ಥವನ್ನು ಸೂಚಿಸುತ್ತಾ ಮೇಲಿನ ಪದ್ಯವನ್ನು ತಿಳಿಸಿದ್ದಾರೆ. ಮೂರು ದಾರಿಗಳು ಎಂದರೆ ಮೂರು ನಾಡಿಗಳು, ಮುಖ್ಯವಾದ ಮಧ್ಯದಲ್ಲಿರುವ ದಾರಿ ಎಂದರೇ ಬ್ರಹ್ಮನಾಡಿ, ಒಳಗೆ ನಾಗಕನ್ಯೆ ಎಂದರೆ ಆ ನಾಡಿಯಲ್ಲಿರುವ, ಆತ್ಮನನ್ನು ಒಪ್ಪಿಸುವವನು ಆತ್ಮನನ್ನು ಹೊಂದಿದವನೆಂದು ಅರ್ಥ. ಬ್ರಹ್ಮನಾಡಿ ಚೈತನ್ಯದಿಂದ ಆಡುವ ಶ್ವಾಸ ಹಾವು ಬುಸುಗುಟ್ಟಿದ ಹಾಗೆ ಇರುತ್ತದೆ ಆದ್ದರಿಂದ ಆತ್ಮಶಕ್ತಿಯನ್ನು ನಾಗಕನ್ಯೆ ಎಂದಿದ್ದಾರೆ.

**ಚಿಂತಾ ನಾರಾಯಣ, ನರಸಾಪುರಮು**

**188) ಸಾವಿರ ಯುಗಗಳು 108 ಕೋಟಿ ವರ್ಷಗಳೆಂದು ಅದರ ಸಂಖ್ಯೆ ಜಪಮಾಲೆಯಲ್ಲಿ ಸಹ ಇದೆಯೆಂದು ತಿಳಿಸಿದ್ದೀರಿ, 108 ಕೋಟಿ ವರ್ಷಗಳು ಹೇಗೋ ತಿಳಿಸಲು ಪ್ರಾರ್ಥನೆ.**

ಉ. ಪ್ರಪಂಚದ ಅಯುಸ್ಸು ಸಾವಿರ ಯುಗಗಳೆಂದು ಗೀತೆಯಲ್ಲಿ ತಿಳಿಸಲಾಗಿದೆ. ಯುಗಗಳಿಗೆ ನಾಲ್ಕು ಹೆಸರುಗಳನ್ನು ಇಡಲಾಗಿದೆ. 1. ಕೃತ ಯುಗ 2. ತ್ರೇತಾ ಯುಗ 3. ದ್ವಾಪರ ಯುಗ 4. ಕಲಿಯುಗ ಎಂದು ಅವುಗಳನ್ನು ಹೆಸರಿಸಲಾಗಿದೆ. ವರ್ಷಕ್ಕೆ 365 ದಿನಗಳಾದರೂ ದಿನಗಳಿಗೆ ಏಳು ಹೆಸರುಗಳು ಇಟ್ಟಹಾಗೆ ಯುಗಗಳು ಸಾವಿರ ಆದರೂ ನಾಲ್ಕು ಹೆಸರುಗಳಿಂದ ಕಳೆಯಬೇಕಾಗಿದೆ. ಭಾನುವಾರ ಆದ ನಂತರ ಸೋಮವಾರ ಆರಂಭವಾದಂತೆ ಕಲಿಯುಗ ಮುಗಿದ ಕೂಡಲೇ ಕೃತಯುಗ ಆರಂಭವಾಗುತ್ತದೆ. 250 ಸಲ 4 ಯುಗಗಳು ನಡೆದಾಗಲೇ 1000 ಯುಗಗಳು ಮುಗಿದಾಗ ಪ್ರಪಂಚದ ಅಂತ್ಯ ಏರ್ಪಡುತ್ತದೆ. ಅದನ್ನೇ ಪ್ರಳಯ ಎನ್ನುತ್ತಾರೆ. ಸಾವಿರ ಯುಗಗಳು 108 ಕೋಟಿ ವರ್ಷಗಳೆಂದು ಲೆಕ್ಕ ತಿಳಿಯುತ್ತಿದೆ.

| | |
|---|---|
| **ಕಲಿಯುಗ** | **4,32,000 ವರ್ಷಗಳು** |
| **ದ್ವಾಪರಯುಗ** | **8,64,000 ವರ್ಷಗಳು** |
| **ತ್ರೇತಾಯುಗ** | **12,96,000 ವರ್ಷಗಳು** |
| **ಕೃತಯುಗ** | **17,28,000 ವರ್ಷಗಳು** |
| **ನಾಲ್ಕು ಯುಗಗಳ ಮೊತ್ತ** | **43,20,000 ವರ್ಷಗಳು** |
| **250 ಸಲ 4 ಯುಗಗಳು ನಡೆದರೇ** | **43,20,000 X 250** |
| **ಒಟ್ಟು ವರ್ಷಗಳು** | **108,00,00,000** |

ಈ ವಿಧವಾಗಿ ಪ್ರಪಂಚ ಆಯುಸ್ಸು 108 ಕೋಟಿ ವರ್ಷಗಳೆಂದು ಗೀತೆ ಮೂಲಕ ತಿಳಿಯುತ್ತಿದೆ. ಆ ಸಂಖ್ಯೆಯನ್ನು ಮರೆತು ಹೋಗದಹಾಗೆ, ಪ್ರಪಂಚ ಇರುವವರೆಗೂ ಆ ಸಂಖ್ಯೆ ಎಲ್ಲರ ಮಧ್ಯದಲ್ಲಿ ಇರುವಹಾಗೆ 108 ಮಣಿಗಳ ಜಪಮಾಲೆಯನ್ನು ನಮ್ಮ ಹಿರಿಯರು ಇಟ್ಟಿದ್ದಾರೆ. ಯಾರಿಗಾದರೂ ದಾನ ಕೊಟ್ಟರೂ, ಮದುವೆಯಲ್ಲಿ ಓದಿಸಿದರೂ, ವಿರಾಳವನ್ನು ಕೊಟ್ಟರೂ 108 ರೂಪಾಯಿಗಳನ್ನೇ ಕೊಡುವುದು ಇಂದೂಗಳ ಸಂಪ್ರದಾಯವೆಂದು ತಿಳಿಯಬೇಕು.

**ರಾಧೇಯ, ಪಂದಿಳ್ಳಪಲ್ಲಿ**

**189) ತಪಸ್ಸಿಗೂ, ಯೋಗಕ್ಕೂ ವ್ಯತ್ಯಾಸವೇನಿದೆ? ಯೋಗದಲ್ಲಿ ಸಾಧಿಸಲ್ಪಡುವುದೇನು? ತಪಸ್ಸಲ್ಲಿ ಸಾಧಿಸಲ್ಪಡುವುದೇನು?**

**ಉ.** ತಪನೆಯೊಂದಿಗೆ ಕೂಡಿಕೊಂಡಿರುವುದು ತಪಸ್ಸು. ಯಾವ ತಪನೆ ಇಲ್ಲದ್ದು ಯೋಗ. ತಪಸ್ಸಿನಿಂದ ತಪಶ್ಶಕ್ತಿ ಲಭಿಸುತ್ತದೆ. ಯೋಗದಿಂದ ಯೋಗ ಶಕ್ತಿ (ಜ್ಞಾನಾಗ್ನಿ) ಲಭಿಸುತ್ತದೆ. ತಪಸ್ಸಿನಿಂದ ಲಭಿಸುವ ಶಕ್ತಿಯಿಂದ ಪ್ರಪಂಚದಲ್ಲಿ ಅಸಾಧಾರಣವಾದ, ಅಸಂಭವವಾದ ಕೆಲಸಗಳು ಸಹ ಮಾಡಬಹುದು, ಪ್ರಪಂಚ ಖ್ಯಾತಿ ಹೊಂದಬಹುದು. ಯೋಗದಿಂದ ಹೊರಗೆ ಮಹತ್ವಗಳನ್ನು ಮಾಡಲಾರರು, ಕೇವಲ ಅಂತರಂಗದಲ್ಲಿದ್ದ ಕರ್ಮವನ್ನು ಮಾತ್ರ ಯೋಗಶಕ್ತಿ ಸುಟ್ಟುಹಾಕುತ್ತದೆ. ತಪಸ್ಸು ಪ್ರಪಂಚ ಭೂತಗಳೊಂದಿಗೆ ತಯಾರಾದ ಜ್ಞಾನೇಂದ್ರಿಯಗಳ ಸಂಬಂಧದಿಂದ ಇದ್ದು ಮಾಡುವದು. ಉದಾಹರಣೆಗೆ ಮಂತ್ರವನ್ನೋ ಅಥವಾ ನಾಮವನ್ನೋ ಜಪಿಸುವುದು. ಅದು ಶಬ್ದದೊಂದಿಗೆ ಕೇಳಿಸುವಹಾಗೆ

ನಿನಗೆ ತಿಳಿದಿದೆ ಆದ್ದರಿಂದ ಕಿವಿಗೆ ಸಂಬಂದಿಸಿರುವುದು. ಒಟ್ಟಾರೆ ಯೋಗ ಜ್ಞಾನೇಂದ್ರಿಯಗಳ ಸಂಬಂಧವನ್ನು ಬಿಟ್ಟಿರುತ್ತದೆ. ಯಾವ ಇಂದ್ರಿಯ ಸಂಬಂಧವಿದ್ದರೂ ಅದು ಯೋಗವಾಗುವುದಿಲ್ಲ. ತಪಸ್ಸಿನಿಂದ ಜನ್ಮಗಳೆ ಲಭಿಸುತ್ತವೆ. ಯೋಗದಿಂದ ಜನ್ಮರಹಿತ ಮೋಕ್ಷ ಲಭಿಸುತ್ತದೆ. ಎಲ್ಲಾ ವಿಧಗಳ ತಪಸ್ಸಿಗಿಂತಲೂ ಯೋಗವೇ ದೊಡ್ಡದು. ಆದ್ದರಿಂದ ಗೀತೆಯಲ್ಲಿ ಆತ್ಮ ಸಂಯಮ ಯೋಗದಲ್ಲಿ ಕೊನೆಯ 42ನೇ ಶ್ಲೋಕದಲ್ಲಿ

**ಶ್ಲೋ॥ ತಪಸ್ವಿ ಭ್ಯೋಧಿಕೋ ಯೋಗಿ ಜ್ಞಾನಿ ಭ್ಯೋಪಿ ಮತೋ ಧಿಕಃ**
**ಕರ್ಮ ಭ್ಯ ಶ್ಚಾಧಿಕೋ ಯೋಗಿ ತಸ್ಮಾ ಧ್ಯೋಗೀ ಭವಾರ್ಜುನ।**

**"ಯೋಗಿ ತಪಸ್ವಿಗಳಿಗಿಂತಲೂ ಉತ್ತಮನು, ಜ್ಞಾನವಂತರಿಗಿಂತಲೂ ಘನವಾದವನು, ಕೆಲಸದೊಂದಿಗೆ ಕೂಡಿಕೊಂಡಿರುವ ನಾನಾ ಆರಾಧನೆಗಳನ್ನು ಮಾಡುವವರಿಗಿಂತಲೂ ಅಧಿಕನು, ಆದ್ದರಿಂದ ನೀನು ಯೋಗಿಯಾಗು"** ಎಂದಿದ್ದಾನೆ. ಇದನ್ನನುಸರಿಸಿ ಯೋಗಕ್ಕೂ ತಪಸ್ಸಿಗೂ ಎಷ್ಟೋ ವ್ಯತ್ಯಾಸವಿದೆ ಎಂದು ಹೇಳದೇನೆ ತಿಳಿಯುತ್ತಿದೆ ಮತ್ತು ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿ 48,53 ಶ್ಲೋಕಗಳಲ್ಲಿಯೂ ತಪಸ್ಸಿನಿಂದ ದೈವವನ್ನು ತಿಳಿಯುವುದಕ್ಕೆ ಶಕ್ಯವಲ್ಲವೆಂದು ಪುನರುದ್ಘಾಟಿಸಿರುವುದು ಸಹ ನಡೆದಿದೆ.

ಈ ಕಾಲದಲ್ಲಿ ಯೋಗಿಗಳೆಂದರೆ ಯಾರೋ, ತಪಸ್ವಿಗಳೆಂದರೆ ಯಾರೋ ಅವರ ವ್ಯತ್ಯಾಸವೇನೋ ತಿಳಿಯದೇ ಹೋಗಿದೆ. ತಪಶ್ಶಕ್ತಿಯಿಂದ ಮಹಿಮೆಗಳು ತೋರಿಸುವ ತಪಸ್ವಿಕರೇ ಹೆಚ್ಚಾಗಿ ಗೌರವಿಸಲ್ಪಡುತ್ತಿದ್ದಾರೆ. ತಪಸ್ಸು ಮಾಡಿ ತಪಸ್ವಿ ಆಗಿರುವವರು ತಪಸ್ವಿಯೆಂದು ಹೆಸರಿಟ್ಟುಕೊಳ್ಳದೆ ಯೋಗಿಎಂದು ಹೆಸರು ಇಟ್ಟುಕೊಳ್ಳುವುದು ನಡೆಯುತ್ತಿದೆ. ನಾವು ಧರ್ಮದ ಪ್ರಕಾರ ನಡೆಯಬೇಕೆಂದುಕೊಂಡಿದ್ದೇವೆ ಆದ್ದರಿಂದ ಯೋಗಿಗಳನ್ನು ಹೊರತು ತಪಸ್ವಿಕರನ್ನು ಗೌರವಿಸಬಾರದೆಂದು ಸ್ಪಷ್ಟವಾಗಿ ಹೇಳಿದ್ದೇವೆ.

**ಗೋನುಗುಂಟ್ಲ ವೆಂಕಟನಾರಾಯಣ, ತಾಡಿಪತ್ರಿ**

**190. ಶಿಶು ಪ್ರಾಣವನ್ನು ಯಾವಾಗ ಹೊಂದುತ್ತಿದ್ದಾನೆಂದು ತಿಳಿದುಕೊಳ್ಳುವ ಅವಶ್ಯಕತೆ ಏನಿದೆ?**

**ಉ.** ಜೀವಿಗೆ ಶರೀರ ಹೇಗೆ ಸಂಬವಿಸುತ್ತಿದೆ ಎಂದು ತಿಳಿಯದಿದ್ದರೆ ಭಗವಂತನಿಗೂ ದೇವರಿಗೂ ವ್ಯತ್ಯಾಸ ತಿಳಿಯದು. ಈ ವಿಷಯ ತಿಳಿಯದೆ ಬಹಳ ಜನ ಸ್ವಾಮಿಗಳು ಸಹಿತ ಪರಮಾತ್ಮ ಎಂದು ಹೇಳಬೇಕಾದಲ್ಲಿ ಭಗವಂತನೆಂದು, ಭಗವಂತನೆಂದು

ಹೇಳಬೇಕಾದಲ್ಲಿ ಪರಮಾತ್ಮ ಎಂದು ಹೇಳುತ್ತಿದ್ದಾರೆ. ಶರೀರದೊಳಗೆ ಜೀವಿಯು ಯಾವಾಗ ಬರುತ್ತಿದ್ದಾನೋ ತಿಳಿಯದೆ ಹೋದರೆ ಆಧ್ಯಾತ್ಮಿಕತೆ ಹೇಗೆ ತಿಳಿದಂತಾಗುತ್ತದೆ. ನಿನ್ನ ಶರೀರದಲ್ಲಿ ನೀನು ಯಾವಾಗ ಪ್ರವೇಶಿಸಿರುವುದು ಎಂದು ತಿಳಿಯುವುದೇ ಆಧ್ಯಾತ್ಮಿಕದಲ್ಲಿನ ಒಂದು ಭಾಗ.

**191. ಪರಮಾತ್ಮಗೆ ದಶಾವತಾರಗಳು ನಿಜವೇನಾ?**

ಉ. ವಿಷ್ಣುವಿಗೆ ದಶಾವತಾರಗಳು ಇವೆಯೆನ್ನುತ್ತಿದ್ದಾರೆ ಆದರೆ ಪರಮಾತ್ಮನಿಗೆ ಇಲ್ಲ. ದಶಾವತಾರಗಳೆನ್ನುವ ಮಾತು ಪುರಾಣಾಂತರ್ಗತವಾದದ್ದು ಆದರೆ ಶಾಸ್ತ್ರಬದ್ಧವಾದದ್ದು ಅಲ್ಲ. ಆಧ್ಯಾತ್ಮಿಕರಿಗೆ ದಶಾವತಾರಗಳಿಂದ ಕೆಲಸವಿಲ್ಲ. ಭಕ್ತಿಗೋಸ್ಕರ ಪುರಾಣಗಳು, ಜ್ಞಾನಕ್ಕೋಸ್ಕರ ಶಾಸ್ತ್ರಗಳಿವೆ ಎಂದು ತಿಳಿಯಿರಿ.

**192. ಈಗಿನ ಕಾಲದಲ್ಲಿ ನೀವು ಧೈರ್ಯವಾಗಿ ಇರುವುದು ಇದ್ದಹಾಗೇ ಹೇಳುತ್ತಿದ್ದೀರಿ. ನಿಮ್ಮ ಹಾಗೆ ಇನ್ನೂ ಯಾರಾದರೂ ಹೇಳುತ್ತಿದ್ದಾರಾ?**

ಉ. ಈನಾಡು (ತೆಲುಗು) ದಿನಪತ್ರಿಕೆಯಲ್ಲಿ ಪ್ರತಿ ಸೋಮವಾರ ಎರಡು ವಾರಗಳಿಂದ "ಪರದೇಶಿ ಪಾಠಗಳು" ಎನ್ನುವ ಶೀರ್ಷಿಕೆಯಲ್ಲಿ ಗುರು ಶಿಷ್ಯ ಸಂವಾದವೆನ್ನುವ ಹೆಸರಲ್ಲಿ "ಕೊಂಡವೀಟಿ ವೆಂಕಟ ಕವಿ" ಅವರಿಂದ ಬರೆಯಲಾಗುತ್ತಿದ್ದ ವ್ಯಾಸಗಳಿವೆ. ನವಂಬರ್ 7,14 ತಾರೀಖಿನಲ್ಲಿ ಬಂದಿರುವ ಪತ್ರಿಕೆಗಳನ್ನು ನೊಡಿದ್ದೇವೆ. ಅಂತಹ ರಚನೆಗಳು ಹೊರಗೆ ಬಂದರೆ ಮನುಷ್ಯ ಸತ್ಯವನ್ನು ತಿಳಿಯುತ್ತಾನೆ. ವೆಂಕಟ ಕವಿಯವರು ಗುರು ಶಿಷ್ಯ ಸಂವಾದ ರೂಪದಲ್ಲಿ ಚರಿತ್ರೆಯಲ್ಲಿನ ವಿಷಯಗಳನ್ನು ವಿವರಿಸುತ್ತಾ ಆದಿನಗಳ ಅಸತ್ಯಗಳನ್ನು ಕನ್ನಡಿಯನ್ನಿಟ್ಟು ತೋರಿಸಿದ್ದಾರೆ. ಎರಡನೆಯ ವಾರದಲ್ಲಿ ಬಂದಿರುವ "ಗುರು ಶಿಷ್ಯ ಸಂವಾದ–2"ರಲ್ಲಿ ಕೊನೆಗೆ ಬರೆದಿರುವುದನ್ನು ಕೆಳಗೆ ನೊಡಬಹುದು.

**ಪುರುಷ ಸೂಕ್ತಮುನಕು ಬೊಟ್ಟು ಕಾಟುಕ ಪೆಟ್ಟಿ**
**ವೇದ ಜನುಡುಕೇಕ ವೇಸಿ ನಾಡು**
**ಕಲ್ಪಿತಮು ನೆಲ್ಲ ಕಾದನಗಾ ಲೇಕ**
**ದೀನ ಜನುಡು ಸಮ್ಮತಿಂಚಿನಾಡು**

**ಹಾಗೇ ಅವರು ವ್ಯಾಸದಲ್ಲಿ ಮೊದಲು ಬರೆದಿದ್ದನ್ನು ಕೆಳಗೆ ನೋಡಿರಿ.**

1. **ನಮ್ಮಿ ನಮ್ಮಲೇನಿ ಉಮ್ಮಡಿ ದಮ್ಮಿಡಿ**
**ಕೂತ ವ್ರಾತ ಪೊಟ್ಟ ಕೂಟಿ ಕೊರಕು**
**ಸಾಗಿನಂತ ವರಕು ಜಾತಿ ನಿರ್ವೀರ್ಯಮೈ**
**ನೀರಸಿಂಚು ಪ್ರಗತಿ ನಿರ್ಗಮಿಂಚು**

2. **ಪಾತ ತರಮುಲೋನಿ ಪಂಡುಟಾಕುಲು**
**ಪೋಕ ಯುನ್ನ ಚಿಗುರು ಪುಟ್ಟಬೋದು**
**ರಾತಿ ಯುಗಮುಲೋನಿ ಪಾತ ಚಟ್ಟಾಲೆಲ್ಲ**
**ಪೋಕ ಯುನ್ನ ಮೇಲು ಪುಟ್ಟಬೋದು**

ಇರುವ ವಾಸ್ತವವನ್ನು ಹೇಳಿರುವ ವೆಂಕಟಕವಿ ಅವರು ಧನ್ಯರು. ಬಿಡುವಾದರೆ ನೀವೂ ಸಹ ಅವರ ವ್ಯಾಸಗಳನ್ನು ಈನಾಡು ಪತ್ರಿಕೆಗಳಲ್ಲಿ ಓದಿರಿ.

**ಗೂನಿಪೂಟಿ ಗೌರಿದೇವಿ, ರಾಜಂಪೇಟ**

**193. ಒಂದು ಜೀವಿ ಸಾಧಾರಣವಾಗಿ ಮರಣಿಸಿದರೆ ಮರಣ ಎನ್ನುತ್ತೇವೆ. ವಿಷ ಕುಡಿದುಸತ್ತರೆ ಆತ್ಮಹತ್ಯೆ ಎನ್ನುತ್ತೇವೆ. ಗೀತಾಶಾಸ್ತ್ರದ ಪ್ರಕಾರ ಅತ್ಮ ಸಾಯುವುದಿಲ್ಲ, ಶಸ್ತ್ರಗಳು ಚೇಧಿಸುವುದಿಲ್ಲ, ಅಗ್ನಿ ಸುಡುವುದಿಲ್ಲ, ನೀರು ತೋಯುವುದಿಲ್ಲ ಎನ್ನುತ್ತಾರೆ ಅಲ್ಲವೆ! ಅಂತಹದರಲ್ಲಿ ಆತ್ಮಹತ್ಯೆ ಎನ್ನುವುದು ಎಷ್ಟು ನಿಜ? ತಿಳಿಸಲು ಪ್ರಾರ್ಥನೆ.**

ಉ. ಗೀತೆಯಲ್ಲಿ ಆತ್ಮ ನಾಶವಾಗುವುದಿಲ್ಲ ಕತ್ತಿಯಿಂದ ಕತ್ತರಿಸಲು ಸಾಧ್ಯವಿಲ್ಲವೆಂದು ಹೇಳಿದ್ದಾರೆ. ಇಲ್ಲಿ ಮೂರು ಆತ್ಮಗಳಿವೆ. ಅದರಲ್ಲಿ ಯಾವ ಆತ್ಮದ ಬಗ್ಗೆ ಹೇಳಿದ್ದಾರೋ ನಿಮಗೆ ತಿಳಿಯದು. ಆದ್ದರಿಂದ ಈ ಪ್ರಶ್ನೆ ಹಾಕಿದ್ದೀರಿ. ಆತ್ಮ ಹತ್ಯೆ ಆಗುವುದು ವಾಸ್ತವವೇ. ಅದ್ದರಿಂದ ಆತ್ಮ ಹತ್ಯೆ ಎಂದು ಹಿರಿಯರೆಂದಿದ್ದಾರೆ. ಕತ್ತರಿಸಲಾಗದ್ದು, ತೋಯದಂತದ್ದು, ಸುಡದಂತದ್ದು ಜೀವಾತ್ಮ. ಕತ್ತಿಗೆ ಕತ್ತರಿಸಲ್ಪಡುವುದು, ಅಗ್ನಿಗೆ ಸುಡುವುದು ಆತ್ಮ. ಈ ಮಾತು ಆಶ್ಚರ್ಯವಾಗಿ ಇದೆ ಅಲ್ಲವೆ! ಇನ್ನೊಂದು ಆಶ್ಚರ್ಯವೇನೆಂದರೇ ಒಬ್ಬರಿಂದ ಸಾಯಿಸಲ್ಪಡುವುದನ್ನು ನೀವು ಹತ್ಯೆ ಎನ್ನುತ್ತೀರ ಹಾಗೇ ತನಷ್ಟಕ್ಕೆ ತಾನು ಸಾಯುವುದನ್ನು ಆತ್ಮಹತ್ಯ ಎನ್ನುತ್ತೀರ. ನಾವು ಹಾಗನ್ನುವುದಿಲ್ಲ ಒಬ್ಬರಿಂದ ಸಾಯಲ್ಪಡುವುದನ್ನು ಆತ್ಮಹತ್ಯವೆಂದು, ತನಗೆ ತಾನು ಸಾಯುವುದನ್ನು ಹತ್ಯೆ ಎನ್ನುತ್ತೇವೆ. ಈ ವಿಷಯವೆಲ್ಲಾ ಅರ್ಥಆಗಬೇಕೆಂದರೇ ನಮ್ಮ ರಚನೆಗಳಲ್ಲಿ **"ತ್ರೈತ ಸಿದ್ಧಾಂತ ಭಗವದ್ಗೀತೆ"**ಯನ್ನು ಓದಿರಿ.

**194. ಆಧ್ಯಾತ್ಮಿಕವಾಗಿ ಮೊಟ್ಟಮೊದಲು ಪ್ರವೇಶಿಸುವ ಜೀವಿ ಯೋಗಸಾಧನೆಯಿಂದ ಮುಕ್ತಿ ಹೊಂದುವುದಕ್ಕೆ ಅರ್ಹನಾ?**

ಉ. ಮೊದಲು ಪ್ರವೇಶಿಸಿದವರು ಎಲ್ಲಾ ವಿಧಗಳ ಜ್ಞಾನ ತಿಳಿದ ನಂತರ ಸಾಧನೆ ಮಾಡಿದರೇ ತಪ್ಪದೆ ಅರ್ಹರಾಗುತ್ತಾರೆ. ಜ್ಞಾನ ತಿಳಿಯದೆ ಯೋಗವನ್ನು ಸಾಧಿಸುತ್ತೇವೆಂದರೇ ವಿಳಾಸ ಇಲ್ಲದೇ ಊರಿಗೆ ಹೊಗುತ್ತೇವೆನ್ನುವಂತೆ ಇರುತ್ತದೆ. ಈಗಿನ ಕಾಲದಲ್ಲಿ ಜ್ಞಾನವೆಂದರೆ ಏನೋ ತಿಳಿಯದವರು ನಾವು ಸಾಧನೆ ಮಾಡುತ್ತೇವೆನ್ನುವುದು ಬಹಳ ವಿಚಿತ್ರವಾಗಿ ಇರುತ್ತದೆ.

**195) ಜೀವಿಯು ಮನಸ್ಸನ್ನು ನಿಲ್ಲಿಸುವುದಕ್ಕೆ ಸುಲಭವಾದ ಮಾರ್ಗವನ್ನು ತಿಳಿಸುತ್ತೀರೆಂದು ಕೋರುತ್ತಿದ್ದೇವೆ.**

ಉ. ಇದರಲ್ಲಿ ಸುಲಭ ಕಷ್ಟ ಎನ್ನುವವು ಇಲ್ಲ. ಇರುವುದು ಒಂದೇ ಒಂದು ಪದ್ಧತಿ. ಅದು ಮನಸ್ಸು ಮಾಡುವ ವಿಷಯ ಜ್ಞಾಪಕಗಳನ್ನು ಬಿಟ್ಟು ಹಾಕುತ್ತಾ ಇರುವುದು. ಹಾಗೆ ಮಾಡುತ್ತಾ ಮಾಡುತ್ತಾ ಮನಸ್ಸು ವಿಷಯ ಜ್ಞಾಪಕಗಳನ್ನು ತಂದಿಡದೆ ಒಳಗಿರುವ ಆತ್ಮ ಜ್ಞಾಪಕವನ್ನು ತರುತ್ತದೆ. ಮನಸ್ಸನ್ನು ನಿಲ್ಲಿಸುವುದಕ್ಕೆ ಮೊದಲು ಮನಸ್ಸೆಂದರೆ ಏನು? ಅದು ಎಲ್ಲಿದೆ? ಅದರ ಕೆಲಸವೇನು? ಅದರ ಆಹಾರವೇನು? ಅದಕ್ಕೆ ಮಿತ್ರಶತ್ರುಗಳಿದ್ದಾರಾ? ಅದು ಎಷ್ಟು ಗಾತ್ರ ಇದೆ ಮೊದಲಾದ ಪ್ರಶ್ನೆಗಳಿಗೆ ಉತ್ತರ ತಿಳಿದಿರಬೇಕು.

**196. ಮಾಯ ಎಂದರೆ ತಾಯಿ ಪ್ರಸವಿಸುವ ಶಿಶುವಿಗೆ ಹೊದ್ದಿರುವ ತೊಡುಗೆ ಎಂದು ಅನ್ನುತ್ತಾರೆ. ಇದರ ಮೇಲೆ ನಿಮ್ಮ ಅಭಿಪ್ರಾಯವೇನು?**

ಉ. ಶಿಶುಗಳು ಹೊದ್ದಿರುವ ತೊಡುಗೆಯನ್ನು ಮಾಯೆ ಎನ್ನಬಾರದು. ಅದರ ಹೆಸರು "ಮಾವಿ" ಎನ್ನಬೇಕು. ಮಾಯ ಎಂದರೆ ಗುಣಗಳ ಸಮ್ಮೇಳನವೆಂದು ಶಾಸ್ತ್ರ ತಿಳಿಸುತ್ತಿದೆ. ಮಾವಿ ಎನ್ನುವುದು ಒಂದು ಚೀಲದಂತದ್ದು. ಮಾವಿ ಪ್ರಾಣವಿಲ್ಲದ ಶಿಶುವನ್ನು ಹೊದ್ದಿರುವುದಾದರೆ, ಮಾಯ ಎನ್ನುವುದು ಕಾಣಿಸದೆ ಪ್ರಾಣವಿರುವ ಮನುಷ್ಯನ್ನು ಹೊದ್ದಿರುವುದು.

**ದಂಡಾ ಜಯರಾಮ್, ಉರವಕೊಂಡ**

**197. ಮನಸ್ಸು ನಿರಂತರ ಪ್ರಾಪ್ತಿ ಗೋಸ್ಕರ ಆಕಾಂಕ್ಷಿಸುತ್ತಿದ್ದರೇ ಅದು ದಮನ ಹೇತುವು ಅಲ್ಲವೆ?**

ಉ. ನಿರಂತರ ಪ್ರಾಪ್ತಿಗೋಸ್ಕರ ಆಕಾಂಕ್ಷಿಸುವುದು ಕೋರಿಕೆ ಆಗುತ್ತದೆ. ಆ ಕೋರಿಕೆ ಗೋಸ್ಕರ ತಪನೆ ಉಂಟಾಗುತ್ತದೆ ಆದ್ದರಿಂದ ಮನಸ್ಸನ್ನು ಹೊರಗಿನ ಕೆಲಸಗಳ ಜ್ಞಾಪಕದೊಂದಿಗೆ ಸಂಬಂಧವನ್ನು ಬಿಡಿಸಿದರೂ ಅದು ಒಳಗಿನ ಜ್ಞಾಪಕವನ್ನು ತಂದಿಡುತ್ತದೆ. ಆಗ ಹೊರಗಿನ ವಿಷಯಗಳು ಮನಸ್ಸಿನಿಂದ ತಿಳಿದಹಾಗೆ ಒಳಗಿನ ವಿಷಯಗಳು (ಆತ್ಮ) ಸಹ ಮನಸ್ಸಿನಿಂದಲೆ ತಿಳಿಯುತ್ತಿವೆ. ಆದ್ದರಿಂದ ಅದು ದಮನ ಹೇತುವು ಅಲ್ಲ. ಮನಸ್ಸನ್ನು ಪೂರ್ತಿ ಅಡಗಿಸಿಹಾಕಿದರೆ ತಾನೆ ದಮನ ಹೇತುವಾಗುತ್ತದೆ. ಪ್ರಪಂಚ ವಿಷಯಗಳಲ್ಲಿ ಆತ್ಮ ವಿಷಯಗಳಲ್ಲಿ ಮನಸ್ಸಿಲ್ಲದೆ ಜೀವಾತ್ಮನಿಗೆ ಏನೂ ತಿಳಿಯದು. ಎಲ್ಲಾ ವೇಳೆಯಲ್ಲಿ ಪಂಚೇಂದ್ರಿಯಗಳ ಜ್ಞಾಪಕಗಳು ಮಾಡುವ ಮನಸ್ಸು, ಯೋಗಸಾಧನೆಯಲ್ಲಿ ಆತ್ಮ ವಿಷಯ ಜ್ಞಾಪಕಗಳನ್ನೆ ಮಾಡುತ್ತದೆ.

**198) ಅಹಂ ಕೃತಿಯನ್ನು ಕರ್ತೃತ್ವವನ್ನು ನೀವು ಹೇಗೆ ಸಮನ್ವಯ ಪಡಿಸುತ್ತೀರ?**

ಉ. ಅಹಂಕಾರವನ್ನು ಕರ್ತೃತ್ವವನ್ನು ನಾವು ಸಮನ್ವಯ ಪಡಿಸುವುದಿಲ್ಲ. ಕರ್ಮ ಯೋಗ ಸಿದ್ಧಾಂತದ ಪ್ರಕಾರ ಅಹಂಕಾರವನ್ನು ನಿರ್ವೀರ್ಯ ಮಾಡುವುದೇ ನಮ್ಮ ವಿಧಾನ. ಗೀತೆಯಲ್ಲಿ ಮೋಕ್ಷ ಸನ್ಯಾಸ ಯೋಗದಲ್ಲಿ 17ನೇ ಶ್ಲೋಕ **"ನ ಅಹಂ ಕೃತ ಭಾವೋ"** ಎಂದಂತೆ ನಾವು ನಡೆದುಕೊಳ್ಳುತ್ತೇವೆ.

**ಮಚ್ಚಾ ವೆಂಕಟರಾಮಯ್ಯ. ಉರವಕೊಂಡ**

**199) ಪುನರ್ಜನ್ಮ ನಿಜವಾಗಿ ನಡೆಯುತ್ತಿದೆಯಾ? ಅವನ್ನು ನಂಬಬೇಕೆನ್ನುತ್ತೀರ?**

ಉ. ಕರ್ಮ ಇರುವವರೆಗೂ ಪುನರ್ಜನ್ಮಗಳು ನಡೆಯುತ್ತಲೇ ಇರುತ್ತವೆ. ಪುನರ್ಜನ್ಮದ ಜ್ಞಾಪಕ ಬಂದಿರುವವರ ಚರಿತ್ರೆಗಳು ಭೂಮಿಯ ಮೇಲೆ ಎಷ್ಟೋ ಇವೆ. ಈಗ ನೀವಿರುವುದು ಸಹ ಪುನರ್ಜನ್ಮವೆಂದೇ ತಿಳಿಯಬೇಕು.

**ಕೆ. ಗಂಗಪ್ಪ, ಕಿರಿಕೆರ**

**200. ಜ್ಞಾಪಕಕ್ಕೂ ಮಾಯೆಗೂ ವ್ಯತ್ಯಾಸವೇನಿದೆ?**

ಉ. ಜ್ಞಾಪಕ ಎಂದರೆ ಮನಸ್ಸು. ಮಾಯೆ ಎನ್ನುವುದು ಗುಣಗಳು. ಮಾಯೆಯನ್ನು ಅನುಸರಿಸಿ ಮನಸ್ಸು ಕೆಲಸ ಮಾಡುತ್ತಿರುತ್ತದೆ.

**201. ವೇದಾಂತವೆಂದರೇನು?**

ಉ. ***"ತ್ರೈಗುಣ್ಯ ವಿಷಯಾ ವೇದಾ"*** ಎಂದು ಗೀತೆಯಲ್ಲಿದೆ. ಇದನ್ನನುಸರಿಸಿ ಮೂರು ಗುಣಗಳ ವಿಷಯಗಳೇ ವೇದಗಳೆಂದು ತಿಳಿಯುತ್ತಿದೆ. ಗುಣಗಳ ವಿಷಯಗಳನ್ನು ಬಿಟ್ಟು ಯಾವ ಗುಣ ಜ್ಞಾಪಕ ಇಲ್ಲದೇ ಮಾಡಿಕೊಳ್ಳುವುದನ್ನು ವೇದಾಂತ ಎನ್ನುತ್ತಾರೆ. ಹಾಗೆ ಸಾಧನೆ ಸಮಯದಲ್ಲಿ ಗುಣ ವಿಷಯಗಳು ಜ್ಞಾಪಕ ಬಾರದ ನಿಶ್ಚಲನನ್ನು **"ವೇದಾಂತಿ"** ಎನ್ನುತ್ತಾರೆ.

**202. ನಮಗೆ ಈ ಪ್ರಪಂಚದಲ್ಲಿ ಪ್ರೀತಿ ಉಂಟುಮಾಡುವುದು ಯಾವುದು?**

ಉ. ನಮ್ಮ ಶರೀರದಲ್ಲಿ ಪ್ರೇಮ ಎನ್ನುವ ಗುಣದಿಂದ ಪ್ರೀತಿ ಉಂಟಾಗುತ್ತದೆ..

**ಯಮ್. ವೆಂಕಟರಾಮುಡು, ಬೆಂಗಳೂರು**

**203. ಮುಂಡ ಮೊಪಿತೋಡ ಮುನುಗುಚು ದೇಲುಚು**
**ನುಂಡಗನೆ ಮೊಹಮುಂಡೆ ಗಾಕ**
**ಅಂಡ ಬಾಯು ವೆನುಕ ನಾಯಾಶಲೇ ಲೇವು**
**ವಿಶ್ವದಾಭಿರಾಮ ವಿನುರ ವೇಮ.**

ಉ. ಮನಸ್ಸಿಗೆ ವಿಷಯ ಸಂಬಂಧವಿರುವವರೆಗೂ ಜೀವಾತ್ಮ ಗುಣಗಳಲ್ಲಿಯೇ ಮುಳುಗಿ ಇರುತ್ತಾನೆ. ಆ ಮನಸ್ಸು ವಿಷಯ ಚಿಂತನೆಬಿಟ್ಟ ನಂತರ ಆಸೆ ಮೊದಲಾದ ಗುಣಗಳಲ್ಲಿ ಜೀವಿಯು ತಗುಲಿಕೊಳ್ಳುವುದಿಲ್ಲ. ಮುಂಡ ಎಂದರೆ ಮನಸ್ಸೆಂದು ತಿಳಿಯಬೇಕು. ಮುಳುಗಿ ತೇಲುವವನು ಜೀವಿಯು.

**ಯಮ್. ರಾಮಾರಾವು, ಕಲುಗೊಟ್ಲ**

**204. ನಿನ್ನು ಜೂಚೆನೇನಿ ತನ್ನು ದಾಮರಚುನು**
**ತನ್ನು ಜೂಚೆನೇನಿ ನಿನ್ನು ಮರಚು**
**ನೇ ವಿಧಮುನ ಜನುಡು ನೆರುಗು ನಿನ್ನುನು ದನ್ನು**
**ವಿಶ್ವದಾಭಿರಾಮ ವಿನುರ ವೇಮ.**

ಉ. ಜೀವಾತ್ಮ ಸಾಧನೆಯಿಂದ ಆತ್ಮನನ್ನು ಸೇರಿದಾಗ ತನ್ನ ಮೇಲೆ ಜ್ಞಾಪಕ ಇಲ್ಲದೆ ಆತ್ಮ ಜ್ಞಾಪಕದಿಂದ ಇರುತ್ತಾನೆ. ಇದನ್ನೇ ಯೋಗವೆನ್ನುತ್ತಾರೆ. ಯೋಗ ಸಮಯದಲ್ಲಿ

ಬಾಹ್ಯ ಶಬ್ದ, ರೂಪ ರಸ ಗಂಧಗಳೊಂದಿಗೆ ಸಂಬಂಧವಿಲ್ಲದೆ ಜೀವಾತ್ಮ ತನ್ನನ್ನು ತಾನು ಮರೆತಿರುತ್ತಾನೆ. ಆದ್ದರಿಂದ ಆತ್ಮವನ್ನು ನಿನ್ನನ್ನು ಎಂದು ಹೇಳುತ್ತಾ ನಿನ್ನನ್ನು ನೋಡಿನಾನು ನನ್ನನ್ನು ನಾಮರೆತೆನು ಎಂದಿದ್ದಾರೆ.

ಯೋಗವನ್ನು ಬಿಟ್ಟು ಆತ್ಮ ಜ್ಞಾಪಕವನ್ನು ಬಿಟ್ಟು ಪುನಃ ಪ್ರಪಂಚ ಧ್ಯಾಸದಲ್ಲಿ ಬಂದಿರುವವನು ಆತ್ಮವನ್ನು ಮರೆತು ಹೋಗುತ್ತಾನೆ. ಆದ್ದರಿಂದ ತನ್ನನ್ನು ನೋಡಿದ ನಾನು ನಿನ್ನನ್ನು ಮರೆಯುವೆನೆಂದಿದ್ದಾನೆ. ಶರಿರದಿಂದ ಇರುವವರೆಗು ಯೋಗವನ್ನಾಚರಿಸುವ ಸಮಯದಲ್ಲಿ ಜೀವಾತ್ಮ ಧ್ಯಾಸ ಹೋಗುತ್ತದೆ. ಯೋಗವನ್ನಾಚರಿಸದ ಸಮಯದಲ್ಲಿ ಆತ್ಮ ಧ್ಯಾಸ ಹೋಗುತ್ತದೆ. ಹಾಗಲ್ಲದೆ ಪೂರ್ತಿಯಾಗಿ ಜೀವಾತ್ಮ ಮೂರನೆಯ ಪುರುಷನಾದ ಪರಮಾತ್ಮನಲ್ಲಿ ಐಕ್ಯವಾದಾಗ ತಾನು ಆತ್ಮಕ್ಕು ಜೀವಾತ್ಮಕ್ಕು ಸಾಕ್ಷಿಯಾಗಿದ್ದಾನೆ. ಸಮಸ್ತ ಜೀವಿಗಳಲ್ಲಿ ಹೊರಗೆ ಇದ್ದಾನೆ. ಆದ್ದರಿಂದ ನೀನು ಎನ್ನುವ ಆತ್ಮವನ್ನು, ತಾನು ಎನ್ನುವ ಜೀವಾತ್ಮನನ್ನು ನೋಡಬಹುದಾದ ಸ್ಥಿತಿ ಮೋಕ್ಷ ಸ್ಥಿತಿ. ಎಲ್ಲರಿಗೂ ಈ ವಿಷಯ ತಿಳಿಯದು ಆದ್ದರಿಂದ ಯಾವ ವಿಧವಾಗಿ ತಿಳಿಯಬೇಕು ನಿನ್ನನ್ನು ತನ್ನನ್ನು ಎಂದಿದ್ದಾರೆ.

**ಪಿ. ಪ್ರಕಾಶ್‌ನಾಯುಡು, ಕೂಚಿವಾರಿ ಪಲ್ಲಿ**

**205. ಜೀವಾತ್ಮಗೂ, ಆತ್ಮಗೂ, ಪರಮಾತ್ಮಗೂ ವ್ಯತ್ಯಾಸವೇನು?**

**ಉ.** ಶರೀರದಲ್ಲಿ ಒಂದು ಕಡೆ ಇರುವುದು ಜೀವಾತ್ಮ. ಶರೀರವೆಲ್ಲಾ ವ್ಯಾಪಿಸಿ ಕೊಂಡಿರುವುದು ಆತ್ಮ. ಎಲ್ಲಾ ಶರೀರಗಳಲ್ಲೂ ಮತ್ತು ಹೊರಗೆ ಅಣುವಣುವಿನಲ್ಲಿ ವ್ಯಾಪಿಸಿಕೊಂಡಿರುವುದು ಪರಮಾತ್ಮ.

**206. ದೇವರೆಲ್ಲಿದ್ದಾನೆಂದರೇ ಆತ್ಮದಲ್ಲಿ ಎನ್ನುತ್ತಾರೆ. ಆತ್ಮನನ್ನು ಪರಿಶುದ್ಧವಾಗಿ ಇಟ್ಟುಕೊಳ್ಳಬೇಕೆಂದರೇ ಏನು ಮಾಡಬೇಕು?**

**ಉ.** ಆತ್ಮದಲ್ಲಿ ದೇವರಿಲ್ಲ. ಆತ್ಮನೇ ದೇವರೆಂದು ತಿಳಿಯಬೇಕು. ಆತ್ಮವನ್ನು ಪರಿಶುದ್ದವಾಗಿ ಇಟ್ಟುಕೊಳ್ಳಬೇಕಾದ ಅವಶ್ಯಕತೆ ಇಲ್ಲ. ಅದು ಯಾವಾಗಲೂ ಪರಿಶುದ್ಧವಾಗಿಯೇ ಇರುತ್ತದೆ. ಪರಿಶುದ್ಧವಾಗಿ ಇಟ್ಟುಕೊಳ್ಳಬೇಕಾಗಿರುವುದು ಮನಸ್ಸನ್ನೆಂದು ತಿಳಿಯಬೇಕು.

**ದಂಡಾ ಮಲ್ಲಿಕಾರ್ಜುನ, ಉರವಕೊಂಡ**

**207. ಮನುಷ್ಯನ ಶಕ್ತಿಗೂ, ಸಂಪತ್ತಿಗೂ, ಶೌರ್ಯಕ್ಕೂ, ವಿವೇಕಕ್ಕೆ, ಲೌಕಿಕ ಜ್ಞಾನಕ್ಕೂ, ವಿಜ್ಞಾನಕ್ಕೂ ಅತೀತವಾದದ್ದು ಏನು?**

ಉ. "ನ ಹಿ ಜ್ಞಾನೇನ ಸದೃಶ್ಯಂ" ಜ್ಞಾನಾಗ್ನಿಗೆ ಸಮಾನವಾಗಿರುವುದು ಯಾವುದು ಇಲ್ಲ. ಎಂದು ಭಗವದ್ಗೀತಾ ಶಾಸ್ತ್ರದಲ್ಲಿ ಭಗವಂತನು ಹೇಳಿದ್ದಾನೆ. ಆದ್ದರಿಂದ ಜ್ಞಾನಕ್ಕೆ ಸಮಾನವಾಗಿರುವುದು ಇಲ್ಲ.

**ಜಿ. ಪದ್ಮ ಜಿ. ಯಶೋದ, ಗುಂತಕಲ್**

**208. ನಾರದನು ಆಂಜನೇಯನು ಇಬ್ಬರೂ ಬ್ರಹ್ಮಚಾರಿಗಳೇ ಆದರೂ ಆಂಜನೇಯನನ್ನು ಮಾತ್ರ ಪೂಜಿಸುತ್ತಾರೆ ನಾರದನಿಗೆ ಪೂಜೆ ಇಲ್ಲ ಕಾರಣವನ್ನು ತಿಳಿಸಬೇಕೆಂದು ಪ್ರಾರ್ಥನೆ.**

ಉ. ಆಂಜನೇಯನು ರಾಮ ಭಕ್ತನಾಗಿರುವುದು ಮುಖ್ಯ ಕಾರಣ. ನಂತರ ಆಂಜನೇಯನು ನಾರದನಿಗಿಂತಲೂ ಬಹಳ ಶಕ್ತಿ ಪರನು ಧೈರ್ಯವಂತನೆಂದು ಭೂತ ಪ್ರೇತ ಬಾಧೆಗಳು ಆಂಜನೇಯನಿಂದ ತೊಲಗುತ್ತವೆಂಬ ನಂಬಿಕೆ ಯಿಂದ ಪೂಜಿಸುತ್ತಾರೆ. ತನ್ನನ್ನು ನಂಬಿದ ಯಯಾತಿ ಮೊದಲಾದವರನ್ನು ರಕ್ಷಿಸಿದ್ದಾನೆಂದು ಕಥೆ ಇರುವುದರಿಂದಲೂ ಸಹ ಆಂಜನೇಯನನ್ನು ನಂಬಿ ಪೂಜಿಸುತ್ತಾರೆ. ನಾರದನಿಗೆ ಅಂತಹ ಚರಿತ್ರೆ ಇಲ್ಲ ಆದ್ದರಿಂದ ನಾರದನನ್ನು ಯಾರೂ ಪೂಜಿಸುವುದಿಲ್ಲ.

**209. ಕೆಲವರು ಹುಟ್ಟಿದ ಕೆಲವು ದಿನಗಳಿಗೇ ಮರಣಿಸುತ್ತಾರೆ. ಕೆಲವರು ಶತಾಯುಸ್ಕರಾಗಿ ಇರುತ್ತಾರೆ ಏಕೆ?**

ಉ. ಅವರ ಪ್ರಾರಬ್ಧ ಕರ್ಮವನ್ನನುಸರಿಸಿ ಜೀವನ ಕಾಲವಿರುತ್ತದೆ ಆದ್ದರಿಂದ ಹಾಗೆ ನಡೆಯುತ್ತದೆ. ಮಾಡಿಕೊಂಡವರಿಗೆ ಮಾಡಿಕೊಂಡಷ್ಟು ಎನ್ನುವ ನಾಣ್ನುಡಿ ಪ್ರಕಾರ ಅವರವರ ಕರ್ಮವನ್ನನುಸರಿಸಿ ಜೀವನ ಕಾಲವಿರುತ್ತದೆ.

**210. ಭೂಲೋಕದಲ್ಲಿ ಪಾರ್ವತಿ ಅವತರಿಸಿದ್ದಾಳೆಂದರೇ ಶಿವನೂ ಸಹ ಅವತರಿಸುತ್ತಾನೆ ಎನ್ನುತ್ತಾರೆ. ಹಾಗೇ ಒಂದು ಜನ್ಮದಲ್ಲಿ ಸ್ತ್ರೀಗೆ ಗಂಡನಾಗಿರುವವನು ಎರಡನೆಯ ಜನ್ಮದಲ್ಲಿ ಸಹ ಆ ಸ್ತ್ರೀಗೆ ಆತನೇ ಗಂಡನಾಗುತ್ತಾನಾ?**

ಉ. ಶಿವಪಾರ್ವತಿ ಎನ್ನುವುದು ಪುರಾಣ ಕಲ್ಪಿತ ಕಥೆಗಳು ಅವನ್ನು ನಂಬಬೇಡಿ. ಕರ್ಮ ಸಿದ್ಧಾಂತದ ಪ್ರಕಾರ ಒಬ್ಬನೇ ಪುರುಷನು ಮರು ಜನ್ಮಗಳಲ್ಲಿ ಗಂಡನಾಗುತ್ತಾನೆನ್ನುವುದಕ್ಕೆ ಆಧಾರವಿಲ್ಲ.

**ಎ. ನಲ್ಲಪ್ಪ, ಕೆ. ಶೀತಾರಾಮಯ್ಯ, ಸಿ. ನಾರಾಯಣ ರೆಡ್ಡಿ**

**211. ನವೆಂಬರ್ ಪತ್ರಿಕೆಯಲ್ಲಿ ಶಿಶು ತಾಯಿ ಗರ್ಭದಿಂದ ಹೊರಬಂದ ನಂತರವೇ ಪ್ರಾಣ ಬರುತ್ತದೆಂದು ತಿಳಿಸಿದ್ದೀರ. ಆದರೆ ಪ್ರಹ್ಲಾದನು ತಾಯಿ ಗರ್ಭದಲ್ಲಿಯೇ ನಾರಾಯಣ ಮಂತ್ರೋಪದೇಶವನ್ನು ಹೊಂದಿದ್ದಾನೆಂದು, ಅಷ್ಟ ವಕ್ರನು ತನ್ನ ತಂದೆ ವಿದ್ಯೆಯನ್ನು ಗರ್ಭದಿಂದಲೇ ಗ್ರಹಿಸಿದ್ದಾನೆಂದು ಶಾಸ್ತ್ರಗಳು ಹೇಳುತ್ತಿವೆ. ಅದು ಅಲ್ಲದೆ ಅರ್ಜುನನ ಹೆಂಡತಿ ಸುಭದ್ರಗೆ ಪದ್ಮವ್ಯೂಹವನ್ನು ಹೇಳುತ್ತಿದ್ದಾಗ ಗರ್ಭದಲ್ಲಿ ಇರುವ ಅಭಿಮನ್ಯನು ಕೇಳಿದ್ದಾನೆಂದು ಸಹ ಇದೆ. ಮತ್ತು ಗರ್ಭಿಣಿ ಸ್ತ್ರೀಯರನ್ನು ವಿಚಾರಿಸಿದರೆ 7 ತಿಂಗಳಿಗೇ ತಮ್ಮ ಗರ್ಭದಲ್ಲಿ ಪ್ರಾಣವಿರುವಹಾಗೆ ಹೇಳುತ್ತಿದ್ದಾರೆ. ಈ ಸಂದೇಹಗಳನ್ನು ತೀರಿಸಬೇಕೆಂದು ಪ್ರಾರ್ಥನೆ.**

ಉ. ನಿಮ್ಮ ಪ್ರಶ್ನೆಯಲ್ಲಿ ಕೆಲವು ಶಾಸ್ತ್ರಗಳಲ್ಲಿ ಹೇಳಿದ್ದಾರೆಂದು ತಿಳಿಸಿದ್ದೀರ. ಅಂದಹಾಗೆ ಅವು ಶಾಸ್ತ್ರಗಳು ಅಲ್ಲ ಪುರಾಣಗಳು, ಇತಿಹಾಸಗಳೇ. ಇತಿ ಹಾಸಗಳು ಚರಿತ್ರಗಳೇ ಆದರೂ ಅವುಗಳಿಗೂ ಸಹ ಕವಿಗಳು ಬಣ್ಣಗಳನ್ನು ಹಚ್ಚಿದ್ದಾರೆಂದು ಮರೆಯಬೇಡಿ. ಈದಿನ ನಾವು ಶಾಸ್ತ್ರ ಸಹಿತವಾದ ಸಿದ್ಧಾಂತವನ್ನು ಪ್ರತಿಪಾದಿಸಿದರೂ ನಂಬದ ವಿಮರ್ಶಕರು, ಬುದ್ಧಿವಂತರು, ಹಿಂದಿನ ಬರಹಗಳನ್ನು ಏಕೆ ವಿಮರ್ಶಿಸದೇ ಇದ್ದಾರೋ ಅರ್ಥವಾಗುತ್ತಿಲ್ಲ.

ಮೀನಿನ ಹೊಟ್ಟೆಯಲ್ಲಿ ಮತ್ಸ್ಯ ಗಂಧಿ ಹುಟ್ಟಿದೆ ಎಂದರೆ ಮೀನು ಅಂಡವನ್ನು ಉತ್ಪತ್ತಿ ಮಾಡುತ್ತದೆ ಪಿಂಡ ಹೇಗೆ ಹುಟ್ಟಿದೆ ಎಂದು ಏಕೆ ಕೇಳಬಾರದು.? ವೀರ್ಯವನ್ನು ಮೀನು ನುಂಗುವುದರಿಂದ ಗರ್ಭಬಂದಿದೆ ಎಂದಿದ್ದಾರೆ. ಬಾಯಿಯಿಂದ ನುಂಗಿರುವ ಪದಾರ್ಥ ಜೀರ್ಣಕೋಶವನ್ನು ಸೇರುತ್ತದೆ ಆದರೆ ಗರ್ಭಕೋಶ ಸೇರುವುದಕ್ಕೆ ದಾರಿಯೇ ಇಲ್ಲವೆಂದು ಏಕೆ ಕೇಳದೆ ಹೋಗಿದ್ದಾರೆ? ದ್ರೋಣನು ಬಟ್ಟಲಿನಲ್ಲಿ, ಕರ್ಣನು ಕಿವಿಯಲ್ಲಿ ಹುಟ್ಟಿದ್ದಾನೆಂದರೆ ಸುಲಭವಾಗಿ ನಂಬಿದ್ದೀರ ನಮ್ಮ ಸೂಕ್ಷ್ಮದೃಷ್ಟಿ ಅಲ್ಲಿ ಏಕೆ ಕೆಲಸ ಮಾಡಲಿಲ್ಲ.? ನಾವು ಹೇಳಿದ ವಿಷಯವನ್ನು ನಿಮ್ಮ ಪ್ರಶ್ನೆಗಳಿಗೆ ಇನ್ನೂ ಸಾಣೆ ಹಿಡಿಯುವಹಾಗೆ ಈ ವಿಷಯವನ್ನು ಕುರಿತು ಇನ್ನೂ ಕೆಲವು ಪ್ರಶ್ನೆಗಳನ್ನು ನಿಮಗೆ ಜೊತೆ ಮಾಡುತ್ತಿದ್ದೇನೆ. ನಾನು ಕೇಳುವ ಪ್ರಶ್ನೆಗಳಿಗೆ ನೀವು ಉತ್ತರವನ್ನು ಹುಡುಕಿರಿ.

1. ಹಿಂದಿನ ಜನ್ಮದ ಜ್ಞಾಪಕವಿದ್ದು ಹೇಳಿರುವವರನ್ನಾದರೂ ನಾವು ಭೂಮಿಯ ಮೇಲೆ ನೋಡಬಹುದು. ಅದರೆ ಗರ್ಭಸ್ಥ ಸ್ಥಿತಿಯ ಬಗ್ಗೆ ಹೇಳಿದವರಿದ್ದಾರಾ? ಅಸಲು ನಿಮಗೆ ಆ ಜ್ಞಾಪಕವಿದೆಯಾ?

2. ಜ್ಯೋತಿಷ್ಯ ಶಾಸ್ತ್ರರೀತ್ಯಾ ತಾಯಿ ಗರ್ಭದಿಂದ ಹೊರಬಿದ್ದನಂತರವೇ ಲೆಕ್ಕಿಸಿ ದಶಾ ಶೇಷವನ್ನು ತಿಳಿಸುತ್ತಿದ್ದಾರೆ. ದಶಗಳು ತಾಯಿ ಗರ್ಭವನ್ನು ಸೇರಿದಾಗಿಂದ ಏಕೆ ಲೆಕ್ಕಿಸಲಿಲ್ಲ? ದಶಾ ಭುಕ್ತಿಯನ್ನು ಗತ ಜನ್ಮದ ಭುಕ್ತಿ ಎಂದು ಬರೆಯುತ್ತಿದ್ದಾರೆ ಏಕೆ? (ಗರ್ಭ ಭುಕ್ತಿ ಎಂದು ಕೆಲವರನ್ನುತ್ತಾರೆ. ಗರ್ಭದಲ್ಲಿ ವರ್ಷಗಳಗಟ್ಟಲೇ ಇರುವುದಿಲ್ಲ ಆದ್ದರಿಂದ ಗರ್ಭ ಭುಕ್ತಿ ಎನ್ನಬಾರದು ಗತ ಜನ್ಮ ಭುಕ್ತಿ ಎನ್ನಬೇಕು.)

3. ತಾಯಿ ಗರ್ಭದಿಂದ ಹೊರಬಂದ ಶಿಶುವಿಗೆ ಕೆಲವು ನಿಮಿಷಗಳು, ಕೆಲವು ಗಂಟೆಗಳ ಕಾಲ ಶ್ವಾಸ, ರಕ್ತ ಪ್ರಸರಣೆ, ಕದಲಿಕೆ, ಚೈತನ್ಯ ಏಕೆ ಇಲ್ಲ.?

4. ದಾದಿಯರು ಕೆಲವರು ಮಾವಿಯಲ್ಲಿ ಪ್ರಾಣವಿದೆಯೆಂದು, ಶಿಶುವಿನೊಳಗೆ ಬರಬೇಕೆಂದು ಹೇಳುತ್ತಿರುತ್ತಾರೆ. ಅಸಲು ಗರ್ಭದಲ್ಲಿ ಪ್ರಾಣಬಂದಿರುವುದು ಮಾವಿಗಾ, ಶಿಶುವಿಗಾ?

5. ಕೆಲವು ಅಸ್ಪತ್ರೆಗಳಲ್ಲಿ ಪ್ರಸವಿಸಿದ ಶಿಶುಗಳು ಸತ್ತುಹೋಗಿದ್ದಾರೆಂದು ಡಾಕ್ಟರುಗಳು ನಿರ್ಧಾರ ಮಾಡಿದ ಸ್ವಲ್ಪ ಹೊತ್ತಿಗೆ ಹೇಗೆ ಪ್ರಾಣ ಹೊಂದಿವೆ?

6. ಗರ್ಭಸ್ಥಶಿಶುವಿಗೆ ಪ್ರಾಣ ವಿಲ್ಲದೆ ಬೆಳೆಯುವುದಿಲ್ಲವೆಂದು, ಶಿಶು ತಾಯಿ ಶರೀರದಲ್ಲಿ ಮರಣಿಸಿದರೇ ತಾಯಿಗೆ ಅಪಾಯವೆಂದು ಹೇಳುತ್ತಾರೆ. ಗರ್ಭ ನಿಂತಾಗಿನಿಂದ ಪ್ರಾಣ ವಿಲ್ಲದೇ ಆರು ತಿಂಗಳ ಕಾಲ ಹೇಗೆ ಬೆಳೆದಿದೆ. ಆ ಆರು ತಿಂಗಳ ಕಾಲದಲ್ಲಿ ಶಿಶುವಿಗೆ ಪ್ರಾಣವಿಲ್ಲದಂತಾದರೆ ತಾಯಿಗೇಕೆ ಅಪಾಯವಾಗಲಿಲ್ಲ?

7. ಯೋಗಶಾಸ್ತ್ರವಾದ ಗೀತೆಯಲ್ಲಿ ಜೀವಿಯು ಶರೀರವನ್ನು ಹೊಂದಿದಾಗಿನಿಂದ ಬಾಲ್ಯ, ಯವ್ವನ, ಕೌಮಾರ, ವೃದ್ಧಾಪ್ಯ ಮತ್ತು ಮರಣಾವಸ್ಥೆಗಳೆಂದಿದ್ದಾರೆ ಆದರೆ ಗರ್ಭಸ್ಥಾವಸ್ಥೆ ಎಂದು ಹೇಳಲಿಲ್ಲ ಏಕೆ?

8. ಗೀತೆಯಲ್ಲಿ ಹಳೇ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಜೀವಿಯು ಧರಿಸುತ್ತಿದ್ದಾನೆಂದಿದ್ದಾನೆ. ಹೊಸದೆಂದರೆ ಪೂರ್ತಿ ತಯಾರಾಗಿರುವುದಾ? ಅಥವಾ ಆರು ತಿಂಗಳುಗಳಿಗೆ ಅಸಂಪೂರ್ಣವಾಗಿರುವುದಾ?

9. ಭಗ (ಯೋನಿ) ದಿಂದ ಪ್ರಾಣದೊಂದಿಗೆ ಹುಟ್ಟಿದಾಗ ಎಲ್ಲರೂ ಭಗವಂತರೇ ಆಗುತ್ತಾರೆ ಅಲ್ಲವೆ! ಹಾಗೆ ಎಲ್ಲರೂ ಭಗವಂತರಾಗಿ ಏಕೆ ಇಲ್ಲ?

ಇಲ್ಲಿ ನಾವು ಸ್ವಲ್ಪ ಹೇಳುವ ಉತ್ತರವೇನೆಂದರೇ ನಮ್ಮ ಶರೀರದಲ್ಲಿ ಪಂಚ ಭೂತಗಳಲ್ಲಿ ಒಂದಾದ ವಾಯು (ಗಾಳಿ) ಇದೆ. ಅದು ಐದು ಭಾಗಗಳಾಗಿ ಇದೆ. ವಾಯುವನ್ನು ಪ್ರಾಣ ಎನ್ನಬಹುದು. ಆದ್ದರಿಂದಲೇ ಪಂಚವಾಯುಗಳನ್ನು ಪಂಚ ಪ್ರಾಣಗಳೆಂದಿದ್ದಾರೆ. ನಮ್ಮ ಮೂಗು ರಂಧ್ರಗಳಲ್ಲಿ ಗಾಳಿ ಇರುವಾಗಲೇ ಪ್ರಾಣವಿದೆಯೆಂದು, ಗಾಳಿಇಲ್ಲದಾಗ ಪ್ರಾಣವಿಲ್ಲ ಎಂದು ಹೇಳುವುದು ಸಹ ಅಭ್ಯಾಸವಾಗಿದೆ. ಶರೀರದಲ್ಲಿ ಪ್ರಾಣವಿರುವಾಗಲೇ ಜೀವಾತ್ಮ ಸಹ ಇರುತ್ತಾನೆ. ಪ್ರಾಣವಿಲ್ಲದಾಗ ಜೀವಿಯಿರುವುದಿಲ್ಲ. ಮೂಗುರಂಧ್ರಗಳಲ್ಲಿ ಶ್ವಾಸ ಆಡದವರೆಗೂ ಶಿಶುವಿಗೆ ಪ್ರಾಣವಿಲ್ಲವೆಂದು ಗ್ರಹಿಸಬೇಕು. ತಾಯಿ ಗರ್ಭದಲ್ಲಿ ಮಾವಿ ಎನ್ನುವ ಚೀಲದಲ್ಲಿ ಉಮ್ಮಿ ನೀರು ಎನ್ನುವ ದ್ರವದಲ್ಲಿ ಶಿಶು ಮುಳುಗಿರುತ್ತದೆ. ಆದ್ದರಿಂದ ಶ್ವಾಸ ಅಡುವುದಕ್ಕೆ ಅವಕಾಶವೇ ಇಲ್ಲ. ಜೀವಿಯು ಅಸಲೇ ಇಲ್ಲ. ಜನನದ ಬಗ್ಗೆ ನಾವು ಕೇಳಿರುವ ಪ್ರಶ್ನೆಗಳಿಗೆ ಉತ್ತರವನ್ನು ನೀವು ಹುಡುಕಿರಿ. ಸತ್ಯಾ ಸತ್ಯಗಳು ನಿಮಗೇ ಅರ್ಥವಾಗುತ್ತವೆ.

**212. ನಾವು ಓದಿರುವ ಕೆಲವು ವಿಷಯಗಳು ಗ್ರಂಥ ಪ್ರಮಾಣಗಳು, ಆದರೇ ಶಾಸ್ತ್ರ ಪ್ರಮಾಣಗಳು ಅಲ್ಲವೆಂದು ನೀವೇ ಹೇಳಿದ್ದೀರ. ನೀವು ವಿಶ್ವಸಿಸುವ ಭಗವದ್ಗೀತೆ ಭಾರತ ಚರಿತ್ರೆಯಲ್ಲಿ ಒಂದು ಭಾಗ ಅಲ್ಲವೆ! ಪರಮಾತ್ಮ ಮಾನವ ರೂಪದಲ್ಲಿ ನೀತಿಯನ್ನು ಬೋಧಿಸಿದ್ದಾನೆ. ಅದೇ ಪ್ರಕಾರ ಉಳಿದ ಅವತಾರಗಳಲ್ಲಿ ಭಾಗವತ ರಾಮಾಯಣಗಳಲ್ಲಿ ಹೇಳಿರುವವು ಶಾಸ್ತ್ರ ಪ್ರಮಾಣಗಳಾಗಿ ಪರಿಗಣಿಸಬೇಕಾಗಿದೆ. ಜನ್ಮ ನಮಗೆ ಹೇಗೆ ಬಂದಿರುವುದೆಂದು ಅಲ್ಲ, ಏಕೆ ಬರುತ್ತದೆ ಅದರ ರಾಹಿತ್ಯಕ್ಕೆ ಮಾರ್ಗವೇನು ಎನ್ನುವುದು ತಿಳಿಸಿರಿ?**

**ಉ.** ನಾವು ಯಾರಿಗೋ ಸಮಾಧಾನಕೊಟ್ಟಿರುವ ವಿಷಯವನ್ನು ನೋಡಿ ಗರ್ಭಸ್ಥ ಶಿಶುವಿನ ಬಗ್ಗೆ ನೀವು ಅಷ್ಟ ವಕ್ರನ ಹತ್ತಿರದಿಂದ ಅಭಿಮನ್ಯನ ವರೆಗೂ ವಿವರಿಸಿ ಪ್ರಶ್ನೆ ಕೇಳಿದರೇನೇ ನಾವು ಉತ್ತರ ಕೊಟ್ಟಿದ್ದೇವೆ. ಅದು ನಮಗೆ ಅವಶ್ಯವಿಲ್ಲ, ನಮಗೆ ಮತ್ತೊಂದು ಬೇಕೆಂದರೇ, ಅಂಗಡಿಯಲ್ಲಿ ತೆಗೆದುಕೊಂಡ ಸರಕು ಬಾಯಲ್ಲಿ ಹಾಕ್ಕೊಂಡು ರುಚಿ ಸರಿಯಾಗಿಲ್ಲವೆಂದು ಇದು ನಮಗೆ ಏಕೆ! ಬೇರೆಯದು ಬೇಕೆಂದು ಕೇಳಿದಹಾಗೆ ಇರುತ್ತದೆ. ನೀವು ಕೇಳದೆ ಹೋದರೆ ನಾವೇಕೆ ಹೇಳ್ತೀವಿ.

ಪರಮಾತ್ಮ ಮಾನವ ರೂಪದಲ್ಲಿ ನೀತಿಯನ್ನು ಬೋಧಿಸಿದ್ದಾನೆಂದು ನೀವೆಂದಿದ್ದೀರ. ತಿಳಿಯದೇ ಕೇಳುತ್ತೇನೆ ಯುದ್ಧರಂಗದಲ್ಲಿ ಸಾಯಿಸುವುದಿಲ್ಲವೆಂದು ಕುಳಿತಿರುವ ಅರ್ಜುನನನ್ನು ತಿರುಗಿ ಯುದ್ಧ ಮಾಡುವಹಾಗೆ ಮಾಡುವುದು ನೀತಿ ಹೇಗಾಗುತ್ತದೆ? ಕೃಷ್ಣನ ಜೀವನ ಚರಿತ್ರೆಯಲ್ಲಿ ಎಂಟು ಮಂದಿ ಹೆಂಡತಿಯರಲ್ಲದೇ ಎಷ್ಟೋ ಪರ ಸ್ತ್ರೀಯರ ಸಂಬಂಧ ಯಾವ ನೀತಿ? ಯುದ್ಧದಲ್ಲಿ ಆಯುಧವನ್ನು ಹಿಡಿಯುವುದಿಲ್ಲವೆಂದು ಹೇಳಿ ಭೀಷ್ಮನ ಮೇಲೆ ಚಕ್ರವನ್ನು ಧರಿಸುವುದು ಯಾವ ನೀತಿ? ದುರ್ಯೋಧನನಿಗೆ ಪಾಂಡವರ ಸಂದೇಶವನ್ನು ಹೇಳಿ ದುರ್ಯೋಧನನ ಅಭಿಪ್ರಾಯವನ್ನು ತಿಳಿದುಕೊಳ್ಳದ ಮುನ್ನವೇ, ಒಂದು ವೇಳೆ ನೀನು ಐದು ಊರುಗಳನ್ನಾದರೂ ಕೊಡದೇ ಇರುವ ಪಕ್ಷದಲ್ಲಿ ನಿನ್ನನ್ನು ಭೀಮನು, ಕರ್ಣನನ್ನು ಅರ್ಜುನನು ಚಿತ್ರವಧೆ ಮಾಡುತ್ತಾರೆಂದು ಹೆದರಿಸಿ ಉದ್ದೇಶಪೂರ್ವಕವಾಗಿ ಯುದ್ಧಮಾಡುವುದಕ್ಕೆ ಪ್ರೇರೇಪಿಸಿರುವುದು ಯಾವ ನೀತಿ. ಯುದ್ಧ ರಂಗದಲ್ಲಿ ಆಯುಧಗಳನ್ನು ಬಿಟ್ಟು ಬೇರೆ ಕೆಲಸದಲ್ಲಿ ನಿಮಗ್ನವಾಗಿರುವ ಕರ್ಣನನ್ನು ಸಾಯಿಸುವುದು ಯಾವ ನೀತಿ?

ವಾಸ್ತವವಾಗಿ ಆತನು ತನ್ನ ಜೀವನದಲ್ಲಿ ಯಾವ ನೀತಿ ಬೋಧಿಸಲಿಲ್ಲ. ಆತನು ತಿಳಿಸಿರುವುದು ಜ್ಞಾನವನ್ನು ಧರ್ಮವನ್ನು ಮಾತ್ರ. ನೀತಿಯನ್ನು ನ್ಯಾಯವನ್ನು ತಿಳಿಸಿಲ್ಲ. ನೀತಿ ನ್ಯಾಯ ಲೋಕ ಸಂಬಂಧಗಳು, ಜ್ಞಾನ ಧರ್ಮ ಆತ್ಮ ಸಂಬಂಧವೆಂದು ಮುಖ್ಯವಾಗಿ ತಿಳಿಯಬೇಕು.

ನಮ್ಮ ಹಿಂದಿನ ರಚನೆಗಳಲ್ಲಿ ಶಾಸ್ತ್ರಗಳೆಂದರೆ ಏನೆಂದು ಬಹಳ ಸಲ ತಿಳಿಸಿದ್ದೇವೆ. ಶಾಸ್ತ್ರಗಳು ಆರು, ಅವುಗಳ ಆಧಾರದ ಮೇಲೆಯೆ ಪ್ರಪಂಚವೆಲ್ಲಾ ಆಧಾರಪಟ್ಟಿದೆ. ಶಾಸ್ತ್ರಗಳೆಂದರೇ ಪಂಚ ಭೂತಗಳಿಂದ ಪರಮಾತ್ಮ ವರೆಗೂ ವ್ಯಾಪಿಸಿ ಇರುವ ಶಾಸನಗಳು. ಚರಿತ್ರೆಗಳು ಬೇರೆ, ಶಾಸ್ತ್ರಗಳು ಬೇರೆಂದು ಗ್ರಹಿಸಬೇಕು. ಉದಾಹರಣೆಗೆ ಗಣಿತ ಶಾಸ್ತ್ರವಿದೆ. ಅದು ಪ್ರಪಂಚವಿರುವವರೆಗು 4X5=20 ಎನ್ನುವ ಶಾಸನವನ್ನು ತಿಳಿಸುತ್ತಿದೆ. ಆದರೆ ಅದು ಬದಲಾಗುವುದು ಅಲ್ಲ. ಅದು ಯಾವ ಚರಿತ್ರೆಗೂ ಸಂಬಂಧವಿರುವುದಿಲ್ಲ. ಹಾಗೇ ಖಗೋಳ ಶಾಸ್ತ್ರವಿದೆ ಸೂರ್ಯ ಗೋಳದಿಂದ ಕಾಂತಿ ಕಿರಣಗಳ ಪ್ರಯಾಣ 1 ಸೆಕೆಂಡಿಗೆ 1,86,000 ಮೈಲು ಎನ್ನುವುದು ಶಾಸನ. ಅದು ಚರಿತ್ರೆ ಅಲ್ಲ, ಪ್ರಪಂಚವಿರುವ ವರೆಗೂ ಚರಿತ್ರೆಗಳಲ್ಲಿ ಎಲ್ಲಾದರೂ ಶಾಸ್ತ್ರ ಪ್ರಸ್ತಾವನೆ ಬಂದಿರಬಹುದು ಆದರೆ ಎಲ್ಲಾ ಶಾಸ್ತ್ರಹೇಗೆ ಆಗುತ್ತದೆ. ಭಾರತ ಚರಿತ್ರೆಯಲ್ಲಿ ಪ್ರಸ್ತಾವನೆಗೆ ಬಂದಿರುವ ಗೀತೆ ಜೀವಾತ್ಮ ಆತ್ಮಗಳ ಮಧ್ಯೆ ಇರುವ ಶಾಸನಗಳು, ಆದ್ದರಿಂದ ವ್ಯಾಸನು ಸಹ ಗೀತೆಯನ್ನು ಯೋಗ ಶಾಸ್ತ್ರೇ

ಎಂದಿದ್ದಾನೆ. ಆದರೆ ಗೀತೆಯಲ್ಲಿಯೂ ಸಹ ಮಧ್ಯದಲ್ಲಿ ಕಲ್ಪಿಸಲಾದ ವಿಷಯಗಳಿವೆ. ಅವು ಶಾಸನಗಳಲ್ಲವೆಂದು ಸೂತ್ರದ ಪ್ರಕಾರ ಸುಲಭವಾಗಿ ತಿಳಿಯುತ್ತದೆ.

ಗಣಿತಶಾಸ್ತ್ರ 4X5=20 ಖಂಡಿಸಲಾರದ ಪದ್ಧತಿ ಎನ್ನುವ ಹಾಗೆ ಯೋಗ ಶಾಸ್ತ್ರದಲ್ಲಿಯೂ ಸಹ ಹಾಗೇ ಇರುತ್ತದೆ. ವಾಸ್ತವಕ್ಕೆ ಶಾಸ್ತ್ರವೆಂದರೆ ಖಂಡಿಸಲ್ಪಡದಿರುವುದು ನಿರೂಪಣೆಗೆ ಬರುವುದೆಂದು ತಿಳಿಯಬೇಕು. ಯಾವುದಾದರೇ ಖಂಡಿಸಲಾಗುತ್ತದೋ ಅದು ಶಾಸ್ತ್ರವಲ್ಲ. ಉದಾಹರಣೆಗೆ 2X9=16 ಎಂದು ಗಣಿತ ಶಾಸ್ತ್ರದಲ್ಲಿ ಇದೆ ಎಂದುಕೊಳ್ಳಿ. ಅದು ತಪ್ಪು ನಿರೂಪಣೆಗೆ ಹೇಗೆ ಎಣಿಸಿದರೂ ಬರುವುದಿಲ್ಲ. ಖಂಡಸಲಾಗುತ್ತಿದೆ ಆದ್ದರಿಂದ ಅದನ್ನು ಗಣಿತ ಶಾಸ್ತ್ರವೆನ್ನುವುದಿಲ್ಲ. ಹಾಗೇ ಯೋಗಶಾಸ್ತ್ರ ದಲ್ಲಿಯೂ ಸಹ ಎಲ್ಲಾದರೂ ತಪ್ಪುಗಳಿದ್ದರೇ ಕೂಡಲೇ ತಿಳಿಯುತ್ತದೆ. ನಿರೂಪಣೆಗೆ ಬಾರದಿದ್ದವು ಖಂಡಿಸಲ್ಪಡುವವು ಶಾಸ್ತ್ರವೇ ಅಲ್ಲವೆನ್ನುವ ಸೂಚನೆ ಎಲ್ಲಾ ಶಾಸ್ತ್ರಗಳಿಗೆ ಅನ್ವಯಿಸುತ್ತದೆ.

ಗ್ರಂಥಗಳೆಲ್ಲವನ್ನು ಶಾಸ್ತ್ರಗಳೆಂದುಕೊಂಡರೆ ಮಾತ್ರೆಗಳೆಲ್ಲವೂ ಮನುಷ್ಯ ನುಂಗುವಂತವೇ ತಾನೆ ಎನ್ನುವಂತಿರುತ್ತದೆ. ಬೇದಿಗೆ ಬರುವುದು ಯಾವುದೊ, ಬೇದಿನಿಲ್ಲುವುದ್ಯಾವುದೋ ತಿಳಿಯಬೇಕು ಅಲ್ಲವೆ! ಎಲ್ಲಾ ಔಷಧಿಗಳೇ ಅಲ್ಲವೆ! ವೈದ್ಯನೇ ತಾನೆ ತಯಾರಿಸಿದ್ದೆಂದು ತಿಳಿದುಕೊಂಡರೆ ಅತಿಸಾರ ರೋಗವಿರುವಾಗ ಬೇದಿ ನಿಲ್ಲುವ ಮಾತ್ರೆಯನ್ನು ಹಾಕಿಕೊಳ್ಳದೆ ಬರುವದನ್ನು ಹಾಕಿಕೊಂಡರೆ ಮತ್ತೇ ನೋವನ್ನು ಪಡಬೇಕಾಗುತ್ತದೆ. ಹಾಗೇ ಗ್ರಂಥಗಳಲ್ಲಿ ಪ್ರಪಂಚದ ಕಡೆ ಹೋಗುವವು ಸ್ವಲ್ಪ, ಪರಮಾತ್ಮ ಕಡೆ ಹೋಗುವವು ಸ್ವಲ್ಪ ಇವೆ. ಎಲ್ಲಾ ಶಾಸ್ತ್ರಗಳೇ ಅಲ್ಲವೆ ಎಂದು ಎಲ್ಲವನ್ನು ತಯಾರುಮಾಡಿದವನು ವ್ಯಾಸನೇ ಎಂದು ತಿಳಿದುಕೊಂಡರೆ ಹೇಗೆ?

ಯಾವುದೇನಾದರೂ ವಯಸ್ಸು ಕಳೆದವರಿಗೆ ಮುಂಚೆ ಕೇಳಿರುವುದೆಲ್ಲಾ ಒಂದು, ಈದಿನ ನಾವು ಹೇಳುವುದು ಒಂದಾದರೇ ಗೊಂದಲ ಏರ್ಪಟ್ಟು ನಂಬದೇ ಇದ್ದಾರೆ. ನಮ್ಮ ಬೋಧನೆಗಳನ್ನು ಯುವಕರೇ ಹೆಚ್ಚಾಗಿ ಅರ್ಥ ಮಾಡಿಕೊಳ್ಳುತ್ತಿದ್ದಾರೆ. ಮತ್ತು ವಿಮರ್ಶನಾ ದೃಷ್ಟಿ ಇರುವ ಪ್ರತಿಯೊಬ್ಬರೂ ಅರ್ಥ ಮಾಡಿಕೊಳ್ಳುತ್ತಿದ್ದಾರೆ. ವಿಮರ್ಶ ನಾತ್ಮಕವಾಗಿ ನೋಡದವರು, ಹಿಂದಿನ ಚರಿತ್ರೆಗಳಲ್ಲಿ ಕವಿಗಳು ಬಳಿದ ಬಣ್ಣಗಳೆಲ್ಲವೂ ನಿಜವೆಂದುಕೊಂಡವರು ನಮ್ಮ ಬೋಧನೆಗಳಿಂದ ಬಹಳ ಕಷ್ಟಬೀಳುತ್ತಿದ್ದಾರೆ.

ಉದಾಹರಣೆಗೆ ರೈಲು ಪ್ರಯಾಣದಲ್ಲಿ ಪುರಾಣಗಳ ಪೂರ್ಣಯ್ಯನ ಜೊತೆ ನಮ್ಮ ಶಿಷ್ಯನು ಮಾತಾಡುವುದು ನಡೆದಿದೆ. ರಾಮಾಯಣ ಸ್ವಲ್ಪ ನಿಜ ಸ್ವಲ್ಪ ಕಲ್ಪಿತ

ಎಂದು ನಮ್ಮ ಶಿಷ್ಯನಂದಾಗ ಪೂರ್ಣಯ್ಯ ಅವರು ಹಾಗಲ್ಲ ಎಲ್ಲಾ ನಿಜವೇ ಎಂದು ಮೀಸೆ ತಿರುವಿ ಹೇಳಿದನಂತೆ. ಅದಕ್ಕೆ ನಮ್ಮ ಭಕ್ತ ಶಾಂತಿಯಿಂದ "ರಾಮಾಯಣದಲ್ಲಿ ಆಂಜನೇಯನು ಸೀತೆಗೋಸ್ಕರ ಲಂಕೆಗೆ ಹಾರುವಾಗ ಆತನ ಹಣೆಯಿಂದ ಬೆವರು ಸಮುದ್ರದಲ್ಲಿ ಬಿತ್ತಂತೆ, ಆ ಬೆವರು ನೀರಲ್ಲಿ ಬೀಳುವ ಮುನ್ನವೇ ಒಂದು ಮೀನು ನುಂಗಿತಂತೆ, ಆ ಮೀನು ಬೆವರಿನಿಂದ ಗರ್ಭವನ್ನು ಧರಿಸಿ ಮಚ್ಛವಲ್ಲಭನೆನ್ನುವ ಕುಮಾರನನ್ನು ಪ್ರಸವಿಸಿತಂತೆ, ಆ ವಲ್ಲಭನು ಪಾತಾಳದಲ್ಲಿ ಮೈರಾವಣನ ದ್ವಾರಪಾಲಕನಾಗಿ ಇದ್ದರೇ, ತಂದೆಯಾದ ಆಂಜನೇಯನು ಹೋಗಿ ಆತನ ಕೈಯ್ಯಲ್ಲಿ ಸೋತುಹೋದನೆಂದು ಇದೆ. ಆಂಜನೇಯನು ಸೀತೆಯನ್ನು ಹುಡುಕುವುದಕ್ಕೆ ಹೋದಾಗಿನಿಂದ ಪಾತಾಳಕ್ಕೆ ಹೋಗುವವರೆಗು ತಿಂಗಳು ಸಹ ಸಮಯವಿಲ್ಲವೇ! ಅಷ್ಟರಲ್ಲೇ ಮೀನಿಗೆ ಗರ್ಭನಿಲ್ಲುವುದು 18 ವರ್ಷಗಳ ದ್ವಾರಪಾಲಕನು ಆಗುವುದು ಇಷ್ಟು ಹೇಗೆ ನಡೆಯುತ್ತದೆ? ಬೆವರಿಗೆ ಮಕ್ಕಳು ಹುಟ್ಟುವರಾ? ಬಾಯಿಂದ ನುಂಗಿದರೇ ಗರ್ಭಹೇಗೆ ನಿಂತಿದೆ." ದಯಮಾಡಿ ಹೇಳಿ ಎಂದನಂತೆ. ಅದಕ್ಕೆ ಪೂರ್ಣಯ್ಯ 'ರಾಮಾಯಣದಲ್ಲಿ ಇದೆ ಅಲ್ಲಯ್ಯಾ, ನಡೆಯದೆ ಅವರು ಏಕೆ ಬರೆಯುತ್ತಾರೆ ಅವರು ಹುಚ್ಚರಾ" ಎಂದು ಹೇಳಿದನಂತೆ. ಈ ವಿಷಯ ಹೇಗಿದೆ ಎಂದರೆ ಮೊಲಕ್ಕೆ ಮೂರೇ ಕಾಲು ಇವೆ ಎಂದು ಹೇಳಿದನಂತೆ ಒಬ್ಬನು, ಅಲ್ಲಯ್ಯ ಮೊಲಕ್ಕೆ ನಾಲ್ಕು ಕಾಲು ಇರುತ್ತವೆಂದು ಇನ್ನೊಬ್ಬನೆಂದರೆ, ನೋಡಯ್ಯ ನನ್ನ ಹತ್ತಿರ ಇರುವ ಮೊಲ ಎಂದು ಮೂರುಕಾಲಿರುವುದನ್ನು ತೋರಿಸಿದನಂತೆ. ನೋಡಿದ ಎರಡನೆಯವನು ಇದು ಮೂರುಕಾಲಿನದೇ ನಾನು ಇಲ್ಲವೆನ್ನುತ್ತಿಲ್ಲ. ಇದಕ್ಕೆ ಒಂದುಕಾಲು ಹುಟ್ಟಿದಾಗಲೇ ಇಲ್ಲ. ಇದಕ್ಕೆ ಲೋಪವಿದೆ ಇದು ಕುಂಟದ್ದು, ಸಹಜವಾಗಿ ಮೊಲಕ್ಕೆ ನಾಲ್ಕು ಕಾಲೇ ಇರುತ್ತವೆಂದು ಹೇಳಿದರೂ ನಂಬಲಿಲ್ಲವಂತೆ ಮೊದಲನೆಯವನು.

ಜನ್ಮ ಹೇಗೆ ಬಂದಿದೆ ಎನ್ನುವುದು ಬೇಡ, ಜನ್ಮ ಏಕೆ ಬಂದಿದೆ ತಿಳಿಸೆಂದಿದ್ದಾರೆ. ನಾವು ಬಹಳ ಸಲ ತಿಳಿಸಿದ್ದೇವೆ. ಗತ ಜನ್ಮಗಳಲ್ಲಿ ಮಾಡಿಕೊಂಡಿರುವ ಕರ್ಮದ ಪ್ರಕಾರ ಜನ್ಮ ಉಂಟಾಗುತ್ತದೆಂದು, ಕರ್ಮವನ್ನು ಸುಡುವ ಜ್ಞಾನಾಗ್ನಿ ಇಲ್ಲದ ವರೆಗೂ ಜನ್ಮಗಳು ಬರುತ್ತಲೇ ಇರುತ್ತವೆ.

**ಡಿ. ಶ್ರೀಧರ್ ನಾಯುಡು, ಪುಟ್ಟಪರ್ತಿ**

**213. ದೇವರಿದ್ದಾನಾ? ಇದ್ದರೆ ಎಲ್ಲಿ?**

ಉ. ದೇವರಿದ್ದಾನೆ. ನಮ್ಮ ಶರೀರದಲ್ಲೇ. ನಿನಗೆ ಬಹಳ ಹತ್ತಿರದಲ್ಲಿ ನೋಡಬೇಕೆಂದು ಕೊಂಡರೇ ಜ್ಞಾನನೇತ್ರದಿಂದ ನೋಡಬಹುದು.

**214. ದೇವರಿದ್ದಾನೆಂದು ಖಚಿತವಾಗಿ ಹೇಗೆ ಹೇಳುತ್ತಿದ್ದೀರಾ?**

ಉ. ದೇವರೆನ್ನುವವನು ಒಂದು ಗುಡಿಯಲ್ಲಿನ ಪ್ರತಿಮೆ ಅಲ್ಲ. ನಮ್ಮ ಶರೀರದಲ್ಲಿರುವ ಚೈತನ್ಯ ಶಕ್ತಿಯೇ ದೇವರು. ಆ ಚೈತನ್ಯ ನಮ್ಮ ಶರೀರದಲ್ಲಿ ನಿತ್ಯವೂ ಉಪಯೋಗವಾಗುತ್ತಿದೆ. ಆದ್ದರಿಂದ ದೇವರಿದ್ದಾನೆನ್ನುವುದಕ್ಕೆ ಖಚಿತವಾದ ನಿದರ್ಶನವಿದೇ. ಶರೀರದಲ್ಲಿ ದೇವರು ಇಲ್ಲದೆ ನಾವು ಕದಲುವುದಕ್ಕೆ ಸಾಧ್ಯವಿಲ್ಲ.

**215. ದೇವರಿದ್ದರೆ ನೀವು ನೋಡಿದ್ದೀರಾ?**

ಉ. ದೇವರು ಯಾರ ಅವಯವಗಳಿಗೂ ತಿಳಿಯುವನು ಅಲ್ಲ. ನಿಮ್ಮಲ್ಲಿರುವ ಚಲನೆಗೆ ಕಾರಣವಾದ ಶಕ್ತಿಯನ್ನು ನೀವು ನೋಡಿದ್ದೀರಾ ಇಲ್ಲ ಅಲ್ಲವೆ! ದೇವರೆನ್ನುವ ಆ ಶಕ್ತಿ ಇಂದ್ರಿಯ ಅಗೋಚರವಾದದ್ದು. ದೇವರಿಗೆ ಆಕಾರ, ಹೆಸರು ಎರಡು ಇಲ್ಲ ಆದ್ದರಿಂದ ದೇವರನ್ನು ನೋಡಿದ್ದೇನೆಂದು ಯಾರಾದರೂ ಅಂದರೂ ಅದು ಬಹಳ ಸುಳ್ಳು. ದೇವರು ಜ್ಞಾನದೃಷ್ಟಿಗೆ ಮಾತ್ರ ತಿಳಿಯುವವನು. ಆದ್ದರಿಂದ ದೇವರೆಂದರೇ ಏನೆನ್ನುವುದು ನನ್ನ ಜ್ಞಾನಕ್ಕೆ ಮಾತ್ರ ತಿಳಿದಿದೆ ಆದರೆ ನನ್ನ ಕಣ್ಣಿಗೆ ತಿಳಿಯದು. ನನ್ನ ಕಣ್ಣಿನಿಂದ ನೋಡಿಲ್ಲ.

**ಡಿ. ಹನುಮಂತ ರೆಡ್ಡಿ, ವೆಂಕಟಾಪುರ**

**216. ಲೋಕದಲ್ಲಿ ಪ್ರಜೆಗಳು ಹೆಂಗಸರಿಗೆ ಐದೋತನ (ಮುತ್ತೈದೆತನ) ಮುಖ್ಯವೆಂದಿದ್ದಾರೆ ಮುತ್ತೈದೆತನ ಎಂದರೇನು? ಅದು ಇಲ್ಲದಿದ್ದರೆ ಹೆಂಗಸರು ಹೆಂಗಸರಾಗಿರುವುದಿಲ್ಲವಾ?**

ಉ. ಸ್ತ್ರೀಗೆ ತಾಳಿ ಇರುವುದನ್ನು ಮುತ್ತೈದೆತನ ಹೊಂದಿರುವುದೆಂದು ಹೇಳುತ್ತಾರೆ. ಗಂಡ ಇರುವಾಗ ಮುತ್ತೈದೆತನ ಇದೆಯೆಂದು ಇಲ್ಲದಿದ್ದಾಗ ಇಲ್ಲವೆಂದು ಹೇಳುತ್ತಾರೆ. ಗಂಡ ಇರುವಾಗ ಸ್ತ್ರೀ ಆಗಿರುವವರು ಗಂಡ ಇಲ್ಲದಾಗ ಸ್ತ್ರೀ ಆಗದೇ ಹೋಗುತ್ತಾರಾ? ಮುತ್ತೈದೆತನ ಇದ್ದರೂ ಹೆಂಗಸರೇ, ಇಲ್ಲದಿದ್ದರೂ ಹೆಂಗಸರೇ. ಮುತ್ತೈದೆತನ ಇದ್ದವರಿಗೆ ಒಂದು ವಿಧವಾಗಿ, ಇಲ್ಲದವರಿಗೆ ಒಂದು ವಿಧವಾಗಿ ನೋಡಿಕೊಳ್ಳುವ ದುರಭ್ಯಾಸ ನಾವು ಕಲ್ಪಿಸಿಕೊಂಡಿರುವುದೇ ಆದರೆ ದೇವರು ಇಟ್ಟಿರುವುದಲ್ಲ. ಇದು ಪ್ರಾಪಂಚಿಕ ವಿಷಯ, ಇನ್ನು ಆಧ್ಯಾತ್ಮಿಕವಾಗಿ ನಿಜವಾದ ಅರ್ಥದ ಪ್ರಕಾರ ಮುತ್ತೈದೆತನವನ್ನು ಸ್ತ್ರೀ ತನವನ್ನು ವಿವರಿಸಿಕೊಳ್ಳೋಣ.

ಜಗದ್ಭರ್ತ ಎಂದರೆ ಜಗತ್ತಿಗೆಲ್ಲ ಅಧಿಪತಿ ಎಂದರ್ಥ. ಜ ಎಂದರೆ ಹುಟ್ಟುವುದು ಗತಿ ಎಂದರೆ ಗತಿಸುವುದೆಂದು ಬಹಳ ಜನಕ್ಕೆ ತಿಳಿದಿದೆ. ಹುಟ್ಟುವುದನ್ನು ಗಿಟ್ಟುವುದನ್ನು ಅನುಸರಿಸಿ ಜಗತಿ ಎಂದು ಹೆಸರು ಇಟ್ಟು ಹುಟ್ಟುವ ಗಿಟ್ಟುವ ಮಾನವರಿಗೆ ಮತ್ತು ಸಮಸ್ತ ಜೀವರಾಶಿಗಳಿಗೆ ಪತಿ ಒಬ್ಬನಿದ್ದಾನೆ. ಅವನನ್ನೇ ಜಗದ್ಭರ್ತ ಎನ್ನುತ್ತಿದ್ದೇವೆ. ಜಗತ್ತಿಗೆಲ್ಲಾ ಪತಿಯಾದವನು ಪರಮಾತ್ಮ ಒಬ್ಬನೇ. ಪ್ರಪಂಚದಲ್ಲಿ ತಾಳಿ ಕಟ್ಟಿದವನು ಗಂಡನಾದರೆ ಜ್ಞಾನಪರವಾಗಿ ಜನ್ಮ ಕೊಟ್ಟಿರುವ ಪರಮಾತ್ಮಯೇ ಗಂಡ ಎಂದು ತಿಳಿಯಬೇಕು. ನಾವಂದುಕೊಂಡರೂ ಅಂದುಕೊಳ್ಳದಿದ್ದರೂ ಎಲ್ಲರಿಗೂ ಗಂಡ ಆ ಪುರುಷೋತ್ತಮನೇ. ಸ್ತ್ರೀಗೆ ಮುತ್ತೈದೆತನ ತಾಳಿ ಕಟ್ಟಿರುವ ಗಂಡನಾದರೆ, ಸ್ತ್ರೀ ಪುರುಷರಿಗೆ ಎಲ್ಲರಿಗೂ ಮುತ್ತೈದೆತನ ಜಗದ್ಭರ್ತನಾದ ಪರಮಾತ್ಮ. ಪರಮಾತ್ಮ ಗಂಡನಾದರೆ ನಾವೆಲ್ಲರೂ ಒಂದು ವಿಧವಾಗಿ ಹೆಂಗಸರೇ ಅನ್ನೊ ಮಾತು. ಹೆಂಗಸರೆನ್ನುವ ಹೆಸರು ಹೇಗೆ ಬಂದಿದೆಯೊ ಸ್ವಲ್ಪ ಆಲೋಚನೆ ಮಾಡೋಣ.

ಹಿಂದೀ, ಉರ್ದೂ ಮತ್ತು ಬಹಳ ಭಾಷೆಗಳಲ್ಲಿ ಆಡ (ಸ್ತ್ರೀ) ಎಂದರೆ ಅಡ್ಡ ಎಂದು ಅರ್ಥ. ಪೂರ್ವದಲ್ಲಿ ತೆಲುಗು ಭಾಷೆಯಲ್ಲಿ ಸಹ ಅಡ್ಡ ಇರುವುದನ್ನು ಆಡ ಎನ್ನುವವರು ಈಗದು ಕಾಲ ಕ್ರಮವಾಗಿ ಅಡ್ಡವಾಗಿ ಬದಲಾಗಿದೆ. ಆಡ ಆಗಲಿ ಅಡ್ಡವಾಗಲಿ ಯಾವುದಕ್ಕೆಂದು ಯೊಚಿಸಿದರೇ ಜ್ಯೋತಿಷ್ಯಶಾಸ್ತ್ರದಲ್ಲಿ 1ನೇ ಸ್ಥಾನಾಧಿಪತಿಗೆ 7ನೇ ಸ್ಥಾನಾಧಿಪತಿ ಎಂದಿಗೂ ವಿರುದ್ಧವಾಗಿರುವಂತೆ ಯೋಗ ಶಾಸ್ತ್ರದಲ್ಲಿ ಪರಮಾತ್ಮನಿಗೆ ಪ್ರಕೃತಿ (ಮಾಯ) ಎನ್ನುವುದು ಯಾವಾಗಲೂ ವಿರುದ್ದವಾಗಿಯೇ ಇದೆ. ಜಗತಿಯಲ್ಲಿ ಪರಮಾತ್ಮ ಪಕ್ಷ, ಪ್ರಕೃತಿ ಪಕ್ಷ ಎನ್ನುವ ಎರಡು ಪಕ್ಷಗಳಲ್ಲಿ ನಾವು ಯಾವಾಗಲೂ ಪ್ರಕೃತಿ ಪಕ್ಷದಲ್ಲೇ ಇದ್ದೇವೆ. ಯೋಗ ಶಾಸ್ತ್ರ ರೀತ್ಯಾ ಪರಮಾತ್ಮನಿಗೆ ಪ್ರಕೃತಿ ವಿರುದ್ದವಿರುವಹಾಗೆ ಪ್ರಕೃತಿ ಪಕ್ಷವಾದ ನಾವು ಪರಮಾತ್ಮನಿಗೆ ವಿರುದ್ಧ ದಿಕ್ಕಿನಲ್ಲೇ ನಡೆಯುತ್ತಿದ್ದೇವೆ. ನಮ್ಮಲ್ಲಿ ಯಾರಾದರೂ ಪರಮಾತ್ಮ ಕಡೆಗೆ ಪ್ರಯಾಣಿಸಬೇಕೆಂದು ಪ್ರಯತ್ನವನ್ನು ಮಾಡಿದರೇ ಎಲ್ಲರೂ ಅವನಿಗೆ ವಿರುದ್ಧವನ್ನು ತಿಳಿಸುವುದು ನಿಜವೆ. ಒಂದು ಮನೆಯಲ್ಲಿ ಗಂಡ ದೇವರಕಡೆ ಹೋಗಬೇಕೆಂದುಕೊಂಡಾಗ ಹೆಂಡತಿ ಇನ್ನು ಉಳಿದವರು ಆತಂಕ ಮಾಡುವುದು, ಒಂದು ವೇಳೆ ಹೆಂಡತಿ ದೇವರ ಕಡೆ ಪ್ರಯಾಣಿಸಬೇಕೆಂದುಕೊಂಡಾಗ ಗಂಡ ಆತಂಕಮಾಡುವುದು ನಡೆಯುತ್ತಿರುವ ಸತ್ಯ. ಸ್ತ್ರೀಯರು ಪುರುಷರು ಎಲ್ಲರೂ ಪ್ರಕೃತಿ ಪಕ್ಷದಲ್ಲಿ ಇರುವುದರಿಂದ ಪರಮಾತ್ಮಕಡೆ ಹೋಗಬೇಕೆಂದುಕೊಂಡವನಿಗೆ ಇತರರು ಅಡ್ಡಪಡಿಸುವುದು ಸಹಜವೆಂದೆ ತಿಳಿದಿದ್ದೇವೆ ಅಲ್ಲವೆ! ಆದ್ದರಿಂದ ಆತಂಕ ಪಡಿಸುವ

ವರೆಲ್ಲರನ್ನು ಪೂರ್ವದಲ್ಲಿ ಅಡ್ಡಿ (ಹೆಂಗಸರು) ಪಡಿಸುವವರೆಂದು ಹೇಳುವುದು ನಡೆದಿದೆ. ಈ ಕಾಲದಲ್ಲಿ ಹೆಂಗಸರೆಂದರೇ ಕೇವಲ ಸ್ತ್ರೀಯರೆಂದೇ ತಿಳಿದುಕೊಳ್ಳುವುದು ನಡೆಯುತ್ತಿದೆ. ಅದು ತಪ್ಪು ಹೆಂಗಸರು ಎಂದರೇ ಪ್ರಕೃತಿ ಕಡೆಯವರೆಂದು ಅರ್ಥ ಮಾಡಿಕೊಳ್ಳಬೇಕು. ಪರಮಾತ್ಮ ಪುರುಷನು, ಪ್ರಕೃತಿ ಸ್ತ್ರೀ ಎಂದು ಭಗವದ್ಗೀತೆ ಗುಣತ್ರಯ ವಿಭಾಗಯೋಗದಲ್ಲಿ ಸಹ ಹೇಳಲಾಗಿದೆ. ಪ್ರಕೃತಿ ಕಡೆ ಆಡ (ಹೆಂಗಸು) ಎನ್ನುವ ಪದಕ್ಕೆ ಸ್ತ್ರೀ ಎನ್ನುವ ಅರ್ಥವಿದೆ. ಇದನ್ನನುಸರಿಸಿ ಕೇವಲ ಭೌತಿಕ ಸ್ತ್ರೀಯರೇ ಹೆಂಗಸರೆಂದು, ಭೌತಿಕ ಪುರುಷಾಕಾರಗಳನ್ನು ಪುರುಷರೆಂದುಕೊಳ್ಳುವುದು ತಪ್ಪು. ಹಾಗಂದುಕೊಳ್ಳದೇ ಪ್ರಕೃತಿ ಕಡೆ ಇರುವ ಸ್ತ್ರೀ ಪುರುಷರೆಲ್ಲರಿಗೂ ಹೆಂಗಸರೆನ್ನುವ ಹೆಸರು ಅನ್ವಯಿಸುತ್ತದೆಂದು ತಿಳಿಯಬೇಕು.

ಸ್ತ್ರೀ ಪುರುಷರೆಲ್ಲರನ್ನು ಹೆಂಗಸರೆಂದುಕೊಳ್ಳುವುದೇನು ಪ್ರತ್ಯಕ್ಷವಾಗಿ ನಾನು ಪುರುಷನಾಗಿ ಕಾಣಿಸುತ್ತಿದ್ದರೆ ಸ್ತ್ರೀಯಾಗಿ ಹೇಗೆ ಹೋಲಿಸಿಕೊಳ್ಳಬೇಕೆಂದು ಕೆಲವು ಗಂಡಸರಿಗೆ ಸ್ವಲ್ಪ ನೋವಾಗಿರಬಹುದು. ಅದಕ್ಕೆ ಸಮಾಧಾನವೇನೆಂದರೇ! ವಾಸ್ತವವಾಗಿ ನೀನು ಶರೀರವಲ್ಲ. ನೀನು ಕೇವಲ ಜೀವಾತ್ಮನೇ. ನೀನು ನಿವಾಸಿಸುವ ಶರೀರವನ್ನನುಸರಿಸಿ ನಾನು ಪುರುಷನು, ನಾನು ಸ್ತ್ರೀ ಎಂದು ತಿಳಿದುಕೊಳ್ಳುವುದು ನಡೆಯುತ್ತಿದೆ. ಶರೀರವನ್ನನು ಸರಿಸಿ ಪ್ರಪಂಚಪರವಾಗಿ ಸಮಾಜದಲ್ಲಿ ಸ್ತ್ರೀ ಪುರುಷರೆಂದುಕೊಳ್ಳಬಹುದು. ಆದರೆ ಆಧ್ಯಾತ್ಮಿಕ ರೀತ್ಯಾ ಮೇಲಿನ ಲೆಕ್ಕ ಕೆಲಸಕ್ಕೆ ಬಾರದು. ಹಾಗಾದರೆ ಶರೀರ ಭೇದಗಳು ಏಕಿವೆ ಎಂದು ಕೆಲವರಿಗೆ ಪ್ರಶ್ನೆ ಬರಬಹುದು ಅದಕ್ಕೆ ಸಮಾಧಾನವೇನೆಂದರೇ! ಪರಮಾತ್ಮ ಸೃಷ್ಠಿ ಆದಿಯಲ್ಲಿ ಪ್ರಕೃತಿಯನ್ನು ತಯಾರು ಮಾಡಿ ತನಗೆ ಸಾಟಿಯಾಗಿ ಇಟ್ಟುಕೊಂಡಿದ್ದಾನೆ. ಪ್ರಕೃತಿಯಿಂದಲೇ ಸಮಸ್ತವನ್ನು ಸೃಷ್ಠಿಸಿದ್ದಾನೆ. ಪರಮಾತ್ಮ ತನ್ನನ್ನು ಪುರುಷನಾಗಿ, ಪ್ರಕೃತಿಯನ್ನು ಸ್ತ್ರೀಯಾಗಿ ಹೇಳುತ್ತಾ ನನ್ನಿಂದ ಪ್ರಕೃತಿಯಿಂದ ಸಮಸ್ತವು ಸೃಷ್ಠಿಸಲಾಗಿದೆ ಎಂದು ಹೇಳಿದ್ದಾನೆ. ಸೃಷ್ಠಿಸಲಾದ ಜೀವಾತ್ಮಗಳಿಗೆ ಸ್ತ್ರೀ ಎಂದರೇ ಏನೋ ಪುರುಷನೆಂದರೇ ಏನೋ ಅರ್ಥ ಆಗುವುದಿಲ್ಲ. ಆದ್ದರಿಂದ ಪರಮಾತ್ಮ ಜೀವಿಗಳಿಗೆ ಸೃಷ್ಠಿ ವಿವರ ತಿಳಿಯುವಹಾಗೆ ಸ್ತ್ರೀ ಪುರುಷ ಶರೀರಗಳನ್ನು ತಯಾರು ಮಾಡಿ, ಪುರುಷನಿಂದ ಸ್ತ್ರೀ ಗರ್ಭವನ್ನು ಧರಿಸುತ್ತಾಳೆಂದು, ಪುರುಷನು ಬೀಜ ದಾತನೆಂದು ಅವರಿಂದಲೇ ಸೃಷ್ಠಿ ನಡೆಯುತ್ತಿದೆಂದು ತಿಳಿಯುವಹಾಗೆ ಮಾಡಿದ್ದಾನೆ. ಶರೀರಗಳು ಪ್ರಕೃತಿ ಪರಮಾತ್ಮಗಳಿಗೆ ಗುರುತುಗಳೆಂದು ತಿಳಿಯದೇ, ಆಧ್ಯಾತ್ಮಿಕದಲ್ಲಿ ಸೃಷ್ಠಿ ವಿವರವನ್ನು ಪ್ರಕೃತಿ ಪುರುಷರ ಗುರುತನ್ನು ತಿಳಿಸುವವೆಂದು ಗ್ರಹಿಸದೇ, ಶರೀರವನ್ನನುಸರಿಸಿ ನಾನು ಪುರುಷನೆಂದು ಅಂದುಕೊಳ್ಳುವುದು ತಪ್ಪು. ಕೆಲವು ಶಿಷ್ಯರು ನಮ್ಮ ಗುರು ಪುರುಷನು ಸ್ತ್ರೀಯರಿಗೆ

ಪ್ರವೇಶ, ದರ್ಶನ ಇಲ್ಲವೆಂದಾಗ ಮೀರಾಬಾಯಿ ನಕ್ಕು ನಾನಿಲ್ಲಿಯವರೆಗೂ ಒಬ್ಬನೇ ಪುರುಷನಿದ್ದಾನೆಂದುಕೊಂಡಿದ್ದೇನೆ, ನಿಮ್ಮ ಗುರು ಸಹ ಪುರುಷನಾ ಎಂದು ಕೇಳಿದಳಂತೆ. ಪರಮಾತ್ಮ ಒಬ್ಬನೇ ಪುರುಷನೆಂದು ಎಲ್ಲರೂ ಸ್ತ್ರೀಯರೇ ಎಂದುಕೊಂಡ ಮೀರಾಬಾಯಿಗೆ ಶಿಷ್ಯರು ನಮ್ಮ ಗುರು ಪುರುಷನೆಂದ ಕೂಡಲೇ ನಕ್ಕು ಆಶ್ಚರ್ಯದಿಂದ ಇಲ್ಲಿ ಮತ್ತೊಬ್ಬ ಪುರುಷನಿದ್ದಾನಾ ಎಂದು ಕೇಳಿದಳಂತೆ. ಆಕೆಯ ಮಾತು ಕೇಳಿದ ಗುರು ಹೊರಗೆ ಬಂದು ನಾನು ಪುರುಷನಲ್ಲ, ಜಗತ್ತಿನಲ್ಲಿ ಎಲ್ಲರೂ ಸ್ತ್ರೀಯರೇ ಎಂದು ಒಪ್ಪಿಕೊಂಡನಂತೆ.

ಪರಮಾತ್ಮ ತನ್ನ ವಿಧಾನವನ್ನು ತಿಳಿಸುವ ನಿಮಿತ್ತ ಸ್ತ್ರೀ ಪುರುಷ ಶರೀರಗಳನ್ನು ತಯಾರು ಮಾಡಿದ್ದಾನೆಂದು, ವಾಸ್ತವವಾಗಿ ನಾವು ಸ್ತ್ರೀಯರೆ ಎಂದು ಸ್ತ್ರೀತನ ಪ್ರಕೃತಿದೇ ಯೆಂದು, ಪ್ರಕೃತಿ ಕಡೆ ಯಿಂದ ಪರಮಾತ್ಮಕಡೆ ನಾವು ಪ್ರಯಾಣಿಸಬೇಕೆಂದು, ಹಾಗೆ ಪ್ರಯಾಣಿಸುವವರಿಗೆ ನಾವು ಅಡ್ಡಿ ಅಗಬಾರದೆಂದು ಗ್ರಹಿಸಬೇಕು. ಸಹಜವಾಗಿ ಹೊರಗಿನ ಪ್ರಪಂಚದಲ್ಲಿ ಸ್ತ್ರೀ ಶರೀರಕ್ಕೆ ಯುಕ್ತ ವಯಸ್ಸು ಬಂದಕೂಡಲೇ ಪುರುಷನ ಮೇಲೆ ಧ್ಯಾಸ ಪ್ರಾರಂಭವಾಗುತ್ತದೆ. ಆ ಸ್ತ್ರೀ ಪುರುಷನನ್ನು ಸೇರುವುದಕ್ಕೆ ಪ್ರಯತ್ನಿಸುತ್ತಾಳೆ. ಪುರುಷನನ್ನು ಸೇರಬೇಕೆಂದುಕೊಂಡ ಸ್ತ್ರೀಗೆ ಎಂತಹ ಆತಂಕಗಳು ಬಂದರೂ ಲೆಕ್ಕ ಮಾಡುವುದಿಲ್ಲ. ಎಷ್ಟು ಆತಂಕಗಳು ಎದುರಾದರೂ ಪುರುಷನ ಹತ್ತಿರ ಸೇರಬೇಕೆನ್ನುವ ಧ್ಯಾಸ ಮಾತ್ರ ಹೋಗುವುದಿಲ್ಲ. ಹಾಗೇ ನಾವೆಲ್ಲರೂ ಆಧ್ಯಾತ್ಮಿಕ ದೇಶದಲ್ಲಿ ನಾವು ಸ್ತ್ರೀಯರೆ. ಸ್ತ್ರೀಗೆ ಯುಕ್ತ ವಯಸ್ಸು ಬಂದು ಪುರುಷ ಧ್ಯಾಸ ಬಂದಹಾಗೆ ನಮ್ಮಲ್ಲಿ ಯಾರಿಗೋ ಒಬ್ಬನಿಗೆ ಜ್ಞಾನವಯಸ್ಸು ಬಂದು ಪುರುಷೋತ್ತಮನನ್ನು ಸೇರಬೇಕೆನ್ನುವ ಧ್ಯಾಸ ಬರುತ್ತಿರುತ್ತದೆ. ಅಂತವರಿಗೆ ಹೆಂಡತಿ ಬಂಧುಗಳು ಎಷ್ಟು ಜನ ಆತಂಕವಾದರೂ ಲೆಕ್ಕ ಮಾಡುವುದಿಲ್ಲ. ಒಳಗೆ ಮಾತ್ರ ತನ್ನ ಪುರುಷನನ್ನು ಸೇರುವುದಕ್ಕೆ ಶತವಿಧಗಳಲ್ಲಿ ಪಯತ್ನವನ್ನು ಮಾಡುತ್ತಿರುತ್ತಾನೆ. ಒಂದು ವೇಳೆ ನೀನು ನಿನ್ನ ಪುರುಷನನ್ನು ಸೇರಬೇಕೆಂದುಕೊಂಡಾಗ ನಿನ್ನ ಮನೆಯವರಾಗಲಿ, ನಿನ್ನ ಊರಿನವರಾಗಲಿ, ನಿನ್ನ ಹತ್ತಿರ ಬಂಧುಗಳಾಗಲಿ, ನಿನ್ನನ್ನು ಹೀಯಾಳಿಸುವುದಾಗಲಿ, ಭಯವಿಡುವುದಾಗಲಿ, ಪಂಚಾಯಿತಿ ಇಟ್ಟು ಛೀ ಎಂದು ಅನಿಸುವುದಾಗಲಿ, ಕೊನೆಗೆ ನಿನ್ನ ಹೆಂಡತಿ ನಿನಗೆ ಊಟ ಇಡದಿದ್ದರೂ ಸಹ, ಮತ್ತೇನಾದರೂ ನಡೆಯಬಹುದು. ಎಷ್ಟು ನಡೆದರೂ, ಎಷ್ಟು ಆತಂಕಗಳು ಅಡ್ಡ ಬಂದರೂ ಸ್ತ್ರೀ ಧ್ಯಾಸದೊಳಗೆ ಪುರುಷನು ಬಂದ ಮೇಲೆ ಆಕೆ ಆಕಡೆಯೇ ಪ್ರಯಾಣಿಸುವುದಕ್ಕೆ ಏನೋ ಒಂದು ದಾರಿ ಹುಡುಕಿಕೊಂಡ ಹಾಗೆ ಪರಮಾತ್ಮನ ಚಿಂತೆ ಇರುವವನಿಗೆ ಎಷ್ಟು ಆತಂಕಗಳು ಬಂದರೂ ಹಿಂಜರಿಯುವುದಿಲ್ಲ.

ಯೋಗ ಶಾಸ್ತ್ರದ ರೀತಿ ನಾವೆಲ್ಲರೂ ಪ್ರಕೃತಿ ಸ್ವಭಾವವಿರುವ ಸ್ತ್ರೀಯರೆ. ನಿನಗೂ ನನಗೂ ಎಲ್ಲರಿಗೂ ಪುರುಷನೆನ್ನುವವನು ಬೇಕು. ಪುರುಷನನ್ನು ಸೇರುವವರೆಗೂ ನಮ್ಮ ತಪನೆ ನಿಲ್ಲುವುದಿಲ್ಲ. ಅಲ್ಲಿಯವರೆಗೂ ಧನ ಧಾನ್ಯಗಳಿದ್ದರೂ ವಸ್ತು ವಾಹನಗಳಿದ್ದರೂ, ಅಧಿಕಾರ ಅಂತಸ್ತುಗಳಿದ್ದರೂ, ಎಷ್ಟಿದ್ದರೂ ಏನೋ ಲೋಪ ಎನಿಸುತ್ತದೆ. ಐದನೇತನವಾದ (ಮುತ್ತೈದೆತನ) ಭರ್ತ (ಗಂಡ) ಲಭಿಸಿದಾಗಲೇ ಪರಿಪೂರ್ಣ ತೃಪ್ತಿ ಏರ್ಪಡುತ್ತದೆ. ಜ್ಞಾನ ತಿಳಿಯದವರಿಗೆ ಈ ಮಾತುಗಳು ಬಹಳ ವಿಚಿತ್ರವಾಗಿ ತೋಚುತ್ತವೆ. ನಮಗೆ ಮದುವೆ ಆಗಿದೆ ಗಂಡ ಹೆಂಡತಿಯರಿದ್ದಾರೆ ಅಲ್ಲವೆ! ಎಂದುಕೊಳ್ಳಬಹುದು. ವಾಸ್ತವವಾಗಿ ನಿನಗೆ ಆಗಿರುವ ಮದುವೆ ಮದುವೆ ಅಲ್ಲ. ಅದು ದೈವತ್ವವನ್ನು ತಿಳಿಸುವ ತಂತು. ನೀವು ಗಂಡ ಹೆಂಡತಿ ಎಂದುಕೊಳ್ಳುವುದರಿಂದ ಗಂಡ ಹೆಂಡತಿ ಆಗುವುದಿಲ್ಲ. ಗಂಡ ಹೆಂಡತಿ ಎನ್ನುವ ಮಾತು ಪ್ರಕೃತಿ ಪರಮಾತ್ಮರನ್ನು ತಿಳಿಸುವ ವಿಧಾನ. ಭರ್ತ ಎಂದರೆ ಭರಿಸುವವನೆಂದು ಹೆಂಡತಿ ಎಂದರೆ ಭರಿಸಲ್ಪಡುವವಳೆಂದು ಅರ್ಥ. ಈ ಅರ್ಥದ ಪ್ರಕಾರ ಆಲೋಚಿಸಿದರು ನೀನು ಯಾರನ್ನು ಭರಿಸುತ್ತಿದ್ದೀಯಾ? ನಿಜಕ್ಕೆ ನಿನ್ನನ್ನು ನೀನು ಭರಿಸಿಕೊಳ್ಳಲಾರೆ. ನಿನ್ನನ್ನು ಭರಿಸುವವನು ನಿನ್ನ ಶರೀರದಲ್ಲೇ ಇದ್ದಾನೆ. ಅವನು ಭರಿಸುವವರೆಗೂ ಶರೀರದಲ್ಲಿ ನೀನಿರಬಹುದು. ಎಲ್ಲರೂ ಹಾಗೇ ಇದ್ದೇವೆ. ಎಲ್ಲರಿಗೂ ಗಂಡನಿದ್ದಾನೆ. ಅವನೇ ಎಲ್ಲರಿಗೂ ಐದನೇತನ. ಐದನೇತನ ಎನ್ನುವ ಮಾತು ಬಹಳ ಕಡೆ ಕೇಳುತ್ತಿದ್ದೇವೆ. ಐದನೆ ತನ ಎನ್ನುವುದರಲ್ಲಿ ಅರ್ಥವೇನಿದೆ? ಐದನೆತನವೆಂದು ಏಕೆನ್ನಬೇಕು ಗಂಡನನ್ನು ಮೂರನೇ ತನವೆಂದು ಅಥವಾ ನಾಲ್ಕನೆತನವೆಂದು ಏಕೆನ್ನಬಾರದೆಂದು ನಾವು ಆಲೋಚನೆ ಮಾಡಲಿಲ್ಲ. ತಿಳಿಯದವನು ಪ್ರಶ್ನೆ ಹಾಕಿದರೇ ಏನೋ ಒಂದು ಹೇಳಿ ಸರಿಮಾಡದೇ ನಿಜಾರ್ಥವೇನೋ ಆಲೋಚನೆ ಮಾಡಿ ನೋಡೋಣ.

ಒಂದು ಸಲ ನನ್ನನ್ನು ಇನ್ನೊಬ್ಬರು ನೀನೇನು ಓದುಕೊಂಡಿದ್ದೀಯ ಎಂದು ಪ್ರಶ್ನಿಸಿದರು. ಆಗ ನಾನು ಎರಡು ವಿಧವಾಗಿ ಉತ್ತರವನ್ನು ಕೊಟ್ಟಿದ್ದೇನೆ. ಪ್ರಪಂಚ ಪರವಾಗಿ ಆದರೆ ಹನ್ನೊಂದು ಓದಿದ್ದೇನೆ. ಪರಮಾತ್ಮ ಪರವಾಗಿ ಆದರೆ ನಾಲ್ಕು ಓದುತ್ತಿದ್ದೇನೆ ಐದಕ್ಕೆ ಹೋಗಬೇಕೆಂದಿದ್ದೇನೆ. ಈ ಎರಡನೆ ಉತ್ತರವನ್ನು ವಿಫಲವಾಗಿ ಹೇಳಬೇಕೆಂದರೇ ಈ ವಿಧವಾಗಿದೆ. ನಮ್ಮ ಶರೀರದಲ್ಲಿ ಕ್ರಮವಾಗಿ ಮೂರು ಗುಣ ಭಾಗಗಳಿವೆ. ನಾಲ್ಕನೆಯದು ಗುಣವಿಲ್ಲದ ಭಾಗವೂ ಸಹ ಇದೆ. ಮನುಷ್ಯನಿಗೆ ಇವು ತರಗತಿಗಳಿದ್ದಹಾಗೆ. ಜ್ಞಾನದಲ್ಲಿ ಮೂರುಗುಣಗಳನ್ನು ಅತಿಕ್ರಮಿಸಿದವನು, ಮೂರುಗುಣಗಳನ್ನು ಜಯಿಸಿದವನು, ಮೂರು ಗುಣಗಳ ಕರ್ಮ ಅಂಟದವನು ತ್ರಿಗುಣಾತೀತನನ್ನುವ ಮಾತು. ಅಂದರೇ ಮೂರು ತರಗತಿಗಳನ್ನು ದಾಟಿದವನೆಂದು ಅರ್ಥ. ಆ ಮೂರು

ತರಗತಿಗಳೇ ತಾಮಸ ರಾಜಸ, ಸಾತ್ವಿಕಗಳೆನ್ನುವವು. ಇನ್ನು ನಾಲ್ಕನೆಯ ತರಗತಿಯನ್ನು ಯೋಗ ಎನ್ನುತ್ತಾರೆ. ಯೋಗವನ್ನು ಪೂರ್ತಿ ಸವಿದ ನಂತರ ಯೋಗವನ್ನು ಸಹ ಅತಿಕ್ರಮಿಸಿದವನಾಗುತ್ತಾನೆ. ಅಂತಹವನನ್ನು ಯೋಗೀಶ್ವರನೆಂದು ಕರೆಯುತ್ತಾರೆ. ಹಾಗಲ್ಲದೇ ಯೋಗದಲ್ಲಿ ಇರುವವನನ್ನು ಯೋಗಿ ಎನ್ನುತ್ತಾರೆ. ನನಗೆ ನಾಲ್ಕು ತರಗತಿಗಳು ಮುಗಿಯುತ್ತಾ ಬಂದಿವೆ, ಆದ್ದರಿಂದ ಯೋಗೀಶ್ವರನಾಗಿ ಐದನೆ ತರಗತಿಗೆ ಹೋಗಬೇಕೆಂದಿದ್ದೇನೆ. ನಾಲ್ಕನೆದಾದ ಯೋಗದ ನಂತರ ಇರುವುದು ಮೋಕ್ಷ. ಅದನ್ನೇ ಬಯಲು ಎಂದು, ಅಚೇಲವೆಂದು, ಮುಕ್ತಿ ಎಂದು, ಪರಮಪದವೆಂದು ಅನೇಕ ವಿಧವಾಗಿ ಹೇಳುತ್ತಾರೆ. ನಾಲ್ಕನೆದಾದ ನಂತರ ಇರುವ ಐದನೇ ತರಗತಿಯಾದ ಮೋಕ್ಷವೇ ಮನುಷ್ಯನಿಗೆ ಕೊನೆಯ ತರಗತಿ. ಪ್ರಪಂಚ ಓದುಗಳೆಷ್ಟು ತರಗತಿಗಳು ಇದ್ದರೂ ಅವು ಎಲ್ಲವೂ ಯೋಗ ಶಾಸ್ತ್ರದಲ್ಲಿ ಮೂರುತರಗತಿಗಳಲ್ಲಿರುವವೇ ಎಂದು ತಿಳಿಯಬೇಕು. ಎಷ್ಟು ದೊಡ್ಡ ಡಿಗ್ರಿಗಳು ಸಹಿತ ನಾಲ್ಕನೆಯ ತರಗತಿವರೆಗೂ ಬರಲಾರವು. ಎಲ್ಲಾ ಮೂರನೆಯ ತರಗತಿಯಲ್ಲಿರುವವೇ. ನಾನು ಯೋಗಶಾಸ್ತ್ರದಲ್ಲಿ ನಾಲ್ಕು ತರಗತಿಗಳನ್ನು ಓದಿ ಕೊನೆಯದಾದ ಐದಕ್ಕೆ ಹೋಗಬೇಕೆಂದು ಕಾಯುತ್ತಿದ್ದೇನೆ.

ಹಾಗೇ ಪ್ರತಿಯೊಬ್ಬ ಮನುಷ್ಯನಿಗೂ ಈ ಐದು ತರಗತಿಗಳು ಇವೆ, ಕೊನೆಯದಾದ ಅದನ್ನೇ ಐದನೆತನ ವೆಂದೂ ಸಹ ಪೂರ್ವದಲ್ಲಿ ಹಿರಿಯರೆನ್ನುತ್ತಿದ್ದರು. ಎಲ್ಲಾ ಇದ್ದರೂ ಐದನೆತನ ತಪ್ಪದೇ ಬೇಕೆಂದಿದ್ದಾರೆ. ಆದ್ದರಿಂದಲೇ ಎಲ್ಲದಕ್ಕಿಂತ ಮೀರಿದ ಭಾಗ್ಯ ಮುತ್ತೈದೆತನವೆಂದು ಅದನ್ನೇ ಸೌಭಾಗ್ಯವೆಂದೂ ಸಹ ಎನ್ನುತ್ತಾರೆ. ಸೌಭಾಗ್ಯವೆಂದರೇ ಗಂಡನನ್ನು ಹೊಂದಿರುವುದು. ಗಂಡನನ್ನು ಹೊಂದಿರುವುದೇ ಮುತ್ತೈದೆತನ (ಐದನೇತನ). ಹೊರ ಶರೀರ ಗಂಡ ಮುತ್ತೈದೆತನವಲ್ಲ (ಐದನೇತನವಲ್ಲ). ನಿಜವಾಗಿ ಮೂರನೇತನವೇ ಆಗುತ್ತದೆ. ನಿಜವಾದ ಗಂಡ (ಭರ್ತ) ಪರಮಾತ್ಮ. ಆ ಜಗದ್ಭರ್ತನನ್ನು ಹುಡುಕುವುದಕ್ಕೆ ಪ್ರಯತ್ನಿಸಿ ಐದನೇತನವನ್ನು ಸಾಧಿಸಿಕೊಳ್ಳಬೇಕು. ಪ್ರಪಂಚದಲ್ಲಿ ಸ್ತ್ರೀ ಪುರುಷರಿಗೆ ಯಾರಿಗಾದರೂ ಐದನೇತನ ಅವಶ್ಯ. ಬಹಳ ಜನ ತಾಮಸವಾದ ಒಂದರಲ್ಲೋ, ರಾಜಸವಾದ ಎರಡರಲ್ಲೋ, ಸಾತ್ವಿಕವಾದ ಮೂರರಲ್ಲೋ ಇದ್ದಾರೆ. ಕನಿಷ್ಟ ನಾಲ್ಕನೆಯದಾದ ಯೋಗದ ವರೆಗೂ ಸಹ ಬರಲಿಲ್ಲ. ಜನಸಂಖ್ಯೆಯಲ್ಲಿ ಹೆಚ್ಚು ಭಾಗ ಎರಡನೆಯ ತರಗತಿಯನ್ನೇ ದಾಟುತ್ತಿಲ್ಲ. ಶೇಕಡ 99 ರಷ್ಟು ಮೂರನ್ನೇ ದಾಟುತ್ತಿಲ್ಲ. ಅಂತಹವರು ನಾಲ್ಕನ್ನು ಯಾವಾಗ ದಾಟುವರು. ಒಂದು ವೇಳೆ ನಾಲ್ಕರವರೆಗೆ ಬಂದರೂ ಎಷ್ಟೋ ಆತಂಕಗಳಿಂದ ಅಲ್ಲಿ ಪಾಸಾಗದೇ ಹೋಗುತ್ತಿದ್ದಾರೆ. ಕೆಲವರೇನೋ ನಾಲ್ಕರಲ್ಲಿದ್ದೇ

ವೆಂದುಕೊಳ್ಳುತ್ತಾ ಮೂರರಲ್ಲೇ ಇದ್ದಾರೆ. ಮತ್ತೆ ಕೆಲವರು ಒಂದರಲ್ಲಿ ಇದ್ದು ಐದರಲ್ಲಿದ್ದೇವೆಂದುಕೊಳ್ಳುತ್ತಾರೆ. ನಮ್ಮ ಗುರು ಮೋಕ್ಷದಲ್ಲಿ ಕೂರಿಸಿದ್ದಾನೆನ್ನುತ್ತಾರೆ. ಐದಕ್ಕೆ ಹೋದವನು ಕಣ್ಣಿಗೆ ಕಾಣಿಸದೇ ಪರಮಾತ್ಮನೊಳಗೆ ಐಕ್ಯವಾಗುವನು ಅಲ್ಲವೆ! ಅಂತಹದರಲ್ಲಿ ಕಾಣಿಸುವ ಗುರುವು, ಕಾಣಿಸುವ ಶಿಷ್ಯರನ್ನು ಮೋಕ್ಷದಲ್ಲಿ ಇಟ್ಟಿದ್ದಾನೆಂದರೇ ಗುರುವು ಶಿಷ್ಯರೆಲ್ಲರೂ ಒಂದನೇ ತರಗತಿಯಲ್ಲೇ ಇದ್ದಾರೆನ್ನುವ ಮಾತು. ಯಾರು ಹೇಗೆ ಹೋದರೂ ಫರವಾಗಿಲ್ಲ. ನೀನು ಮಾತ್ರ ನಿನ್ನ ಗಂಡನನ್ನು ನೋಡಿಕೋ. ನಿನ್ನ ಗಂಡನಿಗೆ ಕೈಮುಗಿ, ನಿನ್ನ ಗಂಡನಿಗೇ ಸೇವೆ ಮಾಡು, ನಿನ್ನ ಐದನೆತನ ಹೋಗದಂತೆ ನೋಡಿಕೊ ಮುತ್ತೈದೆಯಾಗೇ ಬಾಳು, ಮುಂಡೆಯಾಗಿ ಬಾಳಬೇಡ. ನಾವೆಲ್ಲರೂ ಹೆಂಗಸರೇ ಆದ್ದರಿಂದ ನಮ್ಮಂತಹ ಹೆಂಗಸರೆಲ್ಲರಿಗೂ ಮುತ್ತೈದೆತನವೇ ಮುಖ್ಯವೆಂದು ತಿಳಿದುಕೊ.

**ಬಿ.ಪದ್ಮಾವತಿ, ಬಂಡಿ ಆತ್ಮಕೂರು.**

**217. ಮನುಷ್ಯರೆಲ್ಲರೂ ಒಂದೇ ಅಲ್ಲವೆ! ಮತ್ತು ಕೆಲವರು ಬಡವರಾಗಿ ಕೆಲವರು ಶ್ರೀಮಂತರಾಗಿ ಏಕೆ ಹುಟ್ಟುತ್ತಾರೆ?**

ಉ. ಹಿಂದಿನ ಜನ್ಮಗಳಲ್ಲಿ ಮಾಡಿಕೊಂಡ ಪಾಪ ಪುಣ್ಯಗಳನ್ನನುಸರಿಸಿ ಬಡವ ಧನಿಕರಾಗಿ ಹುಟ್ಟುವುದು ನಡೆಯುತ್ತಿದೆ. ಪಾಪ ಫಲಿತ ಕಷ್ಟ, ಪುಣ್ಯ ಫಲಿತ ಸುಖ ಅನುಭವಿಸದೇ ತಪ್ಪುವುದಿಲ್ಲ. ಎಲ್ಲರೂ ಮಾನವರೇ ಆದರೂ ಅವರು ಮಾಡಿಕೊಂಡ ಕರ್ಮ ಒಂದೇ ವಿಧವಾಗಿ ಇರುವುದಿಲ್ಲ. ಆದ್ದರಿಂದಲೇ ವಿಧವಿಧದವರು ಭೂಮಿಯ ಮೇಲೆ ಇರುವರು.

**ನಾಗಯ್ಯ, ಪ್ರೊದ್ದುಟೂರು**

**218. ಪ್ರತಿಯೊಬ್ಬ ಮನುಷ್ಯ ಕರ್ಮದ ಪ್ರಕಾರ ನಡೆಯುವನೆಂದು ನೀವು ಹೇಳಿದ್ದೀರ. ಮತ್ತೆ ಕರ್ಮ ಯಾರ ಪ್ರಕಾರ ಇರುತ್ತದೆ? ಈ ಕರ್ಮಕ್ಕೆ ಯಾರು ಮೂಲ ಪುರುಷರು? ಈ ಕರ್ಮ ಎನ್ನುವ ಪದಕ್ಕೆ ಯಾರು ಜವಾಬ್ದಾರರು? ಈ ಕರ್ಮ ಎನ್ನುವ ಪದವನ್ನು ಸೃಷ್ಟಿಸಿದವರು ನೀವಾ ಅಥವಾ ಅದಕ್ಕು ಮುಂದಿನವರಾ?**

ಉ. ನಾವು ಮಾಡುವ ಕೆಲಸಗಳ ಪ್ರಕಾರ ಕರ್ಮ ಇರುತ್ತದೆ. ಒಳ್ಳೆಯ ಕೆಲಸ ನಡೆದರೆ ಪುಣ್ಯ, ಕೆಟ್ಟ ಕೆಲಸಗಳು ನಡೆದರೇ ಪಾಪ ಎನ್ನುವ ಫಲಿತಗಳು ಏರ್ಪಡುತ್ತಿವೆ. ಕರ್ಮ ಪ್ರಕಾರವೇ ಪ್ರತಿಯೊಂದು ಕೆಲಸ ನಡೆದರೂ, ಆ ನಡೆದ ಕೆಲಸ ಕರ್ಮ ದಿಂದಲ್ಲ ನನ್ನಿಂದಲೇ ನಡೆಯುತ್ತದೆಂದು ಯಾರಂದುಕೊಳ್ಳುವರೋ ಅವನಿಗೆ ಮಾತ್ರವೇ ಹೊಸ

ಕರ್ಮ ಏರ್ಪಡುತ್ತದೆ. ಹಾಗಲ್ಲದೆ ಪ್ರತಿ ಕೆಲಸಕ್ಕು ಕರ್ಮವೇ ಕಾರಣವೆಂದು ನಾನಲ್ಲವೆಂದು ಅಂದುಕೊಳ್ಳುವವನಿಗೆ ಕರ್ಮ ಏರ್ಪಡುವುದಿಲ್ಲ. ಹಳೆಯ ಕರ್ಮವನ್ನು ಅನುಭವಿಸುತ್ತಾ ಹೊಸ ಕರ್ಮವನ್ನು ಸಂಪಾದಿಸಿಕೊಳ್ಳುವವನು, ಅವನು ಸಂಪಾದಿಸಿಕೊಂಡ ಕರ್ಮಕ್ಕೆ ಅವನೇ ಜವಾಬ್ದಾರನು. ಈ ಕರ್ಮ ಸಿದ್ಧಾಂತವನ್ನು ಇಟ್ಟಿರುವವನು ಮೂಲ ಪುರುಷನಾದ ಪರಮಾತ್ಮ. ಕರ್ಮ ಎನ್ನುವ ಪದವನ್ನು ಯಾವ ಮನುಷ್ಯನು ಸೃಷ್ಟಿಸಲಿಲ್ಲ. ಪರಮಾತ್ಮನಿಂದ ಸೃಷ್ಟಿಸಲ್ಪಟ್ಟ ಪ್ರಕೃತಿಯಲ್ಲಿ ಕರ್ಮ ಎನ್ನುವುದು ಮುಖ್ಯವಾದ ಭಾಗ. ಕರ್ಮವಿಲ್ಲದೆ ಸೃಷ್ಟಿ ಮುಂದಕ್ಕೆ ಸಾಗುವುದಿಲ್ಲ. ಕರ್ಮ ರಹಸ್ಯವನ್ನು ಅವಗಾಹನೆ ಮಾಡಿಕೊಂಡರೆ ಪ್ರಕೃತಿ ರಹಸ್ಯವನ್ನೆ ತಿಳಿದಂತಾಗುತ್ತದೆ. ಸರ್ವ ಸಂಪೂರ್ಣ ಜ್ಞಾನ ಕರ್ಮವನ್ನು ತಿಳಿದುಕೊಳ್ಳುವುದರಲ್ಲೇ ಇದೆ. ಇದು ಪುರಾಣವಲ್ಲ. ಶಾಸ್ತ್ರಬದ್ಧವಾದ ಮಾತು.

**ವೆಂಕಟ್, ಉರವಕೊಂಡ**

**219) ಶರೀರದೊಳಗಿನಿಂದ ಸ್ವತಃವಾಗಿ ಪ್ರೇಮ ಹೊರಬರುತ್ತಾ ಪ್ರಾಪಂಚಿಕ ಚಿಂತೆಗಳೇನು ಬಾರದಂತೆ ವ್ಯಕ್ತಿಯನ್ನು ಬ್ರಹ್ಮಾನಂದದಲ್ಲಿ ಲೀನ ಮಾಡಿಕೊಳ್ಳುವ ಸಿದ್ದ ವ್ಯವಸ್ಥೆ ಮನುಷ್ಯನಿಗೆ ಶರೀರ ಇರುವಾಗ ಪ್ರಾಪ್ತಿಸುವುದು ಅಸಂಭವವೆ?**

ಉ. ಶರೀರದೊಂದಿಗೆ ಸಂಭವವಲ್ಲ. ಪ್ರೇಮ ಪ್ರಕೃತಿಸಿದ್ಧವಾಗಿ ಹುಟ್ಟಿರುವುದು ಬ್ರಹ್ಮಾನಂದದಲ್ಲಿ ಲೀನ ಮಾಡಿಕೊಳ್ಳುವ ಸಿದ್ಧ ವ್ಯವಸ್ಥೆ ಎಂದರೆ ಜ್ಞಾನದಿಂದ ಲಭಿಸುವ ಮೋಕ್ಷ ಪ್ರಕೃತಿ ಸಿದ್ಧವಾಗಿ ಹುಟ್ಟಿರುವುದಲ್ಲ. ಪ್ರಾಪ್ತಿಸಲ್ಪಡುವವು ಕರ್ಮವನ್ನು ಅನುಸರಿಸಿ ಇರುತ್ತವೆ. ಮೋಕ್ಷ ಕರ್ಮವನ್ನು ಅನುಸರಿಸಿಯಲ್ಲದೆ ಶ್ರದ್ಧೆಯನ್ನನುಸರಿಸಿ ಇರುತ್ತದೆ.

**ಯಂ. ನಾಗಭೂಷಣಂ, ಬೆಂಗಳೂರು**

**220) ಯಾರಿಗಾದರೂ ದೊಡ್ಡವರಿಗೆ ಉತ್ತರವನ್ನು ಬರೆಯುವಾಗ ಶ್ರೀಶ್ರೀಶ್ರೀ ಎಂದು ಹೆಸರು ಮುಂದೆ ಪ್ರಸ್ತಾವಿಸುತ್ತಾರೆ ಅದರಲ್ಲಿ ಜ್ಞಾನಪರವಾದ ಅರ್ಥವಿದೆಯಾ?**

ಉ. ಸಾತ್ವಿಕ, ರಾಜಸ, ತಾಮಸ ಗುಣಗಳಲ್ಲಿ ಶುಭವಾದ ಗುಣವಿರುವವನೆಂದು ಮೂರು ಶ್ರೀ ಗಳು ಬರೆಯುತ್ತಾರೆ. ಮೂರು ಗುಣಗಳಲ್ಲಿಯೂ ಒಳ್ಳೆ ಗುಣಗಳೇ ಇರುವವನೆಂದು ಅರ್ಥ.

**221) ಪರಿಪೂರ್ಣವೆಂದರೆ ಏನು?**

ಉ. ಮೋಕ್ಷ. (ಪರಮಾತ್ಮ) ಅದನ್ನೇ ಅಚೇಲವೆಂದು ಸಹ ಕರೆಯುತ್ತಾರೆ.

**222) ಗುರುಗಳು ಶಿಷ್ಯನಿಗೆ ಮಾಯೆಯನ್ನು ತೊಲಗಿಸಿ ಪರಿಪೂರ್ಣವನ್ನು ಸ್ಥೂಲ ಕಣ್ಣುಗಳಿಗೆ ತೋರಿಸುವರೆಂದು, ಹಾಗೆ ತೋರಿಸದವರು ಗುರುಗಳಲ್ಲವೆಂದು ಕೆಲವರ ವಾದ ತಮ್ಮ ಅಭಿಪ್ರಾಯವನ್ನು ತಿಳಿಸಲು ಪ್ರಾರ್ಥನೆ.**

ಉ. ಪರಿಪೂರ್ಣವು ಸ್ಥೂಲ ಕಣ್ಣುಗಳಿಗೆ ಕಾಣಿಸುವುದು ಅಲ್ಲ. ದೃಷ್ಠಿಗೆ ಗೋಚರಿಸು ವುದು ಪ್ರಕೃತಿ ಎಂದೇ ತಿಳಿಯಬೇಕು. ಪರಿಪೂರ್ಣವು ಇಂದ್ರಿಯ ಅಗೋಚರವೆಂದು ಯೋಗ ಶಾಸ್ತ್ರವು ಸಹ ತಿಳಿಸುತ್ತಿದೆ. ಪರಿಪೂರ್ಣವನ್ನು ಯಾವ ಗುರುಗಳು ಭೂಮಿಯ ಮೇಲೆ ತೋರಿಸಲಾರರು. ಹಾಗೆ ಪರಿಪೂರ್ಣವನ್ನು ಗುರುಗಳೇ ತೋರಿಸುವುದಾದರೆ ಶಿಷ್ಯರಿಗೆ ಸಾಧನೆಯಿಂದ ಜ್ಞಾನದಿಂದ ಕೆಲಸ ಇಲ್ಲವೆಂದು ಹೇಳಬಹುದು. ಹಾಗೆ ತೋರಿಸುವೆನೆಂದು ಹೇಳುವವನು ಗುರುವೇ ಅಲ್ಲ.

**223) ಅಕಾಲ ಮರಣವಾದ ಸೂಕ್ಷ್ಮ ದೇಹಗಳು ಕಾಲ ಮರಣದವರೆಗು ಕರ್ಮಗಳನ್ನು ಮಾಡುತ್ತಾರಾ? ಅದರಿಂದ ಬರುವ ಪಾಪಪುಣ್ಯಗಳು ಅವರಿಗೆ ಅಂಟುತ್ತವಾ? ಅವರಿಗೆ ಕರ್ಮವನ್ನು ತೊಲಗಿಸಿಕೊಳ್ಳುವ ಅವಕಾಶವಿದೆಯಾ?**

ಉ. ಅಕಾಲ ಮರಣವಾದವರಿಗೆ 10 ಭಾಗಗಳು ಸ್ಥೂಲಶರೀರ ಮಾತ್ರ ಇರುವುದಿಲ್ಲ. ಉಳಿದ 15 ಭಾಗಗಳ ಸೂಕ್ಷ್ಮ ಶರೀರವಿರುತ್ತದೆ ಆದ್ದರಿಂದ ಅವರು ಸಹ ಕಾರ್ಯಗಳನ್ನು ಆಚರಿಸುವರು, ಕರ್ಮಗಳನ್ನು ಸಂಪಾದಿಸುವರು. ಜ್ಞಾನಾಗ್ನಿಯನ್ನು ಸಂಪಾದಿಸಿಕೊಂಡು ಅವರು ಸಹ ಕರ್ಮವನ್ನು ಸುಟ್ಟುಹಾಕಿಕೊಳ್ಳಬಹುದು. ಸ್ಥೂಲ ಕಣ್ಣುಗಳಿಗೆ ಮಾತ್ರ ಕಾಣಿಸುವ ಅವಕಾಶವಿಲ್ಲ ಆದರೆ ಉಳಿದವೆಲ್ಲವು ಅವುಗಳಿಗೆ ನಮ್ಮಂತೆ ಇವೆ.

**224) ಕೆಲವು ಕೆಲಸಗಳು ಮಾಡುವಾಗ ಇದು ಒಳ್ಳೆಯದು ಇದು ಕೆಟ್ಟದು ಎಂದು ಅಂತರ್ಗತವಾಗಿ ಏನೊ ಹೆಚ್ಚರಿಸುತ್ತಾ ಇರುತ್ತದೆ ಇದನ್ನೇ "ಅಂತರಾತ್ಮ ಪ್ರಬೋಧಂ" ಎಂದೆನ್ನುತ್ತಾರೆ. ನೀವೇನೋ ಆತ್ಮ ಸಾಕ್ಷಿಯಾಗಿ ನೋಡುತ್ತಾ ಇರುತ್ತದೆ ಏನು ಹೇಳುವುದಿಲ್ಲವೆಂದಿದ್ದೀರ. ಹಾಗೆ ಏನು ಹೇಳದಿರುವಾಗ ಒಳಗಿಂದ ನಡೆಯುವ ಸೂಚನೆಗಳನ್ನು ಅಂತರಾತ್ಮ ಪ್ರಬೋಧವೆಂದು ಏಕೆ ಕರೆಯಬೇಕು?**

ಉ. ವಾಸ್ತವವಾಗಿ ಆತ್ಮ ಎಲ್ಲಾ ಜೀವರಾಶಿಗಳಿಗೂ ಸಾಕ್ಷಿಯಾಗಿ ನೋಡುತ್ತಿದೆ. ಯಾವ ಪ್ರಬೋಧವನ್ನು ಮಾಡಿಲ್ಲ. ಶರೀರಾಂತರ್ಗತದಲ್ಲಿ ನಡೆಯುವ ಒಳ್ಳೆಯ ಕೆಟ್ಟ ವಿಮರ್ಶೆಗಳು, ಒಳ್ಳೆ ಕೆಟ್ಟ ಗುಣಗಳಿಂದ ಮಾಡುವ ಬುದ್ದಿ ಯೊಂದರ ಕೆಲಸವೆಂದು ತಿಳಿಯಬೇಕು. ಒಂದೇ ಬುದ್ಧಿ ಎರಡು ವಿಧವಾಗಿ ಒಳ್ಳೆಯ ಕೆಟ್ಟದ್ದನ್ನು ಯೋಚಿಸುತ್ತದೆ.

ಆ ಬುದ್ಧಿ ಯೋಚಿಸಿದ್ದರಲ್ಲಿ ಯಾವುದೋ ಒಂದನ್ನು ಚಿತ್ತ ನಿರ್ಣಯಿಸುತ್ತದೆ. ಚಿತ್ತ ನಿರ್ಣಯಿಸಿರುವುದೇ ಕಾರ್ಯಾಚರಣೆಗೆ ಬರುತ್ತದೆ. ಶರೀರಾಂತರ್ಗತ ಯಂತ್ರಾಂಗವನ್ನು ತಿಳಿಯದ ಬುದ್ಧಿ ಕಡಿಮೆ ಇರುವ ಮನುಷ್ಯ ಒಳಗೆ ನಡೆಯುವ ಯೋಚನೆಗಳನ್ನು ನಿರ್ಣಯಗಳನ್ನು "ಆತ್ಮ ಪ್ರಬೋಧ"ವೆಂದುಕೊಳ್ಳುತ್ತಿದ್ದಾನೆ. ಆತ್ಮ ಪ್ರಬೋಧವೆನ್ನುವುದು ಅಧರ್ಮ. ಬುದ್ಧಿ ಗುಣಾನುಸಾರಿಣಿ, ಚಿತ್ತ ಕರ್ಮಾನುಸಾರಿಣಿ, ಜೀವಿಯು ಅನುಭವಾನುಸಾರನು, ಆತ್ಮ ಆಡಿಸಿ ಅನುಭವಿಸುವಂತೆ ಮಾಡುವ ಅಧಿಕಾರಿ ಎನ್ನುವ ವಾಕ್ಯಗಳನ್ನು ಮರೆಯಬಾರದು.

**ಪಲ್ಲಾ ವೆಂಕಟರಮಣ, ಚಿಲಮಕೂರು**

**225) 108 ಕೋಟಿ ವರ್ಷಗಳ ಪ್ರಪಂಚ ಆಯುವಲ್ಲಿ ಜೀವಿಗೆ ಮಾನವ ಜನ್ಮ ಎಷ್ಟು ಸಲ ಬರುತ್ತದೆ?**

ಉ. ಕರ್ಮವನ್ನನುಸರಿಸಿ ಎಷ್ಟು ಸಲವಾದರೂ ಬರಬಹುದು. ಜನ್ಮಗಳು ಯಾವುವು ಬರುತ್ತವೆ ಎಷ್ಟು ಸಲ ಬರುತ್ತವೆ ಎನ್ನುವುದು ಕರ್ಮವನ್ನು ಅನುಸರಿಸಿ ಇರುತ್ತವೆ.

**226) ಜೀವಿಗೆ ಮನುಷ್ಯ ಜನ್ಮ ಎಷ್ಟು ಪವಿತ್ರವಾದದ್ದು?**

ಉ. ಜ್ಞಾನ ಪರವಾಗಿ ಯಾದರೆ ಹೇಳಲಾರದಷ್ಟು ಪವಿತ್ರವಾದದ್ದು. ಅಜ್ಞಾನ ಪರವಾಗಿ ನಡೆದುಕೊಂಡರೇ ಹೇಳಲಾರದಷ್ಟು ನೀಚವಾದದ್ದು. ಒಟ್ಟಾರೆ ಮನುಷ್ಯ ಜನ್ಮವೇ ಮಾಯೆಯಲ್ಲಿ ಮುಳಿಗಿ ಹೋಗಿ ದೇವರಿಗೆ ದೂರವಾಗಿರುವ ಜನ್ಮವೆಂದು ಹೇಳಬಹುದು.

**ದಂಡಾ ಜಯರಾಮ್, ಉರವಕೊಂಡ**

**227) ಏಕ ಮುಖ ರುದ್ರಾಕ್ಷವೆಂದರೆ ಏನು? ರುದ್ರಾಕ್ಷ ಧರಿಸುವುದರಿಂದ ಪ್ರತ್ಯೇಕತೆ ಇದೆಯಾ? ಯಾವ ರಾಶಿಯವರು ಧರಿಸಬೇಕು?**

ಉ. ರುದ್ರಾಕ್ಷಗಿರುವ ಭಾವ (ಮುಖ) ಗಳನ್ನು ಅನುಸರಿಸಿ ಅವುಗಳಿಗಿರುವ ಶಕ್ತಿಯಲ್ಲಿ ವ್ಯತ್ಯಾಸವೇನಾದರೂ ಇದೆಯೋ ಇಲ್ಲವೋ ಪೂರ್ತಿ ನಮಗೂ ಸಹ ತಿಳಿಯದು. ದೆವ್ವಗಳ ಬಾಧೆ ಇರುವವರು, ಅವುಗಳ ಭಯವಿರುವವರು ಪೂರ್ವದಲ್ಲಿ ರುದ್ರಾಕ್ಷಗಳನ್ನು ಧರಿಸುವವರೆಂದು ಮೊದಲೇ ತಿಳಿಸಿದ್ದೇವೆ. ರುದ್ರಾಕ್ಷಗಳು ಧರಿಸುವುದರಿಂದ ನೋಡುವವರಿಗೆ ಅಲಂಕಾರ, ಧರಿಸಿದವರಿಗೆ ಕೊರಳಿಗೆ ಭಾರ ಹೊರತು ಪ್ರತ್ಯೇಕತೆ

ಏನು ಕಾಣಿಸುತ್ತಿಲ್ಲ. ಪೂರ್ವದಲ್ಲಿ ಅಜ್ಞಾನಿಗಳು ಹಾಕಿಕೊಳ್ಳುತ್ತಿದ್ದರು. ಕಾಲಕ್ರಮವಾಗಿ ಈಗ ಸ್ವಾಮಿಗಳು ಧರಿಸುತ್ತಿದ್ದಾರೆ. ಅಷ್ಟು ಬಿಟ್ಟರೆ ಇವರು ಧರಿಸಬಹುದು ಇವರು ಧರಿಸಬಾರದೆನ್ನುವ ನಿಬಂಧನೆ ಏನು ಈ ಕಾಲದಲ್ಲಿ ಇಲ್ಲ. ಪೂರ್ವದಲ್ಲಾದರೆ ರುದ್ರ ರಕ್ಷ (ರುದ್ರ ಯಂತ್ರವು) ಅವಶ್ಯವೆನ್ನುವವರು ಧರಿಸುತ್ತಿದ್ದರು.

**ಜಿ. ಗೌರಿ, ರಾಜಂಪೇಟ**

**228) ಮೃತ್ಯುವನ್ನು ಹೊಂದಿದವರು ತಕ್ಷಣವೇ ಬೇರೋಂದು ಶರೀರವನ್ನು ಕರ್ಮಾನುಕೂಲವಾಗಿ ಧರಿಸುತ್ತಾರೆಂದು ತಾವು ತಿಳಿಸಿದ್ದೀರ. ಮರಣಿಸಿದವರಿಗೆ ಮಾಡುವ ಪಿಂಡ ಪ್ರದಾನಗಳು, ಅಮಾವಾಸ್ಯೆ ತರ್ಪಣಗಳು ಯಾರಿಗೆ ಸೇರುತ್ತವೆ?**

ಉ. ಮರಣಿಸಿದವರು ಹೊಸ ಶರೀರವನ್ನು ಹೊಂದಿ ಅಲ್ಲಿ ಕರ್ಮಾನುಸಾರವಾಗಿ ಅನುಭವಿಸುತ್ತಿರುತ್ತಾರೆ. ಇಲ್ಲಿ ನಾವು ಇಡುವ ಪಿಂಡ ಪ್ರದಾನಗಳು ಅವರಿಗೆ ಸೇರುವುದಿಲ್ಲ. ಅವರ ಹೆಸರಿನ ಮೇಲೆ ಇಟ್ಟಿರುವ ತಿಂಡಿ ಕಾಗೆಗಳಿಗೆ, ಹಣ ಇತರರಿಗೆ ಇಟ್ಟಿದ್ದೇನೆಂದು ಕೊಂಡರೆ ಪುಣ್ಯವಾದರೂ ನಮಗೆ ಸೇರುತ್ತದೆ. ಇದ್ದವರು ಕಳೆದುಕೊಳ್ಳುವುದು ಹೊರತು ಹೋದವರಿಗೆ ಸೇರುವುದು ಏನು ಇಲ್ಲ. ಪಿಂಡ ಪ್ರದಾನಗಳು, ಅಮಾವಾಸ್ಯೆ ತರ್ಪಣಗಳು ನಾವು ಕಲ್ಪಿಸಿಕೊಂಡಿರುವವೆ.

**229) ವೈಷ್ಣವರಿಗೆ ದಾನ ಕೊಡುವಾಗ ಕ್ರಿಷ್ಣಾರ್ಪಣವೆಂದು ಕೊಟ್ಟರೆ ಸ್ವೀಕರಿಸುತ್ತಾರೆ. ಶಿವಾರ್ಪಣವೆಂದು ಕೊಟ್ಟರೆ ಸ್ವೀಕರಿಸುವುದಿಲ್ಲ. ಹಾಗೆ ಶಿವ ಮತಸ್ತರು ಶಿವಾರ್ಪಣವೆಂದು ಕೊಟ್ಟರೆ ಸ್ವೀಕರಿಸುತ್ತಾರೆ. ಕ್ರಿಷ್ಣಾರ್ಪಣವೆಂದು ಕೊಟ್ಟರೆ ಸ್ವೀಕರಿಸುವುದಿಲ್ಲ. ಇವುಗಳ ವ್ಯತ್ಯಾಸವೇನು?**

ಉ. ಇದು ಅವರವರ ವರ್ಗಪರವಾದ ಆಚಾರ ಹೊರತು ಜ್ಞಾನಪರವಾದ ಅರ್ಥವು ಏನು ಇಲ್ಲ. ಶಿವನು ಕೃಷ್ಣನು ಒಬ್ಬನೇ ಎಂದು ತಿಳಿದರೆ ಹಾಗೆ ನಡೆದುಕೊಳ್ಳುವುದಿಲ್ಲ. ಪರಿಪೂರ್ಣ ಜ್ಞಾನವನ್ನು ಹೊಂದಿದ ದಿನ ಇಬ್ಬರು ಒಂದೇ ಎಂದು ತಿಳಿಯಬಹುದು.

**230) ಕೆಲವರು ಮನುಷ್ಯರ ಹಣೆಯಮೇಲಿನ ಗೆರೆಗಳನ್ನನುಸರಿಸಿ ಗೆರೆಗೆ 20 ವರ್ಷಗಳ ಆಯುಸ್ಸು ಪ್ರಮಾಣವೆಂದು ಹೇಳುತ್ತಾರೆ ನಿಜವೇನಾ?**

ಉ. ನಿಜ ಅಲ್ಲ. ಹಣೆಯ ಮೇಲೆ ಗೆರೆಗಳನ್ನು ನೋಡಿದರೆ ತಿಳಿಯುವುದಿಲ್ಲ ಹಣೆಯ ಒಳಗಿನ ಬರಹವನ್ನು ನೋಡಿದರೆ ತಿಳಿಯುತ್ತದೆ.

**231) ನನಗೆ ಕನಸಿನಲ್ಲಿ ಹಾವು ಕಾಣಿಸಿ ಕಚ್ಚಿದೆ. ಯಥಾರ್ಥವಾಗಿ ಬಾಧೆಯನ್ನು ಅನುಭವಿಸಿದಂತಾಗಿದೆ. ಕನಸಿನಲ್ಲಿ ಹಾವು ಕಾಣಿಸುವುದು ಕೆಲವರು ಕೆಟ್ಟದೆಂದು, ಕೆಲವರು ಒಳ್ಳೆಯದೆಂದು ಹೇಳುತ್ತಾರೆ. ಯಾವುದು ನಿಜ?**

ಉ. ಕೆಟ್ಟದು ಅಲ್ಲ. ಒಳ್ಳೆಯದು ಅಲ್ಲ. ಬಾಧೆ ಅನುಭವಿಸುವ ಕರ್ಮವಿದೆ. ಆದ್ದರಿಂದ ಅದನ್ನು ಕನಸಿನಲ್ಲಿ ಅನುಭವಿಸಿದ್ದೀರ. ವಾಸ್ತವವಾಗಿ ಶರೀರಕ್ಕೆ ಹಾವು ಕಚ್ಚುವ ಕರ್ಮವಿಲ್ಲ. ಆದರೆ ಹಾವು ಕಚ್ಚಿದ ಅನುಭೂತಿ ಬಾಧೆ ಅನುಭವಿಸುವ ಕರ್ಮಮಾತ್ರವಿದೆ. ಅಂತಹದರಲ್ಲಿ ಸ್ಥೂಲಕ್ಕೆ ನಡೆಯದೆ ಸೂಕ್ಷ್ಮದಿಂದ ಹಾಗೆ ಅನುಭವಿಸಬೇಕಾದಾಗ ಅದು ಸ್ವಪ್ನದಲ್ಲಿ ಮಾತ್ರವೆ ನಡೆಯುತ್ತದೆ. ಅದರ ಸಲುವಾಗಿಯೇ ಸ್ವಪ್ನಗಳಿವೆ.

**ವೆಂಕಟ್, ಉರವಕೊಂಡ**

**232) ಮಗುವಿನ ಹಣೆ ಬರಹವನ್ನು ತಾಯಿ ನಿದ್ರಿಸುತ್ತಿರುವಾಗ ಬ್ರಹ್ಮ ಬರೆಯುತ್ತಾನಂತೆ ನಿಜವೇನಾ?**

ಉ. ಶುದ್ಧ ಅಸತ್ಯ. ನಮ್ಮ ಕವಿಗಳ ಕಲ್ಪನೆಗಳಿಗೆ ಹುಟ್ಟಿರುವ ಬ್ರಹ್ಮ ಏನಾದರು ಇರುತ್ತಾನೇನೋ, ಆದರೆ ಹಣೆಯ ಬರಹವನ್ನು ಬರೆಯುವ ಬ್ರಹ್ಮ ಇಲ್ಲ. ಯಾರು ಮಾಡಿಕೊಳ್ಳುತ್ತಿರುವ ಕರ್ಮ ಅವರ ಕಪಾಳದೊಳಗೆ ಕರ್ಮಚಕ್ರದಲ್ಲಿ ನಿತ್ಯ ರಿಕಾರ್ಡ್ ಆಗುತ್ತಿದೆ. ಆದರೆ ಪ್ರತ್ಯೇಕಿಸಿ ಬರೆಯುವವರು ಯಾರು ಇಲ್ಲ.

**ಯಲ್. ಚಂಡ್ರಾಯುಡು, ಚಿನ್ನ ಮಾಂಡೆಮು**

**233. ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ, ಧರ್ಮ ಸಂಸ್ಥಾಪ ನಾರ್ಥಾಯ ಸಂಭವಾಮಿ ಯುಗೇ ಯುಗೇ ಎಂಬ ಗೀತಾಚಾರ್ಯನ ವಾಕ್ಯಾನುಸಾರ ಶ್ರೀ ಕೃಷ್ಣ ಪರಮಾತ್ಮ ಪಾಂಡವ ಪಕ್ಷಪಾತಿಯಾ? ಕೌರವ ಪಕ್ಷಪಾತಿಯಾ?**

ಉ. ಪೀರ್ಲ ಹಬ್ಬಕ್ಕು ಸುಬ್ಬರಾಯನ ಷಷ್ಟಿಗೂ ಸಂಬಂಧವಿಲ್ಲದ ಹಾಗೆ ನೀವು ಕೇಳಿದ ಶ್ಲೋಕಕ್ಕು ಪಕ್ಷಪಾತಕ್ಕು ಸಂಬಂಧವೆ ಇಲ್ಲ. ನಿಜಕ್ಕೆ ಕೃಷ್ಣನು ಯಾರ ಪಕ್ಷ ಪಾತಿ ಅಲ್ಲ. ಐದು ಊರುಗಳಿಂದಾದರು ತೃಪ್ತಿ ಹೊಂದುವ ಪಾಂಡವರಿಗೆ ರಾಯಬಾರಿಯಂತೆ ಹೋಗಿ, ದುರ್ಯೋಧನನು ಕೊಡುವ ಅವಕಾಶವೇ ಇಲ್ಲದ ಹಾಗೆ ಮಾತುಗಳಿಂದ ರೊಚ್ಚಿಗೆಬ್ಬಿಸಿ, ಯುದ್ಧವನ್ನು ಕಲ್ಪಿಸಿ ಎರಡು ಕಡೆಯವರನ್ನು ವಿನಾಶಮಾಡಿದ್ದಾನೆ. ಆದ್ದರಿಂದ ಯಾರ ಪಕ್ಷವೆಂದು ಸಹ ಹೇಳುವುದಕ್ಕೆ ಸಾಧ್ಯವಿಲ್ಲ. ಪ್ರಪಂಚದಲ್ಲಿ ಆತನ ಪಾತ್ರ ಧರ್ಮ

ಸಂಸ್ಥಾಪನೆಯೇ ಆಗಲಿ ಉಳಿದಿರುವವೆಲ್ಲ ನಾಟಕಗಳೆ ಯಾರ ಕಡೆ ಇಲ್ಲ. ಒಂದು ವೇಳೆ ಪಾಂಡವ ಪಕ್ಷಪಾತಿಯೇ ಆಗಿದ್ದರೆ ಆದಿನ ಕುರುಕ್ಷೇತ್ರದಲ್ಲಿ ತಾನು ಸಹ ಯುದ್ಧ ಮಾಡಿರುವವನು. ಹಾಗೆ ಯಾರ ಪಕ್ಷದವನಲ್ಲ ಆದುದರಿಂದ ಆತನು ಷರತ್ತನ್ನಿಟ್ಟು ತಪ್ಪಿಸಿಕೊಂಡಿದ್ದಾನೆ.

**ಯಂ.ಸಿ. ರಾಮಲಿಂಗಯ್ಯ, ಚಿನ್ನ ಮಾಂಡೆಮು**

**234) ಓಂ ಶ್ರೀಂ ಎನ್ನುವ ಪ್ರಣವ ಬೀಜಾಕ್ಷರಗಳಿಗೆ ಅಂತರಾರ್ಥವಾಗಿ ವ್ಯತ್ಯಾಸವೇನಿದೆ?**

**ಉ.** ಪ್ರತಿಯೊಂದು ಮಾತು ಮಂತ್ರವೇ ಎಂದು ವೇಮನ ಯೋಗಿ ಹೇಳಿದಹಾಗೆ ನಾವು ನುಡಿಯುವ ಶಬ್ದದಲ್ಲಿ ಕಾಣಿಸದ ಒಂದು ಶಕ್ತಿ ಇರುತ್ತದೆ. ಅವುಗಳಲ್ಲಿ ಬೀಜಾಕ್ಷರಗಳಿಗೆ ಇನ್ನೂ ಹೆಚ್ಚಿನ ಶಕ್ತಿ ಇರುತ್ತದೆ. ಆದ್ದರಿಂದ ಬೀಜಾಕ್ಷರಗಳ ಜಪಮಂತ್ರ ಕ್ರಮಬದ್ಧವಾಗಿ ಇಷ್ಟು ನೂರು, ಇಷ್ಟು ಸಾವಿರ ಎಂದು ಸಂಖ್ಯೆ ನಿರ್ಣಯಿಸಲ್ಪಟ್ಟು ಇರುತ್ತದೆ. ಅಂತಹ ಬೀಜಾಕ್ಷರಗಳು ಎಷ್ಟೋ ಇವೆ ಆದರೆ ಓಂಕಾರ ಎಲ್ಲಾ ಬೀಜಾಕ್ಷರಗಳಿಗು ಮೊದಲೇ ಉಚ್ಚರಿಸಬೇಕು. ಆದ್ದರಿಂದ ಯಾವ ಮಂತ್ರಕ್ಕಾದರೂ ಓಂ ಎನ್ನುವ ಅಕ್ಷರದಿಂದಲೆ ಪ್ರಾರಂಭವಾಗುವುದು. ಓಂಕಾರ ಶಬ್ದ ನಿನ್ನಲ್ಲಿ ಇರುವಾಗಲೆ ನಂತರ ಅಕ್ಷರಗಳೆಲ್ಲವನ್ನು ನೀನು ಉಚ್ಚರಿಸಬಹುದು. ಆದ್ದರಿಂದ ಎಲ್ಲಾದಕ್ಕು ಮುಂಚೆ ಓಂಕಾರವನ್ನು ಇಡಲಾಗಿದೆ. ಅದು ಇಲ್ಲದೆ ಯಾವ ಮಂತ್ರವು ಜಪಿಸಬಾರದೆಂದು ನಿಯಮ ಮಂತ್ರ ಭಾಗದಲ್ಲಿ ಇರುತ್ತದೆ. ಎರ್ತ್ (ಭೂಮಿ) ಕನೆಕ್ಷನ್ ಇಲ್ಲದೆ ಕರೆಂಟು ಶಕ್ತಿ ಉಪಯೋಗಪಡದ ಹಾಗೆ ಓಂಕಾರ ವಿಲ್ಲದೆ ಯಾವ ಬೀಜಾಕ್ಷರಗಳ ಶಕ್ತಿ ಉಪಯೋಗಕ್ಕೆಬಾರದು. ಕರೆಂಟು ಎಳೆಗಳಲ್ಲಿ ಎರ್ತ್ ಎಳೆಗು ಕರೆಂಟು ಎಳೆಗು ಇರುವಂತಾ ವ್ಯತ್ಯಾಸ ಓಂಕಾರಕ್ಕೂ ಉಳಿದ ಬೀಜಾಕ್ಷರಗಳಿಗು ಇದೆ.

**ಡಿ.ವಿ. ಶ್ರೀನಿವಾಸನ್, ಮದನಪಲ್ಲಿ**

**235) ನಿಮ್ಮ ಪತ್ರಿಕೆಯಲ್ಲಿ ಕೆಲವು ಅಚ್ಚು ತಪ್ಪುಗಳಿವೆ. ಒಂದು ಕಡೆ ಪ್ರಬೋ "ಧಾ" ಶ್ರಮವೆಂದು. ಮತ್ತೊಂದು ಕಡೆ ಪ್ರ "ಭೋ" ದಾಶ್ರಮವೆಂದು ಇದೆ. ಅಸಲು ನಿಮ್ಮ ಪತ್ರಿಕೆ ಪ್ರಭೋದಾತ್ಮಜಮ್ ಅಥವಾ ಪ್ರಬೋಧಾತ್ಮಜಮ್ ನೀವೇ ತಿಳಿಸಬೇಕು. ಅದನ್ನು ಪಕ್ಕಕ್ಕಿಟ್ಟು ನೀವು ಯೋಗಿ ಆಗಬೇಕೆಂದಿದ್ದೀರ ಯೋಗಿಗೆ ಅರ್ಥವನ್ನು ಹೇಳಿದ್ದೀರ. ಜ್ಞಾನಿಗೆ ಅರ್ಥವನ್ನು ಹೇಳಿದ್ದೀರ. ಜನ್ಮಗಳು ಕರ್ಮಗಳನ್ನು ಅನುಸರಿಸಿ ಬರುತ್ತವೆಂದು ಗೀತೆಯಲ್ಲಿ ಹೇಳಿದ್ದಾರೆಂದಿದ್ದೀರ. ಈ ಪ್ರಶ್ನೆಗಳೆಲ್ಲವು ಸರ್ವ ಸಾಧಾರಣವೇ. ನನ್ನ ಪ್ರಶ್ನೆ ನಿಮಗೆ ಸ್ವಲ್ಪ ಕಟುವಾಗಿ ಇರಬಹುದು**

**ಜನ್ಮಗಳಿಲ್ಲದೆ ಪರಬ್ರಹ್ಮದಲ್ಲಿ ಐಕ್ಯವಾಗುವ ಪದ್ದತಿ ಯಾವುದು? ಅದಕ್ಕೆ ಉತ್ತರ ಗೀತೆಯಲ್ಲಿ ವೇದಗಳಲ್ಲಿ ಇದೆಯಾ? ಸಂಶಯಗಳಿಗೆ ಪರಿಷ್ಕಾರ ವೇದಗಳೇ ಅಲ್ಲವೆ!**

**ಉ.** ನಮ್ಮ ಪತ್ರಿಕೆಯಲ್ಲಿ ಅಚ್ಚು ತಪ್ಪುಗಳಿರುವ ವಿಷಯವನ್ನು ನಾವೇ ಹಿಂದಿನ ಸಂಚಿಕೆಯಲ್ಲಿ ಹೇಳಿದ್ದೇವೆ. ಎಲ್ಲೋ ಒಂದು ಕಡೆ ಯಾವ ಪುಸ್ತಕದಲ್ಲಾದರೂ ತಪ್ಪಿರಬಹುದು. ತಿಳಿದವರು ಸರಿಪಡಿಸಿಕೊಂಡು ಓದಿಕೊಳ್ಳುತ್ತಾರೆ ಆದರೆ ವಿಮರ್ಶಿಸುತ್ತಾ ಪತ್ರ ಬರೆಯುವುದಿಲ್ಲ. ನಾವು ಹೆಡ್ಡಿಂಗ್ ಸಕ್ರಮವಾಗಿ ಕಂಪೋಜ್ ಮಾಡಿ "ಪ್ರಬೋಧಾತ್ಮಜಮ್" ಎಂದು ಹೆಸರು ಇಟ್ಟಿದ್ದೇವೆ. ಆದರೆ ಹಿಂದೆ ಮತ್ತೊಂದು ರ್‍ಯಾಪರ್ ಮೇಲೆ ಬ್ಲಾಕು ಇದೆ ಅದನ್ನು ನಾವು ಬದಲಾಯಿಸುವುದಕ್ಕೆ ಆಗಿಲ್ಲ ಆದ್ದರಿಂದ ಹಾಗೇ ಹಾಕುತ್ತಿದ್ದೇವೆ. ಅದು ಬ್ಲಾಕು ಬರೆದಿರುವ ಆರ್ಟಿಸ್ಟು ತಪ್ಪು.

**ಬೋಧ : ಹೇಳುವುದು**

**ಭೋದ : ಕಸದ ಹುಲ್ಲು**

ನೀವು ಕೇಳಿದ್ದೀರಲ್ಲ ನಿಮ್ಮ ಪತ್ರಿಕೆ ಹೆಸರೇನೆಂದು ನಮ್ಮದು ಜ್ಞಾನಿಗಳಿಗೆ "ಪ್ರಬೋಧಾತ್ಮಜಮ್" ಅಜ್ಞಾನಿಗಳಿಗೆ "ಪ್ರಭೋದಾತ್ಮಜಮ್" ಎಂದು ಈ ದಿನ ತಿಳಿಸುತ್ತಿದ್ದೇವೆ. ಮುಂದೆ ಒಂದು ವಿಧವಾಗಿ ಹಿಂದೆ ಒಂದು ವಿದವಾಗಿ ಇರುವುದು ಸಹ ಒಳ್ಳೆಯದೆಂದೇ ಈಗೀಗ ತಿಳಿದುಕೊಳ್ಳುತ್ತಿದ್ದೇವೆ. ಏಕೆಂದರೆ ತಿಳಿಯದವರಿಗೆ ನಮ್ಮ ಜ್ಞಾನ ಕಸದ ಹುಲ್ಲಿನ ಹಾಗೇ ಇರುತ್ತದೆ. ಆದ್ದರಿಂದ ಅರ್ಥ ಮಾಡಿಕೊಳ್ಳದವರಿಗೆ, ಅರ್ಥವಾಗದವರಿಗೆ ನಮ್ಮ ಪತ್ರಿಕೆ "ಪ್ರಭೋದಾತ್ಮಜಮ್". ಅರ್ಥ ಮಾಡಿಕೊಳ್ಳುವವರಿಗೆ "ಪ್ರಬೋಧಾತ್ಮಜಮ್".

ಅದು ಹಾಗಿಟ್ಟು ಜ್ಞಾನ ಯೋಗ ಸಾಧಾರಣವೆ. ನನ್ನ ಪ್ರಶ್ನೆ ನಿಮಗೆ ಸ್ವಲ್ಪ ಕಟುವಾಗಿ ಇರಬಹುದೆಂದಿದ್ದೀರ. ನಿಮ್ಮ ಪ್ರಶ್ನೆಗೇನು ಕೊಂಬುಗಳು ಬಂದಿಲ್ಲ! ಜ್ಞಾನ ಯೋಗಗಳ ಪ್ರಶ್ನೆಗಳು ಸರ್ವ ಸಾಧಾರಣವಾಗಿರುವಾಗ ನಿಮ್ಮದು ಆ ಗುಂಪಿಗೆ ಸೇರಿರುವುದಲ್ಲವೆ? ನಾವು ಹೇಳುವ ಬೋಧನೆ ಜನ್ಮಗಳು ಇಲ್ಲದಂತೆ ಪರಬ್ರಹ್ಮದಲ್ಲಿ ಐಕ್ಯವಾಗುವುದಲ್ಲದೆ ಮತ್ಯಾವುದು? ನಿಮ್ಮ ಪ್ರಶ್ನೆ ನಮಗೆ ಕಟುವಾಗಿ ಇರುವುದಿಲ್ಲ. ನಮ್ಮ ಉತ್ತರ ನಿಮಗೆ ಕಟುವಾಗಿ ಇರಬಹುದು. ಗುರುಗಳನ್ನು ಪ್ರಶ್ನಿಸುವಾಗ "ಪರಿಪ್ರಶ್ನೇನ" ಎನ್ನುವ ವಿಧಾನವನ್ನು ಮರೆತಿದ್ದೀರ. **"ತ್ರೈ ಗುಣ್ಯ ವಿಷಯಾ ವೇದಾ"** ಎನ್ನುವ ಗೀತಾ

ವಾಕ್ಯವನ್ನು ಮರೆತು ವೇದ ಸಂಶಯಗಳಿಗೆ ಪರಿಷ್ಕಾರ ಅಲ್ಲವೆ ಎಂದಿದ್ದೀರ. ವಾಸ್ತವಕ್ಕೆ ಬಂದರೆ ವೇದಗಳು ಗುಣಗಳೆಂದು, ಆ ಗುಣಗಳೇ ಮಾಯೆ ಎಂದು ಗೀತೆ ಬೋಧಿಸುತ್ತಿದೆ. 15ನೇ ಅಧ್ಯಾಯದಲ್ಲಿ ಗುಣಗಳಿಂದ ಪೋಷಿಸಲ್ಪಡುವ ಶರೀರಾಂತರ್ಗತ ವೃಕ್ಷವನ್ನು (ವಿಷಯ) ಪೂರ್ತಿ ತಿಳಿದವನೇ ವೇದಗಳನ್ನು ತಿಳಿದವನೆಂದು ಸಹ ಇದೆ. ಕೇವಲ ಪುಸ್ತಕಗಳು ವೇದಗಳಲ್ಲ. ವೇದಗಳು ಪ್ರತಿ ಮನುಷ್ಯನ ತಲೆಯಲ್ಲಿ ಗುಣಗಳ ರೂಪದಲ್ಲಿ ಇವೆ. ವೇದಗಳು ಸಂಶಯಗಳನ್ನು ಹುಟ್ಟಿಸುತ್ತವೆಯಾಗಲಿ ಸಂಶಯಗಳನ್ನು ತೀರಿಸಲಾರವು. ನಾನೇನೋ ನನ್ನ ಜ್ಞಾನವೇ ದೊಡ್ಡದೆಂದು ಕೊಚ್ಚಿಕೊಳ್ಳುತ್ತೇನೆಂದುಕೊಳ್ಳಬೇಡ. ನಮ್ಮ ಬೊಧನೆಗಳು ಇಂದಿನ ಸಮಾಜದಲ್ಲಿ ಅಜ್ಞಾನವನ್ನು ಕಠಿಣವಾದ ಬೇರುಗಳೊಂದಿಗೆ ಸಹ ಕಿತ್ತು ಹಾಕುತ್ತಿವೆ. ನಾಸ್ತಿಕರನ್ನು ಸಹಿತ ಜ್ಞಾನಿಗಳಾಗಿ ಬದಲಾಯಿಸುತ್ತಿವೆ. ಎಲ್ಲಾ ಮತದವರನ್ನು ಒಪ್ಪಿಸುತ್ತಿವೆ.

**ಆದಿಮೂಲಮ್ ರೆಡ್ಡಿ, ಪೆರಿಯಮಿಟ್ಟೂರು, ತಮಿಳನಾಡು**

**236) ನಮ್ಮ ದೇಶದಲ್ಲಿ ಹಿಂದೂಗಳು ವಿಗ್ರಹಾರಾಧನೆ ಮಾಡುತ್ತಾರೆ. ಉಳಿದ ಇಸ್ಲಾಮ್ ಮತದವರು, ಕ್ರೈಸ್ತ ಮತದವರು ವಿಗ್ರಹಾರಾಧನೆ ಮಾಡುವುದಿಲ್ಲ ಏಕೆ?**

**ಉ.** ನಿರಾಕಾರವಾದ ದೇವರನ್ನು ತಿಳಿದುಕೊಳ್ಳುವುದಕ್ಕೆ ಸುಲಭವಾಗಿ ಇರುವಂತೆ ಗುಡಿ ಗೋಪುರಗಳು ಇವೆ ವಿಗ್ರಹಾರಾಧನೆಯೂ ಸಹ ಇದೆ. ಉಳಿದ ಮತದವರು ನಿರಾಕಾರಕ್ಕೆ ಆಕಾರವನ್ನಿಡುವುದು ಸರಿಅಲ್ಲವೆಂದು, ಅದನ್ನು ನಾವು ಕಲ್ಪಿಸಿದವರಾಗುತ್ತೇ ವೆಂದು, ಹಾಗೆ ಮಾಡಿದರೆ ಪ್ರಜೆಗಳು ತಪ್ಪಾಗಿ ಅರ್ಥೈಸಿಕೊಳ್ಳುತ್ತಾರೆಂದು ವಿಗ್ರಹಾರಾಧನೆ ಯನ್ನು ಮಾಡದೆ ನಿರಾಕಾರವನ್ನು ಆರಾಧಿಸುತ್ತಿದ್ದಾರೆ. ಇದು ಪೂರ್ವದಲ್ಲಿನ ಭಾವನೆ, ಈಗೇನೋ ಆರಾಧನೆಗಳಲ್ಲಿ ದೇವರನ್ನು ತಿಳಿಯುವುದು ಮುಖ್ಯ ಉದ್ದೇಶವೆಂದುಕೊಳ್ಳದೆ ಆರಾಧನೆಗಳೆ ಮುಖ್ಯವೆಂದುಕೊಂಡು ಯಾರಿಗೆ ಕೈಲಾದಷ್ಟು ಅವರು ಮಾಡುತ್ತಿದ್ದಾರೆ. ಯಾರು ಹಣ ಹೆಚ್ಚಿಗೆ ಖರ್ಚುಮಾಡಿ ಪೂಜೆಗಳು ಮಾಡಿದರೆ ಅವರದೆ ದೊಡ್ಡ ಭಕ್ತಿ ಎನ್ನುವ ಕಾಲವಿದು. ಇಂದೂಗಳು ಹೀಗೆ ತಪ್ಪು ಮಾಡುವುದು ವಿಚಾರಿಸಬೇಕಾದ ವಿಷಯ.

**ಕೆ.ಗಂಗಪ್ಪ, ಕಿರಿಕೆರ**

**237) ಜೀವಿಯು ಅಕಾಲ ಮೃತ್ಯುವನ್ನು ಹೊಂದಿದ ನಂತರವೂ ಸಹ ಆತ್ಮದೊಂದಿಗೆ ಸಂಬಂದವಿರುತ್ತದೆಯಾ? ಹಸಿವು ಬಾಯಾರಿಕೆ, ಕಷ್ಟ ಸುಖಗಳಿರುತ್ತವೆಯಾ?**

ಉ. ಜೀವಿಯಿರುವವರೆಗು ಆತ್ಮ ಸಂಬಂಧವನ್ನು ಹೊಂದಿರುತ್ತಾನೆ. ಜೀವಿಯು ಆತ್ಮ ಎರಡು ಜೋಡಿ ಪಕ್ಷಿಗಳಂತವರು. ಅಕಾಲ ಮೃತ್ಯುವನ್ನು ಹೊಂದಿದ ನಂತರವೂ ಸಹ ಎಲ್ಲಾ ಅವಸ್ಥೆಗಳು ಇರುತ್ತವೆ.

**ಪಿ. ರಾಮಬೊಜ್ಜ, ಧರ್ಮವರಮು**

**238) ರಾತ್ರಿ ಹೊತ್ತು ಸ್ವಪ್ನಗಳು ಕೆಲವು ಒಳ್ಳೆಯದಾಗಿ, ಕೆಲವು ಭಯಂಕರವಾಗಿ ಬರುತ್ತವೆ ಕಾರಣವೇನು?**

ಉ. ಅವು ಸಹ ಕರ್ಮ ಪ್ರಕಾರವೆ ಬರುತ್ತವೆ. ಶರೀರದೊಂದಿಗೆ ಅನುಭವಿಸಲಾರದ ಕರ್ಮವನ್ನು ಸ್ವಪ್ನದಲ್ಲಿ ಮಾನಸಿಕವಾಗಿ ಅನುಭವಿಸಬೇಕಾಗಿರುತ್ತದೆ.

**239) ಯಾರಾದರು ಕೆಲಸಗಳು ನಡೆಯದಿದ್ದರೆ ಈ ದಿನ ಬೆಳಿಗ್ಗೆ ಎದ್ದ ಸಮಯ ಸರಿ ಇಲ್ಲ ಎನ್ನುತ್ತಾರೆ. ಹಾಗೆ ಸಮಯ ಸರಿ ಇರುವುದಿಲ್ಲವೆ?**

ಉ. ಎದ್ದ ಸಮಯಕ್ಕು ಕೆಲಸಗಳಿಗು ಸಂಬಂಧವಿರುವುದಿಲ್ಲ. ಕೆಲಸಗಳು ನಡೆಯದೆ ಇರುವಾಗ ಸಮಯ ಸರಿ ಇಲ್ಲವೆಂದು ಹೇಳಬಾರದು. ಗ್ರಹಚಾರ ಸರಿ ಇಲ್ಲ ಎನ್ನಬೇಕು.

**240) ಕೆಲವರು ತಿರುಪತಿ ದೇವರನ್ನು ಕಲ್ಲು ಎನ್ನುತ್ತಿದ್ದಾರೆ. ಕೆಲವರು ವೈಕುಂಠದಿಂದ ವಿಷ್ಣುವು ಬಂದು ಶಿಲೆಯಾಗಿದ್ದಾನೆನ್ನುತ್ತಾರೆ. ಯಾವುದು ನಿಜ?**

ಉ. ಮೊದಲನೆಯವರದೆ ನಿಜ. ಚಂದ್ರಗಿರಿ ಕೋಟೆಯನ್ನು ಪಾಲಿಸಿದ ರಾಜರು ನಿರ್ಮಿಸಿರುವುದೇ ತಿರುಪತಿ ದೇವಸ್ಥಾನ. ಆ ದೇವರ ಮೇಲೆ ಭಕ್ತಿ ಬೆಳೆಯಬೇಕೆಂದು ಬರೆದಿರುವುದು ವೆಂಕಟೇಶ್ವರ ಪುರಾಣ. ಅದರಲ್ಲಿ ವೈಕುಂಟದಿಂದ ವಿಷ್ಣುವು ಬಂದಹಾಗೆ ಬರೆದಿದ್ದಾರೆ.

**241) ಎಲ್ಲರಿಗೂ ಒಬ್ಬನೇ ದೇವರೆಂದಿದ್ದೀರ. ಮತ್ತೆ ಮತ ಬದಲಾವಣೆ ಏಕೆ?**

ಉ. ಮನುಷ್ಯನಿಗಿರುವ ಅಜ್ಞಾನದಿಂದಲೆ ಮತ ಬದಲಾವಣೆ ನಡೆಯುತ್ತಿದೆ.

**ವೆಂಕಟಸ್ವಾಮಿ. ಎಲ್ಲುಟ್ಲ**

**242) ಸ್ವರ್ಗಲೋಕ, ನರಕಲೋಕ ಎಂದರೆ ಏನು? ಅಷ್ಟಕ್ಕೂ ಅವು ಇವೆಯಾ?**

ಉ. ಎಲ್ಲಿ ಸುಖವನ್ನು ಅನುಭವಿಸುತ್ತಿದ್ದಾನೋ ಅದೇ ಸ್ವರ್ಗ. ಎಲ್ಲಿ ಕಷ್ಟವನ್ನು ಅನುಭವಿಸುತ್ತಿದ್ದಾನೋ ಅದೇ ನರಕ. ಇವು ಎರಡು ಭೂಮಿ ಮೇಲೆಯೇ ನೋಡುತ್ತಿದ್ದೇವೆ. ಪ್ರತಿ ದಿನ ನಾವು ಅನಿಭವಿಸುತ್ತಿದ್ದೇವೆ. ಅಷ್ಟೇ ಹೊರತು ಯಾವ ಲೋಕ ಎಲ್ಲಿ ಇಲ್ಲ.

**243) ಮನುಷ್ಯನು ಮರಣಿಸಿದ ನಂತರ ಮನುಷ್ಯ ಜನ್ಮದಲ್ಲಿ ಹುಟ್ಟುವನಾ?**

ಉ. ಹುಟ್ಟಬಹುದು, ಹುಟ್ಟದೆ ಇರಬಹುದು ಅದು ಅವರವರು ಮಾಡಿಕೊಂಡಿರುವ ಕರ್ಮವನ್ನನುಸರಿಸಿ ಇರುತ್ತದೆ.

**ಯಮ್. ಮಾರುತಿನಾಯುಡು, ಕೂಚಿವಾರಿಪಲ್ಲಿ**

**244) ಪ್ರಪಂಚ ಜನಸಂಖ್ಯೆ ಬೆಳೆಯುತ್ತಿದೆ ಅಲ್ಲವೆ! ಬರುವ ಹೊಸ ಜೀವಿಗಳು ಎಲ್ಲಿಯವು?**

ಉ. ಅವರು ಹೊಸ ಜೀವಿಗಳು ಅಲ್ಲ ಹಳೇ ಜೀವಿಗಳೆ. ಉಳಿದ ಜೀವರಾಶಿಗಳ ಜನ್ಮಗಳಿಂದ ಮನುಷ್ಯ ಜನ್ಮಕ್ಕೆ ಬಂದಿರುವವೆಂದು ತಿಳಿಯಬೇಕು.

**ಕೆ. ಜಯಚಂದ್ರಾ ರೆಡ್ಡಿ, ರಾಮ್‌ನಗರ್, ಅನಂತಪುರ**

**245) ಪ್ರತಿ ಕೆಲಸಕ್ಕು ಕರ್ಮದಿಂದ ಪ್ರೇರೇಪಿತವಾದ ಗುಣಗಳೇ ಕಾರಣವೆಂದು ನೀವು ತಿಳಿಸಿದ್ದೀರ. ಕೆಲವರು ಹಿರಿಯರು ಎಲ್ಲದಕ್ಕು ಪರಮಾತ್ಮಯೇ ಮೂಲ ಕಾರಣ ಪರಮಾತ್ಮಯೇ ಸಮಸ್ತವನ್ನು ಕದಲಿಸುತ್ತಿದ್ದಾನೆಂದು ಅನ್ನುತ್ತಾರೆ. ಪರಮಾತ್ಮ ಕದಲಿಸುತ್ತಿದ್ದಾನಾ? ಗುಣಗಳು ಕದಲಿಸುತ್ತಿವೆಯಾ?**

ಉ. ಸಮಸ್ತವು ಪರಮಾತ್ಮ ನಿಂದ ಹುಟ್ಟಿರುವವೇ, ಪರಮಾತ್ಮ ಇಲ್ಲದೆ ಏನೂ ಇಲ್ಲ, ಏನು ಚಲಿಸುವುದಿಲ್ಲ. ವಿವರವಾಗಿ ತಿಳಿದುಕೊಂಡರೆ ಪರಮಾತ್ಮ ಪ್ರಕೃತಿ ಯಿಂದಲೇ ಎಲ್ಲದನ್ನು ಕದಲಿಸುವುದರಿಂದ ಮೂಲ ಕಾರಣ ಪರಮಾತ್ಮ ಎನ್ನುವುದರಲ್ಲಿ ತಪ್ಪಿಲ್ಲ. ವಿವರಿಸುತ್ತಾ ಹೋದರೆ ಪ್ರಕೃತಿಯಲ್ಲಿ ತಯಾರಾಗಿರುವವು ಗುಣಕರ್ಮಗಳು. ಇವು ಅವಿನಾಭಾವ ಸಂಬಂಧವಿರುವವು. ಗುಣಗಳಿಂದ ಕರ್ಮ ಏರ್ಪಡುವುದು, ಕರ್ಮದಿಂದ ಗುಣಗಳು ಕದಲುವುದು ನಡೆಯುತ್ತಿದೆ. ಕರ್ಮದಿಂದ ಪ್ರೇರೇಪಿತವಾದ ಗುಣಗಳಿಂದಲೇ ಸಮಸ್ತ ಶರೀರಗಳು ಕದಲುತ್ತಿವೆ ಯಾದುದರಿಂದ

***"ಪ್ರಕೃತೇಃ ಕ್ರಿಯ ಮಣಾನಿ ಗುಣೈಃ ಕರ್ಮಾಣಿ ಸರ್ವಶಃ"*** ಪ್ರಕೃತಿಯಿಂದ ತಯಾರಾಗಿರುವ ಗುಣಗಳಿಂದಲೇ ಸರ್ವ ಕೆಲಸಗಳು ನಡೆಯುತ್ತಿವೆಂದು ಗೀತೆ ಮೂರನೆಯ

ಅಧ್ಯಾಯದಲ್ಲಿ 27ನೇ ಶ್ಲೋಕದಲ್ಲಿ ಸಹ ಹೇಳಲಾಗಿದೆ. ಮತ್ತೊಂದು ಕಡೆ 18ನೇ ಅಧ್ಯಾಯದಲ್ಲಿ ಜಾದುಗಾರ ಗೊಂಬೆಗಳನ್ನು ಆಡಿಸುವ ರೀತಿಯಲ್ಲಿ ಸಮಸ್ತ ಪ್ರಪಂಚವನ್ನು ಆಡಿಸುತ್ತಿದ್ದೇನೆಂದಿದ್ದಾನೆ. ಪರಮಾತ್ಮ, ಪ್ರಕೃತಿಯೆನ್ನುವುದರಿಂದ ಪ್ರಪಂಚದಲ್ಲಿನ ಎಲ್ಲರನ್ನು ನಡೆಸುತ್ತಿದ್ದಾನೆಂದು ತಿಳಿದಾಗ, ಪ್ರಕೃತಿ ಸಂಬಂಧ ಗುಣಗಳಿಂದ ಕೆಲಸಗಳು ನಡೆಯುತ್ತಿವೆಂದು ತಿಳಿಯುತ್ತದೆ.

**246) ಸಂಕಲ್ಪವಿಲ್ಲದೆ ನೆನಪಿರುವ ಸ್ಥಿತಿಯನ್ನು ಯೋಗವೆಂದು ನೀವು ತಿಳಿಸಿದ್ದೀರ. ನೆನಪು ಇದ್ದರೆ ಮನಸ್ಸು ಇದ್ದಹಾಗೆ ಅಲ್ಲವೆ! ಮನಸ್ಸಿರುವಾಗ ಯೋಗವೇಗೆ ಆಗುತ್ತದೆ?**

**ಉ.** ಮನಸ್ಸಿಲ್ಲದೆ ಹೋದರೆ ಏನು ತಿಳಿಯದ ನಿದ್ರೆ ಆಗುತ್ತದೆ. ಮನಸ್ಸು ಪಂಚೇಂದ್ರಿಯ ಗಳಿಗೆ ಸಂಬಂಧಿಸಿದ ವಿಷಯಗಳನ್ನು ಜ್ಞಾಪಕಕ್ಕೆ ತರುತ್ತಿದ್ದರೆ ಜಾಗ್ರತೆಯಾ ಗುತ್ತದೆ. ಪಂಚೇಂದ್ರಿಯ ವಿಷಯಗಳ ನೆನಪನ್ನು ಬಿಟ್ಟು ಶರೀರದೊಳಗಿನ ಆತ್ಮದ ಮೇಲೆ ಜ್ಞಾಪಕವನ್ನಿಟ್ಟರೆ ಯೋಗವಾಗುತ್ತದೆ. ಸಂಕಲ್ಪಗಳು ಇರುವಾಗ ಜಾಗ್ರತೆ ಆಗುತ್ತದೆ. ಸಂಕಲ್ಪಗಳು ಇಲ್ಲದಿರುವಾಗ ಯೋಗವಾಗುತ್ತದೆ. ಪೂರ್ತಿ ಜ್ಞಾಪಕ ಇಲ್ಲದೆ ಹೋಗುವ ಸ್ಥಿತಿಯನ್ನು ನಿದ್ರೆ ಆಗುವುದೆಂದು ತಿಳಿಯಬೆಕು.

**ಶ್ರೀಲತ, ಗಡಿವೇಮುಲ**

**247) ಕೆಲವರು ಆತ್ಮಹತ್ಯೆ ಮಾಡಿಕೊಂಡು ಸತ್ತುಹೋಗುತ್ತಾರೆ ಅವರು ದೆವ್ವಗಳಾಗುತ್ತಾರಂತೆ ನಿಜವೇನಾ? ಇಷ್ಟ ಇಲ್ಲದವರನ್ನು ಹಿಡಿದು ಸಾಧಿಸುತ್ತಾರಂತೆ ನಿಜವೇನಾ?**

**ಉ.** ನಿಜವೇ. ಅವರು ಅವರ ಆಯುಸ್ಸು ಪೂರ್ತಿ ಮುಗಿಯುವವರೆಗು ಸೂಕ್ಷ್ಮಶರೀರ ಅಂದರೆ 15 ಭಾಗಗಳ ಶರೀರದೊಂದಿಗೆ ಇರುತ್ತಾರೆ. ಅವರು ನಮ್ಮ ಮಧ್ಯದಲ್ಲೆ ಇರುತ್ತಾರೆ. ಆದರೆ ಅವರು ನಮಗೆ ಕಾಣಿಸುವುದಿಲ್ಲ. ಆದ್ದರಿಂದ ಅವರ ಇರುವಿಕೆ ನಮಗೆ ತಿಳಿಯದು. ಅವರ ದೃಷ್ಠಿಗೆ ನಾವು ಕಾಣಿಸುತ್ತಲೇ ಇರುತ್ತೇವೆ. ಯಾವ ಮಾತ್ರವು ಜ್ಞಾನ ಇಲ್ಲದವರಿಗೆ ಇವರು ಹಿಡಿಯಬಹುದು. ಆದರೆ ಜ್ಞಾನ ಇರುವವರಿಗೆ ಇವರು ಹಿಡಿಯುವುದಿಲ್ಲ. "ಗ್ರಹಗಳು–ವಿಗ್ರಹಗಳು" ಎನ್ನುವ ಶೀರ್ಷಿಕೆ ನಮ್ಮ ರಚನೆಗಳಲ್ಲಿನ **"ಪ್ರಬೋಧ"** ಗ್ರಂಥದಲ್ಲಿ ಓದಿದರೆ ಅವುಗಳ ವಿಷಯ ಸಂಪೂರ್ಣವಾಗಿ ಅರ್ಥವಾಗುತ್ತದೆ.

**ದಂಡಾ ಜಯರಾಮ್, ಉರವಕೊಂಡ**

**248) ಕೃಷ್ಣನು ಹುಟ್ಟಿದಾಗ ಎಲ್ಲರನ್ನು ನಿದ್ರೆಯಲ್ಲಿ ಮುಳಗಿಸಿದ್ದಾನೆಂದು ಪ್ರಾಣಿಗಳು ಸಹ**

**ನಿದ್ರೆಯಲ್ಲಿ ಮುಳಿಗಿವೆ ಎಂದು ಹೇಳುತ್ತಾರೆ. ಮತ್ತೆ ಆ ಸಮಯದಲ್ಲಿ ಕತ್ತೆ ಅರಚುವುದು ಏನು?**

ಉ. ಅದು ಮಧ್ಯರಾತ್ರಿ ಸಮಯ ಅದ್ದರಿಂದ ಎಲ್ಲರೂ ನಿದ್ರೆಯಲ್ಲಿ ಮುಳಿಗಿರುವುದು ಸಹಜವೇ. ಪ್ರಸವ ನಡೆದ ಕೂಡಲೇ ನೀನು ಕಾವಲು ಇದ್ದು ಎಚ್ಚರಿಸುತ್ತಾ ಗಟ್ಟಿಯಾಗಿ ಕೂಗೆಂದು ಕತ್ತೆಯಂತಹ ಮನುಷ್ಯನಿಗೆ ಹೇಳಿರಬಹುದು. ಹಾಗಲ್ಲದೆ ನಾಲ್ಕು ಕಾಲಿರುವ ಕತ್ತೆ ಅರಚಿದೆ ಎಂದು ನೀವು ನಂಬಿದ್ದೀರಾ.

**ವೆಂಕಟ್, ಉರವಕೊಂಡ**

**249) ವಿಯೋಗ ಅಹಂಕಾರವನ್ನು ಹೇಗೆ ನಶಿಸುವಂತೆ ಮಾಡುತ್ತದೆ?**

ಉ. ಯೋಗ ಅಹಂಕಾರವನ್ನು ನಶಿಸುವಂತೆ ಮಾಡುತ್ತದೆ ಆದರೆ ವಿಯೋಗ ಮಾಡುವುದಿಲ್ಲ. ಅದು ಸಹ ಕರ್ಮಯೋಗ ಮಾತ್ರವೇ ಅಹಂಕಾರವನ್ನು ಇಲ್ಲದ ಹಾಗೆ ಮಾಡುತ್ತದೆ.

**ಪಿ. ವೆಂಕಟರಮಣ, ಚಿಲಮಕೂರು**

**250) ಮಾನವ ಶರೀರದಿಂದ ಜೀವಿಗೆ ಮೋಕ್ಷ ಹೊಂದಬೇಕೆಂದರೆ ಪರಮಾತ್ಮನನ್ನು ಧ್ಯಾನಿಸಿದರೆ ಮೋಕ್ಷ ಬರುತ್ತದೆಯಾ?**

ಉ. ಪರಮಾತ್ಮನನ್ನು ಅಲ್ಲ. ಆತ್ಮನನ್ನು ಧ್ಯಾನಿಸಬೇಕು. ಪರಮಾತ್ಮನನ್ನು ಧ್ಯಾನಿಸುವುದಕ್ಕೆ ಆಗುವುದಿಲ್ಲ. ಭಗವಂತನನ್ನು ಧ್ಯಾನಿಸಬಹುದು ಅಥವಾ ಆತ್ಮನನ್ನು ಧ್ಯಾನಿಸಬಹುದು.

**251) ಪ್ರತಿ ಜೀವಿ ಪಾಪ ಪುಣ್ಯಗಳನ್ನು ಶರೀರದಲ್ಲಿ ಅನುಭವಿಸುತ್ತಾನಾ? ಅಥವಾ ಶರೀರ ಹೋದ ನಂತರ ಅನುಭವಿಸುತ್ತಾನಾ?**

ಉ. ಶರೀರವಿರುವಾಗಲೆ ಪಾಪ ಪುಣ್ಯಗಳು ಅನುಭವಿಸಲಾಗುತ್ತವೆ. ಶರೀರ ಹೋದ ಕೂಡಲೇ ತಿರುಗಿ ಹೊಸ ಶರೀರವನ್ನು ಧರಿಸುವುದು. ಶರೀರ ಹೋದನಂತರ ಯಮಲೋಕ ಎನ್ನುವ ಮಾತು ಅಸತ್ಯ. ಮರಣಿಸಿದ ಕ್ಷಣವೇ ಜನ್ಮ ಬರುತ್ತಿದೆ. ಆದ್ದರಿಂದ ಶರೀರದಲ್ಲಿಯೆ ಅನುಭವಿಸಬೇಕಾಗಿದೆ.

**252) ಶ್ರೀ ಮಹಾ ವಿಷ್ಣುಗೆ 10 ಅವತಾರಗಳನ್ನುತ್ತಾರೆ. ಕಲಿಯುಗದಲ್ಲಿ ಎಷ್ಟು ಅವತಾರಗಳನ್ನು ಎತ್ತಿದ್ದಾನೆ?**

**ಉ.** ವಿಷ್ಣು ಶಿವನು ಎನ್ನುವವು ಪುರಾಣಗಳು, ಶಾಸ್ತ್ರಗಳಲ್ಲ. ಯೋಗ ಶಾಸ್ತ್ರದ ಪ್ರಕಾರ **"ದ್ವೌ ಭೂತ ಸರ್ಗೌ ಲೋಕೇಸ್ಮಿನ್ ದೈವ ಅಸುರ ಏವಚ"** ಎನ್ನುವಹಾಗೆ ಭೂಮಿ ಮೇಲೆಯೇ ಎರಡು ವಿಧದ ಜೀವರಾಶಿಗಳು ಉದ್ಭವಿಸುತ್ತಿವೆ. ಅ ಎರಡು ವಿಧದ ಹೆಸರುಗಳು ದೇವತೆಗಳು, ರಾಕ್ಷಸರು. ಮಾನವರಲ್ಲಿಯೇ ಗುಣಗಳನ್ನು ಅನುಸರಿಸಿ ದೇವತೆಗಳು ರಾಕ್ಷಸರೆನ್ನುವವರು ಇದ್ದಾರೆ, ಭೂಮಿ ಮೇಲೆಯೆ ಎಲ್ಲಾ ಲೋಕಗಳಿವೆ. ಯಾರ ಲೋಕ ಅವರದೆಂದು ನಾವು ಎಷ್ಟೋ ಸಂದರ್ಭಗಳಲ್ಲಿ ಅವರವರ ಧ್ಯಾಸಗಳನ್ನನು ಸರಿಸಿ ಹೇಳುತ್ತಿರುತ್ತೇವೆ. ನಮ್ಮ ಮಾತುಗಳು ಸ್ವಲ್ಪ ವಿರುದ್ಧವಾಗಿದ್ದರೂ ಯಥಾರ್ಥ ಸತ್ಯಗಳು. ಈ ಮಾತುಗಳು ಶಾಸ್ತ್ರಬದ್ಧವಾದವು. ಆದ್ದರಿಂದ ವಿಷ್ಣು ಅವತಾರಗಳು ಎನ್ನುವ ವಿಷಯವನ್ನು ಬಿಟ್ಟು ಪರಮಾತ್ಮ, ಆತ್ಮ, ಜೀವಾತ್ಮ ಎನ್ನುವ ಜ್ಞಾನವನ್ನು ತಿಳಿದುಕೊಳ್ಳಬೇಕೆಂದು ಕೋರುತ್ತಿದ್ದೇವೆ.

**ಕೆ. ಸೋಮಪ್ಪ, ಯರ್ರಗುಂಟ್ಲ**

**253)** ***ದಂಭೋ ದರ್ಪೋ಼ಭಿ ಮಾನಶ್ಚ ಕ್ರೋದಃ ಪಾರುಷ್ಯ ಮೆಮಚ***
***ಅಜ್ಞಾನಂ ಚಾಭಿ ಜಾತಸ್ಯ ಪಾರ್ಥ! ಸಮ್ಪದಮಾಸುರೀಮ್***

**ಈ ಶ್ಲೋಕಕ್ಕೆ ಸರಿಯಾದ ಅರ್ಥ ನೀವು ಯಾವ ವಿಧವಾಗಿ ತಿಳಿಸುವಿರೋ ತಿಳಿದು ಕೊಳ್ಳಬೇಕೆಂದು ಇದೆ.**

**ಉ.** ಮೇಲಿನ ಶ್ಲೋಕದಲ್ಲಿ ಅರ್ಥ ಬಹಳ ಸುಲಭವಾಗಿ ಎಲ್ಲರಿಗೂ ಅರ್ಥವಾಗುವ ಹಾಗೆ ಇದೆ. ಆದರೆ ನೀವು ಪ್ರತ್ಯೇಕಿಸಿ ಕೇಳಿದ್ದೀರ ಅದ್ದರಿಂದ ತಿಳಿಸುತ್ತಿದ್ದೇವೆ. ದಂಬ, ದರ್ಪ, ಕಠಿಣತ್ವ, ಕ್ರೋಧಾಭಿ ಮಾನಗಳು, ಅಜ್ಞಾನ ಮೊದಲಾದವು ಭೂಮಿಯ ಮೇಲೆ ರಾಕ್ಷಸ ಜಾತಿಗೆ ಸೇರಿದ ಮನುಷ್ಯರಿಗೆ ಇರುವವೆಂಬ ಭಾವ. ಮುಖ್ಯವಾಗಿ ತಿಳಿದು ಕೊಳ್ಳಬೇಕಾಗಿರುವುದು ಏನೆಂದರೆ! ದೇವತಾ ಗುಣಗಳಿಗು, ರಾಕ್ಷಸ ಗುಣಗಳಿಗು ಸಂಬಂಧವಿಲ್ಲದ ಯೋಗಿಗಳಿಗೆ ಮೇಲಿನ ಶ್ಲೋಕವೊಂದರ ಭಾವ ವರ್ತಿಸುವುದಿಲ್ಲ. ಗುಣಗಳಿಂದ ಕರ್ಮ ಅಂಟಿಕೊಳ್ಳುವವರಿಗೆ ಮಾತ್ರವೇ ಒಳ್ಳೆದು ಕೆಟ್ಟದು, ಪಾಪ ಪುಣ್ಯ, ದೇವತ ರಾಕ್ಷಸ ಎನ್ನುವ ನಿರ್ಣಯ ಯೋಗಶಾಸ್ತ್ರ ರೀತ್ಯಾ ಏರ್ಪಟ್ಟಿದೆ. ಅದೇ ಶಾಸ್ತ್ರದಲ್ಲಿ ಕರ್ಮ ಯೋಗಿಗಳಿಗೆ ಗುಣ ಸಂಬಂಧವಿದ್ದರು ಕರ್ಮ ಅಂಟುವುದಿಲ್ಲವೆಂದು ತಿಳಿಸಲಾಗಿದೆ. ಗುಣಗಳ ಫಲಿತವಾದ ಕರ್ಮ ಅಂಟದವರು ಗುಣಾತೀತರು. ಗುಣಗಳಿಂದ ಕೆಲಸ ಮಾಡುತ್ತಿದ್ದರು ಅದಕ್ಕೆ ಅತೀತವಾಗಿ ಇರಿಸುವುದು ಕರ್ಮಯೋಗ. ಯಾವ ಶ್ಲೋಕ

ಯಾರಿಗೆ ವರ್ತಿಸುತ್ತದೆನ್ನುವುದು ಮುಖ್ಯವಾಗಿ ತಿಳಿಯಬೇಕಾಗಿದೆ. ಹಾಗಲ್ಲದೇ ಹೋದರೆ ದೈವಾಸುರ ಸಂಪದ್ವಿ ಭಾಗ ಯೋಗದಲ್ಲಿ 19ನೇ ಶ್ಲೋಕದಲ್ಲಿ ಕೆಟ್ಟವರನ್ನು, ಕ್ರೂರರನ್ನು, ಅಧಮ ಜನ್ಮಗಳಲ್ಲಿ ಸಿಲುಕುವಹಾಗೆ ಮಾಡುತ್ತೇನೆಂದು ಹೇಳಿದ ಕೃಷ್ಣನಿಗೂ ಸಹ ಕೋಪ ಇರುವಹಾಗೆ, ಅಸುರ ಗುಣಗಳಿದ್ದಹಾಗೆ, ಆತನು ಸಹ ಅಸುರ ಜಾತಿಗೆ ಸೇರಿದವನಾಗಿ ಲೆಕ್ಕಿಸಬಹುದು. ಆತನಿಗೇ ಅಲ್ಲ. ಮುಕ್ಕೋಪಿ ಎಂದು ಹೆಸರಾಗಿದ್ದ ದುರ್ವಾಸ, ವಿಶ್ವಾಮಿತ್ರ ಮೊದಲಾದವರು ಕೋಪದಿಂದ ಶಾಪಗಳನ್ನು ಕೊಟ್ಟ ಎಷ್ಟೋ ದೊಡ್ಡವರನ್ನು ಸಹ ಅಸುರ ಜಾತಿಗೆ ಲೆಕ್ಕಿಸಲಾಗಿದೆ. ಹಾಗಲ್ಲದೆ ಈ ಶ್ಲೋಕ ಕರ್ಮಗಳು ಅಂಟುವ ಮನುಷ್ಯರಿಗೆ ಹೇಳಿರುವುದೆಂದು ಕರ್ಮಗಳನ್ನು ತಮ್ಮ ಜ್ಞಾನಾಗ್ನಿಯಿಂದ ಭಸ್ಮ ಮಾಡುವ ಯೋಗಿಗಳಿಗೆ ಅಲ್ಲವೆಂದು ತಿಳಿಯಬೇಕು.

**ರಾಮು, ಕರ್ನೂಲ್**

**254) ಭರ್ತ (ಗಂಡ) ಎಂದರೆ ಭರಿಸುವವನೆಂದು ತಾನೆ ಅರ್ಥ. ಗಂಡ ಹೆಂಡತಿ ಇಬ್ಬರು ಕರ್ಮ ಜೀವಿಗಳಾಗಿ ಭೂಮಿ ಮೇಲೆ ಬಂದಿರುವಾಗ ಭರ್ತ (ಗಂಡ) ಹೇಗೆ ಭರಿಸುತ್ತಾನೆ?**

**ಉ.** ಭರಿಸುವವನು ಭರ್ತ ರನ್ನುವ ಮಾತು ನಿಜವೇ, ಸರ್ವ ಜೀವಿಗಳನ್ನು ಭರಿಸುವವನು ದೇವರೇ. ಆದ್ದರಿಂದ ಆತನೆ ಎಲ್ಲರಿಗೂ ನಿಜವಾದ ಭರ್ತ (ಗಂಡ), ಸ್ತ್ರೀಯರಿಗು ಪುರುಷರಿಗು ದೇವರೆ ಭರ್ತ (ಗಂಡ). ಬಾಹ್ಯ ದೃಷ್ಟಿಯಲ್ಲಿ ಶರೀರಕ್ಕೆ ಊಟ ಇಟ್ಟು ಪೋಷಿಸಿ ಭರಿಸುವವನು ಪುರುಷನಾದ್ದರಿಂದ ಭರ್ತ (ಗಂಡ) ಎನ್ನುತ್ತಿದ್ದೇವೆಂದು, ಗಂಡಸರಿಂದ ಭರಿಸಲ್ಪಡುವ ಸ್ತ್ರೀಯನ್ನು ಹೆಂಡತಿ ಎಂದು ಕರೆಯುತ್ತಿದ್ದೇವೆಂದು ಕೆಲವರು ಹೇಳುತ್ತಿದ್ದಾರೆ. ಭರಿಸುವವರು ಭರ್ತ, ಭರಿಸಲ್ಪಡುವವರು ಹೆಂಡತಿಯರೆಂಬ ಸೂತ್ರದ ಪ್ರಕಾರವಾದರೆ ಕೆಲವರು ಗಂಡಸರು ಮನೆಯಲ್ಲಿ ಕೂತಿದ್ದರೆ, ಅವರ ಸತೀಮಣಿಯರಾದ ಅವರೇ ಅವರನ್ನು ಪೋಷಿಸಿ ಭರಿಸುತ್ತಿದ್ದಾರೆ. ಆಗ ಸೂತ್ರದ ಪ್ರಕಾರ ಆ ಸತೀಮಣಿಯರನ್ನೆ ಪತಿಗಳೆನ್ನಬೇಕು, ಪತಿಗಳನ್ನೆ ಹೆಂಡತಿಯರು ಎನ್ನಬೇಕು. ಬಾಹ್ಯ ದೃಷ್ಟಿಯಿಂದ ಪತಿ ಎನ್ನುವ ಪದ ಗಂಡಸರಿಗೆ ಅಂಟಿಸಿಕೊಂಡರು, ಸೂತ್ರದ ಪ್ರಕಾರ ಒಂದೊಂದು ಸಲ ಅರ್ಥ ತಲೆಕೆಳಗಾಗುತ್ತೆ. ಆದ್ದರಿಂದ ಪೂರ್ವದಲ್ಲಿ ಪರಮಾತ್ಮನನ್ನು ಭರ್ತ(ಪತಿ) ಎಂದು, ಪ್ರಕೃತಿಯನ್ನು ಭಾರ್ಯ(ಪತ್ನಿ) ಎಂದು ಕರೆಯುತ್ತಿದ್ದರು. ತಾಳಿ ಕಟ್ಟಿದವರನ್ನು "ಪತಿ" ಎಂದು ಕಟ್ಟಿಸಿಕೊಂಡವರನ್ನು "ಸತಿ" ಎಂದು ಕರೆಯುತ್ತಿದ್ದರು. ಕಾಲ ಕ್ರಮೇಣ 'ಸತಿ ಪತಿಗಳು" ಭಾರ್ಯ ಭರ್ತರಾಗಿದ್ದಾರೆ

**ಬಿ. ರವೀಂದ್ರ ರೆಡ್ಡಿ, ಚೆನ್ನೇಕೊತ್ತಪಲ್ಲಿ**

**255) ರಾವಣಾಸುರನಿಗೆ ಹತ್ತು ತಲೆಗಳಿವೆಯೆಂದು ರಾಮಾಯಣದಲ್ಲಿ ಬರೆದಹಾಗೆ ಇದೆ. ಹಾಗೆ ಇವೆಯಾ?**

ಉ. ನಾವು ಮಾತಿನ ಸಂದರ್ಭದಲ್ಲಿ ಬುದ್ದಿವಂತನ ಬಗ್ಗೆ ಇವನದು ದೊಡ್ಡ ಬುರಡೆ ಎಂದೋ ಅಥವಾ ಇವನದು ದೊಡ್ಡ ತಲೆಕಾಯ ಎಂದೊ ಕರೆಯುತ್ತಿರುತ್ತೇವೆ. ದೊಡ್ಡ ಬುರಡೆ, ತಲೆ ಎಂದು ಹೇಳಿದಷ್ಟು ಮಾತ್ರಕ್ಕೆ ಅವನಿಗೆ ನಿಜವಾಗಿ ತಲೆ ದಪ್ಪದಾಗಿ ಇರುವುದಿಲ್ಲ ಅಲ್ಲವೆ! ಹಾಗೇ ರಾವಣಾಸುರನಿಗೆ ಹತ್ತು ತಲೆಗಳೆಂದಿದ್ದಾರೆ. ಹತ್ತು ಜನರಿಗಿರುವ ಬುದ್ಧಿವಂತಿಕೆ ಆತನಿಗೊಬ್ಬನಿಗಿದೆಯೆಂದು ಆದರೆ ಹತ್ತು ತಲೆಗಳು ಇಲ್ಲವೆಂದು ಅದರ ಅರ್ಥ. ಹಾಗೆ ಹತ್ತು ತಲೆಗಳಿದ್ದರೆ ಆತ ಸರಿಯಾಗಿ ಮಲಗಿ ಸರಿಯಾಗಿ ಏಳಬೇಕಾಗುತ್ತದೆ. ಈಕಡೆ ಆಕಡೆ ತಿರುಗುವುದಕ್ಕು ಸಹ ತಲೆಗಳು ಸಹಕರಿಸುವುದಿಲ್ಲ. ಒಂದು ತಲೆ ಇರುವ ನಮಗೇ ಹಲ್ಲುಜ್ಜಲು, ಮುಖ ತೊಳಿಯಲು, ಎಣ್ಣೆ ಹಚ್ಚಿ ತಲೆ ಬಾಚಿಕೊಳ್ಳಲು ಕನಿಷ್ಠ ಎಂದರೆ ಅರ್ಧ ಗಂಟೆ ಬೇಕಾಗುತ್ತದೆ. ಇನ್ನು ಹತ್ತು ತಲೆಗಳ ರಾವಣನಿಗೆ ಐದು ಗಂಟೆ ಬೇಕಾಗುತ್ತದೆ. ಉಳಿದ ಕೆಲಸಗಳು ಆತನು ಯಾವಾಗ ಮಾಡಿಕೊಳ್ಳಬೇಕು? ಆದ್ದರಿಂದ ಆತನಿಗೆ ನಮ್ಮಂತೆ ಒಂದು ತಲೆಯೇ ಹೊರತು ಹತ್ತು ತಲೆ ಇಲ್ಲವೆಂದೇ ತಿಳಿಯಬೇಕು.

**256) ತ್ರೇತಾ ಯುಗದಲ್ಲಿ ಶ್ರೀ ರಾಮನು ಭಗವಂತನೆಂದು ಕೆಲವರ ವಾದ ಅದು ನಿಜವೇನಾ?**

ಉ. ಶ್ರೀ ರಾಮನು ವಿಷ್ಣುವಾಂಶ ಹೊಂದಿದವನೆ ಆದರೆ ಭಗವಂತನಲ್ಲ. ಪರಮಾತ್ಮ ಅಂಶ ದಿಂದ ಹುಟ್ಟಿದವನನ್ನೇ ಭಗವಂತನೆಂದು ತಿಳಿಯಬೇಕು.

**ಗಡುಗು ಕೃಷ್ಣಮೂರ್ತಿ, ಬನಗಾನ ಪಲ್ಲಿ**

**257) ಸ್ವಾಮಿ! ನಾಲ್ಕು ಯುಗಗಳಿಗೆ ಯಾವುದು ಮೊದಲು? ದೇವರ ಹಗಲು ಎಷ್ಟು ಯುಗಗಳು, ರಾತ್ರಿ ಎಷ್ಟು ಯುಗಗಳು ತಿಳಿಸಲು ಪ್ರಾರ್ಥನೆ.**

ಉ. ನಾಲ್ಕು ಯುಗಗಳಲ್ಲಿ ಮೊದಲನೆಯದು ಕೃತಯುಗ. ಪರಮಾತ್ಮನಿಗೆ ಹಗಲು ಸಾವಿರ ಯುಗಗಳು, ಹಾಗೇ ರಾತ್ರಿಯು ಸಹ ಸಾವಿರ ಯುಗಗಳು ಇವೆ. ಪರಮಾತ್ಮನ ಹಗಲು ಮಾತ್ರವೇ ನಮಗೆ 108 ಕೋಟಿ ಸಂವತ್ಸರಗಳೆಂದು ತಿಳಿಯಬೇಕು.

**ಎ.ಜಿ. ರವಿ, ಚಿತ್ತೂರು**

**258) ಅಕಸ್ಮಾತಾಗಿ ಮರಣಿಸಿದವರಿಗೆ ಅವಸಾನದಶ ಬರುತ್ತದೆಯಾ?**

ಉ. ಅಕಸ್ಮಾತ್ತಾಗಿ ಮರಣಿಸುವವರಿಗೆ ಅವಸಾನ ದಶ ಇಲ್ಲ. ಅವರಿಗೆ ಸೂಕ್ಷ್ಮ ಶರೀರದಲ್ಲಿ ಮರಣವಾಸನ್ನವಾದಾಗ ಅವಸಾನ ದಶ ಬರುತ್ತದೆ.

**ಟಿ. ಸತ್ಯಗೋಪಾಲಾಚಾರ್ಯರು, ನರಸಾಪುರಂ**

**259) ಪ್ರಳಯ ಕಾಲದಲ್ಲಿ ಪ್ರಪಂಚವಿದೆಯಾ ಇಲ್ಲವಾ?**

ಉ. ಪಂಚ ಭೂತಗಳು ಇಲ್ಲದಂತೆ ಹೋಗುವುದೇ ಪ್ರಳಯ ಆದ್ದರಿಂದ ಆಗ ಪ್ರಪಂಚವಿಲ್ಲ.

**260) ಭಗವಂತನ ಸ್ವರೂಪ ಬೆಳೆಯುವುದು ಇಳಿಯುವುದು ದಪ್ಪ ಆಗುವುದು ತೆಳುವಾಗುವುದು ಮೊದಲಾದ ಬದಲಾವಣೆಗಳಿರುತ್ತವಾ?**

ಉ. ಶರೀರ ಧರಿಸಿದಾಗಲೇ ತಾನೆ ಭಗವಂತನೆನ್ನುವುದು. ಪದ್ಧತಿ ಪ್ರಕಾರ ಭಗವಂತನ ಶರೀರಕ್ಕೂ ಸಹ ಬೆಳೆಯುವುದು ಇಳಿಯುವುದು ಇರುತ್ತದೆ. ಭಗವಂತನಿಗೂ ಸಹ ಕರ್ಮ ಇರುತ್ತದೆ ಆದ್ದರಿಂದ ಎಲ್ಲಾ ಇರುತ್ತವೆಂದು ಹೇಳಬಹುದು.

**261) ದ್ವಿಜ ಪುರುಷರಿಗೆ ಅಲ್ಲದೆ ಸ್ತ್ರೀಯರಿಗು ಶೂದ್ರರಿಗು ಉಪನಯನ ಸಂಸ್ಕಾರಗಳು ಸಂಧ್ಯಾವಂದನೆ ವೇದಾಧ್ಯಾಯನ ಸರ್ವ ಕರ್ಮಗಳು ಆಚರಿಸುವುದಕ್ಕೆ ಹಕ್ಕು ಇದೆಯಾ?**

ಉ. ಎಲ್ಲರಿಗೂ ಹಕ್ಕು ಇದೆ. ದೇವರ ದೃಷ್ಠಿಯಲ್ಲಿ ಎಲ್ಲರೂ ಸಮಾನರೆ.

**ಆರ್. ರಂಗಸ್ವಾಮಿ, ಹಿಂದೂಪುರಮು**

**262) ಮನುಷ್ಯ ಸತ್ತುಹೋದ ಮೇಲೆ ಕಾಗೆಗೇ ಪಿಂಡಕೂಳು ಏಕೆ ಇಡಬೇಕು? ಉಳಿದ ಪಕ್ಷಿಗಳಿಗೆ ಏಕೆ ಇಡಬಾರದು?**

ಉ. ಅನ್ನವನ್ನು ಎಲ್ಲಾ ಪಕ್ಷಿಗಳು ತಿನ್ನುವುದಿಲ್ಲ. ಅನ್ನವನ್ನು ತಿನ್ನುವ ಅಭ್ಯಾಸ ಕಾಗೆಗೆ ಮಾತ್ರವೇ ಹೆಚ್ಚಾಗಿ ಇದೆ. ಮೇಲಾಗಿ ಸ್ಮಶಾನಕ್ಕೆ ಹಾರಿ ಬರುವುದು ಅದು ಒಂದೇ ಆದ್ದರಿಂದ ಅದೇ ತಿನ್ನುತ್ತಿದೆ. ಆದರೆ ಇತರ ಪಕ್ಷಿಗಳಿಗೆ ಇಡಬಾರದೆಂದು ಏನೂ ಇಲ್ಲ. ಸ್ಮಶಾನಕ್ಕೆ ಕೋಳಿಯನ್ನು ತೆಗೆದುಕೊಂಡುಹೋದರು ಅವು ಸಹ ಪಿಂಡಕೂಳನ್ನು ತಿನ್ನುತ್ತವೆ.

**ಷರೀಫ್ ಖಾನ್, ಯಾಡಿಕಿ**

**263) ಕೆಲವರು ದೇವತೆಗಳ ಮಹತ್ವಗಳನ್ನು ಪ್ರಚಾರ ಮಾಡುತ್ತಾ ನಮಗೆ ಕರಪತ್ರಗಳನ್ನು ಕಳಿಸಿದ್ದಾರೆ. ಆ ಪತ್ರಗಳನ್ನು ನೋಡಿದ ನಾವು ಸಹ ಹಾಗೇ ಕರಪತ್ರಗಳನ್ನು ಅಚ್ಚು ಹಾಕಿ ಕೆಲವರಿಗೆ ಕಳುಹಿಸಬೇಕೆಂದು ಅದರಲ್ಲಿ ನಿಬಂಧನೆ ಇದೆ. ಹಾಗೆ ಮಾಡುವುದು ಸರಿಯೇನಾ? ಅದರ ಮೇಲೆ ನಿಮ್ಮ ಉದ್ದೇಶ ತಿಳಿಸಿ?**

ಉ. ಇಂತಹ ಕರಪತ್ರಗಳು ಬಹಳ ಸಲ ನಾವು ನೋಡಿದ್ದೇವೆ. ಅದರಲ್ಲಿ ದೈವಿಕವಾಗಿ ಮುಂದಕ್ಕೆ ಹೋಗುವ ಮಾರ್ಗ ಏನು ಇಲ್ಲದೆ ಹೋಗುವುದಲ್ಲದೆ ಸ್ವಾರ್ಥ ಆಸೆ ಹೊರತು ಏನು ಕಾಣಿಸುತ್ತಿಲ್ಲ. ಆದ್ದರಿಂದ ಹಾಗೆ ಮಾಡುವುದು ಕೆಲವರಿಗೆ ಇಷ್ಟವಾದರು ನಮಗೆ ಮಾತ್ರ ಇಷ್ಟವಾಗುವುದಿಲ್ಲ. ಆ ಕೆಲಸ ಮಾಡದಿದ್ದರಿಂದ ಬರುವ ನಷ್ಟ ಕಷ್ಟ ಏನು ಇರುವುದಿಲ್ಲ.

**ಯಸ್.ಯನ್. ಬಾಷ, ನಂದಿವರ್ಗಮು**

**264) ಕೊಟ್ಟಿರುವ ಪ್ರತಿ ಪ್ರಶ್ನೆಗು ಪ್ರತಿಯೊಬ್ಬರಿಗೂ ನೇರವಾಗಿ ಸಮಾಧಾನವನ್ನು ಕೊಡುತ್ತಿದ್ದೀರಾ. ಆದ್ದರಿಂದ ನಿಮ್ಮ ಕಳೆದ ಜೀವನದ ಬಗ್ಗೆ ತಿಳಿದುಕೊಳ್ಳುವುದು ನಿಮಗೇನಾದರು ಅಭ್ಯಂತರವೇ?**

ಉ. ಕಳೆದ ಜೀವನವನ್ನು ಮುಚ್ಚಿಡುವುದರಲ್ಲಿ ಲಾಭವಿಲ್ಲ, ಆದ್ದರಿಂದ ನಮಗೇನು ಅಭ್ಯಂತರವಿಲ್ಲ. ನಾನು ಎಲ್ಲರಂತೆ ಹುಟ್ಟಿದವನೆ. ಎಲ್ಲರಹಾಗೆ ಕಷ್ಟ ನಷ್ಟಗಳು ಸುಖ ದುಃಖಗಳು ಅನುಭವಿಸಿದವನೇ, ಹೆಂಡತಿ ಮಕ್ಕಳೊಂದಿಗೆ ನಿಮ್ಮಂತೆ ಸಂಸಾರದಲ್ಲಿ ಇರುವವನೆ, ಒಟ್ಟಿನಲ್ಲಿ ಪ್ರಪಂಚಪರವಾಗಿ ನಿಮಗು ನಮಗು ಏನು ವ್ಯತ್ಯಾಸವಿಲ್ಲ.

**265) ನೀವು ಏನು ಓದಿಕೊಂಡಿದ್ದೀರಿ?**

ಉ. ನಾವು ಪ್ರಪಂಚ ಓದುಗಳಾದ ಡಿಗ್ರೀ ಓದಿಲ್ಲ. ಅದರೆ ಪರಮಾತ್ಮ ಓದಾದ ಬ್ರಹ್ಮ ವಿದ್ಯೆಯನ್ನು ಯಾರು ಊಹಿಸಲಾರದಷ್ಟು ಓದುಕೊಂಡಿಲ್ಲ. ಎಲ್ಲೂ ಕೇಳಲಿಲ್ಲ ಆದರೆ ಹೇಳಲಾರದಷ್ಟು ಕಲಿತಿದ್ದೇನೆ.

**266) ನಿಮಗೆ ಹೆಂಡತಿ ಮಕ್ಕಳು ಇಲ್ಲವಾ? ನಿಮ್ಮ ವಯಸ್ಸು ಎಷ್ಟು?**

ಉ. ಏಕೆ ಇಲ್ಲ ನಾಲ್ಕು ಜನ ಕುಮಾರರು ಸಹ ಇದ್ದಾರೆ. ನನ್ನ ವಯಸ್ಸು 2002 ಏಪ್ರಿಲ್ 5ನೇ ತಾರೀಖಿಗೆ 51 ದಾಟಿ 52 ಕ್ಕೆ ಸೇರಿದೆ.

**267) ನಿಮಗೆ ತಾಯಿ ತಂದೆ ಇಟ್ಟಿರುವ ಹೆಸರೇನು? ನೀವು ಇಂತಹ ಜ್ಞಾನದ ಬಗ್ಗೆ ಹೇಗೆ ಹೇಳುತ್ತಿದ್ದೀರಿ.**

ಉ. ತಾಯಿ ತಂದೆಯರು ಇಟ್ಟಿರುವ ಹೆಸರು ಪೆದ್ದನ್ನ. ಗುರುವು ಇಟ್ಟಿರುವ ಹೆಸರು ನಿಮಗೆ ಗೊತ್ತು ಅಲ್ಲವೆ! ಶ್ರದ್ದೆಯನ್ನನುಸರಿಸಿ ಜ್ಞಾನ, ಆಚರಣೆಯನ್ನು ಅನುಸರಿಸಿ ಅನುಭವ ಬರುತ್ತದೆ. ಆ ಎರಡು ನಮ್ಮಲ್ಲಿವೆ. ಅದ್ದರಿಂದ ಅನುಭವವಾದ ಜ್ಞಾನವನ್ನು ನಿಮಗೆ ನಾವು ಹೇಳಿತ್ತಿದ್ದೇವೆ.

**268) ಕೈಯಲ್ಲಿರುವ ರೇಖೆಗಳು ಮನುಷ್ಯನ ಭವಿಷ್ಯವನ್ನು ನಿರ್ಣಯಿಸುತ್ತವಾ?**

ಉ. ಪ್ರಪಂಚದಲ್ಲಿ ಎಷ್ಟೋ ವಿಧದ ಅನುಭವಗಳು ಜೀವನ ನಡತೆಗಳುಳ್ಳವರಿದ್ದಾರೆಂದು ನಮಗೆ ಚೆನ್ನಾಗಿ ತಿಳಿದಿದೆ ಅಲ್ಲವೆ! ಅಷ್ಟು ವಿಧಗಳಾಗಿ ಕೈಯಲ್ಲಿ ರೇಖೆಗಳಿವೆಯಾ? ಇಲ್ಲ. ರೇಖೆಗಳನ್ನನುಸರಿಸಿ ಜೀವನಗಳಿದ್ದರೆ ಎಲ್ಲರ ಕೈಯಲ್ಲೂ ಸ್ವಲ್ಪ ಭೇದಗಳಿರುವ ರೇಖೆಗಳೇ ಇವೆ. ಆದ್ದರಿಂದ ಸ್ವಲ್ಪ ವಿಧದ ಭೇದಗಳಿರುವ ಜೀವನಗಳೇ ಭೂಮಿ ಮೇಲೆ ಇರಬೇಕು. ಹಾಗೆ ಇಲ್ಲ ಅಲ್ಲವೆ! ಎಷ್ಟೋ ವಿಧದ ಮನುಷ್ಯರ ಜೀವನಗಳಿವೆ. ಆದ್ದರಿಂದ ಕೈ ರೇಖೆಗಳನ್ನನುಸರಿಸಿ ಭವಿಷ್ಯತ್ ಇರುವುದಿಲ್ಲ. ಭವಿಷ್ಯತ್ತೆಲ್ಲಾ ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ನವಗ್ರಹಗಳನ್ನನುಸರಿಸಿ ನಿರ್ಣಯಿಸಲಾಗುತ್ತದೆ.

**269) ಮನುಷ್ಯನ ಪಾಪ ಬಹಳ ಶಕ್ತಿಶಾಲಿ ದಶೆಯಲ್ಲಿರುವಾಗ ಮನುಷ್ಯ ಜಂತುವಾಗಿ ಹುಟ್ಟುತ್ತಾನಾ?**

ಉ. ಕರ್ಮದಿಂದ ಜನ್ಮಗಳು ಆದ್ದರಿಂದ ಪಾಪ ಹೆಚ್ಚಾಗಿದ್ದಾಗ ಮನುಷ್ಯನು ಪ್ರಾಣಿ ಯಾಗಿ, ಪುಣ್ಯ ಇದ್ದಾಗ ಪ್ರಾಣಿಯು ಮನುಷ್ಯನಾಗಿ ಹುಟ್ಟಬಹುದು. ಆದರೆ ಮನುಷ್ಯ ಜನ್ಮಕ್ಕಿಂತಲೂ ಪ್ರಾಣಿಜನ್ಮ, ಪ್ರಾಣಿ ಜನ್ಮಕ್ಕಿಂತಲೂ ವೃಕ್ಷಜನ್ಮ ದೇವರಿಗೆ ಹತ್ತಿರವಾಗಿವೆ ಎಂದು ತಿಳಿಯಬೇಕು.

**270) ಕೆಲವರು ಹೆಣ್ಣು ಗಂಡು ಅಂಧವಿಕಾರದೊಂದಿಗೆ ಬಹಳ ಮಾನಸಿಕ ವ್ಯಥೆ ಪಡುತ್ತಿರುತ್ತಾರೆ. ಇವರು ಕಳೆದ ಜನ್ಮಗಳಲ್ಲಿ ಶಿಕ್ಷಾರ್ಹರಾ?**

ಉ. ಕಳೆದ ಜನ್ಮಗಳಲ್ಲಿ ಮಾಡಿಕೊಂಡ ಪಾಪವನ್ನನುಸರಿಸಿ ಈ ಜನ್ಮದಲ್ಲಿ ಶಿಕ್ಷಾರ್ಹರಾಗಿ ಕಷ್ಟವನ್ನು ಅನುಭವಿಸುತ್ತಿದ್ದಾರೆ.

**ಯಮ್. ರಾಬಿಯಾಬಿ (ಬಿ.ಪಿ.ಸಿ), ಬಿಯ್ಯೇಡು**

**271) ಈ ಕೆಳಗಿರುವ ಶ್ರೀ ವೇಮನ ಅವರ ಪದ್ಯದಲ್ಲಿ ಅಂತರಾರ್ಥವೇನೋ ತಿಳಿಸಲು ಪ್ರಾರ್ಥನೆ.**

**ಎಕ್ಕಡದೊಳಗಿನ ಕಲ್ಲು ಕಿವಿಯೊಳಗಿನ ಗುಂಗಾರಿ**
**ಕಣ್ಣಿನೊಳಗಿನ ಕಸ ಕಾಲೊಳಗಿನ ಮುಳ್ಳು**
**ಮನೆಯೊಳಗಿನ ಕಾಟ ಇಷ್ಟಿಷ್ಟಲ್ಲಯ್ಯ**
**ವಿಶ್ವದಾಭಿ ರಾಮ ವಿನುರ ವೇಮಾ.**

**ಉ. ಭಾವಾರ್ಥ :** ಮನುಷ್ಯನ ಶರೀರದೊಳಗೆ ಜೀವಿಯು ನಿವಾಸವಿದ್ದಾನೆ. ಒಳಗಿರುವ ಜೀವಿಗೆ ಹೊರಗಿನ ಇಂದ್ರಿಯಗಳಿಂದ ಪ್ರಪಂಚ ವಿಷಯಗಳು ತಿಳಿಯುತ್ತಿವೆ. ಇಂದ್ರಿಯಗಳು ಮನಸ್ಸಿನಿಂದ ಪ್ರತಿ ವಿಷಯವನ್ನು ಜೀವಿಗೆ ಸೇರಿಸುತ್ತಿವೆ. ಆ ವಿಧವಾಗಿ ವಿಷಯಗಳನ್ನು ಸೇರಿಸುವ ಇಂದ್ರಿಯ ಭಾಗಗಳು ಐದು ಮಾತ್ರ ಇವೆ. ಅವುಗಳನ್ನೆ ಜ್ಞಾನೇಂದ್ರಿಯ ಗಳೆನ್ನುತ್ತಿದ್ದೇವೆ. ಅವು 1. ಕಣ್ಣು, 2. ಕಿವಿ, 3. ಮೂಗು, 4. ನಾಲಿಗೆ, 5. ಚರ್ಮ. ಪಂಚ ಜ್ಞಾನೇಂದ್ರಿಯಗಳಿಂದ ಬರುವ ವಿಷಯಗಳನ್ನು ಅನುಭವಿಸುತ್ತಾ, ಜೀವಿಯು ನಿರಂತರವಾಗಿ ಕರ್ಮವನ್ನು ಅನುಭವಿಸುತ್ತಾ, ಜೇನಿನಲ್ಲಿ ಸಿಲುಕಿದ ನೊಣದಂತೆ ಒದ್ದಾಡುತ್ತಿದ್ದಾನೆ. ಪಂಚೇಂದ್ರಿಯಗಳ ವಿಷಯಗಳು, ಸುಖವನ್ನು ತೋರಿಸಿ ಕಷ್ಟವನ್ನು ಉಂಟುಮಾಡುತ್ತವೆ. ಜೀವಾತ್ಮ ಪಂಚೇಂದ್ರಿಯ ವಿಷಯ ವಾಸನೆಗಳಿಗೆ ಒಳಗಾಗಿ ಕರ್ಮಗಳನ್ನು ಸಂಪಾದಿಸಿ ಕೊಳ್ಳುತ್ತಿದ್ದಾನೆ.

ಚರ್ಮ ಸ್ಪರ್ಶದಿಂದ ಬರುವ ಕರ್ಮವನ್ನು ಎಕ್ಕಡದೊಳಗಿನ ಕಲ್ಲು ಎಂದಿದ್ದಾರೆ. ಕಿವಿ ಶಬ್ದ ವಿಷಯದಿಂದ ಬರುವ ಕರ್ಮವನ್ನು ಕಿವಿಯೊಳಗಿನ ಗುಂಗಾರಿ ಎಂದಿದ್ದಾರೆ. ಕಣ್ಣಿನ ದೃಷ್ಯ ವಿಷಯದಿಂದ ಬರುವ ಕರ್ಮವನ್ನು ಕಣ್ಣೊಳಗಿನ ಕಸ ಎಂದಿದ್ದಾರೆ. ಇಂದ್ರಿಯ ವಿಷಯಗಳು ಮನಸ್ಸಿನಿಂದಲೇ ಅನುಭವಕ್ಕೆ ಬರುತ್ತವೆ. ಆದ್ದರಿಂದ ಮನಸ್ಸನ್ನು ಮುಳ್ಳು ಎಂದು ವರ್ಣಿಸಿದ್ದಾರೆ. ಶರೀರದಲ್ಲಿ ಎಲ್ಲಾ ಇಂದ್ರಿಯಗಳ ವಿಷಯಗಳು ಅನುಭವಕ್ಕೆ ಬರುತ್ತಿವೆ. ಆದ್ದರಿಂದ ಶರೀರವನ್ನು ಮನೆಯಾಗಿ ಹೇಳಿ ಅನುಭವಗಳನ್ನು ಕಷ್ಟಕ್ಕೆ ಹೋಲಿಸಿ ಮನೆಯಲ್ಲಿನ ಕಷ್ಟ ಅಷ್ಟಿಷ್ಟಲ್ಲಯ್ಯಾ ಎಂದಿದ್ದಾರೆ. ಇದು ಶರೀರಾಂತರ್ಗತವಾಗಿ ಹೇಳಿದ ವಿಷಯ.

**ಮಚ್ಚಾ ವೆಂಕಟರಾಮಯ್ಯ, ಉರವಕೊಂಡ**

**272) ಶ್ರಾದ್ಧ ಕರ್ಮಗಳು ಮೂಢ ನಂಬಿಕೆಗಳಾ?**

ಉ. ಅರ್ಥ ತಿಳಿಯದೇ ಮಾಡುವವರಿಗೆ ಶ್ರಾದ್ಧ ಕರ್ಮಗಳು ಮೂಢನಂಬಿಕೆಗಳೆ ಆಗುತ್ತವೆ. ಅರ್ಥ ತಿಳಿದರೆ ಮೋಕ್ಷ ಹೊಂದಿದವರಿಗೆ ಮಾಡುವ ಆಚರಣೆಗಳಾಗಿ ಇವೆ. ಮೋಕ್ಷ ಹೊಂದದವರಿಗೆ ಮಾಡುವುದು ವ್ಯರ್ಥ.

**273) ಪ್ರಕೃತಿಗಳಾವವು? ಎಷ್ಟು? ಅವುಗಳ ವಿಶ್ಲೇಷಣೆ ಕುರಿತು ತಿಳಿಸುತ್ತೀರಾ?**

ಉ. ಪ್ರಕೃತಿ ಒಂದೇ ಇದೆ. ಅದು ಐದು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಆ ಐದು ಭಾಗಗಳು ಕ್ರಮವಾಗಿ 1. ಆಕಾಶ, 2. ಗಾಳಿ, 3. ಅಗ್ನಿ, 4. ನೀರು, 5. ಭೂಮಿ. ಈ ಐದು ಭಾಗಗಳನ್ನು ಸೇರಿಸಿ ಪ್ರಕೃತಿ ಎನ್ನುತ್ತಿದ್ದೇವೆ. ಪ್ರಕೃತಿ ಒಂದು ಚರ, ಅಚರ ಎನ್ನುವ ಎರಡು ವಿಧಗಳಾಗಿ ಇವೆ.

**ಜಿ. ಸುಬ್ರಮಣ್ಯ ರೆಡ್ಡಿ, ತಿರುಪತಿ**

**274) ಪ್ರಾಣಾಯಾಮ ಎಂದರೆ ಏನು? ಹಠ ಯೋಗವೆಂದರೆ ಎನು? ಅವುಗಳಿಗೆ ಒಂದಕ್ಕೊಂದು ಸಂಬಂಧವಿದೆಯೇ?**

ಉ. ಪ್ರಾಣಾಯಾಮ ಎಂದರೆ ಉಸಿರನ್ನು ಬಿಗಿ ಹಿಡಿದು ನಿಲ್ಲಿಸುವುದು, ಛಲದಿಂದ ಕಷ್ಟದಿಂದ ಮಾಡುವುದನ್ನು ಹಠ ಯೋಗವೆನ್ನುತ್ತಾರೆ. ಪ್ರಾಣಾಯಾಮ ಛಲದೊಂದಿಗೆ ಕಷ್ಟವಾಗಿ ಮಾಡುವ ಕೆಲಸವೆ ಆದ್ದರಿಂದ ಪ್ರಾಣಾಯಾಮವನ್ನು ಹಠ ಯೋಗ ಎನ್ನಬಹುದು. ಹಠ ಯೋಗವೆನ್ನುವುದು ಮಾಡುವ ಪದ್ಧತಿಗೆ ಇರುವ ಹೆಸರು ಮಾತ್ರವೇ. ಆದ್ದರಿಂದ ಹಠದಿಂದ ಕಷ್ಟವಾಗಿ ಮಾಡುವ ಪದ್ಧತಿಗಳೆಲ್ಲವನ್ನು ಹಠ ಯೋಗಕ್ಕೆ ಸಂಬಂಧಿಸಿರುವವೇ ಎಂದು ತಿಳಿಯಬೇಕು.

**ಮಾವಿಳ್ಳಪಲ್ಲಿ ಗೌರಿಶಂಕರ್, ನಂದ್ಯಾಲ**

**275. ರಾಜಯೋಗ ಮೂರು ವಿಧಗಳೆಂದು ಅವು ಸಾಂಖ್ಯ, ತಾರಕ, ಅಮನಸ್ಕಗಳೆಂದು ಕೇಳಿದ್ದೇವೆ. ಇವುಗಳನ್ನು ವಿವರಿಸಿ ಹೇಳಲು ಪ್ರಾರ್ಥನೆ.**

ಉ. ರಾಜ ಯೋಗ ಮೂರು ವಿಧಗಳೆನ್ನುವುದು ತಪ್ಪು. ರಾಜ ಯೋಗ ಮತ್ತೊಂದು

ಹೆಸರು ಸಾಂಖ್ಯ ಯೋಗವೆನ್ನ ಬಹುದು. ಅಮನಸ್ಕ ತಾರಕ ಯೋಗಗಳು ಎರಡು ಬ್ರಹ್ಮ ಯೋಗಕ್ಕೆ ಸಂಬಂಧಿಸಿರುವವು. ಮನಸ್ಸನ್ನು ನಿಲ್ಲಿಸುವುದೇ ಬ್ರಹ್ಮಯೋಗ. ಮನಸ್ಸನ್ನು ಪ್ರಪಂಚ ಸಂಬಂಧದಿಂದ ಇಲ್ಲದ ಹಾಗೆ ಮಾಡುವುದು ಅಮನಸ್ಕವೆನ್ನುತ್ತಾರೆ. ಶ್ವಾಸವನ್ನು ನಿಲ್ಲಿಸುವುದು ತಾರಕವೆನ್ನುತ್ತಾರೆ. ತಾರಕದಿಂದ ಸಹ ಮನಸ್ಸೇ ನಿಂತುಹೋಗುತ್ತದೆ. ಆದ್ದರಿಂದ ಅಮನಸ್ಕವೆಂದರು ತಾರಕವೆಂದರು ಬ್ರಹ್ಮ ಯೋಗಕ್ಕೆ ಸಂಬಂಧಿಸಿರುವವೇ. ಇನ್ನು ಸಾಂಖ್ಯವೆಂದರೆ ಶರೀರ ಅಂತರೇಂದ್ರಿಯ ಬಾಹ್ಯೇಂದ್ರಿಯ ವಿವರವನ್ನು ತಿಳಿಸುತ್ತಾ ಹೋಗುವುದು. ಹಾಗೆ ಶರೀರ ಯಂತ್ರಾಂಗದಲ್ಲಿ ಯಾವುದು ಏನು ಮಾಡುತ್ತಿದೆ ಎಂದು ತಿಳಿದು ಕೊನೆಗೆ ಅಹಂಕಾರವನ್ನು ಅದರ ಪಾತ್ರವನ್ನು ತಿಳಿದು, ಅದನ್ನು ನಿಲ್ಲಿಸುವುದೇ ರಾಜಯೋಗ. ಆದ್ದರಿಂದ ರಾಜಯೋಗವನ್ನು ಸಾಂಖ್ಯ ಯೋಗವೆಂದು ಸಹ ಎನ್ನಬಹುದು. ಗೃಹಸ್ಥರಿಗೆ ಸಾಧ್ಯವಾಗುವುದು ರಾಜಯೋಗವೆಂದು ತಿಳಿಯಬೇಕು.

**ಸಿ.ವಿ.ರಮಣ, ಜಿ. ಸುಬ್ರಮಣ್ಯಂ, ಎನ್. ಸತ್ಯನಾರಾಯಣ**

**ಎನ್. ಮಲ್ಲಿಕಾರ್ಜುನ, ಗಡಿವೇಮುಲ**

**276) ಬ್ರಹ್ಮ ದೇವರಿಗೆ ಮೂರು ತಲೆಗಳಿವೆ ಎಂದು ನಮ್ಮ ಸ್ನೇಹಿತರು ವಾದಿಸುತ್ತಿದ್ದಾರೆ. ಈ ಸಂದೇಹವನ್ನು ತೀರಿಸಬೇಕು.**

ಉ. ಬ್ರಹ್ಮ ದೇವರಿಗೆ ಮೂರು ತಲೆಗಳಲ್ಲ ನಾಲ್ಕು ತಲೆಗಳೆಂದು ಸಹ ಹೇಳುತ್ತಿದ್ದಾರೆ, ಚತುರ್ಮುಖನೆಂದು ಕರೆಯುತ್ತಾರೆ. ಪರಮಾತ್ಮ ಸೃಷ್ಟಿಸಿದ ಸೃಷ್ಟಿಯನ್ನು ಪುರಾಣ ರೂಪವಾಗಿ ಬ್ರಹ್ಮ ದೇವರು ಹುಟ್ಟಿಸುವನೆಂದು, ಕರ್ಮ ನಡೆಸುವ ಜೀವನಗಳನ್ನು ವಿಷ್ಣು ನಡೆಸುತ್ತಿದ್ದಾನೆಂದು, ಶಿವನು ಸಾಯಿಸುತ್ತಿದ್ದಾನೆಂದು ಬರೆದಿದ್ದಾರೆ. ಹಾಗೆ ಬರೆದಿರುವುದರಲ್ಲಿ ಬ್ರಹ್ಮ ದೇವರಿಗೆ ನಾಲ್ಕು ಮುಖಗಳಿವೆ ಎಂದು ಒಂದೊಂದು ಮುಖದಿಂದ ಒಂದೊಂದು ವಿಧ ಅಂಡಜ, ಪಿಂಡಜ, ಉದ್ಭಿಜ, ಸ್ವೇದಜ ಎನ್ನುವ ವಿಧಗಳನ್ನು ಹುಟ್ಟಿಸುತ್ತಿದ್ದಾನೆಂದು ಪುರಾಣವಾದ, ಶಾಸ್ತ್ರಪದ್ದತಿ ಪ್ರಕಾರ ಪರಮಾತ್ಮ ಸೃಷ್ಟಿಕರ್ತಎಂದು, ಆ ಪರಮಾತ್ಮ ಕರ್ಮವನ್ನನುಸರಿಸಿ ಜನ್ಮಗಳು ಬರುವಹಾಗೆ ಮಾಡಿದ್ದಾನೆಂದು ಇದೆ. ಶಾಸ್ತ್ರ ನಿರೂಪಣೆಗೆ ಬರುವುದು, ಪುರಾಣ ಕೇವಲ ಕಲ್ಪಿತವಾದ್ದರಿಂದ ಸತ್ಯವಲ್ಲ. ಬ್ರಹ್ಮ ದೇವರಿಗೆ ಮೂರು ಆಗಲಿ, ನಾಲ್ಕು ಆಗಲಿ ತಲೆಗಳಿಲ್ಲ. ಕವಿಗಳ ಕವಿತ್ವಗಳಿಗೆ ಹುಟ್ಟುವ ತಲೆಗಳು ಎಷ್ಟಾದರೂ ಇರಬಹುದು. ದೈವ ಸೃಷ್ಟಿಯಲ್ಲಿ ಪ್ರತಿ ಯೊಬ್ಬರಿಗೂ ಒಂದೇ ತಲೆ ಎಂದು ತಿಳಿಯಬೇಕು.

**277) ಕಲಿಯುಗ ಕ್ರೀ. ಶ. 2000 ವರ್ಷಗಳಿಗೆ ಪ್ರಪಂಚ ಅಂತ್ಯವಾಗುತ್ತದೆಂದು 18–03–1989ನೇ ತಾರೀಖಿನ ಪತ್ರಿಕೆಯಲ್ಲಿ ಒಬ್ಬ ಪರಿಶೋಧಕನು ಸವಾಲು ಮಾಡಿ ಹೇಳಿದ್ದಾನೆ ಅದು ನಿಜವೇನಾ?**

ಉ. ಕಲಿಯುಗ 4,32,000 ವರ್ಷಗಳು ಪೂರ್ತಿ ಕಳೆಯಬೇಕು. ಆದರೆ ಈಗ 5,150 ವರ್ಷಗಳು ಮಾತ್ರ ಕಳೆದಿದೆ. ಖಗೋಳ ಶಾಸ್ತ್ರವೇ ಪೂರ್ತಿ ತಿಳಿಯದೆ ಅದನ್ನು ಕುರಿತು ಪರಿಶೋಧನೆ ಮಾಡಿಕೊಳ್ಳುತ್ತಾ ಅವರು ಕಂಡುಕೊಂಡಿದ್ದನ್ನೆ ಅತಿಕ್ರಮಿಸಿ ಇನ್ನೊಂದನ್ನು ಕಂಡುಕೊಳ್ಳುತ್ತಿದ್ದಾರೆ. ಮೊದಲನೆಯ ಪರಿಶೋಧನೆ ತಪ್ಪೆಂದು ಮತ್ತೊಂದನ್ನು ಕಂಡು ಕೊಳ್ಳುತ್ತಿದ್ದಾರೆ. ಮೊದಲನೆಯ ಪರಿಶೋಧನೆ ತಪ್ಪೆಂದು ಅದಕ್ಕಿಂತ ಭಿನ್ನವಾಗಿರುವ ಫಲಿತ ತಿಳಿದಿರುವುದೆಂದು ದಿನ ಪತ್ರಿಕೆಯಲ್ಲಿ ಹಾಕುವುದು ನೋಡುತ್ತಲೇ ಇದ್ದೇವೆ ಅಲ್ಲವೆ! ಆದ್ದರಿಂದ ಯೋಗ ಶಾಸ್ತ್ರ ಪದ್ದತಿ ಪ್ರಕಾರ ಪ್ರಪಂಚದಲ್ಲಿ ಕ್ರೀ॥ಶ॥ 2000 ವರ್ಷಗಳಿಗೆ ಪ್ರಪಂಚ ಅಂತ್ಯವಲ್ಲ. ಪೂರ್ತಿ ಪ್ರಳಯ ಬರುವುದಕ್ಕೆ 108 ಕೋಟಿ ವರ್ಷಗಳು ಕಳೆಯಬೇಕು.

**ಪಲ್ಲಾ ವಿಶ್ವನಾಥಂ, ಆಳ್ಳಗಡ್ಡ**

**278) ಪರಮಾತ್ಮ ನಿರಂತರ ಇದ್ದಾನೆಂದು ಕೇಳಿದ್ದೇವೆ. ಆತನಿಗೆ ಸಾವಿರ ಯುಗಗಳು ರಾತ್ರಿ, ಸಾವಿರ ಯುಗಗಳು ಹಗಲು ಎಂದು ನೀವು ಮಾರ್ಚಿ ತಿಂಗಳ ಪತ್ರಿಕೆಯಲ್ಲಿ ತಿಳಿಸಿದ್ದೀರ. ಹೀಗೆ ಕಾಲಪ್ರಮಾಣ ನಡೆಯುವಾಗ ಆತನಿಗೂ ಸಹ ಆಯುಸ್ಸು ಇದೆ ಎಂದು ನಮ್ಮಂತವರು ತಿಳಿದುಕೊಳ್ಳಬೇಕು. ಆತನಿಗೆ ಆಯುಸ್ಸು ಇಲ್ಲವೆಂದು ನಾವು ಕೇಳಿರುವ ಮಾತು ನಿಜವಾ? ನೀವು ಬರೆದಿರುವುದು ಸತ್ಯನಾ?**

ಉ. ಉತ್ತರ ಎನ್ನುವುದು ಶಾಸ್ತ್ರಬದ್ಧವಾಗಿ ಇರಬೇಕೆನ್ನುವುದು ನಮ್ಮ ವಾದ. ಹಾಗೆ ಶಾಸ್ತ್ರಬದ್ಧ ಆಗದಿದ್ದಲ್ಲಿ ಅದು ಸತ್ಯ ಅಲ್ಲವೆಂದು ಎಷ್ಟೋ ಸಲ ತಿಳಿಸಿದ್ದೇವೆ. ನಾವು ಮಾರ್ಚಿ ತಿಂಗಳ ಪತ್ರಿಕೆಯಲ್ಲಿ ಬರೆದಿರುವುದು ಸಾವಿರ ಯುಗಗಳು ಹಗಲು ಸಾವಿರಯುಗ ಗಳು ರಾತ್ರಿ ಎನ್ನುವ ಮಾತು ಭಗವದ್ಗೀತಾ ಶಾಸ್ತ್ರದಲ್ಲಿರುವ ವಿಷಯವೇ ಅಲ್ಲವೆ! ನಾವು ಕಲ್ಪಿಸಿ ಬರೆದಿರುವುದಿಲ್ಲ!! ಪರಮಾತ್ಮ ನಿರಂತರ ಇಲ್ಲದವನೆಂದು ನಾವು ಹೇಳಳಿಲ್ಲವಲ್ಲ!!! ಅದರಲ್ಲಿ ಪ್ರಕೃತಿಗೆ ಆಯುಸ್ಸು ಹೇಳಲಾಗಿದೆ ಆದರೆ ಪ್ರಕೃತಿಗಿಂತಲೂ ಅತೀತನಾದ ಪರಮಾತ್ಮನಿಗೆ ಆಯುಸ್ಸು ಹೇಳಲ್ಪಟ್ಟಿಲ್ಲ. ಪರಮಾತ್ಮನಿಗೆ ಆಯುಸ್ಸು ಇಲ್ಲ. ಇಷ್ಟೆಂದು ಯಾರು ನಿರ್ಣಯಿಸಲಿಲ್ಲ. ನಿರ್ಣಯಿಸುವವರು ಇಲ್ಲ, ಪರಮಾತ್ಮ ತನಗೆ ಒಂದು ಹಗಲು

ಒಂದು ರಾತ್ರಿ ಎನ್ನುವ ಅಳತೆ ಪ್ರಕಾರ ಪ್ರಪಂಚ ಆಯುಸ್ಸನ್ನು ನಿರ್ಣಯಿಸಿದ್ದಾನೆ. ಆದರೆ ತನಗಿಷ್ಟು ಆಯುಸ್ಸು ಎಂದು ಹೇಳಲಿಲ್ಲ. ನಾವುಕೊಟ್ಟಿರುವ ಉತ್ತರವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಪರಮಾತ್ಮನಿಗೆ ಆಯುಸ್ಸು ಇದ್ದಹಾಗೆ ಅಲ್ಲವೆ! ನೀವು ಹೇಳಿದಹಾಗೆ ತಾನೆ ಎಂದರೆ ನಾನೆಲ್ಲಿ ಹೇಳಿದ್ದೇನೆ? ನೀವು ಎಷ್ಟು ಆಯುಸ್ಸೆಂದು ತಿಳಿದುಕೊಂಡಿದ್ದೀರ? ಪರಮಾತ್ಮನಿಗೆ ಆಯುಸ್ಸು ಇಲ್ಲ ಎನ್ನುವಮಾತು ಸತ್ಯ. ಅದಕ್ಕೆ ಭಿನ್ನವಾಗಿ ನಾವು ಎಲ್ಲಿ ಯಾವ ಸಂದರ್ಭದಲ್ಲಿ ಹೇಳಲಿಲ್ಲ.

**ಐ.ಕೃಷ್ಣಾರೆಡ್ಡಿ, ಗೌನಿಪಲ್ಲಿ**

**279) ಜೀವಿಗೆ ಅವಸಾನ ದಶೆಯಲ್ಲಿ ಬ್ರಹ್ಮನಾಡಿ ವರೆಗು ಚೈತನ್ಯ ಶಕ್ತಿ ಇರುವುದಿಲ್ಲ ಎಂದಿದ್ದೀರ, ಜೀವಿಯು ಮತ್ತನ್ನು ಸೇವಿಸಿ ಮತ್ತಿನಲ್ಲಿರುವಾಗ ಬ್ರಹ್ಮನಾಡಿವರೆಗು ಚೈತನ್ಯ ಇಲ್ಲದಹಾಗೇನಾ?**

ಉ. ಮತ್ತು ಪದಾರ್ಥ ಸೇವಿಸಿದಾಗ ಜೀವಿಯು ಮತ್ತಿನಲ್ಲಿ ಇದ್ದರೂ ಚೈತನ್ಯ ಶರೀರವೆಲ್ಲಾ ಇರುತ್ತದೆ. ಚೈತನ್ಯ ಹಿಂದಕ್ಕೆ (ಕುಗ್ಗಿಹೋಗಿ) ಸರಿದು ಬ್ರಹ್ಮನಾಡಿ ಒಳಗೆ ಆರು ನಾಡಿ ಕೇಂದ್ರಗಳನ್ನು ಸಹ ಬಿಟ್ಟು ಹೋಗುವುದು ಎರಡೇ ಎರಡು ಸಂದರ್ಭಗಳಲ್ಲಿ ನಡೆಯುತ್ತದೆ. 1. ಜೀವಿಯು ಬ್ರಹ್ಮಯೋಗದಲ್ಲಿರುವಾಗ, 2. ಜೀವಿಯು ಮರಣಾವಸ್ಥೆಯನ್ನು ಸೇರುವಾಗ. ಈ ಎರಡು ಸಂದರ್ಭಗಳಲ್ಲದೆ ಉಳಿದ ಯಾವ ಪರಿಸ್ಥಿತಿಯಲ್ಲಿಯೂ ಚೈತನ್ಯ ಬ್ರಹ್ಮನಾಡಿಯಲ್ಲಿನ ಆರು ಕೇಂದ್ರಗಳನ್ನು ಬಿಡುವುದಿಲ್ಲ.

**ಪಿ.ವಿ. ಚಲಪತಿ, ಕರ್ನೂಲ್**

**280) ಸೂಕ್ಷ್ಮ ಶರೀರವೊಂದರ ಆಯುಸ್ಸು ಮುಗಿದು, ಸ್ಥೂಲ ಶರೀರವೊಂದರ ಆಯುಸ್ಸು ಇದ್ದರೆ ಆಗ ಆ ಜೀವಿಯ ಗತಿ ಏನು?**

ಉ. ಸೂಕ್ಷ್ಮವನ್ನು ಆಧಾರಮಾಡಿಕೊಂಡು ಸ್ಥೂಲವಿದೆ ಆದರೆ ಸ್ಥೂಲಾಧಾರದ ಮೇಲೆ ಸೂಕ್ಷ್ಮವಿಲ್ಲ. ಸ್ಥೂಲ ಜಡ, ಸ್ಥೂಲವನ್ನು ಆಡಿಸುವುದು ಸೂಕ್ಷ್ಮ. ಸೂಕ್ಷ್ಮ ಇಲ್ಲದಿರುವಾಗ ಸ್ಥೂಲ ಇಲ್ಲ. ಸೂಕ್ಷ್ಮವು ಯಾವಾಗ ಮುಗಿಯುತ್ತದೋ ಆಗ ಬೇರೊಂದು ಜನ್ಮಕ್ಕೆ ಹೋಗಬೇಕಾಗುತ್ತದೆ. ಸೂಕ್ಷ್ಮವು ಮುಗಿಯದಿದ್ದರೆ ಮುಗಿಯುವವರೆಗೂ ಸ್ಥೂಲ ಇಲ್ಲದಿದ್ದರು ಸೂಕ್ಷ್ಮ ರೂಪದಿಂದಲೇ ಅದೇ ಜನ್ಮದಲ್ಲೇ ಇರಬಹುದು.

**ಯಮ್. ಅಂಜನೇಯುಲು, ಕರೀಂನಗರ್**

**281) ಮಂತ್ರ ಎಂದರೆ ಏನು? ಯಂತ್ರ ಎಂದರೆ ಏನು? ಇವುಗಳಿಂದ ಉಪಯೊಗಗಳಿವೆಯಾ? ಕರ್ಮ ಸಿದ್ಧಾಂತದಲ್ಲಿ ಇವುಗಳಿಗೆ ಸ್ಥಾನವಿದೆಯಾ?**

ಉ. ಮಂತ್ರವೆಂದರೆ ಭಾಷಾಕ್ಷರಗಳ ವರಸೆ ಕ್ರಮವಾಗಿದೆ ಮತ್ತು ಮಹಿಮೆಇರುವುದು. ಯಂತ್ರವೆಂದರೆ ಒಂದು ಶಕ್ತಿಯನ್ನು ಉತ್ಪತ್ತಿ ಮಾಡುವುದು. ಯಂತ್ರಗಳು ಪರಿಕರಗಳಿಂದ ನಿರ್ಮಿಸಲ್ಪಡುವವೇ ಅಲ್ಲದೆ ಭಾಷಾಕ್ಷರಗಳಿಂದ ಸಹ ನಿರ್ಮಿಸಬಹುದು. ಇವುಗಳಿಂದ ಉಪಯೋಗಗಳಿವೆ. ಮಂತ್ರದಿಂದ ಮಹಿಮೆಯೊಂದಿಗೆ ಕೂಡಿರುವ ಕೆಲಸ, ಯಂತ್ರದಿಂದ ಮಾನವನ ಕೈಲಾಗದ ಕೆಲಸ ನಡೆಯುತ್ತಿದೆ. ಮಂತ್ರ ಯಂತ್ರಗಳೆಲ್ಲವು ಕರ್ಮ ಸಿದ್ಧಾಂತಗಳಿಗೆ ಒಳಪಟ್ಟಿರುವವೆಯಾಗಲಿ ಅತಿಕ್ರಮಿಸಿ ಇರುವವು ಅಲ್ಲ. ಒಂದು ಜ್ಞಾನವೊಂದೆ ಕರ್ಮವನ್ನು ಅತಿಕ್ರಮಿಸಿ ಇರುತ್ತದೆ. ಮಂತ್ರವೆಂದರೆ ಮಹಿಮೆ ಇರುವುದು, ಯಂತ್ರವೆಂದರೆ ಶಕ್ತಿ ಇರುವುದೆಂದು ಅರ್ಥ.

**282. ಒಬ್ಬ ಮನುಷ್ಯ ಸತ್ತು ಹೋದನಂತರ ಅವರ ಸಂತತಿ ಪಿಂಡ ಪ್ರದಾನಗಳು ಮಾಡುತ್ತಾರೆ. ಅದೇ ವಿಧವಾಗಿ ವರ್ಷದ ತಿಥಿಗಳು ಸಹ ಮಾಡುವರು ಏಕೆ?**

ಉ. ಯೋಗ ಶಾಸ್ತ್ರದಲ್ಲಿ ಜೀವಿಯು ಸತ್ತುಹೋದರೆ ಮರುಜನ್ಮಕ್ಕೆ ಹೋಗುತ್ತಾನೆಂದು ಇದೆ. ಆದರೆ ಅವರ ಸಂತತಿ ಕೊಡುವ ಪಿಂಡ ಪ್ರದಾನಗಳಿಗಾಗಿ ಅಲ್ಲಿಯೇ ಇರುವನೆಂದು ಇಲ್ಲ. ಮೋಕ್ಷ ಹೊಂದಿದವರಿಗೆ ಪಿಂಡ ಪ್ರದಾನ ಮಾಡಬೇಕು, ಎಲ್ಲರಿಗೂ ಮಾಡಬಾರದು. ಈ ವಿಷಯ ತಿಳಿಯಬೇಕೆಂದರೆ ನಮ್ಮ ರಚನೆಗಳಲ್ಲಿ **"ಇಂದೂ ಸಾಂಪ್ರದಾಯಗಳು"** ಎನ್ನುವ ಪುಸ್ತಕವನ್ನು ಓದಿರಿ.

**283) ಪಿಂಡ ಪ್ರದಾನ ಕರ್ಮ ತಂತ್ರಗಳು ತಾಯಿ ತಂದೆಯರಿಗೆ ಅಲ್ಲದೆ ತಾತ ಮುತ್ತಾತರಿಗು ಸಹ ಮಾಡುತ್ತಿದ್ದಾರೆ. ನನಗೆ ತಿಳಿದವರು ಕೆಲವರು ಅವರಿಗಿದ್ದರು ಇಲ್ಲದಿದ್ದರು ಸಾಲ ಮಾಡಿ ವರ್ಷದತಿಥಿಗಳು ಮಾಡುತ್ತಿದ್ದಾರೆ. ಅಸಲಿಗೆ ಅವರು ಮುತ್ತಾತರನ್ನು ನೋಡಿಯೂ ಸಹ ಇರುವುದಿಲ್ಲ. ಹಾಗೆ ಮಾಡುವುದು ಅಗತ್ಯವೆ?**

ಉ. ಆ ವಿಧವಾಗಿ ಮಾಡದೆ ಹೋದರೆ ತಮಗೆ ಏನಾದರೂ ಕೆಡುಕಾಗುತ್ತದೇನೋ ಎಂದು ಭಯದಿಂದ ಹೊರತು ಭಕ್ತಿಯಿಂದ ಯಾರು ಮಾಡುತ್ತಿಲ್ಲ. ಅವರ ಹಿರಿಯರು ಸತ್ತುಹೋಗುವ ಮುನ್ನ ಇಂತಹ ಪದಾರ್ಥವನ್ನು ತಿನ್ನಬೇಕೆಂದು ಕೋರಿದರು ಇಡದವರು

ಸತ್ತುಹೋದಮೇಲೆ ದಿವಸಗಳ ಹೆಸರಲ್ಲಿ ಹಿರಿಯರಿಗೆಂದು ಕಾಗೆಗಳಿಗೆ ಹದ್ದುಗಳಿಗೆ ಇಡುತ್ತಾರೆ. ಅದೇ ಸತ್ತುಹೋಗದ ಮುನ್ನ ಇಟ್ಟಿದ್ದರೆ ತಿಂದು ತೃಪ್ತಿಪಡುತ್ತಿದ್ದರಲ್ಲವೆ! ಹಿರಿಯರು ಸತ್ತುಹೋಗದ ಮುನ್ನ ಬಂದಿರುವ ರೋಗಕ್ಕೆ ಐದು ಪೈಸೆ ಖರ್ಚುಮಾಡದವನು ಸತ್ತುಹೋದಮೇಲೆ ಕರ್ಮತಂತ್ರಗಳಿಗೆ ಐದು ಸಾವಿರಗಳಾದರು ಖರ್ಚು ಮಾಡುತ್ತಿದ್ದಾನೆಂದರೆ ಅರ್ಥವಿದೆಯಾ ನೀವೇ ಯೋಚಿಸಿ. ಹಿರಿಯರು ಸಾಯದ ಮುನ್ನ ಎಂದಾದರೂ ನಮಸ್ಕರಿಸದವನು ಸತ್ತುಹೋದಮೇಲೆ ಗೋರಿಗೆ ನಮಸ್ಕರಿಸುತ್ತಿದ್ದಾನೆಂದರೆ ಏನಾದರೂ ಅರ್ಥವಿದೆಯಾ? ಹಿರಿಯರು ಬದುಕಿರುವಾಗ ಬಟ್ಟೆ ಕೊಡಿಸದವನು ಅವರು ಸತ್ತ ಮೇಲೆ ಜೊತೆ ಬಟ್ಟೆಗಳು ಇಡುವುದರಲ್ಲಿ ಅರ್ಥವೇನಿದೆ? ಇತರರು ಇಟ್ಟಿರುವ ಭಯದಿಂದ ತನಗೆ ತಿಳಿಯದಿದ್ದರಿಂದ ಈ ಕರ್ಮ ತಂತ್ರ ಮಾನವನು ಮಾಡುತ್ತಿದ್ದಾನಾಗಲಿ ಬೇರೆ ಅರ್ಥ ಏನೂ ತಿಳಿಯದು. ಸತ್ತವರಿಗೆ ಕರ್ಮ ತಂತ್ರಗಳೆನ್ನುವ ಹೆಸರಲ್ಲಿ ಇಂತಹ ಅರ್ಥವಿಲ್ಲದ ಕೆಲಸಗಳು ಮಾಡುವುದಕ್ಕಿಂತ ಅವರು ಬದುಕಿರುವಾಗಲೇ ಅವರಿಗೆ ಒಳ್ಳೆಯ ತಿಂಡಿ, ಒಳ್ಳೆಯ ಬಟ್ಟೆ ಕೊಟ್ಟು ಭಕ್ತಿಯಿಂದ ನಮಸ್ಕರಿಸಿದರೆ ಅವರಿಗೆ ತೃಪ್ತಿ ಇವರಿಗೆ ಭಕ್ತಿಯಾದರೂ ಬರುವುದು. ಇಂದೂ ಧರ್ಮದಲ್ಲಿ ಕಾಲವಾದವರಿಗೆ ಅಂದರೆ ಮೋಕ್ಷ ಹೊಂದಿದವರಿಗೆ ಕರ್ಮ ತಂತ್ರಗಳು ಮಾಡಬೇಕು. ಅದು ತಿಳಿಯದೆ ಎಲ್ಲರಿಗೂ ಮಾಡುವುದು ಅರ್ಥವಿಲ್ಲದ ಕೆಲಸ.

**ಕೆ. ಮದುಸೂದನ, ಧರ್ಮವರಂ**

**284) ಒಬ್ಬ ವ್ಯಕ್ತಿ ಮರಣಿಸಿದಾಗ ಆತನನ್ನು ಸ್ಮಶಾನಕ್ಕೆ ಕೊಂಡೊಯ್ಯುವಾಗ ಶವಕ್ಕೆ ಮಂಡಕ್ಕಿಯನ್ನು ಚೆಲ್ಲುತ್ತಾ ಹೋಗುತ್ತಾರೆ ಏಕೆ?**

ಉ. ಒಂದೊಂದು ಪ್ರಾಂತ್ಯದಲ್ಲಿ ಒಂದೊಂದು ಅಭ್ಯಾಸವನ್ನು ಇಟ್ಟುಕೊಂಡಿದ್ದಾರೆ. ರಾಗಿಯನ್ನು ಚೆಲ್ಲುತ್ತಾ ಹೋಗುವವರನ್ನು ಸಹ ನಾವು ನೋಡಿದ್ದೇವೆ. ಏಕೆ ಹಾಗೆ ಚೆಲ್ಲಬೇಕೆಂದು ನಾವು ಕೇಳಿದಾಗ "ಸ್ಮಶಾನಕ್ಕೆ ಹೋಗಿರುವವರು ಭೂತವಾಗಿ ತಿರುಗಿ ಮನೆಗೆ ಬಾರದಂತೆ ಇರುವುದಕ್ಕೆ. ಅವರು ಬರಬೇಕೆಂದರೆ ಈಗ ಚಲ್ಲಿರುವ ರಾಗಿ ಅಗಲಿ, ಮಂಡಕ್ಕಿಯಾಗಲಿ ಆರಿಸುತ್ತಾ ಬರಬೇಕು. ಹಾಗೆ ಆರಿಸುತ್ತಾ ಬರುವುದಕ್ಕೆ ಬಹಳ ವರ್ಷಗಳು ಬೇಕಾಗುತ್ತದೆ. ಆದ್ದರಿಂದ ಅವರು ಬರಲಾರರು. ಹಾಗೆ ಅವರು ತಿರುಗಿ ಬಾರದಂತೆ ಇರುವುದಕ್ಕೆ ಹೀಗೆ ಚೆಲ್ಲುತ್ತಿದ್ದೇವೆ" ಎಂದು ಹೇಳಿದ್ದಾರೆ. ಇವರು ಚೆಲ್ಲಿರುವವನ್ನು ಅವರು ಆರಿಸಬೇಕೆಂದು ಯಾವ ದೇವರು ಹೇಳಿದ್ದಾನೋ ನಮಗೆ ತಿಳಿಯದು.

ಮಾಡುವವರದ್ದು ತಪ್ಪಲ್ಲ ಆದರೆ ನಿಮಗೆ ಹಿತವಾದವರೆಂದು ಅಭೂತಕಲ್ಪನೆಗಳು ಹೇಳಿ ಮಾಡಿಸುವವರದೇ ತಪ್ಪು. ಕೇಳಿರುವುದನ್ನು ಯೋಚಿಸದೆ ಅರ್ಥವಿಲ್ಲದ ವ್ಯರ್ಥವಾದ ಕೆಲಸಗಳು ಮಾಡುವವರದ್ದು ಬಹಳ ತಪ್ಪು.

**ಸಿ. ಲಕ್ಷ್ಮಣ ಮೂರ್ತಿ, ಚಿನ್ನಪೊಡಮಲ**

**285) ಭಕ್ತಿ ಶಕ್ತಿ ಯುಕ್ತಿ ಹಣ ಇವುಗಳಲ್ಲಿ ಯಾವುದು ದೊಡ್ಡದು? ಹೇಗೆ ದೊಡ್ಡದು?**

**ಉ.** ಹಣವಿದ್ದರೂ ಅದನ್ನು ಉಪಯೋಗಿಸುವ ಯುಕ್ತಿ ಇಲ್ಲದಿದ್ದರೆ ಏನು ಪ್ರಯೋಜನ ವಿಲ್ಲ. ಹುಚ್ಚನ ಹತ್ತಿರ ಹಣವಿದ್ದರು ಪ್ರಯೋಜನವಿಲ್ಲ ಅಲ್ಲವೆ! ಆದ್ದರಿಂದ ಹಣಕ್ಕಿಂತಲೂ ಯುಕ್ತಿ ದೊಡ್ಡದು. ಹಣ ಯುಕ್ತಿ ಎರಡು ಇದ್ದರು ಶರೀರದಲ್ಲಿ ಶಕ್ತಿ ಇಲ್ಲದ ರೋಗಗ್ರಸ್ತನಿಗೆ ಏನು ಪ್ರಯೋಜನವಿಲ್ಲ. ಯುಕ್ತಿ ಇದ್ದರೂ ಹಣದ ಬೆಲೆಯನ್ನು ಯುಕ್ತಿ ನೈಪುಣ್ಯತೆಯನ್ನು ತಾನು ಉಪಯೊಗಿಸಿಕೊಂಡಿದ್ದರು, ಶಕ್ತಿ ಕಡಿಮೆಯಾಗಿ ಮಂಚದಲ್ಲಿರುವವನಿಗೆ ಹಣ ಯುಕ್ತಿ ಇದ್ದರೂ ಹಣದ ಬೆಲೆಯನ್ನು ನೈಪುಣ್ಯತೆಯನ್ನು ತಾನು ಅನುಭವಿಸಲಾರನು. ಅವನ ಯುಕ್ತಿ ಹಣ ಎರಡು ಇತರರಿಗೆ ಉಪಯೋಗಕ್ಕೆ ಬರುವವೆ ಆಗುತ್ತವೆ, ಆದರೆ ಶರೀರದಲ್ಲಿ ಶಕ್ತಿ ಇಲ್ಲದೆ ನಾಮಮಾತ್ರ ಇರುವವರಿಗೆ ಯಾವ ಕೆಲಸಕ್ಕೂ ಬರುವುದಿಲ್ಲ. ಆದ್ದರಿಂದ ಹಣ ಯುಕ್ತಿಗಿಂತಲೂ ಶಕ್ತಿ ಮುಖ್ಯ. ಹಣ, ಯುಕ್ತಿ, ಶಕ್ತಿ ಇರುವವನಿಗೆ ಭಕ್ತಿ ಇಲ್ಲದಿದ್ದರೆ ಆ ಜೀವನವೇ ನಿರರ್ಥಕವಾಗುತ್ತದೆ. ಹುಟ್ಟಿರುವುದಕ್ಕೆ ಅರ್ಥವೇ ಇಲ್ಲದೆ ಹುಟ್ಟುವಿಕೆ ಎನ್ನುವ ಪ್ರಶ್ನೆಗೆ ಉತ್ತರವಿಲ್ಲದೆ ಹೋಗುತ್ತದೆ. ಜೀವನ ನಮಗಿಂತ ದೊಡ್ಡವನಾದ ದೇವರನ್ನು ತಿಳಿಯುವುದಕ್ಕೆ ಇದೆ. ಅದಕ್ಕೆ ಭಕ್ತಿ ಅವಶ್ಯವಿದೆ. ಆದ್ದರಿಂದ ಭಕ್ತಿ ಇಲ್ಲದ ಜೀವನವೇ ವ್ಯರ್ಥ. ಈ ವಿಧವಾಗಿ ತಿಳಿಯುತ್ತಾ ಬಂದರೆ ಎಲ್ಲದಕ್ಕಿಂತ ಭಕ್ತಿಯೇ ದೊಡ್ಡದೆಂದು ತಿಳಿಯುತ್ತಿದೆ. ಇಲ್ಲಿ ಮುಖ್ಯವಾಗಿ ತಿಳಿಯಬೇಕಾಗಿರುವುದು ಏನೆಂದರೆ ಶಕ್ತಿ ಯುಕ್ತಿ ಹಣ ಮೂರು ಪ್ರಪಂಚ ಸಂಬಂಧವಾದವು, ಭಕ್ತಿ ಒಂದು ಪರಮಾತ್ಮ ಸಂಬಂದವಾದದ್ದು. ಸುಖಮಯವಾದ ಜೀವನ ಸಾಗುವುದಕ್ಕೆ ಈ ಮೂರು ಮುಖ್ಯ. ಹಾಗೇ ಜ್ಞಾನ ಮಾರ್ಗದಲ್ಲಿ ಸಾಗುವುದಕ್ಕು ಸಹ ಭಕ್ತಿ ಮುಖ್ಯ. ಭಕ್ತಿ ಇಲ್ಲದವನು ಜ್ಞಾನವನ್ನು, ದೈವವನ್ನು ಹೊಂದದಂತೆ, ಶಕ್ತಿ ಯುಕ್ತಿ ಹಣ ಇಲ್ಲದವನು ಪ್ರಪಂಚದಲ್ಲಿ ಬೆಳಕಿಗೆ ಬರಲಾರನು. ಆದ್ದರಿಂದ ಪ್ರಪಂಚ ಸಂಬಂಧವಾದ ಶಕ್ತಿ ಯುಕ್ತಿ ಹಣ, ದೈವ ಸಂಬಂಧವಾದ ಭಕ್ತಿ ಇರುವವನು ಮಾನವರಲ್ಲಿ ಉನ್ನತನೆಂದು ತಿಳಿಯಬೇಕು.

**ಜಿ. ವೆಂಕಟನಾರಾಯಣ, ತಾಡಿಪತ್ರಿ**

**286) ಮರಣ ಎಂದರೆ ಏನು?**

ಉ. ಜೀವಿಯ ಪ್ರಾರಬ್ದ ಕರ್ಮವೆಲ್ಲವು ಮುಗಿದ ನಂತರ ಸ್ಥೂಲ ಸೂಕ್ಷ್ಮ ಶರೀರಗಳನ್ನು ಬಿಟ್ಟು ಹೋಗುವುದನ್ನು ಮರಣ ಎನ್ನುತ್ತಾರೆ. ರಣ ಎಂದರೆ ಯುದ್ದ. ಮರಣ ಎಂದರೆ ಮತ್ತೆ ಯುದ್ಧ ಪ್ರಾರಂಭವೆಂದು ಅರ್ಥ. ಹೊಸ ಸೈನ್ಯದೊಂದಿಗೆ ಜೀವನ ಯುದ್ದ ಪ್ರಾರಂಭಿಸುವುದನ್ನು ಮರಣ ಎನ್ನುತ್ತಾರೆ. ಹೊಸ ಸೈನ್ಯವೆಂದರೆ ಹೊಸ ಶರೀರದಲ್ಲಿನ ಹೊಸ ಇಂದ್ರಿಯಗಳೆಂದು ತಿಳಿಯಬೇಕು.

**287) ಸಾಯುವುದು, ಸತ್ತಿರುವುದು ಎಂದು ಕರೆಯುತ್ತಾರೆ. ಈ ಎರಡು ಪದಗಳಲ್ಲಿ ಮರಣಕ್ಕೆ ಸರಿಯಾದ ಪದ ಯಾವುದು?**

ಉ. ಈ ಎರಡು ಪದಗಳು ನಿಜವಾಗಿ ತಪ್ಪೇ. ಇವುಗಳಿಗೆ ಸತ್ಯವಾದ ಮೂಲ ಪದವು "ಸತ್ತು ಹೋಗುವುದು" ಎಂದು ಇತ್ತು. ಸತ್ತು ಹೋಗುವುದು ಎನ್ನುವ ಪದವು ಹೇಳುವುದರಲ್ಲಿ ಸ್ವಲ್ಪ ಕಾಲಕ್ಕೆ ಸಾಯುವುದಾಗಿ ಬದಲಾಗಿದೆ. ಹಾಗೇ ಇನ್ನೂ ಸ್ವಲ್ಪ ಕಾಲಕ್ಕೆ ಸತ್ತಿರುವುದಾಗಿ ಬದಲಾಗಿದೆ. ಆದರೂ ಸಾಯುವುದು ಸ್ವಲ್ಪ ನಾಗರಿಕ ಪದವಾಗಿ ಸತ್ತಿರುವುದು ಸ್ವಲ್ಪ ಒರಟು ಪದವಾಗಿ ಬಳಸುತ್ತಿದ್ದಾರೆ. ಯಾವುದೇನಾದರೂ ನಾವು ವಾಸ್ತವವಾದದ್ದನ್ನು ಬಿಟ್ಟು ನಕಲಿ ಪದಗಳನ್ನು ಹಿಡಿದುಕೊಂಡಿದ್ದೇವೆನ್ನುವ ಮಾತು. ಸತ್ತು ಹೋಗುವುದು ಎನ್ನುವ ಪದವು ಹೇಗೆ ಅಸಲಾದದ್ದೋ ವಿವರಿಸುತ್ತೇವೆ.

ಸತ್ತು ಎಂದರೆ ಸಾರ ಎಂದು ಅರ್ಥ. ನಮ್ಮ ಶರೀರಗಳಲ್ಲಿ ಸತ್ಯವಾದ ಸಾರಾಂಶವಾದ ಶಕ್ತಿ ಇರುವುದು. ಅದನ್ನೇ ಆತ್ಮ ಅಥವಾ ದೈವವು ಎಂದು ಕರೆಯುತ್ತಾರೆ. ಆ ಆತ್ಮನನ್ನೆ ಸತ್ತು ಎಂದು ಸಹ ಹೇಳುತ್ತೇವೆ. ಆ ಸತ್ತು ಇರುವವರೆಗು ನಮ್ಮ ಶರೀರಗಳು ಕದುಲುತ್ತಿವೆ. ಅಂದರೆ ನಮ್ಮ ಶರೀರಗಳಲ್ಲಿರುವ ಚೈತನ್ಯಶಕ್ತಿಯನ್ನೆ ಸತ್ತು ಎನ್ನುತ್ತಿದ್ದೇವೆ. ಸತ್ತು ಇಲ್ಲದೇ ಹೋದರೆ ಶರೀರಗಳು ಸ್ವಲ್ಪವಾದರೂ ಕದಲುವುದಿಲ್ಲ. ಈ ಸತ್ತು ಅನ್ನುವ ಪದವನ್ನೇ ಪೂರ್ವದಲ್ಲಿ ಸತ್ತುವ ಎಂದು ಸಹ ಕರೆಯುತ್ತಿದ್ದರು. ಸತ್ತು ಶರೀರದಲ್ಲಿ ಇರುವಾಗಲೆ ಶರೀರದಲ್ಲಿ ಜೀವಿಯು ಸಹ ಇರುತ್ತಾನೆ, ಶರೀರವು ಸಜೀವವಾಗಿ ಇರುತ್ತದೆ. ಶರೀರದಲ್ಲಿ ಸತ್ತು ಎನ್ನುವ ಆತ್ಮ ಯಾವಾಗಾದರೆ ಹೊರ ಹೋಗುವುದೋ ಆಗ ಜೀವಾತ್ಮ ಸಹ ಶರೀರವನ್ನು ಬಿಟ್ಟು ಹೋಗುವುದು ನಡೆಯುವ ಸತ್ಯವು. ಅಂತಹ ಶರೀರವನ್ನು

ಸತ್ತು ಹೋಗಿರುವ ಶರೀರ ಎನ್ನುತ್ತೇವೆ. ಒಂದು ಹಸು ಮರಣಿಸಿದೆ ಎಂದುಕೊಳ್ಳಿ, ಅದನ್ನು ಪೂರ್ವಿಕರು ಹಸು ಸತ್ತು ಹೋಗಿದೆ ಎನ್ನುತ್ತಿದ್ದರು. ಹಾಗೆ ಒಂದು ಎಮ್ಮೆ ಸತ್ತುಹೋಗಿದೆ, ಕೋಣ ಸತ್ತುಹೋಗಿದೆ ಎಂದು ಹೇಳುತ್ತಿದ್ದರು. ಕಾಲಕ್ರಮೇಣ ಪದ ಬದಲಾಗಿ ಈಗ ಹಸು ಸತ್ತಿದೆ, ಎಮ್ಮೆ ಸತ್ತಿದೆ ಎಂದು ಹೇಳುತ್ತಿದ್ದೇವೆ. ಆದ್ದರಿಂದ ಸಾಯುವುದು ಆಗಲಿ, ಸತ್ತಿರುವುದಾಗಲಿ ಮರಣಕ್ಕೆ ಸರಿಯಾದ ಪದಗಳಲ್ಲ. ನಿಜವಾದ ಪದವು ಸತ್ತು ಹೋಗಿದೆ ಎಂದು ತಿಳಿಯಬೇಕು.

**ವಿ. ಚಿದಾನಂದಪ್ಪ, ಹೊಲಗೊಂದ**

**288) ಮನುಷ್ಯ ದೈವಾಂಶ ಸಂಭೂತನು ಎನ್ನುತ್ತಾರೆ. ಆದ್ದರಿಂದ ಮನುಷ್ಯನಿಗು ದೈವಕ್ಕು ಇರುವ ಸಂಬಂಧವೇನು?**

**ಉ.** ಬಾಹ್ಯವಾಗಿ ನಮಗೂ ನಮ್ಮ ನೆರಳಿಗೂ ಇರುವ ಸಂಬಂಧದಹಾಗೆ ಒಳಗೆ ದೈವಕ್ಕು ಜೀವಿಗು ಸಂಬಂಧವಿದೆ. ಮನುಷ್ಯ ಇರುವವರೆಗು ನೆರಳು ಇರುವಹಾಗೆ ಜೀವಾತ್ಮ ಇರುವವರೆಗು ದೈವ ಅಂಟಿಕೊಂಡು ಇರುತ್ತದೆ. ಆದ್ದರಿಂದ ದೈವ ಅಂಶದೊಂದಿಗೆ ಶರೀರದಲ್ಲಿದ್ದವನೆಂದು ದೈವಾಂಶ ಸಂಭೂತನೆಂದಿದ್ದಾರೆ. ಭಗವದ್ಗೀತೆಯಲ್ಲಿಯೂ ಸಹ ದೈವವನ್ನು ಕೂಟಸ್ಥನೆಂದು ಹೇಳಿದ್ದಾರೆ. ಜೀವಿಯು ಎಲ್ಲಿರುವನೋ ಅವನೊಂದಿಗೆ ಕೂಟಸ್ಥನಾಗಿ ದೈವವು ಸಹ ಇದೆಯೆಂಬ ಗೀತಾ ವಾಕ್ಯದ ಪ್ರಕಾರ ಮನುಷ್ಯ ದೈವಾಂಶ ಸಂಭೂತನೆಂದು ತಿಳಿಯಬೇಕು.

**ಟಿ. ಓಬುಲ ನಾರಾಯಣ ರೆಡ್ಡಿ, ಚಿನ್ನ ಪೊಡಮಲ**

**289) ನಾವು ಎಲ್ಲಾ ಕಡೆ ಉಪಯೋಗಿಸುವ ವಿದ್ಯುತ್ ಶಕ್ತಿ ಹುಟ್ಟುವ ಸ್ಥಾನ ಜನರೇಟರುಗಳು ಆದಹಾಗೆ ಜೀವರಾಶಿಗಳಲ್ಲೇ ಅಲ್ಲದೆ ವಿಶ್ವವೆಲ್ಲವು ವ್ಯಾಪಿಸಿರುವ ಪರಮಾತ್ಮನ ಶಕ್ತಿಗೆ ಕೇಂದ್ರಯಾವುದು. ಯಾವ ಕೇಂದ್ರ ದಿಂದ ಆ ಶಕ್ತಿ ಎಲ್ಲಾಕಡೆ ವ್ಯಾಪಿಸುತ್ತಿದೆ?**

**ಉ.** ವಿಶ್ವ ವ್ಯಾಪಿಯಾದ ಪರಮಾತ್ಮಶಕ್ತಿಗೆ ಕೇಂದ್ರ ಒಂದು ಕಡೆ ಎನ್ನುವುದು ಇಲ್ಲ. ಪ್ರತಿ ಅಣುವಿನಲ್ಲಿ ಒಂದು ಕೇಂದ್ರವಿದೆ. ಪ್ರತಿ ಅಣುವಿನಲ್ಲು ಆ ಶಕ್ತಿ ಕೇಂದ್ರೀಕೃತವಾಗಿ ಇದೆ. ಆದ್ದರಿಂದ ವಿಶ್ವವ್ಯಾಪ್ತವೂ ಒಂದೆ ಶಕ್ತಿಯಾಗಿ ಮಿಳಿತಗೊಂಡಿದೆ.

**ಪಿ. ಚೆಂಚಿರೆಡ್ಡಿ, ಜಿಲ್ಲೆಲ್ಲ**

**290) ಕೆಲವರು ಚಿಕ್ಕಂದಿನಿಂದಲೆ ಮತಿಭ್ರಮಣೆ (ಹುಚ್ಚು) ಯಿಂದ ತಿರುಗುತ್ತಿರುತ್ತಾರೆ. ಅವರಿಗೆ ಪಾಪ ತಿಳಿಯದು ಪುಣ್ಯ ತಿಳಿಯದು. ಅಹಂಕಾರ ಇರುವುದಿಲ್ಲ. ಅಂತಹವರಿಗೆ ಮರು ಜನ್ಮ ಇರುತ್ತದಾ?**

ಉ. ಅಂತಹ ಸಂದರ್ಭದಲ್ಲಿ ಅವರಿಗೆ ಹೊಸ ಪಾಪ ಪುಣ್ಯಗಳು ಬರುವುದಿಲ್ಲ. ಹಳೆಯ ಕರ್ಮ ಆ ಜನ್ಮದಲ್ಲಿ ಮುಗಿದಿದ್ದರೆ ಅವರಿಗೆ ಮರುಜನ್ಮ ಇರುವುದಿಲ್ಲ. ಒಂದು ವೇಳೆ ಹಳೆ ಕರ್ಮ ಇನ್ನೂ ಉಳಿದಿದ್ದರೆ ಜನ್ಮ ತಪ್ಪುವುದಿಲ್ಲ. ಹುಚ್ಚರು ಕರ್ಮ ಪ್ರಕಾರ ಒಂದು ಜನ್ಮದಲ್ಲಿ ಹಾಗೆ ಇರುತ್ತಾರೆ. ಅವರಿಗೆ ಕರ್ಮ ಉಳಿದಿರುತ್ತದೆ. ಆದ್ದರಿಂದ ಜನ್ಮ ಸಹ ಇರುತ್ತದೆ.

**291) ಓದು ದೊಡ್ಡದಾ? ಭಕ್ತಿ ದೊಡ್ಡದಾ? ದೈವಜ್ಞಾನ ದೊಡ್ಡದಾ?**

ಉ. ಈ ಮೂರಲ್ಲಿ ಜನ್ಮರಾಹಿತ್ಯವನ್ನು ಮಾಡುವ ದೈವಜ್ಞಾನವೇ ದೊಡ್ಡದು.

**292) ಗರ್ವ, ಕೋರಿಕೆಗಳನ್ನು ಹೇಗೆ ಜಯಿಸಬೇಕು?**

ಉ. ಸಾಧನೆಯಿಂದ ಸಾಧ್ಯವಾಗುತ್ತದೆ. ಅಭ್ಯಾಸ ಛಲ ಇದ್ದರೆ ಸಾಧ್ಯವಿಲ್ಲದಿರುವುದು ಯಾವುದು ಇಲ್ಲ. ಎರಡು ಗುಣಗಳನ್ನೇ ಕೇಳಿದ್ದೀರ ಉಳಿದ ಗುಣಗಳು ಹತ್ತು ಇವೆ ಅವೆಲ್ಲವನ್ನು ಜಯಿಸಬೇಕು.

**293) ಮನುಷ್ಯರಿಗೆ ದೇವತೆಗಳು ಮೈಯ್ಯೊಳಗೆ ಬರುತ್ತಾರಂತೆ. ಆಗ ಮನುಷ್ಯರು ದೇವತೆಗಳಾಗುತ್ತಾರಾ? ಅಸಲಿಗೆ ದೇವತೆಗಳು ಬರುತ್ತಾರಾ?**

ಉ. ದೇವತೆಗಳ ಹೆಸರುಗಳು ಹೇಳಿ ದೆವ್ವಗಳು ಸಹ ಬರುತ್ತಿರುತ್ತವೆಂದು ಅವು ನಿಜ ದೇವತೆಗಳು ಅಲ್ಲವೆಂದು ತಿಳಿದುಕೊಳ್ಳಿ. ಮನುಷ್ಯರ ಶರೀರದೊಳಗೆ ಗ್ರಹಗಳು ಅಲ್ಲದೆ ವಿಗ್ರಹಗಳು ಸಹ ಬರಬಹುದು. ಶರೀರದಲ್ಲಿ ಯಾರಿದ್ದರೆ ಆ ಸಮಯಕ್ಕೆ ಅವರೇ ಆಗುತ್ತಾರೆ.

**294) ಈ ಕಾಲದಲ್ಲಿ ಕೆಲವರು ಬಾಬಾಗಳು ಮಹಿಮೆಗಳು ತೋರಿಸುತ್ತಾರೆ. ಅವು ಹೇಗೆ ಮಾಡುತ್ತಾರೆ?**

ಉ. ನಾವು ಬರೆದ ಸತ್ಯಾನ್ವೇಷಿ ಕಥೆ ಓದಿರಿ ತಿಳಿಯುತ್ತದೆ. ಬಹಳ ಮಟ್ಟಿಗೆ ಮಹಿಮೆಗಳು ಬೂಟಿಕೆ. ಬಾಬಾಗಳು ಮಾಡುವ ಮಹಿಮೆಗಳೆಲ್ಲವು ನಮ್ಮ ಶಿಷ್ಯರಲ್ಲಿ ಮಾಡುವವರು ಸಹ ಇದ್ದಾರೆ. ಕೆಲವು ಮೊದಲಿಗೆ ಬೂಟಕವಾದರೆ, ಕೆಲವನ್ನು ಕಾಣಿಸದ ಸೂಕ್ಷ್ಮ ಶರೀರಗಳೊಂದಿಗೆ ಮಾಡಿಸುತ್ತಾರೆ. ಅವು ಎಲ್ಲವು ನಮಗೆ ಮಹಿಮೆಗಳ ಹಾಗೆ ತೋಚುತ್ತವೆ.

**ವೆಂಕಟ್, ಉರವಕೊಂಡ**

**295) ಕಲೆ ಎಂದರೆ ಏನು? ಅದಕ್ಕೆ ಮೂಲ ಎಲ್ಲಿ?**

ಉ. ಕಲೆ ಎಂದರೆ ಎಷ್ಟೋ ಅರ್ಥಗಳಿವೆ. ಆದರೆ ನಿಮ್ಮ ಪ್ರಶ್ನೆಗೆ ಉತ್ತರ ಕಲೆ ಎಂದರೆ ಒಂದು ವಿದ್ಯೆಯಲ್ಲಿ ನೈಪುಣ್ಯತೆ ಎನ್ನುತ್ತಾರೆ. ಇದಕ್ಕೆ ಮೂಲ ಹೃದಯ ಸ್ಥಾನ. ಹೃದಯವೆಂದರೆ ಬ್ರಹ್ಮನಾಡಿ ಅಗ್ರಸ್ಥಾನವೆಂದು ತಿಳಿಯಬೇಕು.

**296) ಭಗವಾನನ ಸಾನ್ನಿಧ್ಯದಲ್ಲಿ, ಭಕ್ತರ ಹೃದಯಗಳಲ್ಲಿ, ಗುಡಿ ಗಂಟೆಗಳಲ್ಲಿ, ನಿಶ್ಚಲ ಜ್ಯೋತಿಯಲ್ಲಿ, ಅಮಾಯಕನ ಹೃದಯದಲ್ಲಿ, ಶ್ರಮ ಜೀವಿಗಳ ನೆರಳಲ್ಲಿ ಪ್ರಜ್ವಲಿಸುವ ಹಾಯನ್ನು ನಿಮ್ಮ ಮೇಲೆ ಪ್ರಸರಿಸಬೇಕೆಂದು ನನ್ನ ಆಕಾಂಕ್ಷೆ?**

ಉ. ನೀವು ಆಕಾಂಕ್ಷಿಸುವುದರಲ್ಲಿ ತಪ್ಪಿಲ್ಲ. ಆದರೆ ನಾನು ಹಾಯಾಗಿರಲು ಭೂಮಿ ಮೇಲೆ ಬರಲಿಲ್ಲ. ನಮ್ಮ ಜೀವನವೆ ಯಾರಿಗೂ ಅರ್ಥವಾಗದ ಭೂಮಿಕ (ಪಾತ್ರ) ಮೇಲಕ್ಕೆ ಹಾಯಾಗಿ ಕಾಣಿಸುತ್ತೇವೆ ಆದರೆ ಒಳಗೆ ಹಾಯಾಗಿ ಇರುವುದಿಲ್ಲ. ಹಾಗೆ ಕಷ್ಟಗಳಲ್ಲಿ ದುಃಖಗಳಲ್ಲಿ ಇರುವಹಾಗೆ ಕಾಣಿಸುತ್ತೇವೆ ಆದರೆ ನಮಗೆ ದುಖಃವಿರುವುದಿಲ್ಲ.

**ಕೆ.ವಿ. ಸತ್ಯನಾರಾಯಣ, ಪೆನುಕೊಂಡ**

**297) ಜೀವಿಗೆ ಪ್ರತಿ ಕ್ಷಣ ಬ್ರಹ್ಮಾನಂದದಲ್ಲಿ ಜೀವನವನ್ನು ಸಾಗಿಸಬೇಕೆಂದರೆ ಆತ್ಮ ಸಾಕ್ಷಾತ್ಕಾರ ಮಾಡಿಕೊಂಡವರಿಗೆ ಮಾತ್ರವೇ ಸಾಧ್ಯವಾ? ನಿತ್ಯ ಕರ್ಮಗಳಲ್ಲಿ ಅದು ಅಸಾಧ್ಯವಾ?**

ಉ. ಹೀಗೆ ನಿತ್ಯ ಕರ್ಮಗಳಲ್ಲಾಗಲಿ, ಹಾಗೆ ಆತ್ಮ ಸಾಕ್ಷಾತ್ಕಾರದಲ್ಲಾಗಲಿ, ಪ್ರತಿ ಕ್ಷಣ ಬ್ರಹ್ಮಾನಂದ ಎನ್ನುವ ಮಾತು ಅಸಾಧ್ಯ. ಆತ್ಮ ಸಾಕ್ಷಾತ್ಕಾರವೆನ್ನುವುದು ಆನಂದವು ಸಹ ಅಲ್ಲ ಮತ್ತೆ ಬ್ರಹ್ಮಾನಂದವು ಹೇಗೆ ಆಗುತ್ತದೆ. ನಿತ್ಯ ಕರ್ಮಗಳಲ್ಲಿ ಕರ್ಮಾನುಸಾರ ಯಾವಾಗಾದರು ಸಂತೋಷ ಬರಬಹುದು. ಆದರೆ ಪ್ರತಿ ಕ್ಷಣ ಬರುವುದಿಲ್ಲ.

**ಕೆ. ಹೈದರ್ ಬಾಷಾ, ಹಂಪಾಪುರಂ**

**298) ಈ ಭೂಮಿ ಮಧುಕೈಟಭ ಎನ್ನುವ ರಾಕ್ಷಸನ ಮೆದುಳಿನಿಂದ ಏರ್ಪಟ್ಟಿದೆಯೆಂದು, ಆದ್ದರಿಂದ "ಮೇಧಿನಿ" ಎನ್ನುತ್ತಾರೆಂದು ಗ್ರಂಥಗಳಲ್ಲಿ ಬರೆಯಲಾಗಿದೆ. ಇದು ನಿಜವೇನಾ?**

ಉ. ಪುರಾಣಗಳು, ಶಾಸ್ತ್ರಗಳು, ಇತಿಹಾಸ (ಚರಿತ್ರೆ) ಗಳು ಎನ್ನುವವು ಇವೆ. ಇವುಗಳಲ್ಲಿ ನೀವು ಹೇಳಿರುವ ವಿಷಯ ಪುರಾಣಗಳಲ್ಲಿ ಬರೆಯಲ್ಪಟ್ಟಿದೆ. ಆದ್ದರಿಂದ ನಂಬಬೇಕಾದ ಅವಶ್ಯಕತೆ ಇಲ್ಲ. ಭೂಮಿ ಯಾರ ಮೆದಳಿನಿಂದ ಏರ್ಪಟ್ಟಿರುವುದಲ್ಲ. ಭೂಮಿ ಒಂದೇ ಅಲ್ಲದೆ ನೀರು, ಅಗ್ನಿ, ಆಕಾಶ, ಗಾಳಿ ಎಲ್ಲವು ಒಂದೇ ಸಲ ಏರ್ಪಟ್ಟಿರುವವು. ಇವುಗಳ ಸೃಷ್ಟಿಕರ್ತ ಪರಮಾತ್ಮ ಒಬ್ಬನೇ.

**299) ಸೂರ್ಯ ಚಂದ್ರರನ್ನು ಪುರಾಣಗಳಲ್ಲಿ ದೇವತೆಗಳಂತೆ ವರ್ಣಿಸಿದ್ದಾರೆ. ಈದಿನ ಚರಿತ್ರೆಗಳು ಗ್ರಹಗಳೆಂದು ತಿಳಿಸುತ್ತಿವೆ. ಇವು ಗ್ರಹಗಳಾ? ದೇವತೆಗಳಾ?**

ಉ. ದೇವತೆಗಳೆಲ್ಲರು ಶಕ್ತಿ ಇರುವ ಗ್ರಹಗಳು. ಸ್ಥೂಲವಾಗಿ ಗೋಳಗಳಾಗಿ ಸಹ ಇವೆ. ಅವುಗಳಲ್ಲಿ ಸೂಕ್ಷ್ಮವಾಗಿ ಜೀವಿಯು ಸಹ ಇದ್ದಾನೆ. ಆ ಜೀವಿಯು ಸೂಕ್ಷ್ಮ ಶರೀರದೊಂದಿಗೆ ಭೂಗೋಳದ ಮೇಲೆ ಸಹ ಬಂದು ಮಾತನಾಡಬಹುದು. ಆದ್ದರಿಂದ ಪುರಾಣಗಳಲ್ಲಿ ದೇವತೆಗಳೆಂದು ಬರೆದಿರಬಹುದು.

**ಶ್ರೀ ಸೀತಾರಾಮ್, ಆಯಿಲ್‌ಮಿಲ್, ಪ್ರೊದ್ದುಟೂರು**

**300) ಚರ್ಮಾಸನದ ಮೇಲೆ ಅಲ್ಲದೆ ಪೀಠದಮಣೆ, ಚಾಪೆ ಮೇಲೆ ಕುಳಿತರೆ ಯೋಗ ಶಕ್ತಿ ನಷ್ಟವಾಗುತ್ತದಾ?**

ಉ. ಯೋಗಶಕ್ತಿಯನ್ನು ಭೂಮಿಯ ಆಕರ್ಷಣ ಶಕ್ತಿಯಿಂದ ಚರ್ಮಗಳು ಹೊರತು ಪೀಠದ ಮಣೆ, ಚಾಪೆ ಮತ್ತು ಯಾವ ಇತರ ಸಾಧನಗಳು ನಿವಾರಿಸಲಾರವು.

**ಯಂ. ರಂಗಯ್ಯ, ವಿದ್ವಾನ್, ಹಂಪಾಪುರಂ**

**301) ಉಪವಾಸಗಳು ದಿವ್ಯ ಔಷಧ ಎನ್ನುತ್ತಾರೆ ಹಿರಿಯರು ಇದು ನಿಜವೇನಾ? ಏಕೆ?**

ಉ. ಉಪವಾಸಗಳು ದಿವ್ಯ ಔಷಧವೆನ್ನುವುದು ನಿಜವಾದ ಮಾತೇ. ಉಪವಾಸ ಮಾಡಬಹುದು. ಮನುಷ್ಯನ ಶರೀರ ಆರೋಗ್ಯ ಪರಿಸ್ಥಿತಿ ಎಲ್ಲಾ ಗ್ರಂಥಿಗಳ ಮೇಲೆ, ಅವು ಬಿಡುಗಡೆ ಮಾಡುವ ಹಾರ್ಮೋನುಗಳ ಮೇಲೆ ಆಧಾರಪಟ್ಟಿರುವುದರಿಂದ ಗ್ರಂಥಿಗಳು

ಉತ್ತೇಜವಾಗುವ ಉಪವಾಸ ದಿವ್ಯ ಔಷದೊಂದಿಗೆ ಸಮಾನವೇ. ಉಪವಾಸವೆಂದು ಪೂರಿ, ಉಪ್ಪಿಟ್ಟು ತಿನ್ನುವವರಿಗೆ ವರ್ತಿಸುವುದಿಲ್ಲ. ಖಾಲೀ ಹೊಟ್ಟೆ ಮಾಡಿಕೊಳ್ಳುವವರಿಗೆ ಮಾತ್ರ ಉಪವಾಸ ಔಷಧ ಸಮಾನ.

**302) ದೇವರಿಗೆ ನಮಸ್ಕರಿಸುವಾಗ ನಾವು ತೆಂಗಿನಕಾಯನ್ನು ಹೊಡೆಯುತ್ತೇವೆ. ಇದು ಆಚಾರವಾ ಅಥವಾ ತಲೆಮಾರಿನಿಂದ ಬರುತ್ತಿರುವ ಸಾಂಪ್ರದಾಯವಾ?**

ಉ. ಇದು ಆಚಾರವೇ ಆದರೆ ಈ ದಿನಗಳಲ್ಲಿ ಅದು ಅರ್ಥ ತಿಳಿಯದ ಸಾಂಪ್ರದಾಯವಾಗಿ ಹೋಗಿದೆ. ಅರ್ಥ ಮಾಡಿಕೊಂಡರೆ ಎಷ್ಟೋ ಅರ್ಥದೊಂದಿಗೆ ಕೂಡಿಕೊಂಡಿರುವ ಆಚರಣೆ ಎಂದು ತಿಳಿಯುತ್ತದೆ.

**ದಂಡಾ ಜಯರಾಮ್, ಉರವಕೊಂಡ**

**303) ಸೂರ್ಯ ಗ್ರಹಣಕ್ಕೆ ಕಾರಣ ಶಾಸ್ತ್ರ ರೀತ್ಯವಾಗಿ ತಿಳಿದಿದ್ದರು, ನಮ್ಮವರು ರಾಹುವು ಕೇತುವು ಎನ್ನುವ ಇಬ್ಬರು ರಾಕ್ಷಸರು ಸೂರ್ಯನನ್ನು ನುಂಗಿ ಹಾಕುತ್ತಿದ್ದಾರೆನ್ನುವ ಮೂಢ ನಂಬಿಕೆಗಳನ್ನು ನೀವೆಲ್ಲಿಯವರೆಗು ಏಕೀಭವಿಸುತ್ತೀರ?**

ಉ. ನಾನು ಮೂಢ ನಂಬಿಕೆಗಳೊಂದಿಗೆ ಏಕೀಭವಿಸುವುದಿಲ್ಲ. ಶಾಸ್ತ್ರವನ್ನು ವಿಶ್ವಾಸಿ ಸುತ್ತೇನೆ. ರಾಹು ಕೇತುಗಳು ರಾಕ್ಷಸರಲ್ಲ.

**ಮಚ್ಚಾ ವೆಂಕಟರಾಮಯ್ಯ, ಉರವಕೊಂಡ**

**304) ಜೀವನದಲ್ಲಿ ಮನುಷ್ಯನು ಖರ್ಚು ಮಾಡುವುದು ಸಂಪಾದಿಸುವುದು ಏನು?**

ಉ. ಮನುಷ್ಯನು ಬಾಹ್ಯವಾಗಿ ಯಾವ ಕೆಲಸ ಮಾಡದಿದ್ದರು ಜೀವನದಲ್ಲಿ ಖರ್ಚು ಮಾಡುವುದು ಸಂಪಾದಿಸುವುದು ಒಂದೇ ಒಂದಿದೆ. ಅದೇ ಕರ್ಮ. ಮೊದಲ ಪ್ರಾರಬ್ಧಕರ್ಮ ಖರ್ಚಾಗುತ್ತಲೇ ಆಗಾಮಿ ಕರ್ಮ ಸಂಪಾದಿಸಲ್ಪಡುತ್ತಿದೆ.

**ಡಿ. ಶ್ರೀಧರ್ ನಾಯುಡು, ಪುಟ್ಟಪರ್ತಿ**

**305) ಪ್ರತಿಯೊಂದಕ್ಕು ಸೃಷ್ಟಿಕರ್ತ ಒಬ್ಬನಿದ್ದಾನೆ ಆತನೇ ಪರಮಾತ್ಮನೆಂದು ನೀವು ಹೇಳುತ್ತಿದ್ದೀರ. ಪ್ರತಿ ಯೊಂದಕ್ಕು ಸೃಷ್ಟಿಕರ್ತ ಒಬ್ಬನಿರುವಾಗ ಮತ್ತೆ ಪರಮಾತ್ಮನಿಗೆ ಸೃಷ್ಟಿಕರ್ತ ಯಾರು?**

ಉ. ಪ್ರತಿಯೊಂದಕ್ಕು ಸೃಷ್ಟಿಕರ್ತ ಪರಮಾತ್ಮನಾಗಿರುವ ಮಾತು ನಿಜವೇ. ಪ್ರತಿಯೊಂದಕ್ಕು ಸೃಷ್ಟಿಕರ್ತ ಒಬ್ಬನಿದ್ದಾನೆನ್ನುವ ಸೂತ್ರ ಪರಮಾತ್ಮನಿಗೆ ಅನ್ವಯಿಸುವುದಿಲ್ಲ. ಏಕೆಂದರೆ ಪರಮಾತ್ಮ ಏನು ಅಲ್ಲ. ಪರಮಾತ್ಮ ಪ್ರತಿಯೊಂದರಂತೆ ಒಂದು ಪದಾರ್ಥವಲ್ಲ. ಏನಾದರು ಆದರೆ ಅದಕ್ಕೆ ಸೃಷ್ಟಿಕರ್ತ ಇರುತ್ತಾನೆ. ಏನು ಅಲ್ಲದಕ್ಕೆ ಸೃಷ್ಟಿಕರ್ತ ಇರುವುದಿಲ್ಲ ಎನ್ನುವ ಸೂತ್ರ ತಿಳಿಯಬೇಕು.

**306) ಪುರಾಣ ಕಥೆಗಳಲ್ಲಿ ತಪ್ಪುಗಳಿವೆ ಎಂದು ಅನೇಕ ಸಂದರ್ಭಗಳಲ್ಲಿ ತಿಳಿಸಿದ ನೀವು "ಪುರಾಣ ರಹಿತ ಶಾಸ್ತ್ರ ಸಹಿತ" ಏಕೈಕ ಮಾಸ ಪತ್ರಿಕೆಯಲ್ಲಿ ಪ್ರತಿ ಯೊಂದಕ್ಕು ಪುರಾಣ ಸಹಿತವಾದ ಗೀತೆಯನ್ನು ಉದಹರಿಸುವುದು ತಪ್ಪಲ್ಲವೆ?**

ಉ. ಪುರಾಣಗಳು ಯಾವುವು. ಶಾಸ್ತ್ರಗಳು ಯಾವವೆಂದು ತಿಳಿಯದೇ ಹೋಗಿರುವು ದರಿಂದ ನೀವು ಹಾಗೆ ಕೇಳಿದ್ದೀರ. ಪುರಾಣಗಳು 18 ಮಾತ್ರ. ಅದರಲ್ಲಿ ಗೀತೆ ಇಲ್ಲ. ಗೀತೆ ಪುರಾಣವಲ್ಲ. ಗೀತೆ ಯೋಗಶಾಸ್ತ್ರ.

**307) ಯೋಗೀಶ್ವರನು ಎನ್ನುವ ಪದಕ್ಕೆ ಅರ್ಥವನ್ನು ತಿಳಿಸಿ?**

ಉ. ಯೋಗ + ಈಶ್ವರ = ಯೋಗೀಶ್ವರ ಆಗುತ್ತದೆ. ಯೋಗವೆಂದರೆ ನಿಮಗೆ ಅರ್ಥ ತಿಳಿದಿರುವುದು, ಹಾಗೇ ಈಶ್ವರನೆಂದರೆ ಅಧಿಪತಿ ಎಂದು ಅರ್ಥ. ಯೋಗಕ್ಕೆ ಅಧಿಪತಿ ಎನ್ನುವ ಪದವಿಯೇ ಯೋಗೀಶ್ವರ ಎನ್ನುವ ಮಾತು.

**308. ಲೋಕದಲ್ಲಿರುವವರಿಗೆ ಪರಮಾತ್ಮನ ಬಗ್ಗೆ ತಿಳಿಸಿ, ಪರಮಾತ್ಮ ಒಬ್ಬನೇಎಂದು ತಿಳಿಸಿ, ಅನೇಕ ಜ್ಞಾನ ಬೋಧನೆಗಳು ಮಾಡುವ ನೀವು ಸತ್ಯಾನ್ವೇಷಿ ಸೀರಿಯಲ್ "ಹಿಂಸೆಗೆ ಪ್ರತಿ ಹಿಂಸೆ" ಸಿದ್ಧಾಂತವನ್ನು ತಿಳಿಸುವುದು ಅಷ್ಟು ಒಳ್ಳೆಯದಲ್ಲ ಎಂದುಕೊಳ್ಳುತ್ತೇನೆ. ಇದರ ಬಗ್ಗೆ ನೀವೇನನ್ನುತ್ತೀರ?**

ಉ. ಹಿಂಸೆ ಮಾಡುವುದಿಲ್ಲವೆಂದು, ಹಿಂಸೆ ಪಾಪವೆಂದು ಹೇಳಿ ಆಯುಧಗಳನ್ನು ಕೆಳಗೆಹಾಕಿದ ಅರ್ಜುನನಿಗೆ ಕೃಷ್ಣನು ಹಿಂಸೆಯೇ ಮಾಡೆಂದಿದ್ದಾನೆಂದು ಮರೆಯಬೇಡಿ. ಕರ್ಮವೆನ್ನುವ ಶಕ್ತಿ ಆಡಿಸುವ ಆಟದ ಗೊಂಬೆಗಳೇ ಆಗಲಿ ನಾವು ನಿಜವಾಗಿ ಏನು ಮಾಡುವುದಿಲ್ಲವೆಂದು ನಡೆಯುವ ಕೆಲಸಗಳಲ್ಲಿ ಹಿಂಸೆ ಅಹಿಂಸೆ ಎಂದು ತಿಳಿದುಕೊಳ್ಳುವುದು ಅಜ್ಞಾನವೇ ಆಗುತ್ತದೆನ್ನುವ ಗೀತಾವಾಕ್ಯವನ್ನು ವಿಸ್ಮರಿಸಬಾರದು.

**ಜಿ. ಗೋವಿಂದು, ಎದ್ದುಲ ಪಲ್ಲಿ**

**309) ಹಿಡಿಕೆಯಷ್ಟು ಸಣ್ಣದು, ವಿಶ್ವದಷ್ಟು ವಿಶಾಲವಾದದ್ದು, ಕ್ಷಣಗಳಲ್ಲೆ ಸಾಯುತ್ತಾ ಜೀವಿಸುವುದು, ಜೀವಿಸುತ್ತಾ ಮರಣಿಸುವುದು, ಅಳಿಸುತ್ತಾ ನಗುವುದು, ನಗಿಸುತ್ತಾ ಅಳಿಸುವುದು, ಕಠಿಣವಾದದ್ದು, ಮೃದುವಾದದ್ದು, ಎಲ್ಲಾ ವಿರುದ್ಧ ಲಕ್ಷಣಗಳನ್ನು ಬೆರೆಸಿಕೊಂಡಿರುವುದು. ಸೃಷ್ಟಿಯಲ್ಲಿ ಒಂದೇ ಒಂದಿದೆ. ಅದು ಯಾವದು?**

ಉ. ನಮ್ಮಲ್ಲಿರುವ ಮನಸ್ಸು.

**ಟಿ. ಓಬುಲ ನಾರಾಯಣ ರೆಡ್ಡಿ, ಚಿನ್ನಪೊಡಮಲ**

**310) ಶ್ರೀಮದ್ಭಗವದ್ಗೀತೆಯಲ್ಲಿ ದೇವರ ಬಗ್ಗೆ ರೂಪ ರಹಿತ, ನಾಮ ರಹಿತ, ಸರ್ವಾಂತರ್ಯಾಮಿಯಾಗಿ ಇದ್ದಾನೆಂದು ತಿಳಿಸುತ್ತಿರುವಾಗ ಇಂದೂ ತತ್ವ ಅನೇಕ ರೂಪಗಳಾಗಿ ಅನೇಕ ಹೆಸರುಗಳಾಗಿ ದೇವರನ್ನು ಕರೆಯುತ್ತಿದ್ದಾರೆ ಏಕೆ?**

ಉ. ನಾಮ ರೂಪ ರಹಿತ ದೇವರನ್ನು ಸೇರುವುದಕ್ಕೆ ಉಪಾಯವಾಗಿ ನಾಮ ರೂಪ ಸಹಿತ ದೇವತೆಗಳನ್ನು ಕಲ್ಪಿಸಿ, ಅದರ ಹಿಂದೆ ಎಷ್ಟೋ ಅರ್ಥಗಳೊಂದಿಗೆ ಕೂಡಿಕೊಂಡಿರುವ ಆಚರಣೆಗಳನ್ನು ತುಂಬಿ ಇಟ್ಟಿದ್ದಾರೆ ಪೂರ್ವದ ನಮ್ಮ ಹಿರಿಯರು. ಆದರೆ ಈದಿನ ಅರ್ಥವನ್ನು ಮರೆತುಹೋದ ನಮ್ಮ ಮಧ್ಯೆ ಅರ್ಥರಹಿತಗಳಾದ ಆಚರಣೆಗಳು ಉಳಿದಿವೆ. ಅದ್ದರಿಂದ ರೂಪ ನಾಮಗಳನ್ನೇ ದೇವತೆಗಳಾಗಿ ನಾವು ನಂಬುತ್ತಿದ್ದೇವೆ. ಅದು ಬಹಳ ತಪ್ಪು. ರೂಪ ನಾಮಗಳ ಹಿಂದೆ ಅರ್ಥವನ್ನು ನೋಡಿದರೆ, ಏನು ಅಲ್ಲದ ದೇವರೇ ತಿಳಿಯುತ್ತಾನೆನ್ನುವ ಉದ್ದೇಶದಿಂದ ಹಿರಿಯರು ಎಷ್ಟೋ ವಿಧಾನಗಳನ್ನು ರೂಪ ನಾಮಗಳಿಗೆ ಮುಡಿ ಇಟ್ಟಿದ್ದಾರೆ. ಆದರೆ ಆದಿನದ ಇಂದೂ ತತ್ವ ರಹಸ್ಯ ತಿಳಿಯದ ಈಗಿನ ಹಿರಿಯರೆಲ್ಲರು ತಪ್ಪಾಗಿ ತಿಳಿದು ದೇವರಿಗೆ ರೂಪ ನಾಮಗಳು ಇವೆ ಎಂದುಕೊಂಡಿದ್ದಾರೆ.

**311) ಜೀವಿಗಳಿಗೆ ತಮ್ಮ ತಮ್ಮ ಪೂರ್ವ ಜನ್ಮ ಜ್ಞಾಪಕಗಳಿರುವುದಿಲ್ಲ ಏಕೆ?**

ಉ. ಜ್ಞಾಪಕ ಶಕ್ತಿಗೆ ಮತ್ತೊಂದು ಹೆಸರಿರುವ ಮನಸ್ಸು ಆಯಾ ಜನ್ಮಗಳೊಂದಿಗೆ ಅಂತ್ಯವಾಗಿ ಹೋಗುತ್ತಿದೆ. ವಿಷಯಗಳನ್ನು ಜ್ಞಾಪಕಕ್ಕೆ ತರುವ ಮೊದಲನೆಯ ಮನಸ್ಸು ಎರಡನೆಯ ಜನ್ಮದಲ್ಲಿ ಇರುವುದಿಲ್ಲ, ಆದ್ದರಿಂದ ಮೊದಲಿನ ಜ್ಞಾಪಕಗಳು ಎರಡನೆಯ ಜನ್ಮದಲ್ಲಿ ಇರುವುದಿಲ್ಲ.

**ಯಲ್ಲಪು ಶ್ರೀರಾಮುಲು. ಧರ್ಮವರಂ**

**312) ಸತ್ಯಕ್ಕೂ ಅಸತ್ಯಕ್ಕೂ ಮಧ್ಯೆ ಎಷ್ಟು ದೂರವಿದೆ?**

ಉ. ನಾಲ್ಕು ಬೆರಳಷ್ಟು (3 ಇಂಚು) ದೂರ ಮಾತ್ರವೇ ಇದೆ. ಹೇಗೆಂದರೆ ಕಣ್ಣಿನಿಂದ ನೋಡುವುದು ಪ್ರತ್ಯಕ್ಷ ಸತ್ಯ. ಕಿವಿಯಿಂದ ಕೇಳುವುದು ಅಸತ್ಯವೂ ಸಹ ಆಗಿರಬಹುದು. ಆದ್ದರಿಂದ ಕಣ್ಣಿಗೆ ಕಿವಿಗೆ ಇರುವ ಮಧ್ಯ ದೂರವೇ ಸತ್ಯಕ್ಕೂ ಅಸತ್ಯಕ್ಕೂ ಇರುವ ದೂರವೆಂದು ತಿಳಿಯಬೇಕು.

**ದಂಡಾಜಯರಾಮ್, ಉರವಕೊಂಡ**

**313) "ಬ್ರಹ್ಮ ಸತ್ಯ ಜಗನ್ಮಿಥ್ಯ" ಎನ್ನುವ ವೇದಾಂತ ಸೂಕ್ತಿ ಆಧ್ಯಾತ್ಮಿಕ ಚಿಂತನೆಗೆ ಸಂಬಂಧಿಸಿರುವವರೆಗೂ ಇದು ಚೆನ್ನಾಗಿ ಇದೆ. ಈ ಸೂಕ್ತಿಯನ್ನು ವಾಸ್ತವ ಜಗತ್ತಿಗೆ ಅನ್ವಯಿಸಿದರೆ?**

ಉ. ಜಗತ್ತಿರುವವರೆಗು ಜಗತ್ತು ಸತ್ಯವೇ ಆದ್ದರಿಂದ ಜಗನ್ಮಿಥ್ಯ ಎನ್ನುವಮಾತು ತಪ್ಪಾಗಿ ಜಗತ್ತಲ್ಲಿರುವವರಿಗೆ ತೋಚುತ್ತದೆ. ಹಾಗೇ ಬ್ರಹ್ಮ (ದೈವ) ಎನ್ನುವುದೇನೋ ಜಗತ್ತಿಗೆ ಮಾತ್ರ ಸ್ವಲ್ಪವೂ ತಿಳಿಯದು ಆದ್ದರಿಂದ ಬ್ರಹ್ಮ ಸತ್ಯ ಎನ್ನುವಮಾತು ಸಹ ಜಗತ್ತಿಗೆ ತಪ್ಪಾಗಿಯೇ ತೋಚುತ್ತದೆ. ಪ್ರಪಂಚವೆಲ್ಲ ಪ್ರಳಯ ಹೊಂದಿದಾಗ ಜಗತ್ ಅನಿತ್ಯ ಬ್ರಹ್ಮ ಸತ್ಯವಾಗುತ್ತದೆ. ಆದ್ದರಿಂದ ಮೇಲಿನ ಸೂಕ್ತಿ ಪ್ರಳಯವಾದಾಗ ಅನ್ವಯಿಸುತ್ತದೆ ಅದರೆ ಈಗ ಪ್ರತ್ಯಕ್ಷವಾಗಿ ಇರುವ ಜಗತ್ತಿಗೆ ಅನ್ವಯಿಸುವುದಿಲ್ಲ.

**ನಾರಾಯಣ, ನರಸಾಪುರಂ**

**314) ಮೋಕ್ಷ ಎಂದರೆ ಏನು?**

ಉ. ಜೀವಿಯು ಜನ್ಮಗಳು ಇಲ್ಲದೆ ಅನಂತ ಪ್ರಪಂಚವೆಲ್ಲವು ವ್ಯಾಪಿಸುವುದು.

**315) ಕಾರಣ ಜನ್ಮನು ಎಂದರೆ ಏನು?**

ಉ. ಉದ್ದೇಶ ಪೂರ್ವಕವಾಗಿ ಹುಟ್ಟಿರುವವನನ್ನು ಕಾರಣ ಜನ್ಮನೆನ್ನುತ್ತಾರೆ. ಕಾರಣ ಜನ್ಮನೆಂದರೆ ಒಂದು ಕಾರಣವನ್ನು ಇಟ್ಟುಕೊಂಡು ಹುಟ್ಟುವುದೆಂದು ಅರ್ಥ. ಹಾಗೆ ಹುಟ್ಟುವವನು ಪರಮಾತ್ಮ ಒಬ್ಬನೇ ಎಂದು ತಿಳಿಯಬೇಕು. ಆತನು ಹುಟ್ಟುವುದಕ್ಕೆ ಕಾರಣ ಧರ್ಮಗಳನ್ನು ತಿಳಿಸಬೇಕೆನ್ನುವ ಉದ್ದೇಶವೊಂದೆ.

**ಯಂ. ಜಯಪಾಲ್, ಹಂಪಾಪುರ**

**316. ಪ್ರತಿ ದಿನ ಬೆಳಿಗ್ಗೆ ಕೆಲವರು ಸೂರ್ಯನಿಗೆ ನಮಸ್ಕಾರ ಮಾಡುತ್ತಾರೆ. ಇದು ಆಚಾರವೊ? ಅಥವಾ ಸಾಂಪ್ರದಾಯವೊ? ತಿಳಿಸಿ.**

ಉ. ಬೆಳಿಗ್ಗೆ ಸೂರ್ಯೋದಯ ನಂತರ ಸುಮಾರು ಒಂದು ಗಂಟೆ ವರೆಗು ಸೂರ್ಯನಿಂದ ಬರುವ ಕಿರಣಗಳು ಮಾನವನ ಶರೀರಕ್ಕೆ ಒಳಿತು ಮಾಡುವವಾಗಿ ಇವೆ. ಆದ್ದರಿಂದ ಆ ಸಮಯದಲ್ಲಿ ಸೊಂಟಕ್ಕೆ ಮಾತ್ರ ಬಟ್ಟೆ ಸುತ್ತಿಕೊಂಡು ಉಳಿದ ಶರೀರವೆಲ್ಲಾ ಸೂರ್ಯರಶ್ಮಿ ಬೀಳುವಹಾಗೆ ಸೂರ್ಯನಿಗೆ ಎದುರಾಗಿ ನಿಂತರೆ ಒಳ್ಳೆಯದು. ನಮಗೆ ಗಂಟೆ ಸಮಯವಿಲ್ಲ ತಾಳ್ಮೆಯು ಇಲ್ಲ ನಮ್ಮ ಆರೋಗ್ಯ ಚೆನ್ನಾಗಿದೆ ಎಂದು ಹೇಳುತ್ತಾರೆಂದು ಭಕ್ತಿಯಿಂದ ನಮಸ್ಕರಿಸುವುದೆಂದರೆ ಕ್ರಮ ತಪ್ಪದೆ ಮಾಡುತ್ತಾರೆನ್ನುವ ಭಾವದಿಂದ ಹಿರಿಯರು ಸೂರ್ಯನಮಸ್ಕಾರವೆನ್ನುವ ತಂತು ಇಟ್ಟಿದ್ದಾರೆ. ಶರೀರ ಶುಭ್ರವಾಗಿ ಇದ್ದರೆ ಸೂರ್ಯರಶ್ಮಿಯಿಂದ ಹೆಚ್ಚಿನ ಲಾಭವನ್ನು ಹೊಂದಬಹುದು. ಆದ್ದರಿಂದ ಸ್ನಾನ ಮಾಡಿ ಸೂರ್ಯ ನಮಸ್ಕಾರ ಮಾಡುವುದು ಒಳ್ಳೆಯದು.

**ಯಂ. ರಂಗಯ್ಯ ವಿದ್ವಾನ್, ಹಂಪಾಪುರಂ**

**317. ಬೆಳಿಗ್ಗೆ ನಿದ್ರೆಯಿಂದ ಏಳುವಾಗ ಬಲಗಡೆ ಏಳಬೇಕೆನ್ನುತ್ತಾರೆ ಹಿರಿಯರು. ಎಡಗಡೆ ಎದ್ದರೆ ಏನಾದರು ನಷ್ಟವಿದೆಯಾ? ತಿಳಿಸಿ.**

ಉ. ಪೂರ್ವದಲ್ಲಿ ಹಿರಿಯರು ಎಲ್ಲಾ ವಿಷಯಗಳಲ್ಲಿ ಅಂತರಾರ್ಥವನ್ನು ತಿಳಿದು ಮನುಷ್ಯನಿಗೆ ಉಪಯೋಗಾರ್ಥ ಈ ಕೆಲಸಗಳನ್ನು ತಿಳಿಸಿದ್ದಾರೆ. ಆದ್ದರಿಂದ ಆದಿನ ಅವು ಆಚಾರಗಳಾಗಿ ಇರುತ್ತಿದ್ದವು. ಆದರೆ ಈದಿನ ಅರ್ಥ ತಿಳಿಯದೆ ನಾವು ಮಾಡುತ್ತಿದ್ದೇವೆ ಆದ್ದರಿಂದ ಈಗ ಎಲ್ಲಾ ಸಾಂಪ್ರದಾಯಗಳಾಗಿ ಹೋಗಿವೆ. ನಮ್ಮ ಶರೀರದಲ್ಲಿ ಎಡಗಡೆ ನರಗಳಿಗೆ ಒತ್ತಡ ಅಥವಾ ಭಾರ ಹಾಕಿದರೆ ಮನಸ್ಸು ಬಲಗಡೆ ಸೂರ್ಯ ನಾಡಿ ಮೇಲೆ ಹೋಗುತ್ತದೆ. ಹಾಗೇ ಬಲಗಡೆ ಭಾರ ಹಾಕಿದರೆ ಎಡಗಡೆ ಇರುವ ಚಂದ್ರನಾಡಿಯೊಳಗೆ ಹೋಗುತ್ತದೆ. ಮುಂಜಾನೆ ಎದ್ದಾಗ ಮನಸ್ಸು ಚಂದ್ರನಾಡಿಮೇಲೆ ಇದ್ದರೆ ಆ ದಿನ ಪ್ರಪಂಚ ವಿಷಯಗಳು ದುರ್ಮಾರ್ಗ ವಿಷಯಗಳು ಮನಸ್ಸಿಗೆ ಬರುವುದಿಲ್ಲವೆಂದು, ಹಾಗೇ ಸೂರ್ಯನಾಡಿ ಮೇಲೆ ಇದ್ದರೆ ಹೆಚ್ಚಿನ ಪ್ರಪಂಚ ವಿಷಯಗಳು ಜ್ಞಾಪಕಕ್ಕೆ ಬರುತ್ತವೆಂದು ಪೂರ್ವದ ಹಿರಿಯರಿಗೆ ತಿಳಿದಿತ್ತು. ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಚಂದ್ರನು ಜ್ಞಾನ ಚಿಹ್ನೆ, ಸೂರ್ಯನು ಅಹಂಕಾರ ಚಿಹ್ನೆ. ಹಾಗೇ ಚಂದ್ರನು ಯುಕ್ತಿಗೆ ಮೂಲ

ಕಾರಕನಾದ ಮಂತ್ರಿ ಪದವಿಗೆ ಕಾರಕನಾದರೆ, ಸೂರ್ಯನು ಒಬ್ಬರ ಯುಕ್ತಿ ಮೇಲೆ ಆಧಾರಪಡುವ ಪ್ರಭು (ರಾಜನ) ಪದವಿಗೆ ಕಾರಕನು. ಆದ್ದರಿಂದ ಸೂರ್ಯ ಚಂದ್ರರು ಅಧಿಪತಿಗಳಾದ ಎರಡು ಅತಿ ದೊಡ್ಡ ನಾಡಿಗಳ ಮೇಲೆಯೇ ಎಲ್ಲವನ್ನು ಯೋಚಿಸುವ ಜ್ಞಾಪಕವಾದ ಮನಸು ನಿವಾಸಿಸುತ್ತಿದೆ. ಆದ್ದರಿಂದ ಮುಂಜಾನೆ ಏಳುವಾಗಲೇ ಚಂದ್ರನಾಡಿ ಮೇಲೆ ಮನಸ್ಸು ಇರುವುದರಿಂದ ಮನಸ್ಸಿಗೆ ಒಳ್ಳೆ ಉಪಾಯಗಳು ಇರುವ ಯೋಚನೆಗಳು, ದೈವಿಕ ಜ್ಞಾನ ಸಂಬಂಧ ಯೋಚನೆಗಳು ಬರುತ್ತವೆಂದು, ಸೂರ್ಯನಾಡಿ ಮೇಲೆ ಮನಸ್ಸಿರುವುದರಿಂದ ಆ ದಿನವೆಲ್ಲ ಬುದ್ಧಿ ಕಡಿಮೆ ಯೋಚನೆಗಳು, ಅಜ್ಞಾನ ಯೋಚನೆಗಳು ಬರುತ್ತವೆಂದು ತಿಳಿದು, ಏಳುವಾಗ ಬಲಗಡೆ ಶರೀರ ಭಾರವನ್ನೆಲ್ಲಾ ಹಾಕಿ ಏಳುವುದರಿಂದ ಬಲಗಡೆ ನರಗಳಿಗೆ ಒತ್ತಡಬೀಳುವುದರಿಂದ ಎಡಗಡೆ ಇರುವ ಚಂದ್ರನಾಡಿ ಮೇಲೆ ಮನಸ್ಸಿರುವುದೆಂದು ಬಲಗಡೆ ಏಳಬೇಕೆನ್ನುತ್ತಿದ್ದರು. ಪೂರ್ವದಲ್ಲಿ ಅರ್ಥ ತಿಳಿದಿದ್ದರಿಂದ ಎಲ್ಲರು ಬಲಗಡೆಯೇ ಏಳುತ್ತಿದ್ದರು. ಹಾಗೇ ಮಲಗುವಾಗ ದಕ್ಷಿಣ ದಿಕ್ಕಿಗೆ ತಲೆ ಇಟ್ಟುಕೊಂಡು ಮಲಗುತ್ತಿದ್ದರು.

**318. ಮನೆ ಹತ್ತಿರ ಬೇವಿನ ಗಿಡ ಇದ್ದರೆ ಒಳ್ಳೆಯದೆನ್ನುತ್ತಾರೆ ಏಕೆ? ಮುಳ್ಳಿನ ಗಿಡ ಏದ್ದರೆ ನಷ್ಟವೇ?**

ಉ. ಬೇವಿನ ಮರವಿದ್ದರೆ ನೆರಳು, ಮುಳ್ಳಿನ ಗಿಡವಿದ್ದರೆ ಮುಳ್ಳು ಬಿದ್ದು ಚುಚ್ಚುವುದಿರುತ್ತದೆ. ಯಾವುದು ಒಳ್ಳೆಯದೋ ಬಾಹ್ಯವಾಗಿ ಎಲ್ಲರಿಗೂ ತಿಳಿದಿರುವುದೇ ಅಲ್ಲವೆ! ಇದು ಅಲ್ಲದೆ ಮನೆ ಹತ್ತಿರ ಬೇವಿನ ಗಿಡ ಇರುವುದರಿಂದ ಬೇವಿನ ಎಲೆಯ ಮೇಲಿಂದ ಬರುವ ಗಾಳಿಯಿಂದ ಅನೇಕ ವಿಧವಾದ ಚರ್ಮವ್ಯಾಧಿ ಕ್ರಿಮಿಗಳು ನಶಿಸುತ್ತವೆ. ವಿಷ ವಾಯುಗಳು ನಿರ್ವೀರ್ಯವಾಗಿ ಹೋಗುತ್ತವೆ. ಆದ್ದರಿಂದ ತಿಳಿದವರೆಲ್ಲರು ಬೇವಿನ ಗಿಡವನ್ನು ಬೆಳಸಿಕೊಳ್ಳುತ್ತಿದ್ದರು. ಪೂರ್ವದಲ್ಲಿ ಮನೆ ಬಾಗಿಲಿಗೆ ಎರಡು ಕಡೆ ಪಕ್ಕದಲ್ಲಿ ಗೂಡುಗಳನ್ನಿಟ್ಟು ಆ ಗೂಡುಗಳಲ್ಲಿ (ಕಲ್ಲು) ಸಾರಾಯಿ ಕುಡಿಕೆಗಳನ್ನಿಡುತ್ತಿದ್ದರು. ಆದರೆ ಈಗ ಕಟ್ಟುವ ಮನೆಗಳಿಗೆ ಬಾಗಿಲಬಳಿ ಗೂಡುಗಳೇ ಇಲ್ಲದೆ ಹೋಗಿವೆ. ಗೂಡುಗಳಿದ್ದರೂ ಮನೆಗೆ ಸಾರಾಯಿ ಕುಡಿಕೆಗಳು ಇಲ್ಲ, ಬೇವಿನ ಎಲೆ ಇಲ್ಲ. ಸಾರಾಯಿ ಬೇವಿನೆಲೆ ಇಡುವುದರಿಂದ ಬಾಗಿಲ ಹತ್ತಿರವೆ ರೋಗ ಕ್ರಿಮಿಗಳ ನಾಶನ ನಡೆದು ಮನೆಯೊಳಗೆ ಯಾವ ರೋಗಗಳು ಹರಡುತ್ತಿರಲಿಲ್ಲ. ಅಮ್ಮನವರು ಎನ್ನುವ ಹೆಸರಲ್ಲಿ ಸಣ್ಣ ಮಕ್ಕಳಿಗೆ ಬರುವ ಚರ್ಮವ್ಯಾಧಿಗಳಿಗೆ ಬೇವಿನೆಲೆಯ ಗಾಳಿ ಒಳ್ಳೆಯ ಔಷಧವಾಗಿ ಕೆಲಸ ಮಾಡುತ್ತದೆ. ಆದ್ದರಿಂದ ಪೂರ್ವದಲ್ಲಿ ಅಮ್ಮನವರು ಸೋಕಿದ ಮಕ್ಕಳಿಗೆ ಬೇವಿನ ಎಲೆಯಿಂದ

ಬೀಸುವುದು, ಅವರ ಸುತ್ತಾ ಬೇವಿನೆಲೆಯನ್ನು ಇಡುವುದು ನಡೆಯುತ್ತಿತ್ತು. ಈಗಲೂ ಸಹ ಅಲ್ಲಲ್ಲಿ ಈ ಪ್ರಕ್ರಿಯೆ ಇನ್ನೂ ಇದೆ. ವೈದ್ಯದ ಪ್ರಕಾರ ಕುಷ್ಠ ರೋಗಿಗಳು ಸಹ 5 ವರ್ಷಗಳು ಬೇವಿನ ಮರದ ಕೆಳಗೆ ವಾಸಮಾಡುತ್ತಾ, ಆ ಗಿಡದ ಕೆಳಗೆ ಇರುವ ನೀರನ್ನು ಕುಡಿಯುತ್ತಾ, ಆ ಗಿಡ ಕೆಳಗೆ 12 ಗಂಟೆ ಇಟ್ಟಿರುವ ನೀರಿನಿಂದ ಸ್ನಾನ ಮಾಡುತ್ತಿದ್ದರೆ ಅವರ ಕುಷ್ಠ ರೋಗ ಸಹ ಗುಣವಾಗುತ್ತದೆಂದು ತಿಳಿಯಬೇಕು. ಅಷ್ಟೇ ಅಲ್ಲದೆ ಈ ಗಿಡ ಗಾಳಿ ಭೂತ ಪ್ರೇತಗಳಿಗೆ ಕೆಡಕನ್ನುಂಟುಮಾಡುವುದು. ಆದ್ದರಿಂದಲೆ ಮಾಂತ್ರಿಕರು ಬೇವಿನ ಎಲೆಯಿಂದ ಬೀಸುತ್ತಾ ಮಂತ್ರಿಸುತ್ತಾ ಇರುತ್ತಾರೆ. ಅದರಲ್ಲಿ ಅವರಿಗೆ ತಿಳಿದರು ತಿಳಿಯದಿದ್ದರು ಮಂತ್ರ ಬಲಕ್ಕಿಂತಲೂ ಬೇವಿನ ಬಲವೇ ಹೆಚ್ಚಾಗಿದೆ. ಹೀಗೆ ಅನೇಕ ಉಪಯೋಗಗಳು ಇರುವ ಬೇವಿನ ಮರವನ್ನು ಬೆಳೆಸಿಕೊಂಡರೆ ಮುಳ್ಳಿನ ಗಿಡಕ್ಕಿಂತಲೂ ಒಳ್ಳೆಯದು.

**ಚಿಂತಾ ರಾಮದಾಸು, ಚಿನ್ನಪೊಡಮಲ**

**319) ಪ್ರಪಂಚದಲ್ಲಿ ಎಷ್ಟೋ ಮಹನೀಯರು ತಪಸ್ಸು, ಯೋಗ, ಪ್ರಾರ್ಥನೆ ಭಜನೆ ಎಂದು ಇವುಗಳನ್ನು ಆಚರಿಸುತ್ತಾ ಇರುತ್ತಾರೆ. ಇವು ಎಲ್ಲವು ಯಾರಿಗಾಗಿ ಯಾವುದರ ನಿಮಿತ್ತ ಏಕೆ ಮಾಡುತ್ತಿದ್ದಾರೆ?**

ಉ. ಇವೆಲ್ಲವನ್ನು ಕೆಲವರು ತಮ್ಮ ಕೋರಿಕೆಗಳು ನೆರವೇರುತ್ತವೆಂಬ ಉದ್ದೇಶದಿಂದ ಮಾಡುತ್ತಿದ್ದಾರೆ. ಕೆಲವರೆನೋ ದೈವಕ್ಕೋಸ್ಕರ ದೈವ ನಿಮಿತ್ತ ಮಾಡುತ್ತಿದ್ದಾರೆ. ಆದರೆ ಯೋಗದಿಂದ ಹೊರತು ಇತರ ಯಾವ ಕ್ರಿಯೆಗಳಿಂದ ದೈವ ತಿಳಿಯದೆಂದು ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿ ದೇವರೇ ತಿಳಿಸಿದ್ದಾನೆ.

**ವೆಲುಗುಬಾಲ ಲಕ್ಷ್ಮಿನಾರಾಯಣ, ಗೊಲ್ಲಪಲ್ಲಿ**

**320) ಪ್ರೇಮವೆಂದರೇನು? ಅದರ ಸ್ವಭಾವವೇನು?**

ಉ. ಪ್ರೇಮವೆಂದರೆ ನಮ್ಮ ಶರೀರದಲ್ಲಿನ ಒಂದು ಗುಣ. ಅಸೂಯೆ ಎನ್ನುವ ಗುಣಕ್ಕೆ ವಿರುದ್ಧವಾಗಿ ಇರುವಹಾಗೆ ಮಾಡುವುದು ಅದರ ಸ್ವಭಾವ. ಅಂದರೆ ಅಸೂಯೆ ಗುಣವೊಂದರ ಸ್ವಭಾವಕ್ಕೆ ಪ್ರೇಮ ಗುಣ ಸ್ವಭಾವ ವಿರುದ್ಧ. ಮನಷ್ಯರ ಮೇಲೆ ಆಗಲಿ, ಪ್ರಾಣಿಗಳ ಮೇಲೆ ಆಗಲಿ, ವಸ್ತುಗಳ ಮೇಲೆ ಆಗಲಿ ಪ್ರೀತಿಯನ್ನು ಬೆಳಿಸಿಕೊಳ್ಳುವುದನ್ನೇ ಪ್ರೇಮ ಎನ್ನುತ್ತಾರೆ. ಪ್ರೀತಿಯನ್ನು ಬೆಳೆಸುವುದೇ ಅದರ ಸ್ವಭಾವವೆಂದು ತಿಳಿಯಬೇಕು.

**321) ಪ್ರೇಮ ದೈವಸ್ವರೂಪವೆ ಅಥವಾ ಕಾಮ ಸ್ವರೂಪವಾ?**

ಉ. ಕಳೆದಕಾಲದಲ್ಲಿ ಪ್ರಕಟಿಸಿದ ಪತ್ರಿಕೆಗಳಲ್ಲಿ ಪ್ರೇಮ ಕಾಮ (ಆಸೆ) ಎನ್ನುವ ಗುಣ ಬೇರೆ ಬೇರೆ ಎಂದು ತಿಳಿಸಿದ್ದೇವೆ. ಪ್ರೇಮ ಆಸೆ ಎನ್ನುವವು ಎರಡೆರಡು ಗುಣಗಳೇ. ಎರಡನ್ನು ಬಿಟ್ಟರೇನೆ ದೈವ ಸ್ವರೂಪ ತಿಳಿಯುತ್ತದೆ. ಆದರೆ ಯಾವ ಒಂದು ಗುಣವು ದೈವ ಸ್ವರೂಪ ವಲ್ಲ.

**ರಾಮಭಜನೆ ಸಂಘಮು, ಯಾಡಿಕಿ**

**322) ಧರಣಿಯಲ್ಲಿ ಕರ್ಮವನ್ನು ಸುಡುವುದು ಜ್ಞಾನಶಕ್ತಿ ಎಂದಿದ್ದೀರಲ್ಲವೆ! ಜ್ಞಾನ ಶಕ್ತಿಯನ್ನಾರ್ಜಿಸಿದ ಪುರುಷನಿಗೆ ಪುನರ್ಜನ್ಮ ಇಲ್ಲವೆಂದಿದ್ದೀರಿ. ಮರಣ ಅವರಿಗೆ ಇರುವುದಿಲ್ಲವೆನ್ನುತ್ತಾರೆ. ಪುನರ್ಜನ್ಮ ಇಲ್ಲವೆಂದರೆ ಅವರಿಗೆ ಮರಣ ಇಲ್ಲದಹಾಗೇನಾ? ಅದು ಸಾಧ್ಯವಾ?**

ಉ. ಜ್ಞಾನಶಕ್ತಿ ತಿಳಿದವರಿಗೆ ಅವರ ಕರ್ಮ ಮುಗಿದ ನಂತರ ಇನ್ನು ಹುಟ್ಟಬೇಕಾದ ಕೆಲಸವಿಲ್ಲ ಅದ್ದರಿಂದ ಅವನಿಗೆ ಪುನರ್ಜನ್ಮ ಇಲ್ಲ ಎನ್ನುವುದು ನಿಜವೆ. ಅಂತವನಿಗೆ ಸತ್ತನಂತರ ಜನ್ಮ ಇಲ್ಲ, ಆದರೆ ಹುಟ್ಟಿದ ನಂತರ ಸಾವಿಲ್ಲ ಎನ್ನುವುದು ಶುದ್ದ ಅಸತ್ಯ. ಕರ್ಮ ಮುಗಿದರೆ ಸಾಯುತ್ತಾನೆ. ಸತ್ತ ನಂತರ ಜನ್ಮಕ್ಕೆ ಬರುವುದಿಲ್ಲ.

**ಪಿ. ಅಂಕಾಲ್ ರೆಡ್ಡಿ, ಗುತ್ತಿ**

**323) ಸ್ವಾಮಿ! ಮಹಾಭಾರತದಲ್ಲಿರುವ ಪಾಂಚಾಲಿಯನ್ನು ಪತಿವ್ರತೆ ಎನ್ನಬಹುದಾ?**

ಉ. ಅನ್ನಬಾರದು. ಏಕೆಂದರೆ ಪತಿಯನ್ನೇ ವ್ರತವಾಗಿ ಆಚರಿಸುವುದು ಪತಿವ್ರತ. ಭರಿಸುವವನು ಭರ್ತ (ಪತಿ) ಆದ್ದರಿಂದ ಸರ್ವ ಜೀವರಾಶಿಗಳನ್ನು ಭರಿಸುವ ಪರಮಾತ್ಮನೇ ಜಗತ್‌ಭರ್ತ ಜಗತ್ ಪತಿ. ಜೀವಿ ಎನ್ನುವ ಅವನನ್ನು ಅಲ್ಲದೆ ಕೇವಲ ಶರೀರವನ್ನು ಭರಿಸುವವನು ಭರ್ತನಲ್ಲ. ಆದ್ದರಿಂದ ಜೀವಿಗಳೆಲ್ಲರಿಗೂ ಪತಿಯಾದ ಪರಮಾತ್ಮನನ್ನೇ ಅರಾಧಿಸುವ ಹೆಂಗಸರನ್ನಾಗಲಿ ಮತ್ತು ಗಂಡಸರನ್ನಾಗಲಿ ಪತಿವ್ರತ ಎನ್ನಬಹುದು. ಇಲ್ಲಿ ಗಂಡಸರನ್ನು ಸಹ ಸೇರಿಸುವುದಕ್ಕೆ ಒಂದು ಕಾರಣವಿದೆ ನಂತರ ತಿಳಿಸುತ್ತೇವೆ.

ಪ್ರತ್ಯೇಕಿಸಿ ಗಂಡಸರನ್ನು ಬ್ರಹ್ಮಚಾರಿ ಎನ್ನುತ್ತಾರೆ. ಪರಮಾತ್ಮವೊಂದರ ಎಂದರೆ ಬ್ರಹ್ಮವೊಂದರ ಅಚರಣೆ ಆಚರಿಸುವವನನ್ನು ಬ್ರಹ್ಮಚಾರಿ ಎಂದು ಪೂರ್ವದಲ್ಲಿ

ಕರೆಯುತ್ತಿದ್ದರು. ಈಗೇನೋ ಮದುವೆ ಆಗದೆ ಹೆಂಡತಿ ಇಲ್ಲದವನನ್ನು ಬ್ರಹ್ಮಚಾರಿ ಎಂದು, ಮದುವೆ ಮಾಡಿಕೊಂಡು ಪತಿ ಇರುವವರನ್ನು ಪತಿವ್ರತೆ ಎಂದು ಹೇಳುತ್ತಿದ್ದಾರೆ. ಅದು ಅಲ್ಲಯ್ಯ ಇದೇ ಸತ್ಯವೆಂದರೆ ನಂಬುವವರೆ ಇಲ್ಲ. ಆದ್ದರಿಂದ ನಾವು ಎಲ್ಲರ ಮಾತಿನ ಪ್ರಕಾರವೆ ಹೋದರೆ ಪಾಂಚಾಲಿ ಪತಿವ್ರತೆಯೇ. ಇಲ್ಲ ಇದು ಸತ್ಯವೆಂದು ನಾವು ಸತ್ಯವನ್ನೆ ಹಿಡಿದುಕೊಂಡರೆ ಆಕೆ ಪತಿವ್ರತೆ ಅಲ್ಲ ಅಲ್ಲವೆ!

**ವೈ. ಪಾರ್ವತೀಶಂ, ತಾಡಿಪತ್ರಿ**

**324) ಗೀತೆ 18 ಅಧ್ಯಾಯಗಳು, ಭಾರತ ಯುದ್ಧ 18 ದಿನಗಳು, ಸೈನ್ಯ 18 ಅಕ್ಷೌಹಿಣಿಗಳು, ಭಾರತ 18 ಪರ್ವಗಳು, ಹಾಗೇ ಭಾಗವತ 18 ಸ್ಕಂದಗಳು, ಪುರಾಣಗಳು 18 ಇವೆ. ಹೀಗೆ ಒಂದೇ ಸಂಖ್ಯೆ 18 ಏಕೆ ಇದೆ?**

**ಉ.** ಅಷ್ಟೇ ಅಲ್ಲದೆ ಅಯ್ಯಪ್ಪ ಸ್ವಾಮಿ ದೇವಾಲಯ ಮೆಟ್ಟಿಲುಗಳು ಸಹ 18 ಇವೆ. ಅರ್ಥ ತಿಳಿದರೆ ಆಚಾರ, ತಿಳಿಯದಿದ್ದರೆ ಸಾಂಪ್ರದಾಯ. ಪೂರ್ವದ ಆಚಾರದ ಪ್ರಕಾರ ಅವುಗಳ ಅರ್ಥ ಹೀಗಿದೆ. ಪ್ರತಿ ಜೀವರಾಶಿ ಸಾತ್ವಿಕ, ರಾಜಸ, ತಾಮಸಗಳೆನ್ನುವ ಮೂರು ಗುಣ ಭಾಗಗಳಲ್ಲೇ ಇರುತ್ತಿವೆ. ಆ ಮೂರು ಗುಣಭಾಗಗಳ ಒಂದರಲ್ಲಿ ಹೆಸರುವಾಸಿಯಾದ ಶತ್ರು ಗುಣಗಳು ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯವೆನ್ನುವ ಆರು ಗುಣಗಳಿವೆ. ಹೀಗೆ ಈ ಗುಣಗಳು ಮೂರು ಗುಣ ಭಾಗಗಳಲ್ಲಿರುವುದರಿಂದ ಒಟ್ಟು ಜೀವರಾಶಿಗಳು ಮೂರು ಸ್ಥಾನಗಳಲ್ಲಿರುವ ಒಟ್ಟು 18 ಗುಣಗಳಲ್ಲೇ ನಿವಾಸಮಾಡುತ್ತಿದ್ದಾರೆಂದು ತಿಳಿಯುತ್ತಿದೆ. ಆ ಗುಣಗಳಿಂದಲೇ ನಡೆಯುವ ಕೆಲಸಗಳಿಂದ ಪಾಪವನ್ನು ಸಂಪಾದಿಸುತ್ತಿದ್ದಾರೆಂದು, ಒಟ್ಟು ಪ್ರಪಂಚ ಪಾಪ ಕೆಲಸಗಳೆಲ್ಲವು ಇವೆಯೆಂದು, ಆ ಹದಿನೆಂಟು ಸಂಖ್ಯೆಯನ್ನು ಮರೆಯದಹಾಗೆ, ಈ ಹದಿನೆಂಟರಿಂದಲೇ ಪಾಪ ನಡೆಯುತ್ತಿದೆಂದು ತಿಳಿಯುವಹಾಗೆ, ಆ 18 ಸಂಖ್ಯೆಯನ್ನು ಇಟ್ಟಿದ್ದಾರೆ. ಭಕ್ತಿ ಮಾರ್ಗದಲ್ಲಿ ಮೂರು ಗುಣಭಾಗಗಳಲ್ಲಿನ 18 ಗುಣಗಳನ್ನು ತುಳಿದುಹಾಕಬೇಕೆಂದು ಅಯ್ಯಪ್ಪ ದೇವಾಲಯದಲ್ಲಿ ಕಾಲಿನ ಕೆಳಗೆ ಮೆಟ್ಟಿಲುಗಳನ್ನು ಇಟ್ಟಿದ್ದಾರೆ. ಹಾಗೇ ಈ ದುರ್ಗುಣಗಳ ಮೇಲೆ ಯಾವಾಗಲೂ ಜ್ಞಾಪಕದಿಂದಿದ್ದು ಅವುಗಳ ಆಚಾರಣೆಗೆ ಹೋಗದಹಾಗೆ ಮುಖ್ಯವಾದ ಸ್ಥಳಗಳಲ್ಲಿ 18 ಸಂಖ್ಯೆಯನ್ನು ಇಟ್ಟಿದ್ದಾರೆ. ಗೀತೆಯಲ್ಲಿ, ಭಾರತದಲ್ಲಿ, ಭಾಗವತದಲ್ಲಿ, ಪುರಾಣಗಳಲ್ಲಿ 18 ಸಂಖ್ಯೆಯನ್ನು ಇಡುವುದರಿಂದ ತಿಳಿಯದವರು ಇದರ ವಿಶೇಷವೇನೆಂದು ಆಲೋಚಿಸಬಲ್ಲರು. ಆಲೋಚಿಸುವುದರಿಂದ ಪ್ರಶ್ನೆ ಬಂದು

ಕೊನೆಗೆ ಎಲ್ಲಾದರೂ ವಾಸ್ತವವನ್ನು ತಿಳಿಯಬಲ್ಲರು. 18 ಕೆಟ್ಟ ಗುಣಗಳೆಂದು, ಮತ್ತು ಶತ್ರು ಗುಣಗಳೆಂದು ತಿಳಿದ ದಿನ ಅವುಗಳ ಬಗ್ಗೆ ಜಾಗ್ರತೆಯಾಗಿ ಇರುತ್ತೇವೆ. ಆದ್ದರಿಂದ ಹಿರಿಯರು 18 ಸಂಖ್ಯೆಯನ್ನು ಅನೇಕ ಕಡೆ ತಿಳಿಯುವಹಾಗೆ ಮಾಡಿದ್ದಾರೆ.

**ನಾಗಭೂಷಣ ಚೌದರಿ, ತಗ್ಗುಪರ್ತಿ**

**325) ಮನಸ್ಸು ಜಡವಾ? ಅಥವಾ ಚೇತನವಾ?**

ಉ. ಶರೀರದಲ್ಲಿ ಪ್ರತಿಯೊಂದು ಭಾಗವು ಆತ್ಮ ಚೈತನ್ಯದಿಂದ ಚೇತನವಾಗಿವೆ ಆದರೆ ಅವುಗಳಿಗೆ ಸ್ವಯಂ ಶಕ್ತಿ ಇಲ್ಲ. ಆದ್ದರಿಂದ ಮನಸ್ಸು ಚೇತನವೇ, ನಿದ್ರೆಯಲ್ಲಿ ಯೋಗದಲ್ಲಿ ಕದಲದೇ ಇರುತ್ತದೆ. ಜ್ಞಾಪಕದಲ್ಲಿ ಕದಲುತ್ತಲೆ ಇರುತ್ತದೆ.

**326) ಹಸ್ತ ಮಸ್ತಕ ಸಂಯೋಗವೆಂದರೆ ಏನು?**

ಉ. ಗುರುವು ತನ್ನ ಹಸ್ತದಿಂದ ಜ್ಞಾನಾಗ್ನಿಯನ್ನು ಶಿಷ್ಯನ ತಲೆಯೊಳಗೆ ಪ್ರವೇಶಿಸುವಹಾಗೆ ಮಾಡುವುದನ್ನು ಹಸ್ತಮಸ್ತಕ ಸಂಯೋಗವೆನ್ನುತ್ತಾರೆ.

**327) ನನಗೆ ತಿಳಿದ ಮಟ್ಟಿಗೆ ಆಕಾಶ ಒಂದೇ ಇದೆ. ಆದರೆ ಕೆಲವು ಪುಸ್ತಕಗಳಲ್ಲಿ ಚಿದಾಕಾಶ, ಚಿತ್ತಾಕಾಶ ಎನ್ನುವ ಹೆಸರುಗಳನ್ನು ಸಹ ಓದಿದ್ದೇವೆ. ಅವು ಇವೆಯಾ?**

ಉ. ನಿಮಗೆ ತಿಳಿದಿರುವ ಮಟ್ಟಿಗೆ ಅಲ್ಲದೆ ಸರ್ವ ಪ್ರಪಂಚಕ್ಕು ತಿಳಿಯುವಹಾಗೆ ಒಂದೇ ಆಕಾಶವಿದೆ. ಯೋಗ ಪದ್ಧತಿಯಲ್ಲು ಸಹ ನಮಗೆ ತಿಳಿದ ಮಟ್ಟಿಗೆ ಇತರ ಆಕಾಶಗಳು ಯಾವುವು ಇಲ್ಲ.

**328) ನಾವು ಎಲ್ಲಿಗಾದರು ಪ್ರಯಾಣ ಹೊರಟಾಗಾಗಲಿ, ಪರೀಕ್ಷೆಗೆ ಹೋಗುವಾಗಾಗಲಿ, ಶ್ವಾಸವನ್ನು ಬಲ ಮೂಗಿನ ರಂಧ್ರದೊಳಗೆ ಆಡುವಹಾಗೆ ಮಾಡಿ ಹೊರಟರೆ ಕೆಲಸಗಳು ನೆರವೇರುತ್ತವೆಂದು ಪರೀಕ್ಷೆಗಳಲ್ಲಿ ಉತ್ತೀರ್ಣರಾಗುತ್ತಾರೆಂದು ಒಂದು ಗ್ರಂಥದಲ್ಲಿ ಬರೆದಿದ್ದಾರೆ. ಇದು ನಿಜವೇನಾ?**

ಉ. ಹಾಗೇ ಆಚರಿಸಿ ನೋಡಿದಾಗ ಪುಸ್ತಕದಲ್ಲಿ ಬರೆದಹಾಗೆ ನಿರೂಪಣೆಗೆ ಬಂದಿಲ್ಲ ಆದ್ದರಿಂದ ಆಚರಿಸಿದರೂ ಅನುಭವಕ್ಕೆ ಬರದಿರುವವು ಶಾಸ್ತ್ರಗಳಲ್ಲ. ಅವು ಮನುಷ್ಯನ ತೃಪ್ತಿ ಗೋಸ್ಕರವೇ ಹೇಳಿರುವವಾಗಲಿ ನಿಜವಲ್ಲ.

**329) ನಿಮ್ಮ ರಚನೆಗಳಾದ ಪ್ರಬೋಧ ಪುಸ್ತಕದಲ್ಲಿ ಆದಿ ಮಂಗಳ ಗುರುವಾರಗಳಲ್ಲಿ ಬಲ ಮೂಗಲ್ಲಿ, ಬುಧ ಶುಕ್ರ ಶನಿ ವಾರಗಳಲ್ಲಿ ಎಡ ಮೂಗಲ್ಲಿ, ಶುಕ್ಲ ಪಕ್ಷ ಸೋಮವಾರ ಬಲ ಮೂಗಲ್ಲಿ, ಕೃಷ್ಣ ಪಕ್ಷ ಸೋಮವಾರ ಎಡ ಮೂಗಲ್ಲಿ ಶ್ವಾಸ ಆಡಬೇಕೆಂದು ಬರೆದಿದ್ದೀರ. ಆದರೆ ಮತ್ತೊಂದು ಗ್ರಂಥದಲ್ಲಿ ಆದಿ ಮಂಗಳ ಶನಿ ವಾರಗಳಲ್ಲಿ ಬಲ ಮೂಗಲ್ಲಿ ಸೋಮ ಶುಕ್ರ ಬುಧ ವಾರಗಳಲ್ಲಿ ಎಡ ಮೂಗಿನಲ್ಲಿ ಕೃಷ್ಣಪಕ್ಷ ಗುರುವಾರ ಬಲ ಮೂಗಿನಲ್ಲಿ ಶುಕ್ಲಪಕ್ಷ ಗುರುವಾರ ಎಡ ಮೂಗಿನಲ್ಲಿ ಎಂದು ಬರೆಯಲಾಗಿದೆ. ನೀವು ಬರೆದಿರುವುದಕ್ಕು ಇದಕ್ಕು ಭೇದವಿದೆ. ಇವುಗಳಿಗೆ ಶಾಸ್ತ್ರ ಪ್ರಮಾಣಗಳು ಇಲ್ಲವೇ? ಇದ್ದರೆ ಯಾರು ಹೇಳಿದರೂ ಒಂದೇ ಇರಬೇಕು ಅಲ್ಲವೆ?**

ಉ. ಶಾಸ್ತ್ರ ಪ್ರಮಾಣವಲ್ಲದ ವಿಷಯಗಳು ನಾವು ಹೇಳುವುದಿಲ್ಲವೆಂದು ಬಹಳ ಸಲ ಪ್ರಕಟಿಸಿದ್ದೇವೆ. ಜ್ಯೋತಿಷ್ಯ ಶಾಸ್ತ್ರ ರೀತ್ಯಾ ಒಂದನೆ ಸ್ಥಾನದಲ್ಲಿರುವ ಗ್ರಹಕ್ಕೆ ಏಳನೆ ಸ್ಥಾನದಲ್ಲಿರುವ ಗ್ರಹ ಬದ್ದ ಶತ್ರುವೆನ್ನುವ ಮಾತು ಇದೆ. ಆದ್ದರಿಂದ ಅ ಶಾಸ್ತ್ರ ಪ್ರಮಾಣವನ್ನನುಸರಿಸಿ ಮೇಷ ರಾಶಿಗೆ ಅಧಿಪತಿಯಾದ ಕುಜನಿಗೆ ಎದುರಾಗಿ ಏಳನೆ ಸ್ಥಾನವಾದ ತುಲಾರಾಶಿಯಲ್ಲಿ ಶುಕ್ರನು ಬದ್ದ ಶತ್ರು. ಈ ಸೂತ್ರದ ಪ್ರಕಾರ 1. ಕುಜನಿಗೆ ಶುಕ್ರನು, 2. ಗುರುವಿಗೆ ಬುಧನು, 3. ಸೂರ್ಯ ಚಂದ್ರರಿಗೆ ಶನಿ ಶತ್ರುಗಳಾಗುತ್ತಿದ್ದಾರೆ. ಅದೇ ಜ್ಯೋತಿಷ್ಯ ಶಾಸ್ತ್ರವನ್ನನುಸರಿಸಿ 1, 5, 9 ಸ್ಥಾನಾದಿಪತಿಗಳೆಲ್ಲರು ಒಂದು ಗುಂಪು ಗ್ರಹಗಳಾದರೆ ಅವರಿಗೆ ವಿರೋಧಿಗಳು ಮತ್ತೊಂದು ಗುಂಪು ಗ್ರಹಗಳಾಗುತ್ತಿವೆ. ಆದ್ದರಿಂದ ಜ್ಯೋತಿಷ್ಯ ಶಾಸ್ತ್ರ ಪ್ರಮಾಣದಿಂದ ಗುರು, ಕುಜ, ಸೂರ್ಯ, ಚಂದ್ರರು ಒಂದು ಗುಂಪೆಂದು, ಶನಿ, ಬುಧ, ಶುಕ್ರರು ಮತ್ತೊಂದು ಗುಂಪೆಂದು ತಿಳಿದು ಯೋಗ ಶಾಸ್ತ್ರಾನುಸಾರ ಶರೀರದೊಂದಿಗೆ ಯೋಗವನ್ನಾಚರಿಸುವವರು ಅವರ ಗ್ರಹಸ್ಥಾನಗಳನ್ನನುಸರಿಸಿ ಆಯಾ ದಿನಗಳಲ್ಲಿ ಆಯಾ ಕಡೆಗೆ ಶ್ವಾಸ ಆಡಬೇಕೆಂದು ತಿಳಿಸಿದ್ದೇವೆ. ಆದ್ದರಿಂದ ನಮ್ಮದು ಶಾಸ್ತ್ರ ಪ್ರಮಾಣ. ತಿಳಿಯದವರು ಬೇರೆ ವಿಧವಾಗಿ ಹೇಳಿರುವುದಕ್ಕೆ ಪ್ರಮಾಣ ವಿರುವುದಿಲ್ಲವೆಂದು ಗ್ರಹಿಸಬೇಕು.

**ಯಂ. ವೆಂಕಟೇಶು, ಚಿನ್ನಪೊಡಮಲ**

**330) ಕರ್ಮದಿಂದ ಜನ್ಮ ಇರುತ್ತದೆನ್ನುತ್ತಾರೆ. ಒಂದು ರೋಗ ಬಂದರೆ ಅದು ಗತ ಜನ್ಮ ಕರ್ಮದಿಂದ ಬಂದಿರುವುದಾ ಅಥವಾ ಈ ಜನ್ಮ ಕರ್ಮದಿಂದ ಬಂದಿರುವುದಾ?**

ಉ. ರೋಗಗಳು ಬಂದರೆ ಈ ಜನ್ಮದಲ್ಲಿ ಮಾಡಿಕೊಂಡ ಕರ್ಮವೇ ಎಂದು

ಕೆಲವರನ್ನುತ್ತಾರೆ. ಆದರೆ ಅದು ವಾಸ್ತವ ಅಲ್ಲ. ಏಕೆಂದರೆ ಹುಟ್ಟಿದಾಗ ಕೆಲವು ದಿನಗಳಿಗೇ ರೋಗ ಬಂದಿದೆ ಎಂದುಕೊಳ್ಳೋಣ. ಆಗ ಆತನು ಹುಟ್ಟಿದ ನಂತರ ಯಾವ ಪಾಪ ಮಾಡಲಿಲ್ಲ ಅಲ್ಲವೆ! ಆದ್ದರಿಂದ ಒಬ್ಬನಿಗೆ ರೋಗವಾಗಲಿ, ಭೋಗವಾಗಲಿ ಏನು ಸಂಭವಿಸಿದರೂ ಅದು ಗತ ಜನ್ಮಗಳ ಕರ್ಮದಿಂದಲೇ ಸಂಭವಿಸುವುದೆಂದು ತಿಳಿಯಬೇಕು.

**331) ಮಳೆ ಬರುವಾಗ ಸಿಡಿಲು ಬಡಿಯುತ್ತದೆನ್ನುತ್ತಾರೆ. ಆ ಸಿಡಿಲು ಅರ್ಜುನನ ರಥಚಕ್ರಕ್ಕಿರುವ ಕೀಲೆಂದು, ಅದು ಜಾರಿ ಕೆಳಗೆಬಿದ್ದರೆ ಸಿಡಿಲು ಬಡಿದಿದೆ ಎನ್ನುತ್ತಾರೆ ನಿಜವೇನಾ ತಿಳಿಸಬೇಕು.**

ಉ. ಮಳೆ ಬಂದಾಗ ಸಿಡಿಲು ಬಡಿಯುವುದು ನಿಜವೇ ಆದರೆ ಅದು ಅರ್ಜುನನ ರಥಚಕ್ರದ ಕೀಲಲ್ಲ. ಅದು ಅರ್ಜುನನ ರಥಚಕ್ರದ ಕೀಲಾದರೆ ಆ ಕೀಲೆ ಸಿಡಿಲಾದರೆ ಒಂದು ವೇಳೆ ಚಕ್ರವು ಬಿದ್ದರೆ ಮಹಾಪ್ರಳಯವೇ ಆಗಬೇಕಾಗುತ್ತದೆ. ಕೀಲು ಬಿದ್ದ ನಂತರ ಚಕ್ರವು ಸಹ ಕೆಳಗೆ ಬೀಳಬೇಕಲ್ಲವೆ! ಹಾಗೆ ಅದು ಕೀಲು ಅಲ್ಲ. ಅಲ್ಲಿ ರಥವೂ ಇಲ್ಲ. ವಾಸ್ತವವೇನೆಂದರೆ ಮಳೆ ಬರುವಾಗ ಆಕಾಶದಲ್ಲಿ ಕರೆಂಟು ತಯಾರಾಗುವುದು. ಬಿಸಿಲು ಕಾಲದ ನಂತರ ಮೊದಲು ಬರುವ ಮಳೆಯಲ್ಲಿ ಹೆಚ್ಚಿಗೆ ಸಿಡಿಲು ಬಡಿಯುವ ಅವಕಾಶವಿದೆ. ಏಕೆಂದರೆ ಭೂಮಿ ಎಲ್ಲಾ ಬಿಸಿಯಾಗಿ ಭೂಮಿಗೆ ಸ್ವಲ್ಪ ಎತ್ತರದಲ್ಲಿ ವಾತಾವರಣದಲ್ಲಿ ವಿದ್ಯುತ್ ಅಯಸ್ಕಾಂತ ಶಕ್ತಿ ಏರ್ಪಟ್ಟು ಅದು ಪಾಜಿಟಿವ್ ಶಕ್ತಿಯಾಗಿರುವುದು. ಭೂಮಿ ನೆಗಿಟಿವ್ ಚಾರ್ಜಾಗಿರುವುದು. ಮಳೆ ಬಂದಾಗ ತಂಪುಗಾಳಿಗೆ ಮೇಲಿರುವ ಪಾಜಿಟಿವ್ ಶಕ್ತಿ ಭೂಮಿಯಲ್ಲಿರುವ ನೆಗಿಟಿವ್‌ನೊಂದಿಗೆ ಬೆರೆಯುವುದು ನಡೆಯುತ್ತಿದೆ. ಮನೆಯಲ್ಲಿ 200 ಓಲ್ಟೇಜ್ ಕರೆಂಟನ್ನು ಪಾಜಿಟಿವ್ ನೆಗಿಟಿವ್‌ನ್ನು ಸೇರಿಸಿದರೆ ಫಟ್ ಎನ್ನುವ ಶಬ್ದದೊಂದಿಗೆ ಬೆಂಕಿ ಕಿಡಿ ಏರ್ಪಡುವುದು. ಬಯಲಿನಲ್ಲಿ ಪ್ರಕೃತಿಯಲ್ಲಿ ತಯಾರಾದ ಕೆಲವು ಲಕ್ಷ ಓಲ್ಟೇಜ್ ಕರೆಂಟು ಪಾಜಿಟಿವ್ ಬಂದು ನೆಗಿಟಿವ್‌ಆದ ಭೂಮಿಯನ್ನು ತಾಕಿದರೆ ಎಷ್ಟೋ ದೊಡ್ಡ ಶಬ್ದ ದೊಡ್ಡ ಬೆಂಕಿಯ ಮಿಂಚು ಏರ್ಪಡುವುದು. ಅದನ್ನೆ ಸಿಡಿಲು ಬೀಳುವುದು ಎನ್ನುತ್ತೇವೆ. ಅದು ಹೆಚ್ಚಿನ ಶಕ್ತಿ ಇರುವ ಕರೆಂಟಾದ್ದರಿಂದ ಆ ತಂತಿ ಮಿಂಚು ಭೂಮಿಗೆ ಹತ್ತಿರಕ್ಕೆ ಬಂದರೆ ಅದು ನಮ್ಮ ಕರೆಂಟು ತಂತಿಗಳಿಗೆ ತಾಕಿದರೆ ಫೀಜುಗಳೆಲ್ಲವು ಎಗರಿ ಹೋಗುವವು. ಒಂದು ವೇಳೆ ಯಾವುದಾದರು ಗಿಡಕ್ಕೆ ತಾಕಿದರೆ ಅಷ್ಟು ಬಲವಾದ ಕರೆಂಟಿಗೆ ಗಿಡ ಎರಡು ಭಾಗಗಳಾಗಿ ಸೀಳಿ ಹೋಗುತ್ತದೆ. ಬಾವಿಗೆ ಹತ್ತಿರವಾಗಿ ಬಡಿದರೆ ಆ ಬಾವಿಯಲ್ಲಿರುವ ನೀರೆಲ್ಲಾ ಇಂಗಿಹೋಗಿ ಒಣಗಿಹೋಗುತ್ತದೆ. ಮನುಷ್ಯರಿಗೆ ಹತ್ತಿರವಾಗಿ ಬಡಿದರು ಅಥವಾ ತಾಕಿದ ಕೂಡಲೇ

ಸತ್ತುಹೋಗುವರು. ಆದ್ದರಿಂದ ಮಳೆ ಬರುವಾಗ ಬಯಲು ಪ್ರಾಂತದಲ್ಲಿ ಇರಬಾರದು. ಸಿಡಿಲು ಕಬ್ಬಿಣದ ಕಡ್ಡಿಯಲ್ಲ ಆಕಾಶ ಕರೆಂಟೆಂದು ತಿಳಿಯಬೇಕು. ಹಿಂದಿಯಲ್ಲಿ ಆಸ್ಮಾನೀ ಬಿಜಿಲಿ ಎನ್ನುತ್ತಾರೆ.

**ಟಿ. ಹನುಮಂತು, ಯಮ್. ಅಗ್ರಹಾರ**

**332) ನನಗೆ ಬಹಳ ದಿನಗಳಿಂದ ದೇವರು ಹೇಗಿರುತ್ತಾನೋ ನೋಡಬೇಕೆಂದೆನಿಸಿದೆ. ದೇವರು ಹೇಗಿರುತ್ತಾನೆ, ನಾವು ಹೇಗೆ ನೋಡಬಹುದು.**

**ಉ.** ನಮಗೆ ನೋಡಬೇಕೆಂದು ಕೋರಿಕೆ ಇರುವುದರಲ್ಲಿ ತಪ್ಪಿಲ್ಲ ಆದರೆ ದೇವರು ಹೀಗಿರುತ್ತಾನೆಂದು ಹೇಳುವುದಕ್ಕೆ ಆತನಿಗೆ ಆಕಾರವಿಲ್ಲ. ಆತನು ಕಣ್ಣಿಗೆ ಕಾಣಿಸುವವನಲ್ಲ ನೋಡುವುದಕ್ಕೆ. ರೂಪವಿಲ್ಲದ ದೇವರನ್ನು ನೋಡಬೇಕೆಂದರೆ ನಮಗೆ ಜ್ಞಾನನೇತ್ರವಿರಬೇಕು. ಅಂದರೆ ಚೆನ್ನಾಗಿ ಜ್ಞಾನ ತಿಳಿದಿರಬೇಕು. ಆಗ ನಮ್ಮಲ್ಲಿರುವ ದೇವರನ್ನು ಸುಲಭವಾಗಿ ತಿಳಿಯಬಹುದು. ಆತನು ನಮಗೆ ಬಹಳ ಹತ್ತಿರವಾಗಿ ನಮ್ಮಲ್ಲೆ ಇದ್ದಾನೆ. ಆದ್ದರಿಂದ ಜ್ಞಾನ ತಿಳಿದರೆ ಸುಲಭವಾಗಿ ನೋಡಬಹುದು.

**ಪ್ರಹ್ಲಾದರಾವು, ಗಂಗಾವತಿ**

**333) ಅಹಂ ಎಂದರೇನು? ಅದನ್ನು ತ್ಯಜಿಸಬೇಕೆಂದರೆ ಏನು ಮಾಡಬೇಕು?**

**ಉ.** ನಮ್ಮ ಶರೀರದಲ್ಲಿರುವ 25 ಭಾಗಗಳಲ್ಲಿ ಅಹಂ ಎನ್ನುವುದು ಒಂದು ಭಾಗ ಅದು ಶರೀರದೊಳಗಿನ ಭಾಗಗಳಾದ ಮನಸ್ಸು, ಬುದ್ಧಿ, ಚಿತ್ತ, ಅಹಂ ಜೀವಿಯು ಎನ್ನುವ ಅಂತಃಕರಣಗಳಲ್ಲಿ ಒಂದಾಗಿ ಇದೆ. ಶರೀರದಲ್ಲಿ ನಡೆಯುವ ಕೆಲಸಗಳೆಲ್ಲವನ್ನು ನಿನ್ನಿಂದಲೇ ನಡೆಯುತ್ತಿವೆಂದು ಜೀವಾತ್ಮನಿಗೆ ಬೋಧಿಸುವುದೇ ಅದರ ಕೆಲಸ. ಅದರಿಂದಲೇ ಜೀವಾತ್ಮನಿಗೆ ನಾನು ಎನ್ನುವ ಭಾವ ಪ್ರತಿಯೊಂದು ಕೆಲಸದಲ್ಲಿ ಹುಟ್ಟುತ್ತಿದೆ. ಅದನ್ನು ತ್ಯಜಿಸಬೇಕೆಂದರೆ ಮೊದಲು ಅದರ ಬಗ್ಗೆ, ಶರೀರದಲ್ಲಿ ಅದರ ಪಾತ್ರದ ಬಗ್ಗೆ, ಅದು ಶರೀರದಲ್ಲಿ ಎಲ್ಲಿದೆ ಎನ್ನುವ ವಿಷಯದ ಬಗ್ಗೆ ತಿಳಿಯಬೇಕು. ಹಾಗೆ ತಿಳಿದ ನಂತರ ಅದನ್ನು ಸುಲಭವಾಗಿ ತ್ಯಜಿಸಬಹುದು. ಅಹಂನ್ನು ತ್ಯಜಿಸುವುದೇ ಕರ್ಮಯೋಗವೆನ್ನುತ್ತಾರೆ.

**334) ಯೋಗವೆಂದರೆ ಏನು? ಯೋಗವನ್ನು ಅನುಸರಿಸಲು ಕ್ರಮ ನಿಯಮಗಳು ಯಾವಾದರು ಇವೆಯಾ?**

ಉ. ಬ್ರಹ್ಮ ವಿದ್ಯೆಯಲ್ಲಿ ಯೋಗವೆಂದರೆ ಸೇರುವಿಕೆ ಎಂದು ಅರ್ಥ. ಜೀವಾತ್ಮ ಆತ್ಮಗಳ ಸೇರುವಿಕೆಯನ್ನು ಯೋಗವೆನ್ನುತ್ತಾರೆ. ಈ ಯೋಗಗಳು ಎರಡು ವಿಧಗಳು 1. ಕರ್ಮಯೋಗ 2. ಬ್ರಹ್ಮಯೋಗ. ಇವುಗಳಿಗೆ ಯಾವ ನಿಯಮಗಳು ಇಲ್ಲ ಆದರೆ ಕ್ರಿಯೆಗಳು ಮಾತ್ರ ಇವೆ. ಅವು ಏನೆಂದರೆ! ಕರ್ಮ ಯೋಗವನ್ನು ಸಾಧಿಸಬೇಕೆಂದರೆ ನಮ್ಮಲ್ಲಿರುವ ಅಹಂಕಾರವನ್ನು ಅಡಗಿಸಿಹಾಕಬೇಕು. ಬ್ರಹ್ಮಯೋಗವನ್ನು ಸಾಧಿಸಬೇಕೆಂದರೆ ನಮ್ಮಲ್ಲಿರುವ ಮನಸ್ಸನ್ನು ಅಡಗಿಸಿಹಾಕಬೇಕು. ಅಹಂಕಾರವನ್ನು ಅಡಗಿಸಿಹಾಕುವುದರಿಂದ ಕರ್ಮಯೋಗವನ್ನು, ಮನಸ್ಸನ್ನು ಅಡಗಿಸಿಹಾಕುವುದರಿಂದ ಬ್ರಹ್ಮಯೋಗವನ್ನು ಹೊಂದಬಹುದು. ಕರ್ಮಯೋಗವನ್ನು ಹೊಂದಬೇಕೆಂದರೆ ನಮ್ಮಲ್ಲಿರುವ ಅಹಂಕಾರದ ಬಗ್ಗೆ ಚೆನ್ನಾಗಿ ತಿಳಿದಿರಬೇಕು. ಹಾಗೆ ಬ್ರಹ್ಮಯೋಗವನ್ನು ಹೊಂದಬೇಕೆಂದರೆ ನಮ್ಮಲ್ಲಿರುವ ಮನಸ್ಸನ್ನು ಕುರಿತು ಚೆನ್ನಾಗಿ ತಿಳಿದಿರಬೇಕು. ಮನುಷ್ಯನು ಮುಕ್ತನಾಗುವುದಕ್ಕೆ ಈ ಎರಡು ಮಾರ್ಗಗಳಿವೆ.

**ಡಿ. ಚೆನ್ನಪ್ಪ, ನ್ಯಾಮದ್ದಲ**

**335) ಮನುಷ್ಯನು ಶಿಶುವಾಗಿ ಹುಟ್ಟಿದಕೂಡಲೆ ಅಳುತ್ತಾನೆ. ಮತ್ತು ಇತರ ಪ್ರಾಣಿಗಳು ಯಾವುವು ಹುಟ್ಟಿದಾಗ ಅಳುವುದಿಲ್ಲ. ಆಕಳಿಗೆ ಕರು ಹುಟ್ಟಿದಾಗ ಕಿರುಚುವುದಿಲ್ಲ ಉಳಿದ ಜೀವರಾಶಿಗಳು ಅಷ್ಟೇ ಆದರೆ ಕೇವಲ ಮನುಷ್ಯ ಶಿಶು ಮಾತ್ರ ಅಳುತ್ತದೆ ಏಕೆ?**

ಉ. ಸಮಸ್ತ ಜೀವರಾಶಿಗಳಿಗಿಂತಲೂ ದುಃಖ ಮನುಷ್ಯ ಜನ್ಮದಲ್ಲೇ ಬಹಳ ಇದೆಯನ್ನುವ ಸೂಚನೆಗಾಗಿ ಆ ಅಳು ಇದೆ. ದುಃಖಗಳಿಗೆ ಕಾರಣವಾದ ಪಾಪ ಕರ್ಮ ಸಂಪಾದಿಸುವುದು ಮನುಷ್ಯ ಜನ್ಮದಲ್ಲೇ ಅಧಿಕವೆಂದು ತಿಳಿಸುವುದಕ್ಕೆ ಮತ್ತು ಎಲ್ಲ ಜನ್ಮಗಳಿಗಿಂತ ಮಾನವ ಜನ್ಮದಲ್ಲೇ ದುಃಖ ಅಧಿಕವೆಂದು ತಿಳಿಸುವುದಕ್ಕೆ ಮಾನವ ಶಿಶು ಹುಟ್ಟಿದಾಗಲೇ ಅಳು ಪ್ರಾರಂಭವಾಗುವಂತೆ ಸೃಷ್ಟಿಯಲ್ಲಿ ನಿರ್ಣಯಿಸಲ್ಪಟ್ಟಿದೆ. ಈ ವಿಧವಾಗಿ ಮನುಷ್ಯ ಜನ್ಮದಲ್ಲಿ ಎಷ್ಟೋ ಜ್ಞಾನ ಸೂಚನೆಗಳು ಮಾಡುವ ಮಾತುಗಳು ಸಹ ಮನುಷ್ಯನಿಗೆ ತಿಳಿಯದೇ ಬರುವುದು ಗಮನಾರ್ಹ. ಅಯ್ಯೋ ಪಾಪವೆಂದು, ನನ್ನ ಕರ್ಮವೆಂದು ಇನ್ನೂ ಎಷ್ಟೋ ಮಾತುಗಳನ್ನು ತಿಳಿಯದೆ ನುಡಿಯುತ್ತಾನೆ. ಹಾಗೆ ಚಿಕ್ಕಂದಿನಲ್ಲಿ ಅಳುವುದು ಸಹ ತಿಳಿಯದೇ ಬರುತ್ತದೆ.

**336) ಆಧ್ಯಾತ್ಮಿಕವೆಂದರೆ ಏನು? ಹಾಗೇ ವೇದಾಂತವೆಂದರೆ ಏನು?**

ಉ. ಆಧ್ಯಾತ್ಮಿಕವೆಂದರೆ ಏನೆಂದು ಗೀತೆಯಲ್ಲಿ ಅರ್ಜುನನು ಕೇಳಿದ್ದಾನೆ. ಅಲ್ಲಿ ಶ್ರೀಕೃಷ್ಣನು

**"ಸ್ವಭಾವೋ ಧ್ಯಾತ್ಮಮುಚ್ಯತೇ"** ಎಂದಿದ್ದಾನೆ ಇದರ ಅರ್ಥವೇನೆಂದರೆ ಸ್ವಂತ ಭಾವವನ್ನೆ ಆಧ್ಯಾತ್ಮಿಕವೆಂದು ಹೇಳಿದ್ದಾನೆ. ಸ್ವಂತ ಭಾವವೆಂದರೆ ಇದಕ್ಕು ಮುಂಚೆ ಹೇಳಿದ್ದೇವೆ. ಸ್ವಭಾವವೆಂದರೆ ತಾನು ಯಾರಾಗಿರುವುದು ತಿಳಿದಿರುವುದೇ ಸ್ವಭಾವವನ್ನು ಹೊಂದಿರುವುದೆಂದು ಅರ್ಥ. ಇದನ್ನೇ ಸ್ವ ಧರ್ಮವೆಂದು ಸಹ ತಿಳಿಸಲಾಗಿದೆ. ಸ್ವಭಾವ, ಸ್ವಧರ್ಮ, ಸ್ವ ಅರ್ಥವೆನ್ನುವ ಪದಗಳೆಲ್ಲವುಗಳಲ್ಲಿ **"ಸ್ವ"** ಎನ್ನುವ ಅಕ್ಷರ ಗುರುತಿಸುವುದಾಗಿದೆ. ಸ್ವಂತವೆನ್ನುವ ನಿನ್ನ ಆತ್ಮವನ್ನು, ಅಥವಾ ಸ್ವಭಾವವನ್ನು ನಿನ್ನ ಭಾವವಾದ ಆತ್ಮವನ್ನು, ಅಥವಾ ಸ್ವ ಧರ್ಮವಾದ ನಿನ್ನ ಆತ್ಮವನ್ನು, ಅಥವಾ ಸ್ವ ಅರ್ಥ ಎನ್ನುವ ನಿನ್ನ ಧನವಾದ ಆತ್ಮವನ್ನು ತಿಳಿಯುವುದನ್ನು ಆಧ್ಯಾತ್ಮಿಕವೆನ್ನುತ್ತೇವೆ. ಆತ್ಮವನ್ನು ಅಧ್ಯಾಯನ ಮಾಡುವುದನ್ನೇ ಆಧ್ಯಾತ್ಮಿಕ ಎನ್ನುತ್ತೇವೆ.

ಹಾಗೇ ವೇದಾಂತವೆಂದರೆ ವೇದಗಳ ಅಂತ್ಯದಲ್ಲಿ ಇರುವುದೆಂದು ಅರ್ಥ. ಅಂದರೆ ವೇದಗಳ ನಂತರ ಇರುವುದೆಂಬ ಭಾವ. **"ತ್ರೈ ಗುಣ್ಯ ವಿಷಯಾ ವೇದಾ"** ಎನ್ನುವ ಗೀತಾ ವಾಕ್ಯದ ಪ್ರಕಾರ ಮೂರುಗುಣಗಳ ವಿಷಯಗಳೇ ವೇದಗಳೆಂದು ತಿಳಿಯುತ್ತಿದೆ. ಆ ಮೂರು ಗುಣಗಳ ನಂತರ ಇರುವ ಅತ್ಮವನ್ನೇ ವೇದಾಂತವೆನ್ನುತ್ತಿದ್ದೇವೆ. ಮೂರು ಗುಣಗಳ ವಿಷಯಗಳು ಬಿಟ್ಟ ನಂತರ ಇರುವ ಅನುಭವವನ್ನೇ ಆತ್ಮ ಅನುಭವವೆನ್ನಬಹುದು. ಇದನ್ನೇ ವೇದಾಂತ ಎನ್ನುತ್ತಿದ್ದೇವೆ.

**ಬಿ. ಶಕುಂತಲಮ್ಮ, ಯಾಡಿಕಿ**

**337) ನೀವು ಸತ್ಯಾನ್ವೇಷಿ ಕಥೆಯಲ್ಲಿ ಖಗೋಳದಲ್ಲಿ ಗೋಳದೊಳಗಿನ ಸೂಕ್ಷ್ಮ ಶರೀರಗಳು ಭೂಮಿ ಮೇಲೆ ಮನುಷ್ಯರನ್ನು ಸಾಮೂಹಿಕವಾಗಿ ಹಿಂಸಿಸುತ್ತವೆ ಎಂದಿದ್ದೀರ. ಕಲರಾ, ಮಶೂಚಿ ಅಲ್ಲದೆ ಬೇರೆ ವಿಧವಾಗಿ ಹಿಂಸಿಸಿದ ಸಂಘಟನೆಗಳು ಎಲ್ಲಾದರೂ ಪ್ರಮಾಣಿಕವಾಗಿ ಇವೆಯಾ?**

**ಉ.** ಏಕೆ ಇಲ್ಲ, ಬಹಳ ಇವೆ. ಯಾಡಿಕಿಯಲ್ಲಿ ಸುಮಾರು ಹತ್ತು ವರ್ಷಗಳ ಕೆಳಗೆ ದೊಡ್ಡ ಗಾಳಿ ಎದ್ದಿದೆ. ಸಂತೆಯಲ್ಲಿ ಇರುವ ಜನರೆಲ್ಲ ಭಯದಿಂದ ಗಾಬರಿಗೊಂಡು ಕೆಲವರು ಅಲ್ಲೇ ಇರುವ ಒಂದು ಷೆಡ್‌ನೊಳಗೆ ಹೋಗಿದ್ದಾರೆ. ಆಗ ಆ ಷೆಡ್ ವಿಚಿತ್ರವಾಗಿ ಒಂದೇ ಸಲ ಕೆಳಗೆ ಬಿದ್ದು ಕೆಲವರು ಸತ್ತುಹೋಗಿದ್ದಾರೆ. ಅಲ್ಲೇ ಇದ್ದ ಬೇವಿನ ಮರ ಬಿದ್ದು ಅದರ ಕೆಳಗೆ ಕೆಲವರು ಸತ್ತುಹೋಗಿದ್ದಾರೆ. ಆಗ ಅಲ್ಲಿರುವ ಕೆಲವರಿಗೆ ಮಾತ್ರ ಆಕಾಶದಿಂದ ಒಂದು ದೊಡ್ಡ ವಿಕೃತಾಕಾರ ಕಾಲಿನಿಂದ ಆ ಷೆಡ್ಡನ್ನು ತುಳಿದಹಾಗೆ

ಕಾಣಿಸಿದೆ. ಅವರು ಆ ವಿಷಯದ ಬಗ್ಗೆ ಹೀಗೆ ಯಾವುದೋ ದೊಡ್ಡ ಆಕಾರ ಷೆಡ್ ಮೇಲೆ ಕಾಲಿಟ್ಟು ತುಳಿಯುವುದನ್ನು ನೋಡಿದ್ದೇವೆಂದು ಸಹ ಹೇಳಿದ್ದಾರೆ. ಆದರೂ ಅವರ ಮಾತುಗಳನ್ನು ಯಾರು ಕೇಳಲಿಲ್ಲ. ಈ ವಿಷಯವನ್ನು ಯೋಚಿಸಿದರೆ ಗೋಳಗಳ ಗ್ರಹಗಳೆ ಹಿಂಸಿಸಿವೆ ಎನ್ನುವುದಕ್ಕೆ ಸಾಕ್ಷಿಯಾಗಿದೆ. ಅಷ್ಟೇ ಅಲ್ಲದೆ ಮೋಟಾರು ವಾಹನಗಳ ಅಪಘಾತಕ್ಕೆ ಹೆಚ್ಚಾಗಿ ಸೂಕ್ಷ್ಮ ಶರೀರಗಳೇ ಕಾರಣವಾಗುತ್ತಿವೆ. ಪ್ರತ್ಯೇಕಿಸಿ ಮದುವೆ ದಿಬ್ಬಣಗಳ ಮೇಲೆ ಅವುಗಳ ಪ್ರಭಾವ ಬಹಳ ಇರುತ್ತದೆ. ಆದ್ದರಿಂದ ಹೆಚ್ಚಾಗಿ ಮದುವೆ ದಿಬ್ಬಣಗಳು ಅಪಘಾತಕ್ಕೆ ಗುರಿಯಾಗುತ್ತಿವೆ.

**ಮೆಟ್ಟಂ ತಿಮ್ಮಪ್ಪ, ದುರದಕುಂಟ**

**338) ಒಂದು ಕಡೆ ಕೃಷ್ಣನನ್ನು ಭಗವಂತನೆಂದಿದ್ದೀರ. ಮತ್ತೊಂದು ಕಡೆ ಏಸು ಭಗವಂತನೆಂದಿದ್ದೀರ. ಭಗವಂತನೆಂದರೆ ಅರ್ಥವೇನು? ಭಗವಂತನೆನ್ನುವ ಪದ ಪರಮಾತ್ಮನಿಗಾ ಅಥವಾ ಎಲ್ಲರಿಗೂ ಅನ್ವಯಿಸುತ್ತದಾ?**

**ಉ.** ಭಗವಂತನೆಂದರೆ ಭಗ ದಿಂದ ಹುಟ್ಟಿದವನು. ಅಂದರೆ ಸ್ತ್ರೀ ಯೋನಿ ಮಾರ್ಗದಲ್ಲಿ ಹುಟ್ಟಿದವನೆಂದು ಅರ್ಥ. ಈ ಅರ್ಥದ ಪ್ರಕಾರವಾದರೆ ನಾವೆಲ್ಲರು ಭಗದಿಂದ ಹುಟ್ಟಿದವರೇ ಅಲ್ಲವೆ! ಆದರೆ ನಾವೆಲ್ಲರು ಭಗವಂತರೇನಾ ಎಂದು ಕೇಳಬಹುದು. ಆ ಸೂತ್ರದ ಪ್ರಕಾರವಾದರೆ ನಾವು ಭಗದಿಂದ ಹುಟ್ಟಿದ್ದರೆ ಭಗವಂತರೇ ಆದರೆ ನಾವು ಭಗದಿಂದ ಹುಟ್ಟಿಲ್ಲ ಅಲ್ಲವೆ! ಆದ್ದರಿಂದ ಭಗವಂತರಲ್ಲ. ಈ ಮಾತು ಕೇಳಿದರೆ ಆಶ್ಚರ್ಯವಾಗಿ ಇದೇನು ಮಾತು ನಾವು ಭಗದಿಂದಲ್ಲದೆ ಮತ್ತೆ ಹೇಗೆ ಹುಟ್ಟಿದ್ದೇವೆಂದು ಕೇಳಬಹುದು. ಭಗದಿಂದ ನಮ್ಮ ಶರೀರ ಹುಟ್ಟಿದೆ ಆದರೆ ನಾವು ಹುಟ್ಟಿಲ್ಲ. ನಮ್ಮ ಶರೀರ ಹುಟ್ಟಿದ ನಂತರ ಕೆಲವು ನಿಮಿಷಗಳಿಗೋ ಅಥವಾ ಕೆಲವು ಗಂಟೆಗಳಿಗೋ ಶರೀರದಲ್ಲಿ ನಾವು ಸೇರುತ್ತಿದ್ದೇವೆ ಆಗ ಕಿರುಚುತ್ತಿದ್ದೇವೆ. ಅಲ್ಲಿಯವರೆಗು ಪ್ರಾಣ ಬಂದಿಲ್ಲವೆಂದು ಉಳಿದವರು ನೋಡುತ್ತಿರುತ್ತಾರೆ. ಇದೆಲ್ಲ ಒಂದೇ ಬಾರಿಗೆ ಅರ್ಥವಾಗುವುದಿಲ್ಲ. ನಮ್ಮ ರಚನೆಗಳಲ್ಲಿನ **"ಜನನ ಮರಣ ಸಿದ್ಧಾಂತ"** ವೆನ್ನುವ ಪುಸ್ತಕವನ್ನು ಓದಿ ವಿವರವಾಗಿ ಅರ್ಥವಾಗಬಲ್ಲದು. ಒಬ್ಬ ಪರಮಾತ್ಮ ಮಾತ್ರವೇ ಸಜೀವವಾಗಿ ಭಗದಿಂದ ಹುಟ್ಟುತ್ತಿದ್ದಾನೆ. ಆದ್ದರಿಂದ ಆತನೊಬ್ಬನನ್ನೇ ಭಗವಂತನೆನ್ನಬಹುದು. ಶ್ರೀಕೃಷ್ಣನು, ಏಸು ನಮ್ಮಂತೆ ಅಲ್ಲದೆ ಜ್ಞಾಪಕದಿಂದ ಹುಟ್ಟಿದವರೆಂದು, ಅವರನ್ನು ಭಗವಂತನೆನ್ನುತ್ತಿದ್ದೇವೆ. ಅವರು ಸೂತ್ರದ ಪ್ರಕಾರ ಭಗವಂತರೇ. ಆ ಪರಮಾತ್ಮ ಏನು ಅಲ್ಲದವನಾಗಿ ತನ್ನ ಧರ್ಮಗಳನ್ನು ಮಾನವರಿಗೆ ತಿಳಿಸುವುದಕ್ಕೆ ಭೂಮಿ ಮೇಲೆ ಮಾನವ ಜನ್ಮವನ್ನು ತಾಳ ಬೇಕಾಗಿದೆ. ಅಂತಹದರಲ್ಲಿ ಅದನ್ನು

ಭಗವಂತನೆನ್ನುವುದು ನಡೆಯುತ್ತಿದೆ. ನನಗೆ ಹುಟ್ಟು ಇಲ್ಲ, ಸಾವು ಇಲ್ಲ, ನಾನು ಸರ್ವ ಜೀವರಾಶಿಗಳಿಗೂ ಅಧಿಪತಿಯಾಗಿ, ನನ್ನಿಂದ ಸೃಷ್ಟಿಸಿದ ನನ್ನ ಪ್ರಕೃತಿಯೊಂದಿಗೆ ಕೂಡಿ, ಒಂದು ಶರೀರ ಧರಿಸಿ ಭೂಮಿ ಮೇಲೆ ಮಾಯ ಜನ್ಮ ಎತ್ತುತ್ತಿದ್ದೇನೆಂದು ಗೀತೆಯಲ್ಲಿ ಸಹ ಭಗವಂತನಾಗಿ ಪರಮಾತ್ಮ ಹೇಳಿದ್ದಾನೆ. ಆದ್ದರಿಂದ ಪರಮಾತ್ಮ ಎನ್ನುವ ಅತೀತ ಶಕ್ತಿ ಮಾನವನಾಗಿ ಹುಟ್ಟಿದಾಗ ಭಗವಂತನೆನ್ನಲಾಗುವುದೆಂದು ತಿಳಿಯಬೇಕು.

**339) ಜೀವಿಗೆ ಅವಸ್ಥೆಗಳು ನಾಲ್ಕು, ತನುವುಗಳು ನಾಲ್ಕು ಎಂದು ಕೆಲವು ಗ್ರಂಥಗಳಲ್ಲಿ ಬರೆದಿದ್ದಾರೆ. ಸ್ಥೂಲ ಸೂಕ್ಷ್ಮ ಕಾರಣ ಮಹಾಕಾರಣ ಶರೀರಗಳು ಎಂದಿದ್ದಾರೆ. ಹಾಗೇ ಹಿರಣ್ಯ ಗರ್ಭಎಂದು ಸಹ ತಿಳಿಸಿದ್ದಾರೆ. ಜಾಗ್ರತೆ, ನಿದ್ರೆ, ಸ್ವಪ್ನ, ತುರೀಯ ತುರೀಯಾತೀತವನ್ನು ಕುರಿತು ಸಹ ತಿಳಿಸಿರುವರು. ಅವರ ವಿಷಯವೇನು?**

ಉ. ಜ್ಞಾನವೆಲ್ಲವು ಸೂತ್ರಬದ್ಧವಾಗಿ ಧರ್ಮಯುಕ್ತವಾಗಿ ಇರಬೇಕು. ಹಾಗೇ ಅದು ಅನುಭವಕ್ಕೆ ಬರುವುದಾಗಿ ಸಹ ಇರಬೇಕು. ತನುವುಗಳು ನಾಲ್ಕೆಂದು ಕೆಲವು ಗ್ರಂಥಗಳಲ್ಲಿ ಇರುವುದನ್ನು ನಾವು ಸಹ ನೋಡಿದ್ದೇವೆ. ಸ್ಥೂಲವನ್ನಲ್ಲದೇ ಸೂಕ್ಷ್ಮ ಶರೀರವನ್ನು ತಿಳಿದುಕೊಳ್ಳುವ ಜ್ಞಾನ ಸಹ ಇಲ್ಲದ ಮನುಷ್ಯನಿಗೆ ಕಾರಣ ಮಹಾಕಾರಣವೆಂದು ಹಿರಣ್ಯ ಗರ್ಭ ಎಂದರೆ ಅರ್ಥವಾಗುತ್ತದಾ? ಸ್ಥೂಲವೆಂದರೆ ಕಣ್ಣಿಗೆ ಕಾಣಿಸುವ ಶರೀರವೆಂದು ಎಲ್ಲರಿಗೂ ತಿಳಿದಿರುವುದೆ. ಸೂಕ್ಷ್ಮವೆಂದರೆ ಕಣ್ಣಿಗೆ ಕಾಣಿಸದ ಶರೀರ. ಹೀಗೆ ವಿವರವಾಗಿ ಅರ್ಥವಾಗುವಹಾಗೆ ಕಾರಣ ಮಹಾ ಕಾರಣ ಶರೀರಗಳ ಬಗ್ಗೆ ಯಾರಾದರೂ ಹೇಳಬಲ್ಲರಾ? ವಾಸ್ತವಕ್ಕೆ ಅವು ಶರೀರಗಳಾ? ನಿಜಕ್ಕೆ ನೋಡಿದರೆ ಕಾರಣವೆನ್ನುವುದು ಸಹ ಶರೀರವಲ್ಲ, ಮಹಾ ಕಾರಣ ಹೇಗಿರುತ್ತದೆ? ಯಾರಾದರು ಅನುಭವಿಸಿ ಬರೆದಿರುವ ಮಾತುಗಳಾ ಅಥವಾ ಪರಂಪರೆಯಾಗಿ ನಮ್ಮ ತಂದೆ ಹೇಳಿದ್ದಾನೆ, ನಾನು ಹೇಳುತ್ತಿದ್ದೇನೆನ್ನುತ್ತೀರಾ? ಎಂದು ಯೋಚಿಸಬೇಕು. ಹಾಗೇ ಅವಸ್ಥೆಗಳು ಮೂರಿವೆ ಅವುಗಳನ್ನು ಅನುಭವಿಸುತ್ತಿದ್ದೇವೆ. ಯಾರು ಅನುಭವಿಸದ ತುರೀಯಾತೀತವನ್ನು ಕುರಿತು ಪುಸ್ತಕಗಳಲ್ಲಿ ಬರೆದರೂ ಅವು ಅಸತ್ಯಗಳೇ ಎಂದು ತಿಳಿದುಕೊಳ್ಳಬೇಕು. ನಮಗೆ ಎಲ್ಲಿ ತುರೀಯಾತೀತವೆನ್ನುವುದು ಅನುಭವಕ್ಕೆ ಬಂದಿಲ್ಲ. ನಿಮಗೇನಾದರೂ ಬಂದಿವೆಯಾ? ಬಂದಿರುವುದಿಲ್ಲ. ಆದ್ದರಿಂದ ಕೆಲವು ಮಾತುಗಳು ಪುಸ್ತಕಗಳವರೆಗೇ ಬಿಡ ಬೇಕಾಗುತ್ತದೆ. ಅನುಭವಕ್ಕೆ ಬಾರದಿರುವವನ್ನು ತಪ್ಪದೆ ಬಿಡಬೇಕು.

**340) ತೇಟ ಗೀತಿ.**

**ಮಾಯ ಯನಗ ವೇರೇ ಮರಿ ಲೋಕಂಬುನ ಲೇದು**
**ಮಾನ ಸಂಬೆ ಮಾಯ ಪೂನಿಚೂಡ**
**ಮಾನ ಸಂಬು ವಿಡಸಿ ಮಾಯ ದಾ ನುಂಡದು**
**ಮಾಯ ವಿಡಯ ಕುಂಡ ಮಾನಸಂಬು.**

**ಈ ರೀತಿಯಾಗಿ ಕೆಲವು ಗ್ರಂಥಗಳಲ್ಲಿ ಹೇಳಿದ್ದಾರೆ ಆದ ಕಾರಣ ನಮಗೆ ಸಂಶಯಗಳಿವೆ ವಿವರಿಸಿ ತಿಳಿಸಬೇಕು.**

ಉ. ಬರೆಯುವವರು ಹೇಗೆ ಬರೆದರು ನಾವು ಯೋಚಿಸುವುದರಿಂದ ಸತ್ಯಾ ಸತ್ಯಗಳು ತಿಳಿಯದೆ ಇರುವುದಿಲ್ಲ. **"ಗುಣಮಯೀ ಮಮಮಾಯಾ"** ಎನ್ನುವ ಗೀತಾ ವಾಕ್ಯಕ್ಕು ಮೇಲಿನ ಪದ್ಯಕ್ಕು ಪೂರ್ತಿ ವ್ಯತಿರೇಖತೆ ಕಾಣಿಸುತ್ತಿದೆ. ನಮ್ಮ ಶರೀರದಲ್ಲಿರುವ ಗುಣಗಳೇ ಮಾಯೆ ಎಂದು ಗೀತೆಯಲ್ಲಿರುವಾಗ "ಮಾನ ಸಂಬೆ ಮಾಯ ಪೂನಿ ನೋಡ" ಎಂದು ಪದ್ಯದಲ್ಲಿದೆ. ಅವರ ಮಾತುಗಳನ್ನು ಬದಿಗಿಟ್ಟು ನಾವು ವಿವರಿಸಿ ನೋಡಿಕೊಂಡರೆ ಮನಸ್ಸು ಎಂದರೆ ಮನನ ಮಾಡುವುದೆಂದು ಅರ್ಥ. ಮನಸ್ಸೆನ್ನುವುದು ಏನೆಂದು ಪರೀಕ್ಷಿಸಿ ನೋಡಿದರೆ ನಮ್ಮಲ್ಲಿರುವ ಜ್ಞಾಪಕವೆ ಎಂದು ತಿಳಿಯುತ್ತಿದೆ. ಮನಸ್ಸು ಸೂರ್ಯ ಚಂದ್ರನಾಡಿಗಳ ಮೇಲೆ ಇರುವಾಗ ಎಚ್ಚರಿಕೆ ಎಂದು, ಬ್ರಹ್ಮನಾಡಿಯೊಳಗೆ ಹೋಗಿರುವಾಗ ನಿದ್ರೆಯೆಂದು ಸಹ ತಿಳಿಯುತ್ತಿದೆ. ಒಂದು ವಿಷಯವನ್ನು ಪದ್ಯದಹಾಗೆ ಬರೆದ ಮಾತ್ರಕ್ಕೆ ಅವು ಸತ್ಯವೆಂದು ನಂಬಬೇಕಾದ ಕೆಲಸವಿಲ್ಲ. ಮನಸ್ಸಿಗು ಮಾಯೆಗೂ ಎಷ್ಟೋ ಬೇಧ ಇದೆ. ಮಾಯೆ (ಗುಣಗಳು) ಹೇಳಿರುವ ಮಾತುಗಳು ಮನಸ್ಸು ಗ್ರಹಿಸಿ ಹೊರಗಿನ ಶರೀರಕ್ಕೆ, ಹೊರಗಿನ ಶರೀರದಿಂದ ಬರುವ ಸುದ್ದಿಗಳು ಒಳಗಿನ ಬುದ್ದಿಗೆ ಒದಗಿಸುವ ಕಾರ್ಯ ಮಾಡುತ್ತಿದೆ. ಮನಸ್ಸು ಸೂರ್ಯ ಚಂದ್ರ ಬ್ರಹ್ಮ ನಾಡಿಗಳ ಮೆಲೆ ನಿವಾಸವಿರುತ್ತದೆ. ಮಾಯೆ ತಲೆಯಲ್ಲಿ ಸೂಕ್ಷ್ಮವಾಗಿ ಇರುವ ಕಾಲ ಕರ್ಮ ಗುಣ ಚಕ್ರಗಳಲ್ಲಿ ಗುಣಚಕ್ರದಲ್ಲಿ ಮೂರು ಭಾಗಗಳಲ್ಲಿ ನಿವಾಸವಿರುತ್ತದೆ. ಅಂತರ್ ಮುಖವಾಗಿ ಶರೀರ ಪರಿಶೋಧನೆ ಮಾಡಿದರೆ ಯಾವುದು ಎಲ್ಲಿದೆಯೆಂದು ತಿಳಿಯಬಹುದು.

**341) ಜ್ಞಾನವು ಬೆಲೆಯುಳ್ಳದ್ದು, ಪವಿತ್ರವಾದದ್ದು ಅಂತಹ ಜ್ಞಾನವನ್ನು ನಿನಗೆ ಹೇಳುತ್ತಿದ್ದೇನೆಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದಾಗ ಅಂತಹ ಜ್ಞಾನವನ್ನು ನೀವು ಪ್ರಪಂಚಕ್ಕೆ ಸಾರುತ್ತೀರ ಕೃಷ್ಣನು ಏಕೆ ಈ ತರಹ ಎಲ್ಲರಿಗೂ ಹೇಳಲಿಲ್ಲ?**

ಉ. ತಾತ್ವಿಕ ಚಿಂತನೆ ಇರುವ ಆ ಕಾಲದಲ್ಲಿ ಜ್ಞಾನವನ್ನು ಒಬ್ಬರಿಗೆ ಹೇಳಿದರೂ ಎಷ್ಟೋ ಜನರಿಗೆ ತಿಳಿಯುತ್ತಿತ್ತು. ಆದಕಾರಣ ಆ ದಿನ ಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ. ದುಷ್ಟಚಿಂತನೆ ಇರುವ ಈ ದಿನಗಳಲ್ಲಿ ಬಹಳ ಜನರಿಗೆ ಹೇಳಿದರೂ ಒಬ್ಬರ ಹತ್ತಿರ ಸಹ ನಿಲ್ಲುತ್ತದೋ ಇಲ್ಲವೋ ಎಂದು ಬಹಳ ಜನರಿಗೆ ಹೇಳಬೇಕಾಗಿಬಂದಿದೆ.

**ಜಿ. ನರಸಿಂಹಾ ರೆಡ್ಡಿ, ಜಂಗಮರೆಡ್ಡಿಪೇಟ**

**342) ಪುಣ್ಯ ಕ್ಷೇತ್ರಗಳ ಬಗ್ಗೆ ಜನಗಳು ಹೇಗೆ ಪೂಜ್ಯ ಭಾವ ತೋರಿಸುವರು?**

**ಉ.** ಈ ದಿನ ಕೋರಿಕೆಗಳು ನೆರವೇರುತ್ತವೆಂದು, ಪುಣ್ಯಬರುತ್ತದೆಂದು ಪೂಜ್ಯ ಭಾವ ತೋರಿಸುತ್ತಿದ್ದಾರೆ. ಪೂರ್ವ ಕಾಲದಲ್ಲಿ ಹಾಗಲ್ಲದೆ ಜ್ಞಾನ ಬರುವುದೆಂದು, ಜನ್ಮರಾಹಿತ್ಯ ಬರುವುದೆಂದು ಪೂಜ್ಯ ಭಾವ ತೋರಿಸುತ್ತಿದ್ದರು. ಪೂರ್ವದಲ್ಲಿ ಜ್ಞಾನಕ್ಷೇತ್ರಗಳಾಗಿ ಇರುವವನ್ನು ಈಗಿನ ಮನುಷ್ಯನು ಪುಣ್ಯಕ್ಷೇತ್ರಗಳೆನ್ನುತ್ತಿದ್ದಾನೆ. ವಾಸ್ತವವಾಗಿ ದೇವಾಲಯಗಳು ಜ್ಞಾನ ಕ್ಷೇತ್ರಗಳೆಂದು, ಪುಣ್ಯಕ್ಷೇತ್ರಗಳಲ್ಲವೆಂದು ತಿಳಿಯಬೇಕು.

**343) ರಾತ್ರಿ ಸಮಯದಲ್ಲಿ ನಿದ್ರಿಸುವಾಗ ಎಡ ಕೈಮೇಲೆ ತಲೆಯಿಟ್ಟು ಮಲಗಿದರೆ ತಾಯಿ ಮಡಿಲಲ್ಲಿ ಮಲಗಿದಹಾಗೆಂದು ಕೆಲವರೆನ್ನುತ್ತಾರೆ ಏಕೆ?**

ಉ. ಈ ಮಾತು ಪುರುಷರಿಗೆ ಮಾತ್ರ ಅನ್ವಯಿಸುತ್ತದೆ. ಏಕೆಂದರೆ ಪುರುಷರಿಗೆ ಎಡಗಡೆ ಜೀರ್ಣಾಶಯವಿರುತ್ತದೆ. ಎಡಕೈ ಮೇಲೆ ಮಲಗುವುದರಿಂದ ಜೀರ್ಣಕೋಶ ಕದಲಿಕೆಗಳಿಗೆ ಸುಲಭವಾಗಿರುತ್ತದೆನ್ನುವ ಉದ್ದೇಶದಿಂದ ಹಾಗೆನ್ನುತ್ತಾರೆ. ಹೊಟ್ಟೆ ನೋವು ಇರುವವನಿಗೆ ಸಹ ಎಡಗಡೆ ತಿರುಗಿ ಮಲಗಲು ವೈದ್ಯರು ಸಹ ಹೇಳುತ್ತಾರೆ.

**344) ನಿನಗೆ ಪಾಪ ತುಂಬಿದೆ ಎಂದು ಹೇಳುತ್ತಾರೆ ಕೆಲವರು. ಪಾಪವೆಂದರೆ ಎಂತದ್ದು, ಪುಣ್ಯವೆಂದರೆ ಎಂತದ್ದು?**

ಉ. ಗತಕಾಲದಲ್ಲಿ ಮಾಡಿಕೊಂಡ ಪಾಪ ಕಷ್ಟ ರೂಪವಾಗಿ ಅನುಭವಕ್ಕೆ ಬರುತ್ತದೆನ್ನುವ ಮಾತನ್ನು ನಿನ್ನ ಪಾಪ ತುಂಬಿದೆಯೆನ್ನುತ್ತಾರೆ. ಪಾಪವೆಂದರೆ ಕಷ್ಟ ದುಃಖಗಳನ್ನು ಉಂಟುಮಾಡುವುದು. ಪುಣ್ಯವೆಂದರೆ ಸುಖ ಸಂತೋಷಗಳನ್ನು ಉಂಟುಮಾಡುವುದು.

**ಜೆ.ಕ್ರಿಷ್ಣ ಮೂರ್ತಿ, ಸಿಂಗನಹಾಲ್**

**345) ಯೋಗವೆಂದರೆ ಏನು? ಇದರ ಅಂತರಾರ್ಥವೇನು?**

ಉ. ಯೋಗವೆಂದರೆ ಜೀವಾತ್ಮ ಆತ್ಮಗಳು ಸೇರುವಿಕೆಯೆಂದು ಅರ್ಥ. ಇದರ ಅಂತರಾರ್ಥ ಬಾಹ್ಯಾರ್ಥಗಳಿಲ್ಲ, ಇರುವುದೊಂದೇ ಅರ್ಥ.

**346) ಹಂಸ ಪದವು ಜೀವೇಶ್ವರ ಮೈತ್ರಿ ಹೇಗಾಗುತ್ತದೆ?**

ಉ. ಇದು ತಲೆ ಬಾಲ ಇಲ್ಲದ ಪ್ರಶ್ನೆ. ಹಂಸ ಪದವೇನು ಜೀವೇಶ್ವರ ಮೈತ್ರಿ ಏನು? ಹಾಗೆ ಏಕೆ ಆಗಬೇಕು? ಇವೆಲ್ಲವು ಹುಚ್ಚು ವೇದಾಂತದ ಪುಸ್ತಕಗಳಲ್ಲಿರುವ ಮಾತುಗಳು. ಅವನ್ನು ಬಿಟ್ಟು ನಿಮಗೆ ಉಪಯೋಗಕ್ಕೆ ಬರುವವು ಯಾವವು ಬೇಕೋ ಅವನ್ನು ಕೇಳಿ.

**347) ಪಂಚಭೂತಾತ್ಮಕವಾದ ಈ ದೇಶಕ್ಕು ನೀವು ಹೇಳಿರುವ ಉಪದೇಶಕ್ಕು ಭೇದವೇನು?**

ಉ. ಈ ದೇಶ ಸ್ಥೂಲ, ಉಪದೇಶ ಸೂಕ್ಷ್ಮ.

**348) ಗುರು ಶಬ್ದ ವಾಚ್ಯುಗಳೆಂದರೆ ಭಾವವೇನು?**

ಉ. ತಂದೆ ಶಬ್ದವಾಚ್ಯುಗಳೆನ್ನುವವು ಕೇಳಿದರೆ ನಗು ಬರುತ್ತಿದೆ. ಮತ್ತು ಎಲ್ಲರು ನಗುತ್ತಾರೆ. ಅವು ಎಲ್ಲಿ ಕೇಳಿದ್ದೀಯೋ ಅವರನ್ನೇ ಕೇಳಿ ತಿಳಿದುಕೊ. ನೀವು ಪ್ರತಿ ತಿಂಗಳು ಪ್ರಶ್ನೆಗಳನ್ನು ಕೇಳುತ್ತೇನೆ ಉತ್ತರ ಕೊಡಿ ಎಂದು ಬರೆದಿದ್ದೀರ. ಪ್ರಶ್ನೆಗಳು ಕೇಳುವ ಮುನ್ನ ಅವು ಪ್ರಶ್ನೆಗಳೋ ಅಲ್ಲವೊ ಯೋಚಿಸಿ ಕೇಳಿರಿ.

**ಭಜನೆ ಮಂಡಲಿ, ಯಮ್. ಅಗ್ರಹಾರ**

**349) ಎಲ್ಲಾ ಯೋಗಗಳಿಗಿಂತಲೂ ರಾಜಯೋಗವೇ ಒಳ್ಳೆಯದೆನ್ನುತ್ತಾರೆ. ರಾಜಯೋಗ ವೆಂದರೆ ಏನೋ ತಿಳಿಸಬೇಕೆಂದು ಕೋರುತ್ತಿದ್ದೇವೆ.**

ಉ. ನೀವು ಎಲ್ಲಾ ಯೋಗಗಳಿಗಿಂತಲೂ ಎಂದು ಕೇಳಿದ್ದೀರ. ವಾಸ್ತವವಾಗಿ ಯೋಗಗಳು ಎಷ್ಟೋ ಇಲ್ಲ. ಇರುವವು ಎರಡು ಮಾತ್ರ ಎಂದು ತಿಳಿಯಬೇಕು. ಒಂದು ಕರ್ಮಯೋಗ ಎರಡು ಬ್ರಹ್ಮಯೋಗ, ಕರ್ಮಯೋಗವನ್ನೇ ರಾಜಯೋಗವೆಂದು ಹೇಳುತ್ತೇವೆ. ಬ್ರಹ್ಮಯೋಗವನ್ನೇ ಜ್ಞಾನಯೋಗವೆಂದು ಹೇಳುತ್ತೇವೆ. ಇದರಲ್ಲಿ ಒಂದು ಒಳ್ಳೆಯದು ಮತ್ತೊಂದು ಒಳ್ಳೆಯದಲ್ಲವೆನ್ನುವ ಸಮಸ್ಯೆ ಇಲ್ಲ. ಆದರೆ ಬ್ರಹ್ಮಯೋಗ ಕ್ಕಿಂತಲೂ ಕರ್ಮಯೋಗ ಕಷ್ಟವಾದದ್ದು ಆದ್ದರಿಂದ ಬ್ರಹ್ಮಯೋಗಕ್ಕಿಂತಲೂ ರಾಜಯೋಗ ದೊಡ್ಡದೆಂದು ಕೆಲವರಂದಿದ್ದಾರೆ. ಎರಡು ಯೋಗಗಳಲ್ಲಿ ಯಾವುದನ್ನು ಆಚರಿಸಿದರೂ

ಫಲಿತ ಕರ್ಮನಾಶವಾಗಿ ಮೋಕ್ಷವನ್ನು ಹೊಂದುವುದೆ. ಆಚರಿಸುವುದರಲ್ಲಿ ರಾಜಯೋಗ ಕಷ್ಟವಾದದ್ದು ಆದ್ದರಿಂದ ಅದನ್ನು ದೊಡ್ಡದಾಗಿ ಹೇಳಿದ್ದಾರೆಂದು ತಿಳಿಯಬೇಕು. ಬ್ರಹ್ಮಯೋಗವೆಂದರೆ ಬಾಹ್ಯ, ಸ್ಪರ್ಶ, ರಸ, ವಾಸನೆ, ದೃಷ್ಟಿಯಿಂದ ಮನಸ್ಸು ಸಂಬಂಧವಿಲ್ಲದೆ ಅಣಗಿರುವುದು. ರಾಜಯೋಗವೆಂದರೆ ಮಾಡುತ್ತಿರುವ ಕಾರ್ಯಗಳಲ್ಲಿ ನಾನು ಎನ್ನುವ ಅಹಂಕಾರ ಇಲ್ಲದೆ ಹೋಗುವುದು. ಬ್ರಹ್ಮಯೋಗದಲ್ಲಿ ಯೋಗಿ ಮನಸ್ಸನ್ನು ಸ್ಥಬ್ದವಾಗಿ ನಿಲ್ಲಿಸುವನು. ರಾಜಯೋಗದಲ್ಲಿ ಯೋಗಿ ಎಲ್ಲಾ ಕೆಲಸಗಳು ಕರ್ಮಾನುಸಾರವಾಗಿ ಮಾಡುತ್ತಿರುವನು.

**ಯಂ.ಸಿ. ಅಂಜನೇಯುಲು ಶೆಟ್ಟಿ, ಚಿನ್ನ ಮಾಂಡ್ಯಮು**

**350) ಮನುಷ್ಯನು ದೇಹ ಬಿಟ್ಟ ನಂತರ ಮತ್ತೆ ಮನುಷ್ಯ ದೇಹವೇ ಬರುತ್ತದಾ? ಅಥವಾ ಬೇರೆ ದೇಹ ಬರುತ್ತದಾ?**

**ಉ.** ಮನುಷ್ಯನು ಮೋಕ್ಷಾಸಕ್ತನಾಗಿ ನಿತ್ಯ ಸಾಧನೆ ಪರನಾಗಿರುವಾಗ ಅಂತವನಿಗೆ ಮರಣ ಬಂದರೂ, ಅವನು ಪುನಃ ಮನುಷ್ಯ ಜನ್ಮದಲ್ಲೇ ಹುಟ್ಟುವನು. ಅಂತಹ ಸಾಧಕನಲ್ಲದಿರುವಾಗ, ಅವನು ಅವನ ಕರ್ಮಾನುಸಾರವಾಗಿ ಬೇರೆ ವಿಧದ ಜನ್ಮಗಳು ಹೊಂದಬಹುದು. ಈ ಸೂತ್ರ ಮನುಷ್ಯರಿಗಲ್ಲದೆ ಯಾವ ಜೀವರಾಶಿಗಾದರೂ ವರ್ತಿಸುತ್ತದೆ. ಅವರವರ ಪಾಪ ಪುಣ್ಯಗಳ ಕ್ರಮದ ಪ್ರಕಾರ ವಿಧ ವಿಧವಾದ ದೇಹಗಳು ಲಭಿಸುತ್ತಿರುತ್ತವೆ. ಆದರೆ ಯೋಗ ಸಾಧಕನಿಗೆ ಮಾತ್ರ ಮನುಷ್ಯ ಜನ್ಮವೇ ಉಂಟಾಗುತ್ತದೆ. ಉಳಿದ ಜೀವರಾಶಿಗಳು ಸಹ ಕರ್ಮಾನುಸಾರವಾಗಿ ಮನುಷ್ಯ ಜನ್ಮ ಹೊಂದಬಹುದು.

**ಯಸ್. ಸುಭಾನ್, ಸೋಮವಾರಪೇಟ**

**351) ವಿವಾಹವಾದವರಿಗೆ ಒಳ್ಳೆಯ ಗುರು ಲಭಿಸಿದನಂತರ ಯೋಗ ಸಿದ್ಧಿಸುತ್ತದೆ ಎನ್ನುತ್ತಾರೆ ನಿಜವಾ?**

**ಉ.** ಒಳ್ಳೆ ಗುರು ಲಭಿಸಿದರೆ ಆತನು ಹೇಳಿದಹಾಗೆ ನಡೆದುಕೊಂಡಾಗ ಯಾರಿಗಾದರೂ ಯೋಗ ಸಿದ್ಧಿಸುತ್ತದೆ. ವಿವಾಹ ದೇಹಕ್ಕೆ ಆಗಲಿ ಮನಸ್ಸಿಗೆ ಇಲ್ಲ ಅಲ್ಲವೆ! ಯೋಗ ಮನಸ್ಸಿನ ಮೇಲೆ ಅಹಂಕಾರದ ಮೇಲೆ ಆಧಾರಪಟ್ಟಿದೆ. ಮೇಲಿನ ಶರೀರದ ಮೇಲೆ ಆಧಾರವಾಗಿಲ್ಲ. ಆದ್ದರಿಂದ ಮನಸ್ಸನ್ನು ಜಯಿಸಿದರೆ ಬ್ರಹ್ಮಯೋಗ, ಅಹಂಕಾರವನ್ನು ಜಯಿಸಿದರೆ ಕರ್ಮಯೋಗ ಸಿದ್ಧಿಸುತ್ತದೆಂದು ತಿಳಿಯಬೇಕು. ಆದ್ದರಿಂದ ವಿವಾಹಿತರಿಗೇ ಎನ್ನುವುದು ನಿಯಮವಿಲ್ಲ.

*352)* ***ಅಂಗ ಲಿಂಗಮುಲನು ಹರುನಿತೋ ಮರ್ಧಿಂಚಿ***
***ಜಗಮು ಗ್ರಂಧಿ ನಿಲಿಪೆ ಸರಣಿ ತೆಲಿಸಿ***
***ರಂಗಗಾ ವಸುಧಲೋ ವಂಗಂಬು ಚಲ್ಲಾರಾ***
***ವಿಶ್ವದಾಭಿರಾಮ ವಿನುರ ವೇಮಾ.***

**ಈ ಪದ್ಯಕ್ಕೆ ಭಾವವನ್ನು ತಿಳಿಸಬೇಕೆಂದು ಕೋರುತ್ತಿದ್ದೇವೆ.**

ಉ. ಶರೀರ ಪಾತ್ರದಲ್ಲಿರುವ ಜೀವಾತ್ಮನು ಕಾಲವೆನ್ನುವ ಕುಡುಗೋಲಿನಿಂದ ಕಡಿದು ಎಂದರೆ ಯೋಗ ಸಾಧನೆ ಮಾಡಿ, ಅದರಲ್ಲಿ ಲಭಿಸುವ ಜ್ಞಾನಶಕ್ತಿಯಿಂದ ಜನ್ಮಗಳಿಗೆ ಕಾರಣವಾದ ಕರ್ಮ ಎನ್ನುವ ಉತ್ಪತ್ತಿಯನ್ನು ನಿಲ್ಲಿಸುವ ವಿಧಾನ ತಿಳಿದು, ಎಂದರೆ ಜ್ಞಾನಾಗ್ನಿಯಿಂದ ಜನ್ಮಕ್ಕೆ ಕಾರಣವಾದ ಕರ್ಮವನ್ನು ಸುಡುವ ವಿಧ ತಿಳಿದು, ಆ ವಿಷಯವನ್ನು ಭೂಮಿ ಮೇಲೆ ವಂಗಂಬು ಚೆಲ್ಲಿರಿ ಎಂದರೆ ಜ್ಞಾನ ಬೀಜಗಳನ್ನು ಚೆಲ್ಲಿರಿ. ಸಂತೋಷವಾಗಿ ಇತರರಿಗೆ ತಿಳಿಸೆಂದು ಅರ್ಥ.

**ಸದಾ ಶಿವನಾಯುಡು, ಬಿ. ಪಪ್ಪೂರು**

*353. ಸೀ.* ***ಕಾನನಿ ಭೂಮಿಲೋ ಕಸ್ತೂರಿ ಕೋನಲೋ***
***ಮಂದರಗಿರಿ ಮೀದ ಮರ್ರಿ ಚೆಟ್ಟು***
***ಚೆಟ್ಟುಕು ಕೊಮ್ಮಲು ಚೆರ್ಚಿಂಪ ಪದಿ ನೂರ್ಲು***
***ಕೊಮ್ಮ ಕೊಮ್ಮಕು ಕೋಟಿ ಕೋತುಲುಂಡು***
***ನಗದರಂ ಬೈನಟ್ಟಿ ನಡಿ ಕೊಮ್ಮ ಮೀದನು***
***ನಕ್ಕ ಒಕಟುಂಡು ಚುಕ್ಕವಲೆನು***
***ಸುಸ್ಥಿರಂ ಬೈನಟ್ಟಿ ಚುಕ್ಕಕು ತೂರ್ಪುನ ಸೂರ್ಯಚಂದ್ರಾದುಲು ತೇಜರಿಲ್ಲು***

*ತೇ.* ***ದೀನಿ ಕರ್ಥಂಬು ಚೆಪ್ಪು ದೇಶಿಕುನಕು***
***ನೆಲಲು ಪಂಡ್ರೆಂಡು ಗಡುವಿತ್ತು ನೇರ್ಪುತೋಡ***
***ಚೆಪ್ಪ ಗಲಿಗೆ ನೇನಿ ನೆನಿತ್ತು ಚಿನ್ನ ಮಾಡ***
***ಚೆಪ್ಪ ಲೇಕುಂಟೆ ನೇನಗುದು ಚಿನ್ನ ನಗುವು.***

**ಈ ಪದ್ಯ ವೊಂದರ ಭಾವವನ್ನು ತಿಳಿಸಬೇಕೆಂದು ಕೋರುತ್ತಿದ್ದೇವೆ.**

ಉ. ಮೇಲಿನ ಪದ್ಯದಲ್ಲಿ ಇದಕ್ಕರ್ಥ ಹೇಳುವ ದೇಶೀಕನಿಗೆ ಹನ್ನೆರಡು ತಿಂಗಳ ಗಡುವು ಕೊಡುವೆನು) ಎನ್ನುವ ಮಾತನ್ನು ನೋಡಿದರೆ ಇದು ಬಹಳ ದೊಡ್ಡ ನಿಗೂಢ ಭಾವವಿರುವ ಪದ್ಯವೆಂದು ತಿಳಿದು ಹೋಗುತ್ತಿದೆ. ಆದರೂ ಈ ಪದ್ಯವೊಂದರ ಭಾವವನ್ನು ಹೇಳುವುದಕ್ಕೆ ಅಷ್ಟು ಕಾಲ ಬೇಕಾಗಿಲ್ಲ. ಕೆಳಗೆ ಓದಿರಿ ಪದ್ಯದ ಭಾವವನ್ನು.

ದೈವ ನಿವಾಸವಿರುವ ನಿಜವಾದ ದೇವಾಲಯವಾದ ನಮ್ಮ ಶರೀರದಲ್ಲಿ ಕಣ್ಣಿಗೆ ಕಾಣಿಸದ ನೋಡಲಾರದ ಅಂತರ್ಗತದಲ್ಲಿ, ಮೂಳೆಗಳಿಂದ ಮತ್ತು ಬೆನ್ನೆಲುಬುಗಳಿಂದ ಮಾಡಲ್ಪಟ್ಟ ಎತ್ತರವಾದ ಶರೀರ ಭಾಗದಲ್ಲಿ ಕಪಾಳ ಸ್ಥಾನದಲ್ಲಿ ಜೀವಿಗಳ ಸಾರಾಂಶವೆಲ್ಲವು ಒಳಗೊಂಡಿದೆ. ಆ ಸ್ಥಾನದಲ್ಲಿಯೇ ಜೀವರಾಶಿಗಳ ನಡೆದ, ನಡೆಯುತ್ತಿರುವ ನಡೆಯಬೇಕಾಗಿರುವ ಚರಿತ್ರಗಳೆಲ್ಲವು ಬಚ್ಚಿಡಲ್ಪಟ್ಟಿವೆ. ಶಿರೋಭಾಗದಲ್ಲಿ ಮಧ್ಯೆ ಇರುವ ಗುಣಚಕ್ರದಲ್ಲಿ ಗುಣಗಳು, ಕರ್ಮ ಚಕ್ರದಲ್ಲಿ ಕರ್ಮ, ಕಾಲಚಕ್ರದಲ್ಲಿ ಕಾಲ ಕಾಣಿಸದೆ ಸೂಕ್ಷ್ಮವಾಗಿ ಇವೆ.

ಕಾಣಿಸುವ ಮೆದುಳಿನಿಂದ ಒಂದು ನಾಡಿ ಹೊರಟು ಗುದ ಸ್ಥಾನದವರೆಗು ವ್ಯಾಪಿಸಿಕೊಂಡಿದೆ. ಇದನ್ನೇ ಬ್ರಹ್ಮನಾಡಿ ಎನ್ನುತ್ತಾರೆ. ಈ ನಾಡಿಯಲ್ಲಿ ಕಾಲ ಕರ್ಮ ಗುಣ ಚಕ್ರಗಳನ್ನು ನಡೆಸುವ ಆತ್ಮ ನಿವಾಸವಾಗಿದೆ. ಆತ್ಮ ಕಣ್ಣಿಗೆ ಕಾಣಿಸದೆ ಬ್ರಹ್ಮನಾಡಿ ಮೇಲ್ಭಾಗದಿಂದ ಕೊನೆಯ ಭಾಗದವರೆಗು ವ್ಯಾಪಿಸಿ ಬ್ರಹ್ಮನಾಡಿ ಯೊಂದಿಗೆ ಅಂಟಿಕೊಂಡಿರುವ ಸಣ್ಣ ಸಣ್ಣ ನರಗಳಿಂದ ಶರೀರವೆಲ್ಲವು ಆವರಿಸಿದೆ. ಮೇಲಿನಿಂದ ಕೆಳಗಿನ ವರೆಗು ಸಣ್ಣ ಸಣ್ಣ ನರಗಳು ಅನೇಕವು ಶರೀರ ವಿವಿಧ ಭಾಗಗಳಿಂದ ಬಂದು ಬ್ರಹ್ಮನಾಡಿಯೊಂದಿಗೆ ಸೇರಿಇವೆ. ಈ ಸಣ್ಣ ನರಗಳಿಂದಲೇ ಶರೀರದಲ್ಲಿ ಯಾವ ವಿಷಯವಾದರೂ ಬ್ರಹ್ಮನಾಡಿಯನ್ನು ಸೇರಿ ಅಲ್ಲಿಂದ ಕಪಾಳ ಸ್ಥಾನದಲ್ಲಿ ನಿವಾಸವಿರುವ ಜೀವಿಗೆ ಸೇರುತ್ತಿವೆ. ಅಷ್ಟೇ ಅಲ್ಲದೆ ಬ್ರಹ್ಮನಾಡಿಗೆ ಮುಂದಿನ ಭಾಗದಲ್ಲಿ ಎರಡು ಕಡೆ ಸೂರ್ಯ ಚಂದ್ರನಾಡಿಗಳೆನ್ನುವವು ಇವೆ. ಈ ನಾಡಿಗಳು ಎರಡು ಮುಖ್ಯವಾಗಿ ಶ್ವಾಸಕೋಶಗಳೊಂದಿಗೆ ಸಂಬಂಧ ಹೊಂದಿವೆ. ನಮ್ಮ ಮೂಗಿನ ರಂಧ್ರಗಳಿಂದ ಆಡುವ ಶ್ವಾಸ ಸೂರ್ಯ ಚಂದ್ರ ನಾಡಿಗಳಿಂದಲೇ ಕದಲಿಸಲ್ಪಡುತ್ತಿವೆ.

ಮೇಲಿನ ವಿಧವಾಗಿ ಶರೀರ ಅಂತರ್ಭಾಗವಿದೆ. ಈ ವಿಷಯವನ್ನು ಯೋಗಿಗಳಾ ದವರು ಪದ್ಯರೂಪವಾಗಿ ಹೇಳಿದ್ದಾರೆ ಒಳಗಿನ ಭಾಗ ಕಾಣಿಸದಿರುವುದು. ಆದ್ದರಿಂದ ಕಾಣದ ಭೂಮಿಯಲ್ಲಿ ಎಂದಿದ್ದಾರೆ. ಶರೀರ ಆತ್ಮ ನಿಲಯವಾದ ಪವಿತ್ರ ಸ್ಥಾನ

ಆದ್ದರಿಂದ ಪರಿಮಳವಿರುವ ಕಸ್ತೂರಿ ಕೋನ ಎಂದಿದ್ದಾರೆ. ಶರೀರ ಮೇಲಿನ ಭಾಗದಲ್ಲಿ ಆತ್ಮ, ಜೀವಿಯು, ಗುಣಗಳು, ಕರ್ಮಗಳ ನಿಲಯವಾದ್ದರಿಂದ ಶರೀರವನ್ನು ಪರ್ವತವಾಗಿ ಹೋಲಿಸಿ ಮಂದರಗಿರಿ ಎಂದಿದ್ದಾರೆ. ಕಪಾಳ ಸ್ಥಾನದಿಂದ ಬ್ರಹ್ಮನಾಡಿ ಹುಟ್ಟಿದೆ ಆದುದರಿಂದ ಅದನ್ನು ಆಲದಮರವಾಗಿ ಹೇಳಿದ್ದಾರೆ. ಬ್ರಹ್ಮನಾಡಿಯಿಂದ ಎಷ್ಟೋ ನಾಡಿಗಳು ಸೀಳಿ ಹೋಗಿವೆ. ಆದ್ದರಿಂದ ನಾಡಿಗಳೆಲ್ಲವನ್ನು ಕೊಂಬೆಗಳಾಗಿ ಹೋಲಿಸಿ ಗಿಡಕ್ಕೆ ಚರ್ಚಿಸುವ ಹತ್ತು ನೂರು ಕೊಂಬೆಗಳೆಂದಿದ್ದಾರೆ. ಬ್ರಹ್ಮನಾಡಿ ಯೊಂದಿಗೆ ಸಂಬಂಧವಿರುವ ನರಗಳಿಂದ ಲೆಕ್ಕಕ್ಕೆ ಬಾರದ ಅನೇಕ ವಿಷಯಗಳು ಬ್ರಹ್ಮನಾಡಿಯನ್ನು ಸೇರುತ್ತಿವೆ. ಆದ್ದರಿಂದ ಕೊಂಬೆ ಕೊಂಬೆಗೂ ಕೋಟಿ ಕೋತಿಗಳೆಂದು ಎಂದಿದ್ದಾರೆ. ಸಣ್ಣ ನರಗಳೆಲ್ಲವುಗಳಿಗು ಬ್ರಹ್ಮನಾಡಿಯೇ ಆಧಾರ. ಬ್ರಹ್ಮನಾಡಿಯಿಂದಲೇ ಶಕ್ತಿ ಎಲ್ಲಾ ನರಗಳಿಗೂ ಪ್ರವಹಿಸುತ್ತಿದೆ. ಆದ್ದರಿಂದ ಬ್ರಹ್ಮನಾಡಿಯನ್ನು ನಗಧರಂಬೈನ ನಡಿಮಿ ಕೊಂಬೆ (ನಗರಕ್ಕೆಲ್ಲಾ ಮಧ್ಯ ಕೊಂಬೆ) ಎಂದಿದ್ದಾರೆ. ಬ್ರಹ್ಮನಾಡಿಯಲ್ಲೇ ಎಲ್ಲದಕ್ಕೂ ಸಾಕ್ಷಿಯಾದ ಆತ್ಮ ನಿವಾಸವಿದೆ. ಆದ್ದರಿಂದ ಆತ್ಮವನ್ನು ನರಿಗೆ ಹೋಲಿಸಿ ಮಧ್ಯಕೊಂಬೆಯ ಮೇಲೆ ನರಿ ಒಂದು ಎಂದಿದ್ದಾರೆ. ಆತ್ಮ ಸ್ಥಿರ ಸ್ಥಾಯಿಯಾಗಿ ಒಂದು ಕಡೆ ಇದ್ದು ತನ್ನ ಶಕ್ತಿ ಕಿರಣಗಳನ್ನು ನರಗಳ ಮೂಲಕ ಶರೀರವೆಲ್ಲಾ ವ್ಯಾಪಿಸುವಹಾಗೆ ಮಾಡುತ್ತಿದೆ. ಆದ್ದರಿಂದ ಹಗಲು ರಾತ್ರಿ ಸ್ಥಿರಸ್ಥಾಯಿಯಾಗಿರುವ ನಕ್ಷತ್ರವಾಗಿ ಆತ್ಮವನ್ನು ಹೋಲಿಸಿ ನರಿಯೊಂದಿರುವುದು ನಕ್ಷತ್ರದಹಾಗೆ ಎಂದಿದ್ದಾರೆ. ಬ್ರಹ್ಮನಾಡಿಗೆ ಸ್ವಲ್ಪ ಮುಂದೆ ಪಕ್ಕದಲ್ಲಿ ಎರಡು ಕಡೆ ಸೂರ್ಯ ಚಂದ್ರನಾಡಿಗಳಿವೆ. ಜಾಗ್ರತಾವಸ್ಥೆಯಲ್ಲಿ ಮಾತ್ರ ಮನಸ್ಸಿಗೆ ಸ್ಥಾನವಾಗಿರುವ ಸೂರ್ಯ ಚಂದ್ರ ನಾಡಿಗಳನ್ನು 12 ಗಂಟೆಗಳ ಕಾಲವೇ ಕಾಣಿಸಿ 12 ಗಂಟೆಗಳ ಕಾಲ ಕಾಣಿಸದ ಸೂರ್ಯ ಚಂದ್ರರಾಗಿ ಹೋಲಿಸಿ ನಕ್ಷತ್ರಕ್ಕೆ ಪೂರ್ವದಲ್ಲಿ ಸೂರ್ಯ ಚಂದ್ರರು ಬೆಳಗುವರೆಂದಿದ್ದಾರೆ.

ಇದು ನಿಗೂಢ ಭಾವವಿರುವ ಪದ್ಯ. ಶರೀರ ಅಂತರ್ಗತ ಜ್ಞಾನ ಪೂರ್ತಿಯಾಗಿ ತಿಳಿದವರಿಗೇ ಈ ಪದ್ಯ ಅರ್ಥವಾಗುತ್ತದೆ. ಶರೀರಾಂತರ್ಗತ ಜ್ಞಾನ ಬಹಳ ಜನಕ್ಕೆ ಇಲ್ಲದ ಕಾರಣ ಇದರ ಅರ್ಥ ಹೇಳುವುದಕ್ಕೆ ಬಹಳ ಕಾಲ ಹಿಡಿಯುತ್ತದೆನ್ನುವ ಉದ್ದೇಶದಿಂದ ತಿಂಗಳು ಹನ್ನೆರಡು ಕಾಲ ಗಡುವೆಂದು ಹೇಳಿದ್ದಾರೆ. ಇದನ್ನು ಓದಿದವರು ಶರೀರ ಜ್ಞಾನ ಶ್ರೇಷ್ಠವಾದದ್ದೆಂದು ತಿಳಿಯಬೇಕು. ಭಗವದ್ಗೀತೆಯಲ್ಲಿ ಸಹ ಭಗವಂತನು **"ಕ್ಷೇತ್ರ ಕ್ಷೇತ್ರಜ್ಞಯೊರಾಜ್ಞಾನಂ ಯತ್ತದ್ ಜ್ಞಾನಂ ಮತಂ ಮಮ"** ಎಂದಿದ್ದಾರೆ. ಶರೀರ ಅದರಲ್ಲಿರುವ ಅತ್ಮವನ್ನು ಕುರಿತಾದ ಜ್ಞಾನವೇ ಶ್ರೇಷ್ಠವಾದದ್ದೆಂದು ಶ್ರೀಕೃಷ್ಣನು ಸಾರಿದ್ದಾನೆ.

**ಲಕ್ಷ್ಮಿ ನಾರಾಯಣ, ನರಸಾಪುರಮು**

**354) ವಿವಾಹ ಸಮಯದಲ್ಲಿ ಅಕ್ಷತೆಗಳನ್ನು ಹಾಕುವುದು, ಕತ್ತಿ ಹಿಡಿಯುವುದು, ಅರುಂಧತಿ ನಕ್ಷತ್ರವನ್ನು ನೋಡುವುದು ಮೊದಲಾದ ವಿಷಯಗಳಿಗೆ ಇದಕ್ಕು ಮೊದಲು ವಿವರವಾಗಿ ಹೇಳಿದ್ದೀರ. ಆದರೆ ಇನ್ನೊಂದು ಅನುಮಾನ ಉಳಿದಿದೆ. ಅದಕ್ಕೆ ಸಮಾಧಾನ ತಿಳಿಸಬೇಕೆಂದು ಕೋರುತ್ತಿದ್ದೇವೆ. ಅದು ಏನೆಂದರೆ! ವಿವಾಹ ಸಮಯದಲ್ಲಿ ವಧೂ ವರರಿಬ್ಬರು ಒಬ್ಬರ ತಲೆ ಮೇಲೆ ಇನ್ನೊಬ್ಬರು ಅಕ್ಕಿ ಕಾಳುಗಳನ್ನು ಹಾಕುವುದು ನಡೆಯುತ್ತಿದೆ. ಅದನ್ನು (ತಲಂಬರಗಳು) ಅಕ್ಕಿ ಎರೆಯುವುದು ಎನ್ನುತ್ತಾರೆ. ಅದರ ವಿವರವೇನು?**

ಉ. ಆತ್ಮ ಜ್ಞಾನ ಎಲ್ಲರಿಗೂ ಹತ್ತಿರವಾಗಿ ಇರಬೇಕೆನ್ನುವ ಭಾವದಿಂದ ಆದಿನ ಹಿರಿಯರು ಜ್ಞಾನಸಂಬಂಧವಾದ ಆಚರಣೆಗಳು ಎಷ್ಟೋ ಕಾರ್ಯರೂಪಗಳಾಗಿ ಇಟ್ಟಿದ್ದಾರೆ. ಜ್ಞಾನವು ಮಾತುಗಳಿಂದ ಹೇಳಿದರೆ ಅರ್ಥವಾಗದೆ ಇರಬಹುದು ಅಥವಾ ಸ್ವಲ್ಪ ಕಾಲಕ್ಕೆ ಹೇಳುವವರಾಗಲಿ ಅಥವಾ ಕೇಳುವವರಾಗಲಿ ಇಲ್ಲದೆ ಹೋಗಬಹುದು. ಹಾಗಾಗದೆ ಇರುವುದಕ್ಕೆ ಒಂದು ಪದ್ಧತಿ ಪ್ರಕಾರ ಆಚರಣೆ ಇಟ್ಟರೆ, ಅದನ್ನು ಆಚಾರದ ಪ್ರಕಾರ ಎಲ್ಲರೂ ಆಚರಿಸಿದರೆ, ಅ ವಿಷಯಕ್ಕೆ ದೂರವಾಗದೆ ಇರುತ್ತಾರೆಂದು, ಎಷ್ಟೋ ಜ್ಞಾನ ವಿಷಯಗಳನ್ನು ಆಚಾರಗಳಾಗಿ ಆಚರಿಸುವುದಕ್ಕೆ ನಿಯಮಿಸಿದ್ದಾರೆ. ಅದರಲ್ಲಿ (ತಲಂಬರಗಳು) ಅಕ್ಕಿ ಎರೆಯುವುದು ಸಹ ಒಂದಿದೆ. ಜ್ಞಾನಕ್ಕೆ ನವಗ್ರಹಗಳಲ್ಲಿ ಚಂದ್ರನು ಅಧಿಪತಿಯಾಗಿದ್ದು ಆತನ ಧಾನ್ಯ ಅಕ್ಕಿ. ಬ್ರಹ್ಮ ವಿದ್ಯೆಯಲ್ಲಿ ಜ್ಞಾನದ ಗುರುತಾಗಿ ಚಂದ್ರನನ್ನು, ಚಂದ್ರ ಧಾನ್ಯವನ್ನು ಹೇಳುವುದು ನಡೆಯುತ್ತಿದೆ. ಜ್ಞಾನಕ್ಕೆ ಗುರುತಾದ ಅಕ್ಕಿಯನ್ನು ತಲೆ ಮೇಲೆನೇ ಹಾಕುವುದಕ್ಕೆ ಅರ್ಥವಿದೆ. ತಲೆ ಜ್ಞಾನಕ್ಕಾಗಲಿ, ಅಜ್ಞಾನಕ್ಕಾಗಲಿ ಸ್ಥಾನ. ತಲೆಯಲ್ಲಿನ ಗುಣಗಳನ್ನೇ ಗೀತೆಯಲ್ಲಿ ಮಾಯೆ ಎಂದು ಸಹ ಹೇಳಿದ್ದಾರೆ. ವಿವಾಹ ಸಮಯದಿಂದ ಹೆಂಡತಿಗೆ ಗಂಡ ಎನ್ನುವ ಹೊಸ ಮಾಯೆ, ಗಂಡನಿಗೆ ಹೆಂಡತಿ ಎನ್ನುವ ಹೊಸ ಮಾಯೆ ಅಂಟಿಕೊಂಡು, ಅ ದಿನದಿಂದ ಸಂಸಾರ ಜೀವನ ಪ್ರಾರಂಭವಾಗಿ ಅವರ ತಲೆ ಅನೇಕ ವಿಷಯಗಳ ನಿಲಯವಾಗಿ ಹೋಗುತ್ತದೆ. ಆ ದಿನದಿಂದ ಕೇವಲ ಬದುಕುವುದಕ್ಕೆ ಅವರ ಮೆದುಳನ್ನು ಉಪಯೊಗಿಸಿ ಯೋಚಿಸುತ್ತಿರುತ್ತಾರೆ. ವಿವಾಹವಾದಾಗಿನಿಂದ ಅವನು ಹೆಚ್ಚು ಮಾಯೆಯಲ್ಲಿ ಬಿದ್ದಿದ್ದಾನೆಂಬುವ ಮಾತನ್ನು ಅಲ್ಲಲ್ಲಿ ಹೇಳುತ್ತಿರುತ್ತಾರೆ. ಹಾಗೆ ಅವರ ಜೀವನ ಮಾಯೆಯಲ್ಲಿಯೇ ಕಳೆಯದಂತೆ, ಗಂಡ ಅಜ್ಞಾನಿಯಾದರೆ ಹೆಂಡತಿ ಆತನನ್ನು ಹೆಚ್ಚರಿಸಿ ಇದು ಜ್ಞಾನವೆಂದು ಅವನ ತಲೆಗೆ ಜ್ಞಾನವನ್ನು ಸೇರಿಸ ಬೇಕೆನ್ನುವ ಅರ್ಥದಿಂದ ಹೆಂಡತಿ ಕೈಯಿಂದ ಗಂಡನಿಗೆ ಜ್ಞಾನಕ್ಕೆ ಗುರುತಾದ ಧಾನ್ಯವಾದ

ಅಕ್ಕಿಯನ್ನು ಗಂಡನ ತಲೆ ಮೇಲೆ ಹಾಕಿಸುತ್ತಾರೆ. ಹಾಗೇ ಹೆಂಡತಿ ಅಜ್ಞಾನಿ ಆದರೆ ಗಂಡ ಅವಳಿಗೆ ಜ್ಞಾನವನ್ನು ತಿಳಿಸಬೇಕೆನ್ನುವ ಗುರುತಾಗಿ ಗಂಡನಿಂದ ಹೆಂಡತಿಯ ತಲೆ ಮೇಲೆ ಅಕ್ಕಿಯನ್ನು ಹಾಕಿಸುತ್ತಿದ್ದರು. ಇಬ್ಬರ ತಲೆಗಳ ಮೇಲೆ ಅಕ್ಕಿಯನ್ನು ಹಾಕಿಸುವುದರಲ್ಲಿ ಅವರ ತಲೆಗಳು ಜ್ಞಾನ ನಿಲಯಗಳಾಗಿ ಇರಬೇಕೆಂದು, ಅವರು ಜ್ಞಾನವನ್ನು ತಿಳಿದು ಬದುಕಬೇಕೆಂದು ಬಾಹ್ಯಾರ್ಥ. ಮದುವೆಯಾದ ಗಂಡ ಹೆಂಡತಿಗೆ ಜ್ಞಾನ ತಿಳಿಯದಿದ್ದರೆ ಯಾರೋ ಒಬ್ಬ ಗುರುವಿನ ಹತ್ತಿರ ಜ್ಞಾನ ತಿಳಿದು ಇನ್ನೊಬ್ಬರಿಗೆ ತಿಳಿಸಬಹುದು. ಆದರೆ ಈ ಕಾಲದಲ್ಲಿ ಗಂಡ ಜ್ಞಾನಿಯಾದರೆ ಹೆಂಡತಿಗೆ ಸರಿಹೊಗುವುದಿಲ್ಲ. ಪಾಪ ಗಂಡನನ್ನು ತೊಂದರೆ ಪಡಿಸುವರು. ಹಾಗೇ ಹೆಂಡತಿ ಜ್ಞಾನಿಯಾದರೆ ಗಂಡನಿಗೆ ಸರಿಹೊಗುವುದಿಲ್ಲ. ಕೊನೆಗೆ ಇಂತಹ ಹೆಂಡತಿಯೊಂದಿಗೆ ನಾನು ಸಂಸಾರ ಮಾಡುವುದಿಲ್ಲವೆಂದು ಹೇಳುತ್ತಿದ್ದಾನೆ. ಜ್ಞಾನ ಇರುವ ಗಂಡ ಹೆಂಡತಿ ಭೂಮಿಯಮೇಲೆ ಅಪರೂಪವಾಗಿರುವರು.

ವಿವಾಹ ಸಮಯದಲ್ಲಿ (ತಲಂಬರಗಳು) ಅಕ್ಕಿ ಎರೆಯುವುದೆನ್ನುವ ಹೆಸರಲ್ಲಿ ಅಕ್ಕಿಯನ್ನು ಈದಿನಗಳಲ್ಲಿ ಎಷ್ಟೋ ಡಾಕ್ಟರುಗಳು ಇಂಜನೀರ್‌ಗಳು ಇನ್ನೂ ದೊಡ್ಡ ಓದುಗಳನ್ನು ಓದಿದವರು ಸಹ ತಲೆಗಳ ಮೇಲೆ ಹಾಕಿಕೊಳ್ಳುತ್ತಿದ್ದಾರೆ. ಆದರೆ ಏಕೆ ಹಾಕಿಕೊಳ್ಳುತ್ತಿದ್ದೇವೆಂದು ಮಾತ್ರ ಅವರನ್ನು ಅವರು ಪ್ರಶ್ನಿಸಿಕೊಳ್ಳುವುದಿಲ್ಲ, ಅಥವಾ ಇತರರನ್ನಾದರೂ ಕೇಳುವುದಿಲ್ಲ. ನಾಯಿ ಕಾಲೆತ್ತಿ ಮೂತ್ರ ಒಯ್ಯುತ್ತದೆ. ಅದನ್ನು ನೋಡಿದ ಮತ್ತೊಂದು ನಾಯಿ ಹಾಗೇ ಮಾಡುತ್ತದೆ. ನಾವು ಹಾಗೆ ಪ್ರಾಣಿಗಳಲ್ಲ ಅಲ್ಲವೆ! ಒಬ್ಬರು ಮಾಡಿದರೆ ಇತರರು ಮಾಡುವುದಕ್ಕೆ, ಏಕೆ ಮಾಡಿದ್ದಾರೋ ವಿಚಾರಿಸಿ ಅರ್ಥಸಹಿತವಾಗಿ ಭಾವಪೂರಿತವಾಗಿ ಅ ಕೆಲಸವನ್ನು ಮಾಡಿದರೆ ಚೆನ್ನಾಗಿರುತ್ತದೆ. ಒಂದು ತಲೆ ಪರಿಧಿಯಲ್ಲಿ ಸೇರಿಕೊಂಡ ಜೀವಿಯು ಜ್ಞಾನದಿಂದ ಪರಿಧಿ ಇಲ್ಲದ ಆಕಾಶವನ್ನು ಅಂದರೆ ಮೋಕ್ಷವನ್ನು ಸೇರುವನು. ಮೋಕ್ಷವನ್ನು (ದೈವವನ್ನು) ಬಯಲೆಂದು ಶೂನ್ಯವೆಂದು ಬ್ರಹ್ಮವಿದ್ಯೆಯಲ್ಲಿ ಹೇಳುತ್ತಾರೆ. ಆ ದೈವವನ್ನು ಹೊಂದುವಂತೆ ಜ್ಞಾನ ಮಾಡುತ್ತದೆ. ಆದ್ದರಿಂದ ಮದುವೆ ಸಮಯದಲ್ಲಿ ತಲೆ ಮೇಲೆ ಜ್ಞಾನ ಚಿಹ್ನೆಯಾಗಿ ಹಾಕುವ ಅಕ್ಕಿಯನ್ನು ತಲೆ ಅಂಬರಗಳು ಎಂದು ಪೂರ್ವದಲ್ಲಿ ಕರೆಯುತ್ತಿದ್ದರು. ತಲೆಯಿಂದ ಅಂಬರ (ಆಕಾಶ) ಕ್ಕೆ ಸೇರಿಸುವವೆಂಬ ಅರ್ಥದಿಂದ ಹಾಗೆ ಇಟ್ಟಿದ್ದಾರೆ. ಆ ಹೆಸರು ಪೂರ್ವದಲ್ಲಿ ತಲೆ ಅಂಬರಗಳಾದರೆ ಈ ದಿನ ಅಕ್ಷತೆ ಎನ್ನುವ ಹೆಸರಾಗಿ ಹೇಳುತ್ತಿದ್ದೇವೆ. ಮದುವೆ ಸಮಯದಲ್ಲಿ ಅಕ್ಷತೆ ಹಾಕಿಕೊಂಡ ನಿಮ್ಮ ತಲೆಗಳನ್ನು ಜ್ಞಾನವಂತವಾಗಿ ಮಾಡಿಕೊಂಡ ದಿನವೇ ನಿಜವಾದ ತಲಂಬರಗಳನ್ನು ಒಯ್ದುಕೊಂಡಂತೆಂದು ತಿಳಿಸುತ್ತಿದ್ದೇವೆ.

**ಸಂಜೀವಯ್ಯ ವರ್ಮ. ಕಂಭಮ್**

**355. ಶ್ರೀ ಶಂಕರ ಭಗವತ್ಪಾದರು ಅವರು ಬ್ರಹ್ಮ ಸತ್ಯಂ ಜಗನ್ಮಿತ್ಯ ಎಂದಿದ್ದಾರೆ. ಜಗನ್ಮಿತ್ಯ ಎನ್ನುವುದನ್ನು ನೀವು ಸಮರ್ಥಿಸುತ್ತೀರಾ?**

ಉ. ಶಂಕರಾಚಾರ್ಯರು ಏನೆಂದಿದ್ದಾರೋ ಏನೋ ನಮಗೆ ತಿಳಿಯದು ಆದರೆ ನಾವು ಹೇಳುವ ಮಾತೇನೆಂದರೆ! ಬ್ರಹ್ಮ ಸತ್ಯವೇ ಜಗತ್ತು ಸತ್ಯವೇ, ಬ್ರಹ್ಮ (ದೈವ) ಕಾಣಿಸದೆ ಇರುವುದು. ಜಗತ್ತು ಕಾಣಿಸುತ್ತಿದೆ. ಎರಡು ಇರುವವೇ ಆದರೆ ಒಂದು ಇದೆ ಒಂದು ಇಲ್ಲ ಎನ್ನುವುದು ತಪ್ಪು.

**356) ಜೀವೋ ದೇವೋ ಸನಾತನಃ ಎಂದಿದ್ದಾರೆ ನಮ್ಮ ಆರ್ಯರು. ಅಂತವರೇ ಅದ್ವೈತ ವೆಂದು ಎರಡು ಇಲ್ಲವೆಂದು "ಏಕಂ ಸತ್ವಾ" ಎಂದಿದ್ದಾರೆ. ಯಾವುದು ನಿಜ?**

ಉ. ಜೀವೋ ದೇವೋ ಸನಾತನಃ ಎನ್ನುವಮಾತು ನಿಜ. ಏಕೆಂದರೆ ಪ್ರತ್ಯಕ್ಷವಾಗಿ ಜೀವಿಗಳು ನಾವಿದ್ದೇವೆ. ಪರೋಕ್ಷವಾಗಿ ದೇವರೆನ್ನುವವನು ಜೀವಿಗಳನ್ನು ಆಡಿಸುತ್ತಿದ್ದಾನೆ. ಜೀವಿಯು, ದೇವರು, ದೇವ ದೇವರು ಮೂವರಿದ್ದಾರೆ. ಅವರನ್ನೇ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುತ್ತಿದ್ದೇವೆ. ಮೂವ್ವರಿದ್ದಾರೆಂದು ಹೇಳುವುದೇ ತ್ರೈತವೆಂದು ತಿಳಿಯಬೇಕು.

**357) ವೇಮನ ಶತಕವೆಂದು ಹೇಳುತ್ತಾರೆ. ವೇಮನ ಪದ್ಯಗಳು ಮೂರು ಸಾವಿರಕ್ಕು ಮೇಲ್ಪಟ್ಟಿರುವಾಗ ಶತಕ ಎನ್ನುವುದರಲ್ಲಿ ಅರ್ಥವೇನು?**

ಉ. ಮೂರು ಸಾವಿರ ಪದ್ಯಗಳ ಪುಸ್ತಕವನ್ನು "ವೇಮನ ಪದ್ಯಗಳು" ಎನ್ನುವ ಹೆಸರಲ್ಲಿ ಇರುತ್ತದೆ. ವೇಮನ ಪದ್ಯಗಳನ್ನು ನೂರು ಮಾತ್ರ ತೆಗೆದುಕೊಂಡು ಸಣ್ಣ ಪುಸ್ತಕವಾಗಿ ಪ್ರಿಂಟ್ ಮಾಡಿದ ಅದನ್ನು "ವೇಮನ ಶತಕವೆಂದು" ಹೆಸರನ್ನು ಇಟ್ಟಿರುತ್ತಾರೆ.

**ಡಿ. ಭೀಮೇಷ್, ಕಳ್ಯಾಣದುರ್ಗಂ**

**358) ಅಂಡ ಪಿಂಡ ಬ್ರಹ್ಮಾಂಡ ವೆಂದರೆ ಏನು? ಆಧ್ಯಾತ್ಮಿಕವಾಗಿ ಅದರ ಮೂಲಾರ್ಥ ತಿಳಿಸಲು ಪ್ರಾರ್ಥನೆ.**

ಉ. ಅಂಡ ಪಿಂಡ ಬ್ರಹ್ಮಾಂಡವೆನ್ನುವ ವಾಕ್ಯ ಸರ್ವ ಪ್ರಪಂಚಕ್ಕು ಹೇಳಲಾಗಿದೆ. ಅಂದರೆ ಸರ್ವ ಪ್ರಪಂಚದಲ್ಲಿ ಕೂಡಿಕೊಂಡಿರುವ ಎಲ್ಲಾ ಜೀವರಾಶಿಗಳನ್ನು ಸೇರಿಸಿ ಹೇಳುವ ಮಾತೆಂದು ತಿಳಿಯಬೇಕು. ಅಂಡ ಎಂದರೆ ಮೊಟ್ಟೆಯಿಂದ ಹುಟ್ಟಿರುವವು.

ಪಿಂಡ ಎಂದರೆ ಗರ್ಭದಿಂದ ಹುಟ್ಟಿರುವವು. ಬ್ರಹ್ಮಾಂಡವೆಂದರೆ ಭೂಮಿಯಿಂದ ಹುಟ್ಟಿರುವ ಮೊದಲಾದವು ಎಂದು ಅರ್ಥ. ಬ್ರಹ್ಮಾಂಡ ಎನ್ನುವುದರಲ್ಲಿ ವೃಕ್ಷ ಲತಾದಿಗಳಲ್ಲದೆ ಭೂಮಂಡಲದಿಂದ ನಕ್ಷತ್ರಮಂಡಲ ಮೊದಲಾದ ಪ್ರಪಂಚವೆಲ್ಲವನ್ನು ಸೇರಿಸಿ ಹೇಳಿದಹಾಗೆಂದು ತಿಳಿಯಬೇಕು. ಒಟ್ಟು ಸೃಷ್ಠಿ ಎಲ್ಲವನ್ನು ಅಂಡ ಪಿಂಡ ಬ್ರಹ್ಮಾಂಡ ವೆಂದಿದ್ದಾರೆ.

**ಸುಭಾನ್, ಸೋಮವಾರಮುಪೇಟ**

**359) ಸ್ಥೂಲದೇಹ ಕಣ್ಣಿಗೆ ಕಾಣಿಸುತ್ತಲೇ ಇದೆ. ಇನ್ನು ಸೂಕ್ಷ್ಮದೇಹದಲ್ಲಿನ ಭಾಗಗಳು ಕಾಣಿಸುವುದಿಲ್ಲ. ಆದ್ದರಿಂದ ನಮ್ಮ ಶರೀರದಲ್ಲಿ ಅವು ಎಲ್ಲೆಲ್ಲಿರುತ್ತವೋ ತಿಳಿಸಬೇಕು.**

ಉ. ಸ್ಥೂಲದೇಹ ಹತ್ತು ಭಾಗಗಳು. 1. ಕಣ್ಣು, 2. ಮೂಗು, 3. ಕಿವಿ, 4. ನಾಲಿಗೆ, 5. ಚರ್ಮ ಜ್ಞಾನೇಂದ್ರಿಯಗಳು. ಹಾಗೇ ಕರ್ಮೇಂದ್ರಿಯಗಳು 1. ಬಾಯಿ, 2. ಕೈಗಳು, 3. ಕಾಲುಗಳು, 4. ಗುದ, 5. ಗುಹ್ಯ. ಇವು ಹೊರಗೆ ಕಾಣಿಸುತ್ತಿವೆ. ಇನ್ನು ಕಾಣಿಸದ 15 ಭಾಗಗಳಲ್ಲಿ 1. ಮನಸ್ಸು ಸೂರ್ಯ ಚಂದ್ರ ನಾಡಿಗಳ ಮೇಲೆ, 2. ಬುದ್ಧಿ ಗುಣಚಕ್ರದಲ್ಲಿ ಜೀವಾತ್ಮ ಎನ್ನುವ ಖಾಲಿ ಸ್ಥಳದ ಸುತ್ತಲೂ ಇರುವ ಪೊರೆಯಂತೆ, 3. ಚಿತ್ತ ಜೀವಾತ್ಮ ಸುತ್ತಲೂ ಇರುವ ಎರಡನೆ ಪೊರೆಯಾಗಿ, 4. ಅಹಂ ಜೀವಾತ್ಮನ ಸುತ್ತಾ ಇರುವ ಮೂರನೆಯ ಪೊರೆಯಾಗಿ ಇದೆ. ಇನ್ನು ಉಳಿದ ಜೀವಾತ್ಮ, ಬುದ್ಧಿ, ಚಿತ್ತ, ಅಹಂ ಎನ್ನುವ ಮೂರು ಪೊರೆಗಳ ಮಧ್ಯೆ ಇರುವ ಶೂನ್ಯವಾಗಿ ಗುಣಚಕ್ರದಲ್ಲಿ ಇದೆ. ಪಂಚ ವಾಯುಗಳಲ್ಲಿ 1. ಪ್ರಾಣವಾಯು ಮೂಗಿನ ರಂಧ್ರಗಳಿಂದ ಮೊದಲುಗೊಂಡು ಶ್ವಾಸಕೋಶ ಗಳವರೆಗು ವ್ಯಾಪಿಸಿಕೊಂಡಿದೆ, 2. ಉದಾನ ವಾಯು ಬಾಯಿಂದ ಜೀರ್ಣಾಶಯದ ಕೊನೆಯವರೆಗು ವ್ಯಾಪಿಸಿಕೊಂಡಿದೆ, 3. ಅಪಾನ ವಾಯು ಜೀರ್ಣಾ ಶಯದ ಕೊನೆಯ ಭಾಗದಲ್ಲಿ ಪ್ರಾರಂಭವಾಗುವ ಸಣ್ಣ ಕರಳುನಿಂದ ಪ್ರಾರಂಭವಾಗಿ ದೊಡ್ಡ ಕರಳಿನ ಕೊನೆಯವರೆಗೂ ಅಂದರೆ ಗುದಸ್ಥಾನದವರೆಗೂ ವ್ಯಾಪಿಸಿ ಇದೆ, 4. ಸಮಾನ ವಾಯು ಶರೀರವೆಲ್ಲಾ ವ್ಯಾಪಿಸಿಕೊಂಡಿದೆ, 5. ವ್ಯಾನ ವಾಯು ಗುಂಡಿಗೆಯಿಂದ ಹಿಡಿದು ರಕ್ತ ನಾಡಿಗಳೆಲ್ಲಾ ವ್ಯಾಪಿಸಿಕೊಂಡಿದೆ. ಇನ್ನು ಉಳಿದ ಐದು ತನ್ಮಾತ್ರಗಳಲ್ಲಿ 1. ದೃಷ್ಠಿ ಕಣ್ಣಿನ ಹತ್ತಿರ, 2. ಶಬ್ದ ಕಿವಿಹತ್ತಿರ, 3. ಸ್ಪರ್ಶ ಚರ್ಮದ ಹತ್ತಿರ, 4. ರುಚಿ ನಾಲಿಗೆ ಹತ್ತಿರ, 5. ವಾಸನೆ ಮೂಗಿನಹೊಳ್ಳಗಳ ಹತ್ತಿರ ಇವೆ ಎಂದು ತಿಳಿಯಬೇಕು.

**360) ಯೋಗಸಾಧನೆ ಸಮಯದಲ್ಲಿ ಎರಡು ಕೈಗಳ ತೋರು ಬೆರಳು ಹೆಬ್ಬೆರಳಿಗೆ ತಾಕಿಸಿ ನಡು ಬೆರಳು ಉಂಗರದ ಬೆರಳು ಕಿರು ಬೆರಳನ್ನು ಕೆಳಕ್ಕೆ ತೋರಿಸುತ್ತಿರುತ್ತಾರೆ. ಹಾಗೇ ಬೆರಳನ್ನು ಇಡುವುದರಲ್ಲಿ ಏನಾದರೂ ಅರ್ಥ ವಿದೆಯಾ?**

ಉ. ಆ ವಿಧವಾಗಿ ಕೈ ಬೆರಳುಗಳು ಇಡುವುದರಲ್ಲಿ ಪೂರ್ತಿ ಆಧ್ಯಾತ್ಮಿಕ ಅರ್ಥ ಕೂಡಿಕೊಂಡಿದೆ. ಹೆಬ್ಬೆರಳನ್ನು ಆತ್ಮ ಎಂದು, ತೋರು ಬೆರಳನ್ನು ಜೀವಾತ್ಮ ಎಂದು ಯೋಗಿಗಳ ಭಾವ. ಯೋಗವನ್ನು ಮಾಡುವ ಸಮಯದಲ್ಲಿ ಜೀವಾತ್ಮ ಆತ್ಮ ಭಾವದೊಂದಿಗೆ ಸೇರಿ ಹೋಗುತ್ತದೆಂದು ಜೀವಾತ್ಮನಾಗಿ ಸೂಚಿಸುತ್ತಿರುವ ತೋರು ಬೆರಳನ್ನು, ಆತ್ಮನಾಗಿ ಲೆಕ್ಕಿಸುವ ಹೆಬ್ಬೆರಳಿನೊಂದಿಗೆ ಸೇರಿಸಿ ಇಡುತ್ತಾರೆ. ಹಾಗೆ ಸೇರಿಸಿ ಇರುವಾಗ ಹೆಬ್ಬೆರಳಿನ ಕೊನೆಯ ಭಾಗ ಆಕಾಶದ ಕಡೆ ಇರುತ್ತದೆ. ಅದಕ್ಕು ಸಹ ಅರ್ಥವಿದೆ. ಜೀವಾತ್ಮ ಆತ್ಮನೊಂದಿಗೆ ಬೆರೆಯುವುದರಿಂದ ತದನಂತರ ಪ್ರಾಪ್ತಿಸುವುದು ಮೋಕ್ಷ. ಅಂದರೆ ಪರಮಾತ್ಮ ಪ್ರಾಪ್ತಿ. ಪರಮಾತ್ಮ ಎಲ್ಲಾಕಡೆ ವ್ಯಾಪಿಸಿದ ಶೂನ್ಯವಾಗಿ ಇರುವವನಾದ್ದರಿಂದ ಜೀವಾತ್ಮ ಆತ್ಮ ಬೆರೆಯುವುದನ್ನು ತೋರಿಸುವ ಹೆಬ್ಬೆರಳಿನ ಕೊನೆಯ ಭಾಗ ಆಕಾಶದ ಕಡೆ ಇರುತ್ತದೆ. ಇನ್ನು ಉಳಿದ ಮಧ್ಯ ಬೆರಳು ಸ್ಥೂಲ ಶರೀರವೆಂದು, ಅದಕ್ಕಿಂತ ಚಿಕ್ಕದಾದ ಉಂಗರದ ಬೆರಳು ಸೂಕ್ಷ್ಮ ಶರೀರವೆಂದು, ಕಡೆಯದಾದ ಕಿರುಬೆರಳು ಕಾರಣ ಶರೀರವೆಂದು ಭಾವಿಸುತ್ತಾರೆ. ಸ್ಥೂಲ ಶರೀರ ಮೇಲಕ್ಕೆ ಕಾಣಿಸುತ್ತಿದೆ. ಅದರ ಹಿಂದೆ ಸೂಕ್ಷ್ಮ ಸೇರಿಕೊಂಡಿದೆ. ಸೂಕ್ಷ್ಮ ಶರೀರದಲ್ಲಿ ಸಹ ಸೇರಿರುವುದು ಕಾರಣ ಶರೀರ. ಆದ್ದರಿಂದ ದೊಡ್ಡದಾದ ನಡು ಬೆರಳನ್ನು ಸ್ಥೂಲವೆಂದು, ಎರಡನೆಯದಾದ ಉಂಗರದ ಬೆರಳು ಸೂಕ್ಷ್ಮವೆಂದು, ಕಿರುಬೆರಳನ್ನು ಕಾರಣ ಶರೀರವೆಂದು ಗುರ್ತಿಸಿದ್ದಾರೆ. ಹೆಬ್ಬೆರಳಿಗೆ ತೋರು ಬೆರಳು ಸೇರಿಸಿ ಉಳಿದ ಮೂರು ಬೆರಳುಗಳನ್ನು ಚಾಚಿ ಅಂಗೈಯನ್ನು ಪಕ್ಕಕ್ಕೆ ತೋರಿಸುವಹಾಗೆ ಇಟ್ಟು ನೋಡಿರಿ. ಹೆಬ್ಬೆರಳು ತೋರು ಬೆರಳು ಕಾಣಿಸುತ್ತ ಹೆಬ್ಬೆರಳಿನ ಕೊನೆಭಾಗ ಆಕಾಶದ ಕಡೆ ಇರುವಹಾಗೆ ಕಾಣಿಸುತ್ತದೆ. ನಂತರ ನಡು ಬೆರಳು ಕಾಣಿಸುತ್ತದೆ, ಆದರೆ ಅದರ ಹಿಂದಿರುವ ಉಂಗರದ ಬೆರಳು, ಕಿರು ಬೆರಳು ದೃಷ್ಟಿಗೆ ಕಾಣಿಸುವುದಿಲ್ಲ. ಸ್ಥೂಲದ ಹಿಂದೆ ಅಡಗಿರುವುದು ಸೂಕ್ಷ್ಮ, ಕಾರಣವೆಂದು ತಿಳಿಯುವಹಾಗೆ ಕೊನೆಯ ಎರಡು ಬೆರಳುಗಳು ಕಾಣಿಸುವುದಿಲ್ಲ. ಯೋಗಸಾಧನೆ ಸಮಯದಲ್ಲಿ ಅಂಗೈ ಮೇಲಕ್ಕೆ ಕಾಣಿಸುವಹಾಗೆ ಇಡದೆ ಪಕ್ಕಕ್ಕೆ ಕಾಣಿಸುವಹಾಗೇ ಇಡುವುದರಿಂದ ಯೋಗವೊಂದರ ಪೂರ್ತಿ ಭಾವ ಅದರಲ್ಲಿ ಸೇರಿರುತ್ತದೆ. ಮೂರು ಬೆರಳು ಚಾಚಿ ಇಡುವುದರಿಂದ ಅರ್ಥವೇನೆಂಬ ಅನುಮಾನ ಇಲ್ಲಿ ಇನ್ನೂ ಉಳಿದಿದೆ. ಆದಕಾರಣ ಅದರ ವಿಷಯವೇನೆಂದರೆ! ಸ್ಥೂಲ, ಸೂಕ್ಷ್ಮ,

ಕಾರಣ ಶರೀರಗಳಮೇಲೆ ಧ್ಯಾಸವಿಲ್ಲದೆ ಹೋಗಬೇಕೆಂದು, ಆ ಶರೀರಗಳನ್ನು ಜೀವಾತ್ಮನಾದ ತಾನು ಬಿಡಬೇಕೆನ್ನುವ ಉದ್ದೇಶದಿಂದ ಆ ಮೂರು ಬೆರಳುಗಳ ಕೊನೆಗಳು ಕೆಳಗೆ ತೋರಿಸುವಹಾಗೇ ಇಡುತ್ತಿದ್ದಾರೆ. ಆ ಮೂರು ಶರೀರಗಳು ನಾಶವಾದ ನಂತರ ಆತ್ಮನೊಂದಿಗೆ ಸೇರಿದ ಜೀವಾತ್ಮ, ಪರಮಾತ್ಮದಲ್ಲಿ ಐಕ್ಯವಾಗುವಹಾಗೇ ಬಾಹ್ಯಾರ್ಥ ಇರುವುದಕ್ಕೆ ಪೂರ್ವದ ಯೋಗಸಾಧಕರು ಕೈ ಬೆರಳುಗಳನ್ನು ಹಾಗೆ ಇಡುತ್ತಿದ್ದರು.

ಕಾಲಕ್ರಮದಲ್ಲಿ ಅಂಗೈ ಮೇಲಿಡುವುದು ನಡೆದಿದೆ. ಹಾಗಿಡುವುದು ಸರಿಯಾದ ಪದ್ಧತಿ ಅಲ್ಲ. ಅಂಗೈಯನ್ನು ಪಕ್ಕಕ್ಕಿರುವಹಾಗೆ ಇಡುವುದನ್ನು ಸರಿಯಾದ ಪದ್ಧತಿ ಎಂದು ತಿಳಿಯಬೇಕು. ತೋರು ಬೆರಳು ಕೊನೆಯನ್ನು ಹೆಬ್ಬೆರಳಿನ ಕೊನೆಯೊಂದಿಗೆ ಕೆಲವರು ಸೇರಿಸುತ್ತಾರೆ. ಹಾಗೆ ಸೇರಿಸದೆ ತೋರು ಬೆರಳು ಕೊನೆಯನ್ನು ಹೆಬ್ಬೆರಳಿನ ಮೊದಲನೆಯ ಗಣ್ಣಿಗೆ ಹತ್ತಿರ ಸೇರಿಸಬೇಕು. ಹಾಗೆ ಸೇರಿಸಿ ಅಂಗೈಯನ್ನು ಪಕ್ಕಕ್ಕೆ ಇಟ್ಟು ನೋಡಿದರೆ, ತೋರು ಬೆರಳಿಗೆ ಹೆಬ್ಬೆರಳಿಗೆ ಮಧ್ಯದಲ್ಲಿ ದುಂಡಾದ ಖಾಲೀ ಸ್ಥಳ ಕಾಣಿಸುತ್ತದೆ. ತೋರು ಬೆರಳು ಬಗ್ಗಿಸಿ ಹೆಬ್ಬೆರಳೊಂದಿಗೆ ಸೇರಿಸುವುದರಿಂದ, ಜೀವಾತ್ಮ ದಾರಿಯನ್ನು ಬದಲಾಯಿಸಿ ಆತ್ಮನಕಡೆಗೆ ಮರಳಿಸಬೇಕೆಂದು ತಿಳಿಯುತ್ತಿದೆ. ಆ ಎರಡು ಬೆರಳುಗಳ ಮಧ್ಯೆ ಖಾಲಿ ಸ್ಥಳ ಏರ್ಪಡುವುದರಿಂದ ಜೀವಾತ್ಮ ಆತ್ಮ ಸೇರುವುದರಿಂದ ಬರುವ ಫಲಿತ ಜೀವಾತ್ಮ ಜನ್ಮಗಳಿಗೆ ಹೋಗದೆ ಖಾಲೀ ಆಗುವನೆಂದು ತಿಳಿಯುತ್ತಿದೆ.

**ಅನೂರಾಧ, ಮದ್ರಾಸ್**

**361) ಮನುಷ್ಯ ಜನ್ಮದಲ್ಲಿ ಮೋಕ್ಷವನ್ನು ಸಾಧಿಸಿದರೇ ಮತ್ತೇ ಮಾನವ ಜನ್ಮ ಬರುತ್ತದೆಂದಿದ್ದಾರೆ ನಿಜವೇನಾ?**

**ಉ.** ಮೋಕ್ಷವನ್ನು ಸಾಧಿಸಿದವರಿಗೆ ಇನ್ನು ಜನ್ಮ ಬಾರದೆ ಪರಮಾತ್ಮನೊಳಗೆ ಸೇರಿಹೋಗುತ್ತಾನೆ. ಹಾಗಲ್ಲದೆ ಮನುಷ್ಯ ಜನ್ಮದಲ್ಲಿ ಮೋಕ್ಷಕ್ಕೊಸ್ಕರ ಪ್ರಯತ್ನವನ್ನು ಮಾಡುವವನು ಸತ್ತುಹೊದರೆ, ಅವನು ಪೂರ್ತಿ ಪರಿಪಕ್ವನಾಗದೆ ಮೋಕ್ಷ ಹೊಂದದಿದ್ದರೆ, ಅಂತವನಿಗೆ ಪುನಃ ಮನುಷ್ಯ ಜನ್ಮವೇ ಬರುತ್ತದೆಂದು ಭಗವದ್ಗೀತೆ ತಿಳಿಸುತ್ತಿದೆ. ಮೋಕ್ಷವೆಂದರೆ ಬಿಡುಗಡೆಯೆಂದು ಅರ್ಥ. ಯಾವುದರಿಂದ ಬಿಡುಗಡೆ ಎಂದರೆ ಜನ್ಮಗಳಲ್ಲಿ ದೇಹಗಳೆನ್ನುವ ಕಾರಾಗೃಹದೊಳಗೆ ಬಂಧಿಸಲ್ಪಟ್ಟು ಕಷ್ಟಗಳನ್ನು ಅನುಭವಿಸುವ ಜೀವಾತ್ಮ ಇನ್ನು ಯಾವ ದೇಹವೆನ್ನುವ ಕಾರಾಗಾರವನ್ನು ಸೇರದೆ ಬಿಡುಗಡೆ ಆಗುವುದೇ ಮೋಕ್ಷ. ದೇಹವೆನ್ನುವ ಪರಿಧಿಯಲ್ಲಿಲ್ಲದೆ ಪರಿಧಿ ಇಲ್ಲದವನಾಗಿ ಹೋಗುವುದೇ ಮೋಕ್ಷ.

**ಕಡಿಯಾಲ ಶ್ರೀನಿವಾಸುಲು, ಡೆನಕಲ್ ಕ್ಯಾಂಪು**

**362) ಒಬ್ಬ ಜ್ಯೋತಿಷ್ಯನು ಒಬ್ಬ ರಾಜಕೀಯದವನ ಬಗ್ಗೆ ಬರೆಯುತ್ತಾ ಆತನು ಅತ್ಯಧಿಕ ಮೆಜಾರಿಟೀ ಯೊಂದಿಗೆ ಪ್ರಭುತ್ವವನ್ನು ಸ್ಥಾಪಿಸಿ ಬಹಳ ಕಾಲ ಬುದ್ದಿವಂತಿಕೆಯಿಂದ ರಾಜ್ಯವನ್ನು ಆಳುತ್ತಾನೆಂದಿದ್ದನು. ಆದರೆ ಆ ರಾಜಕೀಯದವನು ಮರುದಿನವೇ ಸತ್ತುಹೋಗಿದ್ದಾನೆ. ಆಗ ಜ್ಯೋತಿಷ್ಯ ಪೂರ್ತಿ ತಪ್ಪಾಗಿ ನಮಗೆ ತಿಳಿಯುತ್ತಿದೆ. ನೀವೇನನ್ನುತ್ತೀರ?**

ಉ. ಹೇಳಿರುವುದು ಒಂದು ನಡೆದಿರುವುದು ಇನ್ನೊಂದು ಆದಾಗ ಆ ಜ್ಯೋತಿಷ್ಯವನ್ನು ತಪ್ಪೆಂದೇ ಹೇಳಬಹುದು. ಜ್ಯೋತಿಷ್ಯ ಆರು ಶಾಸ್ತ್ರಗಳಲ್ಲಿ ಒಂದಾಗಿದೆ ಆದ್ದರಿಂದ ಜ್ಯೋತಿಷ್ಯ ಶಾಸ್ತ್ರ ತಪ್ಪಲ್ಲ ಆದರೆ, ಆದ್ದರಿಂದ ಫಲಿತಗಳನ್ನು ಗ್ರಹಿಸುವುದರಲ್ಲಿ ಲೋಪ ಇರುವುದರಿಂದ ನಡೆಯುವ ಸಂಘಟನೆಗಳು ಭಿನ್ನವಾಗಿ ಕಾಣಿಸುತ್ತಿವೆ. ವಾಸುದೇವರಾವು, ಧವಳೇಶ್ವರಂನಿಂದ ಬರೆದ ವಿಷಯ ಈ ತಿಂಗಳು ಆಂಧ್ರಜ್ಯೋತಿಯಲ್ಲಿ "ಜನ ವಾಕ್ಯ" ಎನ್ನುವ ಶೀರ್ಷಿಕೆ ಯಲ್ಲಿ ಪ್ರಚುರಿಸಿರುವುದು ಹೀಗಿದೆ.

## ಹೊಸ ಪ್ರಧಾನಿ ರಾಜೀವ್ ಗಾಂಧಿ

(21–05–1991 ಈನಾಡು)

"ಈ ತಿಂಗಳು 17ನೇ ತಾರೀಖಿನಿಂದ ವಕ್ರಗತಿ ಹೊಂದಿದ ಶನಿಯೊಂದಿಗೆ ಕುಜನ (ಕರ್ಕಾಟಕ) ಸಮಸಪ್ತಕ ಸ್ಥಿತಿಯಿಂದ, ಮತ್ತು ಜುಲೈ ಮಾಸದಲ್ಲಿ "ಕುಜ"ನ ಸಿಂಹರಾಶಿ ಪ್ರವೇಶದಲ್ಲಿ ಏರ್ಪಡುವ ಷಷ್ಟಾಷ್ಟಕ ಸ್ಥಿತಿ (ಶನಿ) ಯಿಂದ ಧನಸ್ಸು ರಾಹುನೊಂದಿಗೆ ಶನಿ ದ್ವಿದಾಶಸ್ಥಿತಿ, ಮಿಥುನ ಕೇತುವುನಿಂದ ಕರ್ಕಾಟಕ ದೃಷ್ಟಿ ಯಿಂದ 1991 ಪಾರ್ಲಮೆಂಟ್ ಮಧ್ಯಂತರ ಚುನಾವಣೆಯಲ್ಲಿ ಶ್ರೀ ರಾಜೀವ್ ಗಾಂಧಿ ವಿಜಯವನ್ನು ಸಾಧಿಸಿ ಪ್ರಧಾನಿ ಪದವಿಯನ್ನು ಅಲಂಕರಿಸುತ್ತಾರೆ. ಶ್ರೀ ರಾಜೀವ್ ಗಾಂಧಿಗೆ ಜನ್ಮ ಕಾಲ (ಜನ್ಮ ಲಗ್ನಕ್ಕೆ ಏಕಾದಶ ಸ್ಥಾನದಲ್ಲಿ ರವಿ, ಚಂದ್ರ, ಶುಕ್ರ, ಗುರು, ಬುಧ ಗ್ರಹಗಳಿವೆ.) ವಿಶೇಷ ಯೋಗ. ಏಕಾದಶ ಸ್ಥಾನ ಸಿಂಹರಾಶಿ ಆಗಿರುವುದರಿಂದ ಬಹಳ ವಿಶೇಷ, ಪ್ರಸ್ತುತ ಶ್ರೀ ರಾಜೀವ್ ಗಾಂಧೀಗೆ ಗುರುವಿನಲ್ಲಿ (ಕರ್ಕಾಟಕದಲ್ಲಿ) ಮತ್ತೆ ಆಗಸ್ಟ್‌ನಿಂದ ಸಿಂಹರಾಶಿಯಲ್ಲಿ ಚೆನ್ನಾಗಿದೆ. ಶನಿ ಸಹ ಆರಲ್ಲಿ (ಮಕರದಲ್ಲಿ) 1990 ಡಿಸೆಂಬರ್ 14ರಿಂದ ಚೆನ್ನಾಗಿದ್ದಾನೆ ದೇಶ ಪರಿಸ್ಥಿತಿಗಳಿಂದ ರಾಜೀವ್‌ಗೆ ಮುಳ್ಳಿನ ಕಿರೀಟವನ್ನು ಧರಿಸಿದಂತಾಗುತ್ತದೆ. 1992 ರಲ್ಲಿ ಶನಿ ಪ್ರಭಾವದಿಂದ ನಮ್ಮ ದೇಶದ ಸರಹದ್ದಿನಲ್ಲಿ (ವಾಯುವ್ಯ – ಉತ್ತರ ಪ್ರಾಂತದಲ್ಲಿ) ಯುದ್ಧ ಪ್ರಮಾದ ಸಂಭವಿಸಿದಾಗ ಶ್ರೀ ರಾಜೀವ್ ಗಾಂಧಿ ಅತೀ ಚಾಕಚಕ್ಯತೆಯಿಂದ ವ್ಯವಹರಿಸುತ್ತಾರೆ." ಎಂದು ಇದೆ.

ಆ ವಿಷಯ ತಪ್ಪೆಂದು ನಾವು ನೋಡಿದ ಕೂಡಲೇ ತಿಳಿದುಕೊಂಡೆವು. ಹಾಗೆ ಆ ವಿಷಯವನ್ನು ಕೂಡಲೇ ತಪ್ಪೆಂದುಕೊಳ್ಳುವುದಕ್ಕೆ ಕಾರಣವೇನೆಂದರೆ! ಆತನು ಬರೆದಿರುವುದರಲ್ಲಿ ಬಹಳ ಲೋಪಗಳು ಕಾಣಿಸಿವೆ. ಅವು ಏನೆಂದರೆ 1. ಗುಪ್ತ ಪಂಚಾಂಗದ ಪ್ರಕಾರ ಈ ಮೇ ತಿಂಗಳು 15ನೇ ತಾರೀಖು ಪಾಡ್ಯ, ಬುಧವಾರ, ಕುಜಗ್ರಹ ಕಟಕರಾಶಿಯಲ್ಲಿ ಪ್ರವೇಶಿಸುತ್ತಿರುವಾಗ, ಆತನು ಬರೆದಿರುವುದರಲ್ಲಿ 17ನೇ ತಾರೀಖು ಕಟಕದಲ್ಲಿ ಕುಜಗ್ರಹ ಪ್ರವೇಶವೆಂದು ಇದೆ, 2. ಜನ್ಮ ಲಗ್ನಕ್ಕೆ ಏಕಾದಶ ಸ್ಥಾನದಲ್ಲಿ ರವಿ ಚಂದ್ರ ಶುಕ್ರ ಗುರು ಬುಧಗ್ರಹಗಳಿವೆ ಎನ್ನುವುದು ಸಹ ತಪ್ಪು. ಏಕೆಂದರೆ 1983 ನೇ ವರ್ಷ ಒಂದು ಪತ್ರಿಕೆಯಲ್ಲಿ ಯನ್,ಟಿ, ರಾಮಾರಾವು ಅವರ ಜಾತಕ ಮತ್ತು ರಾಜೀವ್ ಗಾಂಧಿ ಅವರ ಜಾತಕವನ್ನು ಪ್ರಕಟಿಸಿರುವುದು ನಡೆದಿದೆ. ಇಬ್ಬರದು ತುಲಾರಾಶಿ ಅದರಲ್ಲಿ ರಾಜೀವ್ ಅವರ ಜಾತಕಚಕ್ರ ಕೆಳಗಿನ ವಿಧವಾಗಿದೆ.

**ರಾಜೀವ್ ಗಾಂಧಿ ಅವರ ಜನನ ಕುಂಡಲಿ**

| | | | |
|---|---|---|---|
| | | | |
| ಶ | ತುಲಾ ಲಗ್ನ | | ಕೇ |
| ರಾ | | | |
| ರ ಬು ಚ ಶು ಗು | ಕು | ಲಗ್ನ | |

20–08–1944 ಬೆಳಿಗ್ಗೆ ಗಂ. 9–50 ನಿ.ಗಳಿಗೆ ಶುದ್ಧ ವಿದಿಯ ಭಾನುವಾರ ಪುಬ್ಬ ನಕ್ಷತ್ರದಲ್ಲಿ ತುಲಾರಾಶಿಯಲ್ಲಿ ಜನನ. ಜನನ ಕಾಲದಲ್ಲಿ ಶುಕ್ರ ದಶಾ ಶೇಷ. 11 ವರ್ಷಗಳ 4 ತಿಂಗಳ 10 ದಿನಗಳು ರಾಜೀವ್ ಅವರ ಜಾತಕ ಚಕ್ರದಲ್ಲಿ ಮೂರನೆಯ ಸ್ಥಾನದಲ್ಲಿ ಪಂಚ ಗ್ರಹಕೂಟಮಿ ಇರುವಾಗ, ಹನ್ನೊಂದನೇ ಸ್ಥಾನದಲ್ಲಿ ಎಂದು ಹೇಳುವುದು ಪೂರ್ತಿ ತಪ್ಪು. ಸಿಂಹರಾಶಿ ಹನ್ನೊಂದನೇ ಸ್ಥಾನವೆಂದು ಹೇಳುವುದು ತಪ್ಪು, 3. ಆತನ ಮಾತಿನ ಪ್ರಕಾರವೇ ಸಿಂಹರಾಶಿ ಹನ್ನೊಂದನೇ ಸ್ಥಾನವಾದಾಗ ಜನ್ಮಲಗ್ನ ತುಲಾಲಗ್ನವೆಂದೇ ತಿಳಿಯುತ್ತಿದೆ. ತುಲಾಲಗ್ನದಿಂದ ಮಕರಲಗ್ನ ನಾಲ್ಕನೆಯ ಸ್ಥಾನವಾದಾಗ ಆರನೇ ಸ್ಥಾನವಾದ ಮಕರದಲ್ಲಿ ಶನಿ 1990 ಡಿಶಂಬರ್ 14 ನೇ ತಾರೀಖಿನಿಂದ ಚೆನ್ನಾಗಿದ್ದಾನೆಂದು ಬರೆಯುವುದು ತಪ್ಪು. ಶನಿ ಮಕರದಲ್ಲಿ 1990 ಡಿಶಂಬರ್ 14 ನೇ ತಾರೀಖಿನಂದು ಪ್ರವೇಶಿಸಿರುವುದು ವಾಸ್ತವವೆ ಆದರೂ ಮಕರರಾಶಿ ಜನ್ಮಲಗ್ನವಾದ ತುಲಾರಾಶಿಗೆ ನಾಲ್ಕನೇ ಸ್ಥಾನವೇ ಆಗಲಿ ಆರನೇ ಸ್ಥಾನವಲ್ಲ. ಇಷ್ಟು

ತಪ್ಪುಗಳಿರುವ ವಿಷಯವಾದ್ದರಿಂದ ಅದು ಸರಿಯಾದ ಜ್ಯೋತಿಷ್ಯ ಅಲ್ಲ ಅದರಿಂದಲೇ ಅದರಲ್ಲಿ ಬರೆದಿರುವುದಕ್ಕೆ ಭಿನ್ನವಾಗಿ ನಡೆದಿದೆ.

ರಾಜೀವ್ ಗಾಂಧಿ ಅವರು 1991 ನೇ ವರ್ಷ ಮೇ ತಿಂಗಳು 21 ನೇ ತಾರೀಖು ಸತ್ತುಹೋದಾಗ ಇರುವ ಗ್ರಹಸ್ಥಿತಿ ಕುಂಡಲಿ ಕೆಳಗಿನ ವಿಧವಾಗಿ ಇದೆ.

**1991 ಮೇ 21ನೇ ತಾರೀಖು ರಾಜೀವ್ ಗಾಂಧಿ ಅವರಿಗೆ ಇದ್ದ ಗ್ರಹಚಾರ.**

| | | | |
|---|---|---|---|
| | | | |
| | ತುಲಾ ಲಗ್ನ | | ಕು ಗುರ |
| ಶ | | | |
| ರಾ | | ಲಗ್ನ | |

ರಾಜೀವ್ ಗಾಂಧಿ ಅವರ ಜನ್ಮ ಲಗ್ನದಲ್ಲಿ ಆಯು ಸ್ಥಾನವಾದ ವೃಷಭ ರಾಶಿಯನ್ನು ಕುಜನು ನೋಡುವು ದರಿಂದ, ರಾಜೀವ್ ಮರಣ ಕುಜಗ್ರಹ ಅಧೀನದಲ್ಲಿ ಅವುಗಳಿಂದಲೇ ನಡೆಯುತ್ತ ದೆಂದು, ಅವುಗಳಿಂದಲೇ ಆಯುಸ್ಸು ಹರಿಸುವು ದೆಂದು ತಿಳಿಯುತ್ತದೆ. ಕುಜ ಗ್ರಹ ಅಧೀನದಲ್ಲಿ ಪೊಲೀಸರು, ಮಿಲಿಟರಿ, ತುಪಾಕಿಗಳು, ಬಾಂಬುಗಳು, ನಾಯಿಗಳು, ಹುಲಿಗಳು, ಎತ್ತುಗಳು, ಮೊದಲಾದವು ಇವೆ ಆದ್ದರಿಂದ ಅವುಗಳಿಂದಲೇ ಅಪಾಯ ಏರ್ಪಡಬಹುದೆಂದು ಹೇಳಬಹುದು ಆದರೆ ಇಂತಹದರಿಂದಲೇ ಎಂದು ನಿರ್ಧಿಷ್ಟವಾಗಿ ಹೇಳಲಾರೆವು.

ಮೇ ತಿಂಗಳು 21 ನೇ ತಾರೀಖು ನಡೆದ ಸಂಘಟನೆಯನ್ನು ಅನುಸರಿಸಿ ಆ ದಿನ ಗ್ರಹಸ್ಥಿತಿಯನ್ನು ಅನುಸರಿಸಿ ನೋಡಿದರೆ ಮಕರದಲ್ಲಿ ಶನಿ, ಕಟಕದಲ್ಲಿ ಗುರುವು ಎದುರೆದುರಾಗಿ ಇರುವುದರಿಂದ 15ನೇ ತಾರೀಖಿನಿಂದ ಗುರುವಿನೊಂದಿಗೆ ಕುಜನು ಸೇರುವುದರಿಂದ 15ನೇ ತಾರೀಖಿನಿಂದ ರಾಜೀವ್ ಹತ್ಯೆಗೆ ಪ್ರಯತ್ನ ನಡೆಯುತ್ತಿದೆ ಎಂದು ತಿಳಿಯುತ್ತಿದೆ. ಕುಜ ಗುರುಗಳು ಒಂದೇ ಸ್ಥಾನದಲ್ಲಿ ಸೇರುವುದರಿಂದ ಮತ್ತೊಬ್ಬರ ಪ್ರೋದ್ಬಲದಿಂದ ಸಾಯಿಸಿರುವುದು ನಡೆದಿದೆ ಎಂದು ತಿಳಿಯುತ್ತಿದೆ. 1990 ಜುಲೈ 20ನೇ ತಾರೀಖಿನಿಂದ ರಾಜೀವ್ ಹತ್ಯದ ಬಗ್ಗೆ ಯೋಚನೆ ಬಂದರೂ ಡಿಸೆಂಬರ್ 14ನೇ ತಾರೀಖಿನಿಂದ ರಾಜೀವ್‌ನನ್ನು ಹತ್ಯೆ ಮಾಡುವುದಕ್ಕೆ ತಕ್ಕ ವ್ಯಕ್ತಿಯನ್ನು ಹುಡುಕುವುದು ನಡೆದಿದೆ. ಆ ಹಂತಕ ವ್ಯಕ್ತಿ ಮೇ ತಿಂಗಳು 15ನೇ ತಾರೀಖು ಲಭಿಸಿದಾಗ ಆಗಿನಿಂದ ಪಥಕವನ್ನು ಹಾಕಿ 21ನೇ ತಾರೀಖಿಗೆ ಹತ್ಯೆ ಮಾಡುವುದು ನಡೆದಿದೆ. ಕುಜ ಗುರುವು

ಕಟಕ ರಾಶಿಯಲ್ಲಿರುವುದರಿಂದ ರಾಜಕೀಯ ಉಪನ್ಯಾಸ ಸ್ಥಳವೇ ಹತ್ಯೆ ಸ್ಥಳವಾಗಿದೆ. ಕುಜನು ಕಟಕದಿಂದ ಶರೀರ ಸ್ಥಾನವಾದ ತುಲಾವನ್ನು ನೋಡುವುದರಿಂದ ಶರೀರವನ್ನು ವಿಚ್ಛಿನ್ನ ಮಾಡಿದ್ದಾನೆ. ಅಷ್ಟೇ ಅಲ್ಲದೆ ಜನ್ಮಲಗ್ನದಲ್ಲಿ ಮುಖವರ್ಚಸ್ಸಿಗೆ ಸಂಬಂಧಿಸಿದ 2ನೇ ಸ್ಥಾನದಲ್ಲಿ ಕುಜನಿರುವುದರಿಂದ ಶರೀರವನ್ನು ಸಾಯಿಸಿದಾಗ ಮುಖವನ್ನು ಛಿದ್ರವಾಗುವಂತೆ ಮಾಡಿದ್ದಾನೆ. 21ನೇ ತಾರೀಖು ರಾತ್ರಿ 9–25 ನಿಮಿಷಗಳಿಂದ 11–37 ನಿಮಿಷಗಳ ವರೆಗು ಕಟಕರಾಶಿ ಮೇಲೆ ಸೂರ್ಯನಿರುವುದರಿಂದ ಕುಜ ಗುರುಗಳಿಗೆ ಮತ್ತಷ್ಟು ಅನುಕೂಲವಾಗಿದೆ. ಆದ್ದರಿಂದ ಆ ದಿನ ರಾತ್ರಿ 9–25 ನಿಮಿಷಗಳಿಂದ ಹಂತಕರು ಸರ್ವ ಸಿದ್ಧವಾಗಿ ಕಾದು ಇರುವುದು ನಡೆದಿದೆ ಎಂದು ತಿಳಿಯುತ್ತಿದೆ. 9–25ಕ್ಕೆ ಮುಂಚೆಯಾಗಲಿ, 11–37ರ ನಂತರ ಆಗಲಿ ಸಂಘಟನೆ ನಡೆದಿದ್ದರೆ ರಾಜೀವ್ ಪ್ರಾಣಗಳಿಂದ ಹೊರಬೀಳುವ ಅವಕಾಶವಿರುತ್ತಿತ್ತೆಂದು ತಿಳಿಯುತ್ತಿದೆ. ಇಷ್ಟು ವಿಷಯಗಳನ್ನನುಸರಿಸಿ ನೋಡಿದರೆ ಜ್ಯೋತಿಷ್ಯ ತಪ್ಪಲ್ಲ ಆದರೆ ಅದನ್ನು ತಿಳಿದುಕೊಳ್ಳುವುದರಲ್ಲಿ ತಪ್ಪು ಇರಬಹುದೆಂದು ತಿಳಿಯಬೇಕು.

**363) ರಾಜೀವ್‌ಗಾಂಧೀ ಮರಣ ಹೊಂದಿದ್ದಾನೆ ಅಲ್ಲವೆ! ಆತನು ಪೂರ್ತಿಯಾಗಿ ಮರಣಿಸಿದಹಾಗೇನಾ ಅಥವಾ ಭೌತಿಕವಾಗಿ ಸತ್ತುಹೋಗಿ ಮಾನಸಿಕವಾಗಿ ಬದುಕಿದ್ದಾನಾ?**

ಉ. ರಾಜೀವ್ ಗಾಂಧೀಯವರು ಪೂರ್ತಿಯಾಗಿ ಸತ್ತುಹೋಗಿಲ್ಲವೆಂದು, ಭೌತಿಕವಾಗಿ ನಮಗೆ ಕಾಣಿಸದೆ ಇದ್ದರು ಮಾನಸಿಕವಾಗಿ ಆತನು ಜೀವಿಸಿ ಇದ್ದಾನೆಂದು ಹೇಳಬಹುದು. ಸತ್ತುಹೋದಾಗ ಯೋಚಿಸುವುದಕ್ಕೆ ಅವಕಾಶವಿಲ್ಲದ ಸಾವುಗಳೆಲ್ಲವು ಪೂರ್ತಿ ಮರಣ ಅಲ್ಲವೆಂದು, ಅವರಿಗೆ ಭೂಮಿಮೇಲೆ ಆಯುಸ್ಸು ಇನ್ನೂ ಇದೆ ಯೆಂದು ಆಧ್ಯಾತ್ಮಿಕರೀತಿ ಹೇಳಬಹುದು. ಜ್ಯೋತಿಷ್ಯರೀತಿ ಜನನ ಕುಂಡಲಿಯಲ್ಲಿ ಆ ಸ್ಥಾನಾಧಿಪತಿ ಬುಧ ಗ್ರಹವಾದ್ದರಿಂದ ಬುಧ ಗ್ರಹ ಅನುಕೂಲತೆ ಇರುವವರಿಗೆ ಮಿಥುನ ಕನ್ಯಾ ಲಗ್ನಗಳು 12ನೇ ಸ್ಥಾನವಾಗಿದ್ದರೆ, ಅಂತಹವರು ಮರಣಿಸಿದಾಗ ಪೂರ್ತಿ ಮರಣಿಸದೆ ಭೌತಿಕವಾಗಿ ಮಾತ್ರ ಹೋಗಿ ಮಾನಸಿಕವಾಗಿ ಉಳಿದಿರುತ್ತಾರೆಂದು ಹೇಳಬಹುದು. 21ನೇ ತಾರೀಖು ಕುಜಗ್ರಹ ಕಟಕದಿಂದ ನಾಲ್ಕನೆಯ ರಾಶಿಯಾದ ತುಲವನ್ನು ನೋಡುವುದರಿಂದ ತುಲಾರಾಶಿ ಶರೀರ ಸ್ಥಾನವಾಗಿರುವುದರಿಂದ ರಾಜೀವ್ ಶರೀರವಾಗಿ ಮಾತ್ರವೇ ಸತ್ತುಹೊಗಿದ್ದಾನೆ. ಜನನದಲ್ಲಿ ಶನಿ ಮೇಷ ರಾಶಿಯನ್ನು ನೋಡುವುದರಿಂದ ಸಹ ಮಾನಸಿಕವಾಗಿ ಬದುಕಿದ್ದಾನೆಂದು ಹೇಳಬಹುದು.

**ಗಂಗಾಧರ, ಚೆಟ್ಟುಗುಟ್ಟಪಲ್ಲಿ**

**364) ನಾದ ಬ್ರಹ್ಮವೆಂದು, ನಾದವನ್ನು ಇಂಪಾಗಿ ಕೇಳುವುದರಿಂದ ಬ್ರಹ್ಮ ತಿಳಿಯುತ್ತಾನೆಂದು ಅನ್ನುತ್ತಾರೆ ನಿಜವೇನಾ?**

ಉ. ನಾದ ಎಂದರೆ ಶಬ್ದ ಅಲ್ಲವೆ! ಅದು ಪಂಚ ಭೂತಗಳಲ್ಲಿನ ನೀರು ಆಕಾಶದಿಂದ ಹುಟ್ಟಿದೆ. ಪ್ರಕೃತಿ ಜನಿತವಾದದ್ದೆಂದು ತಿಳಿಯುತ್ತಿದೆ. ಆದ್ದರಿಂದ ನಾದ ಪ್ರಕೃತಿಯೇ ಆಗಲಿ ಪರಮಾತ್ಮ ಅಲ್ಲ ದೊಡ್ಡದಾಗಿ ಹೆಸರುವಾಸಿಯಾದ ಗುರುಗಳು ಸಹ ನಾದ ಬ್ರಹ್ಮ ಎನ್ನುವುದನ್ನು ನಾವು ಸಹ ಕೇಳಿದ್ದೇವೆ. ಅವರ ಮಾತಿನ ಪ್ರಕಾರ ನಾದವು ಬ್ರಹ್ಮವಾದಾಗ ದೃಶ್ಯವೂ ಸಹ ಬ್ರಹ್ಮವೇ ಆಗುತ್ತದೆ. ಅದನ್ನು ದೃಶ್ಯ ಬ್ರಹ್ಮ ಎನ್ನಬಹುದು. ನಾದದೊಂದಿಗೆ ಕೂಡಿಕೊಂಡ ಸಂಗೀತವನ್ನು ಕೇಳುವುದರಲ್ಲಿ ಮನಸ್ಸು ನಿಂತು ಬ್ರಹ್ಮವನ್ನು ಸೇರಬಹುದೆಂದಾಗ, ದೃಶ್ಯದಿಂದ ಕೂಡಿದ ಟೀವಿ ಚಿತ್ರಗಳು ನೋಡುತ್ತಾ ಮನಸ್ಸನ್ನು ಲಗ್ನಮಾಡಿ ಬ್ರಹ್ಮವನ್ನು ಹೊಂದಬಹುದೆನ್ನುವುದರಲ್ಲಿ ತಪ್ಪಿಲ್ಲ ಅಲ್ಲವೆ! ಅಂತಹದರಲ್ಲಿ ಈಗಿನ ಕಾಲದಲ್ಲಿ ನಾದವನ್ನು ಕೇಳಿಸುವ ರೇಡಿಯೊ ಶಬ್ದವನ್ನು, ಕಾಣಿಸುವಂತೆ ಮಾಡುವ ಟೀ.ವಿ ಗಳು ಮೋಕ್ಷವನ್ನು ಸೇರಿಸುವ ಪರಿಕರಗಳಾಗಿ, ಪೂಜಿಸಲಾದ ವಸ್ತುಗಳಾಗಿ ಹೇಳಬಹುದು. ವಿಸ್ಸಣ್ಣ ಹೇಳಿರುವುದೇ ವೇದವೆನ್ನುವಹಾಗೆ ಈದಿನ ಕಾಷಾಯ ವಸ್ತ್ರಗಳು ಹಾಕಿಕೊಂಡ ಪ್ರತಿಯೊಬ್ಬರನ್ನು ದೊಡ್ಡ ಗುರುಗಳಾಗಿ ಪ್ರಜೆಗಳು ನಂಬುತ್ತಿರುವಾಗ, ಅವರು ನಾದ ಬ್ರಹ್ಮ ಅಂದರೂ, ದೃಶ್ಯ ಬ್ರಹ್ಮ ಅಂದರೂ ನಂಬುವವರು ನಾವಿದ್ದಾಗ ಅವರದೇನು ತಪ್ಪಿದೆ. ನೀನು ನಿಜವನ್ನು ಕೇಳಿದ್ದೀಯ ಆದುದರಿಂದ ನಾದ ಬ್ರಹ್ಮ ಎನ್ನುವುದು ಶುದ್ಧ ತಪ್ಪು.

**365) ನಾದ ಬ್ರಹ್ಮಯೆಂದು ನಾದದಲ್ಲಿ ದೊಡ್ಡ ಶಕ್ತಿ ಇದೆಯೆಂದು, ರಾಗಗಳಿಂದ ರೋಗಗಳು ಹೋಗುತ್ತವೆಂದು ಹೇಳುತ್ತಾರೆ ಅದೂ ನಿಜವಾ??**

ಉ. ನಾದ ಪ್ರಕೃತಿಯೆಂದೂ ದೈವವಲ್ಲವೆಂದು ಮೇಲಿನ ಪ್ರಶ್ನೆಗೆ ಸಮಾಧಾನದಲ್ಲಿ ತಿಳಿಸಿದ್ದೇವೆ. ನಾದಕ್ಕೆ ದೈವಶಕ್ತಿ ಇಲ್ಲ. ನಾದ ಕೇಳುವಾಗ ಮನೋರಂಜಕವಾಗಿ ಇದ್ದು ಸ್ವಲ್ಪ ಬಾಧೆಗಳನ್ನು ಮರೆಸಬಹುದು. ಆದರೆ ನಾದದಿಂದ ರೋಗಗಳು ಪೂರ್ತಿ ನಯವಾಗುತ್ತವೆನ್ನುವುದು ತಪ್ಪು. ನಾದ ಕೇಳುವಾಗ ಮನಸ್ಸು ನಾದದ ಮೇಲೆ ಲಯವಾಗಿ ಪ್ರಸ್ತುತ ರೋಗದ ಬಾಧೆಯಾಗಲಿ, ಮನೋ ಬಾಧೆಯನ್ನಾಗಲಿ ಮರೆತುಹೋಗಬಹುದು. ಅಷ್ಟುಮಾತ್ರಕ್ಕೆ ರಾಗಗಳಿಂದ ರೋಗಗಳು ಹೋಗುತ್ತವೆನ್ನುವುದು ಸಮಂಜಸವಲ್ಲ.

ರಾಗಗಳಿಂದ ರೋಗಗಳು ಹೋಗುವುದಿಲ್ಲ ಆದರೆ, ರೋಗಗಳಿಂದ ರಾಗಗಳು ಬರುತ್ತವೆಂದು ತಿಳಿದುಹೋಗಿದೆ. ರಾಗ ಎಂದರೆ ಲಯಬದ್ಧವಾದದ್ದು. ಒಂದೊಂದು ಲಯಕ್ಕೆ ಒಂದೊಂದು ರಾಗವೆಂದು ಹೆಸರು ಬಂದಿದೆ. ಅಂತಹ ರಾಗಗಳು ಪೂರ್ವದಲ್ಲಿ ಹೇಗೆ ಹುಟ್ಟಿವೆ ಎಂದು ಯೋಚಿಸಿದರೆ, ಒಬ್ಬ ಮನುಷ್ಯ ಬಾಧೆಯಲ್ಲಿದ್ದಾಗ ಆತನಿಂದ ಒಂದು ಲಯಬದ್ಧವಾದ ಶಬ್ದ ಹುಟ್ಟಿಬಂದಿದೆ. ಅವೇ ರಾಗಗಳಾಗಿ ಹೆಸರು ಹೊಂದಿವೆ. ಉದಾ:– ಒಬ್ಬನಿಗೆ ವಿಪರೀತವಾದ ಜ್ವರ ಬಂದಾಗ ಶರೀರದಲ್ಲಿನ ಬಾಧೆಗೆ ಅವನಿಗೆ ತಿಳಿಯದೆ ಒಂದು ವಿಧವಾದ ಮೂಲ್ಗುವುದು ಏರ್ಪಡುತ್ತದೆ. ಅದು ಲಯಬದ್ಧವಾಗಿರುತ್ತದೆ. ಆದ್ದರಿಂದ ಆ ನಾದವನ್ನು ಒಂದು ರಾಗವಾಗಿ ಹೇಳಬಹುದು. ಹಾಗೇ ಕಷ್ಟ ಬಂದು ಬದುಕುವುದಕ್ಕೆ ಬಾರವಾದಾಗ ಒಬ್ಬನಿಗೆ ದೇವರು ನೆನಪಿಗೆ ಬಂದು ತನಗೆ ಹೇಳದೇ ತನ್ನ ಬಾಯಿನಿಂದ ದೇವರ ಬಗ್ಗೆ ಒಂದು ಲಯ ಬದ್ಧವಾದ ವಾಕ್ಯ.

"ನೀ.............ನು ಹೀಗೆ................ ಮಾಡುವೆಯಾ.................

ನಾ.............ನು ಹೇಗೆ.................. ಬದುಕಬೇಕು...................." ಈ ವಿಧವಾಗಿ ಬಂದಿದೆಯಂತೆ. ರಾಗವೆಂದರೆ ಲಯ ಬದ್ಧವಾದದು ಆದ್ದರಿಂದ ಇದು ಸಹ ಒಂದು ರಾಗವಾಗಿದೆ. ವಾಸ್ತವವನ್ನು ಯೋಚಿಸಿದರೆ ಮನುಷ್ಯನಲ್ಲಿ ಸಂತೋಷವಾಗಲಿ ದುಃಖವಾಗಲಿ ಬಂದಾಗ ಆತನು ಮಾಮೂಲಾಗಿ ಮಾತನಾಡದೆ ತನ್ನ ಮನಸ್ಸಲ್ಲಿನ ಭಾವವನ್ನು ದೀರ್ಘವಾಗಿ ಹೇಳುವನು. ಅವೇ ಅನೇಕ ಸಂದರ್ಭಗಳಲ್ಲಿ ಅನೇಕ ರಾಗಗಳಾಗಿವೆ. ಮತ್ತೆ ನಮ್ಮ ಮಾತಿಗೆ ಬಂದರೆ ರೋಗಗಳಿಂದ ರಾಗಗಳು ಬಂದಿರುವ ಮಾತು ಸಹ ನಿಜವೇ. ಚಳಿ ಜ್ವರ ಬಂದರೆ ಓ ಹೋ ಹೋ, ಓ ಹೋ ಹೋ ಎನ್ನುವುದು, ಜ್ವರ ಬಂದಾಗ ಊ... ಊ... ಎನ್ನುವುದು ತಲೆನೋವು ಬಂದಾಗ ಅಬ್ಬಾ ಅಬ್ಬಾ ಎನ್ನುವುದು ಸಹಜವಾಗಿ ನಮ್ಮೆಲ್ಲರಿಗೂ ತಿಳಿದಿರುತ್ತದೆ. ಇವು ಸಹ ಒಂದು ವಿಧವಾದ ರಾಗಗಳೇ. ರಾಗಗಳಿಂದ ರೋಗಗಳು ಹೋಗುವುದಿಲ್ಲ, ಆದರೆ ರೋಗಗಳಿಂದ ರಾಗಗಳು ಬರುವುದೆನ್ನುವುದು ವಾಸ್ತವ.

**ಚಿಂತಾ ಲಕ್ಷ್ಮಿನಾರಾಯಣ, ನರಸಾಪುರಮು**

**366) ಅಹಂಕಾರ ಮಮಕಾರಗಳೆಂದರೇನು? ಅವು ಎರಡು ಒಂದೇನಾ?**

**ಉ.** ಅಹಂ ಎಂದರೆ ನಾನು ಎಂದು, ಮಮ ಎಂದರೆ ನನ್ನದೆಂದು ಅರ್ಥ ಅಹಂಕಾರ ಎಂದರೆ ಶರೀರದೊಂದಿಗೆ ಸಹ ಕೂಡಿಕೊಂಡ ನಾನು ಎನ್ನುವ ಭಾವ. ಮಮಕಾರವೆಂದರೆ

ನಾನು, ನನ್ನದು ಎಂದು ಅರ್ಥ. ಅರ್ಜುನನು ಮೊದಲು ಯುದ್ಧದಲ್ಲಿ ನನ್ನ ಬಂಧುಗಳೆಂದು, ಮಮಕಾರವನ್ನು ಹೊಂದಿದ್ದಾನೆ. ಮಮಕಾರವೆಂದರು ಮೋಹ ಗುಣವೆಂದರೂ ಎರಡೂ ಒಂದೇ ಎಂದು ತಿಳಿಯಬೇಕು. ಇದನ್ನನುಸರಿಸಿ ಅಹಂಕಾರ, ಮಮ ಕಾರಗಳು ಬೇರೆ ಬೇರೆ ಎಂದು ತಿಳಿಯುತ್ತದೆ.

**ಡಿ.ಚೆನ್ನಪ್ಪ, ನ್ಯಾಮದ್ದಲ**

**367) ದ್ವಿಜರು ಎಂದರೆ ಯಾರು?**

**ಉ.** ದ್ವಿಜರು ಎಂದರೆ ಎರಡನೆಯ ಜನ್ಮವೆತ್ತಿದವರೆಂದು ಅರ್ಥ ಸರ್ವ ಸಾಧಾರಣವಾಗಿ ಬ್ರಾಹ್ಮಣರನ್ನು ಪೂರ್ವದಿಂದ ದ್ವಿಜರು ಎನ್ನುವುದು ನಡೆಯುತ್ತಿದೆ. ಬ್ರಹ್ಮ ಜ್ಞಾನ ತಿಳಿದವರು ದ್ವಿಜರು. ಸಾಧಾರಣವಾಗಿ ಒಬ್ಬ ಮನುಷ್ಯ ಅಜ್ಞಾನದಲ್ಲಿ ಜನ್ಮಿಸಿ, ಅಜ್ಞಾನ ಜೀವನಕ್ಕೆ ಸ್ವಸ್ತಿ ಹೇಳಿ, ಅಂದರೆ ಅಜ್ಞಾನ ಜೀವನದಲ್ಲಿ ಮರಣಿಸಿ ಜ್ಞಾನ ಜೀವನ ಹೊಸದಾಗಿ ಮುಂದುವರೆಸುವುದೆಂದು ಅರ್ಥ. ಅಜ್ಞಾನದಲ್ಲಿ ಮರಣಿಸಿ ಜ್ಞಾನದಲ್ಲಿ ಜೀವಿಸುವವರನ್ನು ಎರಡನೆಯ ಜನ್ಮವೆತ್ತಿದವನಾಗಿ ಲೆಕ್ಕಿಸಿ ಅಂತಹವನನ್ನು ದ್ವಿಜರು ಎನ್ನುತ್ತಿದ್ದರು. ಇದನ್ನನುಸರಿಸಿ ಅಜ್ಞಾನವನ್ನು ಬಿಟ್ಟು ಜ್ಞಾನ ಮಾರ್ಗವನ್ನವಲಂಭಿಸಿದವರು ಯಾರೇ ಆಗಲಿ ದ್ವಿಜರೆಂದು ತಿಳಿಯುತ್ತಿದೆ.

**ಶಿವಾರೆಡ್ಡಿ, ಗೂಡೂರು**

**368) ಮನುಷ್ಯನಿಗೆ ಆಯಸ್ಸು 100 ವರ್ಷಗಳೆನ್ನುತ್ತಾರೆ ನಿಜವೇನಾ? ಮನುಷ್ಯ ನೂರು ವರ್ಷಗಳಿಗಿಂತಲೂ ಹೆಚ್ಚು ಬದುಕಲಾರನಾ?**

**ಉ.** ಮನುಷ್ಯನಿಗೆ ಆಯಸ್ಸು ನೂರು ವರ್ಷಗಳೆನ್ನುವುದು ಅಭ್ಯಾಸವಾಗಿದ್ದರೂ ಜ್ಯೋತಿಷ್ಯ ಶಾಸ್ತ್ರ ರೀತ್ಯಾ ಮನುಷ್ಯ ಸ್ಥೂಲ ಶರೀರದೊಂದಿಗೆ 120 ವರ್ಷಗಳವರೆಗು ಜೀವಿಸಬಹುದೆಂದು ಹೇಳಬಹುದು. ಸ್ಥೂಲ ಶರೀರದೊಂದಿಗೆ ನೂರಕ್ಕೂ ಮೇಲೆ ನೂರ ಇಪ್ಪತ್ತರವರೆಗು ಬದುಕಿದವರು ಇದ್ದಾರೆ. ಆದರೆ ಸೂಕ್ಷ್ಮ ಶರೀರಕ್ಕೆ ಆಯುಸ್ಸು ಇಷ್ಟೆಂದು ಹೇಳುವುದಕ್ಕೆ ಇಲ್ಲಿಯವರೆಗು ಆಧಾರಗಳು ನಮಗೆ ಲಭ್ಯವಾಗಿಲ್ಲ. ಸ್ಥೂಲವಾಗಿ ಸತ್ತುಹೋದ ವ್ಯಕ್ತಿ ಸೂಕ್ಷ್ಮವಾಗಿ ಕೆಲವು ನೂರುವರ್ಷ ಬದುಕಿರುವಂತೆ ಅನೇಕ ಆಧಾರಗಳು ಸಿಕ್ಕಿವೆ. ಎಲ್ಲರೂ ಸೂಕ್ಷ್ಮವಾಗಿ ಬದುಕುವರೆನ್ನುವ ಆಧಾರಗಳಿಲ್ಲ. ಕೇವಲ ಕೆಲವರು ಮಾತ್ರ ಹಾಗೆ ಬದುಕಿ ಇರುವಂತೆ ತಿಳಿಯುತ್ತಿದೆ. ಹಾಗೆ ಸೂಕ್ಷ್ಮವಾಗಿ ಎಷ್ಟು ಕಾಲ ಬದುಕಬ

ಹುದೆನ್ನುವುದಕ್ಕು ಸಹ ಆಧಾರಗಳು ಇಲ್ಲ. ಆದ್ದರಿಂದ ಮನುಷ್ಯನ ಸ್ಥೂಲ ಶರೀರ ಆಯುಸ್ಸನ್ನು 120 ವರ್ಷಗಳೆಂದು ಹೇಳಬಹುದು ಆದರೆ ಸೂಕ್ಷ್ಮವೊಂದರ ಆಯಸ್ಸು ಇಷ್ಟೆಂದು ಹೇಳಲಾರೆವು.

**ವಿಶ್ವನಾಥ್, ಜಲದುರ್ಗಂ**

**369) ಇಂದ್ರಲೋಕದಲ್ಲಿ ಸ್ವರ್ಗ, ಯಮಲೋಕದಲ್ಲಿ ನರಕ ಇವೆ ಎನ್ನುವುದು ನಿಜವೇನಾ?**

**ಉ.** ಪ್ರತ್ಯೇಕಿಸಿ ಇಂದ್ರಲೋಕ ಅದರಲ್ಲಿ ಸ್ವರ್ಗ ಇಲ್ಲ. ಹಾಗೇ ಯಮಲೋಕ ಅದರಲ್ಲಿ ನರಕವೂ ಸಹ ಇಲ್ಲ. ವಾಸ್ತವವಾಗಿ ಸ್ವರ್ಗ ನರಕ ಎರಡು ಇರುವುದು ವಾಸ್ತವವೇ, ಆದರೂ ಅವು ಪ್ರತ್ಯೇಕವಾದ ಲೋಕಗಳಲ್ಲಿ ಇಲ್ಲ. ಪ್ರಜೆಗಳಿಗೆ ಅರ್ಥವಾಗುವುದಕ್ಕೆ ಕೆಲವರು ಆ ವಿಧವಾಗಿ ವರ್ಣಿಸಿ ಹೇಳಿದ್ದಾರೆ. ಮನುಷ್ಯ ಮಾಡಿಕೊಂಡ ಪಾಪಪುಣ್ಯಗಳನ್ನು ಅನುಸರಿಸಿ ನರಕ ಸ್ವರ್ಗ ಎನ್ನುವ ಮಾತು ನಿಜವೇ. ಪಾಪ ಪುಣ್ಯಗಳು ಎಲ್ಲಿ ಅನುಭವಿಸಲ್ಪಡುತ್ತಿವೆಯೋ ಅಲ್ಲೇ ಸ್ವರ್ಗ ನರಕಗಳಿವೆ. ಪಾಪ ಪುಣ್ಯಗಳು ಹಿಂದಿನ ಜನ್ಮಗಳವು, ಈ ಜನ್ಮದಲ್ಲಿ, ಈ ಜನ್ಮದಲ್ಲಿನವು ಬರುವ ಜನ್ಮದಲ್ಲಿ ಅನುಭವಿಸುವುದು ನಡೆಯುತ್ತಿದೆ. ಮನುಷ್ಯ ಸತ್ತುಹೋದ ಕೂಡಲೆ ಮರುಜನ್ಮಕ್ಕೆ ಹೋಗುವುದು ನಡೆಯುತ್ತಿದೆ. ಹಾಗೆ ಸತ್ತ ಕೂಡಲೆ ಜನ್ಮಗಳು ಬರುವುದರಿಂದ ಇಂದ್ರಲೋಕಕ್ಕೆ ಹೋಗುವುದು, ನರಕ ಲೋಕಕ್ಕೆ ಹೋಗುವುದು ನಡೆಯುತ್ತಿಲ್ಲ. ಮರಣಿಸಿದ ಕೂಡಲೇ ಮರುಜನ್ಮಕ್ಕೆ ಹೋಗುವ ಜೀವಿಗೆ ಮತ್ಯಾವ ಇತರ ಲೋಕಗಳಿಗು ಹೋಗುವ ಅವಧಿ ಇಲ್ಲ. ಯಾರು ಮಾಡಿಕೊಂಡ ಪಾಪ ಪುಣ್ಯಗಳನ್ನು ಅವರು ಭೂಮಿ ಮೇಲೆಯೇ ಕಷ್ಟ ಸುಖಗಳ ರೂಪದಲ್ಲಿ ಅನುಭವಿಸಬೇಕಾಗಿದೆ. ಅನುಭವಿಸುವ ಸುಖಗಳನ್ನು ಸ್ವರ್ಗವೆಂದು ಹಾಗೇ ಅನುಭವಿಸುವ ಕಷ್ಟಗಳನ್ನು ನರಕವೆಂದು ತಿಳಿಯುವುದು ನಡೆಯುತ್ತಿದೆ. ಅನುಭವಿಸುವ ಸ್ಥಿತಿಗತಿಗಳನ್ನನುಸರಿಸಿ ಸ್ವರ್ಗ ನರಕಗಳೆನ್ನುತ್ತಿದ್ದೇವೆ ಆದರೆ ಅವು ಪ್ರತ್ಯೇಕಿಸಿ ಮೇಲೆ ಎಲ್ಲೋ ಇವೆಯೆಂದುಕೊಳ್ಳುವುದು ತಪ್ಪು. ಒಂದೇ ಭೂಮಿ ಮೇಲೆ ಮನುಷ್ಯರ ಗುಣಗಳ ಪ್ರವರ್ತನೆಗಳ ಅನುಭವಗಳನ್ನನುಸರಿಸಿ ಎಷ್ಟೋ ಲೋಕಗಳಿವೆ. ಮುಖ್ಯವಾಗಿ ಮೂರು ಲೋಕಗಳು ಇವೆ, ಅದರಲ್ಲಿ ಒಂದೊಂದರಲ್ಲಿ ಸ್ವರ್ಗ ನರಕಲೋಕಗಳೆನ್ನುವವು ಇವೆ. ಮೂರು ಲೋಕಗಳಲ್ಲಿಯೂ ಮೂರು ಸ್ವರ್ಗ ಲೋಕಗಳು, ಮೂರು ನರಕಲೋಕಗಳು ಇವೆ. ಇವೆಲ್ಲವೂ ಭೂಮಿ ಮೇಲೆ ಇರುವ ಮನುಷ್ಯರ ತಲೆಯಲ್ಲಿ ಇವೆಯೆಂದು ಬೇರೆ ಎಲ್ಲೂ ಇಲ್ಲವೆಂದು ತಿಳಿಯಬೇಕು.

**370) ಜೀವನದಲ್ಲಿ ಮದುವೆ ಮಾಡಿಕೊಳ್ಳುವುದು ಒಳ್ಳೆಯದಾ, ಮಾಡಿಕೊಳ್ಳದೇ ಇರುವುದು ಒಳ್ಳೆಯದಾ?**

ಉ. ಜೀವನದಲ್ಲಿ ಮದುವೆ ಎನ್ನುವುದು ಎರಡು ವಿಧಗಳಾಗಿ ಇದೆ. ಒಂದು ಬಾಹ್ಯ ಪ್ರಪಂಚ ಸಂಬಂಧ, ಎರಡನೆಯದು ಆಧ್ಯಾತ್ಮಿಕ ಸಂಬಂಧ. ಆಧ್ಯಾತ್ಮಿಕವಾದದ್ದು ಯಾರಿಗೂ ತಿಳಿಯದೆಂದುಕೊಳ್ಳುತ್ತೇವೆ. ಪ್ರಪಂಚದಲ್ಲಿ ನಡೆಯುವ ಮದುವೆ ಮಾತ್ರ ಎಲ್ಲರಿಗೂ ತಿಳಿಯುತ್ತದೆ. ಒಂದು ಗಂಡು ಒಂದು ಹೆಣ್ಣನ್ನು ಜೀವನದ ಭಾಗಸ್ವಾಮ್ಯವಾಗಿ ಮಾಡಿಕೊಳ್ಳುವುದೆ ಮದುವೆ ಎಂದು ನಮಗೆಲ್ಲಾ ತಿಳಿದಿರುವ ವಿಷಯ. ಯಾರೇನಂದು ಕೊಂಡರೂ ಪ್ರಕೃತಿ ಸಂಬಂಧವಾದ ಮದುವೆಯನ್ನು ಆಧಾರಮಾಡಿಕೊಂಡು ಪರಮಾತ್ಮ ಸಂಬಂಧವಾದ ಮದುವೆ ವಿವರ ತಿಳಿಯುವಹಾಗೆ ಮದುವೆಯಲ್ಲಿ ಆಚಾರಗಳನ್ನು ಸೇರಿಸಿ ಇಟ್ಟಿದ್ದಾರೆ. ಮದುವೆ ಎನ್ನುವ ವಿವರವನ್ನು ತಿಳಿದು ಮದುವೆ ಮಾಡಿಕೊಳ್ಳುವುದು ಒಳ್ಳೆದು. ಮದುವೆ ಮಾಡಿಕೊಳ್ಳದೆ ಹೋಗುವುದರಿಂದ ಮದುವೆ ವಿವರವೇ ತಿಳಿಯದೇ ಹೋಗುವುದಲ್ಲದೆ ದೈವ ನಿರ್ಮಿಸಿದ ಪದ್ಧತಿಗೇ ವಿರುದ್ಧವಾಗುತ್ತದೆ. ಆದ್ದರಿಂದ ಮದುವೆ ಮಾಡಿಕೊಳ್ಳುವುದು ಒಳ್ಳೆದೇ ಆದರೆ ವಿವರ ತಿಳಿದು ಮಾಡಿಕೊಳ್ಳುವುದು ಇನ್ನೂ ಒಳ್ಳೆದು.

**371) ಪರಮಾತ್ಮ ಕೋಳಿ ಮೊಟ್ಟೆಯ ಆಕಾರದಲ್ಲಿ ಇದೆಯೆಂದು ಕೆಲವರು ಕೆಂಪು ಗೊಂಬೆಯನ್ನು ತೋರಿಸುತ್ತಿದ್ದಾರೆ ಅದು ನಿಜವೇನಾ?**

ಉ. ಆಕಾರ ಇಲ್ಲದವನು ಪರಮಾತ್ಮನೆಂದು ದೇವರೇ ಇಳಿದು ಬಂದು ಹೇಳಿದ್ದಾನೆ. ತನಗೆ ಆಕಾರ ಇಲ್ಲವೆಂದು ಗೀತೆಯಲ್ಲಿ ಪರಮಾತ್ಮನೇ ಸ್ವತಃ ಹೇಳಿರುವಾಗ, ಪ್ರತ್ಯೇಕಿಸಿ ಇಂದ್ರಿಯಾತೀತನೆಂದು ಹೇಳಿರುವಾಗ, ಮನುಷ್ಯರು ಪರಮಾತ್ಮನು ಹೀಗೆ ಇದ್ದಾನೆಂದು ಒಂದು ಆಕಾರವನ್ನು ತೋರಿಸುವುದು ವಿಚಿತ್ರ. ಯಾವ ಆಧಾರದಿಂದ ಅವರು ಪರಮಾತ್ಮನಿಗೆ ರೂಪವನ್ನು ಕಲ್ಪಿಸಿದ್ದಾರೋ ಹೇಳಲಾರೆವು ಆದರೆ ಶಾಸ್ತ್ರಬದ್ಧವಾಗಿ ಪರಮಾತ್ಮನಿಗೆ ಆಕಾರವಿಲ್ಲ.

**372) ಕಾಮ, ಕ್ರೋಧ, ಲೋಭ, ಮೋಹ, ಅಹಂ ಎನ್ನುವ ಐದು ಗುಣಗಳು ಮನುಷ್ಯನನ್ನು ನರಕಕ್ಕೆ ಕಳಿಸುವವೆನ್ನುತ್ತಿದ್ದಾರೆ. ಗುಣಗಳು ಆರಾ ಅಥವಾ ಐದಾ?**

ಉ. ಶತ್ರು ವರ್ಗ ಗುಣಗಳು ಆರು, ಮಿತ್ರವರ್ಗ ಗುಣಗಳು ಆರು ಒಂದು ಗುಣಭಾಗದಲ್ಲಿ ಇವೆ. ಕಾಮ, ಕ್ರೋಧ, ಲೋಭ, ಮೋಹ, ಮಧ, ಮತ್ಸರ ಎನ್ನುವ ಆರು ಗುಣಗಳು ಶತ್ರುವರ್ಗದೊಳಗಿನವು. ಮೇಲಿನ ಪ್ರಶ್ನೆಯಲ್ಲಿ ಶತ್ರುವರ್ಗದೊಳಗಿನ ನಾಲ್ಕು ಗುಣಗಳನ್ನು ಹೇಳಿ ಯಾವ ಮಾತ್ರ ಗುಣವಲ್ಲದ್ದು, ಶರೀರದಲ್ಲಿನ ಒಂದು ಇಂದ್ರಿಯ ಭಾಗವಾದ ಅಹಂಕಾರವನ್ನು ಗುಣಗಳಲ್ಲಿ ಸೇರಿಸಿ ಹೇಳುವುದು ಶುದ್ದ ತಪ್ಪು. ಶರೀರ ಅವಯವಗಳು ಬೇರೆ, ಗುಣಗಳು ಬೇರೆ. ಶರೀರ ಭಾಗಗಳು 25 ಆದರೆ, ಗುಣಗಳು ಒಂದು ವಿಧದಲ್ಲಿ ಆರು, ಮತ್ತೊಂದು ವಿಧದಲ್ಲಿ ಆರು ಒಂದು ಭಾಗದಲ್ಲಿ ಇವೆ. ಶರೀರದಲ್ಲಿನ 25 ಭಾಗಗಳಲ್ಲಿರುವ ಅಹಂಕಾರವನ್ನು ಗುಣಗಳಲ್ಲಿ ಸೇರಿಸಿ, ಮದ ಮತ್ಸರಗಳನ್ನು ತೆಗೆದು ಹಾಕುವುದನ್ನು ನೋಡಿದರೆ, ಶರೀರದ ಬಗ್ಗೆ ಅದರೊಳಗಿನ ಯಂತ್ರಾಂಗದ ಬಗ್ಗೆ ಏನೂ ತಿಳಿಯದವರು ಹೇಳಿರುವ ಮಾತೆಂದು ತಿಳಿಯುತ್ತಿದೆ. ಅಹಂಕಾರವು ಗುಣವೇ ಅಲ್ಲವೆಂದು ಗುಣಗಳು ಆರು ಇವೆಯೆಂದು ತಿಳಿಯಬೇಕು.

**373) ಯುಗಗಳು ನಾಲ್ಕು ಎಂದು ಒಂದೊಂದು ಯುಗ 2500 ವರ್ಷಗಳೆಂದು ಕೆಲವರನ್ನುತ್ತಿದ್ದಾರೆ ನೀವೇನನ್ನುತ್ತೀರ?**

ಉ. ಆಧಾರ ಶಾಸ್ತ್ರಬದ್ಧತೆ ಇಲ್ಲದೇ 2500 ವರ್ಷಗಳು ಒಂದು ಯುಗವೆಂದು ಹೇಳುವುದು ಸರಿಯಲ್ಲ. ಹಾಗೆ ಹೇಳುವುದಕ್ಕೆ ಅದಕ್ಕೊಂದು ಪದ್ಧತಿ ಇದೆ ಎಂದು ವಿವರಿಸಿ ಹೇಳಬೇಕು. ಒಂದು ಯುಗ ನಿರ್ಣಯಿಸುವುದಕ್ಕೆ ಅದರ ಹಿಂದೆ ಎಷ್ಟೋ ವಿವರಣೆಯೊಂದಿಗೆ ಕೂಡಿರುವ ಲೆಕ್ಕಾಚಾರವಿರಬೇಕು. ನನ್ನ ಉದ್ದೇಶದಲ್ಲಿ ನಾಲ್ಕು ಯುಗಗಳು ಒಂದೇ ಅಳತೆಯಲ್ಲಿಲ್ಲ. ನಾಲ್ಕು ಯುಗಗಳು 4, 3, 2, 1 ಸೇರಿಸಿದರೇ 10 ಆಗುವಹಾಗೇ ನಿರ್ಣಯಿಸಿ ಇಟ್ಟಿದ್ದಾರೆ. ಮೊದಲನೆಯ ಕೃತಯುಗ ಕೊನೆಯ ಕಲಿಯುಗಕ್ಕಿಂತಲೂ ನಾಲ್ಕುಪಟ್ಟು ದೊಡ್ಡದಾಗಿ ನಿರ್ಣಯಿಸಿ ಮೂರುಪಟ್ಟು ತ್ರೇತಾಯುಗವನ್ನು, ಎರಡು ಪಟ್ಟು ದ್ವಾಪರಯುಗವನ್ನು, ಒಂದರಷ್ಟು ಕಲಿಯುಗವನ್ನು ನಿರ್ಣಯಿಸಿದ್ದಾರೆ. ಕೊನೆಯ ಕಲಿಯುಗವನ್ನು ಆಧಾರಮಾಡಿಕೊಂಡು ಎರಡುಪಟ್ಟು, ಮೂರುಪಟ್ಟು, ನಾಲ್ಕುಪಟ್ಟು ಎಂದು ಯುಗಗಳಿಗೆ ಲೆಕ್ಕ ಕಲ್ಪಿಸಿದ್ದಾರೆ. ಕಲಿಯುಗ 4,32,000 ವರ್ಷಗಳೆಂದು ನಿರ್ಣಯಿಸಿದ್ದಾರೆ. ಕಲಿಯುಗ ಸಂಖ್ಯೆಯೇ ಮುಖ್ಯ ಆಧಾರವಾಗಿದೆ.

ಪ್ರಪಂಚದಲ್ಲಿ ಜಗತ್ತಿಗೆ ಸಂಬಂಧಿಸಿದ ವಿಧಾನವಿದು ಆದ್ದರಿಂದ ಜೀವರಾಶಿಗೆ ಇರುವ ಗುಣಗಳು 12 ಎಂದು, ಅವು ಒಂದೊಂದು 9 ಭಾಗಗಳಾಗಿ ವಿಭಜನೆಯಾಗಿವೆ ಎಂದು, ಎಲ್ಲವನ್ನು ಲೆಕ್ಕಿಸಿದರೆ 12X9 = 108 ಎಂದು, 108 ಕೋಟಿ ವರ್ಷಗಳು ಜಗತ್ತು ಇರುವುದೆಂದು, ಆ 108 ಕೋಟಿ ವರ್ಷಗಳು ಸಾವಿರ ಯುಗಗಳ ಕಾಲವೆಂದು, ಯುಗಗಳು ನಾಲ್ಕು ಆಗಿರುವುದರಿಂದ ಸಾವಿರ ಯುಗಗಳಲ್ಲಿ ಒಂದೊಂದು ಯುಗ 250 ಸಲ ಬರುವುದೆಂದು, 1000 x 4 = 250 ಎಂದು ಲೆಕ್ಕ ಇದೆ. ಸಾವಿರ ಯುಗಗಳು ಮುಗಿದ ಕೂಡಲೇ ಪ್ರಪಂಚ ಆಯುಸ್ಸೆ ಮುಗಿಯುತ್ತದೆಂದು ಸರ್ವವು ಪ್ರಳಯ ಹೊಂದುವುದೆಂದು ಗೀತೆಯಲ್ಲಿ ಸಹ ಹೇಳಿರುವುದಾಗಿದೆ. ಇಷ್ಟು ವಿವರ ಇರುವಾಗ ಯಾವ ವಿವರ ಇಲ್ಲದೇ 2500 ವರ್ಷಗಳನ್ನು ಒಂದು ಯುಗವೆನ್ನುವುದು ಸರಿಯಾದ ಪದ್ಧತಿ ಅಲ್ಲವೆನ್ನುತ್ತೇವೆ.

**374) 1999ನೇ ವರ್ಷಕ್ಕೆ ಕಲಿಯುಗಾಂತವೆಂದು ಕೆಲವರು, 1994ನೇ ವರ್ಷಕ್ಕೆ ಪ್ರಳಯ ಬರುವುದೆಂದು ಕೆಲವರು ಹೇಳಿದ್ದಾರೆ. ಅವರು ಹೇಳಿದ ಹಾಗೆ ಯಾವುದು ನಡೆದಿಲ್ಲ. ಅವರೇಕೆ ಹಾಗೆ ಹೇಳಿದ್ದಾರೆ?**

**ಉ.** ಈ ವಿಷಯವನ್ನು 1990 ನೇ ವರ್ಷದಲ್ಲೇ ನಮಗೆ ತಿಳಿದಿದೆ. ಹೇಳಿದವರು ದೊಡ್ಡ ಆಧ್ಯಾತ್ಮಿಕ ಗುರುಗಳೆಂದು ಹೆಸರುವಾಸಿ ಆದವರು. ಆದ್ದರಿಂದ ಅವರ ಮಾತುಗಳನ್ನು ಕೆಲವರು ವಿಶ್ವಾಸಿಸಿದ್ದಾರೆ. ಯಾರು ನಂಬಿದರೂ ಅದು ನಡೆದಿಲ್ಲ. ನಮಗೆ ತಿಳಿದಾಗಲೇ ಇದು ನಡೆಯುವುದಕ್ಕೆ ಅವಕಾಶವೇ ಇಲ್ಲವೆಂದಿದ್ದೇವೆ. ನಾವು ಹಾಗೆ ಹೇಳುವುದಕ್ಕೆ ಎಷ್ಟೋ ಆಧಾರಗಳಿವೆ. ಸಾವಿರ ಯುಗಗಳು ಮುಗಿಯುವವರೆಗು ಪ್ರಳಯ ಬರುವುದಿಲ್ಲವೆಂದು ಗೀತೆಯಲ್ಲಿ ಹೇಳಲಾಗಿದೆ. ಇದು ಸಾವಿರ ಯುಗವಾದರೂ ಕಲಿಯುಗ ಪೂರ್ತಿ ಆಗಬೇಕಾಗಿದೆ. 4,32,000 ವರ್ಷಗಳ ಕಲಿಯುಗ ಕಾಲದಲ್ಲಿ ಕೇವಲ 5 ಸಾವಿರದ 150 ವರ್ಷಗಳೇ ಕಳೆದಿದೆ. ಆದ್ದರಿಂದ ಯಾವ ವಿಧದಲ್ಲಿ ನೋಡಿದರೂ 1994 ಆಗಲಿ, 1999 ಆಗಲಿ ಜಗತ್ತು ಅಂತ್ಯವಾಗುವುದಿಲ್ಲವೆಂದು ತಿಳಿಯುತ್ತಿದೆ. ಅಂತ್ಯವಾಗುತ್ತದೆಂದು ಹೇಳಿದವರು ಏಕೆ ಹಾಗೆ ಹೇಳಿದ್ದಾರೋ ತಿಳಿಯದು. ಬಹುಶ ಕೆಲವರ ದೃಷ್ಠಿಯನ್ನು ಆಕರ್ಷಿಸುವುದಕ್ಕೆ, ನಾವು ಗುರುಗಳೆಂದು ಹೆಸರಿಗಾಗಿ ಹಾಗೆ ಮಾಡಿರುತ್ತಾರೆಂದು+ಕೊಳ್ಳುತ್ತೇವೆ. ದೂರದೃಷ್ಠಿ ಶಾಸ್ತ್ರ ಆಧಾರವಿಲ್ಲದೆ ಮಾತನಾಡಿದವರು

ಎಂದಿಗಾದರೂ ಅವಮಾನಗಳ ಪಾಲಾಗುತ್ತಾರೆಂದು ಈ ವಿಷಯದಿಂದ ತಿಳಿದು ಹೋಗುತ್ತಿದೆ.

**375) ನಿಮಗೆ ಆಹಾರ ನಿಯಮಗಳಿವೆಯಾ?**

**ಉ.** ಆಹಾರ ನಿಯಮಗಳು ಯಾವವು ಇಲ್ಲ. ಇತರರಿಗೆ ಇಷ್ಟವಾಗುವಂತೆ ನಾನು ನಡೆಯಬೇಕೆಂದುಕೊಂಡಿಲ್ಲ. ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ನಡೆಯಬೇಕೆಂದುಕೊಂಡಿದ್ದೇವೆ. ಬ್ರಹ್ಮ ಜ್ಞಾನಿ ಆದವನಿಗೆ ಆಹಾರ ನಿಯಮಗಳೇನೂ ಇರುವುದಿಲ್ಲ. ಆಹಾರ ಶರೀರಕ್ಕೆ ಮಾತ್ರವೇ ಎಂದು, ಮನೋ ಬುದ್ಧಿಗಳಿಗೆ ಗುಣ ವಿಷಯಗಳೇ ಆಹಾರಗಳೆಂದು ತಿಳಿಯಬೇಕು. ಆಗ ಹೊರಗಿನ ಅಹಾರದ ಮೇಲೆ ಧ್ಯಾಸವನ್ನು ಬಿಟ್ಟು ಒಳಗೆ ಧ್ಯಾಸವನ್ನು ಇಡುವನು. ವಿಷಯಗಳ ಆಹಾರದ ಮೇಲೆ ನಿಯಮ ನಿಯಂತ್ರಣೆಗಳಿಡುತ್ತಾ, ಜ್ಞಾನವೆನ್ನುವ ಆರೋಗ್ಯವನ್ನು ಕಾಪಾಡಿಕೊಳ್ಳಬೇಕಾಗಿದೆ ಎಂದು ತಿಳಿಯಬೇಕು. ಹೊರಗಿನ ಆಹಾರ ಶರೀರ ಆರೋಗ್ಯ ಅನಾರೋಗ್ಯಕ್ಕೆ ಆಗಲಿ ಒಳಗೆ ಮನೋ ಬುದ್ಧಿಗಳ ಆರೋಗ್ಯಕ್ಕಲ್ಲ. ಆದ್ದರಿಂದ ನಮಗೆ ಆಹಾರ ನಿಯಮಗಳಿಲ್ಲ.

**376) ನೀವು ಯೋಗ ಸಾಧನೆ ಎಷ್ಟು ಸಮಯ ಮಾಡುತ್ತೀರಾ?**

**ಉ.** ನಾನು ಎಂದಿಗೂ ಯೋಗಸಾಧನೆ ಮಾಡಲಿಲ್ಲ. ನಾನು ಯೋಗಿಯೂ ಸಹ ಅಲ್ಲ. ನಿಮಗೆ ಸ್ವಲ್ಪ ಆಶ್ಚರ್ಯವಾಗಿರಬಹುದು. ಯೋಗಿ ಅಲ್ಲದಿರುವಾಗ ಯೋಗೀಶ್ವರರೆಂದು ಹೆಸರೇಕೆ ಇಟ್ಟುಕೊಂಡಿದ್ದೀರೆಂದು ಕೇಳಬಹುದು. ಯೋಗ ಸಾಧನೆ ಮಾಡದೇ, ಯೋಗಿ ಆಗದೇ ಯೋಗೀಶ್ವರನು ಹೇಗೆ ಆಗುತ್ತೀರೆಂದು ಸಹ ಕೆಲವರು ಕೇಳಬಹುದು. ಅದಕ್ಕೆ ಸಮಾಧಾನ ಹಿಂದಿನ ಜನ್ಮದಲ್ಲಿ ಯೋಗಿಯಾಗಿದ್ದೇನೇನೊ, ಯೋಗ ಸಾಧನೆ ಮಾಡಿದ್ದೇನೇನೊ, ಆದರೆ ಈ ಜನ್ಮದಲ್ಲಿ ಮಾತ್ರ ಏನೂ ಮಾಡಲಿಲ್ಲ. ನಾನೀಗ ಯೋಗಿ ಅಲ್ಲ ಯೋಗಿಗಳಿಗೆ ಅಧಿಪತಿಯಾದ ಯೋಗೀಶ್ವರನೆಂದು ಹೇಳಿಕೊಳ್ಳುವುದು ಮಾತ್ರ ಸತ್ಯ. ಯೋಗೀಶ್ವರನೆಂದು ಹೇಳುವುದನ್ನು ನೀನು ನಂಬಬಾರದು. ನಿಮ್ಮ ಜ್ಞಾನವನ್ನು ಉಪಯೋಗಿಸಿ ನೋಡಿ ನಾನು ಹೇಗೆ ಅರ್ಥವಾದರೆ ಹಾಗೆ ತಿಳುದುಕೊಳ್ಳುವುದು ಒಳ್ಳೆದು.

**377) ಜ್ಞಾನ ತಿಳಿದ ಸ್ವಾಮಿಗಳು, ಕೆಲವರು ಜ್ಯೋತಿಷ್ಯರು, ಕೆಲವರು ಮೂಲಿಕಾ ವೈದ್ಯರು ಗಡ್ಡ, ಜುಟ್ಟು ಬೆಳಿಸಿರುತ್ತಾರೆ ಏಕೆ?**

ಉ. ಕೆಲವು ಸಾವಿರ ವರ್ಷಗಳ ಪೂರ್ವದಲ್ಲಿ ಮೂಲಿಕಾ ವೈದ್ಯರು, ತಪಸ್ವಿಕರು ಕೆಲವರು ಸ್ವಾಮಿಗಳು ಕಾಡಿನಲ್ಲಿ ನಿವಾಸಿಸುತ್ತಿದ್ದರು. ಕಾಡಿನಲ್ಲಿ ನಿವಾಸಮಾಡುವವರಿಗೆ ತಲೆ ಗಡ್ಡ ಬೋಳಿಸುವವರು ಸಿಗದೆ ಇರುವುದರಿಂದ ಜುಟ್ಟು ಗಡ್ಡ ಬೆಳೆಸುತ್ತಿದ್ದರು. ಆ ಕಾಲದಲ್ಲಿ ಈಗಿನಂತೆ ರೈಜರ್‌ಗಳು, ಬ್ಲೇಡುಗಳು ಸಹ ಇಲ್ಲ. ಯಾರಿಷ್ಟಕ್ಕೆ ಅವರು ಗಡ್ಡ ತೆಗೆದುಕೊಳ್ಳುವುದಕ್ಕೂ ಸಹ ಅವಕಾಶವಿಲ್ಲ. ಆದ್ದರಿಂದ ಪೂರ್ವದಲ್ಲಿ ಕಾಡಿನಲ್ಲಿರುವವರು ಜುಟ್ಟು ಗಡ್ಡ ಬೆಳೆಸುತ್ತಿದ್ದರು. ಈಗಿನ ಕಾಲದಲ್ಲಿ ಮನೆ ಪಕ್ಕದಲ್ಲಿ ಕ್ಷೌರಿಕ ಷಾಪ್ ಇದ್ದರೂ, ಎಷ್ಟೋ ವಿಧವಾದ ರೈಜರ್‌ಗಳು ಬ್ಲೇಡುಗಳಿದ್ದರೂ, ಜುಟ್ಟು ಗಡ್ಡ ಬೆಳೆಸಿಕೊಳ್ಳುವುದರಲ್ಲಿ ಅರ್ಥವಿಲ್ಲ. ಪೂರ್ವದಲ್ಲಿ ಅವಕಾಶವಿಲ್ಲದೆ ಅವರು ಬೆಳೆಸಿದರೆ ಅವಕಾಶವಿದ್ದೂ ಇವರು ಬೆಳೆಸುವುದು ವಿಚಿತ್ರವಾಗಿದೆ. ಆಲೋಚನೆ ಮಾಡಿದರೆ ಕೇವಲ ವೇಷಧಾರಣೆಗೋಸ್ಕರ, ಇತರರನ್ನು ಆಕರ್ಷಿಸುವುದಕ್ಕೆ ಆ ವಿಧವಾಗಿ ಬೆಳೆಸುತ್ತಿದ್ದಾರೆಂದು ತಿಳಿಯುತ್ತಿದೆ. ಶುಭ್ರವಾಗಿ ಷೇವಿಂಗ್ ಮಾಡಿಕೊಂಡವನಿಗಿಂತಲೂ ಜುಟ್ಟು ಗಡ್ಡ ಇರುವವನು ದೊಡ್ಡದಾಗಿ ಕಾಣಿಸುವುದೇ ಇಲ್ಲಿಯ ವಿಶೇಷ. ಆದ್ದರಿಂದ ತಿಳಿದವರು, ತಿಳಿಯದವರು ಎಲ್ಲರೂ ತಮಗೆ ಏನೋ ತಿಳಿದಿರುವಹಾಗೆ ಇತರರಿಗೆ ತಿಳಿಯಬೇಕೆಂದು ಆ ವಿಧವಾಗಿ ಬೆಳೆಸುಕೊಳ್ಳುತ್ತಿದ್ದಾರೆ.

**378) ಸಂಖ್ಯೆಗಳಲ್ಲಿ ಒಂಬತ್ತು ಸಂಖ್ಯೆಗೆ ಬಹಳ ಪ್ರಾಧಾನ್ಯತೆ ಇದೆ ಎನ್ನುತ್ತಾರೆ ಏಕೆ?**

ಉ. ಜೀವಿಯು ಶರೀರದಲ್ಲಿ ನಿವಾಸಿಸುತ್ತಿದ್ದಾನೆಂದು ಎಲ್ಲರಿಗೂ ತಿಳಿದಿರುವುದೇ. ಶರೀರದಲ್ಲಿದ್ದು ಕರ್ಮವನ್ನನುಭವಿಸುತ್ತಿದ್ದಾನೆಂದು ಸಹ ತಿಳಿದಿದೆ. ನಾವು ನಿವಾಸಿಸುವ ಶರೀರಕ್ಕೆ ಒಂಬತ್ತು ರಂಧ್ರಗಳಿವೆ. ಹಾಗೇ ನಾವು ನಿವಾಸಿಸುವ ಶರೀರದಲ್ಲಿ ಕರ್ಮವನ್ನು ಪಾಲಿಸುವ ಗ್ರಹಗಳು ಸಹ ಒಂಬತ್ತು ಇವೆ. ಜೀವಿಯು ಪ್ರಪಂಚದಲ್ಲಿ ನಿವಾಸಿಸುವುದಕ್ಕೆ ಮುಖ್ಯವಾದದ್ದು ಶರೀರ, ಕರ್ಮಎಂದು ತಿಳಿಯುತ್ತಿದೆ. ಜೀವಿಗೆ ಮುಖ್ಯವಾದ ಶರೀರ, ಕರ್ಮ ಒಂಬತ್ತಿನೊಂದಿಗೆ ಮುಡಿಪಟ್ಟಿವೆ. ಎಂತಹ ಜೀವಾತ್ಮನಾದರೂ ಒಂಬತ್ತು ರಂಧ್ರಗಳ ಶರೀರದಲ್ಲಿಯೇ ಇರಬೇಕು. ಹಾಗೇ ಎಂತಹ ಕರ್ಮವನ್ನಾದರೂ ಒಂಬತ್ತು ಗ್ರಹಗಳಿಂದಲೇ

ಅನುಭವಿಸಬೇಕು. ಎಷ್ಟು ಕರ್ಮಗಳಾದರೂ ಸಣ್ಣ ಕರ್ಮವಾದರೂ ದೊಡ್ಡ ಕರ್ಮವಾದರೂ ಎಷ್ಟು ಲಕ್ಷ ಕರ್ಮಗಳಾದರೂ ಒಂಬತ್ತಿನಿಂದಲೇ ಅನುಭವಿಸಬೇಕು. ಆದ್ದರಿಂದ ಗಣಿತ ಶಾಸ್ತ್ರದಲ್ಲಿ ಸಹ 9 ಸಂಖ್ಯೆಯನ್ನು ಗುರುತಿಗಾಗಿ ಇಟ್ಟಿದ್ದಾರೆ.

1 ರಿಂದ 9 ರವರೆಗು 9ನ್ನು ಗುಣಿಸಿದರೆ ಬಂದಿರುವ ಎರಡು ಸಂಖ್ಯಗಳನ್ನು ಕೂಡಿದರೆ ಪುನಃ 9 ಬರುತ್ತದೆ.

9 x 1 = 9 – 9

9 x 2 = 18 – 9

9 x 3 = 27 – 9

9 x 4 = 36 – 9

9 x 5 = 45 – 9

9 x 6 = 54 – 9

9 x 7 = 63 – 9

9 x 8 = 72 – 9

9 x 9 = 81 – 9

9 x 10 = 90 – 9

ಈ ವಿಧವಾಗಿ ಗುಣಿತದಲ್ಲಿ ಕೊನೆಗೆ ಬಂದಿರುವ ಮೊತ್ತವನ್ನು ಸೇರಿಸಿದರೆ ಒಂಬತ್ತೇ ಆಗುತ್ತಿದೆ. ಒಂಬತ್ತು ಕರ್ಮಕ್ಕೂ ಗುರುತು, ಜನ್ಮಿಸುವ ಶರೀರಕ್ಕೂ ಗುರುತು.

**ಹರಿನಾರಾಯಣ, ಜಲದುರ್ಗಂ**

**379) ಯೋಗದಲ್ಲಿ ವಿಧಗಳಿರುವಹಾಗೇ ಜ್ಞಾನದಲ್ಲಿ ವಿಧಗಳಿವೆಯಾ?**

**ಉ.** ಜ್ಞಾನದಲ್ಲಿ ಪ್ರಪಂಚ ಜ್ಞಾನ, ಪರಮಾತ್ಮ ಜ್ಞಾನವೆಂದು ಎರಡು ವಿಧಗಳ ಜ್ಞಾನಗಳಿವೆ. ಪ್ರಪಂಚ ಜ್ಞಾನ ದೈವವಿರುದ್ಧತೆಯನ್ನು ಅಧರ್ಮಗಳನ್ನು ತಿಳಿಸುತ್ತದೆ. ಪರಮಾತ್ಮಜ್ಞಾನ ಪ್ರಕೃತಿ ವಿರುದ್ಧತೆಯನ್ನು ಧರ್ಮಗಳನ್ನು ತಿಳಿಸುತ್ತಿದೆ.

**380) ಸಣ್ಣ ಸಸಿಗಳಿಗೂ ದೊಡ್ಡ ಗಿಡಗಳಿಗೂ ಒಂದೇ ಹಸಿರು ತನ ವಿದ್ದರೂ ಅವುಗಳಲ್ಲಿ ಬಿಡುವ ಹೂಗಳು ಅನೇಕ ಬಣ್ಣಗಳಾಗಿ ಅನೇಕ ವಿಧಗಳಾಗಿ ಇವೆ. ಎಲ್ಲಾ ಗಿಡಗಳ ಎಲೆಗಳಿಗೂ ಒಂದೇ ಹಸಿರುತನ ಇದ್ದಹಾಗೇ ಎಲ್ಲಾ ಗಿಡಗಳ ಹೂಗಳು ಒಂದೇ ಬಣ್ಣದಲ್ಲಿ ಬಿಡದೇ ಅನೇಕ ಬಣ್ಣಗಳಾಗಿ ಏಕೆ ಬಿಡುತ್ತಿವೆ?**

ಉ. ಹೂಗಳಂತೆ ಅನೇಕ ವಿಧಗಳ ಜೀವರಾಶಿಗಳಿದ್ದರೂ, ಎಲೆಗಳ ಹಸಿರಿನಂತೆ ಎಲ್ಲರಲ್ಲಿ ಒಬ್ಬನೇ ದೇವರಿದ್ದಾನೆಂದು ಮನುಷ್ಯರು ತಿಳಿಯುವಹಾಗೇ ಒಂದು ದೊಡ್ಡ ಸಂದೇಶವನ್ನು ಕೊಡುತ್ತಿವೆ ಎಂದು ತಿಳಿಯುತ್ತಿದೆ. ಎಲ್ಲಾ ಗಿಡಗಳಿಗೂ ಒಂದೇ ಹಸಿರುತನ ಇರುವಹಾಗೇ ಎಲ್ಲರಲ್ಲೂ ಒಬ್ಬನೇ ದೇವರಿದ್ದಾನೆ. ಅನೇಕ ಬಣ್ಣಗಳು ಅನೇಕ ವಿಧಗಳ ಹೂವುಗಳಿದ್ದಹಾಗೇ ವಿವಿಧ ಶರೀರಗಳೊಂದಿಗೆ, ವಿವಿಧ ಕರ್ಮಗಳೊಂದಿಗೆ ಜೀವಿಗಳಿದ್ದಾರೆ.

**381) ಮತ್ತಿನ ಪದಾರ್ಥಗಳನ್ನು ಆಹಾರ ಪದಾರ್ಥಗಳೆನ್ನ ಬಹುದಾ?**

ಉ. ಆಹಾರ ಪದಾರ್ಥಗಳೊಂದಿಗೆ ಮತ್ತಿನ ಪದಾರ್ಥಗಳು ಸೇರುವುದಿಲ್ಲ. ಆಹಾರ ಪದಾರ್ಥಗಳು ಬೇರೆ, ಮತ್ತಿನ ಪದಾರ್ಥಗಳು ಬೇರೆ. ವಿಷಕ್ಕೂ, ಮತ್ತಿಗೂ ಸಂಬಂಧವಿದೆ. ಹಾವಿನ ವಿಷ ವಿಪರೀತವಾದ ಮತ್ತು ಬರುವಂತೆ ಮಾಡಿ ಮನುಷ್ಯನನ್ನು ಸಾಯಿಸುತ್ತದೆ. ಆದ್ದರಿಂದ ಮತ್ತಿನ ಪದಾರ್ಥಗಳು ವಿಷಕ್ಕೆ ಸಮಾನ. ಮತ್ತಿನ ಪದಾರ್ಥ ಆತ್ಮ ಚೈತನ್ಯವನ್ನು ಮತ್ತಲ್ಲಿರಿಸಿ ಆತ್ಮವನ್ನೆ ಕೆಲಸ ಮಾಡದಂತೆ ಮಾಡುತ್ತದೆ. ಆತ್ಮಕ್ಕೆ ಹಾನಿ ಮಾಡುವುದು ಮತ್ತಿನ ಪದಾರ್ಥ. ಆಹಾರ ಆತ್ಮನಿಗೆ ಬೇಕಾದ ಶಕ್ತಿಗೋಸ್ಕರ ವಿನಿಯೋಗಪಡುತ್ತಿದೆ. ಮತ್ತಿನ ಪದಾರ್ಥ ಆತ್ಮಕ್ಕಿರುವ ಶಕ್ತಿಯನ್ನೇ ಇಲ್ಲದಂತೆ ಮಾಡುತ್ತಿದೆ. ಆತ್ಮನಿಗೆ ಕೆಟ್ಟದ್ದನ್ನು ಮಾಡುವುದು ಮತ್ತಿನ ಪದಾರ್ಥ ಆಗಿರುವುದರಿಂದ, ಮತ್ತಿನ ಪದಾರ್ಥಗಳು ಸೇವಿಸುವವರಿಗೆ ದೊಡ್ಡ ಪಾಪವು ಸಹ ಸಂಭವಿಸುವುದು.

**382) ಇಂದೂಮತ ಕ್ಷೀಣಿಸುವುದಕ್ಕೆ ಇತರ ಮತಗಳು ಅಭಿವೃದ್ಧಿ ಆಗುವುದಕ್ಕೆ ಕಾರಣವೇನು?**

ಉ. ಇಂದೂ ಮತ ಹಿಂದೂ ಮತ ಎನ್ನುವ ಹೆಸರೊಂದಿಗೆ ಸಹ ಬದಲಾಗಿರುವುದು, ಇಂದೂಮತವೊಂದರ ಆಚಾರಗಳು ಅವುಗಳಿಗೆ ಅರ್ಥಗಳು ತಿಳಿಯದೇ ಹೋಗಿರುವುದು,

ಇಂದೂ ಮತದಲ್ಲಿ ಸರ್ಕಾರ ಗುರುಗಳಿಗೆ ಬೆಲೆ ಕೊಡದೇ ಹೋಗಿರುವುದು, ಇಂದೂ ಮತ ಶಾಸ್ತ್ರಬದ್ಧತೆ ಇಲ್ಲದೇ ಬದಲಾಗಿರುವುದು, ಜ್ಞಾನವನ್ನು ತಿಳಿದುಕೊಳ್ಳಬೇಕೆನ್ನುವ ಶ್ರದ್ಧೆ ಇಲ್ಲದೇ ಹೋಗಿರುವುದು ಮೊದಲಾದ ಅನೇಕ ಕಾರಣಗಳಿಂದ ಇಂದೂಮತ ಕ್ಷೀಣಿಸುತ್ತಿದೆ. ಇತರ ಮತಗಳ ಧರ್ಮಗಳು ಚೆನ್ನಾಗಿ ಪ್ರಚಾರ ಆಗುವುದು, ಇತರ ಮತಗಳ ಗುರುಗಳು ಅವರ ದೇಶಗಳಿಗೇ ರಾಜರಾಗಿ ವರ್ತಿಸುವುದು, ಮತದ ಬಗ್ಗೆ ಶ್ರದ್ಧೆ ಮತ್ತು ಎಷ್ಟೋ ಪದ್ಧತಿಗಳಿಂದ ಇತರ ಮತಗಳು ಅಭಿವೃದ್ಧಿಯಾಗುತ್ತಿವೆ.

**383) ಅಚಲವೆಂದರೇ ಏನು?**

ಉ. ಈ ಪ್ರಶ್ನೆಗೆ ಕೆಲವರು ಚಲನೆ ಇಲ್ಲದಿರುವುದೆಂದು ಹೇಳುತ್ತಿದ್ದಾರೆ. ಹಾಗಾದರೆ ಅಚಲನ ಎಂದು ಹೇಳಬಹುದು ಅಲ್ಲವೆ! ಅಚಲನವೆನ್ನದೇ ಅಚಲವೆಂದು ಮಧ್ಯದಲ್ಲಿ "ನ"ನ್ನು ಏಕೆ ಇಲ್ಲದೇ ಮಾಡಿದ್ದೀರೆಂದು ಕೇಳಿದರೆ ಅದಕ್ಕೆ ಸರಿಯಾದ ಉತ್ತರ ಹೇಳದೇ ನಮ್ಮ ಹಿರಿಯರು ಹೀಗೇ ಹೇಳಿದ್ದಾರೆಂದು ಅವರು ಹೇಳಿಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಪೂರ್ವದಲ್ಲಿ ಈ ಪದವನ್ನು ಅಚೇಲವೆನ್ನುತ್ತಿದ್ದರು. ಚೇಲವೆಂದರೆ ಬಟ್ಟೆ ಎಂದು, ಅಚೇಲವೆಂದರೆ ಬಟ್ಟೆ ಇಲ್ಲದೇ ಇರುವುದೆಂದು ಅರ್ಥ. ಬಟ್ಟ ಬಯಲು ಎಂದು, ಬಟ್ಟೆ ತೆಗೆದರೆ ಬಯಲು ಇದೆಯೆಂದು, ಬಯಲನ್ನು ಪರಮಾತ್ಮ ಎಂದು, ಬಟ್ಟೆಯನ್ನು ಮಾಯೆ ಎಂದು ಹೋಲಿಸಿ ಹೇಳಿದ್ದಾರೆ. ಪರಮಾತ್ಮನನ್ನು ಅಚೇಲವೆಂದಿದ್ದಾರೆ. ಅಚಲವೆಂದರೇ ಅರ್ಥವೇ ಇಲ್ಲ. ಚಿದಂಬರ ರಹಸ್ಯದಿಂದ ಹುಟ್ಟಿರುವುದು ಬಟ್ಟ ಬಯಲು. ಬಟ್ಟ ಬಯಲಿಗೆ ಸಂಬಂಧವಿರುವುದು ಅಚೇಲವೆನ್ನುವ ಪದ. ನಿರಾಕಾರ ಪರಮಾತ್ಮ ವಿದ್ಯೆಯನ್ನು ಕಲಿಯುವವರು ಪೂರ್ವದಲ್ಲಿ ನಾವು ಅಚೇಲ ಮಾರ್ಗದಲ್ಲಿದ್ದೇವೆನ್ನುತ್ತಿದ್ದರು. ಕಾಲ ಕ್ರಮದಲ್ಲಿ ಆ ಪದ ಬದಲಾಗಿ ನಾವು ಅಚಲ ಮಾರ್ಗದಲ್ಲಿ ಇದ್ದೇವೆನ್ನುತ್ತಿದ್ದಾರೆ. ಅಚಲವೆಂದರೇ ಅರ್ಥ ಇಲ್ಲ. ಸರಿಯಾದ ಪದ ಅಚೇಲವೆಂದು ತಿಳಿಯಬೇಕು.

**384) ಅಮನಸ್ಕವೆಂದರೆ ಏನು?**

ಉ. ಮನಸ್ಸಿಲ್ಲದ ಯೋಗವನ್ನು ಅಮನಸ್ಕವೆನ್ನುತ್ತಿದ್ದಾರೆ. ಗೀತೆಯಲ್ಲಿ ಹೇಳಿದ ಬ್ರಹ್ಮ, ಕರ್ಮಯೋಗಗಳಲ್ಲಿ ಕರ್ಮಯೋಗ ಅಹಂ ಇಲ್ಲದಿರುವುದಾದರೆ, ಬ್ರಹ್ಮಯೋಗ

ಮನಸ್ಸಿಲ್ಲದ್ದು. ಬ್ರಹ್ಮಯೋಗವನ್ನು ಮನಸ್ಸಿಲ್ಲದ ಯೋಗವೆಂದು ಅರ್ಥಬರುವಹಾಗೇ ಅಮನಸ್ಕಯೋಗವೆಂದು (ಅಮನಸ್ಕವೆಂದು) ಕರೆಯುತ್ತಿದ್ದಾರೆ.

**385) ದೇವಾಲಯಕ್ಕೆ ಗುಡಿ ಎಂದು ಏಕೆ ಹೆಸರು ಬಂದಿದೆ?**

ಉ. ಪರಮಾತ್ಮ ಹೀಗಿದ್ದಾನೆಂದು ತಿಳಿಸುವ ಚಿಹ್ನೆಗಳಿರುವುದನ್ನು ದೇವಾಲಯ ವೆನ್ನುತ್ತೇವೆ. ಪರಮಾತ್ಮ ಆದಿ ಅಂತ್ಯ ಇಲ್ಲದವನು. ಪ್ರತಿಯೊಂದಕ್ಕು ಮೊದಲು ಕೊನೆ ಇರುತ್ತವೆ. ಮೊದಲು ಕೊನೆ ಇಲ್ಲದ ಪರಮಾತ್ಮನನ್ನು ಸೂಚಿಸುವುದಕ್ಕೆ ಮೊದಲು ಕೊನೆ ಇಲ್ಲದ ಗುಂಡಾಕಾರವನ್ನು ತೋರಿಸಿದ್ದಾರೆ. ಒಂದು ಗುಂಡನೆಯ ಬಿಂದುವಿಗೆ ಮೊದಲು ಕೊನೆ ಯಾವ ಮಾತ್ರ ಇರುವುದಿಲ್ಲ. ಪರಮಾತ್ಮ ಚಿಹ್ನೆಯಾದ ಗುಂಡಾಕಾರದಿಂದ ಗುರುವು ಎನ್ನುವ ಪದ ಸಹ ಹುಟ್ಟಿದೆ ಎಂದು ಒಂದು ವ್ಯಾಸದಲ್ಲಿ ಸಹ ಹೇಳಿದ್ದೇವೆ. ಗುಂಡಗಿರುವುದನ್ನೆ ಗುಡಿ ಎಂದು ಸಹ ಕರೆಯುತ್ತೇವೆ. ಕಾಗುಣಿತದಲ್ಲಿ ಸಹ ಕ ಗೆ ಗುಡುಸು ಕೊಟ್ಟರೆ ಕಿ ಎಂದು ಹೇಳುತ್ತೇವೆ. ಅಂದರೆ ಕ ಮೇಲೆ ಗುಂಡಾಕಾರವನ್ನಿಡುವು ದರಿಂದ ಅದು ಕಿ ಆಗುತ್ತಿದೆ. ಅಕ್ಷರಗಳ ತಲೆಗಳ ಮೇಲೆ ಗುಂಡಾಕಾರವನ್ನು ಗುಡಿ ಎನ್ನುತ್ತಿದ್ದೇವೆ. ನಾಶನವಿಲ್ಲದ ಪರಮಾತ್ಮನನ್ನು, ಆದಿ ಅಂತ್ಯವಿಲ್ಲದ ಪರಮಾತ್ಮನನ್ನು ಸೂಚಿಸುವ ದೇವಾಲಯವನ್ನು ಅರ್ಥವಿರುವಹಾಗೆ, ಮೊದಲು ಕೊನೆ ಇಲ್ಲದವನು ಇಲ್ಲಿದ್ದಾನೆಂದು ತಿಳಿಯುವಹಾಗೆ ದೇವಾಲಯಕ್ಕೆ ಗುಡಿ ಎಂದು ಪೂರ್ವದಲ್ಲಿ ಕರೆಯುತ್ತಿದ್ದರು. ಈ ಕಾಲದಲ್ಲಿ ಗುಡಿ ಎಂದರೆ ವಾಸ್ತವವಾಗಿ ಅರ್ಥ ತಿಳಿದಿಲ್ಲ.

**386) ವಿದ್ಯಾಲಯಕ್ಕೆ ಬಡಿ (ಶಾಲೆ) ಎಂದು ಏಕೆ ಹೆಸರು ಬಂದಿದೆ?**

ಉ. ಪರಮಾತ್ಮನಿಗೆ ವ್ಯತಿರೇಕವಾಗಿರುವುದು ಪ್ರಕೃತಿ. ಪರಮಾತ್ಮ ವಿದ್ಯೆಯನ್ನು ತಿಳಿಸುವುದು ಗುಡಿ ಯಾದರೆ ಪ್ರಪಂಚ ವಿದ್ಯೆಯನ್ನು ತಿಳಿಸುವುದು ಶಾಲೆ. ದೇವರಿಗೆ ವ್ಯತಿರೇಕವಾಗಿರುವುದು ಮಾಯ. ಹಾಗೇ ಗುಡಿಗೂ ಶಾಲೆಗೂ ಎಷ್ಟೋ ವ್ಯತ್ಯಾಸವಿದೆ. ಗುಡಿಯಲ್ಲಿರುವುದು ಪರಮಾತ್ಮ ಚಿಹ್ನೆಗಳಾದರೆ, ಶಾಲೆಯಲ್ಲಿರುವುದೆಲ್ಲಾ ಪ್ರಕೃತಿ ಚಿಹ್ನೆಗಳೇ ಎಂದು ತಿಳಿಯಬೇಕು. ಗುಡಿ ಎಂದರೆ ಗುಂಡಾಕಾರ, ಶಾಲೆ ಎಂದರೆ ವಕ್ರವಿಲ್ಲದ್ದು. ಗುಂಡಾಕಾರಕ್ಕೆ ಮೊದಲು ಕೊನೆ ಇರುವುದಿಲ್ಲ. ಶಾಲೆಗೆ ಮೊದಲು ಕೊನೆ ಇರುತ್ತವೆ.

ವಕ್ರವಿಲ್ಲದ ಕಟ್ಟೆಗೆಯನ್ನು ಬಡಿ ಎನ್ನುವುದು ಕೆಲವು ಕಡೆ ಇದೆ. ಮೊದಲು ಚೆನ್ನಾಗಿರುವ ಕಟ್ಟಿಗೆಯನ್ನು ಬಡಿ ಎನುತ್ತಿದ್ದರು ಅದು ಕೊನೆಗೆ ಬಡೆ ಆಗಿದೆ. ಪ್ರಸ್ತುತ ಕಾಲದಲ್ಲಿ ಅ ಪದವೂ ಸಹ ಕಣ್ಮರೆಯಾಗಿದೆ. ಗುಡಿಗೆ ವಿರುದ್ಧವಾದದು ಶಾಲೆ ಎಂದು ನೆನಪಿಟ್ಟುಕೊಳ್ಳಬೇಕು.

**387) ಜೀತವೆಂದರೆ ಏನು?**

**ಉ.** ಜೀವನವನ್ನು ಸಾಗಿಸುವುದಕ್ಕೆ ಉಪಯೋಗವಾಗುವುದೆನ್ನುವ ವಿವರ. ಜೀವನವನ್ನು ಸಾಗಿಸುವುದಕ್ಕೆ ಆಹಾರ ಪದಾರ್ಥಗಳು ಬೇಕಾಗಿವೆ ಆಹಾರ ಪದಾರ್ಥಗಳನ್ನು ಹೊಂದಿಸಿ ಜೀವನವನ್ನು ಸಾಗಿಸುವುದಕ್ಕೆ ಕೆಲಸಕ್ಕೆ ಬರುವ ಫಲಿತವನ್ನು ಜೀತ ಎನ್ನುತ್ತಿದ್ದೇವೆ. ಜೀತವನ್ನು ಪೂರ್ವದಲ್ಲಿ ಜೀವಿತ ಎಂದು ಸಹ ಕರೆಯುತ್ತಿದ್ದರು. ಈಗ ಕೇವಲ ಜೀತ ಎಂದು ಮಾತ್ರ ಕರೆಯುತ್ತಿದ್ದೇವೆ.

**388) ಉದ್ಯೋಗವೆಂದರೆ ಏನು?**

**ಉ.** ಉದ್ಯೋಗವೆಂದರೆ ಯೋಗ ವಿಲ್ಲದ್ದು ಅಥವಾ ಯೋಗ ವಲ್ಲದ್ದು ಎಂದು ಅರ್ಥ. ಜೀವನಕ್ಕೋಸ್ಕರ ಎಂದರೆ ಬದುಕುವುದಕ್ಕೋಸ್ಕರ ಮಾಡುವ ಕೆಲಸವನ್ನು ಉದ್ಯೋಗ ಎನ್ನುತ್ತಿದ್ದೇವೆ. ಉದ್ಯೋಗ ಖಾಲೀ ಯೋಗದಿಂದ ಹುಟ್ಟಿದೆ ಎಂದು ತಿಳಿಯಬೇಕು. ಜೀವನಕ್ಕೋಸ್ಕರ ಮಾಡುವುದು ಯೋಗವಲ್ಲದ ಉದ್ಯೋಗ. ಮೋಕ್ಷಕ್ಕೋಸ್ಕರ ಮಾಡುವುದು ಉದ್ಯೋಗವಲ್ಲದ ಯೋಗ. ಯೋಗ ಉದ್ಯೋಗಗಳ ಮಧ್ಯೆ ತಾರತಮ್ಯ ತಿಳಿದರೆ ಮೋಕ್ಷ ಜೀವನಗಳ ಮಧ್ಯೆ ತಾರತಮ್ಯಗಳು ಸಹ ತಿಳಿಯುವುದು. ಜೀವನಕ್ಕೆ ಉಪಯೋಗಪಡುವುದು ಉದ್ಯೋಗ. ಮೋಕ್ಷಕ್ಕೆ ಉಪಯೋಗಪಡುವುದು ಯೋಗ. ಉದ್ಯೋಗ ಪ್ರಪಂಚ ಸಂಬಂಧವಾದದ್ದು, ಯೋಗ ಪರಮಾತ್ಮ ಸಂಬಂಧವಾದದ್ದು.

# ಮೊದಲನೆಯ ಭಾಗ ಮುಕ್ತಾಯ

# ಆಧ್ಯಾತ್ಮಿಕ ಪ್ರಶ್ನೆಗಳು – ಉತ್ತರಗಳು

## ಎರಡನೆಯ – ಭಾಗ

ಪ್ರಶ್ನೆ ಉತ್ತರಗಳಲ್ಲಿ ಎರಡನೆಯ ಭಾಗ ಇಲ್ಲಿಂದ ಪ್ರಾರಂಭವಾಗುತ್ತಿದೆ. ಮೊದಲನೆಯ ಭಾಗವೆಲ್ಲ ಓದುಗರ ಪ್ರಶ್ನೆಗಳಿಗೆ ನಮ್ಮ ಉತ್ತರಗಳಿದ್ದರೆ ಎರಡನೆಯ ಭಾಗದಲ್ಲಿ ನಾವು ಜ್ಞಾನ ಪರೀಕ್ಷೆ ನಿಮಿತ್ತವಾಗಿ ಕೇಳಿರುವ ಪ್ರಶ್ನೆಗಳು ಇವೆ. **"ಪ್ರಬೋಧ ಸೇವಾಸಮಿತಿ"** ಎನ್ನುವ ಸಂಘಗಳು ಅಲ್ಲಲ್ಲಿ ಆಂಧ್ರಪ್ರದೇಶದಲ್ಲಿ ಇವೆ. ಆ ಸಂಘಗಳಲ್ಲಿನ ಸದಸ್ಯರಿಗೆ ನಾವು ಹಾಗಾಗ ಜ್ಞಾನ ಪರೀಕ್ಷೆಗಳು ನಿರ್ವಹಿಸುತ್ತೇವೆ. ಹಾಗೆ ನಿರ್ವಹಿಸಿದ ಪ್ರಶ್ನೆಗಳನ್ನು ಆ ತಿಂಗಳೊಂದಿಗೆ ನಿರ್ವಹಿಸಿದ ಸ್ಥಳವನ್ನು ಸಹ ತಿಳಿಸುತ್ತಾ ಈಗ ಎರಡನೆಯ ಭಾಗದಲ್ಲಿ ಕೊಡುತ್ತಿದ್ದೇವೆ. ಈ ಎರಡನೆಯ ಭಾಗದಲ್ಲಿ ಪ್ರಶ್ನೆಗಳು ನಮ್ಮವೆ, ಉತ್ತರಗಳು ನಮ್ಮವೆ ಇರುತ್ತವೆಂದು ತಿಳಿಯಬೇಕು. ನಾವು ಕೇಳುವ ಪ್ರಶ್ನೆಗಳು ಎಷ್ಟು ಉದ್ದ ಚಿಕ್ಕವು ಇದ್ದರೂ ಉತ್ತರ ಮಾತ್ರ ಒಂದು ಪದ ಅಥವಾ ಒಂದು ವಾಕ್ಯದಲ್ಲಿ ಇರಬೇಕೆನ್ನುವುದು ನಿಯಮ. ಆ ವಿಧವಾಗಿಯೆ ಪ್ರಶ್ನೆ ಕೆಳಗೆ ಉತ್ತರ ಸಣ್ಣ ಪದ ಅಥವಾ ವಾಕ್ಯವಾಗಿ ಕೊಟ್ಟು ನಂತರ ಪೂರ್ತಿ ವಿವರವನ್ನು ಕೆಳಗೆ ನೀಡಿದ್ದೇವೆ.

## ಜ್ಞಾನ ಪರೀಕ್ಷೆ

**ತಾಡಿಪತ್ರಿ** **ದಿನಾಂಕ – 28–01–1986**

**389. (1) ಗುರುದ್ರೋಹ ಮಾಡಿದ ಶಿಷ್ಯನಿಗೆ ಕಣ್ಣಿಗೆ ಕಾಣಿಸದ ಫಲಿತ ಏನಿರುತ್ತದೆ?**

ಉ. ಕ್ಷಮಿಸಲಾರದ ಪಾಪ.

**ವಿವರ :** ಒಂದು ಕೆಲಸ ಮಾಡಿದಾಗ ಅದರಲ್ಲಿ ಕಣ್ಣಿಗೆ ಕಾಣಿಸದ ಫಲಿತವಾದ ಪಾಪವೊ ಅಥವಾ ಪುಣ್ಯವೊ ಇರುತ್ತದೆ. ಭೂಮಿಮೇಲೆ ಹುಟ್ಟಿರುವ ಪ್ರತಿ ಒಬ್ಬರಿಗೂ ಪ್ರತಿ ನಿತ್ಯ ಕರ್ಮಗಳು ಅಂಟಿಕೊಳ್ಳುವುದು ಸಹಜ. ಪಾಪ ಪುಣ್ಯ ಎನ್ನುವ ಕರ್ಮಗಳಿಗೆ ಸಣ್ಣ ದೊಡ್ಡ ಎಂದಾಗಲಿ, ಬಡವ ರಾಜನೆಂದಾಗಲಿ ತಾರತಮ್ಯಗಳಿರುವುದಿಲ್ಲ. ಪ್ರಪಂಚ ಪರವಾಗಿ ಸಣ್ಣ ತಪ್ಪಿಗಾದರೂ ಅದಕ್ಕೆ ತಕ್ಕಷ್ಟು ಪಾಪವಿರುತ್ತದೆ. ಅಂತಹದರಲ್ಲಿ ಸಾಕ್ಷಾತ್ತು ಗುರುವಿಗೇ ದ್ರೋಹ ಮಾಡಿದವನಿಗೆ ಎಷ್ಟು ಪಾಪಬರುತ್ತದೋ ಹೇಳಲಾರೆವು. ಪಾಪ ಬರುವುದಕ್ಕೆ ಕಾರಣವಾದ ತಪ್ಪುಗಳಲ್ಲಿ ಸಹ ಎರಡು ವಿಧಗಳು ಕ್ಷಮಿಸಲ್ಪಡುವವು, ಕ್ಷಮಿಸಲಾರದ

ಪಾಪಗಳು ಇರುವವು. ಒಂದು ಪ್ರಪಂಚ ಸಂಬಂಧವಾದ ತಪ್ಪುಗಳು ಎರಡು ಆಧ್ಯಾತ್ಮಿಕ ಸಂಬಂಧವಾದವುಗಳು ಅಥವಾ ದೈವ ಸಂಬಂಧವಾದ ತಪ್ಪುಗಳು, ಎಂದು ಹೇಳಬಹುದು. ಪ್ರಪಂಚ ಸಂಬಂಧವಾದ ಎಷ್ಟು ದೊಡ್ಡ ಪಾಪವನ್ನಾದರೂ ಪರಮಾತ್ಮ ಕ್ಷಮಿಸುವನು. ಪರಮಾತ್ಮನನ್ನು ಶರಣು ಬೇಡಿದರೆ ಅವನ ಪಾಪವನ್ನು ಕ್ಷಮಿಸಬಲ್ಲನು. ದೈವ ಸಂಬಂಧವಾದ ಎಷ್ಟು ಸಣ್ಣ ತಪ್ಪನ್ನಾದರೂ ದೈವದಿಂದ ಕ್ಷಮಿಸಲ್ಪಡುವುದಿಲ್ಲ. ಗುರುದ್ರೋಹ ದೈವ ಸಂಬಂಧವಾದದ್ದು ಆದ್ದರಿಂದ ದೈವದಿಂದ ಕ್ಷಮಿಸಲಾರದ ಪಾಪ ಸೇರುತ್ತದೆ. ಆ ಪಾಪ ಅನುಭವಕ್ಕೆ ಬಂದಾಗ ಭರಿಸಲಾರದೆ ಭಗವಂತನನ್ನು ಶರಣು ಬೇಡಿದರೂ, ಭಗವಂತನ ಸಂಕಲ್ಪಕ್ಕೂ ಸಹ ಕ್ಷಮಿಸಲಾರದೆ ತಪ್ಪದೆ ಅನುಭವಿಸಬೇಕಾಗಿ ಬರುತ್ತದೆ. ಕ್ಷಮಿಸಲಾರದ ಪಾಪಗಳ ಬಗ್ಗೆ ಬಹಳ ಜಾಗ್ರತೆಯಾಗಿ ಇರಬೇಕು.

**390. (2) ಉಪದೇಶವನ್ನು ಹೊಂದಿದ ಶಿಷ್ಯನಿಗೆ ಜ್ಞಾನಶಕ್ತಿ ಎಲ್ಲಿಂದ ಲಭಿಸುತ್ತದೆ?**

ಉ. ಗುರುವಿನಿಂದ.

**ವಿವರ :** ಗುರುವು ಸಂಪೂರ್ಣ ಜ್ಞಾನಕೇಂದ್ರ. ಗುರುವು ಜೀವಾತ್ಮನೇ ಅಲ್ಲದೆ ಆತ್ಮವೂ ಪರಮಾತ್ಮವೂ ಆಗುತ್ತಾನೆ. ಶಿಷ್ಯನು ಜ್ಞಾನಶಕ್ತಿಯನ್ನು ಅಥವಾ ಜ್ಞಾನಾಗ್ನಿಯನ್ನು ಹೊಂದುತ್ತಿದ್ದಾನೆಂದರೆ ಅದು ಪರಮಾತ್ಮ ಸ್ಥಾನದವರೆಗು ಇರುವ ಗುರುವುನಿಂದಲೆ ಲಭಿಸುತ್ತಿರುತ್ತದೆ. ಎಷ್ಟೋ ಅಕ್ಕಿಯ ಕಾಳುಗಳಲ್ಲಿ ಬತ್ತದ ಕಾಳು ಒಂದು ಇದ್ದಹಾಗೆ ಭೂಮಿ ಮೇಲಿರುವ ಎಷ್ಟೋ ಜನ ಗುರುಗಳೆನ್ನುವ ಅವರಲ್ಲಿ ಒಬ್ಬನೇ ಗುರುವು ಇರುತ್ತಾನೆ. ಆ ಗುರುವಿನಿಂದ ಹೊಂದುವುದೇ ಉಪದೇಶ, ಆ ಗುರುವಿನಿಂದ ಬರುವುದೇ ಜ್ಞಾನಶಕ್ತಿ ಎಂದು ತಿಳಿಯಬೇಕು. ಉಳಿದವರೆಲ್ಲಾ ಗುರುಗಳು ಅಲ್ಲವೆ ಎನ್ನುವ ಪ್ರಶ್ನೆಗೆ ಎರಡು ಒಂದೇ ಜಾತಿ ಆದರೂ ಅಕ್ಕಿಯಕಾಳು ಬತ್ತದಕಾಳು ಬೇರೆ ಬೇರೆ ಯಾದಂತೆ ಇಬ್ಬರು ಜ್ಞಾನವನ್ನು ಹೇಳುವವರೆ ಆದರೂ ಗುರುವು ಬೇರೆ ಬೋಧಕನು ಬೇರೆ. ಕಣ್ಣಿಂದ ನೋಡಿದ, ಕಿವಿಯಿಂದ ಕೇಳಿದ ವಿಷಯವನ್ನು ಹೇಳುವವನು ಬೋಧಕನು, ಕಣ್ಣಿಂದ ನೋಡದ, ಕಿವಿಯಿಂದ ಕೇಳದ ವಿಷಯವನ್ನು ಹೇಳುವವನು ಗುರುವು.

**391. (3) ಶಿಷ್ಯನಿಗೆ ಕಳ್ಳತನ ಹತ್ಯೆ ಮಾಡೆಂದು ಹೇಳುವ ಗುರುವು ಗುರು ಪದಕ್ಕೆ ಅರ್ಹನಾ?**

ಉ. ಅರ್ಹನೆ

**ವಿವರ :** ಕೆಲಸಗಳು ಮಾಡುವಾಗ ಕರ್ಮ ಅಂಟದ ವಿಧಾನವನ್ನು ಬೋಧಿಸುವವನೆ ಗುರುವು. ಕೆಟ್ಟ ಕೆಲಸಗಳಾಗಲಿ ಒಳ್ಳೆಯ ಕೆಲಸಗಳಾಗಲಿ ಕರ್ಮ ರೀತ್ಯ ನಿರ್ಣಯವಾಗಿರುವವೆಂದು ತಿಳಿದು, ಭವಿಷ್ಯತ್ತಿನಲ್ಲಿ ಅವು ಮಾಡದೆ ಇರಬೇಕೆಂದರೆ, ಮೊದಲೇ ಕರ್ಮವನ್ನು ಅಂಟಿಸಿಕೊಳ್ಳಬಾರದೆನ್ನುವ ಪದ್ಧತಿಯ ಪ್ರಕಾರ ನಡೆಯುವ ಕೆಲಸ ಯಾವುದಾದರು ಮಾಡೆಂದು, ಅದರಲ್ಲಿ ಬರುವ ಕರ್ಮದಿಂದ ತಪ್ಪಿಸಿಕೋ ಎಂದು ಹೇಳುವವನು ಗುರುವು. ಶ್ರೀಕೃಷ್ಣನು ಗೀತೆಯನ್ನು ಬೋಧಿಸುವಾಗ ಅರ್ಜುನನಿಗೆ ಯುದ್ಧದಲ್ಲಿ ಹತ್ಯೆಗಳೆ ಮಾಡೆಂದಿದ್ದಾನೆಂದು ಮರೆಯಬಾರದು. ಒಂದು ಶ್ಲೋಕದಲ್ಲಿ ಯಾರ ಭಾವನೆಯಲ್ಲಿ ಅಹಂಕಾರ ಇಲ್ಲವೊ, ಅವನು ಇತರರನ್ನು ಸಾಯಿಸಿದರೂ ಅವನು ಹಂತಕನಲ್ಲ ಎಂದು ಹೇಳಿದ್ದಾನೆಂದು ಸಹ ಮರೆಯಬಾರದು. ಗುರುವು ಕಳ್ಳತನ ಹತ್ಯೆ ಮಾಡೆಂದು ಹೇಳಿದರು, ಆ ಕರ್ಮಗಳಿಂದ ಹೊರ ಬೀಳುವ ವಿಧಾನವನ್ನು ಬೋಧಿಸಿರುತ್ತಾನೆ. ಆದ್ದರಿಂದ ಗುರುಪದಕ್ಕೆ ಅರ್ಹನೆ ಆಗುತ್ತಾನೆಂದು ಹೇಳಬಹುದು.

**392. (4) ಒಬ್ಬ ಸಾಧಾರಣ ಮನುಷ್ಯ ಗುರುವನ್ನು ಹೇಗೆ ಗುರುತಿಸುತ್ತಾನೆ?**

ಉ. ಬೋಧಿಸುವ ಧರ್ಮಗಳನ್ನನುಸರಿಸಿ.

**ವಿವರ :** ಭೂಮಿ ಮೇಲೆ ಎಷ್ಟೋ ಸ್ವಾಮೀಜೀಗಳು ಗುರುಗಳ ಹಾಗೆಯೇ ಇದ್ದಾರೆ. ಹಾಗೆಂದು ಎಲ್ಲರನ್ನು ಗುರುಗಳೆಂದುಕೊಳ್ಳುವುದು ತಪ್ಪು. ಗುರುವನ್ನು ಗುರುತಿಸುವುದಕ್ಕೆ ಒಂದೇ ಆಧಾರವಿದೆ. ಯಾರಾದರೆ ಗುರುವೋ ಆತನು ಕೇವಲ ಆತ್ಮ ಧರ್ಮಗಳನ್ನೇ ಬೋಧಿಸುತ್ತಿರುತ್ತಾನೆ. ಪುರಾಣಗಳಿಂದ, ಕಲ್ಪಿತ ಕಥೆಗಳಿಂದ ಯಾವ ವಿಷಯವನ್ನು ತೆಗೆದುಕೊಳ್ಳದೆ, ಅವುಗಳಿಗೆ ವಿರುದ್ಧಧೋರಣೆಯಾದ ಶಾಸ್ತ್ರ ಬದ್ಧ ಧರ್ಮಗಳನ್ನೇ ಬೋಧಿಸುವವನು ಗುರುವು. ಆ ವಿಧವಾಗಲ್ಲದೆ ಬೆಳಿಗ್ಗೆ ಒಂದು ಗಂಟೆ ಭಗವದ್ಗೀತೆ, ಸಂಜೆ ಒಂದು ಗಂಟೆ ಪುರಾಣ ಕಾಲ ಕ್ಷೇಪ ಹೇಳುವವನು ಎಷ್ಟು ದೊಡ್ಡ ಸ್ವಾಮೀಜೀಯಾದರು ಗುರುವು ಅಲ್ಲ. ಬೆಳಿಗ್ಗೆ ಗಾಯಿತ್ರಿ, ಸಂಜೆ ಸಂಧ್ಯಾವಂದನೆ ಮಾಡುವವನು ಗುರುವು ಅಲ್ಲ. ಗುರುವು ಆರಾಧನೆಗಳು ಮಾಡುವವನಲ್ಲ. ಮುಖ್ಯವಾಗಿ ಎಲ್ಲಿಯಾದರೆ ಯಾರಿಗು ತಿಳಿಯದೆ ಹೋದ ಧರ್ಮಗಳು ತಿಳಿಯುತ್ತವೆಯೋ, ಅಲ್ಲಿಯೇ ಗುರುವು ಇದ್ದಾನೆಂದು ಗ್ರಹಿಸಬೇಕು. ಮದುವೆ ಆಗದವನೆಂದು, ಕಾಷಾಯ ವಸ್ತ್ರಗಳನ್ನು ಧರಿಸುವವನೆಂದು, ವಿಭೂತಿ ನಾಮಗಳಿಂದ ಇರುವವನೇ ಗುರುವೆಂದುತಿಳಿದುಕೊಳ್ಳಬಾರದು. ಗುರುವು ಹೇಗಾದರೂ ಕಾಣಿಸಬಹುದು. ಆತನು ಎಲ್ಲದಕ್ಕು ಅತೀತನೆಂದು ತಿಳಿಯಬೇಕು.

**393. (5) ಕಾಮ ಗುಣದನಂತರ ಮನುಷ್ಯನನ್ನು ಯಾವ ಗುಣ ಹೆಚ್ಚಾಗಿ ಪೀಡಿಸುತ್ತದೆ?**

ಉ. ಮೋಹ ಗುಣ.

**ವಿವರ:** ಕಾಮ ಎಂದರೆ ಬಹಳ ಜನರು ತಪ್ಪಾಗಿ ಅರ್ಥ ಮಾಡಿಕೊಳ್ಳುವುದು ನಡೆಯುತ್ತಿದೆ. ಕಾಮ ಎಂದರೆ ಕೇವಲ ಆಸೆ ಎನ್ನುವ ಗುಣವೆಂದು ಅರ್ಥ ಮಾಡಿಕೊಳ್ಳಬೇಕು. ಪ್ರಪಂಚದಲ್ಲಿ ಮನುಷ್ಯನು ಹೆಚ್ಚಾಗಿ ಎರಡು ಗುಣಗಳಿಂದಲೆ ದುಃಖಪಡುತ್ತಿದ್ದಾನೆಂದು ಹೇಳಬಹುದು. ಹಾಗೇ ಮನುಷ್ಯನನ್ನು ಹೆಚ್ಚಾಗಿ ಅಂಟಿಕೊಳ್ಳುವ ಗುಣಗಳು ಮೂರಿವೆ. ಅದರಲ್ಲಿ ಕಾಮ ಸಹ ಇದೆ. ಅಂಟಿಕೊಳ್ಳುವ ಗುಣಗಳು ಬೇರೆ, ಬಾಧಿಸುವ ಗುಣಗಳು ಬೇರೆಂದು ತಿಳಿಯಬೇಕು. ಕಾಮ, ಕ್ರೋದ ಅಸೂಯೆ ಗುಣಗಳು ಹೆಚ್ಚಾಗಿ ಅಂಟಿಕೊಂಡರೆ, ಕಾಮ ಮೋಹ ಗುಣಗಳಿಂದ ಬಹಳ ದುಃಖ ಇದೆ. ಪೀಡಿಸುವ ಗುಣಗಳು ಎಂದರೆ ಬಾಧಿಸುವ ಗುಣಗಳು ಕಾಮ, ಮೋಹ ಎಂದು ಹೇಳಬಹುದು. ನನ್ನದು, ನನ್ನವರು ಎನ್ನುವ ಭಾವನೆ ಕಲ್ಪಿಸುವುದು ಮೋಹಗುಣ. ಹಾಗೇ ಪ್ರತಿಯೊಂದರಮೇಲೆ ಆಸೆಯನ್ನು ಕಲ್ಪಿಸುವುದು ಕಾಮ. ಭೂಮಿ ಮೇಲೆ ಮನುಷ್ಯನಿಗೆ ಎಲ್ಲಿ ನೋಡಿದರು ಆಸೆಯಿಂದ, ನನ್ನದು ಎನ್ನುವುದರಿಂದ, ಬಹಳ ದುಃಖವಾಗುತ್ತಿದೆ. ನನ್ನದು ನನ್ನವರು ಎನ್ನುವುದು ದೂರವಾದಾಗ, ಆಸೆ ನೆರವೇರದಿರುವಾಗ ಹೇಳಲಾರದಷ್ಟು ದುಃಖವಾಗುತ್ತದೆ. ಆದ್ದರಿಂದ ಅಸೆ ನಂತರ ಮೋಹ, ಮೋಹ ನಂತರ ಆಸೆ ಮನುಷ್ಯನನ್ನು ಹೆಚ್ಚಾಗಿ ಬಾಧಿಸುತ್ತಿವೆ ಎಂದು ತಿಳಿಯುತ್ತದೆ.

**394. (6) ಮಾಯೆ ಎಂದರೆ ಏನು?**

ಉ. ಗುಣಗಳ ಸಮ್ಮೇಳನ.

**ವಿವರ : "ಗುಣಮಯೀ ಮಮ ಮಾಯಾ"** ಎಂದು ಭಗವದ್ಗೀತೆಯಲ್ಲಿ ಭಗವಂತನು ತಿಳಿಸಿದ್ದಾನೆ. ಇದನ್ನನುಸರಿಸಿ ಶರೀರದಲ್ಲಿರುವ ಆರು ಕೆಟ್ಟವು, ಆರು ಒಳ್ಳೆಯ ಗುಣಗಳ ಸಮ್ಮಿಲನವನ್ನೆ ಮಾಯೆ ಎನ್ನುತ್ತಿದ್ದೇವೆ. ಮಾಯೆ ಎಂದರೆ ನಮ್ಮ ಶರೀರದಲ್ಲೇ ಇದೆಯೆಂದು, ನಾವು ಮಾಯೆಯಲ್ಲೇ ಇದ್ದೇವೆಂದು ತಿಳಿದು, ನಮ್ಮ ಶರೀರದೊಳಗಿನ ಗುಣಗಳನ್ನು ಬುದ್ಧಿಯಿಂದ ತಿಳಿಯಬೇಕು. ಯಾರು ಏನು ಹೇಳಿದರು ಗುಣಗಳ ರೂಪವಾಗಿ ಇರುವ ಮಾಯೆಯನ್ನು ತಿಳಿಯುವುದು ದುಸ್ಸಾಧ್ಯವೆಂದು ಗೀತೆಯಲ್ಲಿ ಸಹ ಹೇಳಿರುವುದಾಗಿದೆ. ಯಾರೂ ತಿಳಿಯದಹಾಗೆ ನಮ್ಮಲ್ಲಿ ಕೆಲಸ ಮಾಡಿಸುವುದೇ ಮಾಯೆಯೊಂದರ ಕೆಲಸ. ದೇವರಿಂದ ತಯಾರುಮಾಡಿದ ಮಾಯೆ, ದೇವರ ನಂತರ ಇರುವುದು ಮಾಯೆಯೇ.

ಮಾಯೆಯನ್ನು ತಿಳಿದ ನಂತರವೇ ದೇವರನ್ನು ತಿಳಿಯಬಹುದು. ದೇವರನ್ನು ವಿಶ್ವಾಸಿಸಿದ ನಂತರವೇ ಮಾಯೆಯನ್ನು ಜಯಿಸಬಹುದು. ಆದ್ದರಿಂದ ಮಾಯೆ ದೇವರಷ್ಟು ಪ್ರಾಮುಖ್ಯತೆಯನ್ನು ಹೊಂದಿದೆ.

**395. (7) ಮನಸ್ಫೂರ್ತಿಯಾಗಿ ನಂಬಿದ ಶಿಷ್ಯನನ್ನು ಗುರುವು ಯಾವ ವಿಧವಾಗಿ ನೋಡಬೇಕು?**

ಉ. ಶಿಷ್ಯನ ಯೋಗ ಕ್ಷೇಮಗಳನ್ನು ಗುರುವೇ ನೋಡಬೇಕು.

**ವಿವರ:** ಮನಸ್ಫೂರ್ತಿಯಾಗಿ ನಂಬಿದವನನ್ನು ಗುರು **"ಯೋಗ ಕ್ಷೇಮಂ ವಹಾಮ್ಯಹಂ"** ಎಂದು ಭಗವದ್ಗೀತೆಯಲ್ಲಿ ಹೇಳಿದಹಾಗೆ ಗುರುವು ಶಿಷ್ಯನ ಯೋಗ ಕ್ಷೇಮವನ್ನು ವಹಿಸಬೇಕು. ಯೋಗವೆಂದರೆ ಯೋಗವೆಂದು, ಕ್ಷೇಮವೆಂದರೆ ಊಟ, ಬಟ್ಟೆ, ಆರೋಗ್ಯವೆಂದು ತಿಳಿದುಕೊಳ್ಳಬಾರದು. ಯೋಗವೊಂದರ ಕ್ಷೇಮ ಎಂದು ಅರ್ಥ ಮಾಡಿಕೊಳ್ಳಬೇಕು. ಶಿಷ್ಯನು ಯೋಗದಲ್ಲಿ ಅನಾರೋಗ್ಯವಾಗಿ ಯೋಗ ಬ್ರಷ್ಟನಾಗದಂತೆ ಗುರುವು ನೋಡಿಕೊಳ್ಳಬೇಕೆಂದು ಅರ್ಥ. ವಾಸ್ತವ ಧರ್ಮಗಳನ್ನು ಬೋಧಿಸಿ, ಶಿಷ್ಯನನ್ನು ಯೋಗಿಯಾಗಿ ಮಾಡಿ, ಆ ಯೋಗ ಒಳ್ಳೆ ಬಲವಾಗಿ ಇರುವಹಾಗೆ, ಬಲಹೀನ ಆಗದಹಾಗೆ ನೋಡುವುದು ಗುರುವಿನ ಜವಾಬ್ದಾರಿ. ಆದ್ದರಿಂದಲೆ ಗೀತೆಯಲ್ಲಿ ನನ್ನನ್ನು ನಂಬಿದವನ ಯೋಗಕ್ಷೇಮವನ್ನು ನಾನೇ ವಹಿಸುತ್ತೇನೆಂದು ಅಲ್ಲಿ ಅರ್ಜುನನಿಗೆ ತಿಳಿಸಿದ್ದಾನೆ.

**396. (8) ನಿನ್ನಲ್ಲಿ ಪ್ರಪಂಚ ಸಂಬಂಧವಾದದ್ದು, ಪರಮಾತ್ಮ ಸಂಬಂಧವಾದದ್ದು ಯಾವುದು ಇದೆ?**

ಉ. ಪ್ರಪಂಚ ಸಂಬಂಧವಾದ ಮಾಯೆ, ಪರಮಾತ್ಮ ಸಂಬಂಧವಾದ ಜ್ಞಾನ ಎರಡು ಇವೆ.

**ವಿವರ :** ಎಲ್ಲರಲ್ಲಿ ಪ್ರಪಂಚ ಸಂಬಂಧ ಮಾಯೆ ತಪ್ಪದೆ ಇರುತ್ತದೆ. ಕೆಲವರಲ್ಲಿ ಮಾತ್ರ ಪರಮಾತ್ಮ ಸಂಬಂಧ ಜ್ಞಾನವಿರುತ್ತದೆ. ಮಾಯೆ ಹುಟ್ಟಿದಾಗಿನಿಂದ ಇರುತ್ತದೆ. ಜ್ಞಾನ ಮಧ್ಯದಲ್ಲಿ ಬರಬಹುದು, ಬಾರದೆ ಹೋಗಬಹುದು. ಆದ್ದರಿಂದ ಎಲ್ಲರಲ್ಲಿ ಜ್ಞಾನವಿರುತ್ತದೆನ್ನುವ ನಂಬಿಕೆ ಇಲ್ಲ. ಕೆಲವರಲ್ಲಿ ಯಾವ ಜ್ಞಾನವಿರುವುದಿಲ್ಲ. ಬಹು ಸ್ವಲ್ಪ ಜನರಲ್ಲಿ ಜ್ಞಾನ ಇರುತ್ತದೆ. ಎಲ್ಲರಲ್ಲಿಯೂ ಮಾಯೆ ಮಾತ್ರ ತಪ್ಪದೆ ಇರುತ್ತದೆ. ಕೆಲವರಲ್ಲಿ ಜ್ಞಾನವಿದ್ದರೂ ಮಧ್ಯದಲ್ಲಿ ಬಂದಿರುವ ಜ್ಞಾನಕ್ಕಿಂತಲೂ ಮೊದಲು ಬಂದಿರುವ ಮಾಯೆ ಬಲವಾಗಿ ಇರುತ್ತದೆ.

**397.** **(9) ನೀನು ಗುರುವನ್ನು ಆಶ್ರಯಿಸಿದ್ದು ಏಕೆ?**

ಉ. ಆತ್ಮ ಜ್ಞಾನ ತಿಳಿಯುವುದಕ್ಕೆ.

**ವಿವರ :** ಭೂಮಿ ಮೇಲೆ ಎಷ್ಟೋ ಜನ ಗುರುಗಳಾಗಿ ಚಲಾವಣೆಯಾಗುತ್ತಿರುವಾಗ, ಕೆಲವರು ಕಾಲಜ್ಞಾನವನ್ನು ಅಂದರೆ ಭವಿಷ್ಯತ್ತನ್ನು ಹೇಳುವವರಾಗಿ, ಕೆಲವರು ಪುರಾಣಗಳು ಹೇಳುವವರಾಗಿ ಕೆಲವರು ಮೌನವ್ರತವನ್ನು ಮಾಡುವವರಾಗಿ, ಕೆಲವರು ಬೇಯಿಸಿದ ಅನ್ನವನ್ನು ತಿನ್ನದೆ ಹಣ್ಣು ಹಾಲು ಹೆಸರುಬೇಳೆ ತಿನ್ನುವವರಾಗಿ, ಕೆಲವರು ಮತ ಭಕ್ತಿಯನ್ನು, ಮತ್ತೆ ಕೆಲವರು ಮೂಢ ಮತ ಭಕ್ತಿ (ತಾಮಸ ಭಕ್ತಿ) ಯನ್ನು ಬೋಧಿಸುವವರಾಗಿ, ಕೆಲವರು ಅಚಲವೆಂದು, ಕೆಲವರು ದಿಗಂಬರರೆಂದು ಹೀಗೆ ಎಷ್ಟೋ ಜನ ಗುರುಗಳಾಗಿ ಚಲಾವಣೆ ಆಗುತ್ತಿದ್ದಾರೆ. ಕೊನೆಗೆ ಕವಡೆ ಹಾಕಿ ನಿನಗೆ ಹೀಗೇ ನಡೆಯುತ್ತದೆಂದು ಹೇಳುವವನು ಸಹ ಗುರುವಾಗಿ ಇರುವ ಈ ಕಾಲದಲ್ಲಿ, ಗುರುವನ್ನು ಏಕೆ ಆಶ್ರಯಿಸಬೇಕೋ ಆಶ್ರಯಿಸುವ ಶಿಷ್ಯರಿಗೇ ತಿಳಿಯದೆ ಹೋಗಿದೆ. ಎಷ್ಟೋ ಗುರುಗಳನ್ನು ಆಶ್ರಯಿಸಿದವರೆಲ್ಲರು ಅವರ ಗುರುವಿನ ಹಾಗೆ ಜ್ಯೋತಿಷ್ಯ ಮಲ್ಲಯ್ಯನಾಗಿಯೋ, ಪುರಾಣಗಳ ಪೂರ್ಣಯ್ಯನಾಗಿಯೋ, ಮದುವೆ ಇಲ್ಲದ ಬ್ರಹ್ಮಚಾರಿಯಾಗಿಯೋ, ಅಪಕ್ವಾಹಾರವನ್ನು ತಿನ್ನುವ ಸ್ವಾಮಿಯಾಗೋ ತಯಾರಾಗುತ್ತಿದ್ದಾರೆ. ಯಾರು ಹೇಗೆ ಹೋದರು ನಾವು ಆತ್ಮ ಜ್ಞಾನ ತಿಳಿಯುವುದಕ್ಕೋಸ್ಕರವೆ ಗುರುವನ್ನು ಆಶ್ರಯಿಸಬೇಕೆಂದು ಆತ್ಮ ಜ್ಞಾನಕ್ಕೆ ಸಂಬಂಧಿಸಿದ ಗುರುವಿನ ಹತ್ತಿರವೇ ಸೇರಬೇಕೆಂದು ತಪ್ಪದೆ ತಿಳಿಯಬೇಕು.

**398.** **(10) ಗುರು ಸೇವೆಗಳು ಎಷ್ಟು ಅವು ಯಾವವು?**

ಉ. ನಾಲ್ಕು. 1. ಸ್ಥಾನ, 2. ಅಂಗ, 3. ಭಾವ, 4. ಆತ್ಮ ಸೇವೆಗಳು.

**ವಿವರ :** ಇವುಗಳನ್ನು ನಾವು ಪ್ರತ್ಯೇಕವಾಗಿ ಹೇಳದೆ ಎಲ್ಲರು ಹೇಳಿಕೊಂಡ ಹಾಗೆ ಹೇಳಿದರೆ ಗುರುವು ನಿವಾಸಿಸುವ ಪ್ರದೇಶವನ್ನು ಪರಿಸರಗಳನ್ನು ಶುಭ್ರವಾಗಿಡುವುದನ್ನು ಸ್ಥಾನ ಸೇವೆ ಎನ್ನುತ್ತಾರೆ. ಗುರುವಿನ ಶರೀರಕ್ಕೆ ಬೇಕಾದ ಆಹಾರ ಪಾನೀಯಗಳು ಸಿದ್ಧಮಾಡುವುದನ್ನು ಅಂಗಸೇವೆ ಎನ್ನುತ್ತಾರೆ. ಮನಸ್ಸಲ್ಲಿ ಎಷ್ಟೋ ದೊಡ್ಡ ಭಾವವನ್ನು ಇಟ್ಟುಕೊಂಡು ಆ ವಿಧವಾಗಿಯೇ ನಡೆದುಕೊಳ್ಳುವುದನ್ನು ಭಾವಸೇವೆ ಎನ್ನುತ್ತಾರೆ. ಗುರುಗಳು ಹೇಳಿದ ಹಾಗೆ ಆಚರಿಸುವುದು ಆತನ ವಾಕ್ಕು ಆತ್ಮನಿಂದ ಬಂದಿರುವುದೆಂದು ಬೆಲೆಕೊಡುವುದನ್ನು ಆತ್ಮಸೇವೆ ಎನ್ನುತ್ತಾರೆ. ನಾವು ಪ್ರತ್ಯೇಕವಾಗಿ ಹೇಳುವುದೇನೆಂದರೆ

ಮೇಲಿನ ನಾಲ್ಕು ಸೇವೆಗಳು ಸ್ವಲ್ಪ ಪರಿಮಿತ ಸೇವೆಗಳೆ ಆಗುತ್ತವೆಂದು, ಗುರುವು ಶರೀರವನ್ನು ಧರಿಸಿರುವಾಗ ಮಾತ್ರವೇ ಮಾಡಲಾಗುವವೆಂದು, ಗುರುವಿಗೆ ನಾಲ್ಕು ಸೇವೆಗಳು ಮಾಡಿದರು ಋಣದಲ್ಲಿರುತ್ತೇವೆಂದು, ಗುರುಋಣ ಪೂರ್ತಿಯಾಗಿ ತೀರುವುದಕ್ಕೆ ಐದನೇಸೇವೆ ಅವಶ್ಯವೆಂದು ಹೇಳುತ್ತಿದ್ದೇವೆ.

**399. (11) ಗುರುಸೇವೆ ಮಾಡದವರು ಏನಾಗುತ್ತಾರೆ?**

ಉ. ಗುರುವಿಗೆ ಋಣಿಯಾಗಿ ಇರುತ್ತಾರೆ.

**ವಿವರ :** ಗುರುಸೇವೆಗಳು ಮಾಡದವರು ಗುರುವಿಗೆ ಋಣವಿದ್ದು ಜನ್ಮಗಳನ್ನು ಹೊಂದುತ್ತಾರೆ. ಗುರು ಋಣ ಸಹ ಕರ್ಮದೊಂದಿಗೆ ಸಮಾನವೇ ಆಗುತ್ತದೆ. ಕೆಲವರು ಗುರುವಿನಹತ್ತಿರ ಸಹ ತಮ್ಮ ಬುದ್ಧಿಯನ್ನುಪಯೊಗಿಸಿ, ತಮಗೆ ಶ್ರಮ ಖರ್ಚು ಇಲ್ಲದೆ ಜ್ಞಾನವನ್ನು ತಿಳಿಯಬೇಕೆಂದು ಕೊಳ್ಳುತ್ತಾರೆ. ಗುರುವು ಜ್ಞಾನ ಹೇಳಿದರೂ ಅದು ಅವರ ಹತ್ತಿರ ನಿಲ್ಲುವುದಿಲ್ಲವೆಂದು, ಮೇಲಾಗಿ ಗುರುವನ್ನು ಮೋಸ ಮಾಡಿದವರಾಗುತ್ತೇವೆಂದು ಅವರಿಗೆ ತಿಳಿಯದು. ಒಂದು ವೇಳೆ ಜ್ಞಾನ ಅವರ ತಲೆಯಲ್ಲಿ ನಿಂತರು ಅದು ಋಣವಾಗುತ್ತದೆಂದು, ಆ ಋಣ ಸೇವೆ ರೂಪದಲ್ಲಿ ತೀರಿಸಿಕೊಳ್ಳಬೇಕೆಂದು ತಿಳಿದು, ಸೇವೆ ಮಾಡದವರು ಎಲ್ಲರಂತೆ ಅಲ್ಲದೆ ಕೆಲವು ಜನ್ಮಗಳನ್ನಾದರೂ ಎತ್ತಿ ಜ್ಞಾನಸೇವೆ ಮಾಡಬೇಕಾಗಿರುತ್ತದೆ. ಆದ್ದರಿಂದಲೇ ಭಗವಂತನು ಭಗವದ್ಗೀತೆ ಭಕ್ತಿಯೋಗ ಎನ್ನುವ ಅಧ್ಯಾಯದಲ್ಲಿ ***"ಮತ್ಕರ್ಮ ಪರಮೊ ಭವ ಮದರ್ಥ ಮಪಿ ಕುರ್ಮಾಣಿಕುರ್ವಾನ್ ಸಿದ್ಧಿ ಮವಾಪ್ಯಸಿ"*** ನನಗೋಸ್ಕರ ಕಾರ್ಯಗಳನ್ನು ಮಾಡು. ನನಗೋಸ್ಕರ ಕೆಲಸ ಮಾಡಿದರು ತಪ್ಪದೆ ಮೋಕ್ಷ ಬರುತ್ತದೆಂದಿದ್ದಾನೆ.

**400. (12) ಧರ್ಮವೆಂದರೆ ಏನು?**

ಉ. ಆತ್ಮವನ್ನು ತಿಳಿಸುವ ಶಾಸನ.

**ವಿವರ :** ಆತ್ಮ ಮತ್ತು ಅದರ ವಿಭಾಗಗಳನ್ನು ತಿಳಿಸುವುದಕ್ಕೆ ಪರಮಾತ್ಮನಿಂದ ಏರ್ಪಡಿಸಲಾದ ಶಾಸನಗಳನ್ನು ಧರ್ಮಗಳು ಎನ್ನುತ್ತೇವೆ. ಪ್ರಪಂಚಕ್ಕೆ ಸಂಬಂಧಿಸಿದ ಧರ್ಮಗಳು ಬೇರೆ, ಪರಮಾತ್ಮನಿಗೆ ಸಂಬಂಧಿಸಿದ ಧರ್ಮಗಳು ಬೇರೆ ಇವೆ. ಯಾವಾದರೂ ಶಾಸನಗಳೊಂದಿಗೆ ಕೂಡಿಕೊಂಡಿರುವವಾಗಿಯೇ ಇರುತ್ತವೆ. ಧರ್ಮವೆಂದರೆ ನಿರ್ಧಿಷ್ಟವಾದ ವಿಷಯವನ್ನು ತಿಳಿಸುವುದು. ಹಾಗಾಗ ಬದಲಾಗುವುದು ಧರ್ಮವಲ್ಲ. ಎಂದಿಗೂ ಒಂದೇ

ವಿಧಾನವಾಗಿ ಇರುವುದೇ ಧರ್ಮ. ಧರ್ಮವನ್ನು ಮನುಷ್ಯ ಆಚರಿಸಿದರೆ, ಆತ್ಮಗಳೆಂದರೆ ಏನೋ ತಿಳಿಯುವುದು.

**401. (13) ನಿನ್ನ ಗುರುವಿಗೆ ಯಾವ ಗುಣಗಳಿವೆಯೋ ತಿಳಿಸು.**

ಉ. ನನ್ನ ಗುರುವಿಗೆ ಎಲ್ಲಾ ಗುಣಗಳಿವೆ.

**ವಿವರ :** ನಾವು ಅಂಗೀಕರಿಸಿದರೂ ಅಂಗೀಕರಿಸದಿದ್ದರೂ ಗುರುವು ಗುರುವೇ ಆಗುತ್ತಾನೆ. ನಿನ್ನ ಗುರುವು ನನ್ನ ಗುರುವು ಎನ್ನುವ ಭೇದವಿಲ್ಲದೇ ಗುರುವು ಎಲ್ಲರಿಗೂ ಗುರುವೇ ಆಗುತ್ತಾನೆ. ಗುರುವನ್ನು ಗುರುತಿಸಿದವನು ನನ್ನ ಗುರುವು ಎನ್ನುತ್ತಿದ್ದಾನೆ. ಗುರುತಿಸದೇ ಇರುವವನು ನಿನ್ನ ಗುರುವು ಎನ್ನುತ್ತಿದ್ದಾನೆ. ನಾನು ಗುರುತಿಸಿದ ನನ್ನ ಗುರುವಿಗೆ ಒಟ್ಟು ಎಲ್ಲಾ ಗುಣಗಳಿವೆ. ಗುರುವಿಗೆ ಗುಣಗಳಿರಬಾರದೆಂದು ಎಲ್ಲರೂ ತಿಳಿದುಕೊಳ್ಳುತ್ತಾರೆ. ಹಾಗೆ ಗುಣಗಳಿದ್ದರೆ ಗುರುವಿಗೂ ಸಾಧಾರಣ ಮನುಷ್ಯನಿಗೂ ಏನು ವ್ಯತ್ಯಾಸ ಎಂದು ಸಹ ಕೆಲವರು ಕೇಳಬಹುದು. ಗುರುವಿಗೂ ಸಾಧಾರಣ ಮನುಷ್ಯನಿಗೂ ಏನೂ ವ್ಯತ್ಯಾಸ ಇಲ್ಲವೆಂದು ನಾವು ಸಹ ಒಪ್ಪಿಕೊಳ್ಳುತ್ತಿದ್ದೇವೆ. ಭಗವದ್ಗೀತೆಯಲ್ಲಿ ಸಹ ಜ್ಞಾನಿಯೂ ಅಜ್ಞಾನಿಹಾಗೆ ಇರಬೇಕೆಂದು ಭಗವಂತನು ಹೇಳಿದ್ದಾನೆ. ಗುರುವಿಗೂ ಸಾಧಾರಣ ಮನುಷ್ಯನಿಗೂ ಕಣ್ಣಿಗೆ ಕಾಣಿಸದ ವ್ಯತ್ಯಾಸವಿರುತ್ತದೆ. ಆದರೆ ಕಣ್ಣಿಗೆ ಕಾಣಿಸುವ ವ್ಯತ್ಯಾಸ ಏನೂ ಇರುವುದಿಲ್ಲ. ಆದ್ದರಿಂದ ನನ್ನ ಗುರುವಿಗೆ ಎಲ್ಲಾ ಗುಣಗಳಿವೆ ಎಂದು ಹೇಳುತ್ತಿದ್ದೇನೆ. ಹಾಗೆಯೇ ನನ್ನ ಗುರುವಿಗೆ ಎಲ್ಲರಂತೆ ಕರ್ಮಗಳು ಅಂಟಿಕೊಳ್ಳುವುದಿಲ್ಲವೆಂದು ಸಹ ಹೇಳುತ್ತಿದ್ದೇನೆ.

**402. (14) ಯುದ್ಧ ಸಮಯದಲ್ಲಿ ಅರ್ಜುನನಿಗೆ ಮೊದಲು ಬಂದ ಗುಣಯಾವುದು?**

ಉ. ಮೋಹ ಗುಣ.

**ವಿವರ :** ನನ್ನದು ನನ್ನವರು ಎನ್ನುವುದನ್ನು ಮೋಹ ಗುಣವೆನ್ನುತ್ತೇವೆ. ಯುದ್ಧ ಸಮಯದಲ್ಲಿ ಅರ್ಜುನನಿಗೆ ಬಂದಿರುವುದು ಅದೇ ಗುಣವು. ಬಹಳ ಜನ ಅರ್ಜುನನಿಗೆ ಬಂದಿರುವ ಗುಣ ದಯೆ ಎಂದು ಪ್ರೇಮವೆಂದು ತಿಳಿದುಕೊಳ್ಳುವುದು ನಡೆಯುತ್ತಿದೆ. ಪ್ರೇಮ ದಯೆ ಪರ್ಯವಸಾನ ಬೇರೆ, ಮೋಹಗುಣವೊಂದರ ಪರ್ಯವಸಾನ ಬೇರೆ. ನನ್ನದು ನನ್ನವರೆನ್ನುವ ಉದ್ದೇಶ ಮೋಹಗುಣದಿಂದ ಬರುವುದಾದ್ದರಿಂದ ಅರ್ಜುನನಿಗೆ ಅದೇ ಗುಣ ಉಂಟಾಗಿ ನನ್ನವರನ್ನು ಸಾಯಿಸುವುದಿಲ್ಲವೆಂದು ಕುಳಿತಿರುತ್ತಾನೆ.

**403. (15) ನೀನು ಯಾರು?**

ಉ. ನಾನು ಕ್ಷರ ಪುರುಷನಾದ ಜೀವಾತ್ಮನು.

**ವಿವರ :** ನಾನು ಯಾರು ಎನ್ನುವುದು ಬಹಳ ಮುಖ್ಯವಾದ ಪ್ರಶ್ನೆ. ಯಾರಿಷ್ಟಕ್ಕೆ ಅವರು ನಾನ್ಯಾರು ಎನ್ನುವ ಪ್ರಶ್ನೆ ಹಾಕಿಕೊಂಡರೆ ಅವರಿಗೆ ಅವರೇ ಉತ್ತರವನ್ನು ಹೇಳಿಕೊಳ್ಳಲಾರರು. ವಾಸ್ತವವಾಗಿ ಆತ್ಮಜ್ಞಾನವನ್ನು ತಿಳಿದವರಿಗೆ ಈ ಕಠಿಣ ಪ್ರಶ್ನೆಗೆ ಉತ್ತರ ಸಿಗಬಹುದು. ಶರೀರದಲ್ಲಿ ಕ್ಷರಾಕ್ಷರ ಪುರುಷೋತ್ತಮರೆನ್ನುವ ಮೂವರು ಪುರುಷರಿದ್ದಾರೆಂದು ಭಗವದ್ಗೀತೆ ಹೇಳುತ್ತಿದೆ. ಕ್ಷರ ಪುರುಷನು ಜೀವಾತ್ಮನಾದರೆ ಅಕ್ಷರ ಪುರುಷನು ಆತ್ಮನಾಗಿ ಇದ್ದಾನೆ. ಇಬ್ಬರಿಗಿಂತಲೂ ಉತ್ತಮನಾದ ಪುರುಷೋತ್ತಮನು ಪರಮಾತ್ಮ ಎಂದು ಹೇಳಲಾಗುತ್ತಿದೆ. ಇವರಲ್ಲಿ ಮೊದಲನೆಯವನಾದ ಜೀವಾತ್ಮನೇ ಶರೀರದಲ್ಲಿ ನಾನು ಎನ್ನುವವನಾಗಿ ಇದ್ದಾನೆ. ಆದ್ದರಿಂದ ನಾನು ಯಾರು ಎನ್ನುವುದಕ್ಕೆ ಉತ್ತರ ನಾಶವಾಗುವ ಜೀವಾತ್ಮನೆಂದು ಹೇಳಬೇಕಾಗಿರುತ್ತದೆ. ಕ್ಷರ ಎಂದರೆ ನಾಶ, ಅಕ್ಷರ ಎಂದರೆ ನಾಶವಿಲ್ಲದ್ದು ಎಂದು ತಿಳಿಯಬೇಕು.

**404. (16) ಜ್ಞಾನವೆಂದರೆ ಏನು?**

ಉ. ಆತ್ಮ ಧರ್ಮಗಳನ್ನು ತಿಳಿಸುವುದು.

**ವಿವರ :** ಜ್ಞಾನವೆಂದರೆ ತಿಳಿಯುವುದೆಂದು ಅರ್ಥ. ಏನು ತಿಳಿಯುವುದೆಂದರೆ ಧರ್ಮಗಳನ್ನೇ ಹೇಳಿಕೊಳ್ಳಬೇಕಾಗಿದೆ. ಧರ್ಮಗಳು ಎರಡು ವಿಧಗಳೆಂದು ಹೇಳಬಹುದು 1)ಪ್ರಪಂಚ ಸಂಬಂಧ, 2)ಅತ್ಮ ಸಂಬಂಧ ಧರ್ಮಗಳೆಂದು ಮೊದಲೇ ಹೇಳಿಕೊಂಡಿದ್ದೇವೆ. ಪ್ರಪಂಚ ಸಂಬಂಧ ಧರ್ಮಗಳು ಎಲ್ಲರಿಗೂ ಕಾಣಿಸುವವು ಮತ್ತು ನೀನು ತಿಳಿದುಕೊಳ್ಳ ಬೇಕೆಂದುಕೊಳ್ಳದಿದ್ದರೂ ನಿತ್ಯವು ತಿಳಿಯುವವು. ಆದ್ದರಿಂದ ಅವುಗಳಿಗೆ ಅಷ್ಟು ಪ್ರಾಮುಖ್ಯತೆ ಇಲ್ಲ. ಆತ್ಮ ಧರ್ಮಗಳು ತಿಳಿಯಬೇಕೆಂದುಕೊಂಡರು ಸರಿಯಾಗಿ ತಿಳಿಯುವುದಿಲ್ಲ. ಆದ್ದರಿಂದ ಆತ್ಮ ಧರ್ಮಗಳಿಗೆ ಪ್ರತ್ಯೇಕತೆ ಇದೆ. ಪ್ರಪಂಚ ಧರ್ಮಗಳು ಪ್ರತ್ಯಕ್ಷವಾಗಿವೆ, ಉದಾಹರಣೆಗೆ ಎರಡು ವಾಯುಗಳ ಸಮ್ಮೇಳನ ನೀರು ಎನ್ನುವುದು ಪ್ರಪಂಚ ಧರ್ಮ. ಎರಡು ವಾಯುಗಳನ್ನು ಸೇರಿಸಿದರೆ ಪ್ರತ್ಯಕ್ಷವಾಗಿ ನೀರಾಗಿ ಬದಲಾಗುತ್ತದೆ. ಹಾಗೇ ನೀರನ್ನು ಬೇರ್ಪಡಿಸಿದರೂ ಪ್ರತ್ಯಕ್ಷವಾಗಿ ಎರಡು ವಾಯುಗಳಾಗಿ ಬದಲಾಗುತ್ತದೆ. ಪರಮಾತ್ಮ ಧರ್ಮ ಪ್ರತ್ಯಕ್ಷವಾಗಿ ಇಲ್ಲ. ಉದಾಹರಣೆಗೆ ಜೀವಾತ್ಮ ಆತ್ಮ ಶರೀರದಲ್ಲಿ ಜೊತೆಯಾಗಿ ಇದ್ದಾರೆನ್ನುವುದು ಧರ್ಮ. ಹಾಗೇ ಜೀವಾತ್ಮದೊಂದಿಗೆ ಆತ್ಮ ಶರೀರವನ್ನು ಬಿಟ್ಟು

ಹೋಗುವುದೆನ್ನುವುದು ಸಹ ಧರ್ಮವೇ. ಆದರೆ ಶರೀರದಲ್ಲಿರುವ ಇಬ್ಬರು ಆತ್ಮಗಳಾಗಲಿ, ಅವರು ಹೋಗುವ ವಿಧಾನವಾಗಲಿ ಕಾಣಿಸುವುದಿಲ್ಲ. ಆದ್ದರಿಂದ ಆತ್ಮಧರ್ಮಗಳು ಮರ್ಮವಾಗಿರುವವೆಂದು ತಿಳಿಯುತ್ತಿದೆ. ಮರ್ಮವಾಗಿರುವ ಧರ್ಮಗಳನ್ನು ತಿಳಿಸುವುದು ಜ್ಞಾನವೆಂದು, ಜ್ಞಾನವೆಂದರೆ ಆತ್ಮ ಧರ್ಮಗಳನ್ನು ತಿಳಿಸುವುದೆಂದು ಹಿರಿಯರೆಂದಿದ್ದಾರೆ.

**405. (17) ಪಂಚಭೂತಗಳಲ್ಲಿ ಅಗ್ನಿ ಆತ್ಮ ಸೇರಿ ಯಾವ ಶರೀರ ಭಾಗ ತಯಾರಾಗುತ್ತದೆ?**

ಉ. ಕಣ್ಣು.

**ವಿವರ :** ಪಂಚಭೂತಗಳು ಒಂದೊಂದು ಐದು ಭಾಗಗಳಾಗಿ ವಿಭಜನೆಯಾಗಿ ಒಟ್ಟು ಇಪ್ಪತ್ತೈದು ಭಾಗಗಳಾಗಿವೆ. ಅವು ಒಂದರ ಜೊತೆ ಇನ್ನೊಂದು ಸೇರುವುದರಿಂದ ಪ್ರತ್ಯೇಕ ರೂಪಗಳು ತಯಾರಾಗಿವೆ. ಅವೇ ಶರೀರ ಅವಯವಗಳು. ಅಗ್ನಿ ಮೊದಲನೆಯ ಭಾಗ ಆತ್ಮದೊಂದಿಗೆ ಸೇರಿ ಕಣ್ಣಾಗಿ ತಯಾರಾಗಿದೆ. ಆತ್ಮ ಸಹ ಐದು ಭಾಗಗಳಾಗಿ ಸೇರಿ ಇಂದ್ರಿಯಗಳು ಕದಲುವುದಕ್ಕೆ ಉಪಯೋಗವಾಗುತ್ತಿದೆ.

**406. (18) ಗೀತಾ ಶಾಸ್ತ್ರದಲ್ಲಿ ಯಾವ ಜ್ಞಾನ ಮುಖ್ಯವಾದದ್ದೆಂದು ಹೇಳಿದ್ದಾನೆ?**

ಉ. ಕ್ಷೇತ್ರ ಕ್ಷೇತ್ರಜ್ಞ ಜ್ಞಾನ.

**ವಿವರ :** ಶರೀರ ಅದರಲ್ಲಿ ನಿವಾಸಿಸುವ ಆತ್ಮನ ಬಗ್ಗೆ ತಿಳಿದುಕೊಳ್ಳುವುದು ಮುಖ್ಯವಾದ ಜ್ಞಾನವೆಂದು ಭಗವಂತನು ತಿಳಿಸಿದ್ದಾನೆ. ಗೀತಾಶಾಸ್ತ್ರವೆಲ್ಲವು ಶರೀರವನ್ನು ಆತ್ಮವನ್ನು ಕುರಿತು ಹೇಳಿದ ವಿಷಯಗಳೇ ಹೆಚ್ಚಾಗಿ ಇರುವುದರಿಂದ ಕ್ಷೇತ್ರ ವೆಂದರೆ ಶರೀರವೆಂದು, ಕ್ಷೇತ್ರಜ್ಞನೆಂದರೆ ಶರೀರವನ್ನು ತಿಳಿದ ಆತ್ಮನೆಂದು, ಅವರ ಜ್ಞಾನವೇ ಮುಖ್ಯವಾದದ್ದಾಗಿ ***"ಕ್ಷೇತ್ರ ಕ್ಷೇತ್ರಜ್ಞ ಯೊರಾಜ್ಞಾನಂ ಯಸ್ತದ್ ಜ್ಞಾನಂ ಮತಂಮಮ"*** ಎಂದು ಭಗವಂತನೆಂದಿದ್ದಾನೆ.

**407. (19) ಯಜ್ಞವೆಂದರೆ ಏನು?**

ಉ. ಇರುವುದನ್ನು ಇಲ್ಲದಂತೆ ಮಾಡುವುದು.

**ವಿವರ :** ಯಜ್ಞವೆನ್ನುವ ವಿಷಯದಲ್ಲಿ ಬಹಳ ಜನ ತಪ್ಪಾಗಿ ಅರ್ಥವಿಲ್ಲದ, ಭಗವಂತನು ಹೇಳದ ಯಜ್ಞಗಳು ಮಾಡುತ್ತಿದ್ದಾರೆ. ಧರ್ಮರೀತ್ಯಾ ಶಾಸ್ತ್ರಪದ್ಧತಿಯಾಗಿ ಇರುವವು ಎರಡೇ ಯಜ್ಞಗಳು. ಅವುಗಳನ್ನೇ ಭಗವದ್ಗೀತೆಯಲ್ಲಿ **ದ್ರವ್ಯಯಜ್ಞ, ಜ್ಞಾನಯಜ್ಞವೆಂದು**

ಸಹ ಹೇಳಿದ್ದಾರೆ. ದ್ರವ್ಯಯಜ್ಞಕಿಂತಲೂ ಜ್ಞಾನಯಜ್ಞವೇ ಶ್ರೇಷ್ಠವಾದದ್ದೆಂದು ಹೇಳುತ್ತಾ ***"ಶ್ರೇಯೊಹಿ ದ್ರವ್ಯಮಯಾ ಯಜ್ಞಾತ್ ಜ್ಞಾನ ಯಜ್ಞಃ ಪರಂತಪ ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ"*** ಎಂದು ಸಹ ಹೇಳಿದ್ದಾನೆ. ಈ ಎರಡು ಯಜ್ಞಗಳು ಶರೀರದಲ್ಲೇ ನಡೆಯುತ್ತಿರುವಾಗ, ತಿಳಿಯದ ಮನುಷ್ಯನು ಧರ್ಮಗಳನ್ನು ಅನುಸರಿಸದೆ, ಬಾಹ್ಯ ಯಜ್ಞಗಳು ಮಾಡಿ ಅದೇ ಆರಾಧನೆ ಎನ್ನುತ್ತಿದ್ದಾನೆ. ವಾಸ್ತವಕ್ಕೆ ಯಜ್ಞಗಳು ಆರಾಧನಾ ಕಾರ್ಯಗಳಲ್ಲ. ಕರ್ಮವನ್ನು ಇಲ್ಲದಂತೆ ಮಾಡಿಕೊಳ್ಳುವುದು ಜ್ಞಾನಯಜ್ಞವೆಂದು ಭಗವಂತನ ಭಾವವಾಗಿರುವಾಗ, ಅದನ್ನು ಆರಾಧನೆ ಎನ್ನುವುದು ಬಹಳ ಅಜ್ಞಾನ. ಯಜ್ಞವೆಂದರೆ ಅಗ್ನಿಯಿಂದ ಆಹುತಿ ಮಾಡುವುದೆಂದು ಅರ್ಥ. ದ್ರವ್ಯಯಜ್ಞದಲ್ಲಿ ಜಠರಾಗ್ನಿಯಿಂದ ನಾಲ್ಕು ವಿಧಗಳ ದ್ರವ್ಯಗಳನ್ನು ಸುಡುವುದು ಕಾರ್ಯವಾದಾಗ, ಜ್ಞಾನಯಜ್ಞದಲ್ಲಿ ಜ್ಞಾನಾಗ್ನಿಯಿಂದ 108 ವಿಧಗಳ ಕರ್ಮಗಳನ್ನು ಸುಡುವುದು ಕಾರ್ಯವಾಗಿ ಇದೆ.

**408. (20) ತತ್ವವೆಂದರೆ ಏನು?**

ಉ. ಆತ್ಮವೆಂದು ಅರ್ಥ.

**ವಿವರ :** ತತ್ವವೆಂದರೆ ಆಧ್ಯಾತ್ಮಿಕ ಹಾಡುಗಳೆಂದು ಕೆಲವರನ್ನುತ್ತಿದ್ದಾರೆ. ಆಧ್ಯಾತ್ಮಿಕ ಭಾವಗಳೊಂದಿಗೆ ಬರೆದ ಹಾಡುಗಳನ್ನು ತತ್ವವೆಂದು, ಇದು ಬ್ರಹ್ಮಯ್ಯನವರ ತತ್ವವೆಂದು ಹೇಳುತ್ತಿರುವುದೂ, ಅಂತಹ ಹಾಡುಗಳ ಪುಸ್ತಕವನ್ನು ತತ್ವಗಳ ಪುಸ್ತಕವೆಂದು ಹೇಳುವುದು ಸಹ ನಡೆಯುತ್ತಿದೆ. ಹಾಗೆ ಹೇಳುವುದರಲ್ಲಿ ತಪ್ಪಿಲ್ಲ. ಆದರೆ ನಿಜಾರ್ಥದೊಳಗೆ ಹೋಗಿ ತತ್ವವೆಂದರೆ ನಿನಗಿಂತಲೂ ಬೇರೆಯಾಗಿರುವ ನಿನ್ನಂತದ್ದೇಎಂದು ಅರ್ಥ. ನೀನು ಒಬ್ಬ ಆತ್ಮನು, ನಿನಗಿಂತಲೂ ಬೇರೆಯಾಗಿ ನಿನ್ನಂತ ಆತ್ಮ ಬೇರೊಂದು ಇದೆ. ನೀನು ಜೀವಾತ್ಮನು ಆದಾಗ ನಿನ್ನಂತೆ ಬೇರೊಂದು ಆತ್ಮ ಇದೆಯೆಂದು ತಿಳಿಯಬೇಕು. ಅದನ್ನೇ ತತ್ವವೆನ್ನುತ್ತಿದ್ದೇವೆ.

**409. (21) ಪ್ರಕೃತಿ ಎಂದರೆ ಏನು?**

ಉ. ಕಣ್ಣಿಗೆ ಕಾಣಿಸುವುದು (ಇಂದ್ರಿಯಗೋಚರವಾದದ್ದು).

**ವಿವರ :** ಪ,ರ,ಕ,ರು,ತಿ ಎನ್ನುವ ಐದು ಅಕ್ಷರಗಳ ಸಮ್ಮಿಲನವೇ ಪ್ರಕೃತಿ ಎನ್ನುವ ಪದವಾಗಿ ಇದೆ. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದು ವಸ್ತುಗಳಿಗೆ ಆಕಾಶಕ್ಕೆ ಪ, ಗಾಳಿಗೆ ರ, ಅಗ್ನಿಗೆ ಕ, ನೀರಿಗೆ ರು, ಭೂಮಿಗೆ ತಿ ಎನ್ನುವ ಬೀಜಾಕ್ಷರಗಳು ಇವೆ. ಹಾಗೇ

ಆಕಾಶಕ್ಕೆ ನ, ಗಾಳಿಗೆ ಮಃ, ಅಗ್ನಿಗೆ ಶಿ, ನೀರಿಗೆ ವಾ, ಭೂಮಿಗೆ ಯ ಎನ್ನುವ ಬೀಜಾಕ್ಷರಗಳು ಸಹ ಇವೆ. ಪಂಚ ಭೂತಗಳಿಗೆ ಒಂದು ವಿಧವಾಗಿ ಪರಕರುತಿ ಎಂದು, ಅದೇ ಪ್ರಕೃತಿ ಎಂದು, ಮತ್ತೊಂದು ವಿಧವಾಗಿ ನಮಃ ಶಿವಾಯ ಎಂದು ಬೀಜಾಕ್ಷರಗಳು ಇವೆ. ಪ್ರಕೃತಿಯಾಗಲಿ, ನಮಃ ಶಿವಾಯ ಆಗಲಿ ಕಣ್ಣಿಗೆ ಕಾಣಿಸುವುದಾಗಿ ಇದೆ. ಕಣ್ಣಿಗೆ ಕಾಣಿಸುವ ಪ್ರಕೃತಿಗೆ ಅತೀತವಾದದ್ದು, ಕಾಣಿಸದಿರುವುದು, ಅಣುಅಣುವಿನಲ್ಲಿ ತುಂಬಿರುವ ಪರಮಾತ್ಮ ಸಹ ಇದೆ. ಅದನ್ನೇ ಪ್ರಕೃತಿಗಿಂತಲೂ ಬೇರೆಯಾಗಿರುವುದೆಂದು ಪರ ಪ್ರಕೃತಿಯೆಂದು, ಪಂಚ ಭೂತಗಳಿಗೆ ನಾಶನವಾಗದೆಂದು, ಓಂ ನಮಃ ಶಿವಾಯ, ಪಂಚಾಕ್ಷರಿ ಎಂದು ಕರೆಯುತ್ತಿದ್ದೇವೆ. ಪರ ಪ್ರಕೃತಿ ಎನ್ನುವ ಪದದಲ್ಲಿ ಪರ ಎಂದರೆ ಬೇರೆಯಾಗಿರುವುದೆಂದು ಅರ್ಥ. ಹಾಗೇ ಓಂ ನಮಃ ಶಿವಾಯದಲ್ಲಿ ಓಂ ಎಂದರೆ ಪಂಚಾಕ್ಷರಿ ಎಂದು ಅರ್ಥ, ಎಂದರೆ ಐದಕ್ಕೂ ನಾಶನ ಆಗದಿರುವುದೆಂದು ವಿವರ. ಇದನ್ನನುಸರಿಸಿ ನೋಡಿದರೆ ಪ್ರಕೃತಿ ಎನ್ನುವ ಪದ ಪಂಚ ಭೌತಿಕವೆಂದು, ಕಣ್ಣಿಗೆ ಕಾಣಿಸುವುದೆಂದು ತಿಳಿಯುತ್ತಿದೆ.

**410. (22) ಶರೀರದಲ್ಲಿ ಜೀವಾತ್ಮನಿಗೆ ಆಕಾರವಿದೆಯಾ?**

ಉ. ಇದೆ.

**ವಿವರ :** ಮೇಲೆ ಕಾಣಿಸುವ ಶರೀರಗಳು ಅನೇಕ ವಿಧಗಳಲ್ಲಿ ಆಕಾರಗಳನ್ನು ಹೊಂದಿದ್ದರು ಶರೀರಗಳ ಒಳಗೆ ಜೀವಾತ್ಮಗಳು ಎಲ್ಲಾ ಒಂದೇ ರೂಪವನ್ನು ಹೊಂದಿವೆ. ಜೀವಿಗೆ ಆಕಾರವಿದೆಯಾ ಎಂದು ಆಶ್ಚರ್ಯಪಡುವ ಅವಶ್ಯವಿಲ್ಲ. ಇಲ್ಲಿಯವರೆಗು ಜೀವಿಯ ಆಕಾರವನ್ನು ಯಾರು ಹೇಳಲಿಲ್ಲ ಅಲ್ಲವೆ! ಈಗದು ಅಸತ್ಯವೆಂದು ತಿಳಿದುಕೊಳ್ಳುವ ಅವಶ್ಯಕತೆ ಇಲ್ಲ. ನಮ್ಮ ಬರಹಗಳು ಮಾತುಗಳು ಶಾಸ್ತ್ರಬದ್ಧವೆಂದು ಮೊದಲಿನಿಂದಲೂ ಹೇಳುತ್ತಿದ್ದೇವೆ. ಆದ್ದರಿಂದ ಜೀವಿಯ ಆಕಾರವು ಸಹ ಶಾಸ್ತ್ರಬದ್ದವೇ. ಬುದ್ಧಿ, ಚಿತ್ತ, ಅಹಂ ಎನ್ನುವ ಮೂರು ಪೊರೆಗಳ ಮಧ್ಯೆ ಗುಂಡಾಗಿ ತಯಾರಾದ ಖಾಲೀ ಸ್ಥಳವನ್ನೇ ಜೀವಾತ್ಮನೆಂದು ತಿಳಿಯಬೇಕು. ಮೂರು ಅಂತರಂಗಗಳು ಗುಂಡಾಗಿರುವ ಆಕೃತಿಯನ್ನು ಹೊಂದಿ ಒಂದರನಂತರ ಒಂದು ಇರುವುದರಿಂದ ಮಧ್ಯದಲ್ಲಿನ ಜೀವಾತ್ಮಕ್ಕು ಸಹ ಆಕಾರ ಏರ್ಪಟ್ಟಿರುತ್ತದೆ. ಶರೀರದೊಳಗೆ ಬಿಂದುವಿನಹಾಗೆ ರವೆಯಷ್ಟು ಇರುವ ಜೀವಾತ್ಮ ಹೊರಗಿನ ಶರೀರವನ್ನು ಅನುಸರಿಸಿ ನಾನು ದೊಡ್ಡವನೆಂದುಕೊಳ್ಳುವುದು ಅಜ್ಞಾನ.

**411. (23) ಆತ್ಮ ಎಷ್ಟು ವಿಧಗಳಾಗಿ ವಿಭಜಿಸಲ್ಪಟ್ಟಿದೆ. ಅವು ಯಾವವು?**

ಉ. ಮೂರು ವಿಧಗಳಾಗಿ, ಒಂದು ಜೀವಾತ್ಮ, ಎರಡು ಆತ್ಮ, ಮೂರು ಪರಮಾತ್ಮ.

**ವಿವರ :** ಆತ್ಮ ಮೂರು ವಿಧಗಳಾಗಿ ಇದೆಯೆನ್ನುವ ಮಾತು ಭಗವದ್ಗೀತೆಯಲ್ಲಿ ಹೇಳಿದರೂ ಅದು ಹೊರಗೆ ಪ್ರಚಾರವಾಗಲಿಲ್ಲ. **ಇಲ್ಲಿಯವರೆಗು ಒಂದೇ ಆತ್ಮವೆಂದು ಅದ್ವೈತ, ಎರಡು ಆತ್ಮಗಳೆಂದು ದ್ವೈತ ಪ್ರಚಾರವಾಗಿವೆ, ಮೂರು ಆತ್ಮಗಳೆನ್ನುವ ತ್ರೈತ ಈಗ ಪುನಃ ನಮ್ಮಿಂದ ಪ್ರಾರಂಭವಾಗಿದೆ. ನಮ್ಮ ಸಿದ್ಧಾಂತದ ಪ್ರಕಾರ ಜೀವಾತ್ಮ, ಆತ್ಮ, ಪರಮಾತ್ಮಗಳನ್ನುವವು ಮೂರು ವಿಧಗಳಾಗಿ ಇವೆ.** ಒಂದು ಜೀವಾತ್ಮ ಶರೀರದೊಳಗೆ ಒಂದು ಸ್ಥಾನದೊಳಗೆ ಮಾತ್ರವಿರುವುದು. ಎರಡನೆಯ ಆತ್ಮ ಶರೀರದೊಳಗೆ ಶರೀರವೆಲ್ಲಾ ವ್ಯಾಪಿಸಿಕೊಂಡಿದೆ. ಮೂರನೆಯ ಪರಮಾತ್ಮ ಶರೀರದೊಳಗೆ, ಶರೀರದ ಹೊರಗೆಲ್ಲವು ಅಣುವಣುವಿನಲ್ಲು ವ್ಯಾಪಿಸಿಕೊಂಡಿದೆ. ಮೊದಲು ಶರೀರದೊಳಗೆ ಒಂದು ಕಡೆ ಇರುವ ಜೀವಾತ್ಮನಿಗೆ ಎರಡನೆಯದಾದ, ಶರೀವೆಲ್ಲಾ ವ್ಯಾಪಿಸಿದ ಆತ್ಮನಿಗೆ ಆಕಾರಗಳಿವೆ. ಮೂರನೆಯದಾದ ಪರಮಾತ್ಮ ಒಳಗೆ ಹೊರಗೆ ವ್ಯಾಪಿಸಿರುವುದಾಗಿ ಆಕಾರವಿಲ್ಲದಾಗಿ ಇದೆ.

**412. (24) ಕುಂಡಲೀಶಕ್ತಿ ಶರೀರದಲ್ಲಿ ಎಲ್ಲಿ ವ್ಯಾಪಿಸಿಕೊಂಡಿದೆ?**

ಉ. ಬ್ರಹ್ಮನಾಡಿಯಲ್ಲಿ.

**ವಿವರ :** ಆತ್ಮಶಕ್ತಿಯನ್ನು ಚೈತನ್ಯಶಕ್ತಿ ಎಂದು, ಕುಂಡಲೀಶಕ್ತಿ ಎಂದು ಕರೆಯುತ್ತಿದ್ದೇವೆ. ಆತ್ಮ ಶಿರಸ್ಸಲ್ಲಿ ಮೆದುಳಿನಿಂದ ಕೆಳಗೆ ಗುದಸ್ಥಾನದ ವರೆಗು ವ್ಯಾಪಿಸಿರುವ ಬೆನ್ನೆಲುಬಿನೊಳಗಿನ ಬ್ರಹ್ಮನಾಡಿ ಎನ್ನುವ ನಾಡಿಯೊಳಗೆ ವ್ಯಾಪಿಸಿಕೊಂಡಿದೆ. ಅಲ್ಲಿಂದ ಬ್ರಹ್ಮನಾಡಿಗೆ ಅನುಬಂಧವಾಗಿರುವ ಅನೇಕ ನರಗಳ ಮೂಲಕ ಶರೀರದ ಕೊನೆಯ ಅಂಚಿನವರೆಗು ವ್ಯಾಪಿಸಿದೆ. ಒಟ್ಟಾರೆ ಶರೀರವೆಲ್ಲಾ ವ್ಯಾಪಿಸಿದ್ದರೂ ಅದರ ಸ್ಥಾನ ಬ್ರಹ್ಮನಾಡಿಯೆಂದು, ಬ್ರಹ್ಮನಾಡಿಯಲ್ಲಿ ಸಹಸ್ರಾರವೆಂದು ಹೇಳುವ ಮೆದಳು ಎಂದು ತಿಳಿಯಬೇಕು. ಭಗವದ್ಗೀತೆಯಲ್ಲಿ ಸೂರ್ಯನೊಬ್ಬನು ಈ ಲೋಕವನ್ನು ತನ್ನ ಕಿರಣಗಳಿಂದ ಪ್ರಕಾಶಿಸುವಂತೆ ಆತ್ಮ ಶಿರಸ್ಸಿನಲ್ಲಿ ಕೇಂದ್ರೀಕೃತವಾಗಿ, ತನ್ನ ಶಕ್ತಿಯಿಂದ ಶರೀರವೆಲ್ಲಾ ಪ್ರಕಾಶಿಸುವಹಾಗೆ ಮಾಡುತ್ತಿದೆ ಎಂದಿದ್ದಾರೆ. ಆದ್ದರಿಂದ ಆತ್ಮಶಕ್ತಿ ಬ್ರಹ್ಮನಾಡಿಯಲ್ಲಿ ಇದೆಯೆಂದು ಹೇಳಬಹುದು.

**413. (25) ಮನಸ್ಸುವೊಂದರ ಕೆಲಸವೇನು?**

ಉ. ವಿಷಯ ಜ್ಞಾಪಕ, ವಿಷಯಗಳನ್ನು ತಿಳಿಸುವುದು.

**ವಿವರ :** ಶರೀರದಲ್ಲಿ ಪಿತ್ತಕೋಶ ಎನ್ನುವ ಅವಯವ ಎಷ್ಟು ಮುಖ್ಯವಾದದ್ದೋ,

ಶರೀರದಲ್ಲಿ ಮನಸ್ಸು ಅಷ್ಟು ಮುಖ್ಯವಾದದ್ದೆಂದು ತಿಳಿಯಬೇಕು. ಶರೀರದಲ್ಲಿ ಪಿತ್ತಕೋಶ (ಲಿವರ್) ಜೀರ್ಣಪ್ರಕ್ರಿಯೆಯಲ್ಲಿ ಉಪಯೋಗವಾಗುವ ಪೈತ್ಯರಸವನ್ನು ತಯಾರು ಮಾಡುವುದಲ್ಲದೆ ರಕ್ತವನ್ನು ಪರೀಕ್ಷೆಮಾಡಿ, ಸಣ್ಣ ಸಣ್ಣ ವಿಷಗಳನ್ನು ತೆಗೆದುಹಾಕಿ, ಶುಗರ್ ಹೆಚ್ಚು ಕಡಿಮೆ ಆಗದೆ ಒಂದೇ ಪರಿಮಾಣದಲ್ಲಿ ಇರುವಹಾಗೆ ನೋಡುತ್ತಾ ಎರಡು ವಿಧಗಳ ಕೆಲಸ ಮಾಡಿದಹಾಗೆ ಮನಸ್ಸು ಸಹ ಎರಡು ವಿಧಗಳ ಕೆಲಸ ಮಾಡುತ್ತಿದೆ. ಒಂದು ಜ್ಞಾನೇಂದ್ರಿಯಗಳು ತಿಳಿಸಿದ ವಿಷಯಗಳನ್ನು ಬುದ್ಧಿಯಿಂದ ಜೀವಾತ್ಮನಿಗೆ ಸೇರಿಸುವುದು. ಎರಡು ಇಂದ್ರಿಯ ವಿಷಯಗಳನ್ನು ಜ್ಞಾಪಕ ಮಾಡಿ ಬುದ್ಧಿಗೆ ತಿಳಿಸುವುದು. ಶರೀರದಲ್ಲಿ ಐದು ಜ್ಞಾನೇಂದ್ರಿಯಗಳ ವಿಷಯಗಳನ್ನು ತಿಳಿಸುತ್ತಾ, ಪ್ರಸ್ತುತ ಹೊರಗಿನ ಇಂದ್ರಿಯ ವಿಷಯಗಳು ಏನು ಇಲ್ಲದಾಗ ಕಳೆದ ಕಾಲದಲ್ಲಿ ಐದು ಜ್ಞಾನೇಂದ್ರಿಯಗಳಿಗೆ ಸಂಬಂಧಿಸಿದ ವಿಷಯಗಳನ್ನು ಜ್ಞಾಪಕ ಮಾಡುವುದು ಮನಸ್ಸುವೊಂದರ ಕೆಲಸ.

**414. (26) ಜೀವಾತ್ಮನು ಮರಣಿಸಿದ ಕೂಡಲೇ ತಾಯಿಗರ್ಭದಲ್ಲಿ ಪ್ರವೇಶಿಸುವನಾ?**

ಉ. ಪ್ರವೇಶಿಸುವುದಿಲ್ಲ.

**ವಿವರ :** ಜೀವಿಯು ತಾಯಿ ಗರ್ಭದಲ್ಲಿ ಪ್ರವೇಶಿಸುವ ಪ್ರಮೇಯವೆ ಇಲ್ಲ. ಈ ಮಾತು ಲೋಕವಿರುದ್ಧವಾದರೂ ನೂರಕ್ಕೆ ನೂರು ಪಾಲು ಸತ್ಯ, ಶಾಸ್ತ್ರಬದ್ಧ. ಮರಣಿಸಿದ ಜೀವಿಯು ಹೊಸ ಶರೀರದಲ್ಲಿ ಪ್ರವೇಶಿಸುವುದು ಸತ್ಯ. ಹೊಸ ಶರೀರ ತಾಯಿಗರ್ಭದಲ್ಲಿ ಇಲ್ಲ. ತಾಯಿ ಗರ್ಭದಲ್ಲಿರುವುದು ಅಸಂಪೂರ್ಣ ಶಿಶುವು. ಅರ್ಧ ತಯಾರಾಗಿ ಅರ್ಧ ತಯಾರಾಗದ ಯಂತ್ರವನ್ನು ಡ್ರೈವರ್ ಹೇಗೆ ನಡೆಸುವುದಿಲ್ಲವೋ, ಆ ವಿಧವಾಗಿಯೇ ಅರ್ಧ ತಯಾರಾಗಿ ಪೂರ್ತಿ ತಯಾರಾಗದ ಶರೀರವನ್ನು ಜೀವಿಯು ಅದಿಷ್ಟಿಸುವುದಿಲ್ಲ. ಮಾಸಗಳು ತುಂಬಿ ಹೊರಗೆ ಬಂದಿರುವ ಶಿಶು ಶರೀರ ಪೂರ್ತಿ ತಯಾರಾಗಿರುವುದಾಗಿ ಇರುತ್ತದೆ. ಆ ಸ್ಥಿತಿಯಲ್ಲಿ ಜೀವಿಯು ಆ ಶರೀರವನ್ನು ಸೇರುವನು. ಅದೂ ಪ್ರಸವಿಸಿದ ಶರೀರದೊಳಗೆ ತಕ್ಷಣವೇ ಆಗಲಿ, ಸ್ವಲ್ಪ ತಡವಾಗಿ ಆಗಲಿ ಜೀವಿಯು ಸೇರುವುದು ನಿತ್ಯ ನಡೆಯುತ್ತಿರುವ ಕೆಲಸವೇ. ಆ ವಿಷಯವನ್ನು ವಿಸ್ಮರಿಸಿ ತಾಯಿ ಗರ್ಭದಲ್ಲಿ ಜೀವಿಯು ಸೇರುತ್ತಿದ್ದಾನೆನ್ನುವುದು ತಪ್ಪು. ಈ ವಿಷಯ ಪೂರ್ತಿ ವಿವರವಾಗಿ ತಿಳಿಯಬೇಕೆಂದರೆ ನಮ್ಮ ರಚನೆಗಳಲ್ಲಿನ **"ಜನನಮರಣ ಸಿದ್ಧಾಂತ"** ಎನ್ನುವ ಗ್ರಂಥವನ್ನು ಓದಿರಿ.

**415. (27) ಶರೀರದಲ್ಲಿ ಹಸಿವುಉರಿ ಯಾವುದರಿಂದ ಉಂಟಾಗುತ್ತಿದೆ?**

ಉ. ಜಠರಾಗ್ನಿಯಿಂದ.

**ವಿವರ :** ಶರೀರದಲ್ಲಿ ಮನುಷ್ಯನಿಗೆ ಎರಡು ವಿಧದ ಅಗ್ನಿಗಳಿವೆ. ಒಂದು ಜಠರಾಗ್ನಿ ಎರಡನೆಯದು ಜ್ಞಾನಾಗ್ನಿ. ಮೊದಲನೆಯ ಜಠರಾಗ್ನಿ ಪ್ರತಿ ಒಬ್ಬರಿಗೂ ಇದೆ. ಎರಡನೆಯ ಜ್ಞಾನಾಗ್ನಿ ಕೆಲವರಿಗಿದೆ, ಬಹಳ ಜನಕ್ಕೆ ಇಲ್ಲ. ಶರೀರದಲ್ಲಿನ ಜೀರ್ಣಾಶಯದಲ್ಲಿ ರಸಗಳು ಸೇರುವುದರಿಂದ ಜಠರಾಗ್ನಿ ಹುಟ್ಟುತ್ತಿದೆ. ಜೀರ್ಣಾಶಯ ಯಜ್ಞಗುಂಡವಾಗಿ ಇದ್ದಾಗ ಅದರಲ್ಲಿ ಅಗ್ನಿಯಾಗಿ ಜಠರಾಗ್ನಿ ಇದೆ. ಯಜ್ಞಗುಂಡದಲ್ಲಿ ಅಗ್ನಿ ವಿವಿಧ ಸಮಿದೆಗಳನ್ನು ಸುಡುವಹಾಗೆ, ಜೀರ್ಣಾಶಯದಲ್ಲಿ ಜಠರಾಗ್ನಿ ವಿವಿಧ ಆಹಾರ ದ್ರವ್ಯಗಳನ್ನು ಸುಡುತ್ತಿದೆ. ಆದ್ದರಿಂದಲೇ ಈ ಕ್ರಿಯೆಯನ್ನು ದ್ರವ್ಯಯಜ್ಞ ಎಂದು ಭಗವದ್ಗೀತೆಯಲ್ಲಿ ಹೇಳಿದ್ದಾರೆ. ಹೊಟ್ಟೆಯಲ್ಲಿ ಸುಡುವ ಆಹಾರವಿಲ್ಲದಿರುವಾಗ, ಅಗ್ನಿ ಜೀರ್ಣಾಶಯ ಗೋಡೆಗಳಿಗೆ ಅಂಟಿಕೊಂಡು ಹೊಟ್ಟೆಯಲ್ಲಿ ಉರಿ ಹುಟ್ಟುತ್ತದೆ. ಅದನ್ನೇ ಹಸಿವು ಎನ್ನುತ್ತಿದ್ದೇವೆ.

**416. (28) ನಾಯಿ ಶರೀರದಲ್ಲಿ ಎಷ್ಟು ಭಾಗಗಳಿವೆ?**

**ಉ.** 25 ಭಾಗಗಳು.

**ವಿವರ :** ನಾಯಿ ಶರೀರವಾಗಲಿ, ಮನುಷ್ಯ ಶರೀರವಾಗಲಿ, ಪಂಚಭೂತ ನಿರ್ಮಿತವಾದದ್ದೇ. ಆದ್ದರಿಂದ 25 ಭಾಗಗಳಿಂದ ಮನುಷ್ಯನ ಶರೀರ ತಯಾರಾದಹಾಗೆ ನಾಯಿ ಶರೀರವು ಸಹ ತಯಾರಾಗಿದೆ. ನಾಯಿಗೆ ಬಾಲ ಹೆಚ್ಚಾಗಿದೆ ಅಲ್ಲವೆ ಅದು ಇಪ್ಪತ್ತಾರನೆಯದು ಎಂದುಕೊಳ್ಳಬಾರದು. ಮನುಷ್ಯನ ಬೆನ್ನೆಲುಬು ಮೊಟಕಾಗಿದೆ. ನಾಯಿ ಬೆನ್ನೆಲುಬು ಸ್ವಲ್ಪ ಉದ್ದವಾಗಿದೆ ಎಂದು ತಿಳಿಯಬೇಕು. ಶರೀರ ನಿರ್ಮಾಣ ಎಲ್ಲರಿಗೂ ಒಂದೇ ವಿಧವಾಗಿದೆಯೆಂದು ಅರ್ಥ ಮಾಡಿಕೊಳ್ಳಬೇಕು.

**417. (29) ಶರೀರದಲ್ಲಿ ಜೀವಾತ್ಮನ ಕೆಲಸವೇನು?**

**ಉ.** ಕರ್ಮವನ್ನು ಅನುಭವಿಸುವುದು.

**ವಿವರ :** ಜೀವಿಯು ಕರ್ಮ ಬದ್ಧನಾಗಿ ಕರ್ಮ ಅನುಭವಿಸುವುದಕ್ಕೆ ಹುಟ್ಟುತ್ತಿದ್ದಾನೆ. ಶರೀರದಲ್ಲಿ ಪ್ರಾರಬ್ಧಕರ್ಮ ಪ್ರಕಾರ ಸುಖ ದುಃಖಗಳನ್ನು ಅನುಭವಿಸುವುದೇ ಜೀವಾತ್ಮವೊಂದರ ಕರ್ತವ್ಯ. ಜೀವಿಗೆ ಕರ್ಮಗಳನ್ನನುಭವಿಸುವ ಕೆಲಸಕ್ಕಿಂತಲೂ ಬೇರೆ ಕೆಲಸ ವಿಲ್ಲ.

**418. (30) ಆತ್ಮ ದರ್ಶನವಾದವನು ಪರಮಾತ್ಮನನ್ನು ಹೊಂದುವನಾ?**

**ಉ.** ಹೊಂದಬಹುದು. ಹೊಂದದೆ ಇರಬಹುದು.

**ವಿವರ :** ಆತ್ಮ ದರ್ಶನವಾದವನು ಪೂರ್ತಿ ಕರ್ಮ ಮುಗಿದಿದ್ದರೆ ಆ ಜನ್ಮದಲ್ಲೇ ಮೋಕ್ಷ ಹೊಂದುವನು. ಹಾಗಲ್ಲದೆ ಕರ್ಮ ಮುಗಿಯದವನು, ಆ ಕರ್ಮ ಅನುಭವಿಸುವುದಕ್ಕೆ ಪುನಃ ಹುಟ್ಟಬೇಕಾಗಿದೆ. ಆತ್ಮ ದರ್ಶನವಾದರೂ ಮೋಕ್ಷ ಹೊಂದುವುದಕ್ಕೆ ಕರ್ಮ ಶೇಷವಿರಬಾರದೆನ್ನುವುದು ನಿಬಂಧನೆ. ಆತ್ಮ ದರ್ಶನದಿಂದಲೇ ಕರ್ಮವೆಲ್ಲವು ಮುಗಿಯುತ್ತದೆನ್ನುವ ನಂಬಿಕೆ ಇಲ್ಲ. ಆ ಜನ್ಮದಲ್ಲಿಯೇ ಮೋಕ್ಷ ಹೊಂದುವರೆಂದು ನಂಬಿಕೆ ಇಲ್ಲ. ಕರ್ಮ ಶೇಷವಿಲ್ಲದಿದ್ದರೇನೇ ಮೋಕ್ಷ ಸಾಧ್ಯವಾಗುತ್ತದೆ.

## ಜ್ಞಾನ ಪರೀಕ್ಷೆ

**ತಾಡಿಪತ್ರಿ** **ದಿನಾಂಕ – 28–01–1987**

**419. (1) ಕಾರ್ಯ ಏನನ್ನು ಅನುಸರಿಸಿ ಇರುತ್ತದೆ?**

ಉ. ಕರ್ಮವನ್ನನುಸರಿಸಿ ಇರುತ್ತದೆ.

**ವಿವರ :** ಕರ್ಮ ಮೂರು ವಿಧಗಳಾಗಿ ಇದೆ. ಒಂದು ಸಂಚಿತ, ಎರಡು ಆಗಾಮಿಕ, ಮೂರು ಪ್ರಾರಬ್ಧ. ಈ ಮೂರರಲ್ಲಿ ಪ್ರಾರಬ್ಧವನ್ನನುಸರಿಸಿ ಪ್ರತಿ ಕಾರ್ಯವಿರುತ್ತದೆ. ಸಣ್ಣ ಕೆಲಸವಾಗಲಿ, ದೊಡ್ಡ ಕೆಲಸವಾಗಲಿ, ಕಠಿಣವಾದ ಕೆಲಸವಾಗಲಿ, ಸುಲಭವಾದ ಕೆಲಸವಾಗಲಿ ಎಲ್ಲವೂ ಪ್ರಾರಬ್ಧ ಕರ್ಮವನ್ನನುಸರಿಸಿಯೇ ಇರುತ್ತದೆ. ಕರ್ಮಇಲ್ಲದ ಕಾರ್ಯವಿರುವುದಿಲ್ಲ. ಶರೀರದಲ್ಲಿ ನಿಕ್ಷಿಪ್ತವಾಗಿ ಇರುವ ಕರ್ಮದ ಪ್ರಕಾರ ಕೆಲಸಗಳು ನಡೆಯುತ್ತಿರುತ್ತವೆ.

**420. (2) ಶರೀರದಲ್ಲಿನ ಉದಾನವಾಯುವೊಂದರ ಸ್ಥಾನ ಎಲ್ಲಿ?**

ಉ. ಜೀರ್ಣಾಶಯದಿಂದ ಕಂಠಸ್ಥಾನದವರೆಗೂ.

**ವಿವರ :** ಶರೀರದಲ್ಲಿ ವ್ಯಾನ, ಉದಾನ, ಸಮಾನ, ಪ್ರಾಣ, ಅಪಾನ, ವಾಯುಗಳು ಐದು ಇವೆ. ಅವು ಒಂದೊಂದು ಶರೀರದಲ್ಲಿ ಪರಿಮಿತ ಸ್ಥಾನಗಳನ್ನು ಆಕ್ರಮಿಸಿಕೊಂಡಿವೆ. ಉದಾನವಾಯು ಶರೀರದೊಳಗೆ ಜೀರ್ಣಾಶಯವೊಂದರ ಕೆಳಗಿನ ಕೊನೆಯಿಂದ ಕಂಠದ ಮೇಲಿನವರೆಗೂ ವ್ಯಾಪಿಸಿಕೊಂಡಿದೆ. ಜೀರ್ಣಾಶಯವನ್ನು ಇಪ್ಪತ್ತುನಾಲ್ಕುಗಂಟೆ ಕದಲಿಸುವುದಕ್ಕೆ ಆಹಾರವನ್ನು ಕೆಳಗಿನದು ಮೇಲಕ್ಕೆ, ಮೇಲಿನದು ಕೆಳಕ್ಕೆ ಬದಲಾಗುವಹಾಗೆ ಮಾಡುತ್ತಿದೆ. ತೇಗು, ಆಕಳಿಕೆಗಳಾಗಿ ಬರುವುದು ಸಹ ಉದಾನವಾಯುವೇ.

**421. (3) ನಾಲಿಗೆ ಯಾವ ಪ್ರಕೃತಿ ಭಾಗಗಳಿಂದ ತಯಾರಾಗಿದೆ?**

ಉ. ಅಗ್ನಿ ಮೂರನೆಯ ಭಾಗ, ನೀರು ಮೂರನೆಯ ಭಾಗ ಸೇರಿ ತಯಾರಾಗಿದೆ.

**ವಿವರ :** ಶರೀರ ಒಟ್ಟು 25 ಭಾಗಗಳಾಗಿ ತಯಾರಾಗಿದೆ ಎಂದು ತಿಳಿದುಕೊಂಡಿದ್ದೇವೆ. ಪ್ರಕೃತಿಯಲ್ಲಿನ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಒಂದೊಂದು ಐದು ಭಾಗಗಳಾಗಿ ವಿಭಜಿಸಲಾಗಿದೆ ಅವು ಒಂದರ ಜೊತೆ ಒಂದು ಸೇರುವುದರಿಂದ ಶರೀರದೊಳಗಿನ ಅವಯವಗಳೆಲ್ಲವೂ ತಯಾರಾಗಿವೆ. ಮಗು ಆಕೃತಿಯಲ್ಲಿ ತಾಯಿ ತಂದೆಯರ ಹೋಲಿಕೆಗಳಿರುವಹಾಗೆ, ಪ್ರಕೃತಿ ಭಾಗಗಳು ಸೇರುವುದರಿಂದ ಏರ್ಪಟ್ಟ ಅವಯವಗಳಿಗೆ ಆ ಪ್ರಕೃತಿ ಲಕ್ಷಣಗಳು ಕೆಲವು ಬಂದಿವೆ. ನಾಲಿಗೆ ಜ್ಞಾನೇಂದ್ರಿಯವಾಗಿ ಚುರುಕಾಗಿ ಕೆಲಸ ಮಾಡುವುದರಿಂದ ಅಗ್ನಿಗೆ ತಯಾರಾಗಿದೆಂದು, ಅದು ಯಾವಾಗಲೂ ತೇವಾಂಶ ಇರುವುದರಿಂದ ನೀರೊಂದಿಗೂ ಸಹ ತಯಾರಾಗಿದೆ ಎಂದು ತಿಳಿಯುತ್ತಿದೆ. ವಿವರಿಸಿ ನೋಡಿದರೆ ಅಗ್ನಿ ಮೂರನೆ ಭಾಗ, ನೀರು ಮೂರನೆಯ ಭಾಗದಿಂದ ತಯಾರಾಗಿದೆಯೆಂದು ತಿಳಿಯುತ್ತಿದೆ.

**422. (4) ಕರ್ಮಯೋಗ ಆಚರಿಸುವುದಕ್ಕೆ ಶರೀರ ಭಾಗಗಳಲ್ಲಿ ಯಾವುದನ್ನು ಅಡಗಿಸಿ ಹಾಕಬೇಕು?**

ಉ. ಅಹಂಕಾರವನ್ನು.

**ವಿವರ :** ಯೋಗಗಳು ಎರಡು ವಿಧಗಳಾಗಿ ಹೇಳಲಾಗಿವೆ. ಅದರಲ್ಲಿ ಕರ್ಮ ಯೋಗ, ಬ್ರಹ್ಮಯೋಗವೆನ್ನುವವು ಇವೆ. ಕರ್ಮಯೋಗ ಸಾಧಾರಣವಾಗಿ ಕೆಲಸಗಳು ಮಾಡುತ್ತಾ ಆಚರಿಸಬಹುದು. ಕರ್ಮಯೋಗಿಗಳು ಜೀವನದಲ್ಲಿ ಕೆಲಸಗಳನ್ನು ನಿರೋಧಿಸದೆ ಅದರಿಂದ ಬರುವ ಕರ್ಮವನ್ನು ನಿರೋಧಿಸುವವರಾಗಿ ಇರುತ್ತಾರೆ. ಯಾರಾದರೂ ಕೆಲಸಗಳಲ್ಲಿ ಅಸ್ವತಂತ್ರರೇ, ಆದರೆ ಕರ್ಮವನ್ನು ಸಂಪಾದಿಸಿಕೊಳ್ಳುವುದರಲ್ಲಿ ಸ್ವತಂತ್ರರಾಗಿ ಇದ್ದಾರೆಂದು **"ಕರ್ಮಣ್ಯೇವಾದಿ ಕಾರಸ್ತೇ"** ಎಂದು ಗೀತೆಯಲ್ಲಿ ಸಹ ಹೇಳಲಾಗಿದೆ. ಕರ್ಮ ಪ್ರಕಾರ ಕೆಲಸಗಳು ಮಾಡಬೇಕಾದ ಯೋಗಿಗಳು, ಶರೀರದಲ್ಲಿನ ಅಹಂಕಾರನ್ನು ಅಡಗಿಸಿ ಹಾಕಿ, ಮುಂಬರುವ ಕರ್ಮವನ್ನು ಇಲ್ಲದಂತೆ ಮಾಡಿಕೊಳ್ಳುತ್ತಿದ್ದಾರೆ. ಅಹಂ ಇಲ್ಲದಿರುವುದರಿಂದ ಆಗಾಮಿ ಕರ್ಮ ಬರುವುದಿಲ್ಲ. ಪ್ರಾರಬ್ಧಕರ್ಮ ಇರುವುದರಿಂದ ಕೆಲಸಗಳು ತಪ್ಪದೇ ಮಾಡಿ ಅನುಭವಿಸಬೇಕಾಗಿದೆ.

**423. (5) ಮೃತ್ಯುವು ಯಾವ ಕರ್ಮವನ್ನನುಸರಿಸಿ ಇರುತ್ತದೆ?**

ಉ. ಪ್ರಾರಬ್ಧವನ್ನನುಸರಿಸಿ ಇರುತ್ತದೆ.

**ವಿವರ :** ಕರ್ಮ ಮೂರು ವಿಧಗಳು. 1. ಪ್ರಾರಬ್ಧ, 2. ಆಗಾಮಿಕ, 3. ಸಂಚಿತ. ಮೂರು ಕರ್ಮಗಳಲ್ಲಿ ಪ್ರಾರಬ್ಧವನ್ನನುಸರಿಸಿ ಜೀವನವಿರುತ್ತದೆ. ಹುಟ್ಟಿನಿಂದ ಸಾವಿನವರೆಗು ನಡೆಯುವುದೆಲ್ಲಾ ಪ್ರಾರಬ್ಧವನ್ನನುಸರಿಸಿ ಇರುತ್ತದೆ.

**424. (6) ಗುರುದ್ರೋಹಿಗಳಿಗೆ ಯಾವ ಪಾಪ ಸಂಭವಿಸುತ್ತದೆ?**

ಉ. ಕ್ಷಮಿಸಲಾರದ ಪಾಪ.

**ವಿವರ :** ಪಾಪಗಳಲ್ಲಿ ಎರಡು ವಿಧಗಳಾದ ಪಾಪಗಳು ಇವೆ. ಒಂದು ತಪ್ಪದೆ ಅನುಭವಿಸಬೇಕು, ಎರಡನೆಯದು ಶರಣು ಬೇಡಿದರೆ ದೈವತ್ವದಿಂದ ಕ್ಷಮಿಸಲ್ಪಡುವುದು. ಗುರುವಿಗೇ ದ್ರೋಹ ಮಾಡಿದವರಿಗೆ ಭಗವಂತನು ಆಗಲಿ, ಗುರುವಾಗಲಿ ಸ್ವತಃವಾಗಿ ಕ್ಷಮಿಸಿದರೂ ಆ ಪಾಪ ಕ್ಷಮಿಸಲ್ಪಡುವುದಿಲ್ಲ. ಅದು ತಪ್ಪದೇ ಅನುಭವಿಸಬೇಕಾಗುತ್ತದೆ. ಇದನ್ನೇ ಕ್ಷಮಿಸಲಾರದ ಪಾಪ ಎನ್ನುತ್ತೇವೆ.

**425. (7) ಭಗವಂತನು ಸಾಕಾರನಾ? ನಿರಾಕಾರನಾ?**

ಉ. ಸಾಕಾರನು.

**ವಿವರ :** ಅಣುಅಣುವಿನಲ್ಲಿ ವ್ಯಾಪಿಸಿದ ಪರಮಾತ್ಮ ಶರೀರವನ್ನು ಧರಿಸಿ ಬಂದಾಗ ಆ ರೂಪವನ್ನು ಭಗವಂತನೆನ್ನುತ್ತೇವೆ. ಪರಮಾತ್ಮ ನಿರಾಕಾರನೇ ಆದರೂ, ಶರೀರವನ್ನು ಧರಿಸಿ ಭಗವಂತನಾದಾಗ ಕಣ್ಣಿಗೆ ಕಾಣಿಸುತ್ತಿದ್ದಾನೆ. ಆದ್ದರಿಂದ ಭಗವಂತನು ಸಾಕಾರನೆಂದು ಹೇಳಬಹುದು.

**426. (8) ದಾನ ಎಂದರೇನು?**

ಉ. ಕೊಡುವುದೇ ದಾನ.

**ವಿವರ :** ಶರೀರದಲ್ಲಿ ಆರು ಕೆಟ್ಟ ಗುಣಗಳು, ಆರು ಒಳ್ಳೆಯ ಗುಣಗಳು ಇವೆ. ಅವುಗಳಲ್ಲಿ ಕೆಟ್ಟಗುಣಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ

ಎನ್ನುವ ಆರು ಗುಣಗಳಿಗೆ, ಆರು ವಿರುದ್ಧ ಗುಣಗಳಿವೆ. ಕಾಮಕ್ಕೆ ವಿರುದ್ಧ ಗುಣ ದಾನ. ಬೇಕೆಂದುಕೊಳ್ಳುವುದು ಆಸೆ ಗುಣವಾದರೆ, ಕೊಡಬೇಕೆಂದುಕೊಳ್ಳುವುದು ದಾನ.

**427. (9) "ಧನಮೂಲ ಮಿದಮ್ ಜಗತ್" ಎನ್ನುತ್ತಾರೆ ನಿಜವೇನಾ?**

ಉ. ಅಸತ್ಯ

**ವಿವರ :** ಪ್ರಪಂಚದಲ್ಲಿ ಧನದಿಂದಲೇ ಪ್ರತಿ ಕೆಲಸ ನಡೆಯುವ ಹಾಗೆ ಕಾಣಿಸುತ್ತಿದೆ, ಆದ್ದರಿಂದ ಧನ ಮೂಲ ಮಿದಮ್ ಜಗತ್ ಎಂದಿದ್ದಾರೆ. ಇದು ಎಲ್ಲರಿಗೂ ಮೇಲೆ ಕಾಣಿಸುವ ಸತ್ಯ. ಇದಕ್ಕಿಂತ ಮತ್ತೊಂದು ಕಣ್ಣಿಗೆ ಕಾಣಿಸದ ಸತ್ಯವಿದೆ. ಅದರ ಮುಂದೆ ಧನ ಮೂಲ ಮಿದಮ್ ಜಗತ್ ಎನ್ನುವ ಮಾತು ಪೂರ್ತಿ ಅಸತ್ಯವಾಗುತ್ತಿದೆ. ಮನುಷ್ಯನಿಗೆ ಧನ ಬರಬೇಕೆಂದರೂ, ಕೆಲಸ ನೆರವೇರಬೇಕೆಂದರು, ಎಲ್ಲದಕ್ಕೂ ಕಾರಣ ಕರ್ಮವೇ ಆಗಿದೆ. ಕರ್ಮದಿಂದಲೇ ಧನವು ಕೈಗೂಡುತ್ತದೆ. ಕರ್ಮದಿಂದಲೇ ಕೆಲಸಗಳು ನಡೆಯುತ್ತಿವೆ. ಕರ್ಮದಿಂದಲೇ ಬಡವರು ಧನಿಕರಾಗುತ್ತಿದ್ದಾರೆ. ಸಾವು ಹುಟ್ಟುಗಳು ಸಹ ಕರ್ಮದಿಂದಲೇ ನಡೆಯುತ್ತಿವೆ. ಎಲ್ಲವೂ ಕರ್ಮದಿಂದಲೇ ನಡೆಯುತ್ತಿರುವಾಗ **"ಕರ್ಮ ಮೂಲ ಮಿದಮ್ ಜಗತ್"** ಎನ್ನುವ ಮಾತು ಸತ್ಯವಾಗಿದೆಯೆಂದು ಧನಮೂಲ ಮಿದಮ್ ಜಗತ್ ಎನ್ನುವ ಮಾತು ಅಸತ್ಯವಾಗಿದೆಯೆಂದು ಹೇಳಬಹುದು.

**428. (10) ಕಾಲವೆಂದರೆ ಏನು?**

ಉ. ನಡೆದುಹೋಗುವುದು, ಭಯಂಕರವಾದದ್ದು, ಅರ್ಥವಾಗದ್ದು, ಅನುಭವಕ್ಕೆ ಬಾರದ್ದು.

**ವಿವರ :** ಕಾಲಕ್ಕೆ ಸರಿಯಾದ ನಿರ್ವಚನವನ್ನು ಹೇಳಲಾರೆವು. ಏಕೆಂದರೆ ಕಾಲ ಪರಮಾತ್ಮವೊಂದರ ಪ್ರತಿರೂಪ. ಭಗವದ್ಗೀತೆಯಲ್ಲಿ ಅರ್ಜುನನಿಗೆ ಅರ್ಥವಾಗದೆ ಪರಮಾತ್ಮನನ್ನು ನೀನ್ಯಾರು ಎಂದಾಗ, ಅದಕ್ಕೆ ಉತ್ತರವಾಗಿ ಕ್ಷಯವನ್ನು ಉಂಟುಮಾಡುವ ಕಾಲ ನಾನೇ ಎಂದಿದ್ದಾನೆ. ನಿತ್ಯವು ಕ್ಷಣಕ್ಷಣವು ನಡೆಯುತ್ತಿರುವ ಕಾಲ ಪರಮಾತ್ಮ ಸ್ವರೂಪ. ಕಾಲ ಯಾರಿಗೂ ಅರ್ಥವಾಗುವುದಿಲ್ಲ. ಅದನ್ನು ಯಾರೂ ಅನುಭವಿಸಲಾರರು. ಮೋಕ್ಷ ಹೊಂದಿದವನನ್ನು ಕಾಲವಾಗಿ ಹೋಗಿದ್ದಾನೆ ಎಂದು ಪೂರ್ವದಲ್ಲಿ ಹೇಳುತ್ತಿದ್ದರು. ಕಾಲವಾಗಿ ಹೋಗಿರುವವನಿಗೆ ಕಾಲ ಎಂದರೆ ಏನೋ ತಿಳಿಯುವುದು. ಉಳಿದ ಯಾರಿಗೂ ತಿಳಿಯದು.

**429. (11) ನೀನು ದ್ವೈತನಾ? ಅದ್ವೈತನಾ?**

ಉ. ನಾನು ತ್ರೈತನು.

**ವಿವರ :** ಕ್ಷರಾಕ್ಷರ ಪುರುಷೋತ್ತಮರಲ್ಲಿ ನಾನು ಕ್ಷರ ಪುರುಷನು ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವವರಲ್ಲಿ ನಾನು ಜೀವಾತ್ಮನು. ಜೀವಿಯು, ದೇವರು, ದೇವದೇವರು ಎನ್ನುವರಲ್ಲಿ ಜೀವಾತ್ಮನು. ಅದ್ವೈತಿ ಎಂದರೆ ಎರಡು ಅಲ್ಲದ್ದು ಒಂದೇ ಆಗಿರುವುದು ಪರಮಾತ್ಮ. ನಾನು ಕಾಲವಾಗಿ ಹೋದ ದಿನ ಎಂದರೆ ಮೋಕ್ಷವನ್ನು ಹೊಂದಿದ ದಿನ ಪರಮಾತ್ಮನಾಗಿ ಬದಲಾಗುವೆನು ಆದ್ದರಿಂದ ಆಗ ಅದ್ವೈತಿ ಆಗುತ್ತೇನೆ. ದ್ವೈತಿ ಎಂದರೆ ಆತ್ಮಯೋಗವನ್ನು ಆಚರಿಸಿ ನಾನು ಆತ್ಮನಲ್ಲಿ ಐಕ್ಯವಾಗಿ ಹೋದಾಗ, ಪರಮಾತ್ಮ ಒಂದಾದರೆ ಆತ್ಮ ಎರಡನೆಯದು ಆಗಿರುವುದರಿಂದ ಆಗ ನಾನು ದ್ವೈತಿಯಾಗುತ್ತೇನೆ. ಅದ್ವೈತಿ, ದ್ವೈತಿ ಆಗದಿರುವಾಗ ಯಾವಾಗಲೂ ಮೂರನೆಯ ಆತ್ಮನಾದ ಜೀವಾತ್ಮನಾಗಿ ಇದ್ದೇನೆ, ಆದ್ದರಿಂದ ತ್ರೈತನಾಗಿ ಇದ್ದೇನೆ. ಅಂದರೆ ಈಗ ನಾನು ತ್ರೈತನು. ತ್ರೈತದಿಂದ ಅದ್ವೈತಕ್ಕೆ ಸೇರಬೇಕೆಂದು ಪ್ರಯತ್ನಿಸುತ್ತಿದ್ದೇನೆ.

**430. (12) ಜ್ಞಾನಯೋಗ ಲಭಿಸುವುದಕ್ಕೆ ಶರೀರದಲ್ಲಿ ಯಾವ ಭಾಗ ಮುಖ್ಯ ಪಾತ್ರ ವಹಿಸುತ್ತಿದೆ?**

ಉ. ಮನಸ್ಸು.

**ವಿವರ :** ಜ್ಞಾನಯೋಗ, ರಾಜಯೋಗ ಎನ್ನುವ ಎರಡು ಯೋಗಗಳಲ್ಲಿ ಜ್ಞಾನಯೋಗ ಲಭ್ಯವಾಗುವುದಕ್ಕೆ ಶರೀರದಲ್ಲಿನ ಅಂತಃಕರಣಗಳಲ್ಲಿ ಮನಸ್ಸು ಮುಖ್ಯ ಕಾರಣವಾಗಿ ಇದೆ. ಮನಸ್ಸು ಯಾವ ವಿಷಯ ಜ್ಞಾಪಕವನ್ನು ತಂದಿಡದೆ ಹೋದರೆ ಜ್ಞಾನಯೋಗ ಲಭ್ಯವಾಗುತ್ತದೆ. ಮನಸ್ಸು ಸಣ್ಣ ಸಂಕಲ್ಪವನ್ನು ತಂದಿಟ್ಟರೂ ಜ್ಞಾನಯೋಗ ಲಭ್ಯವಾಗುವುದಿಲ್ಲ. ಆದ್ದರಿಂದ ಜ್ಞಾನಯೋಗ ಅಥವಾ ಬ್ರಹ್ಮಯೋಗ ಲಭ್ಯವಾಗಬೇಕೆಂದರೆ ಮನಸ್ಸನ್ನು ಜಯಿಸಬೇಕೆಂದು ಹಿರಿಯರು ಹೇಳಿದ್ದಾರೆ. ಮನೋ ಚಂಚಲವಿರುವವರೆಗೂ ಜ್ಞಾನಯೋಗ ಲಭ್ಯವಾಗುವುದಿಲ್ಲ.

**431. (13) ಮಹರ್ಷಿ, ರಾಜರ್ಷಿ, ದೇವರ್ಷಿ ಬ್ರಹ್ಮರ್ಷಿ ಎನ್ನುವ ಯೋಗಿಗಳಲ್ಲಿ ಯಾರು ಪರಮಾತ್ಮನನ್ನು ತಿಳಿಯುವರು?**

ಉ. ಯಾರೂ ತಿಳಿಯರು.

**ವಿವರ :** ಶರೀರವನ್ನು ಧರಿಸಿರುವ ಯಾವ ಯೋಗಿಯಾಗಲಿ, ಪ್ರಪಂಚದಲ್ಲಿ ಬದುಕಿರುವ ಯಾರೇಯಾಗಲಿ ಪರಮಾತ್ಮನನ್ನು ತಿಳಿಯಲಾರರು. ಯಾರಾದರಾಗಲಿ ಆತ್ಮನನ್ನು ಜೀವಾತ್ಮನನ್ನು ತಿಳಿಯಬಹುದು, ಪರಮಾತ್ಮನನ್ನು ಮಾತ್ರ ತಿಳಿಯಲಾರರು. ಕರ್ಮಶೇಷ ಇಲ್ಲದಂತಾಗಿ, ಜನ್ಮಗಳು ಇಲ್ಲದಂತಾಗಿ, ಮೋಕ್ಷ ಹೊಂದಿದಾಗ, ಪರಮಾತ್ಮವನ್ನು ಸೇರಿದಾಗ, ಅವನೇ ಪರಮಾತ್ಮವಾಗಿ ಬದಲಾಗಿ ಆಗ ಪರಮಾತ್ಮ ಏನೋ ತಿಳಿಯುವುದು. ಅಲ್ಲಿಯವರೆಗು ಪರಮಾತ್ಮ ಯಾವ ಮಹರ್ಷಿಗೂ ತಿಳಿಯದು. ಸಾವಿರ ವರ್ಷಗಳಿಗೊಮ್ಮೆ ಪರಮಾತ್ಮನೇ ಭೂಮಿ ಮೇಲೆ ಅವತರಿಸಿದರು ಭಗವಂತನ ವಿನಃ ಯಾರಿಗೂ ಪರಮಾತ್ಮ ವಿಷಯ ತಿಳಿಯದು. ಭಗವಂತನು ಸಹ ಸಾವಿರ ವರ್ಷಗಳಿಗೋ, ಲಕ್ಷ ವರ್ಷಗಳಿಗೋ ಜನಿಸುವನು. ಆತನ ಜನ್ಮವನ್ನೂ ಸಹ ತಿಳಿಯುವುದಕ್ಕೆ ಮನುಷ್ಯರಿಗೆ ಬಹಳ ಕಷ್ಟ.

**432. (14) ಪಾಪಗಳಲ್ಲಿ ಎಷ್ಟು ವಿಧಗಳಿವೆ?**

ಉ. ಎರಡು ವಿಧಗಳು.

**ವಿವರ :** ಪಾಪಗಳು ಪ್ರಪಂಚಸಂಬಂಧವಾದವು, ಪರಮಾತ್ಮ ಸಂಬಂಧವಾದವು ಎನ್ನುವ ಎರಡು ವಿಧಗಳಿವೆ. ಪ್ರಪಂಚ ಸಂಬಂಧ ಪಾಪಗಳಿಗಿಂತ ಪರಮಾತ್ಮ ಸಂಬಂಧವಾದವು ಬಹಳ ಕಠಿಣವಾಗಿ ಇರುತ್ತವೆ. ಶಿಕ್ಷೆಗಳು, ಕಠಿಣ ಶಿಕ್ಷೆಗಳು ಎನ್ನುವ ಎರಡು ವಿಧಗಳಿದ್ದಹಾಗೆ, ಮನುಷ್ಯರಿಗೆ ಮಾಡಿದ ದ್ರೋಹಗಳು ಶಿಕ್ಷೆಗಳಾಗಿ ಪರಿಣಮಿಸಿದಾಗ ಪರಮಾತ್ಮನ ಕಡೆ ಎಂದರೆ ಭಗವಂತನಿಗೆ ಮಾಡಿದ ದ್ರೋಹಗಳು ಕಠಿಣ ಶಿಕ್ಷೆಗಳಾಗಿ ಪರಿಣಮಿಸುವುದು. ಪ್ರಾಪಂಚಿಕ ಪಾಪಗಳನ್ನು ಅನುಭವಿಸಲಾರದೆ ಭಗವಂತನನ್ನು ಶರಣು ಬೇಡಿದವರು ಭಗವಂತನಿಂದ ಕ್ಷಮಿಸಲ್ಪಡಬಹುದು. ಆದರೆ ಭಗವಂತನ ಬಗ್ಗೆ ಮಾಡಿದ ಪಾಪಗಳನ್ನು ಭಗವಂತನಿಂದಲೂ ಸಹ ಕ್ಷಮಿಸಲ್ಪಡುವುದಿಲ್ಲ. ಆದ್ದರಿಂದ ಪಾಪಗಳು ಎರಡು ವಿಧಗಳೆಂದು ಒಂದು ಕ್ಷಮಿಸಲಾಗುವ ಪಾಪಗಳು, ಎರಡು ಕ್ಷಮಿಸಲಾಗದ ಪಾಪಗಳೆಂದು ಹೇಳಬಹುದು.

**433. (15) ಜಗದ್ಗುರುವು ಎಂದರೆ ಯಾರು?**

ಉ. ಜಗತಿಗೆಲ್ಲಾ ವರ್ತಿಸುವ ಧರ್ಮಗಳನ್ನು ಬೋಧಿಸುವವನು ಜಗದ್ಗುರುವು.

**ವಿವರ : "ಜ"** ಎಂದರೆ ಹುಟ್ಟುವುದು, **"ಗತಿ"** ಎಂದರೆ ಗತಿಸುವುದು, ಜಗತಿ ಎಂದರೆ ಜನನ ಮರಣಗಳು ಇರುವುದೆಂದು ಅರ್ಥ. ಜನನ ಮರಣವನ್ನು ಹೊಂದಿರುವವು

ಜೀವಿಗಳು. ಸರ್ವ ಜೀವರಾಶಿಗಳು ಜಗತಿಯಲ್ಲಿರುವವೇ, ಆದ್ದರಿಂದ ಸರ್ವ ಜೀವರಾಶಿಗಳಿಗೂ ಅನ್ವಯಿಸುವ ಧರ್ಮಗಳನ್ನು ತಿಳಿಸುವವನು ಜಗದ್ಗುರು. ಬಹಳ ಜನ ಶಿಷ್ಯರು ಇರುವವರನ್ನು ಜಗದ್ಗುರುವೆಂದು ಈ ಕಾಲದಲ್ಲಿ ತಿಳಿಯುವುದು ನಡೆಯುತ್ತಿದೆ. ಶಿಷ್ಯರ ಸಂಖ್ಯೆಯನ್ನನುಸರಿಸಿ ಜಗದ್ಗುರು ಎನ್ನುವುದು ಸರಿಯಾದ ಪದ್ಧತಿ ಅಲ್ಲ. ಬೋಧಿಸುವ ಧರ್ಮಗಳನ್ನನುಸರಿಸಿ ಜಗದ್ಗುರುವೆನ್ನುವುದು ಸಮಂಜಸ.

**434. (16) ಆಹಾರವನ್ನನುಸರಿಸಿ ಗುಣವಾ? ಗುಣವನ್ನನುಸರಿಸಿ ಆಹಾರವಾ?**

ಉ. ಗುಣವನ್ನನುಸರಿಸಿ ಆಹಾರ.

**ವಿವರ :** ಬಹಳ ಜನ ಆಹಾರದಿಂದ ಗುಣಗಳಿವೆಯೆಂದು ಹೇಳುತ್ತಿದ್ದಾರೆ, ಗ್ರಂಥಗಳಲ್ಲಿಯೂ ಬರೆಯುತ್ತಿದ್ದಾರೆ. ಆದರೆ ಅದು ಶಾಸ್ತ್ರಬದ್ಧವಾದ ಮಾತು ಹೌದೋ ಅಲ್ಲವೋ ಎಂದು ನೋಡುತ್ತಿಲ್ಲ. ಗೀತಾಶಾಸ್ತ್ರದಲ್ಲಿ ಭಗವಂತನು ಹೇಳಿದ ಮಾತಿಗೆ ವಕ್ರ ಭಾಷ್ಯವನ್ನು ಹೇಳಿದವರು ಸಹ ಎಷ್ಟೋ ಜನ ಇದ್ದಾರೆ. ಎಷ್ಟೋ ಜನ ಭಗವದ್ಗೀತೆ ಬರೆದವರೆಲ್ಲರೂ ಅದನ್ನೇ ಹೇಳಿದ್ದಾರೆಂದು ಹೇಳಬಹುದು. ಭಗವಂತನ ಗೀತೆಯನ್ನು ಅಪಶೃತಿ ಮಾಡಿದರೆ ದೊಡ್ಡ ತಪ್ಪೆಂದು ತಿಳಿದಿಲ್ಲ. ಭಗವಂತನು ಗೀತೆಯಲ್ಲಿ ಗುಣಗಳನ್ನನುಸರಿಸಿ ಆಹಾರದ ಮೇಲೆ ಇಚ್ಛೆ ಬರುವುದೆಂದು ಹೇಳಿದ್ದಾನೆ, ಆಹಾರವನ್ನನುಸರಿಸಿ ಗುಣಗಳು ಬರುವವೆಂದು ಹೇಳಲಿಲ್ಲ. ಕರ್ಮವನ್ನನುಸರಿಸಿ ಆಹಾರ ಲಭಿಸುವುದು, ಲಭಿಸದೆ ಹೋಗುವುದು ನಡೆಯುತ್ತಿರುತ್ತದೆ. ಕರ್ಮವನ್ನನುಸರಿಸಿ ಯಾವ ಆಹಾರವನ್ನು ತಿನ್ನುತ್ತಿದ್ದರೂ ಅವನಲ್ಲಿರುವ ಗುಣವನ್ನನುಸರಿಸಿ ಆಹಾರದ ಮೇಲೆ ಇಚ್ಛೆ ಇರುತ್ತದೆ, ಇಚ್ಛೆ ಇರುವ ಆಹಾರ ಲಭಿಸಬಹುದು, ಲಭಿಸದೆ ಹೋಗಬಹುದು. ಗುಣವನ್ನನುಸರಿಸಿ ಆಹಾರವೆನ್ನುವ ಮಾತು ಮಾತ್ರ ಮರೆಯಬಾರದು.

**435. (17) ಶಿಷ್ಯನು ತಿಳಿದುಕೊಳ್ಳುವುದು ಸ್ಮೃತಿಯಾ ಅಥವಾ ಶೃತಿಯಾ?**

ಉ. ಶೃತಿಯನ್ನು.

**ವಿವರ :** ಗುರುವನ್ನು ಹೊರತು ಯಾವ ಶಿಷ್ಯನಾದರೂ ಶೃತಿಯಿಂದ ತಿಳಿದುಕೊಳ್ಳ ಬೇಕಾಗಿದ್ದೇ. ಸ್ಮೃತಿಗಳು ಗುರುವಿಗೆ, ಶೃತಿಗಳು ಶಿಷ್ಯರಿಗೆ ಎನ್ನುವ ಸೂತ್ರದ ಪ್ರಕಾರ ಇಂದ್ರಿಯಗಳಲ್ಲಿ ಒಂದಾದ ಕಿವಿಯಿಂದ ಲಭಿಸುವ ಶೃತಿಯೊಂದಿಗೆ ಅಂದರೆ ಶಬ್ದದೊಂದಿಗೆ ಶಿಷ್ಯನು ತಿಳಿಯಬೇಕಾಗಿದೆ. ಸ್ಮೃತಿ ಎಂದರೆ ಹೃದಯದಿಂದ ಹುಟ್ಟುವುದು ಅಂದರೆ

ಆತ್ಮದಿಂದ ಲಭ್ಯವಾಗುವುದು. ಶೃತಿ ಎಂದರೆ ಶಬ್ದ ಕಿವಿಯಿಂದ ಹುಟ್ಟುವುದು ಅಂದರೆ ಇತರರಿಂದ ಹೇಳಲ್ಪಡುವುದು. ಗುರುವುನಿಂದ ಹೇಳಲಾಗಿರುವ ವಿಷಯವನ್ನು ಶಿಷ್ಯನು ಕಿವಿಯಿಂದ ಕೇಳುತ್ತಿದ್ದಾನೆ. ಗುರುವು ಆತ್ಮದಿಂದ ಜ್ಞಾಪಕಕ್ಕೆ ಬಂದಿರುವ ವಿಷಯಗಳನ್ನು ಶಿಷ್ಯನಿಗೆ ತಿಳಿಸುತ್ತಿದ್ದಾನೆ. ಆದ್ದರಿಂದ ಇತರರಿಂದ ಹೇಳಿರುವವನ್ನು ತಿಳಿದುಕೊಳ್ಳುವವನು ಶಿಷ್ಯನು. ಅವುಗಳನ್ನೇ ಪುನಃ ಹೇಳಿದರೆ ಬೋಧಕನು. ಯಾರಿಂದಲೂ ಹೇಳಲಾರದೆ ಆತ್ಮನಿಂದ ಹುಟ್ಟಿಬಂದ ವಿಷಯಗಳನ್ನು ಹೇಳುವವನು ಗುರುವು. ಶಿಷ್ಯನು ಬೋಧಕನು ಆಗಬಹುದು. ಬೋಧಕನು ಗುರುವು ಆಗಲಾರನು.

**436. (18) ಶಂಖು ಚಕ್ರಗಳಲ್ಲಿ ಚಕ್ರ ಯಾವುದಕ್ಕೆ ಗುರುತು?**

ಉ. ಕರ್ಮ ನಾಶಕ್ಕೆ ಗುರುತು.

**ವಿವರ :** ತಿರುಪತಿ ಮೊದಲಾದ ದೇವಾಲಯಗಳಲ್ಲಿ ಶಂಖು ಚಕ್ರಗಳು ಅವುಗಳ ಮಧ್ಯೆ ನಾಮ ಇರುವುದನ್ನು ನೋಡಿಯೇ ಇರುತ್ತೇವೆ. ಅವುಗಳಲ್ಲಿ ಶಂಖು ಜ್ಞಾನಕ್ಕು, ಜ್ಞಾನ ಬೋಧನೆಗು ಗುರುತಾದಾಗ, ಚಕ್ರ ಜ್ಞಾನ ಖಡ್ಗವಾಗಿ ಕರ್ಮ ನಾಶಕ್ಕೆ ಗುರ್ತಾಗಿ ಇದೆ. ದೇವಾಲಯಗಳಲ್ಲಿ ಪ್ರತಿ ಒಂದು ಆಧ್ಯಾತ್ಮಿಕ ಅರ್ಥಗಳೊಂದಿಗೆ ಕೂಡಿಕೊಂಡಿರುತ್ತದೆ. ಆದ್ದರಿಂದ ದೇವಾಲಯಗಳಲ್ಲಿ ಪ್ರತಿ ಒಂದು ಚಿಹ್ನೆಯನ್ನು ಆಧ್ಯಾತ್ಮಿಕ ದೃಷ್ಠಿಯಿಂದಲೇ ನೋಡಬೇಕು. ಆ ಭಾವದೊಂದಿಗೆ ನೋಡಿದಾಗ, ಚಕ್ರ ಕರ್ಮ ನಾಶನವನ್ನು ತೋರಿಸುತ್ತಿದೆ ಎಂದು ತಿಳಿಯುತ್ತಿದೆ.

**437. (19) ಆತ್ಮ ದೇವರಾದರೆ ಪರಮಾತ್ಮ ಏನು ಆಗಬೇಕು?**

ಉ. ಏನೂ ಆಗುವುದಿಲ್ಲ.

**ವಿವರ :** ಹೇಳುವುದರಲ್ಲಿ ಒಂದೊಂದು ಸಲ ಆತ್ಮವನ್ನು ಪರಮಾತ್ಮವನ್ನು ಉದ್ದೇಶಿಸಿ ದೇವರೆಂದು ಹೇಳಿದರೂ, ಶರೀರದಲ್ಲಿನ ಆತ್ಮನನ್ನು ಆಲಯದಲ್ಲಿರುವ ದೇವರಾಗಿ ವರ್ಣಿಸಬಹುದು. ಸ್ಥಾನ ಆಕಾರ ಹೆಸರು ಇಲ್ಲದ ಪರಮಾತ್ಮನನ್ನು ದೇವರಾಗಿಯೂ ಸಹ ಹೇಳದೆ ಗೀತೆಯಲ್ಲಿ ಹೇಳಿದಹಾಗೆ ಆತ್ಮಗಿಂತಲೂ ಬೇರೆಯಾಗಿರುವ ಪರ ಆತ್ಮ (ಪರಮಾತ್ಮ)ವೆಂದೋ ಅಥವಾ ಉತ್ತಮ ಪುರುಷ(ಪುರುಷೋತ್ತಮ)ನೆಂದೋ ಹೇಳುವುದು ಒಳ್ಳೆಯದು. ಪರಮಾತ್ಮನನ್ನು ಮೀರಿರುವುದು ಯಾವುದೂ ಇಲ್ಲ ಆತನನ್ನು ಶಾಸಿಸುವುದು ಇಲ್ಲ. ಆತನೇ ಖುದ್ದಾಗಿ ನಿರ್ಣಯದೊಂದಿಗೆ ಭಗವಂತನಾಗಿ ಬಂದು ಹೋಗುತ್ತಿದ್ದಾನೆ.

ಆದ್ದರಿಂದ ಆತನನ್ನು ಖುದಾ ಎಂದು ಸಹ ಕರೆಯಬಹುದು. ಒಂದು ವಿಧವಾಗಿ ಆತ್ಮವನ್ನು ದೇವರೆಂದು ವರ್ಣಿಸುತ್ತಿದ್ದೇವೆ. ಆದ್ದರಿಂದ ಪರಮಾತ್ಮ ದೇವರೂ ಸಹ ಅಲ್ಲ, ದೇವರಿಗೇ ದೇವರಾದ ದೇವದೇವನೆಂದು ಹೇಳಬಹುದು.

**438. (20) ಪ್ರೇಮಗಳು ಎಷ್ಟು ವಿಧಗಳಾದರೂ ಅವು ಆತ್ಮನನ್ನು ಸೇರಿಸಬಲ್ಲವಾ?**

ಉ. ಸೇರಿಸಲಾರವು.

**ವಿವರ :** ಗುಣರಹಿತವಾದಾಗ, ಯಾವ ಸಂಕಲ್ಪ ಇಲ್ಲದಿರುವಾಗ, ಒಳಗಿರುವ ಆತ್ಮ ತಿಳಿಯುವುದೆಂದು ಗೀತಾಶಾಸ್ತ್ರ ಹೇಳುತ್ತಿದೆ. ಒಳ್ಳೆಯ ಗುಣಗಳಾಗಲಿ, ಕೆಟ್ಟ ಗುಣಗಳಾಗಲಿ ಆತ್ಮ ದರ್ಶನಕ್ಕೆ ಆತಂಕಗಳೇ. ಅಂತಹದರಲ್ಲಿ ಪ್ರೇಮ ಎನ್ನುವುದು ಒಂದು ಗುಣ ಆಗುವುದರಿಂದ, ಎಂತಹ ಪ್ರೇಮದೊಂದಿಗಾಗಲಿ ಆತ್ಮವನ್ನು ತಿಳಿಯಲಾರೆವು. ಯಾವ ಸಣ್ಣ ಗುಣ ಸಂಕಲ್ಪವೂ ಸಹ ಆತ್ಮನನ್ನು ದೂರವಾಗಿಡುವುದು. ಅಂತಹದರಲ್ಲಿ ಪ್ರೇಮವೆ ದೈವವೆಂದು, ದೈವ ಪ್ರೇಮ ಸ್ವರೂಪನೆಂದು ಹೇಳುತ್ತಿದ್ದಾರಲ್ಲ ಎಂದು ನೀವು ಕೇಳಬಹುದು. ಅದಕ್ಕೆ ಸಮಾಧಾನವೇನೆಂದರೆ! ಶಾಸ್ತ್ರಬದ್ಧವಾಗಿ ಸತ್ಯವನ್ನೇ ಹೇಳಬೇಕೆಂದರೆ ಪ್ರೇಮ ದೈವವಲ್ಲ, ದೈವ ಪ್ರೇಮ ಸ್ವರೂಪ ಅಲ್ಲ. ದೈವ ಗುಣಾತೀತನು. ಯಾವ ಗುಣವೂ ಆತನನ್ನು ಒಳಪಡಿಸಿಕೊಳ್ಳುವುದಿಲ್ಲ. ಆದ್ದರಿಂದ ಆತನನ್ನು ಪ್ರೇಮಮಯನೆಂದು, ಕರುಣಾಮಯನೆಂದು, ದಯಾಮಯನೆಂದು ಕರೆಯಬಾರದು. ಪ್ರೇಮ ದಯೆ ಎಲ್ಲಾ ಗುಣಗಳೇ ಆಗುತ್ತವೆ. ಗುಣಾತೀತವಾದದ್ದನ್ನು ಗುಣಾತೀತವಾಗೇ ಸೇರಬೇಕೆನ್ನುವುದು ಶಾಸನ. ದೇವರು ಹೇಳಿದ ಶಾಸನದ ಪ್ರಕಾರ ಪ್ರೇಮ ದೇವರನ್ನು ಸೇರಿಸಲಾರದು. ಸಂಸ್ಕೃತದಲ್ಲಿನ ಭಗವದ್ಗೀತೆಯನ್ನು ಕನ್ನಡ ಮೊದಲಾದ ಭಾಷೆಗಳಿಗೆ ಬದಲಾಯಿಸುವುದರಲ್ಲಿ, ಇಸ್ರಾಯೇಲ್ ಭಾಷಯಲ್ಲಿನ ಬೈಬಲ್‌ನ್ನು ಉಳಿದ ಭಾಷೆಗಳಲ್ಲಿ ಅನುವಾದಿಸುವುದರಲ್ಲಿ, ಶ್ರದ್ಧೆ ಎನ್ನುವ ಪದಕ್ಕೆ ಅರ್ಥ ಹೇಳುವುದರಲ್ಲಿ ಪ್ರೇಮ ಎಂದು ಹೇಳುವುದರಿಂದ, ಭಾವ ತಲೆಕೆಳಗಾಗಿ ದೇವರನ್ನು ಸಹ ದಯಾಮಯನು ಪ್ರೇಮಮಯನು ಎನ್ನುತ್ತಿದ್ದಾರೆ. ವಾಸ್ತವವಾಗಿ ದೇವರಿಗೆ ಹನ್ನೆರಡು ಗುಣಗಳಲ್ಲಿ ಯಾವೊಂದು ಗುಣವೂ ಇಲ್ಲವೆಂದು ತಿಳಿಯಬೇಕು.

**439. (21) ನವಿಲು ಗರಿಯಲ್ಲಿ ಮಧ್ಯೆದಿಂದ ಎರಡನೆಯ ಭಾಗ ಯಾವುದರ ಗುರುತು?**

ಉ. ಸಾತ್ವಿಕ.

**ವಿವರ :** ನವಿಲು ಗರಿಯಲ್ಲಿ ಒಟ್ಟು ನಾಲ್ಕು ಬಣ್ಣಗಳಿವೆ. ಬಣ್ಣಗಳನ್ನನುಸರಿಸಿ ಗರಿಯನ್ನು ನಾಲ್ಕು ಭಾಗಗಳಾಗಿ ಗುರುತಿಸಬಹುದು. **"ಚಾತುರ್ವರ್ಣಂ ಮಯಾ ಸೃಷ್ಟಂ"** ಎನ್ನುವ ಗೀತಾ ವಾಕ್ಯದ ಪ್ರಕಾರ ನವಿಲು ಗರಿಯಲ್ಲಿ ನಾಲ್ಕು ವರ್ಣಗಳಿರುವುದು ವಿಶೇಷ. ಅಷ್ಟೇ ಅಲ್ಲದೆ ಹೇಳಿದ ಭಗವಂತನೇ ಆ ಗರಿಯನ್ನು ಧರಿಸಿ ತೋರಿಸುವುದರಲ್ಲಿ ಬಹಳ ವಿಶೇಷವಿದೆ. ಅದರ ವಿಶೇಷವೇನೆಂದು ನೋಡುವುದಾದರೆ, ಭೂಮಿ ಮೇಲೆ ಇರುವ ನಾಲ್ಕು ವಿಧಗಳ ಮನುಷ್ಯರನ್ನು ಆ ಗರಿಯ ಮೇಲೆ ತೋರಿಸಲಾಗಿದೆ. ತಾಮಸರು, ರಾಜಸರು, ಸಾತ್ವಿಕರು, ಯೋಗಿಗಳು ಎನ್ನುವ ನಾಲ್ಕು ಜಾತಿಗಳ ಮನುಷ್ಯರಲ್ಲಿ ನವಿಲು ಗರಿಯೊಂದರ ಮಧ್ಯ ಭಾಗ ಯೋಗಿಗಳ ಗುರುತಾದಾಗ, ಎರಡನೆಯ ಭಾಗ ಸಾತ್ವಿಕರ ಗುರುತೆಂದು ತಿಳಿಯಬೇಕು. ಮೂರನೆಯದು ರಾಜಸರ ಗುರುತೆಂದು, ನಾಲ್ಕನೆಯದು ತಾಮಸಕ್ಕೆ ಗುರುತೆಂದು ತಿಳಿಯಬೇಕು. ನವಿಲುಗರಿ ಮೇಲೆ ಒಳಗಿನಿಂದ ಯೋಗ, ಸಾತ್ವಿಕ, ರಾಜಸ, ತಾಮಸ ಗುರುತುಗಳಾಗಿ ನಿರ್ಮಿಸಲ್ಪಟ್ಟಿವೆ.

**440. (22) ಜೀವಾತ್ಮನಿಗೆ ಕರ್ಮವನ್ನು ಶರೀರದಲ್ಲಿ ಯಾವ ಭಾಗ ಅಂಟಿಸುತ್ತಿದೆ?**

ಉ. ಅಹಂಕಾರ.

**ವಿವರ :** ನಮ್ಮ ಶರೀರದಲ್ಲಿ ನಿರ್ಣಯಿಸಿದ ಕಾರ್ಯಗಳು ಮಾಡುವ ನಿರ್ಧಿಷ್ಟ ಭಾಗಗಳು ಆತ್ಮವಲ್ಲದೆ 25 ಇವೆ. ಅದರಲ್ಲಿ ಅಂತಃಕರಣಗಳೆಂದು ಹೆಸರುವಾಸಿಯಾದ ಮನಸ್ಸು, ಬುದ್ಧಿ, ಚಿತ್ತ, ಅಹಂಗಳಿವೆ. ಜೀವಿಯು ಸಹ ಅಂತರಂಗದಲ್ಲಿ ಒಂದು ಭಾಗವಾಗಿ ಇದ್ದರೂ ಆ ಜೀವಿಗೋಸ್ಕರವೇ ಎಲ್ಲ ಭಾಗಗಳನ್ನು ಆತ್ಮ ವಿನಿಯೋಗಿಸುತ್ತಿದೆ. ಆ ಕಾರ್ಯದಲ್ಲಿ ಪ್ರಾರಬ್ಧ ಕರ್ಮರೀತಿ ಕೆಲಸಗಳು ಮಾಡಿ ಜೀವಾತ್ಮನಿಗೆ ಸುಖದುಃಖಗಳನ್ನು ಒದಗಿಸುವುದಕ್ಕೆ 23 ಭಾಗಗಳು ಪಾಲು ಹಂಚಿಕೊಂಡರೆ, ಅಹಂ ಒಂದೇ ಯಾವ ಕೆಲಸ ಮಾಡದೆ ಸುಮ್ಮನೆ ಇರುತ್ತಿದೆ. ಹಾಗೆಂದು ಪೂರ್ತಿ ಸುಮ್ಮನಿರದೆ ನಡೆದ ಕೆಲಸವನ್ನಾಗಲಿ, ನಡೆಯುತ್ತಿರುವ ಕೆಲಸವನ್ನಾಗಲಿ ಏನೂ ಮಾಡದೆ ಅನುಭವಿಸುವ ಜೀವಿಗೆ ಉದ್ಬೋಧ ಮಾಡುತ್ತಿದೆ. ಆ ಬೋಧನೆ ಏನೆಂದರೆ! ಈ ಕೆಲಸವೆಲ್ಲದಕ್ಕೂ ನೀನೇ ಕಾರಣ, ನೀನು ಮಾಡುವುದರಿಂದಲೇ ಈ ಕಾರ್ಯವೆಲ್ಲಾ ನಡೆದಿದೆ ಎಂದು ಜೀವಾತ್ಮನಿಗೆ ಹೇಳುವುದರಿಂದ, ಏನೂ ಮಾಡದ ಜೀವಿಯು ಅಹಂಕಾರದ ಮಾತು ಕೇಳುವುದಕ್ಕೆ ಬಾಲ್ಯದಿಂದ ಅಭ್ಯಾಸವಾಗಿದ್ದಾನೆ. ತಾನು ಮಾಡದ ಕೆಲಸಕ್ಕೆ ತಾನೇ ಕಾರಣವೆಂದುಕೊಳ್ಳುತ್ತಾ, ಹಿಂದೆ ಮಾಡಬೇಕಾದ ವಿಧಾನವೆನ್ನುವ ಕರ್ಮ ಒಂದಿದೆಯೆಂದು,

ಅದನ್ನು ಮಾಡಿಸುವವನು ಆತ್ಮವೆಂದು, ಮಾಡುವವರು 23 ಇಂದ್ರಿಯಗಳೆಂದು ತಿಳಿಯದ ಅಜ್ಞಾನಿ ಆಗಿರುವುದರಿಂದ, ಕೆಲಸದಲ್ಲಿನ ಹೊಸ ಕರ್ಮವಾದ ಆಗಾಮಿ ಕರ್ಮ ಜೀವಾತ್ಮನಿಗೆ ಅಂಟುತ್ತಿದೆ. ಆದ್ದರಿಂದ ಶರೀರದಲ್ಲಿ ಜೀವಾತ್ಮನಿಗೆ ಕರ್ಮ ಅಂಟಿಸುವುದು ಶರೀರದಲ್ಲಿನ ಅಹಂಕಾರವೇ ಎಂದು ಹೇಳಬಹುದು.

**441. (23) ಆಹಾರ ಶರೀರ ಆರೋಗ್ಯಕ್ಕಾ ಅಥವಾ ಗುಣಗಳ ವೃದ್ಧಿಗಾಗಿಯಾ?**

ಉ. ಶರೀರ ಆರೋಗ್ಯಕ್ಕೇ.

**ವಿವರ :** ಶರೀರ ಸ್ಥೂಲವಾದದ್ದು, ಗುಣಗಳು ಸೂಕ್ಷ್ಮವಾಗಿರುವವು. ಸ್ಥೂಲ ಶರೀರವೊಂದರ ಆರೋಗ್ಯ ಅನಾರೋಗ್ಯಗಳು ನಾವು ತಿನ್ನುವ ಆಹಾರದಲ್ಲಿನ ಪೋಷಕ ಪದಾರ್ಥ ಗಳನ್ನನುಸರಿಸಿ ಇರುತ್ತವೆ. ಆಹಾರದಲ್ಲಿನ ನಾಲ್ಕು ವಿಧಗಳ ಪೋಷಕಗಳು ಶರೀರ ಆರೋಗ್ಯವನ್ನು ಕಾಪಾಡುತ್ತವೆ. ಅವು ಸ್ಥೂಲ ಶರೀರವನ್ನು ಬಿಟ್ಟು ಸೂಕ್ಷ್ಮಶರೀರದ ವರೆಗು ವ್ಯಾಪಿಸುವುದಿಲ್ಲ. ಆಹಾರ ಗುಣಗಳ ವೃದ್ಧಿಗೆ ಉಪಯೋಗವಾಗುವುದಿಲ್ಲ. ಆಹಾರದಿಂದ ಗುಣಗಳು ವೃದ್ಧಿ ಆಗುವವೆಂದು ಯಾವ ಶಾಸ್ತ್ರದಲ್ಲೂ ಇಲ್ಲ. ಅದು ಆಚರಣೆ ಸತ್ಯವಲ್ಲ. ನಿರ್ದಿಷ್ಟ ಆಹಾರದಿಂದ ನಿರ್ದಿಷ್ಟ ಗುಣವನ್ನು ವೃದ್ಧಿ ಮಾಡಲಾರವು. ಆದ್ದರಿಂದ ಆಹಾರ ಶರೀರಕ್ಕೆ ಆಗಲಿ ಗುಣಗಳಿಗೆ ಅಲ್ಲವೆಂದು ತಿಳಿಯಬೇಕು.

**442. (24) ವಿಷ ಸೂಕ್ಷ್ಮಶರೀರವನ್ನು ಸಾಯಿಸುತ್ತದಾ ಇಲ್ಲವಾ?**

ಉ. ಸಾಯಿಸುವುದಿಲ್ಲ.

**ವಿವರ :** ಶರೀರ ಸ್ಥೂಲ, ಸೂಕ್ಷ್ಮವೆಂದು ಎರಡು ವಿಧಗಳಾಗಿ ಇದೆ. ಅದರಲ್ಲಿ ಸೂಕ್ಷ್ಮವನ್ನು ವಿಷ ಏನೂ ಮಾಡಲಾರದು. ವಿಷ ಸ್ಥೂಲದ ಮೇಲೆ ಮಾತ್ರ ಕೆಲಸ ಮಾಡುತ್ತದೆ. ವಿಷ ಸ್ಥೂಲವಾದದ್ದು, ಸ್ಥೂಲವಾದ ವಿಷ ಸ್ಥೂಲ ಶರೀರದ ಮೇಲೆ ಕೆಲಸ ಮಾಡುವುದು. ವಿಷವನ್ನು ಕೊಟ್ಟು ಸಾಯಿಸಿದರೂ ಕಾಣಿಸುವ ವ್ಯಕ್ತಿ ಮರಣಿಸುವನು. ಆ ವ್ಯಕ್ತಿಯೊಳಗೆ ಕಾಣಿಸದ ಸೂಕ್ಷ್ಮಶರೀರ ಮರಣಿಸದೆ ಬದುಕಿರುವ ಸಂಘಟನೆಗಳೆಷ್ಟೋ ಭೂಮಿಮೇಲೆ ಇವೆ. ಆದ್ದರಿಂದ ವಿಷ ಸೂಕ್ಷ್ಮವನ್ನು ಏನೂ ಮಾಡಲಾರದೆಂದು ಹೇಳಬಹುದು.

**443. (25) ಧರ್ಮ ಜ್ಞಾನದಿಂದ ತಿಳಿಯುವಹಾಗೆ, ನ್ಯಾಯ ಯಾವುದರಿಂದ ತಿಳಿಯುತ್ತದೆ?**

ಉ. ನೀತಿಯಿಂದ.

**ವಿವರ :** ಪ್ರಪಂಚ ಸಂಬಂಧವಾದ ಮತ್ತು ಪರಮಾತ್ಮ ಸಂಬಂಧವಾದ ಎರಡು ನಿಯಮಗಳಿವೆ. ಜ್ಞಾನ ಧರ್ಮಗಳು ಪರಮಾತ್ಮ ಸಂಬಂಧವಾದವು, ನೀತಿ ನ್ಯಾಯಗಳು ಪ್ರಪಂಚ ಸಂಬಂಧವಾದವು. ತಾಯಿ ತಂದೆ, ಗುರುವು ದೈವ ಎಂದಹಾಗೆ ನೀತಿ ನ್ಯಾಯ, ಜ್ಞಾನ ಧರ್ಮಗಳು ಇವೆ. ತಾಯಿಯಿಂದ ತಂದೆ ತಿಳಿದಂತೆ, ಗುರುವುನಿಂದ ದೈವ ತಿಳಿಯುವುದೆಂದು ತಿಳಿಸುವುದಕ್ಕೆ ಪೂರ್ವದಲ್ಲಿ ಹಿರಿಯರು ವರಸೆ ಕ್ರಮವಾಗಿ ತಾಯಿ ತಂದೆ, ಗುರುವು ದೈವವೆಂದಿದ್ದಾರೆ. ಆ ವಿಧವಾಗಿಯೇ ನೀತಿ ಯಿಂದ ನ್ಯಾಯ ತಿಳಿಯುವಹಾಗೆ, ಜ್ಞಾನದಿಂದ ಧರ್ಮಗಳು ತಿಳಿಯುವುದೆಂದು ತಿಳಿಸುವುದಕ್ಕೆ ವರಸೆ ಕ್ರಮವಾಗಿ ನೀತಿ ನ್ಯಾಯ, ಜ್ಞಾನ ಧರ್ಮ ಎಂದಿದ್ದಾರೆ. ಆದ್ದರಿಂದ ನ್ಯಾಯ ನೀತಿಯಿಂದ ತಿಳಿಯುವುದೆಂದು ಹೇಳದೇ ತಿಳಿಯುತ್ತಿದೆ.

**444. (26) ಮಾಯೆ ಎಲ್ಲಿ ಇದೆ?**

ಉ. ನಮ್ಮ ತಲೆಯೊಳಗೆ.

**ವಿವರ :** ಮಾಯೆ ಎಂದರೆ ಗುಣಗಳ ಸಮ್ಮೇಳನವೆಂದು ನಿರ್ವಚನ ಭಗವದ್ಗೀತೆಯಲ್ಲಿ ಹೇಳಲಾಗಿದೆ. ಎಷ್ಟು ಗುಣಗಳು ಸೇರಿದರೆ ಮಾಯೆ ಆಗುವುದೆಂದು ಕೆಲವರಿಗೆ ಪ್ರಶ್ನೆ ಬರಬಹುದು. ನಮಗೆ ಎಷ್ಟು ಗುಣಗಳಿವೆಯೋ ಮೊದಲು ತಿಳಿದರೆ ಉತ್ತರ ಸುಲಭವಾಗುತ್ತದೆ. ಕೆಲವರೇನೋ ಅರಿಷಟ್ ವರ್ಗವೆಂದು ಆರುಗುಣಗಳ ಹೆಸರುಗಳು ಕಾಮ, ಕ್ರೋಧ, ಲೋಭ, ಮೋಹ, ಮಧ, ಮಾತ್ಸರ್ಯಗಳೆಂದು ಹೇಳುತ್ತಿದ್ದಾರೆ. ಅದರಿಂದ ಬಹಳ ಮಂದಿ ನಮಗಿರುವ ಗುಣಗಳು ಆರೇ ಎಂದು, ಆ ಆರು ಗುಣಗಳೇ ಮಾಯೆ ಎಂದು ತಿಳಿದುಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಅರಿಷಟ್ ವರ್ಗವನ್ನೇ ಹೇಳುತ್ತಿದ್ದಾರೆ ಆದರೆ ಅವುಗಳಿಗೆ ವಿರುದ್ಧವಾದ ಷಟ್ ವರ್ಗವನ್ನು ಹೇಳಿಕೊಂಡಿಲ್ಲ. ಅರಿಷಟ್ ವರ್ಗವೆಂದರೆ ಅರ್ಥ, ಅರಿ ಎಂದರೆ ಶತ್ರು, ಷಟ್ ಎಂದರೆ ಆರು, ವರ್ಗವೆಂದರೆ ಗುಂಪು ಎಂದು ಅರ್ಥ. ಪೂರ್ತಿಯಾಗಿ ಶತ್ರುಗಳಾದ ಆರು ಗುಣಗಳ ಗುಂಪೆಂದು ಅರ್ಥ. ಶತ್ರುಗುಣಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರಗಳು ಇರುವಹಾಗೆ ಮಿತ್ರ ಗುಣಗಳಾದ ಆರು ಗುಣಗಳು ಇವೆ. ಅರಿಷಟ್ ವರ್ಗಕ್ಕೆ ಮಿತ್ರ ಷಟ್ ವರ್ಗ ವಿರುದ್ಧವಾಗಿ ಇರುವುದು ಸಹಜವೇ ಅಲ್ಲವೆ! ಆದ್ದರಿಂದ ದಾನ, ದಯೆ, ಔದಾರ್ಯ, ವೈರಾಗ್ಯ, ವಿನಯ, ಪ್ರೇಮಗಳು ತಯಾರಾಗಿವೆ. 1. ದಾನಕ್ಕೆ x ಆಸೆ (ಕಾಮ), 2. ದಯಗೆ x ಕೋಪ, 3. ಔದಾರ್ಯಕ್ಕೆ x ಲೋಭ, 4. ವೈರಾಗ್ಯಕ್ಕೆ x ಮೋಹ, 5. ವಿನಯಕ್ಕೆ x ಗರ್ವ (ಮದ), 6. ಪ್ರೇಮಕ್ಕೆ x ಅಸೂಯೆ (ಮತ್ಸರ)

ಶತ್ರುಗಳಾಗಿ ಇವೆ. ಒಟ್ಟು ಹನ್ನೆರಡು ಗುಣಗಳನ್ನು ಸೇರಿಸಿ ಮಾಯೆ ಎನ್ನುತ್ತಿದ್ದೇವೆ. ಇದರ ಪ್ರಕಾರ ಯಾವೊಂದರ ಗುಣದೊಂದಿಗೆ ಅಂಟಿಕೊಂಡಿದ್ದರೂ ಮಾಯೆಯಲ್ಲಿ ಅಂಟಿಕೊಂಡಹಾಗೇ ಎಂದು ತಿಳಿಯಬೇಕು. ಗುಣಗಳು ತಲೆಯಲ್ಲೇ ಇವೆ, ಆದ್ದರಿಂದ ಮಾಯೆ ತಲೆಯಲ್ಲೇ ಇದೆಯೆಂದು ಹೇಳಬಹುದು.

**445. (27) ನಿನ್ನ ಶರೀರದಲ್ಲಿ ಚಲನೆ ಯಾವುದರಿಂದ ಉಂಟಾಗುತ್ತದೆ?**

ಉ. ಆತ್ಮ ಶಕ್ತಿಯಿಂದ

**ವಿವರ :** ಶರೀರದಲ್ಲಿನ ಪ್ರತಿ ಅವಯವಕ್ಕೂ ಸ್ವತಃವಾಗಿ ಚಲಿಸುವ ಶಕ್ತಿ ಇಲ್ಲ. ಶರೀರದಲ್ಲಿನ ಪ್ರತಿ ಭಾಗವನ್ನು ಒಂದು ಪ್ರತ್ಯೇಕವಾದ ಶಕ್ತಿ ಕದಲಿಸುತ್ತದೆ. ಅದೇ ಆತ್ಮ ಶಕ್ತಿ. ಆತ್ಮಶಕ್ತಿ ಶರೀರವನ್ನು ಕದಲಿಸುತ್ತದೆಯೆಂದು ತಿಳಿಯದೆ ಪ್ರತಿ ಜೀವಿಯು ತಾನೇ ಚಲಿಸುವಹಾಗೆ ಭ್ರಮಿಸುತ್ತಿದ್ದಾನೆ. ಕಾಲಲ್ಲಾಗಲಿ, ಕೈಯಲ್ಲಾಗಲಿ ಆತ್ಮ ಶಕ್ತಿ ಇಲ್ಲದೆ ಹೋಗಿ ಕಾಲಾಗಲಿ, ಕೈಯಾಗಲಿ ಕದಲದೇ ಇರುವಾಗಲಾದರೂ ಶರೀರದಲ್ಲಿರುವುದು ತನ್ನ ಶಕ್ತಿ ಅಲ್ಲವೆಂದು ಜೀವಿಯು ತಿಳಿಯದೇ ಇದ್ದಾನೆ. ಆತ್ಮಶಕ್ತಿ ಇಲ್ಲದೆ ಕಣ್ಣರೆಪ್ಪೆ ಸಹ ಕದಲುವುದಿಲ್ಲ.

**446. (28) ಶರೀರದ ಒಳಗೆ ಇರುವ ಮಾಯೆಗೆ ಹತ್ತಿರ ಸಂಬಂಧವಿರುವ ಬಾಹ್ಯ ಅವಯವ ಯಾವುದು?**

ಉ. ಕಣ್ಣು

**ವಿವರ :** ಶರೀರದೊಳಗೆ ಮಾಯೆ ಗುಣಗಳ ರೂಪದಲ್ಲಿ ಇದೆ. ಆ ಗುಣಗಳು ಬುದ್ಧಿಗೆ ಅಂಟಿಕೊಂಡು ಜೀವಾತ್ಮನನ್ನು ಮಾಯೆಯಲ್ಲಿ ಬೀಳಿಸಬೇಕೆಂದರೆ, ಮನಸ್ಸು ಗುಣಗಳನ್ನು ಬುದ್ಧಿಗೆ ಅಂಟಿಸಬೇಕಾಗುತ್ತದೆ. ಮನಸ್ಸು ಐದು ಜ್ಞಾನೇಂದ್ರಿಯಗಳ ಮೇಲೆ ಆಧಾರಬಿದ್ದು ಕೆಲಸ ಮಾಡುತ್ತಿರುತ್ತದೆ. ಐದು ಜ್ಞಾನೇಂದ್ರಿಯಗಳಲ್ಲಿ ಮನಸ್ಸು ಹೆಚ್ಚಿನ ಸಂಬಂಧವನ್ನು ಇಟ್ಟುಕೊಂಡಿರುವುದು ಕಣ್ಣಿನೊಂದಿಗೆ. ಕಣ್ಣಿನನಂತರ ಕಿವಿ ಇದೆ. ಕಣ್ಣು ತೋರಿಸಿದ ವಿಷಯವನ್ನು ಮನಸ್ಸು ಗುಣಗಳ ರೂಪದೊಂದಿಗೆ ಬುದ್ಧಿಗೆ ಅಂಟಿಸುತ್ತದೆ. ಮನಸ್ಸು ತಂದಿರುವ ವಿಷಯವನ್ನು ಬುದ್ಧಿ ಗುಣಗಳೊಂದಿಗೆ ಯೋಚಿಸಲು ಶುರು ಮಾಡುತ್ತದೆ. ಅಂದರೆ ಆ ವಿಷಯಕ್ಕೆ ಸಂಬಂಧಿಸಿದ ಗುಣದೊಂದಿಗೆ ಬುದ್ಧಿ ಮಿಶ್ರಮವಾಗಿ ಹೋಗುತ್ತದೆ. ಬುದ್ಧಿ ಒದಗಿಸಿರುವುದೇ ಜೀವಿಗೆ ಸೇರುತ್ತಿದೆ. ಆದ್ದರಿಂದ ಬುದ್ಧಿ ಮಿಶ್ರಮವಾದ ಗುಣವನ್ನೇ ಜೀವಿಯು ಹೊಂದಿದ್ದಾನೆಂದು, ಅದರ ಭಾವದಲ್ಲಿಯೇ ಬಾಧೆಯನ್ನೋ, ಸುಖವನ್ನೋ,

ಜೀವಿಯು ಅನುಭವಿಸುತ್ತಿದ್ದಾನೆಂದು ತಿಳಿಯಬೇಕು. ಆದ್ದರಿಂದ ಪ್ರಪಂಚದಲ್ಲಿ ಅತಿ ಪ್ರಾಧಾನವಾದ ಕಣ್ಣು ಬಾಹ್ಯವಾಗಿ ಇದ್ದರೂ ಒಳಗಿರುವ ಮಾಯೆಗೆ ಹತ್ತಿರ ಸಂಬಂಧವಿದೆಯೆಂದು ಹೇಳಬಹುದು.

**447. (29) ಹೃದಯ ಎಲ್ಲಿದೆ? ಅದರಲ್ಲೇನಿದೆ?**

ಉ. ಬ್ರಹ್ಮನಾಡಿಯಲ್ಲಿದೆ. ಅದರಲ್ಲಿ ಆತ್ಮ ಇದೆ.

**ವಿವರ :** ಹೃದಯವೆಂದರೆ ಗುಂಡಿಗೆ ಎಂದು ಬಹಳ ಜನರ ನಂಬಿಕೆ. ನಾವು ಗುಂಡಿಗೆ ಬೇರೆ, ಹೃದಯಬೇರೆಂದು ಹೇಳುತ್ತಿದ್ದೇವೆ. ಗುಂಡಿಗೆ ಹೃದಯದಿಂದ ಕದಲುತ್ತಿದೆ. ಹೃದಯ ಶಿರಸ್ಸಿನಿಂದ ಹಿಡಿದು ಕೆಳಗಿನವರೆಗು ವ್ಯಾಪಿಸಿಕೊಂಡಿದೆ. ಮೆದಳಿನಿಂದ ಹಿಡಿದು ಏಳು ನಾಡೀ ಕೇಂದ್ರಗಳಾಗಿ ವ್ಯಾಪಿಸಿರುವ ಬ್ರಹ್ಮನಾಡಿಯನ್ನೇ ಹೃದಯವೆನ್ನುತ್ತಿದ್ದೇವೆ. ಹೃದಯದಲ್ಲಿ ಆತ್ಮ ನಿವಾಸವಾಗಿದೆ. ಸರ್ವ ಜೀವರಾಶಿಗಳ ಹೃದಯ ಸ್ಥಾನದಲ್ಲಿ ಆತ್ಮನಾಗಿ ನಾನಿದ್ದೇನೆಂದು ಭಗವದ್ಗೀತೆಯಲ್ಲಿ ಸಹ ಹೇಳಲಾಗಿದೆ. ಆತ್ಮ ನಿವಾಸ ಹೃದಯವೆಂದು ಹೇಳುವುದರಿಂದ, ಹೃದಯದಿಂದ ಸ್ಮೃತಿ ಜ್ಞಾನ ಊಹೆ ಬರುವವೆಂದು ಹೇಳುವುದರಿಂದ, ಬ್ರಹ್ಮನಾಡಿಯನ್ನೇ ಹೃದಯವಾಗಿ ನಿರ್ಣಯಿಸಿಕೊಳ್ಳಬೇಕಾಗಿ ಬರುತ್ತದೆ. ಗುಂಡಿಗೆಯಿಂದ ಸ್ಮೃತಿ ಯಾಗಲಿ, ಊಹೆಗಳಾಗಲಿ ಬರುವುದಿಲ್ಲ. ಆದ್ದರಿಂದ ಗುಂಡಿಗೆಯನ್ನು ಹೃದಯವೆನ್ನಬಾರದು. ಬ್ರಹ್ಮನಾಡಿಯಲ್ಲೆ ಆತ್ಮ ಇರುವುದರಿಂದ ಹೃದಯದಲ್ಲಿ ಆತ್ಮ ನಿವಾಸವಾಗಿದೆ ಎಂದು ಹೇಳಬಹುದು.

**448. (30) ಜ್ಞಾಪಕ, ಮರೆವು ಯಾವುದರಿಂದ ಉಂಟಾಗುತ್ತಿವೆ?**

ಉ. ಮನಸ್ಸಿನಿಂದ.

**ವಿವರ :** ನೆನಪು ಎಂದರೆ ಜ್ಞಾಪಕ, ಮರುವು ಎಂದರೆ ಜ್ಞಾಪಕವಿಲ್ಲದೆ ಹೋಗುವುದು ಅಂದರೆ ನಿದ್ರೆ. ನಿದ್ರೆಯಾಗಲಿ, ಎಚ್ಚರವಾಗಲಿ ಶರೀರದಲ್ಲಿನ ಒಂದೇ ಒಂದು ಮನಸ್ಸಿನಿಂದ ಬರುತ್ತಿವೆ. ಮನಸ್ಸು ಸೂರ್ಯ ಚಂದ್ರನಾಡಿಗಳ ಮೂಲಕ ಶರೀರವೆಲ್ಲಾ ವ್ಯಾಪಿಸಿಕೊಂಡಾಗ ಎಚ್ಚರವಾಗುತ್ತದೆ. ಹಾಗೇ ಮನಸ್ಸು ಬ್ರಹ್ಮನಾಡಿಯಲ್ಲಿ ಸೇರಿ ಸ್ತಬ್ದತೆಯಾಗಿ ನಿಂತುಹೋದಾಗ ನಿದ್ರೆ ಆಗುತ್ತಿದೆ. ಈ ವಿಧವಾಗಿ ಮನಸ್ಸೊಂದರ ಸ್ಥಾನ ಬದಲಾವಣೆಯನ್ನನುಸರಿಸಿ ನಿದ್ರೆ ಎಚ್ಚರಗಳು ಉಂಟಾಗುತ್ತಿವೆ.

# ಜ್ಞಾನ ಪರೀಕ್ಷೆ

**ತಾಡಿಪತ್ರಿ** **ದಿನಾಂಕ –28–01–1988**

**449. (1) ಯೋಚನೆಗೆ ಸಿಗದೇ ಇರುವುದು ಯಾವುದು?**

ಉ. ಪರಮಾತ್ಮ.

**ವಿವರ :** ಶರೀರದಲ್ಲಿ ಯೋಚನೆಗಳು ಬರುವುದು ಬುದ್ಧಿಗೆ. ಬುದ್ಧಿ ಗುಣಗಳಿಂದ ಪ್ರಪಂಚ ವಿಷಯಗಳನ್ನು ತಿಳಿದುಕೊಳ್ಳುವುದೇ ಅಲ್ಲದೆ ಜ್ಞಾನದಿಂದ ಆತ್ಮನನ್ನು ಸಹ ತಿಳಿದುಕೊಳ್ಳುತ್ತದೆ. ಗುಣಗಳ ಯೋಚನೆಗಳಿಂದ ಪ್ರಪಂಚ ವಿಷಯಗಳನ್ನು, ಜ್ಞಾನದ ಯೋಚನೆಗಳಿಂದ ಆತ್ಮ ಜೀವಾತ್ಮಗಳನ್ನು ತಿಳಿಯಬಹುದಾದ ಬುದ್ಧಿ ಯಾವುದರಿಂದಾಗಲಿ ಪರಮಾತ್ಮನನ್ನು ತಿಳಿಯಲಾರದು. ಬುದ್ಧಿ ಜ್ಞಾನನೇತ್ರದಿಂದ ಆತ್ಮವನ್ನಾಗಲಿ ತಿಳಿಯುತ್ತದೆ ಆದರೆ ಪರಮಾತ್ಮವನ್ನು ತಿಳಿಯಲಾರದು. ಶರೀರವನ್ನು ಧರಿಸಿರುವ ಯಾವ ಜೀವರಾಶಿ ತನ್ನ ಬುದ್ಧಿಯಿಂದ ಪರಮಾತ್ಮನನ್ನು ತಿಳಿಯಲಾರದು.

**450. (2) ಆಸೆಗೆ ವಿರುದ್ಧವಾದ ಗುಣಯಾವುದು?**

ಉ. ದಾನ

**ವಿವರ :** ಅರಿಷಟ್ ಎಂದು ಮಿತ್ರ ಷಟ್ ಎಂದು ಎರಡು ವಿಧಗಳಾದ ಗುಣಗಳಿವೆ. ಜೀವಾತ್ಮನಿಗೆ ಕೆಡುಕು ಮಾಡುವವು ಪಾಪವನ್ನು ಸಂಪಾದಿಸುವವೆಂದು, ಹಾಗೇ ಒಳ್ಳೆಯದನ್ನು ಮಾಡುವವು ಪುಣ್ಯವನ್ನು ಸಂಪಾದಿಸಿ ಇಡುವವು ಎಂದು ಎರಡು ವಿಧಗಳಾದ ಗುಣಗಳಿರುವವು. ಶತ್ರು ವರ್ಗದಲ್ಲಿ ಮೊದಲನೆಯ ಗುಣ ಆಸೆ, ಅದನ್ನೇ ಕಾಮ ಎಂದು ಕೂಡ ಕರೆಯುತ್ತಾರೆ. ಆಸೆ ಬಯಸುವ ಸ್ವಭಾವವಿರುವುದು. ತನಗೆ ಬೇಕೆಂದುಕೊಳ್ಳುವುದೇ ಆಸೆ. ಅದಕ್ಕೆ ಪೂರ್ತಿ ವಿರುದ್ಧವಾದದ್ದು ದಾನ. ತನ್ನಿಂದ ದೂರ ಮಾಡಿಕೊಳ್ಳುವುದು, ತನಗೆ ಬೇಡವೆಂದುಕೊಂಡು ಇತರರಿಗೆ ಬೇಕೆಂದುಕೊಳ್ಳುವುದು ದಾನ. ಕೊಡುವ ಸ್ವಭಾವವಿರುವುದು ದಾನ. ಆಸೆ ಗುಣಕ್ಕೆ ಪೂರ್ತಿ ವಿರುದ್ಧವಾಗಿರುವುದು ದಾನ ಗುಣ. ಈ ಎರಡು ಗುಣಗಳು ಮನುಷ್ಯನಲ್ಲಿ ಇದ್ದರೂ ಆಸೆ ಗುಣ ಹೆಚ್ಚು, ದಾನ ಗುಣ ಕಡಿಮೆ ಇರುವವರು ಬಹಳ ಇದ್ದಾರೆ.

**451. (3) ಶರೀರದಲ್ಲಿ ಯೋಚಿಸುವುದು ಮನಸ್ಸಾ, ಬುದ್ಧಿಯಾ ಯಾವುದು?**

ಉ. ಬುದ್ಧಿ.

**ವಿವರ :** ಮನಸ್ಸೇ ಶರೀರದಲ್ಲಿ ಆಲೋಚಿಸುವುದೆಂದು ಬಹಳ ಜನ ತಿಳಿದುಕೊಳ್ಳುತ್ತಿದ್ದಾರೆ. ಆದರೆ ಅದು ವಾಸ್ತವ ಅಲ್ಲ. ಶರೀರದಲ್ಲಿ ಆಲೋಚಿಸುವುದು ಒಂದು ಬುದ್ಧಿ ಮಾತ್ರವೇ. ಶರೀರದಲ್ಲಿನ ಪ್ರತಿ ಭಾಗಕ್ಕೂ ಪ್ರತ್ಯೇಕವಾದ ಕೆಲಸಗಳಿವೆಯೆಂದು ತಿಳಿದುಕೊಂಡಿದ್ದೇವೆ. ಮನಸ್ಸಿಗೆ ಬಾಹ್ಯ ಇಂದ್ರಿಯ ವಿಷಯಗಳನ್ನು ಒಳಕ್ಕೆ, ಒಳಗಿನ ಇಂದ್ರಿಯ ವಿಷಯಗಳನ್ನು ಹೊರಕ್ಕೆ ಸೇರಿಸುವುದು ಒಂದು ಕೆಲಸವಾದರೆ, ಆ ಕೆಲಸ ಇಲ್ಲದಿರುವಾಗ ಇಂದ್ರಿಯ ವಿಷಯಗಳನ್ನು ನೆನಪು ಮಾಡುತ್ತಾ ಇರುತ್ತದೆ. ಮನಸ್ಸು ಒಳಗೆ ಸೇರಿಸಿದ ವಿಷಯಗಳಾಗಲಿ, ಅಥವಾ ಜ್ಞಾಪಕ ಮಾಡಿ ಒದಗಿಸಿದ ವಿಷಯಗಳನ್ನಾಗಲಿ, ಬುದ್ಧಿ ಗುಣಗಳಿಂದ ಯೋಚಿಸಲು ಶುರು ಮಾಡುತ್ತದೆ. ಶರೀರದಲ್ಲಿ ಬುದ್ಧಿ ಯೊಂದರ ಕೆಲಸ ಮನಸ್ಸಿನಿಂದ ಬಂದಿರುವ ವಿಷಯವನ್ನು ಸಂಬಂಧಿತ ಗುಣದಿಂದ ಯೋಚಿಸುವುದೇ ಎಂದು ತಿಳಿಯಬೇಕು.

**452. (4) ದೈವಪೂಜೆಯಲ್ಲಿ ತಾಂಬೂಲದಲ್ಲಿ ಏನೇನು ಇಡುವರು? ಎಷ್ಟು ಇಡುವರು?**

ಉ. ಮೂರು ಎಲೆಗಳು, ಎರಡು ಅಡಿಕೆ, ಒಂದು ಸುಣ್ಣದ ಉಂಡೆ.

**ವಿವರ :** ದೈವ ಪೂಜೆಯಲ್ಲಿ ಪ್ರತಿಯೊಂದು ವಿಧಾನವೂ ಅರ್ಥದೊಂದಿಗೆ ಕೂಡಿಕೊಂಡಿದೆ. ಆರಾಧನೆಯಲ್ಲಿ ತಾಂಬೂಲವು ಸಹ ಒಂದಾಗಿದ್ದು ಇದು ವಿಶೇಷ ಅರ್ಥವನ್ನು ಒಳಗೊಂಡಿದೆ. ನಮ್ಮಲ್ಲಿರುವ ಮೂರು ಗುಣಗಳನ್ನು ಸೂಚಿಸುವ ಹಾಗೆ ಮೂರು ವಸ್ತುಗಳ ತಾಂಬೂಲವನ್ನು ಇಟ್ಟಿದ್ದಾರೆ. ತಾಮಸ ಗುಣಭಾಗ ಮೂರನೆಯದು ದೊಡ್ಡದು ಮತ್ತು ಬಹಳ ಜನರಲ್ಲಿ ಇರುವದು ಆಗಿರುವುದರಿಂದ, ತಾಮಸವನ್ನು ದೊಡ್ಡದಾಗಿರುವ ಹಸಿರಾದ ಮೂರು ಎಲೆಗಳಾಗಿ ಹೋಲಿಸಿ ತೋರಿಸಿದ್ದಾರೆ. ಹಾಗೇ ಎರಡನೆಯದಾದ ರಾಜಸವನ್ನು ಎರಡು ಅಡಿಕೆಗಳಾಗಿ ತೋರಿಸಿದ್ದಾರೆ. ಮೊದಲನೆಯದಾದ ಸಾತ್ವಿಕವನ್ನು ಒಂದುಸುಣ್ಣದ ಉಂಡೆಯಾಗಿ, ಇದು ಸ್ವಲ್ಪ ಸ್ವಚ್ಛವಾದ ಗುಣವಾದ್ದರಿಂದ ಇದಕ್ಕೆ ಬೆಳ್ಳಗಿರುವ ಸುಣ್ಣವನ್ನು ತೋರಿಸಿದ್ದಾರೆ. ತಾಂಬೂಲದ ವಿಷಯ ಪೂರ್ತಿಯಾಗಿ ತಿಳಿಯಬೇಕೆಂದರೆ ನಮ್ಮಿಂದ ರಚಿಸಲ್ಪಟ್ಟ **"ದೇವಾಲಯ ರಹಸ್ಯಗಳು"** ಎನ್ನುವ ಪುಸ್ತಕವನ್ನು ಓದಿ.

**453. (5) ಅರ್ಜುನನಿಗೆ ಕೃಷ್ಣನು ಬೋಧಿಸಿದ್ದು ಹಿಂಸೆಯನ್ನಾ ಅಹಿಂಸೆಯನ್ನಾ?**

ಉ. ಹಿಂಸೆಯನ್ನು.

**ವಿವರ :** ಯುದ್ಧವನ್ನು ಮಾಡೆಂದು ಶತ್ರುಗಳನ್ನು ಸಾಯಿಸೆಂದು ಹೇಳುವುದು ಹಿಂಸೆಯೇ

ಆಗುವುದು. ಶ್ರೀ ಕೃಷ್ಣನ ಬೋಧನೆಯಲ್ಲಿ ಮುಖ್ಯ ಸಾರಾಂಶ **"ಯಜ್ಞಾರ್ಥಾ ಕರ್ಮ"** ಎನ್ನುವುದು. ಮಾಡುವ ಕೆಲಸ ಯಜ್ಞವೆನ್ನುವ ಅರ್ಥವನ್ನು ಕೊಡುವುದಾಗಿ ಇರಬೇಕೆಂದಿದ್ದಾನೆ. ಅಂದರೆ! ಕೆಲಸದೊಳಗಿನಕರ್ಮ ಸುಟ್ಟುಹೋಗುವಹಾಗೆ ಇರಬೇಕೆಂದಿದ್ದಾನೆ. ಕೆಲಸ ಮಾಡಿದರೇನೆ ಕರ್ಮ ಸುಟ್ಟಿದೆಯಾ ಇಲ್ಲವಾ ಎಂದು ನೋಡಬೇಕಾಗಿದೆ. ಕೆಲಸ ಮಾಡದಿದ್ದರೆ ಕರ್ಮ ಬರುವುದಿಲ್ಲ, ನಾವು ನೋಡಬೇಕಾದ ಕೆಲಸವಿಲ್ಲ. ಸಂದರ್ಭಾನುಸಾರ ಬಂದಿರುವುದು ಯುದ್ಧ, ಆದ್ದರಿಂದ ಆಗ ಹಿಂಸೆ ಮಾಡಬೇಕಾಗಿ ಬರುತ್ತದೆ. ಹಾಗೆ ಮಾಡಿದರೂ ಪಾಪ ಅಂಟದೆ ಹೋಗುವಹಾಗೆ ಬೋಧಿಸಿ, ಆ ವಿಷಯವನ್ನು ಪ್ರಯೋಗಾತ್ಮಕವಾಗಿ ಮಾಡೆಂದು ಹೇಳಿದ್ದಾನೆ. ಮಾಡೆಂದಿರುವುದು ಹಿಂಸೆಯನ್ನು ಆದರೂ ಹೇಳಿರುವುದು ಯಜ್ಞ ಕರ್ಮವೆಂದು ತಿಳಿಯಬೇಕು.

**454. (6) ಜನ್ಮ ಜನ್ಮಗಳಿಗೂ ತಾಯಿ ಯಾರು?**

ಉ. ಪ್ರಕೃತಿ.

**ವಿವರ :** ಯಾವ ಜೀವಿರಾಶಿಗಾದರೂ, ಯಾವ ಜನ್ಮಕ್ಕಾದರೂ ಶಾಶ್ವತವಾಗಿ ತಾಯಿ ತಂದೆ ಇದ್ದಾರೆ. ಶರೀರವನ್ನು ತಯಾರು ಮಾಡುವುದು ತಾಯಿ. ತಾಯಿ ಕೊಟ್ಟಿರುವ ಆಕಾರಕ್ಕೆ ಕದಲುವ ಶಕ್ತಿಯನ್ನು ಕೊಟ್ಟು ಅದರಲ್ಲಿ ಜೀವವನ್ನು ತುಂಬುವವನು ತಂದೆ. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಯಿಂದ ಶರೀರ ತಯಾರಾಗುತ್ತಿದೆ. ಆದ್ದರಿಂದ ತಾಯಿ ಪ್ರಕೃತಿಯೆಂದು ಭಗವದ್ಗೀತೆಯಲ್ಲಿ ಹೇಳಲಾಗಿದೆ. ಅಷ್ಟೇ ಅಲ್ಲದೆ ಸರ್ವ ಜೀವರಾಶಿಗಳಿಗೂ ಬೀಜದಾತನಾದ ಪರಮಾತ್ಮ ತಂದೆಯೆಂದು ಸಹ ಹೇಳಲಾಗಿದೆ. ಇದು ಒಂದು ಜನ್ಮಕ್ಕೆ ಅಲ್ಲದೆ ಶಾಶ್ವತವಾಗಿ ಇರುವ ಪದ್ದತಿ. ಆದ್ದರಿಂದ ಜನ್ಮ ಜನ್ಮಗಳಿಗೂ ತಾಯಿ ಪ್ರಕೃತಿ, ತಂದೆ ಪರಮಾತ್ಮನೆಂದು ತಿಳಿದುಕೊಳ್ಳಬೇಕು.

**455. (7) ಲಿಂಗದ ಮೇಲೆ ಮೂರು ರೇಖೆಗಳಲ್ಲಿ ಬೊಟ್ಟನ್ನು ಯಾವರೇಖೆ ಮೇಲೆ ಇಡಬೇಕು?**

ಉ. ಮಧ್ಯ ರೇಖೆ ಮೇಲೆ.

**ವಿವರ :** ಲಿಂಗ ಎಂದರೆ ಪುರುಷತ್ವವನ್ನು ತಿಳಿಸುವುದು. ಪರಮಾತ್ಮ ಆಕಾರವಿಲ್ಲದವನೆಂದು, ಸ್ತ್ರೀತತ್ವಕ್ಕೆ ಅಧಿಪತಿ ಎಂದು ತಿಳಿಸುವ ನಿಮಿತ್ತ ಆಕಾರವಿಲ್ಲದ ಲಿಂಗವನ್ನು ಇಟ್ಟಿದ್ದಾರೆ. ಪರಮಾತ್ಮ ಪುರುಷನೆಂದು ತಿಳಿಯುವ ನಿಮಿತ್ತ ಲಿಂಗ ಎನ್ನುವ ಹೆಸರು ಇಟ್ಟಿದ್ದಾರೆ.

ಪರಮಾತ್ಮ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟು ಆತ್ಮ, ಜೀವಾತ್ಮನಾಗಿ ಸಹ ಇರುವುದರಿಂದ ಲಿಂಗದ ಮೇಲೆ ಮೂರು ಆತ್ಮಗಳನ್ನು ತಿಳಿಸುವ ಮೂರು ಬಿಳಿಯ ರೇಖೆಗಳನ್ನು ಇಟ್ಟಿದ್ದಾರೆ. ಅದರಲ್ಲಿ ಜೀವಾತ್ಮನಿಗೆ ಆತ್ಮನೇ ಪೂಜಿಸತಕ್ಕವನೆಂದು ತಿಳಿಸುವ ನಿಮಿತ್ತ ಕೆಳಗೆ ಜೀವಾತ್ಮನನ್ನು ಬಿಟ್ಟು, ಮೇಲೆ ಪರಮಾತ್ಮ ಗುರುತನ್ನು ಬಿಟ್ಟು, ಮಧ್ಯ ಇರುವ ಆತ್ಮಕ್ಕೆ ಗುರುತಾಗಿರುವ ರೇಖೆಗೆ ಕುಂಕುಮ ಬೊಟ್ಟನ್ನು ಇಟ್ಟಿದ್ದಾರೆ. ಜೀವಾತ್ಮ ಆತ್ಮನನ್ನು ತಿಳಿಯಬಹುದು, ಆದರೆ ಪರಮಾತ್ಮನನ್ನು ತಿಳಿಯಲಾರನು, ಆದ್ದರಿಂದ ಮಧ್ಯ ಇರುವುದಕ್ಕೇ ಗುರುತನ್ನು ಇಟ್ಟಿದ್ದಾರೆ.

**456. (8) ಗುರು ಇಲ್ಲದೆ ಮೋಕ್ಷವನ್ನು ಹೊಂದಬಹುದಾ?**

ಉ. ಹೊಂದಲಾರೆವು.

**ವಿವರ :** ಗುರು ಇಲ್ಲದಿದ್ದರೂ ಜ್ಞಾನವನ್ನು ಹೊಂದಬಹುದು. ಬೋಧಕರಿಂದಾದರು ಜ್ಞಾನವನ್ನು ಹೊಂದಬಹುದು. ಆದರೆ ಗುರು ಇಲ್ಲದೆ ಮೋಕ್ಷವನ್ನು ಹೊಂದಲಾರೆವು. ಜ್ಞಾನವನ್ನು ಯಾವ ಬೋಧಕರಾದರೂ ತಮಗೆ ತಿಳಿದಿರುವುದನ್ನು ಹೇಳಬಹುದು. ಕರ್ಮವನ್ನು ಸುಡುವುದಕ್ಕೆ ಮುಖ್ಯವಾದ ಜ್ಞಾನಾಗ್ನಿಯನ್ನು ಗುರುವು ಕೊಡಬೇಕಾಗಿರುತ್ತದೆ. ಆದ್ದರಿಂದ ಅಗ್ನಿಯನ್ನು ಕೊಡುವ ಗುರುವು ಇಲ್ಲದೆ ಶಿಷ್ಯರು ಮೋಕ್ಷವೆನ್ನುವ ಅಡಿಗೆ ಮಾಡಲಾರರು. ಅನ್ವೇಷಿಸದಿದ್ದರೂ ಬೋಧಕರು ಸಿಗುವರು. ಆದರೆ ಅನ್ವೇಷಿಸಿದರೂ ಗುರುವು ಸಿಗುವುದು ದುರ್ಲಭ. ಆದ್ದರಿಂದಲೇ ಜ್ಞಾನ ತಿಳಿದರೂ ಒಂದೇ ಜನ್ಮದಲ್ಲಿ ಮೋಕ್ಷವನ್ನು ಹೊಂದುವರೆನ್ನುವ ನಂಬಿಕೆ ಇಲ್ಲ.

**457. (9) ಗುರು ಇಲ್ಲದೆ ಜ್ಞಾನವನ್ನು ಹೊಂದಬಹುದಾ?**

ಉ. ಹೊಂದಬಹುದು.

**ವಿವರ :** ಗುರುವು, ಬೋಧಕನು ಎನ್ನುವ ಎರಡು ತರಹದ ಗುರುಗಳು ಇದ್ದಾರೆ. ಜ್ಞಾನವನ್ನು ಹೇಳುವ ಬೋಧಕರು ಗುರುಗಳಹಾಗೆ ಚಲಾವಣೆಯಾದರೂ ಅವರು ಗುರುಗಳು ಅಲ್ಲ, ಕೇವಲ ಬೋಧಕರೇ. ಆತ್ಮ ಜ್ಞಾನವನ್ನು ಬೋಧಕನು ಸಹ ಗುರುಗಳಹಾಗೆ ಹೇಳಬಹುದು. ಅದನ್ನು ಅರ್ಥ ಮಾಡಿಕೊಂಡವರು ಜ್ಞಾನವನ್ನು ಹೊಂದಬಹುದು. ಆದರೆ ಗುರುವಿನ ಜ್ಞಾನಕ್ಕೂ, ಬೋಧಕನ ಜ್ಞಾನಕ್ಕೂ ಬಹಳ ವ್ಯತ್ಯಾಸ ವಿರುತ್ತದೆ. ಇಬ್ಬರದೂ ಜ್ಞಾನವೇ ಆದರೂ ಗುರುವುನಿಂದ ಜ್ಞಾನ ಶಕ್ತಿಯುಕ್ತವಾಗಿ ಹುಟ್ಟಿಬರುತ್ತಿರುತ್ತದೆ. ಅದೇ

ಜ್ಞಾನವನ್ನು ಬೋಧಕನು ಹೇಳಿದರೂ ಶಕ್ತಿಯುಕ್ತವಾಗಿ ಇರುವುದಿಲ್ಲ. ಗುರುವು ಹೇಳುವ ಜ್ಞಾನ ಅಧಿಕಾರ ಪೂರ್ವಕವಾಗಿ ಇರುತ್ತದೆ, ಸ್ವತಃ ತಾನೇ ನಿರ್ಧಾರಿಸಿ ಹೇಳುವನು. ಬೋಧಕನು ಹೇಳುವ ಜ್ಞಾನ ಅನಧಿಕಾರ ಪೂರ್ವಕವಾಗಿ ಇರುತ್ತದೆ, ಇತರರಿಂದ ತಿಳಿದಿರುವುದನ್ನು ಹೇಳುವನು, ಆದರೆ ಸ್ವತಃ ತಾನೇ ಹೇಳುವುದಲ್ಲ. ಯಾವುದು ಏನಾದರೂ ಗುರುವು ಇಲ್ಲದೇ ಬೋಧಕನಿಂದಾದರೂ ಜ್ಞಾನವನ್ನು ಹೊಂದಬಹುದು.

**458. (10) ಜ್ಞಾನಿ ಆಗುವ ಕರ್ಮ ಇದ್ದರೆ ಜ್ಞಾನಿ ಆಗುವನು. ಅಂತಹ ಕರ್ಮ ಇಲ್ಲದಿದ್ದರೆ ಜ್ಞಾನಿ ಆಗಲಾರನು. ಎನ್ನುವ ಮಾತು ವಾಸ್ತವವೇ?**

ಉ. ವಾಸ್ತವವಲ್ಲ.

**ವಿವರ :** ಪ್ರಪಂಚದಲ್ಲಿ ಯಾವುದಕ್ಕಾದರೂ ಕರ್ಮ ಇರುತ್ತದೆ ಆದರೆ ಜ್ಞಾನವನ್ನು ಕುರಿತಾದ, ಜ್ಞಾನವನ್ನು ನಿರ್ಣಯಿಸುವ ಕರ್ಮ ಇರುವುದಿಲ್ಲ. ಯಾವುದನ್ನಾದರೂ ಕರ್ಮ ಶಾಶಿಸುತ್ತದೆ ಆದರೆ ಜ್ಞಾನವನ್ನು ಶಾಸಿಸುವುದಿಲ್ಲ. ಆದ್ದರಿಂದ ಜ್ಞಾನವನ್ನು ಕರ್ಮ ನಿರ್ಣಯಿಸಲಾರದು. ಕರ್ಮವನ್ನನುಸರಿಸಿ ಜ್ಞಾನ ಬರುವುದಿಲ್ಲ. ಶ್ರದ್ಧೆಯನ್ನನುಸರಿಸಿ ಜ್ಞಾನ ಲಭ್ಯವಾಗುವುದು ಆಗದಿರುವುದು ಇರುತ್ತದೆ. ಕರ್ಮವನ್ನನುಸರಿಸಿ ಇರುವುದಿಲ್ಲ. ಆದ್ದರಿಂದಲೇ **"ಶ್ರದ್ಧಾವಾನ್ ಲಭತೇ ಜ್ಞಾನಮ್"** ಎಂದು ಗೀತೆಯಲ್ಲಿ ಭಗವಂತನು ಸಹ ಹೇಳಿದಿದ್ದಾನೆ. **"ಕರ್ಮವಾನ್ ಲಭತೇ ಜ್ಞಾನಮ್"** ಹೇಳಿಲ್ಲವೆಂದು ನೆನಪಿಟ್ಟುಕೊಳ್ಳಬೇಕು.

**459. (11) ನಿನಗೆ ನಿಜವಾದ ಸೋದರರು ಯಾರು?**

ಉ. ಆತ್ಮ, ಪರಮಾತ್ಮ.

**ವಿವರ :** ನಿನಗೆ ಅಂದರೆ ನೀನು ಜೀವಾತ್ಮ. ಜೀವಿಗಿಂತ ಮೊದಲು ಹುಟ್ಟಿದವರು ಇದ್ದಾರೆ ಮೊದಲು ಹುಟ್ಟಿದವರಾಗಿರುವುದರಿಂದ ಇಲ್ಲಿ ಸಂದರ್ಭಾನುಸಾರ ಆತ್ಮ ಪರಮಾತ್ಮರು ಜೀವಿಗೆ ಸೋದರರೆಂದು ಹೇಳಬಹುದು. ಪ್ರಪಂಚ ಪರವಾಗಿ ಸೋದರರು ಇರಬಹುದು, ಇಲ್ಲದೇ ಹೋಗಬಹುದು. ಆದರೆ ಆಧ್ಯಾತ್ಮಿಕ ಪರವಾಗಿ ಆತ್ಮ ಪರಮಾತ್ಮರು ಶಾಶ್ವತ ಸೋದರರೆಂದು ಹೇಳಬಹುದು. ಆಧ್ಯಾತ್ಮಿಕರೀತ್ಯಾ ಪರಮಾತ್ಮನಿಗೆ ವರಸೆ ಇಲ್ಲ. ಆತನು ಜೀವಿಗಳಿಗೆ ಬೀಜ ದಾತನಾದ್ದರಿಂದ ತಂದೆ ಆಗುತ್ತಿದ್ದಾನೆ. ಮೊದಲು ಹುಟ್ಟಿದ್ದಾನಾದ್ದರಿಂದ ಸೋದರನಾಗುತ್ತಿದ್ದಾನೆ. ಹಿಂದಿನ ಜನ್ಮಗಳಲ್ಲಿ ತಂದೆಯಾದ್ದರಿಂದ ಈಗಿನ ಜನ್ಮಗಳಲ್ಲಿ ತಾತನೂ ಸಹ ಆಗುತ್ತಿದ್ದಾನೆ. ಎಂದಿಗೂ ನಿನ್ನ ಜೊತೆ ಇದ್ದಾನೆ ಆದ್ದರಿಂದ ಸ್ನೇಹಿತನು ಆಗುತ್ತಿದ್ದಾನೆ. ಸಂದರ್ಭವನ್ನನುಸರಿಸಿ ಅರ್ಥ ಮಾಡಿಕೊಳ್ಳಬೇಕು.

**460. (12) ಯಜ್ಞಗಳಿಗೆ ಅಧಿಪತಿ ಯಾರು? ಅವು ಎಲ್ಲಿ ನಡೆಯುತ್ತಿವೆ?**

ಉ. ಆತ್ಮ. ಶರೀರದೊಳಗೆ.

**ವಿವರ :** ಯಜ್ಞಗಳಿಗೆ ಅಧಿಪತಿ ಆತ್ಮ ಎಂದು ಗೀತೆಯಲ್ಲಿ ಹೇಳಲಾಗಿದೆ. ಹಾಗೆ ಯಜ್ಞಗಳು ದೇಹದೊಳಗೆ ನಡೆಯುತ್ತಿವೆ ಎಂದು ಸಹ ಹೇಳಲಾಗಿದೆ. ಯಜ್ಞಗಳು ಎರಡು ವಿಧಗಳೆಂದು ಅವು ದ್ರವ್ಯಯಜ್ಞ, ಜ್ಞಾನಯಜ್ಞ ಎಂದು ಸಹ ಗೀತೆಯಲ್ಲೇ ಹೇಳಿದ್ದಾರೆ. ದ್ರವ್ಯ ಯಜ್ಞ ಶರೀರದೊಳಗಿನ ಜೀರ್ಣಾಶಯದಲ್ಲಿ ನಡೆಯುತ್ತಿದೆ. ದ್ರವ್ಯಯಜ್ಞಕ್ಕೆ ಬೇಕಾದ ಅಗ್ನಿಯನ್ನು ಜಠರಾಗ್ನಿ ಎನ್ನುತ್ತಿದ್ದೇವೆ. ಜಠರಾಗ್ನಿಯನ್ನು ಆತ್ಮ ತನ್ನ ಶಕ್ತಿಯಿಂದ ರಸಗಳ ರೂಪದಿಂದ ಹುಟ್ಟಿಸುತ್ತಿದೆ, ಆತ್ಮವೇ ನಡೆಸುತ್ತಿದೆ. ಆದ್ದರಿಂದ ದ್ರವ್ಯಯಜ್ಞಕ್ಕೆ ಆತ್ಮವನ್ನು ಅಧಿಪತಿ ಎಂದು ಹೇಳಬಹುದು. ಹಾಗೇ ಜ್ಞಾನಯಜ್ಞ ಶಿರಸ್ಸಿನಲ್ಲಿ ನಡೆಯುತ್ತಿದೆ. ಜ್ಞಾನಯಜ್ಞಕ್ಕೆ ಬೇಕಾದ ಅಗ್ನಿ ಜ್ಞಾನಾಗ್ನಿ. ಆತ್ಮ ಸ್ವತಃ ತಾನೇ ಜ್ಞಾನಾಗ್ನಿ ರೂಪವಾಗಿ ಬದಲಾಗಿ ಜ್ಞಾನಯಜ್ಞ ನಡೆಯುವ ಹಾಗೆ ಮಾಡುತ್ತಿದೆ. ಆದ್ದರಿಂದ ಜ್ಞಾನ ಯಜ್ಞಕ್ಕೂ ಸಹ ಆತ್ಮ ಅಧಿಪತಿ ಎಂದು ಹೇಳಬಹುದು.

**461. (13) ಮನಸ್ಸನ್ನು ವೇಮನ ಯೋಗಿ ಯಾವ ಪದಾರ್ಥದೊಂದಿಗೆ ಹೋಲಿಸಿ ಹೇಳಿದ್ದಾನೆ?**

ಉ. ಪಾದರಸದೊಂದಿಗೆ.

**ವಿವರ :** ಮನಸ್ಸು ಚಂಚಲವಾದದ್ದು, ಬಲವಾದದ್ದು, ಯಾರಿಗೂ ಸಿಗುವುದಲ್ಲ, ಬಂಧಿಸಲಾಗುವುದಿಲ್ಲ. ಮನಸ್ಸಿನೊಂದಿಗೆ ಸಮಾನ ಹೋಲಿಕೆಗಳಿರುವುದು ಒಂದೇ ಒಂದು ಪಾದರಸ. ಪಾದರಸವೂ ಸಹ ಮನಸ್ಸಿನಂತೆ ಸಿಗುವುದಲ್ಲ. ಬಂಧಿಸಬೇಕೆಂದು ಪ್ರಯತ್ನಿಸಿದರೂ ಸಣ್ಣ ಕಿಂಡಿ ಸಿಕ್ಕರೂ ನುಸುಳಿ ಹೋಗಬಲ್ಲದು. ಮನಸ್ಸು ನಿದ್ರೆಯಲ್ಲಿ ಸಣ್ಣದಾಗಿದ್ದು ಎಚ್ಚರದಲ್ಲಿ ಶರೀರವೆಲ್ಲ ದೊಡ್ಡದಾಗಿ ಬದಲಾದ ಹಾಗೆ ಪಾದರಸವೂ ಸಹ ತಂಪಿನಲ್ಲಿ ಒಂದು ಸೈಜಿನಲ್ಲಿದ್ದು ಬಿಸಿಯಲ್ಲಿ ಸೈಜನ್ನು ಹೆಚ್ಚಿಸಿಕೊಂಡು ದೊಡ್ಡದಾಗಿ ಬದಲಾಗುತ್ತದೆ. ಮನಸ್ಸು ಸುನ್ನಿತವಾದುದಲ್ಲ, ಹಾಗೆಂದು ಕಠಿಣವಾದದ್ದಲ್ಲ. ಪಾದರಸವೂ ಸಹ ಪೂರ್ತಿ ದ್ರವವೂ ಅಲ್ಲ, ಲೋಹವೂ ಅಲ್ಲ. ಒಂದು ಸಲ ದ್ರವವಾಗಿ, ಒಂದುಸಲ ಲೋಹವಾಗಿ ಬದಲಾಗಬಹುದು. ಹೀಗೆ ಅನೇಕವಾಗಿ ಮನಸ್ಸಿಗೂ ಪಾದರಸಕ್ಕೂ ಹತ್ತಿರ ಹೋಲಿಕೆಗಳಿವೆ. ಆದ್ದರಿಂದ ಮನಸ್ಸನ್ನು ವೇಮನ ಯೋಗಿ ಪಾದರಸದೊಂದಿಗೆ ಹೋಲಿಸಿ ಹೇಳಿದ್ದಾನೆ.

**462. (14) ಅಶ್ವರ್ಥ ವೃಕ್ಷವು ಅರಳಿಮರವಾ? ಆಲದಮರವಾ?**

ಉ. ಯಾವುದು ಅಲ್ಲ.

**ವಿವರ :** ಅಶ್ವರ್ಥವು ಅರಳಿಮರವಾಗಲಿ, ಆಲದಮರವಾಗಲಿ ಅಲ್ಲ. ಭಗವದ್ಗೀತೆಯಲ್ಲಿ ಶರೀರವನ್ನೇ ಅಶ್ವರ್ಥವಾಗಿ ಹೋಲಿಸಿ ಹೇಳಿದ್ದಾನೆ. ಅಶ್ವರ್ಥವನ್ನು ಅಸಂಗಶಸ್ತ್ರದಿಂದ ಕಡಿದು ಹಾಕೆಂದಿದ್ದಾನೆ. ಎಲ್ಲವೇಳೆಯಲ್ಲಿ ವಿಷಯ ಸಂಗಮವನ್ನು ಹೊಂದಿರುವುದು ಮನಸ್ಸು. ಅದನ್ನು ಯೋಗ ಎನ್ನುವ ಆಯುಧದಿಂದಲೇ ಇಲ್ಲದಂತೆ ಮಾಡಬೇಕು. ವಿಷಯವನ್ನು ಮುಖ್ಯವಾಗಿ ಮನಸ್ಸಿಗೆ ಇಲ್ಲದ ಹಾಗೆ ಮಾಡುವುದು ಒಂದು ಯೋಗವಾದರೆ, ಕರ್ಮವನ್ನು ಸೇರದಹಾಗೆ ಮಾಡುವುದು ಮತ್ತೊಂದು ಯೋಗವಾಗುತ್ತದೆ. ವಿಷಯ ಸಂಗವು, ಕರ್ಮ ಸಂಗವು ಇಲ್ಲದಂತೆ ಮಾಡುವುದರಿಂದ ಅಶ್ವರ್ಥವೃಕ್ಷ ನಶಿಸಿ ಹೋಗುತ್ತದೆ. ಅಶ್ವ ಎಂದರೆ ಕುದುರೆ. ಅರ್ಥ ಎಂದರೆ ಅದರಲ್ಲಿನ ವೇಗದ ಓಟ ಎಂದರ್ಥ. ಅಶ್ವರ್ಥ ಎಂದರೆ ಕುದುರೆ ಹಾಗೆ ಓಡುವ ಮನಸ್ಸು ನಿವಾಸಿಸುವ ಶರೀರವೆಂದು ಸಹ ವಿವರ ಇದೆ. ಎಲ್ಲಾ ಶರೀರಗಳಲ್ಲಿ ಮನಸ್ಸು ಇರುವುದರಿಂದ ಎಲ್ಲಾ ಶರೀರಗಳನ್ನು ಅಶ್ವರ್ಥ ವೃಕ್ಷಗಳು ಎಂದಿದ್ದೇವೆ. ಆದ್ದರಿಂದ ಅಶ್ವರ್ಥ ವೃಕ್ಷ ಬಾಹ್ಯದಲ್ಲಿ ಅರಳಿಮರಕ್ಕೆ, ಆಲದಮರಕ್ಕೆ ಹೋಲಿಸಿಕೊಳ್ಳಬಾರದು.

**463. (15) ಅಶ್ವರ್ಥ ವೃಕ್ಷದ ಕಾಯಗಳ ಹೆಸರುಗಳೇನು?**

ಉ. ಕರ್ಮಗಳು.

**ವಿವರ :** ಶರೀರವೆಲ್ಲಾ ವಿಸ್ತರಿಸಿಕೊಂಡಿರುವ ಮನಸ್ಸಿನ ಎಲೆಗಳು ವಿಷಯಗಳು, ಗುಣಗಳೆಂದುಕೊಂಡಿದ್ದೇವೆ. ಗುಣಗಳಿಂದ ಬರುವ ಫಲಿತ ಕೊನೆಗೆ ಕರ್ಮ ಎಂದು ಸಹ ಎಲ್ಲರಿಗೂ ತಿಳಿದಿದೆ. ಆದ್ದರಿಂದ ಅಶ್ವರ್ಥ ವೃಕ್ಷವೊಂದರ ಕಾಯಗಳು ಕರ್ಮ ಫಲಗಳೆಂದು ಹೇಳಿಕೊಂಡಿದ್ದೇವೆ. ಕರ್ಮಗಳೆಂದರೆ ಪಾಪಗಳು ಪುಣ್ಯಗಳು. ಪಾಪ ಪುಣ್ಯಗಳಾದ ಕರ್ಮಗಳೇ ವೃಕ್ಷವೊಂದರ ಫಲಗಳೆಂದು ತಿಳಿಯಬೇಕು.

**464. (16) ಶರೀರದೊಳಗಿನ ಹಸಿವು ಯಾವ ಗುಣ?**

ಉ. ಯಾವ ಗುಣವೂ ಅಲ್ಲ.

**ವಿವರ :** ಹಸಿವು ಗುಣಗಳಿಂದ ಬರುವ ಬಾಧೆ ಅಲ್ಲ. ಆತ್ಮ ಪ್ರೇರಣೆಯಿಂದ ನಡೆಯುವ

ಶರೀರ ಕಾರ್ಯಗಳಲ್ಲಿ, ಗ್ರಂಥಿಗಳಿಂದ ಹುಟ್ಟುವ ರಸಗಳ ಪ್ರಭಾವದಿಂದ ಹಸಿವು ಆಗುತ್ತಿದೆ. ಆತ್ಮ ಪ್ರೇರೇಪಿತ ರಸಗಳೊಳಗಿನಿಂದ ಹುಟ್ಟಿರುವ ಅಗ್ನಿಯಿಂದ ಉಂಟಾದ ಬಾಧೆಯನ್ನು ಹಸಿವು ಎನ್ನುತ್ತಿದ್ದೇವೆ. ಜಠರಾಗ್ನಿ ಆಹಾರವನ್ನು ಸುಟ್ಟಹಾಗೆ, ಖಾಲೀ ಹೊಟ್ಟೆ ಇರುವಾಗ ಜೀರ್ಣಾಶಯದ ಗೋಡೆಗಳಿಗೆ ತಾಕುವುದರಿಂದ ಹಸಿವು ಉರಿ ಹುಟ್ಟುತ್ತಿದೆ.

**465. (17) ಕರ್ಮವನ್ನನುಸರಿಸಿ ಕಾಲವಿರುತ್ತದಾ? ಕಾಲವನ್ನನುಸರಿಸಿ ಕರ್ಮವಿರುತ್ತದಾ?**

ಉ. ಕಾಲವನ್ನನುಸರಿಸಿ ಕರ್ಮವಿರುತ್ತದೆ.

**ವಿವರ :** ಕಣ್ಣಿಗೆ ಕಾಣಿಸದ ನಾಲ್ಕು ಚಕ್ರಗಳ ಜೋಡಣೆಯಲ್ಲಿ ಮೇಲೆ ಬ್ರಹ್ಮಚಕ್ರ, ಅದರ ಕೆಳಗೆ ಕಾಲಚಕ್ರ, ಅದಕ್ಕಿಂತ ಕೆಳಗೆ ಕರ್ಮಚಕ್ರ, ಎಲ್ಲದಕ್ಕಿಂತ ಕೆಳಗೆ ಗುಣಚಕ್ರ ಜೋಡಣೆ ಇವೆ. ಈ ನಾಲ್ಕು ಚಕ್ರಗಳ ಜೋಡಣೆ ಎಲ್ಲಾ ಜೀವರಾಶಿಗಳಿಗೂ ಇರುತ್ತದೆ. ಇದು ಎಲ್ಲರಿಗೂ ಮೂಲವಾಗಿದೆ. ಈ ನಾಲ್ಕುಚಕ್ರಗಳು ಒಂದರೊಂದಿಗೆ ಒಂದು ಅನುಸಂಧಾನವಾಗಿವೆ. ಬ್ರಹ್ಮಚಕ್ರವನ್ನನುಸರಿಸಿ ಕಾಲಚಕ್ರ, ಕಾಲಚಕ್ರವನ್ನನುಸರಿಸಿ ಕರ್ಮಚಕ್ರ, ಕರ್ಮಚಕ್ರವನ್ನನುಸರಿಸಿ ಗುಣಚಕ್ರ ತಿರುಗುತ್ತಿರುವುದು. ಯಾರಿಗೆ ಯಾವ ಗುಣ ಬರಬೇಕೆಂದರೂ ಮೇಲೆ ಅವನ ಕರ್ಮವನ್ನನುಸರಿಸಿ ಇರುತ್ತದೆ. ಹಾಗೇ ಯಾವಾಗ ಯಾರಿಗೆ ಯಾವ ಕರ್ಮ ಬರಬೇಕೆಂದರೂ ಮೇಲಿರುವ ಕಾಲಚಕ್ರವನ್ನನುಸರಿಸಿ ಇರುತ್ತದೆ. ಆದ್ದರಿಂದ ಗುಣಗಳು ಕರ್ಮಾನುಸಾರ, ಕರ್ಮ ಕಾಲಾನುಸಾರವಾಗಿ ನಡೆಯುತ್ತಿದೆ.

**466. (18) ಪುಣ್ಯವನ್ನು ಮಾಡಿದ ಜೀವಿಯು ಮರಣಿಸಿದ ನಂತರ ಎಲ್ಲಿಗೆ ಹೋಗುವನು?**

ಉ. ಒಳ್ಳೆಯ ಜನ್ಮಕ್ಕೆ ಹೋಗುವನು.

**ವಿವರ :** ಪುಣ್ಯ ಮಾಡಿದವನು ಸ್ವರ್ಗಕ್ಕೆ, ಪಾಪ ಮಾಡಿದವನು ನರಕಕ್ಕೆ ಹೋಗುವನೆಂದು, ಆ ಎರಡು ಮೇಲೆ ಇವೆಯೆಂದು, ನರಕಕ್ಕೆ ಯಮಧರ್ಮರಾಜ, ಸ್ವರ್ಗಕ್ಕೆ ಇಂದ್ರನು ಅಧಿಪತಿಗಳೆಂದು ಬಹಳ ಜನ ತಿಳಿದುಕೊಂಡಿರುವುದು ಸಹಜ. ಆದರೆ ಪ್ರತ್ಯೇಕವಾಗಿ ಸ್ವರ್ಗ ನರಕಗಳೆನ್ನುವವು ಯಾವೂ ಇಲ್ಲ. ಜೀವಿಯು ಮರಣಿಸಿದ ಕೂಡಲೇ ಮರುಜನ್ಮಕ್ಕೆ ಹೋಗುವನು. ನಂತರ ಬಂದಿರುವ ಜನ್ಮದಲ್ಲಿ ಪುಣ್ಯವನ್ನನುಸರಿಸಿ ಒಳ್ಳೆಯ ಸುಖ, ಪಾಪವನ್ನನುಸರಿಸಿ ಕಷ್ಟಗಳು ಬರುತ್ತಿರುತ್ತವೆ. ಇದನ್ನನುಸರಿಸಿ ಪುಣ್ಯ ಮಾಡಿದವನಾಗಲಿ, ಪಾಪ ಮಾಡಿದವನಾಗಲಿ ಜನ್ಮಗಳಿಗೇ ಹೋಗುವನೆಂದು, ಜನ್ಮಗಳಲ್ಲೇ ಸ್ವರ್ಗ ನರಕಗಳಿವೆ ಎಂದು, ಸ್ವರ್ಗ ನರಕಗಳು ಪ್ರತ್ಯೇಕ ದೇಶದಲ್ಲಿಲ್ಲವೆಂದು ತಿಳಿಯುತ್ತಿದೆ.

**467. (19) ಮೋಕ್ಷ ಹೊಂದಿದವನು ಪುನಃ ಯಾವಾಗಾದರೂ ಜನ್ಮಿಸುವನಾ?**

ಉ. ಜನ್ಮಿಸುವನು.

**ವಿವರ :** ಜನ್ಮಗಳಿಂದ ಬಿಡುಗಡೆ ಯಾಗುವುದೇ ಮೋಕ್ಷವೆಂದು, ಮೋಕ್ಷ ಹೊಂದಿದವನಿಗೆ ಜನ್ಮಗಳಿರುವುದಿಲ್ಲವೆಂದು ಹೇಳುವುದು ಕೇಳಿದ್ದೇವೆ. ನೀವು ಮೋಕ್ಷ ಹೊಂದಿದವನು ಪುನಃ ಜನಿಸುವನೆಂದು ಹೇಳುತ್ತಿದ್ದೀರಾ ಎಂದು ಕೆಲವರಿಗೆ ದೊಡ್ಡ ಪ್ರಶ್ನೆ ಬರುವುದು ಸಹಜ. ನಿಮ್ಮ ಪ್ರಶ್ನೆ ಸಮಂಜಸವಾಗಿರುವುದೇ ಎಷ್ಟೋ ಸಲ ಮೋಕ್ಷ ಹೊಂದಿದವನು ಜನ್ಮಗಳು ಹೊಂದುವುದಿಲ್ಲವೆಂದು ಜನ್ಮರಾಹಿತ್ಯಕ್ಕೆ ಕಷ್ಟ ಬೀಳಬೇಕೆಂದು ಹೇಳುತ್ತಾ ಬಂದಿದ್ದೇವೆ. ಇಲ್ಲಿ ಪ್ರಶ್ನೆಗೆ ಉತ್ತರವಾಗಿ ಜನ್ಮಿಸುವನೆಂದೇ ಹೇಳಬೇಕಾಗಿ ಬಂದಿದೆ. ಮೋಕ್ಷ ಹೊಂದದಿರುವಾಗ ತಕ್ಷಣವೇ ಜನ್ಮಿಸುವುದಿಲ್ಲ. ಅವನು ಪರಮಾತ್ಮನಲ್ಲಿ ಐಕ್ಯವಾಗಿ ಹೋಗುವನು. ಆ ಜೀವಿಗೆ ಜನ್ಮ ರಾಹಿತ್ಯವಾದ ಹಾಗೆ. ಆ ಜೀವಿಯು ಮೋಕ್ಷ ಹೋಂದದಾಗ ಮರಣಿಸಿದ ಕೂಡಲೇ ಜನ್ಮ ಹೋಂದಬೇಕಾಗಿರುತ್ತದೆ. ಆದರೆ ಮೋಕ್ಷ ಹೊಂದಿದ ನಂತರ ಇನ್ನು ಹಾಗೆ ಹುಟ್ಟಬೇಕಾದ ಕೆಲಸವಿಲ್ಲ. ಮೋಕ್ಷ ಹೊಂದಿದವನಿಗೆ ಕರ್ಮ ಇಲ್ಲ. ಕರ್ಮ ಅವನನ್ನು ಹುಟ್ಟಿಸುವುದಿಲ್ಲ. ಆದರೆ ಈ ಪ್ರಶ್ನೆಯಲ್ಲಿ ವಿಶೇಷವೇನೆಂದರೆ ಪುನಃ ಯಾವಾಗಾದರೂ ಹೇಳಿರುವುದನ್ನನುಸರಿಸಿ ಜನ್ಮಿಸುವನೆಂದು ಹೇಳಬೇಕಾಗಿ ಬಂದಿದೆ. ಮೋಕ್ಷದೊಂದಿಗೆ ಜೀವಿಯು ಪರಮಾತ್ಮನಾಗಿ ಬದಲಾಗಿ ಅಣುವಣುವಿನಲ್ಲಿ ವ್ಯಾಪಿಸಿಕೊಂಡಿರುತ್ತಾನೆ. ಆಗ ಅವನು ಜೀವಿಯಲ್ಲ ಸ್ವತಃ ಪರಮಾತ್ಮನೇ. ಹಾಗೆ ಪರಮಾತ್ಮನಾಗಿ ಬದಲಾದ ಜೀವಿಯು ಧರ್ಮಗಳು ಅಧರ್ಮಗಳಾಗಿ ಬದಲಾದಾಗ, ಧರ್ಮಗಳನ್ನು ಪುನಃ ಉದ್ಧರಿಸುವುದಕ್ಕೋಸ್ಕರ ಜನ್ಮ ತೆಗೆದುಕೊಳ್ಳಬೇಕಾಗುತ್ತದೆ. ಒಂದು ಸಲ ಮರಣಿಸಿ ಮೋಕ್ಷ ಹೊಂದಿದವನು ಪರಮಾತ್ಮನಾಗಿ ಬದಲಾಗಿದ್ದಾನೆ. ಆದ್ದರಿಂದ ಪರಮಾತ್ಮ ಹುಟ್ಟಿದನೆಂದರೆ ಮೋಕ್ಷ ಹೊಂದಿದವನು ಹುಟ್ಟಿದಹಾಗೆ ಅಲ್ಲವೆ! ಯಾವಾಗಾದರೂ ಹುಟ್ಟುವನಾ ಎನ್ನುವ ಮಾತಿಗೆ ಧರ್ಮಗಳು ಅಧರ್ಮಗಳಾಗಿ ಬದಲಾದಾಗ ಹುಟ್ಟುವನೆಂದೇ ಹೇಳಬೇಕು.

**468. (20) ಕೋಪ ತಾಪಗಳಿರುವವನು ಗುರುವಾ?**

ಉ. ಗುರುವೇ.

**ವಿವರ :** ಗುರುಗಳಿಗೆ ಕೋಪವಿದ್ದರೂ ಹಾಗೆ ಉಳಿದ ಗುಣಗಳಿದ್ದರೂ ಗುರುವು ಅಲ್ಲ ಎನ್ನುವುದಕ್ಕೆ ಅವಕಾಶವಿಲ್ಲ. ಏಕೆಂದರೆ ಸಾಧಾರಣ ಮನುಷ್ಯರ ಹಾಗೆ ಗುರುವಿಗೆ ಗುಣಗಳ

ಫಲಿತಗಳು ಅಂಟುವುದಿಲ್ಲ. ಗುರುವು ಮೊದಲು ಕರ್ಮಬದ್ಧನಲ್ಲ ನಂತರ ಕರ್ಮ ಬಂಧಗಳಿರುವುದಿಲ್ಲ. ಗುರುವು ಸ್ವತಃ ತಾನೇ ಕರ್ಮವನ್ನು ನಿರ್ಮಿಸಿಕೊಂಡು ಬಂದಿರುತ್ತಾನೆ. ಆದರೆ ಕರ್ಮ ಗುರುವನ್ನು ನಿಯಮಿಸುವುದಿಲ್ಲ. ಸಾಧಾರಣ ಮನುಷ್ಯನಹಾಗೆ ಎಲ್ಲಾ ಗುಣಗಳನ್ನು ಬಳಸಿಕೊಂಡು ತನ್ನಲ್ಲಿ ಪ್ರತ್ಯೇಕತೆ ಇಲ್ಲದ ಹಾಗೆ ಸಾಧಾರಣವಾಗಿ ಕಾಣಿಸುವುದೇ ಗುರುವಿನ ಕೆಲಸ. ಒಳ್ಳೆದು ಕೆಟ್ಟದ್ದು ಎರಡು ವಿಧಗಳ ಗುಣಗಳಿರುವುದರಿಂದ ಗುರುವನ್ನು ಗುರುತಿಸುವುದು ಬಹಳ ಕಷ್ಟ.

**469. (21) ನಿಜವಾದ ಗುರುವು ಊರಲ್ಲಿರುತ್ತಾನಾ ಕಾಡಿನಲ್ಲಿರುತ್ತಾನಾ?**

ಉ. ಊರಲ್ಲೇ ಇರುತ್ತಾನೇ.

**ವಿವರ :** ಗುರುವು ಅಜ್ಞಾನಿಗಳಿಗೆ ಜ್ಞಾನವನ್ನು ತಿಳಿಸುವುದಕ್ಕೆ, ಕಾಲಗರ್ಭದಲ್ಲಿ ಬೆರೆತು ಹೋಗಿರುವ ಧರ್ಮಗಳನ್ನು ಪುನರುದ್ಧರಿಸುವುದಕ್ಕೆ ಬಂದಿರುತ್ತಾನೆ. ಅಂತಹದರಲ್ಲಿ ಗುರುವು ಪ್ರಜೆಗಳ ಮಧ್ಯದಲ್ಲಿ ಇದ್ದು ಅವರಿಗೆ ಜ್ಞಾನವನ್ನು ತಿಳಿಸುವುದು ಆತನ ಕರ್ತವ್ಯ. ಪ್ರಜೆಗಳ ಮಧ್ಯದಲ್ಲಿ ಇರುವಾಗಲೇ ಸಂದರ್ಭಾನುಸಾರ ಜ್ಞಾನವನ್ನು ಬೋಧಿಸುವುದಕ್ಕೆ ಅವಕಾಶವಿರುತ್ತದೆ. ಹಾಗಲ್ಲದೆ ಕಾಡಿನಲ್ಲಿದ್ದರೆ ಏನು ಪ್ರಯೋಜನ. ತಿಳಿದುಕೊಳ್ಳಬೇಕಾದವರು ಎಲ್ಲಿರುತ್ತಾರೋ ತಿಳಿಸಬೇಕಾದವನು ಅಲ್ಲೇ ಇರಬೇಕು. ಆದ್ದರಿಂದ ಗುರುವು ಊರಿನಲ್ಲೇ ಇರುವನೆಂದು ಹೇಳಬಹುದು.

**470. (22) ಜೀವಿಯು ಪ್ರಕೃತಿ ಅಧೀನದಲ್ಲಿ ಇದ್ದಾನಾ? ಪರಮಾತ್ಮ ಅಧೀನದಲ್ಲಿ ಇದ್ದಾನಾ?**

ಉ. ಪ್ರಕೃತಿ ಅಧೀನದಲ್ಲಿ ಇದ್ದಾನೆ.

**ವಿವರ :** ಸರ್ವ ಪ್ರಪಂಚವು, ಅದರಲ್ಲಿನ ಜೀವರಾಶಿಗಳು, ಪ್ರತಿ ವಸ್ತು, ಅಣುವಣುವು ಪರಮಾತ್ಮ ಅಧೀನದಲ್ಲಿದ್ದರೂ ಎಲ್ಲವನ್ನೂ ಪ್ರಕೃತಿ ಆಧೀನದಲ್ಲಿಟ್ಟು ಪ್ರಕೃತಿಯಿಂದ ಪರಮಾತ್ಮ ಆಡಿಸುತ್ತಿದ್ದಾನೆ. ಪರಮಾತ್ಮ ನಿರ್ಣಯದ ಪ್ರಕಾರ ಸರ್ವರು ಪ್ರಕೃತಿ ಕೈಯಲ್ಲಿದ್ದು, ಅದರಿಂದಲೇ ಪೋಷಿಸಲ್ಪಟ್ಟು ಆಡಿಸಲ್ಪಡುತ್ತಿದ್ದಾರೆ. ಪರಮಾತ್ಮ ಪ್ರಕೃತಿ ಎಲ್ಲದಕ್ಕೂ ಅಧ್ಯಕ್ಷತೆಯನ್ನು ವಹಿಸಿ ಇದ್ದಾನೆ. ಎಲ್ಲರನ್ನು ತನ್ನ ಅಧೀನದಲ್ಲಿಟ್ಟುಕೊಂಡ ಪ್ರಕೃತಿ ಸಹ ಪರಮಾತ್ಮನ ಅಧೀನದಲ್ಲಿ ಇದೆಯೆಂದು ಮರೆಯಬಾರದು.

**471. (23) ಶರೀರದಲ್ಲಿ ಗುಣಗಳ ಸಂಖ್ಯೆ ಎಷ್ಟು?**

ಉ. 36.

**ವಿವರ :** ಶರೀರದಲ್ಲಿ ಮೂರು ಗುಣ ಭಾಗಗಳು ಇವೆ. ಅವುಗಳ ಹೆಸರುಗಳು ತಾಮಸ, ರಾಜಸ, ಸಾತ್ವಿಕ. ಒಂದು ಭಾಗದಲ್ಲಿ ಮಿತ್ರ ಹಾಗೂ ಶತ್ರು ವರ್ಗಗಳಾದ ಎರಡು ವಿಧಗಳ ಗುಣಗಳಿವೆ. ಮಿತ್ರ ವರ್ಗದಲ್ಲಿ ಆರು, ಶತ್ರು ವರ್ಗದಲ್ಲಿ ಆರು ಒಟ್ಟು ಹನ್ನೆರಡು ಗುಣಗಳು ಇವೆ. ಒಂದು ಭಾಗದಲ್ಲಿ ಹನ್ನೆರಡರಂತೆ ಮೂರು ಭಾಗಗಳಲ್ಲಿ ಮುವ್ವತ್ತಾರು ಗುಣಗಳಿವೆ. ಇವಲ್ಲದೆ ಛಾಯ ಗುಣಗಳೆನ್ನುವವು ಸಹ ಇವೆ. ಅವು ಸಹ ಮಿತ್ರವರ್ಗದೊಳಗೊಂದು ಶತ್ರುವರ್ಗದೊಳಗೊಂದು ಸೇರಿವೆ. ಅವುಗಳೊಂದಿಗೆ ಸಹ ಬೆರೆಸಿ ನೋಡಿದರೆ ಪ್ರತಿ ವರ್ಗದೊಳಗೂ ಏಳು ಗುಣಗಳು ಇವೆ. ಮೂರು ಭಾಗಗಳಲ್ಲಿ ಲೆಕ್ಕಿಸಿದರೆ ಒಟ್ಟು 42 ಆಗುತ್ತವೆ, ಆದರೆ ಮುಖ್ಯವಾಗಿ ಹೇಳಿಕೊಳ್ಳಬೇಕಾಗಿರುವವು 36 ಮಾತ್ರ.

**472. (24) ಪ್ರತಿ ವಿಷಯವನ್ನು ಬುದ್ಧಿ ಯೋಚನೆಯ ನಂತರವೇ ಚಿತ್ತ ನಿರ್ಣಯಿಸುವುದಾ ಅಥವಾ ಸ್ವತಃ ನಿರ್ಣಯಿಸುವುದಾ?**

ಉ. ಕೆಲವು ವಿಷಯಗಳಲ್ಲಿ ಬುದ್ಧಿ ಪ್ರಮೇಯವಿಲ್ಲದೆ ಸ್ವತಃ ಚಿತ್ತ ನಿರ್ಣಯಿಸುತ್ತದೆ.

**ವಿವರ :** ಮನಸ್ಸಿನಿಂದ ಬಂದಿರುವ ಪ್ರತಿಯೊಂದು ವಿಷಯವನ್ನು ಬುದ್ಧಿ ಯೋಚಿಸಿದಾಗ, ಬುದ್ಧಿ ಯೋಚಿಸಿದ ಎರಡು ಮಾರ್ಗಗಳಲ್ಲಿ ಯಾವುದೋ ಒಂದು ಮಾರ್ಗವನ್ನು ಚಿತ್ತ ನಿರ್ಣಯಿಸುತ್ತದೆ. ಸಾಧಾರಣವಾಗಿ ಬುದ್ಧಿ ಯೋಚಿಸಿದ ನಂತರವೇ ಚಿತ್ತ ಒಂದು ನಿರ್ಣಯಕ್ಕೆ ಬರುತ್ತದೆ. ಕೆಲವು ಅತ್ಯವಶ್ಯಕ ಸಮಯಗಳಲ್ಲಿ ಮನಸ್ಸು ಕಳಿಸಿರುವ ವಿಷಯವನ್ನು ಬುದ್ಧಿ ಯೋಚಿಸದೇ ಚಿತ್ತ ತಾನೇ ಸ್ವತಃ ನಿರ್ಣಯಿಸಿ ಕಳಿಸುವುದು. ಪ್ರತ್ಯೇಕವಾಗಿ ಬುದ್ಧಿ ಯೋಚಿಸುವುದಕ್ಕೆ ಸಮಯವಿಲ್ಲದ ವಿಷಯಗಳಲ್ಲೇ ಚಿತ್ತ ಹಾಗೆ ಮಾಡುವುದೆಂದು ತಿಳಿಯಬೇಕು.

**473. (25) ಮಾಂಸಾಹಾರ ದಿಂದ ಯಾವ ಗುಣ ವೃದ್ಧಿ ಆಗುತ್ತದೆ?**

ಉ. ಯಾವ ಗುಣವೂ ವೃದ್ಧಿ ಆಗುವುದಿಲ್ಲ.

**ವಿವರ :** ಮಾಂಸಾಹಾರ ದಿಂದ ಶರೀರ ವೃದ್ಧಿಯಾಗುತ್ತದೆ ಆದರೆ ಗುಣಗಳು ವೃದ್ಧಿ

ಆಗುವುದಿಲ್ಲ. ಬಾಯಿಂದ ತೆಗೆದುಕೊಳ್ಳುವ ಆಹಾರ ಶರೀರವನ್ನು ಅಭಿವೃದ್ಧಿ ಮಾಡುವುದು. ಹಾಗೇ ಮನಸ್ಸಿಗೆ ಆಹಾರವಾದ ವಿಷಯಗಳು ಗುಣಗಳನ್ನು ಅಭಿವೃದ್ಧಿ ಮಾಡುವುದು. ಆದ್ದರಿಂದ ಆಹಾರಕ್ಕೂ ಗುಣಗಳಿಗೂ ಯಾವ ಮಾತ್ರ ಸಂಬಂಧವಿಲ್ಲ. ಈ ವಿಷಯವನ್ನೇ ಗೀತೆಯಲ್ಲಿ ಭಗವಂತನು ಸಹ ಹೇಳಿದ್ದಾನೆ.

**474. (26) ಮೂಗಿನಿಂದ ವಾಸನೆ ಯಾವ ಭಾಗದಿಂದ ಮನಸ್ಸಿಗೆ ಸೇರುತ್ತಿದೆ?**

ಉ. ಘ್ರಾಣ ಎನ್ನುವ ತನ್ಮಾತ್ರ ಭಾಗದಿಂದ.

**ವಿವರ :** ಮೂಗು ಶರೀರದಲ್ಲಿನ ಒಂದು ಭಾಗವಾದರೆ ಅದಕ್ಕೆ ಘ್ರಾಣ ಎನ್ನುವ ಸೂಕ್ಷ್ಮ ಭಾಗ ಅನುಸಂಧಾನವಾಗಿ ಇದ್ದು, ತಾನು ಗ್ರಹಿಸಿದ್ದನ್ನು ಮನಸ್ಸಿಗೆ ಸೇರಿಸುತ್ತಿದೆ. ಒಂದೊಂದು ಶರೀರದಲ್ಲಿ ಒಂದೊಂದು ವಿಧವಾಗಿ ಘ್ರಾಣಶಕ್ತಿ ಇರುತ್ತದೆ. ಮೂಗಿನಿಂದ ಘ್ರಾಣ ಕೊಟ್ಟಿರುವುದನ್ನು ಮನಸ್ಸು ಒಳಗೆ ಬುದ್ಧಿಗೆ ಸೇರಿಸುತ್ತಿದೆ.

**475. (27) ಅಹಂಕಾರ ಒಂದು ಗುಣವಾ?**

ಉ. ಅಲ್ಲ.

**ವಿವರ :** ಶರೀರದೊಳಗಿನ ಒಟ್ಟು 25 ಭಾಗಗಳಲ್ಲಿ ಅಹಂಕಾರವು ಸಹ ಒಂದು. ಗುಣಗಳು ಶರೀರದೊಳಗೆ ಇದ್ದರೂ ಶರೀರದಲ್ಲಿನ ಭಾಗಗಳೊಂದಿಗೆ ಲೆಕ್ಕಿಸಲ್ಪಡಲಿಲ್ಲ. ಗುಣಗಳು ಕರ್ಮ ಎಲ್ಲವೂ ಪ್ರತ್ಯೇಕ ಸಮೂಹದಲ್ಲಿ ಜೋಡಣೆಯಾಗಿರುವುದರಿಂದ ಅವನ್ನು ಶರೀರ ಭಾಗಗಳಾಗಿ ಲೆಕ್ಕಿಸಲಿಲ್ಲವೆಂದು ತಿಳಿಯುತ್ತಿದೆ.

**476. (28) ಕರ್ಮ ಮಾಡುವ ಕೆಲಸವೇನು?**

ಉ. ಜೀವಿಗೆ ಕಷ್ಟ ಸುಖಗಳನ್ನು ಒದಗಿಸುವುದು.

**ವಿವರ :** ಶರೀರದಲ್ಲಿ ಕೆಲಸ ಮಾಡುವುದು ಪ್ರಾರಬ್ದ ಕರ್ಮ. ಪ್ರಾರಬ್ಧಕರ್ಮ ತನ್ನ ಕರ್ಮಾನುಸಾರ ಶರೀರದೊಂದಿಗೆ ಕೆಲಸ ಮಾಡಿಸಿ ಅದರಲ್ಲಿನ ಕಷ್ಟ ಸುಖಗಳನ್ನು ಜೀವಿಗೆ ಒದಗಿಸಿ ಅನುಭವಿಸುವಹಾಗೆ ಮಾಡುತ್ತಿದೆ. ಪ್ರತಿ ಕೆಲಸಕ್ಕೂ ಶರೀರದಲ್ಲಿನ ಪ್ರಾರಬ್ಧಕರ್ಮವೇ ಕಾರಣವಾಗಿ ಇದೆ. ಪ್ರತಿ ಕೆಲಸಕ್ಕೂ ಹಿಂದೆ ಬರುವ ಸುಖದುಃಖಗಳನ್ನು ಜೀವಾತ್ಮನಿಂದ ಅನುಭವಿಸುವಂತೆ ಮಾಡುತ್ತಿದೆ.

**477. (29) ಗೀತೆಯಲ್ಲಿ ಹೇಳಿದಹಾಗೆ ಯಜ್ಞ ಕರ್ಮ ಆಚರಿಸುತ್ತಾ ಎಲ್ಲ ಕೆಲಸಗಳು ಮಾಡುವವನಿಗೆ ಅಂಟುವುದು ಪಾಪವಾ ಪುಣ್ಯವಾ?**

ಉ. ಯಾವುದೂ ಅಂಟುವುದಿಲ್ಲ.

**ವಿವರ :** ಯಾವ ಕೆಲಸ ಮಾಡಿದರೂ ಅದು ಯಜ್ಞಕರ್ಮ ಆಗಿರುವಾಗ ಅಂದರೆ ಕರ್ಮಸುಟ್ಟುಹೋದಾಗ ಯಾವ ಕರ್ಮ ಇಲ್ಲ. ಆದ್ದರಿಂದ ಯಜ್ಞ ಕರ್ಮ ಆಚರಿಸುವವನಿಗೆ ಪಾಪವಾಗಲಿ, ಪುಣ್ಯವಾಗಲಿ ಅಂಟುವುದಕ್ಕೆ ಸಾಧ್ಯವಿಲ್ಲ. ಯಜ್ಞಕರ್ಮ ಆಗದಿರುವಾಗ ಮಾಡುತ್ತಿರುವ ಕೆಲಸವನ್ನನುಸರಿಸಿ ಪಾಪ ಪುಣ್ಯಗಳಂಟುತ್ತವೆ. ಯಜ್ಞ ಕರ್ಮನಿಗೆ ಯಾವ ಕಾರ್ಯದಲ್ಲಿ ಎಂತಹ ಕರ್ಮ ಅಂಟುವುದಿಲ್ಲ.

**478. (30) ಯೋಗವೆಂದರೆ ಏನು?**

ಉ. ಕೂಡಿರುವುದು.

**ವಿವರ :** ಹೊಂದಿರುವುದು ಅಥವಾ ಸೇರಿ ಇರುವುದನ್ನು ಯೋಗ ಎನ್ನುತ್ತೇವೆ. ವಿಯೋಗ ಎಂದರೆ ಬೇರೆಯಾಗುವುದೆಂದು ಅರ್ಥ. ಆಧ್ಯಾತ್ಮಿಕವಾಗಿ ಆತ್ಮದೊಂದಿಗೆ ಸೇರಿ ಇರುವುದನ್ನು ಎಂದರೆ ಜೀವಿಯು ಆತ್ಮ ಅನುಭೂತಿಯನ್ನು ಹೊಂದುವುದನ್ನು ಯೋಗ ಎನ್ನುತ್ತಾರೆ. ಜ್ಯೋತಿಷ್ಯ ಶಾಸ್ತ್ರರೀತ್ಯಾ ಪ್ರಪಂಚ ಸುಖಗಳನ್ನು ಹೊಂದುವುದನ್ನು ಯೋಗವೆನ್ನುತ್ತಾರೆ. ಬ್ರಹ್ಮ ವಿದ್ಯೆಯಲ್ಲಿ ಆತ್ಮವನ್ನು ತಿಳಿದು ಮೋಕ್ಷವನ್ನು ಹೊಂದುವ ಮಾರ್ಗಗಳನ್ನು ಸಹ ಯೋಗವೆಂದು ಹೇಳುತ್ತಿರುವರು. ಗೀತೆಯಲ್ಲಿ ಪರಮಾತ್ಮನನ್ನು ಸೇರುವ ಎರಡು ಮಾರ್ಗಗಳನ್ನು ಬ್ರಹ್ಮಯೋಗ ಕರ್ಮಯೋಗವೆಂದು ಹೇಳಿದ್ದಾರೆ. ಯೋಗ ಎನ್ನುವ ಮಾತು ದೈವ ಸಂಬಂಧವಾದ ಲಾಭವನ್ನು ಹೊಂದುವುದೆಂದು, ಉಪಯೋಗ ಎನ್ನುವ ಮಾತು ಪ್ರಪಂಚ ಸಂಬಂಧವಾದ ಲಾಭವನ್ನು ಹೊಂದುವುದೆಂದು ತಿಳಿದುಬರುತ್ತದೆ.

## ಜ್ಞಾನ ಪರೀಕ್ಷೆ

**ತಾಡಿಪತ್ರಿ** **ದಿನಾಂಕ–28–01–1989**

**479. (1) ಯಾವ ಶಾಸ್ತ್ರವನ್ನನುಸರಿಸಿದರೆ ಮೋಕ್ಷವನ್ನು ಹೊಂದಬಹುದು?**

ಉ. ಯೋಗ ಶಾಸ್ತ್ರ.

**ವಿವರ :** ನಮಗಿರುವವು ಆರು ಶಾಸ್ತ್ರಗಳು. ಅವುಗಳಲ್ಲಿ ಮೊದಲ ಐದು ಶಾಸ್ತ್ರಗಳು ಪ್ರಪಂಚ ಸಂಬಂಧವಾದವು. ಆ ಐದು ಶಾಸ್ತ್ರಗಳ ಪ್ರಕಾರ ಪ್ರಪಂಚ ಫಲಿತಗಳೇ ಲಭಿಸುತ್ತವೆ. ಕೊನೆಯದಾದ ಯೋಗಶಾಸ್ತ್ರ ಪ್ರಪಂಚ ಸಂಬಂಧವಲ್ಲದ್ದು. ಆ ಒಂದು ಯೋಗಶಾಸ್ತ್ರ ಯೋಗವನ್ನು ಸೂಚಿಸಿ ಪರಮಾತ್ಮನಲ್ಲಿ ಐಕ್ಯವಾಗುವ ವಿಧಾನವನ್ನು ತಿಳಿಸುತ್ತದೆ. ಆದ್ದರಿಂದ ಮೇಲಿನ ಪ್ರಶ್ನೆಗೆ ಉತ್ತರ ಒಂದು ಪದದಲ್ಲಿಯೇ **"ಯೋಗ ಶಾಸ್ತ್ರ"** ಎಂದು ಐದಕ್ಷರಗಳನ್ನು ಬರೆದರೆ ಸರಿಹೋಗುವುದು.

**480. (2) ನಿದ್ರೆಯಲ್ಲಿ ಹೊರಳಾಡುವವನಿಗೆ ಯಾವ ಶಕ್ತಿ ಕೆಲಸ ಮಾಡುತ್ತಿದೆ?**

ಉ. ಆತ್ಮಶಕ್ತಿ.

**ವಿವರ :** ಸರ್ವ ಜೀವಿಗಳ ಶರೀರಗಳಲ್ಲಿಯು ಒಂದೇ ವಿಧಾನವಾದ ಆತ್ಮ ನಿವಾಸವಿರುತ್ತಾ, ಆ ಆತ್ಮಶಕ್ತಿಯೇ ಸರ್ವ ಶರೀರಗಳಿಗು ಚಲನೆಯನ್ನು ಕೊಡುತ್ತಿದೆ. ಆತ್ಮಶಕ್ತಿ ನಮ್ಮ ಶರೀರ ಶಿರೋ ಭಾಗದಲ್ಲಿ ಕೆಂದ್ರೀಕೃತವಾಗಿ ಇದ್ದು, ಅಲ್ಲಿಂದ ಬ್ರಹ್ಮನಾಡಿ ಎನ್ನುವ ನರದಿಂದ ಪ್ರಸಾರವಾಗುತ್ತಾ, ಆ ನಾಡಿಯಲ್ಲೇ ಇರುವ ಏಳು ಕೇಂದ್ರಗಳಿಂದ ಶರೀರ ಅವಯವಗಳೆಲ್ಲವುಗಳಿಗೂ ಸೇರಿ ಚೈತನ್ಯವನ್ನು ಕೊಡುತ್ತಿದೆ. ಆ ಶಕ್ತಿ ಎಚ್ಚರದಲ್ಲಿ ನಿದ್ರೆಯಲ್ಲಿ ಎಲ್ಲಾ ಸಮಯಗಳಲ್ಲಿ ಒಂದೇ ಸ್ಥಿತಿಯಾಗಿ ನಮ್ಮಲ್ಲಿ ಇದೆ. ಆ ಶಕ್ತಿಯಿಂದಲೇ ಜಾಗ್ರತೆ, ಸ್ವಪ್ನ ನಿದ್ರಾವಸ್ಥೆಗಳಲ್ಲಿ ಶ್ವಾಸ ಕದಲುತ್ತದೆ. ಎಚ್ಚರದಲ್ಲಿ ಜರುಗುವ ಕೆಲಸಗಳೆಲ್ಲವು ನಮಗೆ ತಿಳಿಯುತ್ತಿವೆ. ಆದ್ದರಿಂದ ನಾನೇ ಮಾಡಿದ್ದೇನೆಂದು ಜೀವಾತ್ಮ ಅಂದುಕೊಳ್ಳುತ್ತಿದ್ದಾನೆ. ನಿದ್ರೆಯಲ್ಲಿ ನಡೆದ ಕೆಲಸಗಳನ್ನು ಪ್ರಶ್ನಿಸಿದಾಗ ನಾನು ಮಾಡಿದ್ದೇನೆಂದು ಹೇಳದೇ ಹೋಗುವರು. ಆದ್ದರಿಂದ ಯಾವುದೋ ಅತೀತವಾದ ಶಕ್ತಿ ನಮ್ಮಲ್ಲಿ ಕೆಲಸಮಾಡುತ್ತಿದೆ ಎಂದು ಸುಲಭವಾಗಿ ತಿಳಿದುಕೊಳ್ಳಬಹುದು. ನಿದ್ರೆಯಲ್ಲಿ ಒಂದೇ ಕಡೆ ಮಲಿಗಿರುವವನ ಶರೀರ ಸ್ವಲ್ಪ ಸಮಯಕ್ಕೆ ನೋವು ಬಂದಿರುತ್ತದೆ. ಆ ಶರೀರ ಭಾಗದ ನೋವಿನ ವಾರ್ತೆ ಬ್ರಹ್ಮನಾಡಿಯನ್ನು ಸೇರಿದ ಕೂಡಲೆ ಅದಕ್ಕೆ ಉತ್ತರವಾಗಿ ಏಳು ನಾಡಿ ಕೇಂದ್ರಗಳಲ್ಲಿ ಯಾವುದೋ ಒಂದು ನಾಡಿ ಕೇಂದ್ರ, ಅದಕ್ಕೆ ತಕ್ಕ ವಿಷಯವನ್ನು ಕಳುಹಿಸಿ, ಆ ಶಕ್ತಿಯೇ ಕದಿಲಿಸಿ ಶರೀರವನ್ನು ತಿರುಗಿಸಿ ಮಲಗಿಸುತ್ತಿದೆ. ಆದ್ದರಿಂದ ಮೇಲಿನ ಪ್ರಶ್ನೆಗೆ ಕೇವಲ ನಾಲ್ಕು ಅಕ್ಷರಗಳ ಉತ್ತರ **"ಆತ್ಮ ಶಕ್ತಿ"** ಎಂದು ಬರೆಯಬೇಕು.

**481. (3) 2.1/4 ಆತ್ಮ ಯಾವುದು?**

ಉ. ಪರಮಾತ್ಮ.

**ವಿವರ :** ಇದು ಸಹ ನಾಲ್ಕು ಅಕ್ಷರಗಳ ಉತ್ತರ ಮಾತ್ರವೆ. ಇದು ಬಹಳ ಜನಕ್ಕೆ ವಿಚಿತ್ರವಾದ ಪ್ರಶ್ನೆಯಾಗಿ ಕಾಣಿಸಿದೆ. ಒಂದೇನೋ ಜೀವಾತ್ಮ. ಇದು ಒಂದು ಶರೀರದಲ್ಲಿ ಮಾತ್ರವೇ ಇರುತ್ತದೆ. ಆದ್ದರಿಂದ ಅನೇಕ ಶರೀರಗಳಲ್ಲಿ ಅನೇಕ ಜೀವಾತ್ಮಗಳಿರುತ್ತವೆ. ಎರಡನೆಯದು ಆತ್ಮ. ಇದು ಶರೀರದಲ್ಲಿ ಪೂರ್ತಿ ವ್ಯಾಪಿಸಿಕೊಂಡಿದೆ. ಇನ್ನು ಮೂರನೆಯದು ಪರಮಾತ್ಮ ಸರ್ವ ಶರೀರಗಳಲ್ಲಿರುವ ಆತ್ಮಕ್ಕಿಂತಲೂ ಬೇರೆಯಾಗಿರುವುದು, ಆದ್ದರಿಂದ ಆತ್ಮಕ್ಕಿಂತಲೂ ಪರಮವಾಗಿರುವುದೆಂದು ಪರಮಾತ್ಮ ಎನ್ನುತ್ತಿದ್ದೇವೆ. ಎರಡನೆಯ ಆತ್ಮದ ನಂತರ ಅಣುಅಣುವಿನಲ್ಲಿ ವ್ಯಾಪಿಸಿರುವುದೆಲ್ಲಾ ಪರಮಾತ್ಮನೆ ಆದ್ದರಿಂದ 2.1/4 ಆತ್ಮವೆಂದರೂ, 2.1/2 ಎಂದರೂ, 2.3/4 ಎಂದರೂ ಮೂರನೆಯದು ಎಂದರೂ ಎಲ್ಲವೂ ಪರಮಾತ್ಮನಿಗೆ ಅನ್ವಯಿಸುತ್ತವೆ. ನಿಮಗೆ ಅರ್ಥವಾಗುವಹಾಗೆ ಒಂದು ಉಪಮಾನವನ್ನು ಸಹ ಹೇಳುತ್ತಿದ್ದೇವೆ. ನಮ್ಮ ಮನೆಯಲ್ಲಿ ಮೂರು ಕೋಣೆಗಳಿವೆ ಎಂದುಕೊಳ್ಳಿ. 1ನೆಯ ಕೋಣೆ, 2ನೆಯ ಕೋಣೆ, 3ನೆಯ ಕೋಣೆ ಎಂದು ಅವುಗಳಿಗೆ ಹೆಸರುಗಳನ್ನು ಇಟ್ಟುಕೊಂಡಿದ್ದೇವೆ. ಎರಡು ಕೋಣೆಗಳನ್ನು ದಾಟಿ ಮೂರನೆಯ ಕೋಣೆಯಲ್ಲಿ ಪ್ರವೇಶಿಸಿ ಬಾಗಿಲಿಗೆ ಹತ್ತಿರವಾಗಿ ಕೋಣೆಯ ಮೊದಲನೆಯ ಭಾಗದಲ್ಲಿ ನಿಂತರು, ಕೋಣೆ ಮಧ್ಯದಲ್ಲಿ ನಿಂತರೂ, ಕೋಣೆ ಕೊನೆಯ ಭಾಗದಲ್ಲಿ ನಿಂತರು ಮೂರನೆಯ ಕೋಣೆಯಲ್ಲಿ ನಿಂತಹಾಗೆ ಆಗುತ್ತದೆ. ಕೋಣೆಯಲ್ಲಿ ಮೊದಲನೆಯ ಭಾಗದಲ್ಲಿ ನಿಂತ ವ್ಯಕ್ತಿ ಎಲ್ಲಿ ನಿಂತಿದ್ದೀಯಾ ಎಂದು ಕೇಳಿದರೆ ಮೂರನೆಯ ಕೋಣೆಯಲ್ಲೇ ಎಂದು ಹೇಳಲಾಗುತ್ತದೆ. ಹಾಗೆ ಕೋಣೆ ಮಧ್ಯದಲ್ಲಿ ನಿಂತ ವ್ಯಕ್ತಿಯನ್ನು ಎಲ್ಲಿ ನಿಂತಿದ್ದಾನೆಂದು ಕೇಳಿದರೆ ಗಣಿತದ ಪ್ರಕಾರ ಎರಡುವರೆ ಕೋಣೆಯಲ್ಲಿ ಎಂದು ಹೇಳಲಾರೆವು ಮೂರನೆಯ ಕೋಣೆಯಲ್ಲೇ ಎಂದು ಹೇಳಬಲ್ಲೆವು. ಅದೇ ವಿಧವಾಗಿ 2.1/4 ಆತ್ಮವೆಂದರೂ 2.1/2 ಆತ್ಮವೆಂದರೂ ಮೂರನೆಯ ಆತ್ಮವಾದ ಪರಮಾತ್ಮನ ಕೆಳಗೆ ಲೆಕ್ಕಿಸಲಾಗುತ್ತದೆ. ಆದ್ದರಿಂದ ಪರಮಾತ್ಮ ಎನ್ನುವ ನಾಲ್ಕು ಅಕ್ಷರಗಳ ಸಮಾಧಾನ ಸರಿಯಾದುದು.

**482. (4) ಮನುಷ್ಯರ ಮೊದಲನೆಯ ಕುಲ ಯಾವುದು?**

ಉ. ಬ್ರಾಹ್ಮಣ ಕುಲ.

**ವಿವರ :** ಪ್ರಪಂಚ ಹುಟ್ಟಿದ ನಂತರ ಸ್ವಲ್ಪ ಕಾಲದವರೆಗು ಎಲ್ಲರೂ ಬ್ರಹ್ಮಜ್ಞಾನ ತಿಳಿದವರಾಗಿ ಇದ್ದರು. ನಂತರ ಬ್ರಹ್ಮಜ್ಞಾನ ತಿಳಿಯದವರು ತಯಾರಾದಾಗ ತಿಳಿದವರನ್ನು ಬ್ರಾಹ್ಮಣರು ಎಂದು ಕರೆಯುವುದು ನಡೆದಿದೆ. ತಿಳಿಯದವರನ್ನು ಎರಡನೆಯ ಕುಲವಾಗಿ ಲೆಕ್ಕಿಸಿ, ತಿಳಿದವರನ್ನು ಮೊದಲನೆಯ ಕುಲವಾಗಿ ಲೆಕ್ಕಿಸಿದ್ದಾರೆಂದು ಆದಿಯಲ್ಲಿನರಹಸ್ಯವೆನ್ನುವ

ಶೀರ್ಷಿಕೆ ಕೆಳಗೆ ಈಗಾಗಲೇ ಮೊದಲು ಒಂದು ಸಲ ನಾವು ಹೇಳಿದ್ದೇವೆ. ಕೆಲವರು ಪ್ರಪಂಚ ಮೊದಲ ಕಾಲದಲ್ಲಿ ಕುಲವೆ ಇಲ್ಲವೆಂದು ಬರೆದಿದ್ದಾರೆ. ಮೊದಲ ಕಾಲವೆಂದು ಕೇಳದೆ ಯಾವಾಗ ತಯಾರಾಗಿದೆಯೋ ಆಗಿನ ಕುಲವನ್ನು ಕೇಳಿದ್ದೇವೆ ಆದ್ದರಿಂದ ಮೊದಲನೆಯ ಕುಲ **"ಬ್ರಾಹ್ಮಣ"** ಎಂದು ಮೂರುಅಕ್ಷರಗಳ ಉತ್ತರ ಸರಿಹೋಗುವುದು.

**483. (5) ಕಾಲವೆನ್ನುವುದು ಮೂವರ ಪುರುಷರಲ್ಲಿ ಯಾರಿಗೆ ಅನ್ವಯಿಸುತ್ತದೆ?**

ಉ. ಪರಮಾತ್ಮಗೆ.

**ವಿವರ :** ಭಗವದ್ಗೀತೆಯಲ್ಲಿ ಸಹ ವಿಶ್ವರೂಪ ಸಂದರ್ಶನ ಯೋಗವೆನ್ನುವ ಅಧ್ಯಾಯದಲ್ಲಿ ಅರ್ಜುನನಿಗೆ ವಿಶ್ವರೂಪ ಅರ್ಥವಾಗದೆ, ನೀನು ಯಾರೆಂದು ಕೇಳಿದಾಗ ನಾನು ಕಾಲವೆಂದು ಒಂದೇ ಉತ್ತರವನ್ನು ಹೇಳಲಾಗಿದೆ. ವಿಶ್ವವೆಲ್ಲಾ ವ್ಯಾಪಿಸಿದವನಿಗೇ ಕಾಲವೆನ್ನುವ ಹೆಸರು ಅನ್ವಯಿಸುತ್ತದೆ. ಆದ್ದರಿಂದ ಮೂರನೆಯ ಪುರುಷನಾದ **"ಪರಮಾತ್ಮಗೆ"** ಎಂದು ಐದಕ್ಷರಗಳ ಉತ್ತರ ಬರೆದರೆ ಸರಿಹೋಗುವುದು.

**484. (6) ಗೀತೆಯಲ್ಲಿ ಬೋಧಿಸಿದ ಸಾರಾಂಶಗಳು ಎಷ್ಟು ಯೋಗಗಳು?**

ಉ. ಎರಡು ಮತ್ತು ಒಂದು.

**ವಿವರ :** ಭಗವದ್ಗೀತೆಯಲ್ಲಿ 17 ಅಧ್ಯಾಯಗಳು ಇದ್ದರೂ ಅದರಲ್ಲಿನ ಸಾರಾಂಶವು ಎರಡೇ ಎರಡು ಭಾಗಗಳಾಗಿ ಇದೆ. ಒಂದು ಕೆಲಸಗಳನ್ನು ಮಾಡುತ್ತಾ ಕರ್ಮರಾಹಿತ್ಯವನ್ನು ಮಾಡಿಕೊಳ್ಳುವುದು, ಎರಡನೆಯದು ಕೆಲಸಗಳು ಮಾಡದೆ ಮನಸ್ಸನ್ನು ನಿಲ್ಲಿಸಿ ಕರ್ಮವನ್ನು ಇಲ್ಲದೆ ಮಾಡಿಕೊಳ್ಳುವುದು. ಅಂದರೆ ಒಂದು ಅಹಂಕಾರವನ್ನು ಅಡಗಿಸಿ ಹಾಕುವುದು, ಎರಡನೆಯದು ಮನಸ್ಸನ್ನು ಚಲಿಸದಂತೆ ಮಾಡುವುದು. ಆದ್ದರಿಂದ ಎರಡೆಂದು ಎರಡಕ್ಷರಗಳ ಉತ್ತರ ಸರಿಯಾಗುವುದು. ಈ ಎರಡು ಅಲ್ಲದೆ ಮತ್ತೊಂದು ಭಕ್ತಿಯೋಗವಿರುವುದು. ಇದಕ್ಕೆ ಧರ್ಮಗಳು ಇಲ್ಲ. ಧರ್ಮಗಳು ಇರುವ ಯೋಗಗಳು ಎರಡಾದರೆ ಧರ್ಮಗಳು ಇಲ್ಲದ ಯೋಗ ಮತ್ತೊಂದು. ಅದರೊಂದಿಗೆ ಸಹ ಲೆಕ್ಕಿಸಿದರೆ ಒಟ್ಟು ಮೂರಾಗುತ್ತವೆ.

**485. (7) ಹರಿಜನರು ಪೂರ್ವದಲ್ಲಿ ಯಾವ ವಿಧವಾಗಿ ಕರೆಯಲ್ಪಡುತ್ತಿದ್ದರು?**

ಉ. ಮಾ ದಿಗುವ(ನಮ್ಮ ಕೆಳಗಿನ)ವರೆಂದು ಕರೆಯಲ್ಪಡುತ್ತಿದ್ದರು.

**ವಿವರ :** ಪೂರ್ವ ಕಾಲದಲ್ಲಿ ಮೊದಲನೆಯ ಕುಲ ಬ್ರಾಹ್ಮಣರಾದಾಗ, ಬ್ರಹ್ಮ ಜ್ಞಾನ

ತಿಳಿಯದವರೆಲ್ಲರನ್ನು ನಮಗಿಂತಲೂ ಕಡಿಮೆಯವರು ಎನ್ನುವ ಉದ್ದೇಶದಿಂದ ಮಾದಿಗುವ (ನಮ್ಮ ಕೆಳಗಿನ)ರೆಂದು ಕರೆಯುತ್ತಿದ್ದರು.

**486. (8) ಸಾಕಾರ ಪೂಜೆಯೆಂದರೆ ಯಾರನ್ನು ಪೂಜಿಸುವುದು?**

ಉ. ಭಗವಂತನನ್ನು.

**ವಿವರ :** ನಿರಾಕಾರವೆಂದರೆ ರೂಪ ಇಲ್ಲದವನೆಂದು, ಸಾಕಾರವೆಂದರೆ ರೂಪವಿರುವವನೆಂದು ಅರ್ಥ. ನಿರಾಕಾರನಾದ ರೂಪ ಇಲ್ಲದವನೇ ರೂಪವಿರುವ ಭಗವಂತನಾಗಿ ಇರುವುದನ್ನು ಸಾಕಾರವೆನ್ನುತ್ತಾರೆ. ಆ ಭಗವಂತನನ್ನು ಪೂಜಿಸುವುದೇ ಸಾಕಾರವನ್ನು ಪೂಜಿಸಿದಂತಾಗುತ್ತದೆ. ಪ್ರತಿಮೆಗಳನ್ನು ಪೂಜಿಸುವುದು ಸಾಕಾರ ಪೂಜೆ ಅಲ್ಲ.

**487. (9) ನನ್ನ ಬುದ್ಧಿ ದೊಡ್ಡದೆನ್ನುವುದು ಅಹಂಕಾರವಾ ಅಲ್ಲವಾ?**

ಉ. ಅಲ್ಲ.

**ವಿವರ :** ತನ್ನ ಮೇಲೆ ಹೇಳಿಕೊಳ್ಳದೆ, ತನ್ನ ಅಂತಃಕರಣವಾದ ಬುದ್ಧಿ ದೊಡ್ಡದೆನ್ನುವುದು ಅಹಂಕಾರವಲ್ಲ. ತನ್ನ ಬುದ್ಧಿಯನ್ನು ಸಹ ತಾನಾಗಿ ಲೆಕ್ಕಿಸಿಕೊಂಡಾಗ ಅಹಂಕಾರವಾಗುತ್ತದೆ. ನಾನು ಬಹಳ ತಿಳುವಳಿಕೆಯುಳ್ಳವನೆಂದಾಗ ಅಹಂಕಾರವಾಗುತ್ತದೆ.

**488. (10) ಗೀತೆಯಲ್ಲಿ ಹೇಳಿದ ಜೀವಿಗಳೊಳಗಿನ ನಾಲ್ಕುವರ್ಣಗಳಾವವು?**

ಉ. ತಾಮಸರು, ರಾಜಸರು, ಸಾತ್ವಿಕರು, ಯೋಗಿಗಳು.

**ವಿವರ :** ಈ ಪ್ರಶ್ನೆಗೆ ಬಹಳ ಮಂದಿ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರ ಎಂದು ತಪ್ಪಾಗಿ ತಿಳಿದಿದ್ದಾರೆ. ಗೀತೆ 3ನೇ ಅಧ್ಯಾಯದಲ್ಲಿ 13ನೇ ಶ್ಲೋಕದಲ್ಲಿ ಭಗವಂತನು ಗುಣ ಕರ್ಮಗಳನ್ನನುಸರಿಸಿ ನಾಲ್ಕು ವರ್ಣಗಳಾಗಿ ನಾನು ತಯಾರು ಮಾಡಿದ್ದೇನೆಂದಿದ್ದಾನೆ. ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರರೆಂದು ಹೇಳಲಿಲ್ಲ. ಗುಣಗಳನ್ನನುಸರಿಸಿ ವರ್ಣಗಳೆಂದಿದ್ದಾನೆ. ಅದೇ ಭಗವದ್ಗೀತೆಯಲ್ಲಿ ಗುಣಗಳು ಕರ್ಮಗಳು ಇರುವವರು ಮೂರು ವಿಧದವರೆಂದು, ಗುಣ ಕರ್ಮಗಳು ಇಲ್ಲದ ಅವರೊಂದು ವಿಧದವರೆಂದು ತಿಳಿಸಲಾಗಿದೆ. ಗುಣಗಳಿಂದ ಕರ್ಮಗಳು ಸಂಭವಿಸುವವರು(ಅನುಭವಿಸುವವರು) ಮೂರು ವಿಧಗಳಲ್ಲಿ ಇದ್ದಾರೆ. ಅವರೇ ತಾಮಸರು, ರಾಜಸರು, ಸಾತ್ವಿಕರು ಇವರು ತ್ರಿಗುಣರು. ಗುಣಗಳಿಂದ ಕರ್ಮಗಳು ಅಂಟದವರು ಗುಣರಹಿತರು ಇವರೇ ಯೋಗಿಗಳು. **"ಗುಣಕರ್ಮವಿಭಾಗಶಃ"** ಎಂದು

ಶ್ಲೋಕದಲ್ಲಿ ಇರುವಾಗ ಗುಣ ಕರ್ಮಗಳನ್ನನುಸರಿಸಿ ಎಂದು ಏಕೆ ಯೋಚಿಸಬಾರದು. ಗುಣಕರ್ಮಗಳನ್ನನುಸರಿಸಿ ಯೋಚಿಸಿದರೇ ಗುಣ ಕರ್ಮಗಳು ಇರುವವರು ಮೂರು ವಿಧಗಳು, ಗುಣ ಕರ್ಮಗಳು ಇಲ್ಲದವರು ಒಂದು ವಿಧದವರು, ಒಟ್ಟು ನಾಲ್ಕುವರ್ಣಗಳೆಂದು ಸುಲಭವಾಗಿ ತಿಳಿಯುತ್ತದೆ.

**489. (11) ಸೂಕ್ಷ್ಮದಲ್ಲಿ ಮೋಕ್ಷವೆಂದರೆ ಏನು?**

ಉ. ಭಗವಂತನನ್ನು ಗುರುತಿಸುವುದು.

**ವಿವರ :** ಯಾವ ಸಾಧನೆಯನ್ನು ಮಾಡದೇ ಮೋಕ್ಷವನ್ನು ಹೊಂದುವ ಸುಲಭ ಪದ್ಧತಿ ಒಂದಿದೆ ಅದನ್ನೇ ಸೂಕ್ಷ್ಮದಲ್ಲಿ ಮೋಕ್ಷ ಎನ್ನುತ್ತಾರೆ. ಭಗವದ್ಗೀತೆ ಮೂರನೆ ಅಧ್ಯಾಯದಲ್ಲಿ 9ನೇ ಶ್ಲೋಕದಲ್ಲಿ ಹೇಳಿದ ಹಾಗೆ ಪರಮಾತ್ಮ ಶರೀರಧಾರಿಯಾಗಿ ಭಗವಂತನಾಗಿ ಬಂದಾಗ, ಈತನು ಪರಮಾತ್ಮನೇ ಎಂದು ಗುರುತಿಸಿದವನು ಪುನಃ ಜನ್ಮಿಸುವುದಿಲ್ಲ. ಈ ವಿಧವಾಗಿಯೇ ಪರಮಾತ್ಮ ಶ್ರೀ ಕೃಷ್ಣನಾಗಿ ಅವತರಿಸಿದಾಗ ಸಾಕಾರವನ್ನು ಗುರುತಿಸಿದ ಭೀಷ್ಮನು ಯಾವ ಸಾಧನೆ ಮಾಡದೇ ಮೋಕ್ಷವನ್ನು ಹೊಂದಿದ್ದಾನೆ.

**490. (12) ಭಗವಂತನು ಎಲ್ಲಾಕಡೆ ನೋಡುತ್ತಾನಾ?**

ಉ. ನೋಡಲಾರನು.

**ವಿವರ :** ದೇವರು ಎಲ್ಲಾಕಡೆ ನೋಡುತ್ತಿದ್ದಾನೆನ್ನುವುದು ಸರಿಯಾಗುತ್ತದೆ, ಆದರೆ ಭಗವಂತನು ಎಲ್ಲಾ ನೋಡುತ್ತಿದ್ದಾನೆನ್ನುವುದು ಸರಿಯಲ್ಲ. ಇದು ಬಹಳ ಜನಕ್ಕೆ ತಿಳಿಯದ ರಹಸ್ಯವಾಗಿ ನಿಂತುಹೋಗಿದೆ. ದೇವರೇ ಶರೀರಧಾರಿಯಾದಾಗ ಆ ಶರೀರಕ್ಕಿರುವ ಕಣ್ಣನ್ನು ಅನುಸರಿಸಿಯೇ ದೃಷ್ಠಿ ಇರುತ್ತದೆ. ಸಾಕಾರದಲ್ಲಿ ಕಣ್ಣು ನೋಡುವ ಪರಿಧಿವರೆಗೆ ನೋಡಬಲ್ಲನು, ಆದರೆ ಅಷ್ಟಕ್ಕಿಂತ ಹೆಚ್ಚಾಗಿ ನೋಡಲಾರನು. ಸಾಕಾರ ನಿರಾಕಾರ ತಾರತಮ್ಯ ತಿಳಿಯದವರೆಲ್ಲ ಸಾಕಾರವಾದ ಭಗವಂತನನ್ನು ಸಹ ನಿರಾಕಾರವಾಗಿ ಲೆಕ್ಕಿಸಿ ನೋಡುತ್ತಿದ್ದಾನೆಂದುಕೊಂಡಿದ್ದಾರೆ. ಭಗವಂತನೆಂದರೆ ಸಾಕಾರನೆಂದು ತಿಳಿದಾಗ ನೋಡಲಾರನೆಂದು ತಿಳಿಯಬಲ್ಲರು.

**491. (13) ಯಜ್ಞಗಳು ಎಷ್ಟು? ಮಾಡುವವರು ಯಾರು?**

ಉ. ಎರಡು. ಮಾಡುವವರು ಜೀವಿಗಳು.

**ವಿವರ :** ಶಾಸ್ತ್ರಬದ್ಧವಾದವು ಗೀತೆಯಲ್ಲಿ ಹೇಳಿರುವವು ಎರಡು ವಿಧಗಳ ಯಜ್ಞಗಳು ಇವೆ. ಅವು 1. ದ್ರವ್ಯ ಯಜ್ಞ, 2. ಜ್ಞಾನ ಯಜ್ಞ, ಈ ಯಜ್ಞಗಳು ಸರ್ವ ಜೀವರಾಶಿಗಳಿಗೂ ಸಂಬಂಧಿಸಿರುವವು. ದ್ರವ್ಯಯಜ್ಞವನ್ನು ಪ್ರತಿ ಜೀವರಾಶಿ ಮಾಡುತ್ತಿದೆ. ಜ್ಞಾನಯಜ್ಞವನ್ನು ಎಲ್ಲರು ಮಾಡದಿದ್ದರೂ ಎಲ್ಲೋ ಸ್ವಲ್ಪ ಜನರು ಮಾತ್ರವೆ ಮಾಡುತ್ತಿದ್ದಾರೆ. ಆದ್ದರಿಂದ ಮಾಡುವವರು ಜೀವಿಗಳೆನ್ನುವುದು ಸರಿಯಾಗಿರುವುದು. ಯಜ್ಞಗಳೆಂದ ಕೂಡಲೇ ಅಶಾಸ್ತ್ರೀಯವಾದ, ಕಲ್ಪಿತವಾದ, ಗುಂಡಿ ತೆಗೆದು ಕಟ್ಟಿಗೆಗಳನ್ನು ಹಾಕಿ ಸುಡುವ ಯಜ್ಞಗಳೆಂದುಕೊಂಡು ಮಾಡುವವರು ಬ್ರಾಹ್ಮಣರೆಂದು ಬರೆದಿದ್ದಾರೆ. ಇದು ಯೋಗ ಶಾಸ್ತ್ರವಾದ ಉತ್ತರವಲ್ಲ.

**492. (14) ಗುಣಗಳಿರುವ ಮತ್ತು ಗುಣಗಳಿಲ್ಲದಿರುವ ಯೋಗಗಳು ಯಾವವು?**

ಉ. ರಾಜಯೋಗ, ಬ್ರಹ್ಮಯೋಗ.

**ವಿವರ :** ಗೀತೆಯಲ್ಲಿ ಹೇಳಲಾದ ಸಾರಾಂಶ ಎರಡು ಯೋಗಗಳೆಂದು ಮೊದಲೆ ತಿಳಿದುಕೊಂಡಿದ್ದೇವೆ. ಅವುಗಳಲ್ಲಿ ಅಹಂಕಾರವಿಲ್ಲದೆ ಗುಣಗಳೊಂದಿಗೆ ಕೆಲಸ ಮಾಡುತ್ತಾ ಸಾಗಿಸುವ ಪದ್ಧತಿಯನ್ನು ರಾಜಯೋಗ (ಕರ್ಮಯೋಗ) ಎಂದು ಕರೆಯುತ್ತೇವೆ. ಗುಣಗಳು ಎಷ್ಟು ಮಾತ್ರವೂ ಇಲ್ಲದೆ, ಪಂಚ ಜ್ಞಾನೇಂದ್ರಿಯ ನೆನಪುಗಳು ಮನಸ್ಸಿಗೆ ಎಷ್ಟು ಮಾತ್ರವೂ ಹೋಗದೆ, ಮನಸ್ಸನ್ನು ಪ್ರಪಂಚ ವಿಷಯಗಳಲ್ಲಿ ಪೂರ್ತಿ ಅಡಗಿಸಿಡುವುದನ್ನು ಬ್ರಹ್ಮಯೋಗ (ಜ್ಞಾನ ಯೋಗ) ಎನ್ನುತ್ತೇವೆ.

**493. (15) ಆತ್ಮಕ್ಕೆ ಅವಧಿ ಇದೆಯಾ?**

ಉ. ಇದೆ.

**ವಿವರ :** ಸರ್ವ ಜೀವ ಶರೀರಗಳಲ್ಲಿ ಮಾತ್ರ ಇರುವುದು ಆತ್ಮ. ಆತ್ಮ ಜೀವ ಶರೀರಗಳ ಹೊರಗೆ ಇಲ್ಲ. ಆದ್ದರಿಂದ ಆತ್ಮಕ್ಕೆ ಅವಧಿ ಇದೆಯೆಂದು ಹೇಳಬಹುದು. ಪರಮಾತ್ಮ ಅಣುವಣುವಿನಲ್ಲಿ ವ್ಯಾಪಿಸಿದವನಾದ್ದರಿಂದ ಪರಮಾತ್ಮಕ್ಕೆ ಅವಧಿ ಇಲ್ಲ. ಶರೀರದಲ್ಲಿ ಒಂದು ಕಡೆ ಇರುವ ಜೀವಾತ್ಮನಿಗೆ, ಶರೀರವೆಲ್ಲಾ ವ್ಯಾಪಿಸಿದ ಆತ್ಮಕ್ಕೆ ಅವಧಿ ಇದೆ.

**494. (16) ಮರಣಿಸಿದ ಜೀವಾತ್ಮನೊಂದಿಗೆ ಹೊಸ ಶರೀರಕ್ಕೆ ಹೋಗುವವು ಯಾವವು?**

ಉ. ಗುಣ, ಕರ್ಮಗಳು, ಆತ್ಮ.

**ವಿವರ :** ಗೀತೆ 14ನೇ ಅಧ್ಯಾಯದಲ್ಲಿ 8ನೇ ಶ್ಲೋಕದಲ್ಲಿ ಹೇಳಿದಹಾಗೆ ಗುಣಗಳು, ಕರ್ಮ ಮತ್ತು ಜೀವಾತ್ಮನೊಂದಿಗೆ ಆತ್ಮ ಸಹ ಹೊಸ ಶರೀರವನ್ನು ಸೇರುತ್ತಿವೆ. ಮರಣಿಸಿದಾಗ ಪ್ರತಿ ಜೀವರಾಶಿ ಶರೀರದಲ್ಲಿನ ತಲೆಯಲ್ಲಿ ಇರುವ ನಾಲ್ಕುಚಕ್ರಗಳು ಸೂಕ್ಷ್ಮವಾಗಿ ಮತ್ತೊಂದು ಶರೀರ ಸೇರುತ್ತವೆ. ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳೆಂದು ಬರೆದರು ಉತ್ತರ ಸರಿಯಾಗುತ್ತದೆ.

**495. (17) ಶಾಸ್ತ್ರವೆಂದರೆ ಏನು? ಅವು ಎಷ್ಟು?**

ಉ. ಶಾಸನಗಳೊಂದಿಗೆ ಕೂಡಿಕೊಂಡಿರುವುದು ಶಾಸ್ತ್ರ. ಶಾಸ್ತ್ರಗಳು ಆರು.

**ವಿವರ :** ಹೇಳಿರುವ ಮಾತು ನಿರೂಪಿಸಲ್ಪಡುವ ಸಾಮರ್ಥ್ಯ ಇರುವ ಶಾಸನಗಳೊಂದಿಗೆ ಕೂಡಿಕೊಂಡಿರುವುದೇ ಶಾಸ್ತ್ರ. ಆ ವಿಧವಾದ ಶಾಸ್ತ್ರಗಳು ಆರು ಇವೆ. 1. ಗಣಿತ ಶಾಸ್ತ್ರ, 2. ಖಗೋಳ ಶಾಸ್ತ್ರ, 3. ಜ್ಯೋತಿಷ್ಯ ಶಾಸ್ತ್ರ, 4. ರಸಾಯನ ಶಾಸ್ತ್ರ, 5. ಭೌತಿಕ ಶಾಸ್ತ್ರ, 6. ಯೋಗ ಶಾಸ್ತ್ರ.

**496. (18) ರುದ್ರಾಕ್ಷವನ್ನು ಪೂರ್ವದಲ್ಲಿ ಧರಿಸುತ್ತಿದ್ದವರು ಜ್ಞಾನಿಗಳಾ? ಅಜ್ಞಾನಿಗಳಾ?**

ಉ. ಅಜ್ಞಾನಿಗಳು.

**ವಿವರ :** ಪೂರ್ವದಲ್ಲಿ ಗ್ರಹ ಬಾಧೆಗಳು, ಅವುಗಳ ಭಯಗಳಿರುವವರು ಮಾತ್ರ ರುದ್ರಾಕ್ಷಗಳನ್ನು ಧರಿಸುತ್ತಿದ್ದರು. ಜ್ಞಾನಿಗಳು ಗ್ರಹಗಳಿಗೆ ಭಯಪಡುವುದಿಲ್ಲ, ಆದ್ದರಿಂದ ಅವರು ಧರಿಸುತ್ತಿರಲಿಲ್ಲ.

**497. (19) ಧರ್ಮಕ್ಕೂ, ದಾನಕ್ಕೂ ವ್ಯತ್ಯಾಸವೇನಿದೆ?**

ಉ. ತಿಳಿಸುವುದು ಧರ್ಮ, ಕೊಡುವುದು ದಾನ.

**ವಿವರ :** ದಾನ ಒಬ್ಬರಿಂದ ಕೊಡಲ್ಪಡುವುದು. ಧರ್ಮ ಒಬ್ಬರಿಂದ ಹೇಳಲ್ಪಡುವುದು. ಮಾಡಿದ ದಾನ ಸ್ವಲ್ಪ ಕಾಲಕ್ಕೆ ಇಲ್ಲದಂತಾಗುವುದು. ಹೇಳಿರುವ ಧರ್ಮ ಶಾಶ್ವತವಾಗಿ ಮನಸ್ಸಿನಲ್ಲಿ ನಿಂತು ಹೋಗುವುದು. ದಾನದಿಂದ ಪುಣ್ಯ, ಧರ್ಮದಿಂದ ಮೋಕ್ಷ ಲಭಿಸುತ್ತದೆ. ಹೀಗೆ ಎಷ್ಟೋ ವಿಧಗಳಾಗಿ ದಾನ ಧರ್ಮಗಳಿಗೆ ವ್ಯತ್ಯಾಸಗಳಿವೆ.

**498. (20) ಭಗವದ್ಗೀತೆಯಲ್ಲಿ ವಿಶ್ವರೂಪಕ್ಕಿರುವ ಕೈಗಳೆಷ್ಟು?**

ಉ. ಅನೇಕ.

**ವಿವರ :** ವಿಶ್ವವೆಲ್ಲಾ ವ್ಯಾಪಿಸಿರುವುದು ವಿಶ್ವರೂಪ ಆದ್ದರಿಂದ ವಿಶ್ವದಲ್ಲಿರುವ ಎಲ್ಲರ ಕೈಗಳು ವಿಶ್ವರೂಪಕ್ಕಿದ್ದಹಾಗೆ. ವಿಶ್ವದಲ್ಲಿರುವ ಕೈಗಳನ್ನು ಲೆಕ್ಕಿಸಲಾಗದ ಕೆಲಸ ಆದ್ದರಿಂದ **"ಅನನ್ತ ಬಾಹು"** ಎಂದು 10ನೇ ಅಧ್ಯಾಯದಲ್ಲಿ 19ನೇ ಶ್ಲೋಕದಲ್ಲಿ ತಿಳಿಸಲಾಗಿದೆ. ಕೆಲವರು ಸಾವಿರ ಕೈಗಳೆಂದಿದ್ದಾರೆ. ಸಾವಿರ ಕೈಗಳಾದರೆ 500 ಮಂದಿ ಮನುಷ್ಯರ ಲೆಕ್ಕಕ್ಕೆ ಬರುತ್ತದೆ ಆದರೆ ಅದು ವಿಶ್ವರೂಪ ಅಲ್ಲ. ಆದ್ದರಿಂದ 1000 ಕೈಗಳೆನ್ನುವುದು ತಪ್ಪು.

**499. (21) ನಾಲ್ಕು ಯುಗಗಳ ಕಾಲ ಎಷ್ಟು ವರ್ಷಗಳು (ಸಂವತ್ಸರಗಳು)?**

ಉ. 43,20,000

| | | |
|---|---|---|
| **ವಿವರ :** | **ಕಲಿಯುಗ** | **4,32,000** |
| | **ದ್ವಾಪರಯುಗ** | **8,64,000** |
| | **ತ್ರೇತಾ ಯುಗ** | **12,96,000** |
| | **ಕೃತ ಯುಗ** | **17,28,000** |
| | **ನಾಲ್ಕು ಯುಗಗಳ ಒಟ್ಟು ಕಾಲ** | **43,20,000.** |

**500. (22) ಭಗವದ್ಗೀತೆಯಲ್ಲಿ ಕೃಷ್ಣನು ವೇದಗಳು ಎಲ್ಲಿವೆಯೆಂದಿದ್ದಾನೆ?**

ಉ. ತಲೆಯಲ್ಲಿ.

**ವಿವರ : "ತ್ರೈ ಗುಣ್ಯ ವಿಷಯಾ ವೇದಾ"** ಎನ್ನುವ ಗೀತೆ ಸಾಂಖ್ಯಯೋಗವೆನ್ನುವ ಅಧ್ಯಾಯದಲ್ಲಿ 45ನೇ ಶ್ಲೋಕದಲ್ಲಿ ಇರುವ ವಾಕ್ಯದ ಪ್ರಕಾರ ವೇದಗಳೆಂದರೆ ಮೂರು ಗುಣಗಳ ವಿಷಯಗಳೇ. ಅ ಮೂರು ಗುಣಗಳು ನಮ್ಮ ತಲೆಯಲ್ಲೇ ಇವೆ. ಮೇಲಿನ ಭಾಗದಲ್ಲಿರುವ ಇವುಗಳನ್ನು ತಿಳಿದುಕೊಂಡರೆ ವೇದಗಳನ್ನು ತಿಳಿದುಕೊಂಡಹಾಗೇ ಎಂದು ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ ಹೇಳಲಾಗಿದೆ. ವೇದಗಳಿಗೆ ಮತ್ತೊಂದು ಹೆಸರು ಗುಣಗಳು. ಆ ಗುಣಗಳು ತಲೆಯಲ್ಲಿವೆ. ಆದ್ದರಿಂದ ವೇದಗಳು ತಲೆಯಲ್ಲಿರುವವೆನ್ನುವ ಉತ್ತರ ಸರಿಹೋಗುವುದು.

**501. (23) ದೇವಾಲಯದ ಧ್ವಜಸ್ಥಂಬದ ಮೇಲಿರುವ ಗಂಟೆಗಳು ಯಾವುದಕ್ಕೆ ಗುರುತು?**

ಉ. ಗುಣಗಳಿಗೆ.

**ವಿವರ :** ಧ್ವಜಸ್ಥಂಬದ ಮೇಲಿರುವ ಗಂಟೆಗಳು ಗುಣಗಳಿಗೆ ಗುರುತಾಗಿ ಇಟ್ಟಿದ್ದಾರೆ. ಗುಣಗಳು ಮೂರು ವಿಧಗಳಾದ್ದರಿಂದ ಮೂರು ವರಸೆ ಕ್ರಮದಲ್ಲಿ ಗಂಟೆಗಳನ್ನಿಟ್ಟಿದ್ದಾರೆ. ಒಂದೊಂದು ವಿಧದಲ್ಲಿ ಆರು ಗುಣಗಳಿವೆ. ಆದ್ದರಿಂದ ಒಂದೊಂದು ಸಾಲಿನಲ್ಲಿ ಆರು ಗಂಟೆಗಳ ಪ್ರಕಾರ ಒಟ್ಟು 18 ಗಂಟೆಗಳು ಮೂರು ಸಾಲಿನಲ್ಲಿ ಗುಣಗಳ ವಿವರ ತಿಳಿಸುವಹಾಗೆ ಇಟ್ಟಿದ್ದಾರೆ.

**502. (24) ಏಕಾಗ್ರತೆ ಎಂದರೇನು?**

ಉ. ಮನಸ್ಸಿಗೆ ಯಾವ ಧ್ಯಾಸ ಇಲ್ಲದೆ ಹೋಗುವುದು.

**ವಿವರ :** ಒಂದರ ಮೇಲೆ ಮನಸ್ಸನ್ನು ಲಗ್ನ ಮಾಡುವುದೆಂದು ಬಹಳ ಜನ ಬರೆದಿದ್ದಾರೆ. ಒಂದರ ಮೇಲೆ ಲಗ್ನ ಮಾಡುವುದು ಏಕವಾಗುತ್ತದೆ ಆದರೆ ಏಕಾಗ್ರತೆ ಅಲ್ಲ ತಾನೆ! ಏಕವೆಂದರೆ ಒಂದೆಂದು, ಏಕಾಗ್ರತೆ ಎಂದರೆ ಒಂದು ನಂತರ ಇರುವ ಸೊನ್ನೆ ಎಂದು ಅರ್ಥ. ಯಾವೊಂದು ಧ್ಯಾಸ ಇಲ್ಲದೆ ಮನಸ್ಸು ಖಾಲೀ ಮಾಡುವುದನ್ನೇ ಏಕಾಗ್ರತೆ ಎನ್ನುತ್ತೇವೆ. ಹಾಗಲ್ಲದೆ ಒಂದು ಮಂತ್ರ ಜಪದಲ್ಲಿ ಲಗ್ನವಾದವನು ಅನೇಕ ವಿಷಯಗಳಿಂದ ಮನಸ್ಸನ್ನು ಒಂದಾದ ಮಂತ್ರದ ಕಡೆಗೆ ಮರಳಿಸಿಕೊಂಡು, ಅನೇಕದಿಂದ ಏಕಕ್ಕೆ ಬಂದಿದ್ದಾನೆ ಆದರೆ ಏಕಾಗ್ರತೆಗೆ ಬಂದಿಲ್ಲ. ಶಬ್ದರೂಪವಾದ ಕಿವಿಗಳಿಂದ ಕೇಳಿದ ಅ ಮಂತ್ರ ಧ್ಯಾಸವು ಸಹ ಇಲ್ಲದೆ ಹೋದಾಗಲೇ ಏಕಾಗ್ರತೆ ಆಗುತ್ತದೆ.

**503. (25) ತಾಯಿ ಗರ್ಭದಿಂದ ಸಜೀವವಾಗಿ ಬರುವ ಶಿಶುವನ್ನು ಏನನ್ನುತ್ತಾರೆ?**

ಉ. ಭಗವಂತನು.

**ವಿವರ :** ತಾಯಿಗರ್ಭ ದಿಂದ ಸಜೀವವಾಗಿ ಬರುವವನು ಪರಮಾತ್ಮನೇ, ಆದ್ದರಿಂದ ಸಜೀವವಾಗಿ ಬಂದಿರುವ ಶರೀರವನ್ನು ಭಗವಂತನು ಎನ್ನುತ್ತಾರೆ. ಭಗದಿಂದ ಹುಟ್ಟಿದವನಾದ್ದರಿಂದ ಭಗವಂತನೆಂದು ಕರೆಯಬಹುದು. ಉಳಿದ ಜೀವರಾಶಿಗಳು ಹಾಗೆ ಭಗದಿಂದ ಹುಟ್ಟಲಿಲ್ಲ. ಭಗದಿಂದ ಹುಟ್ಟಿರುವ ಶರೀರವನ್ನು ಸೇರುವವು ಜೀವಿಗಳು. ಹಾಗೆ ಮತ್ತೊಂದು ಕಡೆಯಿಂದ ಬಾರದೆ, ಅಣುಅಣುವಿನಲ್ಲಿರುವ ಪರಮಾತ್ಮ ತಾಯಿ

ಗರ್ಭದಲ್ಲಿಯೂ, ಆ ಗರ್ಭ ಶಿಶುವಿನೊಳಗೂ ಇದ್ದಾನೆ. ಆದ್ದರಿಂದ ಆತನೊಬ್ಬನೇ ಒಳಗಿನಿಂದ ಸಜೀವವಾಗಿ ಹೊರಬರುವವನು. ಆದ್ದರಿಂದ ಅ ಶಿಶುವನ್ನು ಭಗವಂತ ನೆನ್ನುವುದು ಉತ್ತರ.

**504.** **(26) ವಿಶ್ವವ್ಯಾಪಿ ಆತ್ಮನಾ? ಅಲ್ಲವಾ? ಇಲ್ಲವಾದರೆ ಇನ್ಯಾರು?**

ಉ. ಆತ್ಮ ಅಲ್ಲ. ಪರಮಾತ್ಮ.

**ವಿವರ :** ಆತ್ಮ ಶರೀರಗಳಲ್ಲಿ ಮಾತ್ರ ಇದೆ. ಪರಮಾತ್ಮ ಶರೀರಗಳ ಒಳಗೂ ಹೊರಗೂ ಎಲ್ಲಾಕಡೆ ಅಣುಅಣುವಿನಲ್ಲಿ ವ್ಯಾಪಿಸಿಕೊಂಡಿದೆ. ಆದ್ದರಿಂದ ವಿಶ್ವವೆಲ್ಲಾ ವ್ಯಾಪಿಸಿ ವಿಶ್ವವ್ಯಾಪಿ ಎನ್ನುವ ಹೆಸರನ್ನು ಹೊಂದಿರುವುದು ಪರಮಾತ್ಮನೇ ಎಂದು ಹೇಳಲಾಗುತ್ತದೆ.

**505.** **(27) ಮನುಷ್ಯನು ಭಯಪಡಬೇಕಾಗಿರುವುದು ಕರ್ಮಕ್ಕಾ? ಕಾಲಕ್ಕಾ?**

ಉ. ಕರ್ಮಕ್ಕೆ.

**ವಿವರ :** ಕರ್ಮ ಗುಣಗಳನ್ನು ಪ್ರೇರೇಪಿಸಿ, ಅವುಗಳಿಂದ ಕೆಲಸಗಳು ಮಾಡಿಸಿ, ಕಷ್ಟ ಸುಖಗಳನ್ನು ಜೀವಿಗಳು ಅನುಭವಿಸುವಹಾಗೆ ಮಾಡುತ್ತಿದೆ. ಕಾಲ ಎಲ್ಲರಲ್ಲಿಯೂ ಸಮಾನವಾಗಿ ನಡೆದು ಹೋಗುತ್ತಿದೆ. ಆದರೆ ಕರ್ಮ ಎಲ್ಲರಲ್ಲೂ ಸಮಾನವಾಗಿಲ್ಲದೆ ವಿಧವಿಧಗಳಾಗಿ ಇದ್ದು ವಿಧವಿಧಗಳಾಗಿ ಬಾಧಿಸುತ್ತಿದೆ. ಆದ್ದರಿಂದ ಭಯಪಡಬೇಕಾದ್ದು ಕರ್ಮಕ್ಕೇ ಆಗಲಿ ಕಾಲಕ್ಕೆ ಅಲ್ಲ.

**506.** **(28) ದೇವಾಲಯಗಳಲ್ಲಿನ ಶಿವಲಿಂಗ ಯಾರ ಗುರ್ತು?**

ಉ. ಪರಮಾತ್ಮ ಗುರ್ತು.

**ವಿವರ :** ರೂಪ ನಾಮಗಳು ಇಲ್ಲದವನಾದ ಪರಮಾತ್ಮನನ್ನು ತಿಳಿಸುವ ಸೂಚನೆಯಾಗಿಯೇ ಮೂಗು ಮುಖವಿಲ್ಲದ ಕಲ್ಲನ್ನು ಇಟ್ಟಿದ್ದಾರೆ. ಹೆಸರು ಇಲ್ಲ ಆದ್ದರಿಂದ ಯಾವ ಹೆಸರು ಅಲ್ಲದ ಈಶ್ವರನೆಂದಿದ್ದಾರೆ. ಈಶ್ವರನೆಂದರೆ ಅಧಿಪತಿ ಎಂದು ಅರ್ಥ. ಪರಮಾತ್ಮ ಗುರುತಾಗಿ ಇಟ್ಟಿರುವ ಲಿಂಗವನ್ನು ಈದಿನ ಅಜ್ಞಾನ ವಶದಲ್ಲಿ ಶಂಕರನಾಗಿ ಹೋಲಿಸಿಕೊಳ್ಳುವುದು ನಡೆಯುತ್ತಿದೆ. ನಿಜವಾಗಿ ದೇವಾಲಯಗಳಲ್ಲಿರುವ ಲಿಂಗ ಪರಮಾತ್ಮನ ಗುರುತೆ ಆಗಲಿ ಶಂಕರನು ಅಲ್ಲ.

**507. (29) ಭಗವದ್ಗೀತೆಯನ್ನು ಅರ್ಥ ಮಾಡಿಕೊಳ್ಳಲು ಮುಖ್ಯವಾಗಿ ತಿಳಿಯಬೇಕಾದ ಸೂತ್ರಗಳು ಎಷ್ಟು?**

ಉ. ನಾಲ್ಕು.

**ವಿವರ :** ಮುಖ್ಯವಾಗಿ ನಾಲ್ಕು ಸೂತ್ರಗಳ ಪ್ರಕಾರ ಭಗವದ್ಗೀತೆಯನ್ನು ಓದಿದರೆ ಅದರಲ್ಲಿನ ಸಾರಾಂಶ ಅರ್ಥವಾಗುವುದು. ಆದರೆ ನಾಲ್ಕು ಸೂತ್ರಗಳನ್ನು ತಿಳಿಯದೆ ಓದಿದರೆ ಎಂದಿಗೂ ಗೀತೆಯಲ್ಲಿನ ಭಾವ ಅರ್ಥವಾಗದು. ಆ ನಾಲ್ಕು ಸೂತ್ರಗಳು **1. ಓದುತ್ತಿರುವ ಶ್ಲೋಕ ಶಾಸ್ತ್ರಬದ್ದವಾಗಿರುವುದಾ ಅಲ್ಲವಾ? 2. ಓದುತ್ತಿರುವ ಶ್ಲೋಕವನ್ನು ಹೇಳಿರುವುದು ಜೀವಾತ್ಮನಿಗಾ, ಆತ್ಮನಿಗಾ, ಪರಮಾತ್ಮನಿಗಾ? 3. ಓದುತ್ತಿರುವ ಶ್ಲೋಕವು ರಾಜಯೋಗ ಸಂಬಂಧವಾ ಅಥವಾ ಬ್ರಹ್ಮಯೋಗ ಸಂಬಂಧವಾ? 4. ಓದುತ್ತಿರುವ ಶ್ಲೋಕವು ಸಾಕಾರಕ್ಕೆ ಹೇಳಿರುವುದಾ ನಿರಾಕಾರಕ್ಕೆ ಹೇಳಿರುವುದಾ?** ಈ ನಾಲ್ಕು ಸೂತ್ರಗಳು ತಿಳಿಯದೇ ಹೇಳುವವರಿಗಾಗಲಿ, ಕೇಳುವವರಿಗಾಗಲಿ, ಭಗವದ್ಗೀತೆ ಸಂಶಯಗಳಿಂದ ಕೂಡಿಕೊಂಡೇ ಇರುತ್ತದೆ.

**508. (30) ಚಿದಂಬರ ರಹಸ್ಯವೆಂದು ನೀವು ದೇವಾಲಯ ರಹಸ್ಯಗಳು ಎನ್ನುವ ಪುಸ್ತಕದಲ್ಲಿ ಬರೆದಿದ್ದೀರಾ. ಒಬ್ಬ ವ್ಯಕ್ತಿ ಚಿತ್ ಅಂಬರ ಎನ್ನಬೇಕು ಚಿದಂಬರ ಎನ್ನಬಾರದೆಂದು ಹೇಳುತ್ತಿದ್ದಾನೆ. ಚಿದ ಅಂಬರಕ್ಕೂ ಚಿತ್ ಅಂಬರಕ್ಕೂ ವ್ಯತ್ಯಾಸ ವಿದೆಯಾ?**

ಉ. ಇದೆ.

**ವಿವರ :** ಚಿದಂಬರ ಎಂದರೆ ನಮ್ಮ ಪುಸ್ತಕದಲ್ಲಿ ಪೂರ್ತಿ ವಿವರವನ್ನು ಹೇಳಿದ್ದೇವೆ. ಈ ಪದದಲ್ಲಿ ಚಿದ ಎಂದು ನಾವು ಹೇಳಿದರೆ, ಚಿತ್ ಎಂದು ಮತ್ತೊಬ್ಬ ವ್ಯಕ್ತಿ ಹೇಳಿದ್ದಾನೆಂದಿದ್ದೀರಾ. ಸತ್ ಚಿತ್ ಎನ್ನುವವು ಎರಡು ಇವೆ. ಆ ಸತ್, ಚಿತ್, ಆನಂದ ಎನ್ನುವವುಗಳನ್ನು ಸೇರಿಸಿ ಸಚ್ಚಿದಾನಂದ ಎನ್ನುವುದು ಸಹ ನಡೆದಿದೆ. ಸತ್ ಎಂದರೆ ಸಾರಾಂಶವನ್ನು ಹೊಂದಿರುವ ಆತ್ಮ ಎಂದು, ಚಿತ್ ಎಂದರೆ! ಸಾರಾಂಶವಿಲ್ಲದ ದೇಹವೆಂದು ತಿಳಿಯುತ್ತಿದೆ. ಆತ್ಮನನ್ನು ಸತ್ತು ಎಂದೂ ಶರೀರವನ್ನು ಚಿತ್ತು ಎಂದು ಕರೆಯುವುದು ಸಹ ನಡೆಯುತ್ತಿದೆ. ಸತ್ತಾದ ಆತ್ಮನನ್ನು ಚಿತ್ತಾದ ಶರೀರದಲ್ಲಿ ಅನುಭವಿಸುವುದನ್ನು ಸಚ್ಚಿದಾನಂದವೆನ್ನುತ್ತಿದ್ದಾರೆ. ಆತ್ಮಾನುಭೂತಿಯನ್ನು ಆನಂದವೆಂದು ವರ್ಣಿಸುತ್ತಾ, ಶರೀರದಲ್ಲಿ ಆತ್ಮಾನುಭೂತಿಯನ್ನು ಹೊಂದುವವನನ್ನು ಸಚ್ಚಿದಾನಂದ ಎಂದು ಪೂರ್ವದಲ್ಲಿ ಹಿರಿಯರು

ಕರೆಯುತ್ತಿದ್ದರು. ಸಚ್ಚಿದಾನಂದ ಎನ್ನುವ ಪದ ಹೆಸರಲ್ಲ. ಮನುಷ್ಯ ಆತ್ಮನನ್ನು ಹೊಂದಿದ ಅರ್ಥವನ್ನು ತಿಳಿಸುವ ಪದ ಎಂದು ಅಥವಾ ಮನುಷ್ಯ ಬ್ರಹ್ಮಯೋಗವನ್ನು ಸಾಧಿಸಿದ ಅರ್ಥವನ್ನು ತಿಳಿಸುವ ಪದ ಸಚ್ಚಿದಾನಂದ ಎನ್ನುವದು. ಈ ಕಾಲದಲ್ಲಿ ಸಚ್ಚಿದಾನಂದ ಎಂದು ಕೆಲವರು ಹೆಸರು ಸಹ ಇಟ್ಟುಕೊಂಡಿದ್ದಾರೆ. ಸಚ್ಚಿದಾನಂದ ಎನ್ನುವ ಪದವನ್ನು ಹೆಸರಾಗಿ ಬಳಸಬಾರದು. ಆ ಪದ ಮನುಷ್ಯ ಒಂದರ ಔನತ್ಯವನ್ನು ತಿಳಿಸುವ ಗುರುತು. ಅದು ಮನುಷ್ಯನಿಗೆ ಶಾಶ್ವತ ಹೆಸರಾಗಿ ಇರಬಾರದು. ಚಿತ್ ಗೂ ಚಿದ ಕ್ಕೂ ಸ್ವಲ್ಪ ವ್ಯತ್ಯಾಸ ಏದೆ. ಚಿದ ಎಂದರೆ ಬಟ್ಟೆ ಎಂದು ಚಿತ್ ಎಂದರೆ ಸಾರವಿಲ್ಲದೆಂದು ಅರ್ಥ. ಬಟ್ಟ + ಬಯಲು = ಬಟ್ಟ ಬಯಲು ಎನ್ನುವ ಪದವನ್ನು, ಚಿದ + ಅಂಬರ = ಚಿದಂಬರ ಎಂದು ಒಂದು ದೇವಾಲಯದಲ್ಲಿ ಬಟ್ಟೆಯನ್ನು ತೆರೆಯಾಗಿ ಬಳಿಸಿದ ಸಂದರ್ಭದಲ್ಲಿ ಬಳಸಿದ್ದಾರೆ. ಸಂದರ್ಭವನ್ನನುಸರಿಸಿ ಅಲ್ಲಿರುವ ಪರಿಸ್ಥಿತಿಗಳನ್ನನುಸರಿಸಿ ಚಿದಂಬರ ಎನ್ನುವುದು ಸರಿಯಾಗುವುದು. ಚಿತ್ ಅಂಬರ ಎನ್ನುವುದು ಆ ತೆರೆಗೆ ಸರಿಹೋಗುವುದಿಲ್ಲ.

## ಜ್ಞಾನ ಪರೀಕ್ಷೆ

**ತಾಡಿಪತ್ರಿ** **ದಿನಾಂಕ – 28–01–1991**

**509. (1) ಮುಟ್ಟಿದರೆಮುನಿ ಲೊಳೆಸರ ಕಥೆಯಲ್ಲಿ ಲೊಳೆಸರವನ್ನು ಯಾವುದರ ಗುರುತಾಗಿ ಹೋಲಿಸಿದ್ದಾರೆ.**

ಉ. ಅಹಂಕಾರವಾಗಿ.

**ವಿವರ :** ಮುಟ್ಟಿದರೆಮುನಿಗಿಡವನ್ನು ತಾಕಿದರೆ ಎಲೆಗಳೆಲ್ಲವೂ ಮುದುರಿಕೊಳ್ಳುತ್ತವೆಂದು ಎಲ್ಲರಿಗೂ ತಿಳಿದಿರುವುದೇ. ಅದಕ್ಕೆ ಪೂರ್ತಿ ವಿರುದ್ಧವಾಗಿರುವುದು ಲೊಳೆಸರ. ಇದನ್ನು ಮುಟ್ಟಿದರೂ ಮುದಿರಿಕೊಳ್ಳದು, ಬಗ್ಗದು, ಉಳಿದ ಗಿಡಗಳ ಸಸಿಗಳ ಎಲೆಗಳ ಹಾಗೆ ಅಲ್ಲದೆ ಪೂರ್ತಿ ನೇರವಾಗಿ ಇರುತ್ತದೆ. ಎಲೆಗಳಲ್ಲಿ ಮುಟ್ಟಿದರೆಮುನಿಗೂ, ಲೊಳೆಸರಕ್ಕೂ ಇರುವಷ್ಟು ವ್ಯತ್ಯಾಸ ಮನುಷ್ಯರಲ್ಲಿ ಅಹಂಕಾರ ಇಲ್ಲದವರಿಗೂ, ಅಹಂಕಾರ ಇರುವವರಿಗೂ ಇರುತ್ತದೆ. ಅಹಂಕಾರ ಇಲ್ಲದವರು ಇನ್ನೊಬ್ಬರ ಹತ್ತಿರ ಮುಟ್ಟಿದರೆಮುನಿಯಹಾಗೆ ತನ್ನನ್ನು ತಾನು ತಗ್ಗಿಸಿಕೊಳ್ಳುವರು. ಅಹಂಕಾರ ಇರುವವರು ಲೊಳೆಸರದ ಹಾಗೆ ಸ್ವಲ್ಪವೂ ಸಹ

ತಗ್ಗುವುದಿಲ್ಲ. ಆದ್ದರಿಂದ ಕಥೆಯಲ್ಲಿ ಅಹಂಕಾರವನ್ನು ಲೊಳೆಸರಕ್ಕೆ ಸಮಾನವಾಗಿ ಹೋಲಿಸಲಾಗಿದೆ.

**510. (2) ಕಾಲುಗಳು ಪ್ರಕೃತಿಭಾಗಗಳಲ್ಲಿ ಯಾವುದರಿಂದ ತಯಾರಾಗಿವೆ?**

ಉ. ಭೂಮಿ 5ನೇ ಭಾಗ + ಅಗ್ನಿ 5ನೇ ಭಾಗ.

**ವಿವರ :** ನಮ್ಮ ಶರೀರಗಳು ಪ್ರಕೃತಿಯೊಳಗಿನ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ 5 ಭಾಗಗಳಿಂದ ಸೇರಿ ತಯಾರಾಗಿದೆ. ಪಂಚ ಭೂತಗಳು ಒಂದೊಂದು 5 ಭಾಗಗಳಾಗಿ ವಿಭಜನೆಯಾಗಿ 5X5=25 ಒಟ್ಟು ಭಾಗಗಳಾಗಿ ತಯಾರಾಗಿವೆ. ಅದರಲ್ಲಿ ಒಂದರಲ್ಲೊಂದು ಸೇರಿ ನಮ್ಮ ಶರೀರ ಭಾಗಗಳು ತಯಾರಾಗಿವೆ. ಅವುಗಳಲ್ಲಿ ಭೂಮಿ 5ನೇ ಭಾಗ ಅಗ್ನಿ 5ನೇ ಭಾಗ, ಸೇರಿ ಕಾಲುಗಳು ತಯಾರಾಗಿವೆ. ಆದ್ದರಿಂದ ಅವು ಯಾವಾಗಲೂ ಭೂಮಿಯನ್ನು ತಾಕಿಕೊಂಡು ಇರುತ್ತವೆ. ಮತ್ತು ಮನುಷ್ಯನಲ್ಲಿ ಬಿಸಿ ಕಡಿಮೆ ಆಗುವುದಕ್ಕು ಹೆಚ್ಚಾಗುವುದಕ್ಕೂ ಮುಖ್ಯ ಪರಿಕರಗಳಾಗಿ ಪಾದಗಳಿವೆ. ಕಾಲು ಸುಟ್ಟರೇ ಬಿಸಿಯಾಗುತ್ತದೆ. ಪಾದಗಳಿಗೆ ಹರಳೆಣ್ಣೆಯನ್ನು ಉಜ್ಜಿದರೆ ಮನುಷ್ಯನಿಗೆ ತಂಪು ಉಂಟಾಗುತ್ತದೆ.

**511. (3) ಸರ್ವರಿಗೂ ಸಾಕ್ಷಿ ಯಾರು?**

ಉ. ಪರಮಾತ್ಮ.

**ವಿವರ :** ಒಂದು ಕೆಲಸವನ್ನು ಮಾಡುವವನು ಬೇರೆ, ನೋಡುವವನು ಬೇರೆ. ಮಾಡುವವನು ಮಾಡುವ ಕೆಲಸವನ್ನನುಸರಿಸಿ ವಿಧವಿಧಗಳಾಗಿ ಕರೆಯಲ್ಪಡುವನು. ವಾಹನವನ್ನು ನಡೆಸುವವನನ್ನು ಡ್ರೈವರ್ ಎಂದು, ತಲೆ ಬೋಳಿಸುವವನನ್ನು ಕ್ಷೌರಿಕ (ಮಂಗಳಿ) ಎಂದು, ಅವರ ಕೆಲಸ ಸಂಬಂಧವಾಗಿ ಹೆಸರನ್ನಿಟ್ಟಿದ್ದೇವೆ. ನೋಡುವವನನ್ನು ಮಾತ್ರ ಸಾಕ್ಷಿ ಎನ್ನುತ್ತಿದ್ದೇವೆ. ಶರೀರದಲ್ಲಿ ಮಾಡುವವನು, ನೋಡುವವನು ಇಬ್ಬರಿದ್ದಾರೆ. ಮಾಡುವ ಕೆಲಸವನ್ನನುಸರಿಸಿ ಮಾಡುವವನಿಗೆ ಹೆಸರು ಬಂದಹಾಗೆ, ಶರೀರದಲ್ಲಿ ಚೈತನ್ಯ ರೂಪವಾಗಿ ತನಗೆ ತಾನಾಗಿ ಮಾಡುತ್ತಿರುವವನನ್ನು ಅತ್ಮ ಎನ್ನುತ್ತಿದ್ದೇವೆ. ಮಾಡುತ್ತಿರುವ ಆತ್ಮನನ್ನು ನೋಡುವವನು ಪರಮಾತ್ಮ ಎನ್ನುತ್ತಿದ್ದೇವೆ. ಪ್ರತಿ ಶರೀರದಲ್ಲೂ ಪರಮಾತ್ಮ ಸಾಕ್ಷಿಯಾಗಿ ಇದ್ದು ಏನೂ ಮಾಡದೆ ಇದ್ದಾನೆ. ಆತ್ಮ ಸಾಕ್ಷಿ ಎಂದು ಬಹಳ ಜನ ನುಡಿಯುತ್ತಾರೆ. ಆತ್ಮ ಸಾಕ್ಷಿ ಅಲ್ಲ, ಆತ್ಮ ಕೆಲಸಮಾಡುತ್ತಿದ್ದರೆ ಪರಮಾತ್ಮ ನೋಡುತ್ತಾ

ಇದೆ. ಈ ವಿಷಯ ತಿಳಿಯದೆ ಜೀವಾತ್ಮ ಮಾಡುತ್ತಿದ್ದರೆ, ಆತ್ಮ ನೋಡುತ್ತಾ ಸಾಕ್ಷಿಯಾಗಿ ಇದೆಯೆಂದು ಬಹಳ ಜನ ತಿಳಿದುಕೊಳ್ಳುತ್ತಿದ್ದಾರೆ. ವಾಸ್ತವಕ್ಕೆ ಜೀವಾತ್ಮ ಯಾವ ಕೆಲಸ ಮಾಡುತ್ತಿಲ್ಲ. ಆತ್ಮ ಪ್ರತಿಯೊಂದು ಕೆಲಸ ಮಾಡುತ್ತಿದ್ದರೆ ಜೀವಾತ್ಮ ಒಳಗೆ ಒಂದು ಕಡೆ ಇದ್ದು ಫಲಿತಗಳನ್ನು ಅನುಭವಿಸುತ್ತಿದೆ. ಆತ್ಮ ಮಾತ್ರ ಶರೀರದಲ್ಲಿ ಕೆಲಸ ಮಾಡುತ್ತಿದೆ. ಪರಮಾತ್ಮ ನೋಡುತ್ತಿದೆ ಆದ್ದರಿಂದ ಪರಮಾತ್ಮನನ್ನು ಸಾಕ್ಷಿ ಎನ್ನುತ್ತಿದ್ದೇವೆ.

**512. (4) ಎಲ್ಲದರಲ್ಲೂ ಇರುವುದು ಯಾವುದು?**

ಉ. ಪರಮಾತ್ಮ.

**ವಿವರ :** ಆತ್ಮ ಜೀವವಿರುವ ಶರೀರಗಳಲ್ಲಿ ಮಾತ್ರವೆ ಇದೆ. ಜೀವವಿಲ್ಲದ ಶವ, ನೀರು, ಅಗ್ನಿ, ಕಟ್ಟಿಗೆ, ಕಬ್ಬಿಣದಲ್ಲಿ ಇಲ್ಲ. ಆದರೆ ಪರಮಾತ್ಮ ಪ್ರಾಣವಿಲ್ಲದ ಶವದಲ್ಲಿಯೂ, ಕಲ್ಲು ಮಣ್ಣಿನಲ್ಲಿಯೂ ಅಣುವಣುವಿನಲ್ಲೂ ವ್ಯಾಪಿಸಿಕೊಂಡಿದೆ. ಅಂದರೆ ಪರಮಾತ್ಮ ಜೀವವಿರುವ ಮತ್ತು ಜೀವವಿಲ್ಲದ ಎಲ್ಲದರಲ್ಲೂ ಇದೆ.

**514. (5) ಎಲ್ಲರಲ್ಲೂ ಇರುವುದೇನು?**

ಉ. ಚೈತನ್ಯ ಶಕ್ತಿ.

**ವಿವರ :** ಜೀವವಿರುವ ಪ್ರತಿಯೊಬ್ಬರಲ್ಲೂ ಆತ್ಮ ಚೈತನ್ಯ ಶಕ್ತಿ ಇರುವುದರಿಂದ ಜೀವವಿರುವ ಪ್ರತಿ ಶರೀರವೂ ಕದಲುತ್ತಿದೆ. ಆದ್ದರಿಂದ ಜೀವವಿರುವ ಎಲ್ಲರಲ್ಲೂ ಇರುವುದು ಚೈತನ್ಯಶಕ್ತಿ ಅಥವಾ ಆತ್ಮ ಶಕ್ತಿ ಎನ್ನಬಹುದು.

**514. (6) ಯೋಗದಲ್ಲಿ ಪರಿಪಕ್ವವಲ್ಲದವನನ್ನು, ಪರಿಪಕ್ವವಲ್ಲದ ಕಾಯಿಯೊಂದಿಗೆ ಹೋಲಿಸುತ್ತಾರೆ. ಅದು ಯಾವ ಕಾಯಿ?**

ಉ. ತೆಂಗಿನ ಕಾಯಿ.

**ವಿವರ :** ಕಾಯಿ ಹಣ್ಣಾಗಿ ಬದಲಾಗಿ ಹಣ್ಣು ಎಂದು ಎನಿಸಿಕೊಳ್ಳುವುದು. ಆದರೆ ಹಣ್ಣು ಅನಿಸಿಕೊಳ್ಳದೇ ಎಂದಿಗೂ ಕಾಯಿಯಾಗೆ ಕರೆಯಲ್ಪಡುವುದು ಒಂದೇ ಒಂದು ಕಾಯಿ, ಅದೇ ತೆಂಗಿನಕಾಯಿ. ಆದ್ದರಿಂದ ಪರಿಪಕ್ವವಲ್ಲದವರನ್ನು ಪರಿಪಕ್ವವಾಗದ ಕಾಯಿಯಾಗಿ ತೆಂಗಿನಕಾಯಿಯಾಗಿ ಹೋಲಿಸಲಾಗಿದೆ. ಜ್ಞಾನದಲ್ಲಿ ಪರಿಪಕ್ವವಲ್ಲದವರು ಗುಡಿಯಲ್ಲಿ ಪ್ರತಿಮೆಗಳ ಎದುರಲ್ಲಿ ನಾನು ಇನ್ನೂ ಕಾಯಿಯಾಗೇ ಇದ್ದೇನೆಂದು ತೆಂಗಿನಕಾಯನ್ನು

ದೇವರಿಗೆ ಸಮರ್ಪಿಸುತ್ತಿರುತ್ತಾರೆ. ಪೂರ್ತಿ ಜ್ಞಾನದಲ್ಲಿ ಪರಿಪಕ್ವವಾಗಿರುವವರು ತೆಂಗಿನಕಾಯಿಯನ್ನು ಹೊಡೆಯುವುದು ಬಿಡುವುದು ಹಿಂದೂ ಸಾಂಪ್ರದಾಯದಲ್ಲಿ ಒಂದು. ಆದ್ದರಿಂದ ಸಂಪೂರ್ಣ ಜ್ಞಾನಿಗಳು ಗುಡಿಗೆ ಹೋಗಿ ಕಾಯಿ ಹೊಡೆಯುವುದಿಲ್ಲ.

**515. (7) ಮೊಟ್ಟೆ ತಿಳಿದಿಲ್ಲ ಹಾಗಲಕಾಯಿ ತಿಳಿದಿಲ್ಲ, ತಾಳ ತಿಳಿಯದು ತಗರ ತಿಳಿಯದು ಅನ್ನುವ ಗಾದೆಯಲ್ಲಿ ಮೊಟ್ಟೆ, ತಾಳಕ ಯಾವುದಕ್ಕೆ ಸಮತ?**

ಉ. ಅಂಡವು ತಾಳಕ ಅಜ್ಞಾನಕ್ಕೆ ಸಮತ.

**ವಿವರ :** ಅಜ್ಞಾನ ಜ್ಞಾನ ಎನ್ನುವುದರಲ್ಲಿ ಮನುಷ್ಯನಿಗೆ ಮೊದಲು ತಿಳಿದಿರುವುದು ಅಜ್ಞಾನವೇ. ಎರಡನೆಯದು ತಿಳಿದುಕೊಳ್ಳಬೇಕಾದ್ದು ಜ್ಞಾನ. ಸಮೀಪದಲ್ಲಿರುವುದು ಅಜ್ಞಾನ, ಸ್ವಲ್ಪ ದೂರವಾಗಿರುವುದು ಜ್ಞಾನ. ಆದ್ದರಿಂದ ಅಜ್ಞಾನ ಮೊದಲನೆಯದು, ಜ್ಞಾನ ಎರಡನೆಯದು. ವೇಮನ ಯೋಗಿ ತನ್ನ ಪದ್ಯಗಳಲ್ಲಿ ಮಾನವರಿಗೆ ಯಾವುದು ಅಜ್ಞಾನ, ಯಾವುದು ಜ್ಞಾನ ಎಂದು ತಿಳಿಯದೆನ್ನುವ ಭಾವದಿಂದ ತಾಳಕಂಬರಿಯರು, ತಗರಂಬರಿಯ ರೆಂದು ಅಜ್ಞಾನವನ್ನು ತಾಳಕವೆಂದು ಜ್ಞಾನವನ್ನು ತಗರವೆಂದು ವರ್ಣಿಸಿದ್ದಾನೆ. ಹಾಗೇ ಹಿರಿಯರು ಅಜ್ಞಾನವನ್ನು ಮೊಟ್ಟೆಯಾಗಿ ಜ್ಞಾನವನ್ನು ಹಾಗಲಕಾಯಾಗಿ ವರ್ಣಿಸಿದ್ದಾರೆ.

**516. (8) ಮನುಷ್ಯನ ಶರೀರದೊಳಗಿಂತಲೂ ಆನೆ ಶರೀರದಲ್ಲಿ 25 ಭಾಗಗಳಿಗಿಂತಲೂ ಹೆಚ್ಚಾಗಿ ಯಾವುವು ಇವೆ?**

ಉ. ಏನೂ ಇಲ್ಲ ಅಥವಾ ಯಾವುವೂ ಇಲ್ಲ.

**ವಿವರ :** ಸರ್ವ ಜೀವರಾಶಿಗಳ ಶರೀರಗಳು ಪ್ರಕೃತಿ ನಿರ್ಮಿತವಾದವು ಪಂಚಭೂತಗಳ 25 ಭಾಗಗಳಿಂದಲೇ ತಯಾರಾಗಿವೆ. ಆದ್ದರಿಂದ ಆನೆ ಶರೀರದಲ್ಲಿ ಮನುಷ್ಯನ ಶರೀರಕ್ಕಿಂತಲೂ ಹೆಚ್ಚಾಗಿ ಯಾವ ಭಾಗಗಳು ಇಲ್ಲ. ಆನೆಗೆ ಬಾಲ ಸೊಂಡಿಲು ಲೆಕ್ಕಿಸಿ ಹೆಚ್ಚಿಗೆ ಇವೆಯೆಂದು ಅನುಮಾನ ಕೆಲವರಿಗೆ ಇರಬಹುದು. ಸೊಂಡಿಲು ಎಷ್ಟಿದ್ದರೂ, ಅದು ಮೂಗು ಎನ್ನುವ ಒಂದು ಭಾಗವೇ ಎಂದು, ಹಾಗೇ ಬಾಲ ಎಷ್ಟು ಇದ್ದರೂ, ಅದು ಬೆನ್ನೆಲುಬೆಂದು ತಿಳಿಯಬೇಕು.

**517. (9) ನನ್ನನ್ನು ತಿಳಿದುಕೊಳ್ಳಲಾರರೆಂದು ಧರ್ಪದಿಂದ ಇರುವವರ್ಯಾರು?**

ಉ. ಮಾಯೆ.

**ವಿವರ :** ಸರ್ವ ಜೀವರಾಶಿಗಳು ನನ್ನ ಗುಣಗಳ ಪ್ರಭಾವದಲ್ಲೆ ಇದ್ದಾರೆಂದು, ನನ್ನ ಗುಣಗಳನ್ನೇ ತಿಳಿಯದವರು, ಗುಣ ರೂಪದಲ್ಲಿರುವ ನನ್ನನ್ನು ತಿಳಿಯಲಾರರೆನ್ನುವ ಧರ್ಪದಿಂದ ಮಾಯೆ ಇದೆ.

**518. (10) ಎಂದಿಗಾದರೂ ನನ್ನನ್ನು ತಿಳಿದುಕೊಳ್ಳುವರೆಂದು ತಾಳ್ಮೆಯಿಂದ ಇರುವವರ್ಯಾರು?**

ಉ. ಭಗವಂತನು.

**ವಿವರ :** ಭಗವಂತನು ಮಾನವ ರೂಪದಲ್ಲಿದ್ದು, ಮಾಯೆ ಪ್ರಭಾವದಿಂದ ಎಂದಿಗಾದರೂ ಮಾನವರು ಹೊರಬಂದು ತನ್ನನ್ನು ತಿಳಿದುಕೊಳ್ಳುತ್ತಾರೆಂದು, ಮನುಷ್ಯರು ಎಷ್ಟು ಅವಮಾನ ಮಾಡುತ್ತಿದ್ದರೂ ಸಹಿಸಿ ತಾಳ್ಮೆಯಿಂದ ಇರುವನು.

**519. (11) ಕರ್ಮಾನುಸಾರವಾಗಿ ಶರೀರದಲ್ಲಿ ಯಾವ ಭಾಗ ಕೆಲಸ ಮಾಡುತ್ತದೆ?**

ಉ. ಚಿತ್ತ.

**ವಿವರ :** ಬುದ್ಧಿ ಕರ್ಮಾನುಸಾರಿಣಿ ಎನ್ನುವುದು ಬಹಳ ಸಲ ಕೇಳಿದ್ದೇವೆ. ಆದರೆ ವಾಸ್ತವವಾಗಿ ಪರಿಶೀಲಿಸಿದರೆ ಬುದ್ಧಿ ಗುಣಾನುಸಾರಿಣಿಯಾಗಿ ಕೆಲಸ ಮಾಡುತ್ತದೆ. ಚಿತ್ತ ಕರ್ಮಾನುಸಾರಿಣಿಯಾಗಿ ಕೆಲಸ ಮಾಡುತ್ತದೆ.

**520. (12) ಗುಣಾನುಸಾರ ಕೆಲಸ ಮಾಡುವುದು ಯಾವುದು?**

ಉ. ಬುದ್ಧಿ.

**ವಿವರ :** ಒಂದು ಕೆಲಸದಲ್ಲಿ ಒಳ್ಳೆದು ಕೆಟ್ಟದ್ದು ಎರಡನ್ನು ಬುದ್ಧಿ ಗುಣಾನುಸಾರ ವಿವರಿಸಿ ತಿಳಿಸುತ್ತದೆ. ಬುದ್ಧಿ ವಿವರಿಸಿದವುಗಳಲ್ಲಿ ಚಿತ್ತ ಕರ್ಮಾನುಸಾರ ನಿರ್ಣಯಿಸುತ್ತದೆ.

**521. (13) ಯೋಗಿಗಳಲ್ಲಿ ಎಷ್ಟು ತರಗತಿಗಳಿವೆ? ಅವುಗಳಲ್ಲಿ ಮೂರನೆಯದು ಯಾವುದು?**

ಉ. ನಾಲ್ಕು ತರಗತಿಗಳು. ಮೂರನೆಯದು ದೇವರ್ಷಿ.

**ವಿವರ :** ಯೋಗಿಗಳಿಗೆ ಇರುವ ಯೋಗಶಕ್ತಿಯನ್ನನುಸರಿಸಿ ಅವರನ್ನು ನಾಲ್ಕು ವಿಧಗಳಾಗಿ

ವಿಭಜಿಸುವುದು ನಡೆದಿದೆ. ಅದರಲ್ಲಿ 1. ಮಹರ್ಷಿ, 2. ರಾಜರ್ಷಿ, 3. ದೇವರ್ಷಿ, 4. ಬ್ರಹ್ಮರ್ಷಿ, ಎಂದು ತಿಳಿಯಬೇಕು. ಯೋಗಿಗಳಲ್ಲಿ ದೊಡ್ಡವನು ಬ್ರಹ್ಮರ್ಷಿ ಆಗಿರುವಾಗ, ಮೂರನೆಯವನು ದೇವರ್ಷಿ ಎಂದು ತಿಳಿಯಬೇಕು.

**522. (14) ಪಂಚಾಕ್ಷರಿಯಲ್ಲಿ ಗಾಳಿಗೆ ಯಾವ ಬೀಜಾಕ್ಷರ ಇದೆ?**

ಉ. "ಮಃ" ಎನ್ನುವ ಬೀಜಾಕ್ಷರ ಇದೆ.

**ವಿವರ :** "ಓಂ ನಮಃ ಶಿವಾಯ" ಎನ್ನುವ ಬೀಜಾಕ್ಷರದಲ್ಲಿ "ಓಂ" ಪರಮಾತ್ಮ ಬೀಜಾಕ್ಷರ ಆಗಿರುವಾಗ "ನ" ಆಕಾಶ, "ಮಃ" ಗಾಳಿ, "ಶಿ" ಅಗ್ನಿ, "ವಾ" ನೀರು, "ಯ" ಭೂಮಿಗೆ ಬೀಜಾಕ್ಷರಗಳಾಗಿವೆ.

**523. (15) ಪೂರ್ವದಲ್ಲಿ ಗುರುವನ್ನು ಶಿಷ್ಯನನ್ನು ಏನನ್ನುತ್ತಿದ್ದರು?**

ಉ. ಗುರ್ತು, ಶಿಶುವು.

**ವಿವರ :** ಪೂರ್ವದಲ್ಲಿ ಗುರ್ತು ಎನ್ನುವ ಪದ ಗುರುವಿಗಿರುತ್ತಿತ್ತು. ಜೀವಿಯ ಕೊನೆಯ ಗಮ್ಯವನ್ನು ಗುರ್ತು ಎಂದು, ಅದನ್ನೇ ಮೋಕ್ಷವೆಂದು, ಪರಮಾತ್ಮ ಎಂದು ಕರೆಯುತ್ತಿದ್ದರು. ಗುರ್ತನ್ನು ತಿಳಿಸುವವನನ್ನು ಗುರ್ತು ಎನ್ನುವ ಹೆಸರಿಂದಲೇ ಕರೆಯುತ್ತಿದ್ದರು. ಹಾಗೆ ಕರೆಯುವುದರಲ್ಲಿ ಪರಮಾತ್ಮನನ್ನು ಪರಮಾತ್ಮನೇ ಎನ್ನುವ ಹಾಗೆ, ಗುರ್ತು ಆದ ಮೋಕ್ಷವನ್ನು ತಿಳಿಸುವವನೂ ಸಹ ಮೋಕ್ಷದಲ್ಲಿರುವವನೇ ಎಂದು ತಿಳಿಯುವ ಹಾಗೇ ಗುರ್ತು ಎನ್ನುತ್ತಿದ್ದರು. ಕಾಲಕ್ರಮದಲ್ಲಿ **"ರು"** ಕೆಳಗೆ **"ತ"** ವತ್ತು ಹೋಗಿ ಗುರು ಎನ್ನುವ ಪದವಾಗಿ ಉಳಿದಿದೆ. ಗುರು ಎನ್ನುವ ಪದ ಈಗಲೂ ಕರೆಯುತ್ತಿದ್ದರೂ ಅದು ಸ್ವಲ್ಪ ಬದಲಾಗಿ ಗುರುವು ಎನ್ನುವ ಪದವಾಗಿ ರೂಪಾಂತರ ಹೊಂದಿದೆ. ಮೊದಲು ಗುರುತಾಗಿ ಇದ್ದ ಪದ ಗುರು ಎನ್ನುವ ಪದವಾಗಿ, ಕೊನೆಗೆ ಗುರುವು ಎನ್ನುವ ಪದವಾಗಿ ಬದಲಾಗಿ, ಈ ದಿನ ಹೆಚ್ಚಾಗಿ ಗುರು ಎನ್ನುವ ಪದ ಬಳಕೆಯಲ್ಲಿದೆ.

ಈ ದಿನ ಶಿಷ್ಯ ಎನ್ನುವ ಪದ ಶಿಶು ಎನ್ನುವ ಪದವಾಗಿ ಇರುತ್ತಿತ್ತು. ಗುರು ಹತ್ತಿರ ಬ್ರಹ್ಮವಿದ್ಯೆ ಕಲಿಯುವವರನ್ನು ನಾದಪುತ್ರರೆಂದು, ಗುರುವನ್ನು ತಂದೆಯೆಂದು ಕರೆಯುತ್ತಿದ್ದರು. ಆ ಭಾವದಲ್ಲಿಯೇ ಶಿಷ್ಯನನ್ನು ಶಿಶು ಎನ್ನುತ್ತಿದ್ದರು. ಕಾಲಕ್ರಮದಲ್ಲಿ **"ಶು"** ಗೆ **"ಯ"** ವತ್ತನ್ನು ಸೇರಿಸಿ ಶಿಶ್ಯುವಾಗಿ ಬದಲಾಗಿ, ಕೊನೆಗೆ ಶಿಷ್ಯನು ಆಗಿದೆ. ಇಂದಿಗೂ ಕೆಲವು ಕಡೆ ಶಿಶ್ಯು ಎನ್ನುವ ಪದವಿದೆ.

**524. (16) ಗಂಡನೆನ್ನುವವನಿದ್ದಾನೆಂದು ಗುರುತಾಗಿ ಸ್ತ್ರೀಯರು ಧರಿಸುವಂತದ್ದೇನು? ಪೂರ್ವದಲ್ಲಿ ಅದನ್ನು ಏನೆಂದು ಕರೆಯುತ್ತಿದ್ದರು?**

ಉ. ತಾಳಿಬೊಟ್ಟು. ಪೂರ್ವದಲ್ಲಿ ಆಲಿಬೊಟ್ಟು ಎನ್ನುತ್ತಿದ್ದರು.

**ವಿವರ :** ಸ್ತ್ರೀ ಜೀವನ ಆಧಾರವಾಗಿರುವವನನ್ನು ಗಂಡನೆಂದು ಪುರುಷನೆನ್ನುತ್ತಿದ್ದರು. ಪೂರ್ವದಲ್ಲಿ ಒಬ್ಬ ಗಂಡನಿಗೆ ಹೆಂಡತಿಯೆನ್ನುವ ಗುರುತಾಗಿ ಒಂದು ಬೊಟ್ಟನ್ನು ಕಟ್ಟುತ್ತಿದ್ದರು. ಅದನ್ನೆ ಪೂರ್ವವು ಆಲಿಬೊಟ್ಟು ಎನ್ನುತ್ತಿದ್ದರು. ಈದಿನ ಹೆಸರು ಬದಲಾಗಿ ತಾಳಿಬೊಟ್ಟಾಗಿದೆ.

**525. (17) ಆಧ್ಯಾತ್ಮಿಕವೆಂದರೇ ಏನು?**

ಉ. ತನ್ನನ್ನು ತಾನು ತಿಳಿಯುವುದು.

**ವಿವರ :** ಭಗವದ್ಗೀತೆಯಲ್ಲಿ ಆಧ್ಯಾತ್ಮಿಕವೆಂದರೇ ಏನೆಂದು ಅರ್ಜುನನು ಕೇಳಿದಾಗ ಭಗವಂತನು **"ಸ್ವಭಾವೋ ಆಧ್ಯಾತ್ಮ ಮುಚ್ಯತೇ"** ಎಂದಿದ್ದಾನೆ. ಸ್ವಂತ ಭಾವವನ್ನು ತಿಳಿದುಕೊಳ್ಳುವುದೇ ಆಧ್ಯಾತ್ಮಿಕವೆಂಬ ಭಾವವು.

**526. (18) ಮಾಯೆ ಎಂದರೇನು?**

ಉ. ಗುಣಗಳ ಸಮ್ಮೇಳನ.

**ವಿವರ : "ಗುಣಮಯೀ ಮಮ ಮಾಯಾ"** ಎಂದು ಭಗವದ್ಗೀತೆಯಲ್ಲಿ ಭಗವಂತನು ನುಡಿದಿದ್ದಾನೆ. ಆದ್ದರಿಂದ ನಮ್ಮ ತಲೆಯಲ್ಲಿಯೇ ಗುಣಗಳ ಮೊತ್ತವನ್ನು ಮಾಯೆ ಎಂದು, ಮಾಯೆ ತಲೆಯಲ್ಲೇ ಇದೆಯೆಂದು ತಿಳಿಯಬೇಕು.

**527. (19) ಒಂದು ಸುವಾಸನೆ ಯಾವುದರಿಂದ? ಅದನ್ನು ಯಾವುದರಿಂದ ಹೀರುತ್ತಿದ್ದೇವೆ?**

ಉ. ಮೂಗಿನಿಂದ, ವಾಸನೆ ಎನ್ನುವ ತನ್ಮಾತ್ರದಿಂದ.

**ವಿವರ :** ಸುವಾಸನೆಯನ್ನು ಮೂಗು ಎನ್ನುವ ಪರಿಕರದಿಂದ ಹೀರುತ್ತಿದ್ದೇವೆ. ಆದರೆ ಮೂಗಿಗೆ ಸ್ವಂತವಾಗಿ ವಾಸನೆಯನ್ನು ಗ್ರಹಿಸುವ ಶಕ್ತಿ ಇಲ್ಲ. ವಾಸನೆ ಗ್ರಹಿಸುವ ಘ್ರಾಣ ಎನ್ನುವ ತನ್ಮಾತ್ರ ಎನ್ನುವ ಶಕ್ತಿ ಮತ್ತೊಂದು ಪ್ರತ್ಯೇಕವಾಗಿ ಇದೆ. ಅದು ಇಲ್ಲದಿದ್ದರೆ

ಮೂಗು ವಾಸನೆಯನ್ನು ಹೀರಿದರೂ, ಅದು ಯಾವ ವಾಸನೆ ಎನ್ನುವುದು ತಿಳಿಯದೇ ಹೋಗುವುದು. ಆದ್ದರಿಂದ ಸುವಾಸನೆ ಮೂಗಿನಿಂದ ಹೀರಿದರೂ ಅದನ್ನು ಗ್ರಹಿಸುವ ಶಕ್ತಿ ಮತ್ತೊಂದು ಇದೆಯೆಂದು ತಿಳಿಯಬೇಕು.

**528. (20) ಬ್ರಹ್ಮರ್ಷಿ ಪದವಿಯಲ್ಲಿದ್ದವನು ಪ್ರಾರಬ್ಧಕರ್ಮವನ್ನು ಬದಲಾಯಿಸಬಲ್ಲನಾ?**

ಉ. ಬದಲಾಯಿಸಬಲ್ಲನು.

**ವಿವರ :** ಕರ್ಮಗಳು ಎರಡು ವಿಧಗಳೆಂದು, ಒಂದು ಕ್ಷಮಿಸಲ್ಪಡುವುದು, ಎರಡನೆಯದು ಕ್ಷಮಿಸಲ್ಪಡದೆ ಇರುವುದೆಂದು ಮೊದಲೆ ಹೇಳಿಕೊಂಡಿದ್ದೇವೆ. ಕ್ಷಮಿಸಲ್ಪಡುವುದು ಜ್ಞಾನಾಗ್ನಿಗೆ ಸುಟ್ಟುಹೋಗುವುದು. ಕ್ಷಮಿಸಲಾರದ್ದು ಜ್ಞಾನಾಗ್ನಿಗೆ ಸುಡುವುದಿಲ್ಲ. ಬ್ರಹ್ಮರ್ಷಿ ಸ್ಥಾನದಲ್ಲಿ ಇರುವವನಿಗೆ ಜ್ಞಾನಾಗ್ನಿ ಪೂರ್ಣಮಟ್ಟದಲ್ಲಿರುತ್ತದೆ. ಆದ್ದರಿಂದ ಪ್ರಾರಬ್ಧವನ್ನು ಸುಟ್ಟುಹಾಕುವ ಸಾಮರ್ಥ್ಯವನ್ನು ಹೊಂದಿರುವನು. ಕ್ಷಮಿಸಲಾರದ ಪ್ರಾರಬ್ಧಕರ್ಮವನ್ನು ಬ್ರಹ್ಮರ್ಷಿಯಾಗಲಿ, ಸ್ವತಃವಾಗಿ ಭಗವಂತನಾಗಲಿ ಕ್ಷಮಿಸಲಾರನು.

**529. (21) ಗುಡಿ ಗೋಪುರದ ಮೇಲೆ ಮತ್ತು ಪ್ರತಿಮೆ ಸುತ್ತಾ ಮೇಲಿರುವ ರಾಕ್ಷಸಾಕಾರವಾಗಿ ಇರುವ ಗೊಂಬೆ ಯಾವುದರ ಗುರುತು?**

ಉ. ಮಾಯೆಗೆ ಗುರುತು.

**ವಿವರ :** ಗುಡಿ ಗೋಪುರದ ಮೇಲೆ ಆಗಲಿ, ದೇವರ ಪ್ರತಿಮೆ ಸುತ್ತಾ ಮೇಲೆ ಕೋರೆಗಳಿರುವ ವಿಕೃತಾಕಾರ ಮಾಯೆಗೆ ಗುರುತು. ಮೊದಲು ಮಾಯೆ ದೇವರ ಸುತ್ತಾ ಇದೆಯೆಂದು, ಆ ಮಾಯೆಯನ್ನು ಜಯಿಸದ ಮುನ್ನ ದೇವರನ್ನು ಸೇರಲಾರರೆನ್ನುವ ಗುರುತಿಗೆ ಹಿರಿಯರು ಹಾಗೆ ಇಟ್ಟಿದ್ದಾರೆ. ನನ್ನನ್ನು ಜಯಿಸಿದ ನಂತರವೇ ದೇವರ ಹತ್ತಿರಕ್ಕೆ ಸೇರಬಲ್ಲರೆಂದು ವಿಕೃತವಾಗಿ ನೋಡುವಹಾಗೆ ಆ ಗೊಂಬೆ ಕಾಣಿಸುತ್ತದೆ.

**530. (22) ನಾವು ತಿಂದ ಆಹಾರ ಜೀರ್ಣವಾಗುವ ಕಾರ್ಯಕ್ಕೆ ಇಟ್ಟಿರುವ ಹೆಸರೇನು?**

ಉ. ದ್ರವ್ಯಯಜ್ಞ.

**ವಿವರ :** ಭಗವದ್ಗೀತೆಯಲ್ಲಿ ಜ್ಞಾನಯಜ್ಞ, ದ್ರವ್ಯಯಜ್ಞವೆಂದು ಎರಡು ವಿಧಗಳ ಯಜ್ಞಗಳನ್ನು ಭಗವಂತನು ತಿಳಿಸಿದ್ದಾನೆ. ಅದರಲ್ಲಿ ಜೀರ್ಣಾಶಯದಲ್ಲಿ ಜಠರಾಗ್ನಿಯಿಂದ ದ್ರವ್ಯಗಳನ್ನು ಸುಟ್ಟುಹಾಕುವುದನ್ನು ದ್ರವ್ಯಯಜ್ಞವೆಂದು ಹೆಸರು ಇಟ್ಟಿದ್ದಾರೆ.

**531. (23) ಆಲೋಚನೆಗಳು ಯಾವ ವಿವರದೊಂದಿಗೆ ಬರುತ್ತಿವೆ?**

ಉ. ಬುದ್ಧಿ, ಗುಣವಿವರಗಳೊಂದಿಗೆ.

**ವಿವರ :** ಮನಸ್ಸು ಒದಗಿಸಿದ ವಿಷಯವನ್ನು ಬುದ್ಧಿ ಗ್ರಹಿಸಿ, ಅದನ್ನು ಗುಣಗಳ ಪ್ರಕಾರ ವಿವರಿಸುತ್ತಾ ಹೋಗುತ್ತದೆ. ಬುದ್ಧಿ ಒಳ್ಳೆದು ಕೆಟ್ಟದ್ದು, ಲಾಭ ನಷ್ಟಗಳೆನ್ನುವ ಎರಡು ಮಾರ್ಗಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅನೇಕ ಕೋನಗಳಿಂದ ವಿವರಿಸುತ್ತದೆ. ಒಂದೊಂದು ಸಲ ಒಂದೇ ಕೋನದಲ್ಲಿ, ಒಂದೊಂದು ಸಲ ಎರಡು ಅಥವಾ ಎರಡಕ್ಕಿಂತಾ ಹೆಚ್ಚಿನ ವಿಧಗಳಾಗಿ ಆಲೋಚಿಸುತ್ತಾ ಹೋಗುತ್ತದೆ. ಕೊನೆಗೆ ಚಿತ್ತ ಯಾವುದನ್ನು ಮಾಡಬೇಕೋ ಅದನ್ನೇ ನಿರ್ಣಯಿಸುತ್ತದೆ.

**532. (24) ರುದ್ರ ಅಥವಾ ಕಾಲ ಎಂದರೇನು?**

ಉ. ನಾಶವೆಂದು ಅರ್ಥ.

**ವಿವರ :** ರುದ್ರ ಎಂದರು ಕಾಲ ಎಂದರು ನಾಶವೆಂದು ಅರ್ಥ. ರುದ್ರ ಭೂಮಿ ಎಂದರೆ ಶರೀರಗಳು ನಾಶವಾಗುವ ಸ್ಮಶಾನವೆಂದು ಅರ್ಥ. ಕ್ಷಯವನ್ನುಂಟುಮಾಡುವ ಕಾಲ ನಾನೇ ಎಂದು ಗೀತೆಯಲ್ಲಿ ಪರಮಾತ್ಮನು ಸಹ ಹೇಳಿದ್ದಾನೆ. ಅಲ್ಲಿಯು ಸಹ ನಾಶವನ್ನು ಮಾಡುವ ಕಾಲ ಎಂದಿದ್ದಾನೆ. ರುದ್ರ ಎಂದರೆ ನಾಶವನ್ನು ಮಾಡುವವನೆಂದು ಅರ್ಥವಿದೆ. ಆದ್ದರಿಂದ ರುದ್ರ ಎಂದರೂ ಕಾಲ ಎಂದರೂ ನಾಶವೆಂದು ಅರ್ಥ ಮಾಡಿಕೊಳ್ಳಬೇಕು.

**533. (25) ಗೀತೆ ಎಂದರೆ ಏನು? ಭಗವದ್ಗೀತೆ ಎಂದರೆ ಏನು?**

ಉ. ಹದ್ದು. ಭಗವಂತನು ತಿಳಿಸಿದ ಹದ್ದು.

**ವಿವರ :** ಗೀತೆ ಎಂದರೆ ಹದ್ದು ಎಂದು ಅರ್ಥ. ಗೆರೆಯನ್ನು ಪಲಕದ ಮೇಲೆ ಬಳಪದಿಂದ ಗೀಚಬಹುದು. ಭೂಮಿ ಮೇಲೆ ಕಟ್ಟಿಗೆಯೊಂದಿಗೆ ಗೀಚಬಹುದು. ಮನುಷ್ಯನ ಮನಸ್ಸಿನ ಮೇಲೆ ಮಾತುಗಳಿಂದ ಗೀಚಬಹುದು. ಭಗವಂತನು ಮನುಷ್ಯನಿಗೆ ಮಾತುಗಳೊಂದಿಗೆ ಗೆರೆಯನ್ನು ಗೀಚಿ ತೋರಿಸಿದ್ದಾನೆ. ಭಗವಂತನು ಗೀಚಿದ ಗೆರೆಯಾದ್ದರಿಂದ ಅದನ್ನು ಭಗವದ್ಗೀತೆ ಎನ್ನುತ್ತಿದ್ದೇವೆ. ಹಾಗಲ್ಲದೆ ಗೀತೆಗೆ ಗೀತೆಯಾಗಿ ಅರ್ಥವನ್ನು ಹೇಳಿಕೊಳ್ಳದೆ ಹೋದರೆ ಭಗವಂತನು ಮನುಷ್ಯರ ಬಗ್ಗೆ ಗೀಚಿದ ಗೆರೆಯೇ ಅರ್ಥವಾಗುವುದಿಲ್ಲ.

**534. (26) ಭಗವದ್ಗೀತೆಯಲ್ಲಿ ಹೇಳಿದ "ಗತಾಸು ನಗತಾಸೂಂಶ್ಚ" ಎಂದರೇ ಏನು?**

ಉ. ಗತಿಸುವವು, ಗತಿಸದೇ ಇರುವವು.

**ವಿವರ :** ಗತಾ ನಗತಾ ಎಂದರೆ ಗತಿಸುವವು, ಗತಿಸದೇ ಇರುವವೆಂದು ಅರ್ಥ. ಗತಿಸುವವು ಸಮಸ್ತ ಜೀವರಾಶಿಗಳಾಗಿ ಇವೆ. ಹುಟ್ಟಿದ ಪ್ರತಿ ಜೀವರಾಶಿ ತಪ್ಪದೆ ಸಾಯಬೇಕಾಗಿದೆ, ಅಂತಹ ಸಾವು ವಸ್ತುಜಾಲಕ್ಕು ಪಂಚಭೂತಗಳಿಗು ಇಲ್ಲ. ಮನುಷ್ಯ ಗತಿಸಿದರೂ ಮನುಷ್ಯನಿಂದ ತಯಾರು ಮಾಡಿದ ಶಿಲ್ಪ ಗತಿಸದೆ ಇರುವುದನ್ನು ನಾವು ನೋಡುತ್ತಲೇ ಇದ್ದೇವೆ. ಆದ್ದರಿಂದ ಭಗವದ್ಗೀತೆಯಲ್ಲಿ ಹೇಳಿದ ಈ ವಾಕ್ಯದಲ್ಲಿ ಗತಿಗಳಿರುವ ಜೀವರಾಶಿಗಳು, ಗತಿಗಳಿಲ್ಲದ ಸಮಸ್ತ ವಸ್ತುವಾಹನಗಳು ಪ್ರಕೃತಿ ಎಂದು ಅರ್ಥ.

**535. (27) ಮನುಷ್ಯನಿಗೆ ಭಯವಿಲ್ಲದೆ ಹೋಗುವುದು ಯಾವಾಗ?**

ಉ. ಸಂಪೂರ್ಣ ಜ್ಞಾನ ಹೊಂದಿದಾಗ.

**ವಿವರ :** ಸಂಪೂರ್ಣವಾಗಿ ಆತ್ಮ ಜ್ಞಾನ ತಿಳಿದು, ಶರೀರ ಯಂತ್ರಾಂಗವೆಲ್ಲಾ ತಿಳಿದಾಗ ಗುಣಗಳು ಅವುಗಳ ಪ್ರಭಾವ ತಿಳಿದುಹೋಗುವುದು. ಅಷ್ಟೇ ಅಲ್ಲದೆ ಭಯವು ಅಜ್ಞಾನ ಸಂಬಂಧವೆಂದು, ಧೈರ್ಯ ಜ್ಞಾನಸಂಬಂಧವೆಂದು ಸಹ ತಿಳಿಯುವುದು. ಭಯ ಪರಧರ್ಮಗಳೊಂದಿಗೆ ಕೂಡಿಕೊಂಡಿರುವುದೆಂದು, ಧೈರ್ಯ ಸ್ವಧರ್ಮಗಳೊಂದಿಗೆ ಕೂಡಿಕೊಂಡಿರುವುದೆಂದು ತಿಳಿದಾಗ ಜ್ಞಾನಯುಕ್ತವಾದ ಸ್ವಧರ್ಮಗಳನ್ನು ಆಚರಿಸುವವನಿಗೆ ಭಯವಿರುವುದಿಲ್ಲ. ಸಂಪೂರ್ಣ ಜ್ಞಾನ ಇಲ್ಲದವನಿಗೆ ಭಯ ನೆರಳಿನಂತೆ ಹಿಂಬಾಲಿಸುತ್ತದೆ.

**536. (28) ಮನುಷ್ಯನಿಗೆ ಅಜ್ಞಾನವನ್ನು ಕುರಿತು ಯಾವಾಗ ತಿಳಿಯುವುದು?**

ಉ. ಜ್ಞಾನ ತಿಳಿದಾಗ.

**ವಿವರ :** ಮನುಷ್ಯನು ನಡೆದುಕೊಳ್ಳುವುದು, ಮನುಷ್ಯನು ಇರುವದು ಅಜ್ಞಾನವೇ ಆಗಿದ್ದರೂ ಅಜ್ಞಾನವೆಂದರೆ ಏನು, ಅದು ಹೇಗೆ ಇರುತ್ತದೆ, ನಾವು ಅಜ್ಞಾನದಲ್ಲಿ ಎಲ್ಲಿಯವರೆಗು ಮುಳಿಗಿ ಹೋಗಿದ್ದೇವೆ ಎನ್ನುವ ವಿಷಯ ಮನುಷ್ಯನಿಗೆ ತಿಳಿಯದೆ ಹೋಗುತ್ತಿದೆ. ಮನುಷ್ಯ ಜ್ಞಾನವನ್ನು ಕುರಿತು ತಿಳಿದುಕೊಳ್ಳುತ್ತಾ ಹೋಗುವುದರಿಂದ ಅಜ್ಞಾನವೆಂದರೆ ಏನೋ ತಿಳಿಯುತ್ತಾ ಹೋಗುವುದು. ಮೊದಲು ಜ್ಞಾನ ತಿಳಿದ ನಂತರವೇ ಅಜ್ಞಾನ ತಿಳಿಯುವುದು. ಜ್ಞಾನ ವಿಲ್ಲದೆ ಅಜ್ಞಾನ ತಿಳಿಯದು. ಜ್ಞಾನ ತಿಳಿದ ನಂತರವೇ ಅಜ್ಞಾನವೊಂದರ ಸ್ವರೂಪವೇನೋ ತಿಳಿಯುವುದೆಂದರೆ ಒಂದು ಲೆಕ್ಕದಲ್ಲಿ ಜ್ಞಾನಗಿಂತಲೂ ಅಜ್ಞಾನ ಅವಗಾಹನೆಯೇ ದೊಡ್ಡದೆನ್ನುವ ಮಾತು.

**537. (29) ಶ್ರೀಕೃಷ್ಣನ ಜನ್ಮ ಲಗ್ನ ಯಾವುದು?**

ಉ. ವೃಷಭ.

**ವಿವರ :** ಶ್ರೀಕೃಷ್ಣನ ಜನ್ಮ ಸೂರ್ಯನು ವೃಷಭ ಲಗ್ನದಲ್ಲಿರುವಾಗ ನಡೆದಿದೆ. ಆತನದು ವೃಷಭ ಲಗ್ನವಾದರೂ ಜ್ಯೋತಿಷ್ಯಕ್ಕೆ ಸಿಗುವುದಲ್ಲ. ಏಕೆಂದರೆ ಕರ್ಮದಿಂದ ನಿಯಮಿಸಲ್ಪಟ್ಟು ಹುಟ್ಟಿದವನು ಕೃಷ್ಣನಲ್ಲ. ಆತನೇ ಕರ್ಮವನ್ನು ನಿರ್ಮಿಸಿಕೊಂಡು ಹುಟ್ಟಿದ್ದಾನೆ. ಆತನಿಗೆ ಹಿಂದಿನ ಜನ್ಮವಿಲ್ಲ ಆದ್ದರಿಂದ ಗತ ಜನ್ಮಭುಕ್ತಿಯಾಗಲಿ, ಗರ್ಭಭುಕ್ತಿಯಾಗಲಿ ಇಲ್ಲ. ಪದ್ಧತಿ ಪ್ರಕಾರ ವೃಷಭ ಲಗ್ನದಲ್ಲಿ ಯಾವ ಗ್ರಹಗಳಿದ್ದರೂ ಅವುಗಳ ನೋಟ ಭಗವಂತನಾದ ಕೃಷ್ಣನ ಮೇಲೆ ಇರುವುದಿಲ್ಲ.

**538. (30) ಪ್ರಬೋಧಾನಂದ ಯೋಗೀಶ್ವರರು ಪ್ರತಿಪಾದಿಸಿದ ತ್ರೈತ ಸಿದ್ಧಾಂತವೊಂದರ ಪತಾಕೆ ಯಾವುದು?**

ಉ. ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳೇ ತ್ರೈತ ಸಿದ್ಧಾಂತವೊಂದರ ಪತಾಕೆ.

**ವಿವರ :** ತ್ರೈತ ಸಿದ್ಧಾಂತ ಪತಾಕೆ ನಾಲ್ಕುಚಕ್ರಗಳ ಚಿಹ್ನೆ. ನಾಲ್ಕು ಚಕ್ರಗಳ ಚಿತ್ರ ಪ್ರತಿ ಜೀವರಾಶಿ ತಲೆಯಲ್ಲಿ ಒಳಗೊಂಡಿದೆ. ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳೆನ್ನುವ ನಾಲ್ಕು ಚಕ್ರಗಳ ಸಮೂಹವಿಲ್ಲದ ಜೀವರಾಶಿ ಭೂಮಿ ಮೇಲೆ ಆಗಲಿ, ಮತ್ತೆಲ್ಲಾದರಾಗಲಿ ಇಲ್ಲ. ಎಲ್ಲರ ಜೀವನಗಳೊಂದರ ಸಾರಾಂಶ ಒಳಗೊಂಡಿರುವ ಅತಿ ಮುಖ್ಯವಾದ ನಾಲ್ಕುಚಕ್ರಗಳ ಚಿತ್ರ ತ್ರೈತವೊಂದರ ಪತಾಕೆಯಾಗಿ ಲೆಕ್ಕಿಸುವುದು ಬಹಳ ದೊಡ್ಡತನವು. **ತ್ರೈತ ಸಿದ್ಧಾಂತ ದೊಡ್ಡದೇ, ನಾಲ್ಕು ಚಕ್ರಗಳ ಪತಾಕೆಯೂ ದೊಡ್ಡದೇ, ನಾಲ್ಕು ಚಕ್ರಗಳನ್ನು ಅರ್ಥ ಮಾಡಿಕೊಂಡವರು ಸಹ ದೊಡ್ಡವರೇ ಆಗುತ್ತಾರೆ.**

## ಜ್ಞಾನ ಪರೀಕ್ಷೆ

**ಧರ್ಮವರಮು** ದಿನಾಂಕ–**28–01–1992**

**539. (1) ನಿರ್ಗುಣ ಪೂಜೆ ಎಂದರೇನು?**

ಉ. ಗುಣವಿಲ್ಲದ ಪ್ರತಿಮೆಯ ಪೂಜೆ.

**ವಿವರ :** ಗುಣ ಇರುವುದನ್ನು ಪೂಜಿಸುವುದು ಸಗುಣ ಪೂಜೆ ಎನ್ನುತ್ತೇವೆ. ಅದು ಒಬ್ಬ ಮನುಷ್ಯನನ್ನು ಪೂಜಿಸುವುದು ಆಗಬಹುದು ಅಥವಾ ಪ್ರಾಣವಿದ್ದು ಗುಣವಿರುವ ಯಾವ ಪ್ರಾಣಿಯೊಂದರ ಪೂಜೆಯಾದರೂ ಆಗಬಹುದು. ಹಾಗೇ ಗುಣವಿಲ್ಲದ್ದನ್ನು ಪೂಜಿಸುವುದು ನಿರ್ಗುಣ ಪೂಜೆ ಎನ್ನುತ್ತೇವೆ. ಅದು ಪ್ರಾಣವಿಲ್ಲದ್ದನ್ನು, ಗುಣವಿಲ್ಲದ್ದನ್ನು ಯಾವುದನ್ನು ಪೂಜಿಸಿದರೂ ನಿರ್ಗುಣ ಪೂಜೆ ಆಗುತ್ತದೆ. ನಿರ್ಗುಣ ಸಗುಣ ಪೂಜೆಗಳ ಬಗ್ಗೆ ಪೂರ್ವದಲ್ಲಿ ಹಿರಿಯರು ಹೇಳಿರುವುದಕ್ಕು ನಾವು ಹೇಳುವುದಕ್ಕೂ ಬಹಳ ವ್ಯತ್ಯಾಸವಿದೆ. ಪೂರ್ವದಲ್ಲಿ ಪೂಜೆ ಮಾಡುವವನ ವಿಧಾನವನ್ನನುಸರಿಸಿ ಮಂತ್ರಯುಕ್ತವಾದ ಪೂಜಾ ವಿಧಾನಗಳನ್ನು ಸಗುಣ ಪೂಜೆಯೆಂದು, ಯಾವ ಮಂತ್ರ ವಿಧಾನವು ಇಲ್ಲದ ಯೋಗವನ್ನು ನಿರ್ಗುಣವೆನ್ನುತ್ತಿದ್ದರು. ಹಾಗೆನ್ನುವುದು ಸರಿಯಲ್ಲವೆಂದು, ಯಾವುದನ್ನು ಪೂಜಿಸುತ್ತಿದ್ದೇವೊ ಅದನ್ನನುಸರಿಸಿ ಪೂಜಿಸಲ್ಪಡುವುದು ಗುಣವಿಲ್ಲದ್ದಾದರೆ ನಿರ್ಗುಣೋಪಾಸನೆ ಎಂದು, ಗುಣವಿರುವುದಾದರೆ ಸಗುಣೋಪಾಸನೆ ಎಂದು ಕರೆಯುವುದು ಸಮಂಜಸವೆಂದು ತಿಳಿಸುತ್ತಿದ್ದೇವೆ. ಹೇಗಾದರೆ ಆಂಜನೇಯ ಸ್ವಾಮಿಯನ್ನು ಪೂಜಿಸುವಾಗ ಆಂಜನೇಯ ಉಪಾಸನೆ ಎನ್ನುತ್ತಿದ್ದೇವೊ, ಹಾಗೆ ಪೂಜಿಸುವುದನ್ನು ಅನುಸರಿಸಿ ಆ ಪೂಜೆಗೆ ಹೆಸರು ಏರ್ಪಡುತ್ತಿದೆ ಎಂದು ತಿಳಿಯಬೇಕು.

**540. (2) ಭಗವಂತನನ್ನು ಪೂಜಿಸುವುದನ್ನು ಏನನ್ನಬಹುದು?**

ಉ. ಸಾಕಾರ ಅಥವಾ ಸಗುಣ ಪೂಜೆ ಎನ್ನಬೇಕು.

**ವಿವರ :** ನಿರಾಕಾರವಾದ ಪರಮಾತ್ಮ ಮಾನವ ಶರೀರವನ್ನು ಧರಿಸಿ ಭೂಮಿ ಮೇಲೆ ಹುಟ್ಟುವುದನ್ನು ಭಗವಂತನು ಅವತರಿಸುವುದೆಂದು ಹೇಳುತ್ತಾರೆ. ಅಂತಹ ಭಗವಂತನಿಗೆ ಒಂದು ಆಕಾರವಿದೆ. ಆದ್ದರಿಂದ ಆ ಭಗವಂತನನ್ನು ಪೂಜಿಸುವುದನ್ನು ಸಾಕಾರ ಪೂಜೆ ಎನ್ನುತ್ತಾರೆ. ಹಾಗೇ ಆ ಭಗವಂತನ ಶರೀರದಲ್ಲಿ ಪ್ರಕೃತಿ ಸಿದ್ಧವಾದ ಗುಣಗಳು ಸಹ ಇವೆ. ಆದ್ದರಿಂದ ಆತನನ್ನು ಪೂಜಿಸುವುದನ್ನು ಸಗುಣೋಪಾಸನೆ ಎಂದು ಸಹ ಕರೆಯುತ್ತಾರೆ.

**541. (3) ಭಗವದ್ಗೀತೆಯಲ್ಲಿ ಏನು ತಿಳಿಸಲಾಗಿದೆ?**

ಉ. ಬ್ರಹ್ಮ, ಕರ್ಮ ಯೋಗಗಳ ಧರ್ಮವನ್ನು ತಿಳಿಸಲಾಗಿದೆ.

**ವಿವರ :** ಭಗವದ್ಗೀತೆಯಲ್ಲಿ ಒಟ್ಟಾರೆ ಬ್ರಹ್ಮಯೋಗ, ಕರ್ಮಯೋಗಕ್ಕೆ ಸಂಬಂಧಿಸಿದ

ಧರ್ಮಗಳನ್ನು ತಿಳಿಸಲಾಗಿವೆ. ದೇವರಲ್ಲಿ ಐಕ್ಯವಾಗುವುದಕ್ಕೆ ಎರಡೇ ಎರಡು ಮಾರ್ಗಗಳು ಇವೆ. ಅವುಗಳನ್ನೇ ಬ್ರಹ್ಮಯೋಗ, ಕರ್ಮಯೋಗವೆಂದು ಕರೆಯುತ್ತೇವೆ. ಗೀತೆಯಲ್ಲಿ ಪರಮಾತ್ಮನಲ್ಲಿ ಐಕ್ಯವಾಗುವ ಬ್ರಹ್ಮ, ಕರ್ಮ ಯೋಗಗಳ ಸಿದ್ಧಾಂತಗಳನ್ನೇ ತಿಳಿಸಿದ್ದಾರೆ. ಸಿದ್ಧಿಸುವ ಮಾರ್ಗಗಳನ್ನು ಸಿದ್ಧಾಂತಗಳೆಂದು ಹೇಳುತ್ತಾರೆ. ಸಿದ್ಧಾಂತಗಳನ್ನೇ ಧರ್ಮಗಳೆಂದು ಸಹ ಹೇಳುತ್ತಾರೆ. ದೇವರು ಸಿದ್ಧಿಸುವ ಎರಡು ಮಾರ್ಗಗಳು ಗೀತೆಯಲ್ಲಿ ಇವೆ. ಆದ್ದರಿಂದ ಗೀತೆಯಲ್ಲಿ ಬ್ರಹ್ಮ, ಕರ್ಮ ಯೋಗ ಧರ್ಮಗಳು ತಿಳಿಸಿದ್ದಾರೆಂದು ಹೇಳಬಹುದು.

**542. (4) ಮನುಷ್ಯನಿಂದ ನಡೆಯುತ್ತಿರುವ ಪ್ರತಿಯೊಂದು ಕೆಲಸಕ್ಕು ಮೂಲ ಕಾರಣವೇನು**?

ಉ. ಕರ್ಮ (ಪ್ರಾರಬ್ಧ ಕರ್ಮ).

**ವಿವರ :** ಮನುಷ್ಯನಿಂದ ನಡೆಯುವ ಪ್ರತಿ ಕಾರ್ಯಕ್ಕೂ ಕಾರಣ ಗುಣಗಳಾದರೆ ಮೂಲ ಕಾರಣ ಕರ್ಮ. ಕರ್ಮವು ಪ್ರಾರಬ್ಧ, ಅಗಾಮಿ, ಸಂಚಿತವೆಂದು ಮೂರು ವಿಧಗಳಾಗಿ ಇದೆ. ಅದರಲ್ಲಿ ಜೀವನದಲ್ಲಿ ಕಾರ್ಯರೂಪವಾಗಿ ಅನುಭವಕ್ಕೆ ಬರುವುದು ಪ್ರಾರಬ್ಧಕರ್ಮ ಮಾತ್ರವೇ. ಪ್ರಾರಬ್ಧಕರ್ಮ ಗುಣಗಳನ್ನು ಪ್ರೇರೇಪಿಸಿ, ಗುಣಗಳಿಂದ ಶರೀರ ಯಂತ್ರಾಂಗವನ್ನು ಕದಲಿಸಿ ಕೆಲಸ ಮಾಡಿಸುತ್ತದೆ. ಆದ್ದರಿಂದ ಕೆಲಸಕ್ಕೆ ಮೂಲಕಾರಣ ಕರ್ಮ ಎನ್ನುವುದು ಸತ್ಯ.

**543. (5) ಮನೋ ಗತಗಳು ಯಾವು**?

ಉ. ಐದು ಜ್ಞಾನೇಂದ್ರಿಯಗಳವೊಂದರ ವಿಷಯಗಳು.

**ವಿವರ :** ಮನನ (ಜ್ಞಾಪಕ) ಮಾಡುವುದು ಮನಸ್ಸು. ಹೊರಗಿನ ವಿಷಯಗಳು ಜ್ಞಾನೇಂದ್ರಿಯಗಳಿಂದ ಮನಸ್ಸಿಗೆ ಸೇರುತ್ತವೆ. ಕಣ್ಣಿನಿಂದ ನೋಡಿರುವುದು, ಕಿವಿಯಿಂದ ಕೇಳಿರುವುದು, ಮೂಗಿನಿಂದ ವಾಸನೆ ನೋಡುವುದು, ನಾಲಿಗೆಯಿಂದ ರುಚಿ ನೋಡುವುದು, ಚರ್ಮದಿಂದ ಸ್ಪರ್ಶಿಸುವುದು ಮನಸ್ಸು ತನ್ನಲ್ಲಿ ನಿಕ್ಷಿಪ್ತ ಮಾಡಿಕೊಂಡು ನಂತರ ನಿಕ್ಷಿಪ್ತವಾದ ವಿಷಯಗಳನ್ನೆ ಜ್ಞಾಪಕ ಮಾಡುತ್ತದೆ. ಜ್ಞಾನೇಂದ್ರಿಯ ವಿಷಯಗಳು ಮನಸ್ಸಿನಲ್ಲಿ ಅಡಗಿವೆ. ಆ ವಿಧವಾಗಿ ಅಡಗಿರುವವು ಯಾವಾಗೋ ಒಂದು ಸಲ ಪುನಃ ಜ್ಞಾಪಕಕ್ಕೆ ಬರುತ್ತವೆ. ಒಬ್ಬ ಜೀವಿಯು ಗತಿಸಿ ಸೂಕ್ಷ್ಮಶರೀರದೊಂದಿಗೆ ಕಾಣಿಸದೆ ಇದ್ದು, ಮತ್ತೆ ಯಾವಾಗಲೋ ಒಂದು ಸಲ ಹುಟ್ಟಿ ಬಂದ ಹಾಗೆ, ಜ್ಞಾನೇಂದ್ರಿಯ ವಿಷಯಗಳು ಮನಸ್ಸಿನಲ್ಲಿ ಅಡಗಿ

ಸೂಕ್ಷ್ಮವಾಗಿ ಇದ್ದು, ನಂತರ ಯಾವಾಗಲೊ ಒಂದು ಸಲ ಹೊರಗೆ ಬರುತ್ತವೆ. ಆದ್ದರಿಂದ ಐದು ಜ್ಞಾನೇಂದ್ರಿಯಗಳ ವಿಷಯಗಳನ್ನು ಮನೋಗತಗಳೆಂದು ಕರೆಯುತ್ತೇವೆ.

**544. (6) ಬ್ರಹ್ಮಯೋಗಿಗೆ ಶತ್ರುಗಳ್ಯಾರು?**

ಉ. ವಿಷಯ ಜ್ಞಾಪಕಗಳು.

**ವಿವರ :** ಯಾವೊಂದು ಇಂದ್ರಿಯವಿಷಯ ಜ್ಞಾಪಕಗಳು ಮನಸ್ಸಿಗೆ ಬಾರದವರೆಗು ಬ್ರಹ್ಮಯೋಗ ಸಾಗುತ್ತದೆ. ಒಂದು ವಿಷಯ ಜ್ಞಾಪಕಕ್ಕೆ ಬಂದರೂ ಬ್ರಹ್ಮಯೋಗ ಭಂಗವಾಗುತ್ತದೆ. ಆದ್ದರಿಂದ ವಿಷಯ ಜ್ಞಾಪಕಗಳೇ ಬ್ರಹ್ಮಯೋಗಿಗೆ ಶತ್ರುಗಳು. ಬ್ರಹ್ಮಯೋಗ ಸಾಧಕನಿಗೆ ಬದ್ಧ ಶತ್ರುಗಳಾಗಿ ಇಂದ್ರಿಯವಿಷಯ ಜ್ಞಾಪಕಗಳಿವೆ ಎಂದು ತಿಳಿಯಬೇಕು.

**545. (7) ಕಳಶದ ಮೇಲೆ ಇಟ್ಟಿರುವ ತೆಂಗಿನಕಾಯಿ ಯಾವುದಕ್ಕೆ ಗುರುತು?**

ಉ. ಶರೀರ ಧರಿಸಿರುವ ಜೀವಿಗೆ ಗುರುತು.

**ವಿವರ :** ಪರಮಾತ್ಮ ಪ್ರಕೃತಿಗೆ ಆಧಾರ. ಪ್ರಕೃತಿ ಸಕಲ ಜೀವಿಗಳಿಗೆ ಆಧಾರ. ಆ ವಿಷಯ ತಿಳಿಸುವ ಗುರುತೇ ಕಳಶದ ಮೇಲಿರುವ ತೆಂಗಿನಕಾಯಿ. ಕಳಶ ಪರಮಾತ್ಮ ಗುರುತಾದಾಗ, ಕಳಶದ ಮೇಲೆ ಇರುವ ಐದು ಎಲೆಗಳು ಪಂಚ ಭೂತಗಳಾದ ಪ್ರಕೃತಿಗೆ ಗುರುತು ಕಳಶದೊಳಗಿನ ಎಲೆಗಳಿಗೆ ಹಸಿರುತನವನ್ನು ಕೊಡುವ ನೀರು ಪ್ರಕೃತಿಗೆ ಚೈತನ್ಯವನ್ನು ಕೊಡುವ ಆತ್ಮನಿಗೆ ಗುರುತು. ಕಳಶ ಪರಮಾತ್ಮ, ಅದರಲ್ಲಿನ ನೀರು ಆತ್ಮ, ಐದು ಎಲೆಗಳು ಪಂಚ ಭೂತಗಳಿಗೆ ಗುರುತಾದಾಗ, ಪಂಚ ಭೂತ ನಿರ್ಮಿತವಾದ ಜೀವ ಶರೀರವಾಗಿ ತೆಂಗಿನಕಾಯನ್ನು ಐದು ಎಲೆಗಳ ಕಳಶದಮೇಲೆ ಇಟ್ಟಿದ್ದಾರೆ. ಪ್ರಪಂಚ ರೂಪದಲ್ಲಿದ್ದ ಪ್ರಕೃತಿಗೆ ಪರಮಾತ್ಮ, ಪಂಚಭೂತ ನಿರ್ಮಿತವಾದ ಶರೀರಗಳಿಗೆ ಪ್ರಕೃತಿ ಆಧಾರವೆಂದು, ತಿಳಿಸುವ ಕಳಶ, ಅದರ ಮೇಲೆ ಐದು ಎಲೆಗಳು, ಎಲೆಗಳ ಮೇಲೆ ತೆಂಗಿನಕಾಯನ್ನು ಇಡಲಾಗಿದೆ.

**546. (8) ಕರ್ಮರೀತ್ಯಾ ಮುಖ ವರ್ಚಸ್ಸಿಗೆ ಸಂಬಂಧಿಸಿದ ಜಾತಕ ಲಗ್ನ ಯಾವುದು?**

ಉ. ಎರಡನೆಯ ಲಗ್ನ.

**ವಿವರ :** ಕರ್ಮರೀತ್ಯಾ ಜೀವಿಗೆ ಎಲ್ಲವೂ ಲಭ್ಯವಾಗುತ್ತದೆನ್ನುವುದು ಸತ್ಯ. ಆದ್ದರಿಂದ

ಕರ್ಮರೀತ್ಯಾ ಶರೀರ, ಆ ಕರ್ಮರೀತಿಯೇ ಅದರಲ್ಲಿನ ಅವಯವ ಸೌಷ್ಠವವು ಏರ್ಪಡುತ್ತದೆ. ಶರೀರ ದಪ್ಪ ಉದ್ದಕ್ಕೆ ಸಂಬಂಧಿಸಿರುವುದು ಮೊದಲನೆಯ ಲಗ್ನವಾದರೆ, ಮುಖವರ್ಚಸ್ಸಿಗೆ ಸಂಬಂಧಿಸಿರುವುದು ಎರಡನೆಯ ಲಗ್ನವೆಂದು ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ತಿಳಿಯುತ್ತಿದೆ.

**547. (9) ಜ್ಞಾನಯೋಗವೆಂದರೆ ಏನು?**

ಉ. ಮನಸ್ಸು ಆತ್ಮದ ಮೇಲೆ ಲಗ್ನವಾಗುವುದು.

**ವಿವರ :** ಬಾಹ್ಯ ಜ್ಞಾನೇಂದ್ರಿಯಗಳ ಸಂಬಂಧವಾಗಲಿ, ಒಳಗಿನ ಮನೋಗತಗಳಾಗಲಿ ಮನೋದೃಷ್ಠಿಗೆ ಬಾರದೆ ಹೋಗಿರುವಾಗ ಮನಸ್ಸಿಗೆ ತಿಳಿಯುವುದು ಆತ್ಮ. ಮನಸ್ಸು ಬಾಹ್ಯ ವಿಷಯಗಳನ್ನು ಬಿಟ್ಟು ಆತ್ಮಾನುಭೂತಿಯನ್ನು ಹೊಂದುವುದೇ ಜ್ಞಾನಯೋಗ.

**548. (10) ದೇಹಿ ಎನ್ನುವ ಪದ ಯಾವುದಕ್ಕೆ ವರ್ತಿಸುತ್ತದೆ?**

ಉ. ಜೀವಾತ್ಮನಿಗು, ಅತ್ಮನಿಗು.

**ವಿವರ :** ದೇಹಿ ಎಂದರೆ ದೇಹವನ್ನು ಧರಿಸುವುದೆಂದು ಅರ್ಥ. ಜೀವಾತ್ಮ ಆತ್ಮ ದೇಹವನ್ನು ಧರಿಸಿವೆ. ಆದ್ದರಿಂದ ಜೀವಾತ್ಮ ಆತ್ಮಗಳಿಗೆ ದೇಹಿ ಎನ್ನುವ ಪದ ಅನ್ವಯಿಸುತ್ತದೆ. "ಭಿಕ್ಷಾಂ ದೇಹಿ" ಎಂದಾಗ ಜೀವಾತ್ಮನೆಂದು, **"ಅಧಿಯಜ್ಞೋ ಹಮೇ ವಾತ್ರ ದೇಹೇ ದೇಹ ಬೃತಾಂವರ"** ಎಂದಾಗ ಆತ್ಮಕ್ಕೆಂದು ಸಂದರ್ಭಾನುಸಾರವಾಗಿ ತಿಳಿಯಬೇಕು.

**549. (11) ರಾಜಯೋಗಕ್ಕೆ ಮತ್ತೊಂದು ಹೆಸರೇನು?**

ಉ. ಕರ್ಮಯೋಗ.

**ವಿವರ :** ಇರುವ ಯೋಗಗಳು ಎರಡು. ಆ ಎರಡರಲ್ಲಿ ದೊಡ್ಡದು ಕರ್ಮಯೋಗ. ಎಲ್ಲರಿಗಿಂತಲೂ ರಾಜನನ್ನು ದೊಡ್ಡವನಾಗಿ ಲೆಕ್ಕಿಸುತ್ತೇವೆ. ಆದ್ದರಿಂದ ಕರ್ಮಯೋಗ ದೊಡ್ಡದೆಂದು ತಿಳಿಯುವ ನಿಮಿತ್ತ ರಾಜಯೋಗವೆಂದು ಮತ್ತೊಂದು ಹೆಸರು ಇಟ್ಟಿದ್ದಾರೆ. ರಾಜಯೋಗವೆಂದರೂ ಕರ್ಮಯೋಗವೆಂದರೂ ಒಂದೇ ಎಂದು ತಿಳಿಯಬೇಕು.

**550. (12) ಜೀವನದಲ್ಲಿ ಜೀವಿಗೆ ಸ್ನೇಹಿತರು ಯಾರು?**

ಉ. ಒಳ್ಳೆಯವಾದ ಆರು ಗುಣಗಳು.

**ವಿವರ :** ಜೀವನದಲ್ಲಿ ಜೀವಿಗೆ ಪಾಪ ಸಂಪಾದಿಸಿ ಕೊಡುವ ಕೆಟ್ಟ ಗುಣಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯವೆನ್ನುವ ಗುಣಗಳು ಶತ್ರುಗಳು. ಹಾಗೇ ಪುಣ್ಯವನ್ನು ಸಂಪಾದಿಸಿಡುವ ದಾನ, ದಯೆ, ಔದಾರ್ಯ, ವೈರಾಗ್ಯ, ವಿನಯ, ಪ್ರೇಮ ಗುಣಗಳು ಮಿತ್ರರು. ಒಳ್ಳೆಯದನ್ನು ಮಾಡುವವರು ಮಿತ್ರರು. ಕೆಟ್ಟದ್ದನ್ನು ಮಾಡುವವರು ಶತ್ರುಗಳೆನ್ನುವ ಮಾತಿನ ಪ್ರಕಾರ ಜೀವನ ಕಾಲದಲ್ಲಿ ಜೀವಿಗೆ ಪಾಪವನ್ನು ತಂದಿಟ್ಟು ಕಷ್ಟವನ್ನು ಅನುಭವಿಸುವಂತೆ ಮಾಡುವ ಕೆಟ್ಟ ಗುಣಗಳನ್ನೇ ಶತ್ರುಗಳೆಂದು ತಿಳಿಯಬೇಕು. ಹಾಗೇ ಪುಣ್ಯವನ್ನು ತಂದಿಟ್ಟು ಸುಖವನ್ನು ಅನುಭವಿಸುವಹಾಗೆ ಮಾಡುವ ಒಳ್ಳೆ ಗುಣಗಳು ಆರು ಮಿತ್ರರೆಂದು ತಿಳಿಯಬೇಕು.

**551. (13) ಬ್ರಹ್ಮ ಹಗಲು ಎಷ್ಟು ಕಾಲವಾಗಿ ಲೆಕ್ಕಿಸಲ್ಪಟ್ಟಿದೆ?**

ಉ. ಸಾವಿರ ಯುಗಗಳು. (108 ಕೋಟಿ ಸಂವತ್ಸರಗಳು).

**ವಿವರ :** ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ ಎನ್ನುವ ನಾಲ್ಕು ಯುಗಗಳು ಎರಡು ನೂರ ಐವತ್ತು ಬಾರಿ ನಡೆದರೆ ಪರಮಾತ್ಮನಿಗೆ ಒಂದು ಹಗಲೆಂದು ಲೆಕ್ಕಿಸಲಾಗಿದೆ. ಸಾವಿರ ಯುಗಗಳು 108 ಕೋಟಿ ಸಂವತ್ಸರಗಳಾಗಿ ತಿಳಿಸಲಾಗಿದೆ.

**552. (14) ಕರ್ಮವನ್ನು ಸೃಷ್ಟಿಸಿರುವುದು ಯಾರು?**

ಉ. ಪರಮಾತ್ಮ.

**ವಿವರ :** ಕರ್ಮವನ್ನು, ಕರ್ಮವನ್ನು ಪಾಲಿಸುವ ಪ್ರಕೃತಿಯನ್ನು ಪರಮಾತ್ಮಯೇ ತಯಾರು ಮಾಡಿದ್ದಾನೆ. ಏನೂ ಇಲ್ಲದಿರುವಾಗ ಪ್ರಪಂಚವನ್ನು ಸೃಷ್ಟಿಸಬೇಕೆಂದುಕೊಂಡ ಪರಮಾತ್ಮ ತನ್ನ ಪ್ರಮೇಯ ಇಲ್ಲದೆ ಪ್ರಪಂಚ, ಅದರಲ್ಲಿನ ಜೀವ ರಾಶಿಗಳ ಹುಟ್ಟುವಿಕೆ, ಬದುಕು ಸಾವುಗಳು, ಅವಷ್ಟಕ್ಕವೆ ನಡೆಯುವಹಾಗೆ ಒಂದು ಯಂತ್ರಾಂಗವನ್ನು ತಯಾರು ಮಾಡಿದ್ದಾನೆ. ಆ ಯಂತ್ರಾಂಗ ಎಲ್ಲವನ್ನು ಪ್ರಕೃತಿ ಕೈಗೆ ಒಪ್ಪಿಸಿ ತಾನು ಮಾತ್ರ ಏನೂ ಮಾಡದೆ ನೋಡುತ್ತಾ ಇದ್ದಾನೆ. ಪ್ರಪಂಚದಲ್ಲಿನ ಬದಲಾವಣೆಗಳು, ಜೀವರಾಶಿಗಳ ಜೀವನಗಳು, ಸಾವು ಹುಟ್ಟುಗಳು, ಎಲ್ಲವನ್ನು ಪ್ರಕೃತಿಯೇ ನಿರ್ವರ್ತಿಸುತ್ತಿದೆ. ಪರಮಾತ್ಮ ಪ್ರಕೃತಿಯನ್ನು ತನ್ನ ಕೈಯಲ್ಲಿ ಇಟ್ಟುಕೊಂಡು, ಜೀವರಾಶಿಗಳನ್ನು ಪ್ರಕೃತಿಯಿಂದ ಆಡಿಸುತ್ತಾ ಎಲ್ಲದಕ್ಕು ಸಾಕ್ಷಿಯಾಗಿ ಇದ್ದಾನೆ. ಯಾವುವು ಹೇಗೆ ನಡೆದುಕೊಳ್ಳಬೇಕೆನ್ನುವುದಕ್ಕೆ ಕರ್ಮ ಎನ್ನುವ ವಿಸರ್ಗವನ್ನು ತಯಾರು ಮಾಡಿ, ಅದನ್ನೂ ಪ್ರಕೃತಿ ಕೈಯಲ್ಲಿ ಇರುವಹಾಗೆ ಮಾಡಿ,

ಕರ್ಮ ಸಿದ್ಧಾಂತವೆನ್ನುವ ಒಂದೇ ಸೂತ್ರವನ್ನಿಟ್ಟಿದ್ದಾನೆ. ಜನ್ಮಿಸಿದ ಪ್ರತಿಯೊಬ್ಬರು ಕೊನೆಗೆ ಭಗವಂತನೂ ಸಹ ಆ ಸಿದ್ಧಾಂತದ ಪ್ರಕಾರವಿರುವಹಾಗೆ ಮಾಡಿದ್ದಾನೆ.

**553. (15) ಸಂಶಯಗಳಿಗೆ ಪರಿಷ್ಕಾರವೇನು?**

ಉ. ಆತ್ಮ ಜ್ಞಾನ.

**ವಿವರ :** ಶರೀರಕ್ಕೆ ಹೊರಗಿನ ವಿಷಯಗಳಲ್ಲಾಗಲಿ, ಶರೀರದ ಒಳಗಿನ ವಿಷಯಗಳಲ್ಲಾಗಲಿ, ಬಂದಿರುವ ಅನುಮಾನಗಳಿಗಾಗಲಿ, ಪ್ರಶ್ನೆಗಳಿಗಾಗಲಿ, ಸಂಪೂರ್ಣವಾದ ಉತ್ತರ ಆತ್ಮ ಜ್ಞಾನ ತಿಳಿದವರಿಗೆ ಲಭ್ಯವಾಗುತ್ತದೆ. ಆತ್ಮ ಜ್ಞಾನವಿಲ್ಲದವರಿಗೆ ಒಂದು ಉತ್ತರ ಸಿಕ್ಕರು ಅದು ಅಸಂಪೂರ್ಣವಾಗಿದ್ದು, ಮತ್ತೊಂದು ಸಂಶಯ ಬರುವುದಕ್ಕೆ ಅವಕಾಶವಿರುತ್ತದೆ. ಸಂಶಯರಹಿತ ಉತ್ತರ ಬೇಕೆಂದರೆ ತಪ್ಪದೆ ಜ್ಞಾನ ತಿಳಿದಿರಬೇಕು.

**554. (16) ರಾಜಯೋಗದಿಂದ ನಶಿಸುವ ಕರ್ಮಯಾವುದು?**

ಉ. ಆಗಾಮಿ ಕರ್ಮ.

**ವಿವರ :** ರಾಜಯೋಗವೆಂದರೂ ಕರ್ಮಯೋಗವೆಂದರೂ ಎರಡೂ ಒಂದೇ. ಕರ್ಮ ಎನ್ನುವುದು ಒಂದೇ ಆಗಿದ್ದರೂ ನಡೆಯುತ್ತಿರುವ ಕರ್ಮ, ನಿಲುವಿಕೆ ಇರುವ ಕರ್ಮ, ಬರಬೇಕಾಗಿರುವ ಕರ್ಮ ಎಂದು ಮೂರು ವಿಧಗಳಾಗಿ ಇದೆ. ನಡೆಯುತ್ತಿರುವ ಕರ್ಮವನ್ನು ಪ್ರಾರಬ್ಧವೆಂದು, ನಿಲುವಿಕೆ ಇರುವ ಕರ್ಮವನ್ನು ಸಂಚಿತಕರ್ಮ ಎಂದು, ಮುಂಬರುವ ಕರ್ಮವನ್ನು ಆಗಾಮಿಕರ್ಮ ಎಂದು ಕರೆಯುತ್ತಾರೆ. ಸಾಧಾರಣವಾಗಿ ಮನುಷ್ಯನಿಗೆ ಪ್ರಾರಬ್ಧಕರ್ಮ ನಡೆಯುತ್ತಾ ಖರ್ಚಾಗುತ್ತಿರುವಾಗ ಆಗಾಮಿಕಕರ್ಮ ಬಂದು ಸೇರುತ್ತಿರುತ್ತದೆ. ರಾಜಯೋಗವನ್ನು ಆಚರಿಸುವ ಯೋಗಿ ಸಾಧಾರಣ ಮನುಷ್ಯನ ಹಾಗೆ ಕೆಲಸಗಳನ್ನು ಮಾಡುತ್ತಿದ್ದರೂ ಪ್ರಾರಬ್ಧಕರ್ಮ ಮುಗಿದುಹೋಗುತ್ತಿರುತ್ತದೆ, ಆದರೆ ಹೊಸದಾಗಿ ಬರುವ ಆಗಾಮಿಕರ್ಮ ಬಾರದೆ ಹೋಗುತ್ತದೆ. ಎಲ್ಲರಿಗು ಬರುವುದು ರಾಜಯೋಗಿಗೆ ಏಕೆ ಬಂದಿಲ್ಲವೆಂದರೆ! ರಾಜಯೋಗಿ ತನ್ನ ಶರೀರದಲ್ಲಿನ ಅಹಂಕಾರವನ್ನು ಅಡಗಿಸಿ ಹಾಕುವುದರಿಂದ ಹೊಸ ಆಗಾಮಿಕರ್ಮ ಯೋಗಿಯನ್ನು ಅಂಟುವುದಿಲ್ಲ. ಯೋಗಿ ಯೊಂದರ ಜ್ಞಾನಾಗ್ನಿಯಲ್ಲಿ ಆಗಾಮಿಕರ್ಮ ಸುಟ್ಟು ಹೋಗುತ್ತಿದೆ. ಹಾಗೆ ಸುಟ್ಟುಹೋಗುವುದನ್ನೇ ಜ್ಞಾನಯಜ್ಞ ಎನ್ನುತ್ತಿದ್ದೇವೆ. ಎರಡು ಯಜ್ಞಗಳಲ್ಲಿ ದ್ರವ್ಯಯಜ್ಞಕ್ಕಿಂತಲೂ ಜ್ಞಾನಯಜ್ಞವೇ ಶ್ರೇಷ್ಠವಾಗಿರುವುದೆಂದು ಗೀತೆಯಲ್ಲಿ ಭಗವಂತನು

ಸಹ ಹೇಳಿದ್ದಾನೆ. ರಾಜಯೋಗಿ ಕೆಲಸಗಳನ್ನು ಮಾಡುತ್ತಿರುವಾಗ ಆಗಾಮಿಕರ್ಮ ಬೂದಿಯಾಗುತ್ತಿದೆ.

**555. (17) ಅಗ್ನಿ ತತ್ತ್ವಗಳು ಎಷ್ಟು? ಅವು ಯಾವವು?**

ಉ. ಅಗ್ನಿ ತತ್ತ್ವಗಳು ಐದು. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಎನ್ನುವವು.

**ವಿವರ :** ಪಂಚಭೂತಗಳಿಂದ ಶರೀರದಲ್ಲಿ ಐದು ವ್ಯವಸ್ಥೆಗಳು ತಯಾರಾಗಿವೆ. ಆಕಾಶದಿಂದ ತಯಾರಾದವುಗಳನ್ನು ಆಕಾಶ ತತ್ತ್ವಗಳು ಎನ್ನುತ್ತಾರೆ. ಅವು ಅಂತರಂಗಗಳು 1. ಜೀವಾತ್ಮ, 2. ಮನಸ್ಸು, 3. ಬುದ್ಧಿ, 4. ಚಿತ್ತ, 5. ಅಹಂಕಾರ. ಹಾಗೇ ಗಾಳಿಯಿಂದ ತಯಾರಾದವುಗಳನ್ನು ಪಂಚ ವಾಯುಗಳೆಂದು ಕರೆಯುತ್ತಾರೆ ಅವು 1. ಉದಾನವಾಯು, 2. ವ್ಯಾನವಾಯು,3. ಸಮಾನವಾಯು, 4. ಪ್ರಾಣವಾಯು, 5. ಅಪಾನವಾಯು. ಅಗ್ನಿಯಿಂದ ತಯಾರಾದ ಜ್ಞಾನೇಂದ್ರಿಯಗಳು ಅವು 1. ಕಣ್ಣು, 2. ಮೂಗು, 3. ನಾಲಿಗೆ, 4. ಕಿವಿ, 5. ಚರ್ಮ. ನೀರಿನಿಂದ ತಯಾರಾಗಿರುವವು ಜ್ಞಾನೇಂದ್ರಿಯಗಳಿಗಿರುವ ಶಕ್ತಿಗಳು 1. ದೃಷ್ಟಿ, 2. ವಾಸನೆ, 3. ರುಚಿ, 4. ಶಬ್ದ, 5. ಸ್ಪರ್ಶ. ಭೂಮಿಯಿಂದ ತಯಾರಾಗಿರುವ ಕರ್ಮೇಂದ್ರಿಯಗಳು 1. ಕಾಲುಗಳು, 2. ಕೈಗಳು, 3. ಬಾಯಿ, 4. ಗುದ, 5. ಗುಹ್ಯ. ಇವುಗಳಲ್ಲಿ ಅಗ್ನಿ ತತ್ತ್ವಗಳು ಐದು ಅಗ್ನಿಯ ಹಾಗೆ ಚುರುಕಾಗಿ ಕೆಲಸಮಾಡುವ ಜ್ಞಾನೇಂದ್ರಿಯಗಳು.

**556. (18) ದ್ವೈತವೆಂದರೆ ಅರ್ಥವೇನು?**

ಉ. ಎರಡು ಎಂದು ಅರ್ಥ.

**ವಿವರ :** ಇಂದೂ ಮತದಲ್ಲಿ ಆಧ್ಯಾತ್ಮಿಕ ಎನ್ನುವುದನ್ನು ಕೆಲವರು ಗುರುಗಳು ಅವರವರ ಮಾರ್ಗದಲ್ಲಿ ಬೋಧಿಸುತ್ತಾ ಸುಮಾರು ಇಲ್ಲಿಗೆ 2ಸಾವಿರ ಸಂವತ್ಸರಗಳ ಪೂರ್ವದಲ್ಲಿ ಆದಿಶಂಕರಾಚಾರ್ಯ ಎನ್ನುವ ಗುರುವು ಅದ್ವೈತವೆನ್ನುವ ಸಿದ್ಧಾಂತವನ್ನು ಬೋಧಿಸಿದ್ದಾನೆ. ಆತನ ಬೋಧನೆಯಲ್ಲಿ ಜೀವಾತ್ಮನೆನ್ನುವವನು ಇಲ್ಲ, ಎಲ್ಲರೂ ದೈವ ಸ್ವರೂಪಿಗಳೇ, ಎಲ್ಲವೂ ಪರಬ್ರಹ್ಮ ಸ್ವರೂಪವೇ, ಪರಬ್ರಹ್ಮ ಒಂದೇ ಇದೆ ಬೇರೆ ಇಲ್ಲವೆನ್ನುವುದು ಮುಖ್ಯ ಸೂತ್ರ. ನಂತರ ಕೆಲವು ಸಂವತ್ಸರಗಳಿಗೆ ಮದ್ವಾಚಾರ್ಯರು ಎನ್ನುವ ಗುರುವು ಜೀವಿಯು ದೇವರು ಇಬ್ಬರೂ ಇದ್ದಾರೆಂದು, ಎರಡಾಗಿರುವ ಅದೇ ದ್ವೈತವೆಂದು ಬೋಧಿಸಿದ್ದಾನೆ. ಅದ್ವೈತವೆಂದರೆ ಎರಡಲ್ಲದ ಒಂದೆಂದು, ದ್ವೈತವೆಂದರೆ ಎರಡೆಂದು ಅರ್ಥ. ಆದಿಶಂಕರನ ಅದ್ವೈತ, ಮದ್ವಾನುಚಾರ್ಯನ ದ್ವೈತ ಎನ್ನುವ ಸಿದ್ಧಾಂತಗಳು ಎರಡು ಸರಿಅಲ್ಲವೆಂದು,

ಆದಿಯಲ್ಲೇ ಪರಮಾತ್ಮ ನಿಂದ ತ್ರೈತವನ್ನು ಬೋಧಿಸಲಾಗಿದೆ ಎಂದು, ಪ್ರಸ್ತುತ ಕಾಲದಲ್ಲಿ ಅಂದರೆ **ಕ್ರೀ.ಶ.2000 ಸಂವತ್ಸರಗಳಲ್ಲಿ ನಾವು ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸುತ್ತಿದ್ದೇವೆ.** ಆದಿಶಂಕರನು ಜೀವಾತ್ಮನನ್ನು ಆತ್ಮನನ್ನು ಬಿಟ್ಟು ಪರಮಾತ್ಮನೊಬ್ಬನನ್ನು ತಿಳಿಸಿದಾಗ, ಮದ್ವಾನುಚಾರ್ಯನು ಜೀವಾತ್ಮನನ್ನು ಪರಮಾತ್ಮನನ್ನು ಇಬ್ಬರನ್ನು ತಿಳಿಸಿ ದ್ವೈತವೆಂದಿದ್ದಾನೆ. ಈಗ ನಾವು ಇಬ್ಬರ ಮಧ್ಯದಲ್ಲಿ ಬಿಟ್ಟಿರುವ ಆತ್ಮನನ್ನು ಸಹ ತಿಳಿಸುತ್ತಾ, ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮುವ್ವರಿದ್ದಾರೆಂದು ತ್ರೈತ ಸಿದ್ಧಾಂತವನ್ನು ಬಯಲ್ಪಡಿಸುವುದೆ ಅಲ್ಲದೆ ಭಗವದ್ಗೀತೆಯನ್ನು ಶಾಸ್ತ್ರಾಧಾರವಾಗಿ ತೋರಿಸುತ್ತಿದ್ದೇವೆ. ಅದ್ವೈತಕ್ಕೂ ದ್ವೈತಕ್ಕೂ ಶಾಸ್ತ್ರಾಧಾರ ಇಲ್ಲ. ಅವು ಅಶಾಸ್ತ್ರೀಯಗಳು.

**557. (19) ಮನುಷ್ಯನು ದೈವಶಕ್ತಿಯನ್ನು ಯಾವಾಗ ಹೊಂದುವನು?**

ಉ. ಮೊದಲು ಗುರುವಿನ ಹತ್ತಿರ ನಂತರ ಯೋಗಸಮಯದಲ್ಲಿ.

**ವಿವರ :** ಒಬ್ಬ ಮನುಷ್ಯ ಮೊಟ್ಟ ಮೊದಲು ಗುರುವೊಂದರ ಉಪದೇಶದಿಂದ ಸ್ವಲ್ಪ ಶಕ್ತಿಯನ್ನು ಅಂದರೆ ಜ್ಞಾನಾಗ್ನಿಯನ್ನು ಹೊಂದುವನು. ನಂತರ ಯೋಗವನ್ನು ಮಾಡುವ ವೇಳೆಗಳಲ್ಲಿ ದೈವಶಕ್ತಿಯನ್ನು ಹೊಂದುತ್ತಿರುವನು. ದೈವಶಕ್ತಿ ಎಂದರೂ, ಜ್ಞಾನಶಕ್ತಿ ಎಂದರೂ, ಜ್ಞಾನಾಗ್ನಿ ಎಂದರೂ ಎಲ್ಲಾ ಒಂದಾಗಿ ತಿಳಿಯಬೇಕು. ಗುರುವು ಇರುವವರು ಗುರೂಪದೇಶದಿಂದ ಶಕ್ತಿಯನ್ನು ಹೊಂದುವನು ಎಂದಿದ್ದೀರಲ್ಲ! ಗುರುವು ಲಭಿಸದಿದ್ದರೆ ಹೇಗೆ ಹೊಂದುವನೆಂದು, ಬೋಧಕರು ಬಿಟ್ಟು ಗುರುವು ಅಪುರೂಪವಾಗಿರುವ ಈ ಕಾಲದಲ್ಲಿ ಅವರಿಗೆ ಮೊದಲು ಶಕ್ತಿ ಹೇಗೆ ಲಭಿಸುತ್ತದೆಂದು ಕೆಲವರು ಕೇಳಬಹುದು. ಅದಕ್ಕೆ ಸಮಾಧಾನವೇನೆಂದರೆ! ಗುರುವು ಲಭಿಸಬೇಕೆಂದು, ಜ್ಞಾನಶಕ್ತಿ ತನ್ನಲ್ಲಿ ಪ್ರವೇಶಿಸಬೇಕೆಂದು, ಬೋಧಕರು ಎಷ್ಟಿದ್ದರೂ ತನಗೆ ಗುರುವು ಅವಸರವೆಂದು, ಗುರುವಿನಿಂದ ಉಪದೇಶ ಹೊಂದಬೇಕೆಂದು, ಯಾವನಿಗೆ ತೀವ್ರವಾದ ಶ್ರದ್ದೆ ಇರುವುದೋ ಅವನಿಗೆ ನಿಜವಾಗಿ ಗುರುವು ಲಭಿಸುವನು. ಉಪದೇಶವನ್ನು ಗುರುವು ಮಾಡಿ ಜ್ಞಾನಶಕ್ತಿಯನ್ನು ಅವನಿಗೆ ಧಾರೆಯೆರೆಯುವನು. ಆದರೆ ಶ್ರದ್ದೆ ಇರುವವನಿಗೆ ಗುರು ಲಭಿಸಿದರೂ, ಶಕ್ತಿ ಲಭಿಸಿದರೂ ಇಂತವನೇ ಗುರುವೆಂದು, ಇಂತಹ ಸಮಯದಲ್ಲೇ ಉಪದೇಶ ಆಗಿದೆಯೆಂದು, ತಿಳಿಯಬಹುದು ತಿಳಿಯದೆ ಇರಬಹುದು. ಏಕೆಂದರೆ ಗುರುವು ಎಲ್ಲರಂತೆ ಗುರುತನ್ನು ಹೊಂದಿರುವುದಿಲ್ಲ. ಆತನು ಭೂಮಿ ಮೇಲೆ ಕಳ್ಳನ ಹಾಗೆ ಬಂದು ಕಳ್ಳನ ಹಾಗೆ ಹೋಗುವವನು.

**558. (20) ಆಧ್ಯಾತ್ಮಿಕ ಎಂದರೇನು?**

ಉ. ತನ್ನನ್ನು ತಾನು ತಿಳಿದುಕೊಳ್ಳುವುದು.

**ವಿವರ :** ಪರಮಾತ್ಮ ಅನಂತವಾದ ವಿಶ್ವವೆಲ್ಲಾ ವ್ಯಾಪಿಸಿ ಇದೆಯೆಂದು, ಆತ್ಮ ಜೀವರಾಶಿಗಳೆಲ್ಲ ಶರೀಗಳಲ್ಲಿ ಇದೆಯೆಂದು, ತಾನಾದ ಜೀವಾತ್ಮ ಒಂದು ಶರೀರ ಮಾತ್ರ ಧರಿಸಿ ಇದ್ದೇನೆಂದು ಅನುಭವ ಪೂರ್ವಕವಾಗಿ ತಿಳಿಯುವುದೇ ಆಧ್ಯಾತ್ಮಿಕ.

**559. (21) ತತ್ವಗಳು ಎಂದರೇನು?**

ಉ. ಆತ್ಮಶಕ್ತಿ ಯಿಂದ ಕದಲುವ ಭಾಗಗಳು.

**ವಿವರ :** ತತ್ತ್ವವೆಂದರೆ ಆತ್ಮ ಎಂದು ತಿಳಿದಿದೆ. ತತ್ತ್ವಗಳೆಂದರೆ ಒಂದು ಶರೀರದಲ್ಲಿ ಆತ್ಮ ಚೈತನ್ಯದಿಂದ ಕದಲುವ ಶರೀರ ಭಾಗಗಳೆಂದು ತಿಳಿಯಬೇಕು. ಒಬ್ಬ ಮನುಷ್ಯ ಶರೀರದಲ್ಲಿ ಆತ್ಮ ಚೈತನ್ಯವನ್ನುಪಯೋಗಿಸಿಕೊಳ್ಳುವ ಭಾಗಗಳು 25 ಇವೆ. ಆದ್ದರಿಂದ ಮನುಷ್ಯನ ಶರೀರ 25 ತತ್ತ್ವಗಳಿಂದ ತಯಾರಾಗಿದೆಯೆಂದು ವೇದಾಂತಿಗಳೆನ್ನುತ್ತಿದ್ದಾರೆ. ಈ 25 ತತ್ತ್ವಗಳನ್ನು ತಿಳಿದರೆ ಜ್ಞಾನ ತಿಳಿದವನಾಗಿ ಅಸಲಾದ ತತ್ತ್ವವನ್ನು ತಿಳಿಯಬಹುದೆಂದು ಕೇಳಿಬರುತ್ತದೆ. 5 x 5 = 25 ನ್ನು ಎಂದರೆ ಆಕಾಶ ಗಾಳಿ ಅಗ್ನಿ ನೀರು ಭೂಮಿ ಎನ್ನುವ ಐದು ಪ್ರಕೃತಿ ಭಾಗಗಳು ಒಂದೊಂದು ಐದಾಗಿ ತಯಾರಾಗಿ ಒಟ್ಟು 25 ಶರೀರ ಭಾಗಗಳಾಗಿವೆ. ಅವುಗಳ ವಿವರ ತಿಳಿಯದೆ ಹೋದರೆ ಜ್ಞಾನವೇ ತಿಳಿಯದೆಂದು ಹಿರಿಯರು ಹೇಳುತ್ತಾ ಒಂದು ಪದ್ಯವನ್ನು ವರ್ಣಿಸಿದ್ದಾರೆ.

***ಪಂಚ ತತ್ತ್ವಗಳನ್ನು ಪಂಚೀಕರಿಸದೆ***
***ಒಳ್ಳೆಯತಿಗಳೆನ್ನುವ ಮಾತಣ್ಣ***
***ಪುಟ್ಟಿಯಲ್ಲಿ ಗಜವು ಮೊಟ್ಟೆ ಇಟ್ಟು ಚಂದವಾಗಿ***
**ಅಖಿಲ ಜೀವಸಂಗ ಆತ್ಮಲಿಂಗ.**

**560. (22) ಓಂ ನಮಃ ಶಿವಾಯ ಎನ್ನುವ ಮಂತ್ರವು ಯಾವಾಗ ಸೃಷ್ಠಿಸಲ್ಪಟ್ಟಿದೆ?**

ಉ. ಸೃಷ್ಠಿ ಆದಿಯಲ್ಲಿ.

**ವಿವರ :** ಯಾವಾಗಾದರೆ ಮೊಟ್ಟ ಮೊದಲಬಾರಿ ಪ್ರಕೃತಿ ಹುಟ್ಟಿದೆಯೊ ಆಗ ಪರಮಾತ್ಮನಿಗೂ ಪ್ರಕೃತಿಗೂ ಬೀಜಾಕ್ಷರಗಳು ಸೃಷ್ಠಿಸಲ್ಪಟ್ಟಿವೆ. ಪರಮಾತ್ಮವೊಂದರ ಒಂದು

ಬೀಜಾಕ್ಷರ "ಓಂ" ಹಾಗೇ ಪ್ರಕೃತಿ ಯೊಂದರ ಪಂಚಭೂತಗಳ ಬೀಜಾಕ್ಷರಗಳು ಐದು "ನಮಃ ಶಿವಾಯ" ಎನ್ನುವವು ಸೃಷ್ಠಿಸಲ್ಪಟ್ಟಿವೆ. ಹಾಗೆ ಸೃಷ್ಠಿಸುವುದಕ್ಕೆ ಕಾರಣ ಪರಮಾತ್ಮ ಪ್ರಕೃತಿಗೆ ನಾಶನವಾಗದವನೆಂದು ತಿಳಿಸುವ ನಿಮಿತ್ತವೆಂದು ತಿಳಿಯಬೇಕು. ಪಂಚಭೂತಗಳಿಗೆ ನಾಶನವಾಗದವನು ಪರಮಾತ್ಮ ಆದ್ದರಿಂದ ಪಂಚ ಅಕ್ಷರಿ ಎಂದು ಹೆಸರು ಬೀಜಾಕ್ಷರಗಳಿಗೆ ಇಡಲಾಗಿದೆ. ಪಂಚ ಎಂದರೆ ಆಕಾಶ ಗಾಳಿ ಅಗ್ನಿ ನೀರು ಭೂಮಿ ಎನ್ನುವ ಪ್ರಕೃತಿಯೆಂದು, ಅಕ್ಷರಿ ಎಂದರೆ ನಾಶವಾಗದಿರುವುದೆಂದು, ಒಟ್ಟಾರೆ ಸೇರಿಸಿದರೆ ಪಂಚಭೂತಗಳಿಗೆ ನಾಶವಾಗದ್ದೆಂದು ಪಂಚಾಕ್ಷರಿಯಲ್ಲಿ ಅರ್ಥ ಒಳಗೊಂಡಿದೆ.

**561. (23) ಅಲ್ಲಾನನ್ನು ಆರಾಧಿಸುವವರು ತಲೆಮೇಲೆ ಬಟ್ಟೆ ಇಲ್ಲದೆ ಪ್ರಾರ್ಥನೆ ಮಾಡುವುದಿಲ್ಲ. ಇದಕ್ಕೇನು ಅರ್ಥ.?**

ಉ. ತಲೆಯಲ್ಲಿನ ಧ್ಯಾಸ ದೇವರ ಮೇಲೆಯೆ ಇರಬೇಕೆಂದು, ಹೊರಗಿನ ಧ್ಯಾಸಗಳು ಬರಬಾರದೆಂದು.

**ವಿವರ :** ಇಸ್ಲಾಮ್ ಮತಾನುಸಾರ ಪ್ರತ್ಯೇಕವಾದ ಅರ್ಥವೇನಿದೆಯೊ ನನಗೆ ತಿಳಿಯದು ಆದರೆ ನನಗಿರುವ ಜ್ಞಾನದ ಪ್ರಕಾರ ಒಂದು ಅರ್ಥವಿದೆ. ದೇವರನ್ನು ಪ್ರಾರ್ಥಿಸುವ ಸಮಯದಲ್ಲಿ ನನ್ನ ತಲೆಯಲ್ಲಿನ ಧ್ಯಾಸ ದೇವರ ಮೇಲೆಯೆ ಇರಬೇಕೆಂದು, ಹೊರಗಿನಿಂದ ಯಾವ ದುಷ್ಟಶಕ್ತಿಗಳ ಪ್ರಭಾವವು ನನ್ನ ತಲೆ ಮೇಲೆ ಇರಬಾರದೆಂದು ತಲೆ ಮೇಲೆ ಬಟ್ಟೆಯನ್ನು ಹೊದ್ದುಕೊಳ್ಳುತ್ತಿದ್ದಾರೆ. ಪ್ರಾರ್ಥನ ಸಮಯದಲ್ಲಿ ಪಕ್ಷಿಗಳು ಮಲವನ್ನು ಹಾಕಿದರೆ ಕೂದಲೊಳಗೆ ಸೇರಿಹೋಗಿ ಅದರ ಸ್ಪರ್ಶದಿಂದ ಸಹ ಭಂಗವಾಗುತ್ತದೆಂದು ತಲೆ ಮೇಲೆ ಬಟ್ಟೆಯನ್ನು ಹೊದ್ದುಕೊಳ್ಳುತ್ತಾರೆಂದುಕೊಳ್ಳುತ್ತೇನೆ. ಯಾವುದು ಏನಾದರೂ ಅದು ಒಳ್ಳೆಯ ಪದ್ಧತಿಯೆಂದು ಹೇಳಬಹುದು.

**562. (24) ಶ್ವಾಸದಲ್ಲಿನ ಸೂಕ್ಷ್ಮ ಶಬ್ದ ಯಾವುದು?**

ಉ. "ಓಂ".

**ವಿವರ :** ಶ್ವಾಸ ಉಚ್ಛ್ವಾಸ, ನಿಚ್ಛ್ವಾಸ ರೂಪವಾಗಿ ಇದೆ. ಉಸಿರನ್ನು ಒಳಗೆ ಎಳೆಯುತ್ತಾ ಹೊರಗೆ ಬಿಡುವುದನ್ನು ಉಚ್ಛ್ವಾಸ, ನಿಚ್ಛ್ವಾಸ ಎನ್ನುತ್ತಿದ್ದೇವೆ. ಈ ಕಾರ್ಯದಲ್ಲಿ ಒಂದು ವಿಧವಾದ ಶಬ್ದ ಏರ್ಪಡುತ್ತಿದೆ. ಅದನ್ನೇ "ಸೋಹಂ" ಎನ್ನುತ್ತಿದ್ದೇವೆ. ಶ್ವಾಸ ಒಳಗೆ ಹೋಗುವಾಗ "ಸೋ" ಎನ್ನುವ ಶಬ್ದ, ಹೊರಗೆ ಬರುವಾಗ "ಹಂ" ಎನ್ನುವ ಶಬ್ದ

ಬರುತ್ತಿದೆ. ಈ ಸೋಹಂ ಶಬ್ದದಲ್ಲಿ ಸೂಕ್ಷ್ಮವಾಗಿ "ಓಂ" ಒಳಗೊಂಡಿದೆ. ಅದು ಹೇಗೆಂದರೆ "ಸೋ" ಉಚ್ಛಾರಣೆಯಲ್ಲಿ ಕೊನೆಯ ಶಬ್ದ ಓ ಎಂದು, ಹಾಗೇ ಹಂ ಉಚ್ಚಾಟನೆಯಲ್ಲಿ ಕೊನೆಯ ಶಬ್ದ "ಮ್" ಎಂದು ಇದೆ. ಎರಡು ಸೇರಿಸಿದಾಗ "ಓಮ್" ಎಂದು ತಿಳಿಯುತ್ತಿದೆ.

**563. (25) ಪರಮಾತ್ಮ ಶಕ್ತಿಗೆ ಅವಧಿ ಇದೆಯಾ?**

ಉ. ಇಲ್ಲ.

**ವಿವಿರ :** ಪರವಾತ್ಮ ಶಕ್ತಿ ಪರವಾಣುವಿನಿಂದ ಹಿಡಿದು ಬ್ರಹ್ಮಾಂಡವೆಲ್ಲವೂ ತುಂಬಿಕೊಂಡಿದೆ. ಅನಂತವಾದದ್ದು ಆಕಾಶವಾದರೆ ಅದಕ್ಕಿಂತ ಅತೀತವಾದ ಪರಮಾತ್ಮನಿಗೆ ಅವಧಿಯೆನ್ನುವುದು ಇಲ್ಲ. ಅನಂತ ವಿಶ್ವವೆಲ್ಲಾ ವ್ಯಾಪಿಸಿ ಜೀವವಿರುವ ಮತ್ತು ಜೀವವಿಲ್ಲದವುಗಳಲ್ಲಿಯೂ ಸಹ ಪರಮಾತ್ಮ ತುಂಬಿಕೊಂಡಿದೆ. ಆದ್ದರಿಂದ ಪರಮಾತ್ಮನಿಗೆ ಅವಧಿ ಇಲ್ಲ ಆಕಾರವು ಇಲ್ಲ.

**564. (26) ಕೋರಿಕೆ ಮೊದಲಾದ ಗುಣಗಳನ್ನು ಹೇಗೆ ಸ್ಥಂಭಿಸುವಂತೆ ಮಾಡಬೇಕು?**

ಉ. ಮನಸ್ಸನ್ನು ಸ್ಥಂಭಿಸುವಂತೆ ಮಾಡುವುದರಿಂದ ಗುಣಗಳು ಸ್ಥಂಭಿಸಲ್ಪಡುತ್ತವೆ.

**ವಿವರ :** ಶರೀರದಲ್ಲಿನ ಕಾಮಾದಿ ಗುಣಗಳಿಗೆ ಶರೀರ ಹೊರಗೆ ನೇತ್ರಾದಿ ಅವಯವಗಳಿಗೆ ಮಧ್ಯೆ ಅನುಸಂಧಾನವಾದದ್ದು ಮನಸ್ಸು. ಮನಸ್ಸು ಕೆಲಸ ಮಾಡುವುದರಿಂದ ಒಳಗಿನ ಗುಣಗಳು ಹೊರಗೆ ಅವಯವಗಳು ಕೆಲಸ ಮಾಡುತ್ತಿವೆ. ಮನಸ್ಸನ್ನು ಅಡಗಿಸಿ ಹಾಕಿದರೆ ಒಳಗೆ ಗುಣಗಳ ಹೊರಗಿನ ಅವಯವಗಳ ಕೆಲಸ ನಿಂತು ಹೋಗುತ್ತದೆಂದು ತಿಳಿಯಬೇಕು.

**565. (27) ಕರ್ತ, ಕರ್ಮ, ಕ್ರಿಯ, ಸಾಕ್ಷಿಯಲ್ಲಿ ಜೀವಿಯು ಯಾವುದಕ್ಕೆ ಸಂಬಂಧಿಸಿದ ವನು?**

ಉ. ಕ್ರಿಯೆಗೆ ಸಂಬಂಧಿಸಿದವನು.

**ವಿವರ :** ಕರ್ತ, ಕರ್ಮ, ಕ್ರಿಯೆ, ಸಾಕ್ಷಿ ಎನ್ನುವ ಪದಗಳಲ್ಲಿ ಕರ್ತ ಪರಮಾತ್ಮ ಆದಾಗ, ಕರ್ಮ ಪಾಪ ಪುಣ್ಯಗಳು ಆದಾಗ, ಮಾಡಿದ ಕೆಲಸವನ್ನು ಅನುಭವಿಸುವ ಜೀವಿಯು ಕ್ರಿಯೆ ಆದಾಗ, ಆತ್ಮ ಸಾಕ್ಷಿ ಭೂತವಾಗಿ ಇದೆಯೆಂದು ತಿಳಿಯಬೇಕು.

**566. (28) ಉಪನಿಷತ್ ಎನ್ನುವ ಮಾತಿಗೆ ಅರ್ಥವೇನು?**

ಉ. ಪಕ್ಕದಲ್ಲಿರುವುದನ್ನು ಚೆನ್ನಾಗಿ ತಿಳಿಯುವುದು.

**ವಿವರ :** ಉಪನಿಷತ್‌ನ್ನು ಬಿಡಿಸಿದರೆ ಉಪ+ನಿ+ಸದ್ ಎಂದು ಮೂರು ಭಾಗಗಳಾಗಿ ಇದೆ. ಉಪ ಎಂದರೆ ನಿನಗಿಂತ ಬೇರೆಯಾಗಿ ಪಕ್ಕಕ್ಕಿರುವ, ನಿ ಎಂದರೆ ಚೆನ್ನಾಗಿ, ಸದ್ ಎಂದರೆ ಹೊಂದಿರುವುದು ಅಥವಾ ತಿಳಿದಿರುವುದೆಂದು ಅರ್ಥ. ನಿನಗಿಂತಲೂ ಪರವಾಗಿ ಅಥವಾ ನಿನಗಿಂತಲೂ ಬೇರೆಯಾಗಿ ಮತ್ತು ನೀನಲ್ಲದೆ ನಿನ್ನ ಪಕ್ಕದಲ್ಲಿ ಸಮೀಪವಾಗಿ ಇರುವ ಆತ್ಮನನ್ನು ಚೆನ್ನಾಗಿ ತಿಳಿಯುವುದನ್ನು ಉಪನಿಷತ್ ಎನ್ನುತ್ತೇವೆ. ನಿನಗಿಂತಲೂ ಬೇರೆಯಾಗಿ ನಿನ್ನ ಸಮೀಪದಲ್ಲಿರುವ ಆತ್ಮನನ್ನು ತಿಳಿಯುವ ನಿಮಿತ್ತ ಬರೆಯಲಾದ ವಿಷಯಗಳನ್ನು ಸಹ ಉಪನಿಷತ್ ಎನ್ನುವುದು ಸಹಜ. ಭಗವದ್ಗೀತೆ ಅತ್ಮ ವಿಷಯಗಳನ್ನು ತಿಳಿಸಿದೆ, ಆದ್ದರಿಂದ ಆ ಗ್ರಂಥವನ್ನು ಉಪನಿಷತ್ ಎನ್ನುತ್ತಿದ್ದೇವೆ.

**567. (29) ಹುಟ್ಟಿನಿಂದಲೇ ಶರೀರದಲ್ಲಿ ಅಹಂ ಇದೆಯಾ? ಅಹಂಕಾರವಿದೆಯಾ?**

ಉ. ಅಹಂ ಇದೆ.

**ವಿವರ :** ಹುಟ್ಟಿದ ಶರೀರದಲ್ಲಿ ಆಕಾಶ ತತ್ವದಿಂದ ತಯಾರಾದ ಅಂತರೇಂದ್ರಿಯಗಳಲ್ಲಿ ಮನಸ್ಸು, ಬುದ್ಧಿ, ಚಿತ್ತ, ಅಹಂ ಇರುವಾಗ ಜೀವಿಗೆ ಅತೀ ಸಮೀಪವಾಗಿ ಇರುವವು ಬುದ್ಧಿ, ಚಿತ್ತ, ಅಹಂ. ಹುಟ್ಟಿನಿಂದಲೇ ಬಂದಿರುವ ಅಹಂ ಜ್ಞಾನವನ್ನು ಹೊಂದಿದ ಜೀವಿಗೆ ಬ್ರಹ್ಮಾಸ್ಮಿ ಆಗುತ್ತಿದೆ. ಅಜ್ಞಾನ ಹೊಂದಿದ ಜೀವಿಗೆ ಅಹಂಕಾರವಾಗುತ್ತಿದೆ. ಜ್ಞಾನದಿಂದ ಒಳಗೆ ಆತ್ಮದೊಂದಿಗೆ ಸೇರಿದ ಅಹಂ "ಅಹಂ ಬ್ರಹ್ಮ" ಆದಾಗ, ಅಜ್ಞಾನದಿಂದ ಹೊರಗಿನ ಆಕಾರದೊಂದಿಗೆ ಸೇರಿದ ಅಹಂ "ಅಹಂಕಾರ" ಆಗುತ್ತಿದೆ. ಹುಟ್ಟಿದಾಗ ಜೀವಿಗೆ ಜ್ಞಾನ ಅಜ್ಞಾನ ತಿಳಿಯವು ಆದುದರಿಂದ ಅಹಂ ಆಕಡೆ ಬ್ರಹ್ಮ ಮೇಲೆ ಈಕಡೆ ಹೊರಗಿನ ಆಕಾರದ ಮೇಲೆ ಧ್ಯಾಸ ಮರಳಿಸದ ಸ್ಥಿತಿಯಲ್ಲಿ ಇರುವ ಕಾರಣದಿಂದ ಆಕಡೆ ಬ್ರಹ್ಮ ಆಗಿಲ್ಲ ಈಕಡೆ ಆಕಾರವು ಆಗಿಲ್ಲ. ಆದ್ದರಿಂದ ಹುಟ್ಟಿದಾಗ ಅಹಂ ಅಹಂ ಆಗೀಯೇ ಇದೆ. ದೊಡ್ಡದಾದ ನಂತರ ಅಹಂ ಬ್ರಹ್ಮವಾದರೂ ಆಗಬಹುದು ಅಥವಾ ಅಹಂಕಾರವಾದರೂ ಆಗಬಹುದು.

**568. ( 30) ಶರೀರದಲ್ಲಿ ಆತ್ಮ ಸ್ಥಾನ ಯಾವುದು?**

ಉ. ಬ್ರಹ್ಮನಾಡಿ.

**ವಿವರ :** ಪ್ರತಿ ಶರೀರದಲ್ಲಿ ಜೀವಾತ್ಮದೊಂದಿಗೆ ಆತ್ಮ ನಿವಾಸವಿರುತ್ತದೆ. ಆತ್ಮ ಬ್ರಹ್ಮನಾಡಿ ಮೇಲಿನ ಭಾಗದಿಂದ ಕೊನೆಯ ಭಾಗದವರೆಗು ವ್ಯಾಪಿಸಿಕೊಂಡಿದೆ.

**569. (31) ಮರಣಿಸಿದ ಜೀವಾತ್ಮದೊಂದಿಗೆ ಬೇರೊಂದು ಶರೀರಕ್ಕೆ ಹೋಗುವ ಆತ್ಮಕ್ಕೆ ಚಲನೆಯಿದ್ದಂತೆಯೇ?**

ಉ. ಆತ್ಮಕ್ಕೆ ಚಲನವಿಲ್ಲ.

**ವಿವರ :** ಮರಣಿಸಿದ ಜೀವಾತ್ಮನೊಂದಿಗೆ ಬೇರೊಂದು ಶರೀರದವರೆಗು ಆತ್ಮ ಹೋದರೂ ಆತ್ಮಕ್ಕೆ ಚಲನೆ ಇಲ್ಲವೆಂದೇ ಹೇಳಬಹುದು. ಶರೀರದಲ್ಲಿ ಇದ್ದಾಗಾಗಲಿ, ಶರೀರವನ್ನು ಬಿಟ್ಟು ಹೋಗುವಾಗಾಗಲಿ, ಆತ್ಮ ಕಾಲ, ಕರ್ಮಚಕ್ರಗಳ ಮಧ್ಯೆ ಸಿಲುಕಿಕೊಂಡಿದೆ. ಆತ್ಮಕ್ಕೆ ಸಂಕೋಚ ವ್ಯಾಕೋಚಗಳು ಇವೆ ಆದರೆ ಚಲನವಿಲ್ಲ. ಆತ್ಮ ನಾಲ್ಕು ಚಕ್ರಗಳ ಮಧ್ಯೆ ಕೀಲಿನಂತೆ ಬಂಧಿಸಲ್ಪಟ್ಟಿದೆ. ನಾಲ್ಕು ಚಕ್ರಗಳಿಗೆ ಚಲನವಿದೆ ಆದರೆ ಆತ್ಮಕ್ಕೆ ಚಲನವಿಲ್ಲ.

**570. (32) ಜೀವರಾಶಿಗಳು ಯಾರ ಅಧೀನದಲ್ಲಿವೆ?**

ಉ. ಪ್ರಕೃತಿ ಅಧೀನದಲ್ಲಿವೆ.

**ವಿವರ :** ಪರಮಾತ್ಮ ಅಧೀನದಲ್ಲಿ ಪ್ರಕೃತಿ ಇರುವಾಗ, ಪ್ರಕೃತಿ ಅಧೀನದಲ್ಲಿ ಸರ್ವ ಜೀವರಾಶಿಗಳು ಇವೆ. ಪ್ರಕೃತಿ ಭಾಗಗಳಾದ ಪಂಚ ಭೂತಗಳಿಂದ ತಯಾರಾದ ಶರೀರ ಆತ್ಮ ಚೈತನ್ಯಕ್ಕೆ ಒಳಪಟ್ಟು ಕದಲುತ್ತಿರುವಾಗ, ಜೀವಾತ್ಮ ಕರ್ಮಕ್ಕೆ ಒಳಪಟ್ಟು ಒಳ್ಳೆ ಕೆಟ್ಟ ಅನುಭೂತಿಗಳನ್ನು ತನಗೆ ಇಷ್ಟವಿಲ್ಲದಿದ್ದರೂ ಅನುಭವಿಸುತ್ತಿದ್ದಾನೆ.

**571. (33) ಆತ್ಮ ಸೇವೆ ಎಂದರೇನು?**

ಉ. ಗುರುವು ಹೇಳಿರುವುದನ್ನು ಕೇಳುವುದು.

**ವಿವರ :** ಗುರು ಸೇವೆಗಳಲ್ಲಿ ನಾಲ್ಕು ವಿಧ ಸೇವಗಳಿವೆ. 1. ಸ್ಥಾನ, 2. ಅಂಗ, 3. ಭಾವ, 4. ಆತ್ಮ ಸೇವೆಗಳು. ಮಂಟಪ ನಿಲ್ಲುವುದಕ್ಕೆ ನಾಲ್ಕು ಸ್ಥಂಭಗಳು ಹೇಗೆ ಅವಶ್ಯವೋ ಹಾಗೇ ಗುರುವೆನ್ನುವ ಮಂಟಪ ನಿಲ್ಲುವುದಕ್ಕೆ ನಾಲ್ಕು ಸೇವೆಗಳೆನ್ನುವ ಸ್ಥಂಭಗಳು ಅವಶ್ಯ. ಒಂದು ಸ್ಥಂಭ ಇಲ್ಲದಿದ್ದರೂ ಮಂಟಪದ ಮೇಲಿನ ಹೊದಿಕೆ ಹೇಗೆ ನಿಲ್ಲುವುದಿಲ್ಲವೋ ಹಾಗೇ ನಾಲ್ಕು ಸೇವೆಗಳಲ್ಲಿ ಯಾವೊಂದು ಸೇವೆ ಇಲ್ಲದಿದ್ದರೂ ಪ್ರಯೋಜನ ವಿಲ್ಲ. ಸ್ಥಾನ ಸೇವೆಗಿಂತಲೂ ಅಂಗ ಸೇವ ಬಹಳ ಕಷ್ಟವಾದದ್ದು. ಹಾಗೇ ಅಂಗ ಸೇವೆಗಿಂತಲೂ

ಭಾವಸೇವೆ ಇನ್ನೂ ಕಷ್ಟವಾದದ್ದು. ಅದೇ ವಿಧವಾಗಿ ಭಾವ ಸೇವೆಗಿಂತಲೂ ಆತ್ಮ ಸೇವೆ ಇನ್ನೂ ಕಠಿಣವಾದದ್ದು. ಆದ್ದರಿಂದ ಒಂದು ನೂರು ಜನ ಶಿಷ್ಯರು ಸ್ಥಾನ ಸೇವೆ ಮಾಡುವವರಿದ್ದರೇ ಅವರಲ್ಲಿ ಅಂಗಸೇವ ಮಾಡುವವರು 70 ಜನ ಮಾತ್ರ ಇರಬಹುದು. ಅಂಗಸೇವೆ ಮಾಡುವ 70 ಜನರಲ್ಲಿ ಭಾವಸೇವೆ ಮಾಡುವವರು 20 ಜನ ಮಾತ್ರ ಉಳಿಯುವರು. ಕೊನೆಗೆ ಭಾವಸೇವೆ ಮಾಡುವ 20 ಜನರಲ್ಲಿ ಆತ್ಮಸೇವೆ ಮಾಡುವವರು ಒಬ್ಬರು ಉಳಿಯುವುದು ಸಹ ಅಪರೂಪ. ಬಹಳ ಕಷ್ಟವಾದದ್ದು ಶಿಷ್ಯರಲ್ಲಿ ಅಪರೂಪವಾದದ್ದು ಆತ್ಮಸೇವೆ.

**572. (34) ಜೀವಾತ್ಮನಿಗೆ ಯಾವಾಗ ವಿಶ್ರಾಂತಿ ದೊರೆಯುತ್ತದೆ?**

ಉ. ನಿದ್ರಿಸುವಾಗ. ಯೋಗ ಮಾಡುವಾಗ.

**ವಿವರ :** ಜೀವಾತ್ಮನಿಗೆ ಶರೀರದಲ್ಲಿನ 24 ಭಾಗಗಳೊಂದಿಗೆ ಸಂಬಂಧವಿಲ್ಲದೆ ಇರುವಾಗ ವಿಶ್ರಾಂತಿ ಸಿಗುತ್ತದೆ. 24 ಭಾಗಗಳಲ್ಲಿ ಮನಸ್ಸು ಸಹ ಒಂದಾಗಿರುವುದರಿಂದ ಜೀವಿಗೆ ಯಾವ ವಿಷಯ ತಿಳಿಯದೆ ಹೋಗುವುದು. ಆ ವಿಧವಾಗಿ ನಿದ್ರಾವಸ್ಥೆಯಲ್ಲಿ ಸಿಗುತ್ತದೆ. ಆದ್ದರಿಂದ ನಿದ್ರೆ ಸಮಯದಲ್ಲಿ ಏನೂ ತಿಳಿಯದೆ ಜೀವಿಯು ವಿಶ್ರಾಂತಿ ಹೊಂದುವನು. ಅದೇ ವಿಧವಾಗಿ ಜ್ಞಾನಯೋಗದಲ್ಲಿ ಸಹ ಜೀವಿಗೆ ವಿಶ್ರಾಂತಿ ಹೊಂದಿ ಆತ್ಮನನ್ನು ತಿಳಿದುಕೊಳ್ಳುವನು. ಬ್ರಹ್ಮಯೋಗದಲ್ಲಿ ಮನಸ್ಸು ಕೆಲಸ ಮಾಡಿದರೂ ಶರೀರಗಳ ಮೇಲೆ ಕೆಲಸ ಮಾಡದೆ ಆತ್ಮ ವಿಷಯದ ಮೇಲೆ ಕೆಲಸ ಮಾಡುವುದು. ಆದ್ದರಿಂದ ಆ ಸಮಯದಲ್ಲಿ ಜೀವಿಗೆ ಆತ್ಮ ಸುಖ ಅನುಭವಕ್ಕೆ ಬರುತ್ತದೆ. ನಿದ್ರೆಯಲ್ಲಿ ಏನೂ ತಿಳಿಯದ ವಿಶ್ರಾಂತಿ ಯಾದರೆ ಬ್ರಹ್ಮಯೋಗದಲ್ಲಿ ಆತ್ಮನಲ್ಲಿ ಲೀನವಾದ ವಿಶ್ರಾಂತಿ ಸಿಗುತ್ತದೆ. ನಿದ್ರೆಯಲ್ಲಿ ಏನೂ ತಿಳಿಯದ ವಿಶ್ರಾಂತಿಗಿಂತಲೂ ಆತ್ಮನಲ್ಲಿ ಲೀನವಾದರೂ ವಿಶ್ರಾಂತಿಯೇ ದೊಡ್ಡದು. ಈ ವಿಧವಾಗಿ ಜೀವಿಗೆ ನಿದ್ರೆ, ಯೋಗದಲ್ಲಿ ಮಾತ್ರ ವಿಶ್ರಾಂತಿ ಸಿಗುವುದು.

**573. (35) ಶರೀರದಲ್ಲಿನ ನವರಂಧ್ರಗಳಲ್ಲಿ ಯಾವುವು ಮುಖ್ಯವಾಗಿರುವವು?**

ಉ. ಕಣ್ಣು ಕಿವಿ ಇವುಗಳ ನಾಲ್ಕು ರಂಧ್ರಗಳು ಮುಖ್ಯವಾದವು.

**ವಿವರ :** ಶರೀರದಲ್ಲಿ ಹೊರಗಿನ ಪ್ರಪಂಚ ಸಂಬಂಧ ಹೊಂದಿರುವವು ಜ್ಞಾನೇಂದ್ರಿಯಗಳು. ಅದರಲ್ಲಿ ಕಣ್ಣು ಕಿವಿ ಮೂಗು ಮೂರು ಮಾತ್ರ ರಂಧ್ರಗಳಾಗಿ ಇವೆ. ಅದರಲ್ಲಿ ಕಣ್ಣು ಕಿವಿ ಮುಖ್ಯವಾಗಿರುವವೆಂದು ಹೇಳಬಹುದು. ಕಣ್ಣು ಇಲ್ಲದಿದ್ದರೆ ಪ್ರಪಂಚ ದೃಷ್ಟಿಯೇ ತಿಳಿಯದು.

ಹಾಗೇ ಕಿವಿ ಇಲ್ಲದಿದ್ದರೆ ಕೇಳುವಿಕೆ ತಿಳಿಯದು. ದೃಷ್ಠಿ ಕೇಳುವಿಕೆ ತಿಳಿಯದೇ ಹೋದರೆ ನೂರಕ್ಕೆ ತೊಂಬತ್ತರಷ್ಟು ಪ್ರಪಂಚ ಸಂಬಂಧ ಕಿತ್ತು ಹೋಗುವುದು. ಆದ್ದರಿಂದ ಕಣ್ಣು ಕಿವಿ ರಂಧ್ರಗಳು ನವರಂಧ್ರಗಳಲ್ಲಿ ಮುಖ್ಯವಾಗಿರುವವೆಂದು ಹೇಳಬಹುದು.

## ಜ್ಞಾನ ಪರೀಕ್ಷೆ

**ಹಂಪಾಪುರ** **ದಿನಾಂಕ – 14–8–1998**

**574. (1) ನಿನ್ನ ಅಬ್ಬ (ತಂದೆ), ನಿನ್ನ ಅಬ್ಬ ಅಬ್ಬ (ತಾತ) ಯಾರು?**

ಉ. ಪರಮಾತ್ಮ.

**ವಿವರ :** ಅಬ್ಬ ಎಂದರೆ ತಂದೆ ಎಂದು ಅರ್ಥ. ನಿನ್ನ ಅಬ್ಬ ಅಬ್ಬ ಎಂದರೆ ನಿನ್ನ ತಂದೆಯ ತಂದೆ ಎಂದು ಅರ್ಥ. ಪ್ರಪಂಚಪರವಾಗಿ ಅಬ್ಬ ತಂದೆ ಆದಾಗ, ಅಬ್ಬ ಅಬ್ಬನನ್ನು ತಾತ ಎನ್ನುತ್ತಾರೆ. ಇನ್ನೂ ತಾತ ಅಬ್ಬನನ್ನು ಸಹ ಮುತ್ತಾತ ಎನ್ನುತ್ತಾರೆ. ತಂದೆ ತಾತ ಮುತ್ತಾತ ಬೇರೆ ಬೇರೆಯಾಗಿ ಇರುತ್ತಾ ಬೇರೆ ಬೇರೆ ಹೆಸರುಗಳನ್ನು ಹೊಂದಿದ್ದಾರೆ. ಆಧ್ಯಾತ್ಮಿಕ ಪರವಾಗಿ ತಂದೆ, ತಾತ, ಮುತ್ತಾತ ಮುವ್ವರು ಒಂದೇ ಯೆಂದು ತಿಳಿಯುತ್ತಿದೆ. ಹಾಗೇ ಅಮ್ಮ, ಅವ್ವ, ಅವ್ವನಿಗೆ ಅವ್ವ ಎಲ್ಲರೂ ಒಬ್ಬರೇ ಎಂದು ಸಹ ತಿಳಿಯುತ್ತಿದೆ. ಇದಕ್ಕೆ ಸೂತ್ರ ಭಗವದ್ಗೀತೆ ಗುಣತ್ರಯ ವಿಭಾಗಯೋಗದಲ್ಲಿ ಮೂರು ನಾಲ್ಕು ಶ್ಲೋಕಗಳಲ್ಲಿ ಪ್ರಕೃತಿ ಯೋನಿ ಸ್ವರೂಪವಾಗಿ, ಪರಮಾತ್ಮ ಬೀಜದಾತನಾಗಿ, ಸರ್ವ ಜೀವರಾಶಿಗಳು ಹುಟ್ಟುತ್ತಿವೆಯೆಂದು, ಪ್ರಪಂಚದಲ್ಲಿ ಯಾವ ರೂಪದಲ್ಲಿ, ಯಾವ ಜಾತಿಯಾಗಿ ಹುಟ್ಟಿದ ಜೀವರಾಶಿಗಾದರೂ ತಾಯಿ ಪ್ರಕೃತಿ ಆದಾಗ ತಂದೆ ಪರಮಾತ್ಮನೆಂದು ತಿಳಿಸಲಾಗಿದೆ. ಇದನ್ನನುಸರಿಸಿ ಪ್ರಪಂಚಪರವಾಗಿ ನಾವು ಹೇಗೆ ತಿಳಿದುಕೊಂಡರೂ ಇರುವ ಸತ್ಯದ ಪ್ರಕಾರ ಸರ್ವರಿಗು ತಂದೆ ಪರಮಾತ್ಮ. ಹಾಗೇ ಸರ್ವರಿಗೂ ತಾಯಿ ಪ್ರಕೃತಿ. ಈ ಸೂತ್ರದ ಪ್ರಕಾರ ನಿನ್ನ ತಂದೆಗೂ, ನಿನ್ನ ತಾತನಿಗೂ, ನಿನ್ನ ಮುತ್ತಾತನಿಗೂ ಎಲ್ಲರಿಗೂ ಒಬ್ಬನೇ ತಂದೆಯೆಂದು ತಿಳಿಯುತ್ತಿದೆ. ಆಧ್ಯಾತ್ಮಿಕ ಪರವಾಗಿ ತಂದೆ ಹೊರತು ತಾತ ಎನ್ನುವವನಿಲ್ಲ. ಹಾಗೇ ತಾಯಿ ಹೊರತು ಅವ್ವ ಎನ್ನುವುದು ಇಲ್ಲ. ಯಾರಿಗಾದರೂ ತಂದೆ ಪರಮಾತ್ಮ, ತಾಯಿ ಪ್ರಕೃತಿ.

**575. (2) ಆಯುವೊಂದರ ನಿಜವಾದ ಹೆಸರೇನು?**

ಉ. ವಾಯು.

**ವಿವರ :** ಮನುಷ್ಯನ ಶರೀರದಲ್ಲಿ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದು ಭಾಗಗಳು ಒಳಗೊಂಡಿವೆ. ಇವು ಶರೀರದಲ್ಲಿ ಇದ್ದು ಒಂದೊಂದು ಒಂದೊಂದು ಪ್ರತ್ಯೇಕತೆಯನ್ನು ಹೊಂದಿ, ಅವುಗಳ ಕೆಲಸಗಳನ್ನು ಅವು ನಿರ್ವಹಿಸುತ್ತಾ, ಶರೀರ ಆರೋಗ್ಯ ಅನಾರೋಗ್ಯಗಳಿಗೆ ಕಾರಣವಾಗಿದ್ದೂ, ಮನುಷ್ಯನ ಜೀವನವನ್ನು ಸಾಗಿಸುವಹಾಗೆ ಮಾಡುತ್ತಿವೆ. ಶರೀರದಲ್ಲಿ ಕಾಣಿಸದ ಖಾಲೀ ಪ್ರದೇಶವಾಗಿ ಜೀವಾತ್ಮನಿರುವಾಗ, ಆ ಜೀವಿಯ ಜೀವಿತಕಾಲವನ್ನು ಅಳತೆ ಮಾಡುವ ಮಾಪಕವಾಗಿ ವಾಯುವಿದೆ. ಎಣ್ಣೆಯನ್ನು ಅಳತೆ ಮಾಡಲು ಲೀಟರು, ಬಟ್ಟೆಯನ್ನು ಅಳತೆ ಮಾಡಲು ಮೀಟರು ಇದ್ದಹಾಗೇ ಒಂದು ಶರೀರದಲ್ಲಿನ ಜೀವಿಯ ಜೀವಿತಕಾಲವನ್ನು ಅಳೆಯುವುದಕ್ಕೆ ವಾಯುವು ಶ್ವಾಸ ಎನ್ನುವ ಅಳತೆ ಹೊಂದಿದೆ.

ಸೀರೆಯಾದರೆ ಇಷ್ಟು ಉದ್ದ, ಟವಲಾದರೆ ಇಷ್ಟೇ ಉದ್ದ, ಪಂಚೆಯಾದರೆ ಇಷ್ಟೇ ಉದ್ದ ಇರಬೇಕೆನ್ನುವ ಹಾಗೆ ಮನುಷ್ಯನಾದರೆ ಇಷ್ಟು ಕಾಲ, ನಾಯಿ ಇಷ್ಟು ಕಾಲ, ಸೊಳ್ಳೆ ಇಷ್ಟು ಕಾಲವೆಂದು ಅವುಗಳ ಜೀವನ ಕಾಲಗಳು ವ್ಯತ್ಯಾಸಗಳಿವೆ. ಹಾಗೇ ಒಂದೊಂದು ಜಾತಿಗೆ ಒಂದೊಂದು ವಿಧವಾಗಿ ಜೀವನ ಕಾಲವಿರುವಹಾಗೆ ತಿಳಿಯುತ್ತಿದೆ. ಮನುಷ್ಯನಿಗೆ ನೂರು ವರ್ಷ, ಎತ್ತಿಗೆ ಇಪ್ಪತ್ತು ವರ್ಷ, ಸೊಳ್ಳೆಗೆ ಏಳು ದಿನಗಳೆಂದು ಸ್ವಲ್ಪ ಮಟ್ಟಿಗೆ ಅವುಗಳ ಆಯುವು ನಿರ್ಣಯಿಸಲಾಗಿದ್ದರೂ ಅವುಗಳ ಕರ್ಮಾನುಸಾರ ಮನುಷ್ಯ ನೂರು ವರ್ಷ ಬದುಕುವನೆನ್ನುವ ನಂಬಿಕೆ ಇಲ್ಲ. ಹಾಗೇ ಸೊಳ್ಳೆ ಏಳು ದಿನಗಳು ಬದುಕುತ್ತದೆನ್ನುವ ನಂಬಿಕೆ ಇಲ್ಲ. ಕರ್ಮರೀತ್ಯ ಪ್ರಮಾದವಶಾತ್ತು ಮನುಷ್ಯ ಆರು ದಿನಗಳಿಗೆ ಸತ್ತುಹೋಗಬಹುದು. ಸೊಳ್ಳೆ ಮೂರು ದಿನಗಳಿಗೆ ಮರಣಿಸಬಹುದು.

ಸೂಕ್ಷ್ಮವಾಗಿ ನೋಡಿದರೆ ಪ್ರತಿಯೊಂದು ಮೊದಲೇ ನಿರ್ಣಯಿಸಲ್ಪಟ್ಟಿರುತ್ತದೆ. ಯಾರು ಎಷ್ಟು ಕಾಲ ಬದುಕಬೇಕೆನ್ನುವುದು ಸಹ ನಿರ್ಣಯಿಸಲಾಗಿದೆ. ಆ ನಿರ್ಣಯ ಶ್ವಾಸ ಎನ್ನುವ ಅಳತೆಯಿಂದ ಇದೆ. ಶ್ವಾಸಕ್ಕೆ ಆಧಾರ ರೂಪವಾಗಿರುವುದು ವಾಯು (ಗಾಳಿ). ಆದ್ದರಿಂದ ಪ್ರತಿ ಒಬ್ಬರಿಗೂ ಜೀವನ ಕಾಲವೊಂದರ ಉದ್ದ ವಾಯುವಿನಿಂದ ಶ್ವಾಸ ರೂಪದಲ್ಲಿ ನಿರ್ಣಯಿಸಲ್ಪಟ್ಟು ಇರುತ್ತದೆ. ಎಷ್ಟು ಶ್ವಾಸಗಳ ವಾಯು ಇರಬೇಕೋ ಕರ್ಮದಿಂದ ನಿರ್ಣಯಿಸಲ್ಪಟ್ಟಿರುತ್ತದೆ. ಮಾನವನ ಜೀವನ ಕಾಲ ವಾಯುವಿನಿಂದಲೇ

ನಿರ್ಣಯಿಸಲ್ಪಟ್ಟಿದೆ. ಆದ್ದರಿಂದ ಇಂತಹವನ ವಾಯು ಎಷ್ಟು ಎಂದು ಜ್ಯೋತಿಷ್ಯದಲ್ಲಿ ಪ್ರಶ್ನಿಸುವವರು. ಜೋತಿಷ್ಯ ಶಾಸ್ತ್ರದ ಪ್ರಕಾರ ಜನ್ಮ ಲಗ್ನಕ್ಕೆ ಎಂಟನೆಯ ಲಗ್ನದಲ್ಲಿ ಗ್ರಹಗಳ ಸ್ಥಿತಿ ಗತಿಗಳನ್ನನುಸರಿಸಿ ಇವನ ವಾಯು ಇಷ್ಟೇ ಇದೆಯೆಂದು ತೀರ್ಮಾನಿಸಿ ಹೇಳುತ್ತಿದ್ದರು. ಈ ವಿಧವಾಗಿ ಮನುಷ್ಯನ ಜೀವನಕಾಲವನ್ನು ನಿರ್ಣಯಿಸುವ ಅಳತೆಯಾದ ವಾಯು ಈದಿನ ಎಲ್ಲರ ಬಾಯಲ್ಲಿ ಆಯುವು ಎಂದು ಹೇಳಲಾಗುತ್ತಿದೆ. ಜ್ಯೋತಿಷ್ಯನ ಹತ್ತಿರ ಸಹ ವಾಯುವು ಎಂದು ಹೇಳದೇ ಆಯುವು ಎನ್ನುವ ಪದವಾಗಿ ಬದಲಾಗಿದೆ ಎಂದು, ಆಯುವು ಯೊಂದರ ನಿಜವಾದ ಹೆಸರು ವಾಯುವೆಂದು ತಿಳಿಯಬೇಕು.

**576. (3) ಭಗವದ್ಗೀತೆ ಒಟ್ಟು ಎಷ್ಟು ಅಧ್ಯಾಯಗಳಾಗಿ ಇದೆ?**

ಉ. ಹದಿನೇಳು.

**ವಿವರ :** ಭಗವಂತನು ಹೇಳಿರುವುದನ್ನು ಭಗವದ್ಗೀತೆ ಎನ್ನುತ್ತೇವೆ. ಭಗವದ್ಗೀತೆಯಲ್ಲಿ ಅರ್ಜುನನು ಹೇಳಿದ ವಿಷಾದ ಯೋಗವೆನ್ನುವ ಅಧ್ಯಾಯವನ್ನು ತೆಗೆದುಹಾಕಿದರೆ ಭಗವಂತನು ಹೇಳಿದ ಅಧ್ಯಾಯಗಳು ಒಟ್ಟು ಹದಿನೇಳು ಆಗುತ್ತವೆ. ಇದರ ಪ್ರಕಾರ ಭಗವಂತನು ಹೇಳಿದ ಗೀತೆ ಹದಿನೇಳು ಅಧ್ಯಾಯಗಳೇ ಇವೆಯೆಂದು ಹೇಳಬಹುದು. ಅರ್ಜುನನು ಹೇಳಿರುವುದು ಗೀತೆ ಅಲ್ಲವೆಂದು ತಿಳಿಯಬೇಕು.

**577. (4) ಶಿವ ಪೂಜ ಎಂದು ಯಾವುದನ್ನು ಕರೆಯುವರು?**

ಉ. ಶವ ಪೂಜೆಯನ್ನು.

**ವಿವರ :** ಪೂರ್ವದಲ್ಲಿ ಶವವನ್ನು ಶಿವವು ಎನ್ನುತ್ತಿದ್ದರು. ಹಾಗೆ ಏಕೆನ್ನುವವರೆಂದರೆ! ಮನುಷ್ಯನ ಶರೀರದಲ್ಲಿ ಪರಮಾತ್ಮ, ಆತ್ಮ, ಜೀವಾತ್ಮಗಳಿದ್ದಾರೆ. ಜೀವಾತ್ಮ, ಆತ್ಮ ಜೋಡಿ ಆತ್ಮಗಳಾದಾಗ ಪರಮಾತ್ಮ ಪ್ರತ್ಯೇಕವಾಗಿದೆ. ಜೀವ ಶರೀರಗಳಲ್ಲಿ ಮೂರು ಆತ್ಮಗಳಿದ್ದರೂ ಮರಣದಲ್ಲಿ ಆತ್ಮ, ಜೀವಾತ್ಮಗಳು ಮಾತ್ರ ಶರೀರವನ್ನು ಬಿಟ್ಟು ಹೋಗುತ್ತಿವೆ. ಹಾಗೆ ಹೋಗಿರುವವು ಮತ್ತೊಂದು ಕಡೆ ಮತ್ತೊಂದು ಶರೀರವನ್ನು ಆಶ್ರಯಿಸುತ್ತಿವೆ. ಪರಮಾತ್ಮ ಮಾತ್ರ ಮರಣಿಸಿದ ಶರೀರದಲ್ಲಿ ಸಹ ಮೊದಲಿನಂತೆಯೆ ಇದೆ. ಜೀವಾತ್ಮ ಆತ್ಮಗಳ ಹಿಂದೆ ಪರಮಾತ್ಮ ಹೋಗಿಲ್ಲ. ಏಕೆಂದರೆ ಪರಮಾತ್ಮ ಒಂದು ಕಡೆ ಇದ್ದು ಮತ್ತೊಂದು ಕಡೆ ಇಲ್ಲವೆನ್ನುವುದಕ್ಕೆ ಅವಕಾಶ ಇಲ್ಲ. ಅದು ಎಲ್ಲಾ ವ್ಯಾಪಿಸಿದೆ. ಶರೀರದೊಳಗೆ ಶರೀರದ ಹೊರಗೆ ಅಣುಅಣುವಿನಲ್ಲಿ ವ್ಯಾಪಿಸಿರುವುದು ಪರಮಾತ್ಮ, ಆದ್ದರಿಂದ ಅದು ಮತ್ತೊಂದು ಕಡೆ ಇಲ್ಲದೇ ಹೋದರೆ ತಾನೆ ಹೋಗುವುದಕ್ಕೆ ಅವಕಾಶವಿರುತ್ತದೆ. ಶರೀರದಲ್ಲಿನ ಜೀವಿಯು

ಆತ್ಮ ಹೋದರೂ ಪರಮಾತ್ಮ ಉಳಿದಿದೆ. ಮರಣಿಸಿದ ಶರೀರದಲ್ಲಿ ಜೀವಾತ್ಮ ಆತ್ಮ ಇಲ್ಲ. ಕೇವಲ ಸ್ವಚ್ಛವಾದ ಪರಮಾತ್ಮ ಒಂದೇ ಉಳಿದಿದೆ. ಆದ್ದರಿಂದ ಅದನ್ನು ಶಿವ ಎನ್ನುತ್ತಿದ್ದರು. ಶಿವ ಎಂದರೆ ಅಧಿಪತಿಯೆಂದು ಪರಮಾತ್ಮ ಎಂದು ತಿಳಿಯಬೇಕು. ಕ್ಷರಾಕ್ಷರರಾದ ಜೀವಾತ್ಮ ಆತ್ಮ ಇಲ್ಲದ ಶರೀರವನ್ನು ಹಿರಿಯರು ಶಿವವೆಂದು ಕರೆಯುತ್ತಾ ಆ ಶಿವವನ್ನು ಪೂಜಿಸುತ್ತಿದ್ದರು. ಅಂತ್ಯಕ್ರಿಯೆಗಳಿಗೆ ಮೊದಲು ಶವವನ್ನು, ಚಂದನ ಪುಷ್ಪಗಳಿಂದ ಅಲಂಕರಿಸಿ ಎಲ್ಲರೂ ನಮಸ್ಕರಿಸುತ್ತಿದ್ದರು. ಆ ಪ್ರಕ್ರಿಯೆ ಇವತ್ತಿಗೂ ನಡೆಯುತ್ತಿದೆ. ಅದನ್ನೇ ಶಿವಪೂಜೆ ಎನ್ನಬೇಕು. ಕಾಲಕ್ರಮದಲ್ಲಿ ಪದ ಬದಲಾವಣೆ ಯಾಗಿ ಶಿವಪೂಜೆಯನ್ನು ಶವಪೂಜೆ ಎನ್ನುತ್ತಿದ್ದೇವೆ.

**578. (5) ಅಗ್ನಿಗೆ ಸುಡುವುದು ಅತ್ಮನಾ, ಜೀವಾತ್ಮನಾ?**

ಉ. ಆತ್ಮ.

**ವಿವರ :** ಶರೀರದಲ್ಲಿ ಆತ್ಮ, ಜೀವಾತ್ಮ ಎರಡು ಇದ್ದರೂ ಅದರಲ್ಲಿ ಜೀವಾತ್ಮ ಮಾತ್ರ ಶಿರಸ್ಸು ಮೇಲಿನ ಭಾಗದಲ್ಲಿ, ಕಪಾಳಭಾಗದೊಳಗೆ ಇರುವ ಕಾಲ, ಕರ್ಮ, ಗುಣಚಕ್ರಗಳಲ್ಲಿ ಗುಣಚಕ್ರದಲ್ಲಿ ನಿವಾಸಿಸುತ್ತಿದೆ. ಶತ್ರುದುರ್ಭೇದ್ಯವಾದ ಕೋಟೆಯಲ್ಲಿ ರಾಜನು ಇದ್ದಹಾಗೆ ಜೀವಾತ್ಮ ಯಾರಿಗೂ ತಿಳಿಯದ ಕಡೆ, ಹೊರಗಿರುವ ಪಂಚಭೂತಗಳಿಗೆ ಸಿಗದ ಕಡೆ ನಿವಾಸವಾಗಿದೆ. ಇನ್ನು ಆತ್ಮ ಎಂದರೆ ಶರೀರವೆಲ್ಲಾ ವ್ಯಾಪಿಸಿ, ಚರ್ಮವೊಂದರ ಮೇಲಿನ ಅಂಚಿನವರೆಗು ಇದೆ. ಶರೀರ ಭಾಗಗಳಲ್ಲಿ ಪ್ರತಿಯೊಂದು ಕಡೆ ಇರುವುದು ಆತ್ಮ ಆದಾಗ, ಶರೀರದಲ್ಲಿ ಒಂದು ಮೂಲೆಯಲ್ಲಿ ಒಳಗಿರುವುದು ಜೀವಾತ್ಮ. ಆದ್ದರಿಂದ ಅಗ್ನಿ ಸುಡುವುದು ಹೊರಗಿನವರೆಗು ವ್ಯಾಪಿಸಿರುವ ಆತ್ಮವನ್ನೇ ಆಗಲಿ ಜೀವಾತ್ಮನಲ್ಲವೆಂದು ತಿಳಿಯುತ್ತದೆ. ಈ ನಮ್ಮ ಮಾತು ಕೆಲವರಿಗೆ ಅಸತ್ಯವಾಗಿ ತೋಚಿ ಭಗವದ್ಗೀತೆಯಲ್ಲಿ ಆತ್ಮ ಅಗ್ನಿಗೆ ಸುಡದು, ಕತ್ತಿಗೆ ತುಂಡಾಗದು, ನೀರಿಗೆ ತೋಯದು ಎನ್ನುವ ವಾಕ್ಯ ನೆನಪಿಗೆ ಬರಬಹುದು. ಭಗವದ್ಗೀತೆಯಲ್ಲಿನ ಮಾತು ನಿಜ ಆದರೆ ಶರೀರದಲ್ಲಿ ಮೂರು ಆತ್ಮಗಳಿವೆ. ಅಗ್ನಿಗೆ ಸುಡದಿರುವುದು, ಕತ್ತಿಗೆ ತುಂಡಾಗದಿರುವುದು ಯಾವ ಆತ್ಮವೆಂದು ಹೇಳಿದ್ದಾನೋ ವಿವರ ತಿಳಿದಿದೆಯಾ ಎಂದು ನಾವು ಕೇಳುತ್ತಿದ್ದೇವೆ. ಶರೀರದ ಮೂರು ಆತ್ಮಗಳಲ್ಲಿ ಎರಡು ಅಗ್ನಿಗೆ ಸುಡದೆ ಇರುವವು ಒಂದು ಸುಡುವುದು ಇದೆ. ಜೀವಾತ್ಮ ಪರಮಾತ್ಮರು ಅಗ್ನಿಗೆ ಸುಡುವುದಿಲ್ಲ, ಆತ್ಮ ಮಾತ್ರ ಅಗ್ನಿಗೆ ಸುಡುವುದೆಂದು ತಿಳಿಯುತ್ತಿದೆ. ಈ ವಿಷಯವಾಗಿ ಭಗವದ್ಗೀತೆಯಲ್ಲಿನ ಸಾಂಖ್ಯಯೋಗದಲ್ಲಿ ಇರುವ 23ನೇ ಶ್ಲೋಕ ನೋಡಿರಿ. ಅದು ನಮ್ಮಿಂದ ರಚಿಸಲಾದ **"ತ್ರೈತ ಸಿದ್ಧಾಂತ ಭಗವದ್ಗೀತೆ"**ಯನ್ನು ಓದಿರಿ.

**579. (6) 3000 ಸಂವತ್ಸರಗಳ ಹಿಂದೆ ನಿನಗೆ ತಿಳಿದ ಭಗವಂತನು ಯಾರು?**

ಉ. ಶ್ರೀ ಕೃಷ್ಣನು.

**ವಿವರ :** ಪರಮಾತ್ಮ ಅಂಶ ಮಾನವನಾಗಿ ಹುಟ್ಟುವುದನ್ನು ಭಗವಂತನು ಹುಟ್ಟಿದ್ದಾನೆ ಎನ್ನುತ್ತೇವೆ. ಪರಮಾತ್ಮ ಅಂಶ ಎಲ್ಲಿ ಹುಟ್ಟಿರುವುದು ಯಾರಿಗೂ ತಿಳಿಯದ ವಿಷಯವಾದ್ದರಿಂದ ಭಗವಂತನು ಯಾರೆನ್ನುವುದು ಅಗಮ್ಯಗೋಚರವಾದ ವಿಷಯವೇ. ಆದರೂ ಭಗವಂತನನ್ನು ತಿಳಿದುಕೊಳ್ಳುವುದಕ್ಕೆ ಒಂದು ಸೂತ್ರವಿದೆ. ಅದು ಏನೆಂದರೆ! ಎಲ್ಲಾದರೆ ಯಾರಿಂದ ಧರ್ಮಗಳು ಪುನಃ ತಿಳಿಯುತ್ತಿವೆಯೋ ಆತನನ್ನೇ ಭಗವಂತನಾಗಿ ಲೆಕ್ಕಿಸಲಾಗುತ್ತದೆ. ಹಾಗೆಂದು ಐದು ಸಾವಿರ ಸಂವತ್ಸರಗಳ ಕೆಳಗೆ ಹೇಳಿದ ಧರ್ಮಗಳು ನಮಗೆ ತಿಳಿದಿಲ್ಲವೆಂದುಕೊಳ್ಳಿ, ಆಗ ಬರೆಯಲಾದ ಧರ್ಮಗಳನ್ನು ಒಬ್ಬ ಗುರುವಾಗಿರುವ ವ್ಯಕ್ತಿ ವಿವರವಾಗಿ ಅರ್ಥವಾಗುವಹಾಗೆ ಎಷ್ಟೋ ಉಪಮಾನಗಳನ್ನು ಹೇಳಿ ತಿಳಿಸಿದ್ದಾನೆಂದುಕೊಳ್ಳಿ, ಆಗ ಆ ವ್ಯಕ್ತಿ ಭಗವಂತನಾಗುವನಾ ಎಂದು ಪ್ರಶ್ನೆ ಕೆಲವರಿಗೆ ಬರಬಹುದು. ಅದಕ್ಕೆ ಸಮಾಧಾನ ನಿರ್ಮಿತವಾಗಿರುವವುಗಳನ್ನು, ಪ್ರತಿಷ್ಠಿಸಿ ಇರುವುದನ್ನು ಓದಿ ಹೇಳುವವನು, ಮೊದಲೇ ತಾನು ತಿಳಿದುಕೊಂಡು ದಾರಾಳವಾಗಿ ಹೇಳುವವನು, ಗುರುವಾಗಲಿ ಭಗವಂತನಾಗಲಿ ಆಗಲಾರನು. ಧರ್ಮಗಳು ಜೀರ್ಣಿಸಿ ಹೋಗುವುದೆಂದರೆ ಒಂದು ಕಡೆ ಇದ್ದು ಇನ್ನೊಂದು ಕಡೆ ಇಲ್ಲದಿರುವುದೆಂದಲ್ಲ ಮತ್ತು ಕೆಲವರಿಗೆ ತಿಳಿದು ಬಹಳ ಜನಕ್ಕೆ ತಿಳಿಯದೆ ಹೋಗುವುದಲ್ಲ. ಒಂದು ಪುಸ್ತಕ ರೂಪದಲ್ಲಿ ಇದ್ದು ಇರುವುದಲ್ಲ. ಭೂಮಿ ಮೇಲೆ ಎಲ್ಲಾದರೆ ಧರ್ಮಗಳು ತಿಳಿಯದೆ ಹೋಗಿರುವಾಗ ಅವುಗಳಿಗೆ ಗ್ಲಾನಿ (ಮುಪ್ಪು) ಏರ್ಪಟ್ಟ ಹಾಗೆಂದು ತಿಳಿಯುತ್ತಿದೆ. ಯಾರಿಗೂ ತಿಳಿಯದೆ ಯಾವ ಗ್ರಂಥರೂಪದಲ್ಲಾಗಲಿ ಇಲ್ಲದೆ ಹೋಗಿರುವಾಗ ಅವುಗಳನ್ನ ಸ್ವತಃವಾಗಿ ತಿಳಿಸುವವನು ಭಗವಂತನು. ಯಾರಿಗೂ ತಿಳಿಯದೆ ಹೋಗಿರುವಾಗ ಅವು ಪರಮಾತ್ಮನಿಗೆ ಮಾತ್ರ ತಿಳಿದಿರುತ್ತವೆ. ಪರಮಾತ್ಮನಿಗೆ ಸಂಬಂಧಿಸಿದ ಧರ್ಮಗಳು ಆದ್ದರಿಂದ ಅವು ಆತನಿಗೆ ತಿಳಿದಿರುತ್ತವೆ. ಆದ್ದರಿಂದ ಆತನೆ ಭೂಮಿ ಮೇಲೆ ಮನುಷ್ಯನಾಗಿ ಹುಟ್ಟಬೇಕಾಗುತ್ತದೆ. ಹಾಗೆ ಹುಟ್ಟಿದವನು ಶ್ರೀಕೃಷ್ಣನು. ಆದ್ದರಿಂದ ಆತನನ್ನು ಭಗವಂತನೆಂದು ತಿಳಿದಿದ್ದೇವೆ. ಧರ್ಮಗಳನ್ನು ಆಧಾರ ಮಾಡಿಕೊಂಡು ಭಗವಂತನನ್ನು ತಿಳಿಯಬಹುದು.

**580. (7) ಶ್ರೀಕೃಷ್ಣಾಷ್ಟಮಿಗೆ ಮುಂದೆ ಹಿಂದೆ ಇರುವ ದಿನಗಳು ಯಾವುದರ ಗುರುತು?**

ಉ. ಅಜ್ಞಾನ, ಜ್ಞಾನ.

**ವಿವರ :** ಅಮಾವಾಸ್ಯೆ ದಿಂದ ಪೌರ್ಣಮಿ ವರೆಗು 15 ದಿನಗಳು, ಹಾಗೇ ಪೌರ್ಣಮಿ ದಿನದಿಂದ ಅಮಾವಾಸ್ಯೆಯ ವರೆಗು 15 ದಿನಗಳಿರುವುದು ಎಲ್ಲರಿಗೂ ತಿಳಿದ ವಿಷಯವೇ. ಶ್ರೀಕೃಷ್ಣನು ಹುಟ್ಟಿರುವುದು ಪೌರ್ಣಮಿಯಿಂದ ಅಮಾವಾಸ್ಯೆ ವರೆಗಿರುವ 15 ದಿನಗಳಾದ ಬಹುಳ ಪಕ್ಷದಲ್ಲಿ, ಬಹುಳ ಪಕ್ಷದಲ್ಲಿನ 15 ದಿನಗಳಲ್ಲಿ ಮಧ್ಯ ದಿನವಾದ ಅಷ್ಟಮಿ ದಿನದಲ್ಲಿ ಆತನ ಜನ್ಮ ನಡೆದಿದೆ. ಪಕ್ಷದಲ್ಲಿ ಮೊದಲನೆ ದಿನವಾದ ಪಾಡ್ಯ ದಿಂದ ಏಳು ದಿನಗಳ ನಂತರ ಮಧ್ಯೆ ಅಷ್ಟಮಿ ಇದೆ. ಹಾಗೇ ಅಷ್ಟಮಿ ನಂತರ ಏಳು ದಿನಗಳು ಇವೆ. 7+1+7=15 ಹದಿನೈದನ್ನು ಎರಡು ಸಮಭಾಗಗಳಾಗಿ ಮಾಡಬೇಕೆಂದರೆ ಮಧ್ಯದಲ್ಲಿ ಒಂದು ದಿನವನ್ನು ಬಿಟ್ಟು ಮುಂದೆ 7 ದಿನಗಳು ಹಿಂದೆ 7 ದಿನಗಳಾಗಿ ವಿಭಜಿಸಿ ಕೊಳ್ಳಬೇಕಾಗುತ್ತದೆ. ಮಧ್ಯದಲ್ಲಿ ಬಿಟ್ಟ ಒಂದು ದಿನವನ್ನು ಅಷ್ಟಮಿಯಾಗಿ ಗುರುತಿಸಿ ಕೊಳ್ಳಬೇಕು. ಕೃಷ್ಣನು ಮಧ್ಯ ದಿನವಾದ ಅಷ್ಟಮಿ ದಿನವೆ ಹುಟ್ಟುವುದರಲ್ಲಿ ದೊಡ್ಡ ವಿಶೇಷವಿದೆ. ಅದೇನೆಂದರೆ!

ಭಗವಂತನಾದ ಶ್ರೀಕೃಷ್ಣನು ಇತ್ತ ಜ್ಞಾನಕ್ಕು ಅತ್ತ ಅಜ್ಞಾನಕ್ಕು ಸಂಧಿಯಂತವನು. ಅಜ್ಞಾನದಿಂದ ಜ್ಞಾನಕ್ಕೆ, ಹಾಗೇ ಜ್ಞಾನದಿಂದ ಅಜ್ಞಾನಕ್ಕೆ ಹೋಗುವುದಕ್ಕೆ ಆತನು ಎರಡಕ್ಕೂ ಮಧ್ಯೆ ಕೇಂದ್ರದಂತಿರುವವನು. ಎಷ್ಟೋ ಜ್ಞಾನಿಗಳು ಸಹಿತ ಆತನನ್ನು ನೋಡಿ ಅಜ್ಞಾನದ ಕಡೆ, ಹಾಗೇ ಅಜ್ಞಾನಿಗಳು ಜ್ಞಾನದ ಕಡೆ ಹೋಗಿದ್ದಾರೆ. ಎಷ್ಟೋ ಜ್ಞಾನಿಗಳೆಂದುಕೊಂಡವರು, ಆತನ ಜೀವನದಲ್ಲಿ ನಡೆದುಕೊಂಡ ಪದ್ಧತಿಗಳನ್ನು ಆಚರಣೆಗಳನ್ನು ನೋಡಿ ಆತನು ಹೇಳಿದ ಗೀತೆ ಚೆನ್ನಾಗೇ ಇದೆ ಆದರೆ, ಆತನ ಆಚರಣೆ ನಮಗೆ ಇಷ್ಟವಾಗಿಲ್ಲ. ನಡವಳಿಕೆ ಮುಖ್ಯ ಅಲ್ಲವೆ! ಒಳಗಿನ ಗುಣಗಳನ್ನನುಸರಿಸಿಯೇ ಅಲ್ಲವೆ ಯಾರಾದರೂ ಆಚರಿಸುವುದು. ಆತನು ಎಷ್ಟೇ ಗೀತೆಯನ್ನು ಹೇಳಿದ್ದರೂ ಮಾಡಿದ ಕೆಲಸಗಳನ್ನನುಸರಿಸಿ ನೋಡಿದರೆ ಬೋಧನೆಗಳನ್ನು ಹೇಳಿದಷ್ಟು ಉತ್ತಮನಲ್ಲವೆಂದು ತಿಳಿಯುತ್ತಿದೆಯೆಂದು ಹೇಳುತ್ತಿದ್ದಾರೆಂದರೆ ಅವರಿಗಿರುವ ಜ್ಞಾನ ನಿಷ್ಪ್ರಯೋಜನವಾದಂತೆಯೇ. ಶ್ರೀಕೃಷ್ಣನು ಏನು ಹೇಳಿದ್ದಾನೋ ಕೆಲವರು ಅರ್ಥ ಮಾಡಿಕೊಂಡಿಲ್ಲ. ಅಂತಹದರಲ್ಲಿ ಶ್ರೀಕೃಷ್ಣನು ಹೇಳಿದ ಅಸಲಾದ ಸ್ವಚ್ಛವಾದ ಜ್ಞಾನ ಬೇರೆವಿಧವಾಗಿ ಅರ್ಥವಾಗಿ ನಡವಳಿಕೆಗೆ ಭಿನ್ನವಾಗಿ ತೋಚಿದಾಗ ಅವರು ಕೃಷ್ಣನಿಗೆ ಭಿನ್ನವಾಗಿ ಹೋಗಬಲ್ಲರು. ಶ್ರೀಕೃಷ್ಣನು ಜ್ಞಾನಕೇಂದ್ರವಾದಾಗ ಆತನಿಗೆ ಭಿನ್ನವಾಗಿ ಹೋಗುವವರು ಅಜ್ಞಾನದ ಕಡೆ ಹೋಗುತ್ತಿದ್ದಾರೆಂದೇ ತಿಳಿಯಬೇಕು.

ಹಾಗೇ ಶ್ರೀಕೃಷ್ಣನನ್ನು ನೋಡಿ ಆತನು ಹೇಳಿರುವುದು ಮಾಡಿರುವುದು ಮಾಡುತ್ತಿರುವುದು ಎಲ್ಲಾ ಒಂದೇಯೆಂದು ತಿಳಿದವರು ಜ್ಞಾನದ ಕಡೆ ಸಾಗಿಹೋಗಬಲ್ಲರು.

ಆತನನ್ನು ನೋಡಿ ಇರುವ ಕಡೆಯಿಂದ ಕೆಲವರು ಜ್ಞಾನದ ಕಡೆಗೆ, ಕೆಲವರು ಅಜ್ಞಾನದ ಕಡೆಗೆ ಹೋಗುತ್ತಿದ್ದಾರೆ. ಆದ್ದರಿಂದ ಶ್ರೀಕೃಷ್ಣನು ಜ್ಞಾನಕ್ಕೂ ಅಜ್ಞಾನಕ್ಕೂ ಮಧ್ಯೆ ಇರುವವನೆಂದು ತಿಳಿಯುವಹಾಗೆ ಅಷ್ಟಮಿ ದಿನವನ್ನೇ ಆಯ್ಕೆ ಮಾಡಿಕೊಂಡುಕೊಂಡು ಹುಟ್ಟಿದ್ದಾನೆ. ಆದ್ದರಿಂದ ಶ್ರೀಕೃಷ್ಣಾಷ್ಟಮಿಗೆ ಮುಂದೆ ಹಿಂದೆ ಇರುವ ದಿನಗಳು ಅಜ್ಞಾನಕ್ಕೂ ಜ್ಞಾನಕ್ಕೂ ಚಿಹ್ನೆಗಳೆಂದು ತಿಳಿಯಬೇಕು.

**581. (8) ದಕ್ಷಿಣಾಯನದಲ್ಲಿ ಸತ್ತುಹೋದ ಭಗವಂತನಿಗೆ ಮೋಕ್ಷ ಬರುತ್ತದಾ ಬರುವುದಿಲ್ಲವಾ?**

ಉ. ಬರುತ್ತದೆ.

**ವಿವರ :** ಈ ಪ್ರಶ್ನೆ ಹೇಗೆ ಇದೆಯೆಂದರೆ ಜೇನು ನೊಣಕ್ಕೆ ಜೇನಿನ ರುಚಿ ತಿಳಿದಿದೆಯಾ ತಿಳಿದಿಲ್ಲವಾ ಎನ್ನುವಂತಿದೆ. ಅದರ ಹೆಸರೇ ಜೇನುನೊಣ ಅದಕ್ಕೆ ಜೇನಿನ ರುಚಿ ಏಕೆ ತಿಳಿಯದು. ಹಾಗೇ ಭಗವಂತನು ಪರಮಾತ್ಮ ಅಂಶ ಎಂದು ಮೊದಲೇ ಹೇಳಿಕೊಂಡಿದ್ದೇವೆ. ಪರಮಾತ್ಮ ಎಂದರೂ ಮೋಕ್ಷವೆಂದರೂ ಒಂದೇ. ಮೋಕ್ಷದಲ್ಲಿನ ಭಾಗವೇ ಭಗವಂತನಾಗಿರುವಾಗ ಆತನಿಗೆ ಪುನಃ ಮೋಕ್ಷಬರುವುದೇನು. ಆತನೇ ಮೋಕ್ಷವಾಗಿ ಇದ್ದಾನೆ ಆದುದರಿಂದ ಭಗವಂತನು ಯಾವಾಗ ಮರಣಿಸಿದರೂ ಆತನು ಮೋಕ್ಷವನ್ನೆ ಹೊಂದುವನು. ಸಾಧಾರಣ ವ್ಯಕ್ತಿಗಳಲ್ಲಿ ಯೋಗಿಗಳಾಗಿ ಇರುವವರು ಮೋಕ್ಷವನ್ನು ಹೋಂದುವುದಕ್ಕೆ ಮರಣಕಾಲ ನಿರ್ಣಯಿಸಲ್ಪಟ್ಟಿದೆ. ಯೋಗಿಗಳಿಗೆ ಹೊರತು ಆ ಕಾಲ ಯಾರಿಗೂ ವರ್ತಿಸುವುದಿಲ್ಲ. ಸಾಧಾರಣ ಮನುಷ್ಯನು ಯಾವಾಗ ಮರಣಿಸಿದರೂ ಜನ್ಮಕ್ಕೇ ಹೋಗುವನು. ಹಾಗೆ ಭಗವಂತನು ಯಾವಾಗ ಸತ್ತುಹೋದರೂ ಮೋಕ್ಷಕ್ಕೆ ಹೋಗುವನು. ಇನ್ನು ಉಳಿದಿರುವುದು ಯೋಗಿಗಳು ಮಾತ್ರ ಅವರಿಗೇ ಉತ್ತರಾಯಣ, ಶುಕ್ಲಪಕ್ಷ, ಹಗಲು, ಬಿಸಿಲು ಸಮಯ ಎನ್ನುವ ಕಾಲ ಅನ್ವಯಿಸುತ್ತದೆಂದು ತಿಳಿಯಬೇಕು. ಈ ಲೆಕ್ಕ ಪ್ರಕಾರ ಭಗವಂತನು ದಕ್ಷಿಣಾಯಣದಲ್ಲಿ ಮರಣಿಸಿದರೂ ಮೋಕ್ಷವನ್ನೇ ಸೇರುವನು.

**582. (9) ಅಂಧಕಾರ ರಾತ್ರಿ ಮಾಯೆಯಾ? ಪರಮಾತ್ಮನಾ ಯಾವುದಕ್ಕೆ ಗುರುತು?**

ಉ. ಪರಮಾತ್ಮ.

**ವಿವರ :** ರಾತ್ರಿ ಎಂದರೆ ತ್ರಿಗುಣರಹಿತವಾದದ್ದೆಂದು ಅರ್ಥ. ರಾತ್ರಿ ಎನ್ನುವ ಪದ ಸಂಸ್ಕೃತ, ಹಿಂದೀ ಮೊದಲಾದ ಭಾಷೆಗಳಲ್ಲಿ ಇದೆ. ಕನ್ನಡ ಭಾಷೆಯಲ್ಲಿಯೂ ಸಹ

ರಾತ್ರಿ ಎನ್ನುವ ಪದ ಇರುವುದು ಗರ್ವಿಸಬೇಕಾದ ವಿಷಯ. **"ರಾ"** ಎಂದರೆ ರಹಿತವೆಂದು, **"ತ್ರಿ"** ಎಂದರೆ ಮೂರು ಗುಣಗಳೆಂದು ಅರ್ಥವಿದೆ. ಅದರ ಪ್ರಕಾರ ಮೂರು ಗುಣಗಳು ಇಲ್ಲದಿರುವುದು ರಾತ್ರಿ ಎಂದು ತಿಳಿಯಬೇಕು. ಆದ್ದರಿಂದಲೇ ರಾತ್ರಿ ಸಮಯದಲ್ಲಿ ಬಹಳ ಜನ ಮೂರು ಗುಣಗಳನ್ನು ಬಿಟ್ಟು ನಿದ್ರೆಯೊಳಗೆ ಹೋಗುತ್ತಿದ್ದಾರೆ. ರಾತ್ರಿ ಸಮಯವೆಂದರೆ ನಿದ್ರೆ ಸಮಯವೆಂದು **"ತ್ರಿ"** ಗುಣಗಳು ಇಲ್ಲದ ಸಮಯವೆಂದು ಅರ್ಥ ಮಾಡಿಕೊಳ್ಳಬೇಕು. ಇದು ಒಂದು ವಿಧಾನವಾದಾಗ, ಎರಡನೆಯ ವಿಧಾನದ ಪ್ರಕಾರ ಪರಮಾತ್ಮನಿಗೆ ಹಗಲು ರಾತ್ರಿ ಸಹ ಇವೆ. ಮನುಷ್ಯರಿಗೆ 12 ಗಂಟೆಗಳ ಕಾಲ ಹಗಲು, ಹಾಗೇ 12 ಗಂಟೆಗಳ ಕಾಲ ರಾತ್ರಿ ಆದಾಗ, ಪರಮಾತ್ಮನಿಗೆ 1000 ಯುಗಗಳು ಹಗಲು, ಹಾಗೇ 1000 ಯುಗಗಳು ರಾತ್ರಿಯಾಗಿ ಇವೆ. ಪರಮಾತ್ಮ ಹಗಲಲ್ಲಿ ಪ್ರಪಂಚವಿದೆ. ಪರಮಾತ್ಮ ರಾತ್ರಿಯಲ್ಲಿ ಪ್ರಪಂಚವಿಲ್ಲದ ತಿಳಿಯದಸ್ಥಿತಿ ಇರುತ್ತದೆ. ಮನುಷ್ಯರ ಹಗಲಲ್ಲಿಯೂ ಸಹ ಪ್ರಪಂಚ ಕಾಣಿಸುತ್ತಿದೆ. ರಾತ್ರಿ ನಿದ್ರೆಯೊಳಗೆ ಹೋದಾಗ ಪ್ರಪಂಚ ಕಾಣಿಸಲಿಲ್ಲ. ಮನುಷ್ಯರ ಹಗಲಲ್ಲಿ ಗುಣಗಳು ಕೆಲಸ ಮಾಡುತ್ತಿವೆ. ಹಾಗೆ ಪರಮಾತ್ಮ ಹಗಲಲ್ಲಿ ಸಹ ಪ್ರಪಂಚವಿದೆ. ಮನುಷ್ಯರ ರಾತ್ರಿಯಲ್ಲಿ ಮೂರು ಗುಣಗಳು ಇಲ್ಲ. ಹಾಗೇ ಪರಮಾತ್ಮ ರಾತ್ರಿಯಲ್ಲಿ ಪ್ರಪಂಚವೇ ಇಲ್ಲದೆ ಭವಿಷ್ಯತ್, ವರ್ತಮಾನ, ಭೂತ ಎನ್ನುವ ಮೂರು ಕಾಲಗಳು ಇಲ್ಲ. ಮೂರು ಗುಣಗಳು ಇಲ್ಲದ, ಮೂರು ಕಾಲಗಳು ಇಲ್ಲದ ರಾತ್ರಿ ಪರಮಾತ್ಮ ಸ್ವರೂಪವಾದದ್ದೆಂದು, ಮೂರು ಗುಣಗಳು, ಮೂರು ಕಾಲಗಳು ಇರುವ ಹಗಲನ್ನು ಮಾಯ ಸ್ವರೂಪವಾದದ್ದೆಂದು ತಿಳಿಯಬೇಕು. ಇದನ್ನನುಸರಿಸಿ ಅಂಧಕಾರ ರಾತ್ರಿ ಪರಮಾತ್ಮ ಚಿಹ್ನೆಯೆಂದು ಉತ್ತರ ಹೇಳಬೇಕು.

**583. (10) ಶ್ರೀಕೃಷ್ಣನ ತಲೆಯ ಮೇಲಿನ ನವಿಲುಗರಿಯ ಮಧ್ಯೆ ಅಕ್ಷರ ಯಾವುದು?**

ಉ. ಆತ್ಮ.

**ವಿವರ :** ಶ್ರೀಕೃಷ್ಣನು ಇಸ್ಲಾಮ್‌ಮತದ ಪ್ರಕಾರ ಪೈಗಂಬರ್, ಕ್ರೈಸ್ತ ಮತದ ಪ್ರಕಾರ ಸುವಾರ್ತೆ ದೂತ, ಇಂದೂ ಮತದ ಪ್ರಕಾರ ಅವದೂತ. ಮೂರು ಮತಗಳಲ್ಲಿನ ಪದಗಳಲ್ಲಿ ದೇವರ ವಿಷಯಗಳನ್ನು ತಂದು ಹೇಳುವವನೆಂದು ಅರ್ಥವಿದೆ. ಅಂತಹವನು ತಾನು ಹೇಗಿರುವುದು ತನ್ನನ್ನು ನೋಡಿ ಇತರರು ಹೇಗೆ ನಡೆದುಕೊಳ್ಳಬೇಕೆನ್ನುವುದು ತನ್ನ ಸಂದೇಶಗಳಲ್ಲಿ ತಿಳಿಸಿ ಹೇಳುತ್ತಿರುವನು. ಅಂತಹ ಸಂದೇಶಗಳಲ್ಲಿ ತಾನು ಧರಿಸಿದ ನವಿಲುಗರಿ ಸಹ ಇದೆ. ನವಿಲುಗರಿಯಲ್ಲಿ ಅದೆಂತಹ ಸಂದೇಶವಿದೆಯೆಂದು ತಿಳಿದು ಕೊಳ್ಳುವುದರಲ್ಲಿ ಉದಾಸೀನತೆಯನ್ನು ಮಾಡಬಾರದು. ಅದರಲ್ಲಿ ಬಹಳ ದೊಡ್ಡ

ಅರ್ಥದೊಂದಿಗೆ ಕೂಡಿಕೊಂಡಿರುವ ಸಂದೇಶವಿದೆ. ನವಿಲುಗರಿಯನ್ನು ಚೆನ್ನಾಗಿ ಪರೀಕ್ಷಿಸಿ ನೋಡಿದರೆ ಅದರಲ್ಲಿ ನಾಲ್ಕು ಭಾಗಗಳಾಗಿ ಇರುವ ಬಣ್ಣಗಳು ಕಾಣಿಸುತ್ತವೆ. ಬಣ್ಣಗಳ ಬೇಧಗಳನ್ನನುಸರಿಸಿ ಮಧ್ಯೆದಲ್ಲಿರುವ ಬಣ್ಣ ಮಾತ್ರ ಗಾಢವಾಗಿ ಮೂರಕ್ಕಿಂತಲೂ ಚೆನ್ನಾಗಿ ಕಾಣಿಸುವಹಾಗೆ ಇರುತ್ತದೆ. ನಾಲ್ಕು ಬಣ್ಣಗಳಲ್ಲಿ ಹೊರಗಿನಿಂದ ಮೊದಲನೆಯದು ತಾಮಸ ಗುಣವೆಂದು, ಎರಡನೆಯದು ರಾಜಸ ಗುಣವೆಂದು, ಮೂರನೆಯದು ಸಾತ್ವಿಕ ಗುಣವೆಂದು, ಕೊನೆಯಲ್ಲಿ ಮಧ್ಯದಲ್ಲಿ ಕಾಣಿಸುತ್ತಿರುವ ಕಪ್ಪುವರ್ಣದ ಗುರುತು ಆತ್ಮನೆಂದು ತಿಳಿಯಬೇಕು. ಭಗವದ್ಗೀತೆಯಲ್ಲಿ ಚಾತುರ್ವರ್ಣ್ಯಂ ಎನ್ನುವ ಪದಕ್ಕೆ ಈ ನಾಲ್ಕು ವರ್ಣಗಳು ಸರಿಹೋಗುತ್ತವೆ. ಈ ನಾಲ್ಕು ವರ್ಣಗಳನ್ನು ಅನುಸರಿಸಿಯೇ ಮನುಷ್ಯರನ್ನು ತಾಮಸರು, ರಾಜಸರು, ಸಾತ್ವಿಕರು, ಯೋಗಿಗಳು ಎಂದು ನಾಲ್ಕು ಭಾಗಗಳಾಗಿ ದೇವರು ವಿಭಜಿಸಿದ್ದಾನೆ. ಗರಿಯಲ್ಲಿನ ಮಧ್ಯೆಬಣ್ಣ ಮನುಷ್ಯರಲ್ಲಿ ಯೋಗಿಗಳನ್ನು, ಕ್ಷರಾಕ್ಷರ ಆತ್ಮಗಳಲ್ಲಿ ಅಕ್ಷರವಾದ ಆತ್ಮನನ್ನು ತಿಳಿಸುತ್ತಿದೆ. ಮೂರು ಆತ್ಮಗಳಲ್ಲಿ ನಾಶರಹಿತವಾದ ಆತ್ಮನನ್ನು ತಿಳಿಸುವ ಗುರುತೇ ಮಧ್ಯ ಇರುವ ಬಣ್ಣ ಎಂದು ನೆನಪಿಟ್ಟುಕೊಳ್ಳಬೇಕು.

**584. (11) ಜೀವಾತ್ಮ, ಆತ್ಮ, ಪರಮಾತ್ಮರಲ್ಲಿ ಮೊದಲನೆಯ ಅಕ್ಷರ ಯಾವುದು**?

ಉ. ಆತ್ಮ.

**ವಿವರ :** ಮೂರು ಆತ್ಮಗಳಲ್ಲಿ ಅಕ್ಷರ ಒಂದೇ ಒಂದು ಆತ್ಮಕ್ಕೆ ಅನ್ವಯಿಸುತ್ತದೆ. ಕ್ಷರ ಎಂದರೆ ನಾಶನವಾಗುವುದೆಂದು. ಅಕ್ಷರ ಎಂದರೆ ನಾಶನವಾಗದಿರುವುದು. ಎರಡಕ್ಕೂ ಅತೀತವಾದದ್ದು ಕ್ಷರಾಕ್ಷರಗಳಿಗೆ ಸಂಬಂಧವಿಲ್ಲದ್ದು ಪರಮಾತ್ಮ. ಜೀವಾತ್ಮ ಮರಣದಲ್ಲಿ ನಾಶನವಾಗದೆ ಕೇವಲ ಶರೀರಗಳನ್ನು ಬದಲಿಸುತ್ತಿರುತ್ತದೆ. ಆದರೆ ಮೋಕ್ಷದಲ್ಲಿ ಮಾತ್ರ ಜೀವಾತ್ಮ ಪೂರ್ತಿ ನಾಶವಾಗುತ್ತದೆ. ಆತ್ಮ ಎನ್ನುವುದು ಜೀವಾತ್ಮನೊಂದಿಗೆ ಎಲ್ಲ ವೇಳೆಯಲ್ಲಿ ಇದ್ದರೂ ನಾಶಹೊಂದುವುದಲ್ಲ. ಜೀವಾತ್ಮನಿಗೆ ಕರ್ಮ ಸಂದಾನವಾಗಿದ್ದು ಜೀವಿಸುವಹಾಗೆ ಮಾಡುತ್ತಾ, ಅದು ಮುಗಿದುಹೋದ ತಕ್ಷಣವೇ ಜೀವಿಯು ನಾಶವಾಗುವುದಕ್ಕೆ ದಾರಿ ಕಲ್ಪಿಸುತ್ತಿದೆ. ಆತ್ಮಕ್ಕೆ ಕರ್ಮ ಸಂಧಾನವಿಲ್ಲ. ನಾಶನವೆನ್ನುವುದು ಇಲ್ಲ. ಆದ್ದರಿಂದ ಮೂರು ಆತ್ಮಗಳನ್ನು ಕ್ರಮವಾಗಿ ಕ್ಷರ, ಅಕ್ಷರ, ಪುರುಷೋತ್ತಮರೆಂದಿದ್ದಾರೆ. ಮೂರು ಆತ್ಮಗಳಲ್ಲಿ ಮೊದಲನೆ ಅಕ್ಷರವಾಗಲಿ, ಕೊನೆಯ ಅಕ್ಷರವಾಗಲಿ, ಆತ್ಮವೇ ಆಗುತ್ತಿದೆ. ಪುರುಷೋತ್ತಮನು ಎಲ್ಲದಕ್ಕೂ ಅತೀತನು. ಜೀವಾತ್ಮ ನಾಶನವಾಗುವ ಕ್ಷರನು. ಹೇಗೆ ಲೆಕ್ಕ ಹಾಕಿದರೂ ಆತ್ಮವೇ ಅಕ್ಷರನು.

**585. (12) ಜ್ಞಾನಪರವಾಗಿ ನಿನಗೆ ಒಬ್ಬನು ಮಾಮ ಆದರೆ, ನಿನ್ನ ಹೆಂಡತಿಗೆ ಏನಾಗುತ್ತಾನೆ?**

ಉ. ಮಾಮ ಆಗುತ್ತಾನೆ.

**ವಿವರ :** ಪ್ರಪಂಚ ಪರವಾಗಿ ಒಬ್ಬನಿಗೆ ಮತ್ತೊಬ್ಬನು ವರಸೆಗೆ ಮಾವನಾದರೆ ಅವನ ಹೆಂಡತಿಗೆ ತಂದೆಯಾಗಲಿ, ಚಿಕ್ಕಪ್ಪನಾಗಲಿ, ದೊಡ್ಡಪ್ಪನಾಗಲಿ ಆಗುತ್ತಾನೆ. ಪ್ರಪಂಚ ಪರವಾಗಿ ಒಂದು ಕೇಂದ್ರಕ್ಕೆ ಮತ್ತೊಂದು ಕೇಂದ್ರ ಇಷ್ಟು ದೂರವಿದೆಯೆಂದು ಹೇಳಬಹುದು. ಹಾಗೇ ಒಬ್ಬನಿಗೆ ಬಂಧುತ್ವ ದೂರಗಳನ್ನು ಲೆಕ್ಕಿಸಿ ತಂದೆ ವರಸೆ, ಮಾಮ ವರಸೆ ಎಂದು ಎರಡು ವರಸೆಗಳು ನಿರ್ಣಯಿಸುತ್ತಿದ್ದೇವೆ. ಆದರೆ ಜ್ಞಾನಪರವಾಗಿ ಒಂದರಿಂದಲೇ ಎಲ್ಲಾ ಹುಟ್ಟಿವೆ, ಆದ್ದರಿಂದ ಒಂದಕ್ಕೆ ಎಲ್ಲರೂ ಒಂದೇ ವರಸೆ ಕೆಳಗೆ ಬರುತ್ತಿದ್ದಾರೆ. ಪರಮಾತ್ಮ ಎಲ್ಲರಿಗೂ ತಂದೆ ಆದಾಗ, ಪ್ರಕೃತಿ ಎಲ್ಲರಿಗೂ ತಾಯಿಯಾಗಿ ಇದೆ. ಪ್ರಪಂಚದಲ್ಲಿ ಗಂಡ ಹೆಂಡತಿ ಇಬ್ಬರಿಗೂ ಒಬ್ಬನೇ ತಂದೆ ಪರಮಾತ್ಮ ಎಂದು ಗೀತೆಯಲ್ಲಿಯೂ ಸಹ ಹೇಳಲಾಗಿದೆ. ಹಾಗೆ ಜ್ಞಾನಪರವಾಗಿ ಚಂದ್ರನು ನಿನಗೆ ಮಾಮ ಆದರೆ, ನಿನ್ನ ಹೆಂಡತಿಗೂ ಸಹ ಮಾಮನೇ ಆಗುತ್ತಾನೆ. ಆದ್ದರಿಂದಲೇ ಎಲ್ಲರಿಗೂ ತಂದೆ ಪರಮಾತ್ಮ, ಎಲ್ಲರಿಗೂ ಮಾಮ ಚಂದಮಾಮ ಎಂದು ಹೇಳಬಹುದು. ಈ ಸಾಂಪ್ರದಾಯದ ಪ್ರಕಾರ ಗಂಡ ಹೆಂಡತಿಯನ್ನು ಸೋದರ ಭಾವದಿಂದ ಮದುಮಗ, ಮದುಮಗಳು ಎನ್ನುತ್ತಿದ್ದಾರೆ. ಮಗಳು, ಮಗ ಅನ್ನುವುದರಲ್ಲಿ ಅರ್ಥ ತಿಳಿದಿದೆ ಅಲ್ಲವೆ! ಈ ವಿಧವಾಗಿಯೇ ನಿನ್ನ ತಾಯಿ, ನಿನ್ನ ಮಾಮ, ನಿನ್ನ ತಂದೆಯನ್ನು ಗುರ್ತಿಸಿರಿ.

**586. (13) ಸಾಯಿಸಲ್ಪಡುವವನು, ಸಾಯುವವನು ಯಾರು?**

ಉ. ಜೀವಾತ್ಮ, ಆತ್ಮ.

**ವಿವರ :** ನಮ್ಮ ಶರೀರದಲ್ಲಿ ಮೂರು ಆತ್ಮಗಳಿವೆಯೆಂದು ತಿಳಿದುಕೊಂಡಿದ್ದೇವೆ. ಅದರಲ್ಲಿ ಮರಣ ಆತ್ಮ, ಜೀವಾತ್ಮಗಳಿಗೆ ಇದೆ. ಪರಮಾತ್ಮನಿಗೆ ಯಾವುದು ಇಲ್ಲ. ಶರೀರದಲ್ಲಿ ಇರುವ ಆತ್ಮ ಶರೀರವೆಲ್ಲಾ ವ್ಯಾಪಿಸಿಕೊಂಡಿದೆ. ಜೀವಾತ್ಮ ಶಿರಸ್ಸಲ್ಲಿ ಒಂದು ಕಡೆ ಮಾತ್ರವಿರುತ್ತದೆ. ಏನು ನಡೆದರೂ ಹೊರಗಿನಿಂದ ಆತ್ಮದಿಂದ ನಡೆಯುವುದನ್ನು ಮಾತ್ರ ಅನುಭವಿಸುವುದು ಜೀವಿಯ ಕೆಲಸ, ಎಲ್ಲಾ ಮಾಡುವುದು ಆತ್ಮ ಕೆಲಸ. ಯಾವ ಅಪಾಯ ನಡೆದರೂ ಮೊದಲು ಶರೀರದಲ್ಲಿನ ಆತ್ಮನಿಗೆ ಸೇರುವುದು. ನಂತರ ಒಳಗಿನ ಜೀವಾತ್ಮದವರೆಗು ಹೋಗುವುದು. ಆದ್ದರಿಂದ ಮೊದಲು ಸಾಯುವವನು ಆತ್ಮನೆಂದು,

ನಂತರ ಆತ್ಮನಿಂದ ಸಾಯಿಸಲ್ಪಡುವವನು ಜೀವಾತ್ಮನೆಂದು ತಿಳಿಯಬೇಕು. ಇಬ್ಬರೂ ಸಾಯುವವರೇ ಆದರೂ ಸಾಯುವವನು, ಸಾಯಿಸಲ್ಪಡುವವನು ಎಂದು ಅವರ ಸ್ಥಿತಿಗತಿಗಳನ್ನು ಅನುಸರಿಸಿ ಹೇಳಬೇಕಾಗಿದೆ.

**587. (14) ನಾಲಿಗೆಯಲ್ಲಿ ರುಚಿ ಗ್ರಾಹಿತವಾಗಿ ಇರುವುದು ಜೀವಾತ್ಮನಾ, ಆತ್ಮನಾ, ಪರಮಾತ್ಮನಾ?**

ಉ. ಆತ್ಮ.

**ವಿವರ :** ಶರೀರದ ತಲೆಯಲ್ಲಿ ಒಂದುಕಡೆ ಇದ್ದು, ಬಂದಿರುವ ಅನುಭವಗಳನ್ನು ಅನುಭವಿಸುವವನು ಜೀವಾತ್ಮ. ಆದ್ದರಿಂದ ಜೀವಾತ್ಮನಿಗೂ ನಾಲಿಗೆಯಲ್ಲಿನ ರುಚಿಗೂ ಯಾವ ಸಂಬಂಧವೂ ಇಲ್ಲ. ಪರಮಾತ್ಮ ಏನೂ ಅಲ್ಲದವನು. ಆದ್ದರಿಂದ ಪರಮಾತ್ಮನಿಗೂ ಸಂಬಂಧವಿಲ್ಲ. ಇನ್ನು ಶರೀರವೆಲ್ಲಾ ವ್ಯಾಪಿಸಿ ಎಲ್ಲದಕ್ಕೂ ಶಕ್ತಿಯನ್ನು ಕೊಟ್ಟು ಆಡಿಸುತ್ತಿರುವುದು ಆತ್ಮ. ನಾಲಿಗೆಯಲ್ಲಿನ ರುಚಿಯನ್ನು ಗ್ರಹಿಸುವ ಶಕ್ತಿಯಾಗಿ ಇರುವುದು ಸಹ ಆತ್ಮನೇ ಎಂದು ಹೇಳಬಹುದು.

**588. (15) ಆತ್ಮನನ್ನು, ಜೀವಾತ್ಮನನ್ನು ಸೇರಿಸುವುದು ಯಾವುದು?**

ಉ. ಪರಮಾತ್ಮ.

**ವಿವರ :** ಶರೀರದಲ್ಲಿ ಮೂರು ಆತ್ಮಗಳಿವೆಯೆಂದು ಹೇಳಿಕೊಂಡಿದ್ದೇವೆ. ಅದರಲ್ಲಿ ಆತ್ಮನಿಗೂ, ಜೀವಾತ್ಮನಿಗೂ ಬೇರೆ ಬೇರೆ ಕೆಲಸಗಳಿವೆ. ಅವರ ಕೆಲಸಗಳನ್ನನುಸರಿಸಿ, ಇರುವಂತಹ ಆಕಾರವನ್ನನುಸರಿಸಿ, ಜೀವಾತ್ಮ ಆತ್ಮಗಳು ಬೇರೆಯಾಗಿವೆಯೆಂದು ಹೇಳಬಹುದು. ಆಕಾರವಿಲ್ಲದ್ದು, ಕೆಲಸಗಳಿಲ್ಲದ್ದು, ನಿರ್ಧಿಷ್ಟವಾಗಿ ಹೇಳಲಾರದ್ದು ಆದ ಪರಮಾತ್ಮ ಅಣುವಣುವಿನಲ್ಲಿ ವ್ಯಾಪಿಸಿಕೊಂಡಿದೆ. ಅದು ಆತ್ಮನಲ್ಲೂ, ಜೀವಾತ್ಮನಲ್ಲೂ ಸಹ ವ್ಯಾಪಿಸಿಕೊಂಡಿದೆ. ಜೀವಾತ್ಮ ಮತ್ತು ಆತ್ಮರು ಬೇರೆ ಬೇರೆಯಾಗಿ ಇದ್ದು ಒಂದರಲ್ಲೊಂದು ವ್ಯಾಪಿಸಿಕೊಂಡಿಲ್ಲ. ಪರಮಾತ್ಮ ಮಾತ್ರ ಎರಡರಲ್ಲೂ ವ್ಯಾಪಿಸಿ ಇರುವುದರಿಂದ, ಆತ್ಮನನ್ನು ಜೀವಾತ್ಮನನ್ನು ಸೇರಿಸುವುದಾಗಿ ಇದೆಯೆಂದು ಹೇಳಬಹುದು.

**589. (16) ಗುರುಗಳ ಕೆಲಸ ಸ್ವಾಮಿ ಕಾರ್ಯವಾ, ಸ್ವಕಾರ್ಯವಾ?**

ಉ. ಸ್ವಕಾರ್ಯ.

**ವಿವರ :** ಆತ್ಮ ಜ್ಞಾನವನ್ನು ಬೋಧಿಸುವವರೆಲ್ಲರನ್ನು ಗುರುಗಳಾಗಿ ಭಾವಿಸುವುದು ಪರಿಪಾಟವಾಗಿದೆ. ಆದರೆ ಎಲ್ಲರೂ ಗುರುಗಳಲ್ಲವೆನ್ನುವವಾದ ನಮ್ಮದು. ಗುರುಗಳಲ್ಲಿ ಬೋಧಕರು, ಗುರುಗಳು ಎನ್ನುವ ಎರಡು ವಿಧಗಳಾಗಿದ್ದಾರೆಂದು ಹೇಳಬಹುದು. ಲಕ್ಷಜನ ಬೋಧಕರಲ್ಲಿ ಒಬ್ಬನು ಗುರುವಾಗಿ ಇರುವುದು ಸಹ ಅಪರೂಪವೆಂದು ಹೇಳಬಹುದು. ಒಬ್ಬರು ಹೇಳಿದ್ದನ್ನಾಗಲಿ, ಒಬ್ಬರು ಬರೆದಿದ್ದನ್ನಾಗಲಿ ತಿರುಗಿ ಹೇಳುವವನು ಬೋಧಕನು ಎನ್ನುವ ಸೂತ್ರದ ಪ್ರಕಾರ, ಎಲ್ಲರೂ ಬೋಧಕರೇ ಆಗುತ್ತಾರೆ. ಅದರ ಪ್ರಕಾರ ಪರಮಾತ್ಮನೇ ಭಗವಂತನಾಗಿ ಬಂದು ಹೇಳಿದಾಗ, ಆತನೇ ನಮಗೆ ಗುರುವಾಗುತ್ತಾನೆ. ಎಲ್ಲರಿಗೂ ಗುರುವಾದ ಭಗವಂತನನ್ನು ಜಗದ್ಗುರು ಎನ್ನುವುದು ಸಹ ನಡೆಯುತ್ತಿದೆ. ಗುರುವು ಆತ್ಮಸ್ವರೂಪನಾದ್ದರಿಂದ ಗುರುವಿನ ಕೆಲಸ ಸ್ವಾಮಿಕಾರ್ಯವಲ್ಲ. ನಮ್ಮಲ್ಲಿಯೂ ಸಹ ಆತ್ಮ ಇದೆ, ಅದರ ಕೆಲಸವನ್ನೇ ಮಾಡುತ್ತಿದ್ದೇವೆನ್ನುವ ಭಾವದಿಂದ ಮಾಡುವುದರಿಂದ ಆತ್ಮ ಕಾರ್ಯವೆ ಆಗುತ್ತದೆ. ಆದ್ದರಿಂದ ಸ್ವಂತ ಕಾರ್ಯವೇ ಆಗುತ್ತದೆ. ಅದೇ ಬೋಧಕನ ಕೆಲಸವಾದರೆ ಸ್ವಾಮಿ ಕಾರ್ಯವಾಗುತ್ತದೆ.

**590. (17) ಭಗವಂತನ ಶರೀರದಲ್ಲಿ ಆತ್ಮ ಇದೆಯಾ?**

ಉ. ಇಲ್ಲ.

**ವಿವರ :** ಸಾಧಾರಣ ಮನುಷ್ಯನ ಶರೀರದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮರಿರುವುದು ಸಹಜ. ಆದರೆ ಭಗವಂತನಾಗಿ ಹುಟ್ಟಿರುವವನ ಶರೀರದಲ್ಲಿ ಜೀವಾತ್ಮ ಆತ್ಮಗಳಿರುವುದಿಲ್ಲ. ಏಕೆಂದರೆ ಪರಮಾತ್ಮ ವಿಶ್ವವೆಲ್ಲಾ ವ್ಯಾಪಿಸಿಕೊಂಡಿರುವಾಗ, ಅದರಲ್ಲಿನ ಸ್ವಲ್ಪ ಭಾಗ ಮಾನವ ಆಕಾರದಲ್ಲಿ ಜನ್ಮಿಸಿದಾಗ, ಆ ಜನ್ಮವನ್ನು ಭಗವಂತನೆಂದು ಕರೆಯುತ್ತಿದ್ದೇವೆ. ಭಗವಂತನು ಪರಮಾತ್ಮ ಅಂಶವಾಗಿ ಕರ್ಮಗಳಿಲ್ಲದವನಾಗಿ ಇರುವುದರಿಂದ ಜೀವಾತ್ಮ ಅಲ್ಲ. ಜೀವಾತ್ಮನಿರುವಾಗ ಜೊತೆಯಾಗಿ ಆತ್ಮ ಇರುತ್ತದೆ. ಜೀವಾತ್ಮನಿಲ್ಲದಿರುವಾಗ ಆತ್ಮ ಸಹ ಇರುವುದಿಲ್ಲ. ಭಗವಂತನ ಶರೀರದಲ್ಲಿ ಜೀವಾತ್ಮನಾಗಿ, ಆತ್ಮನಾಗಿ, ಪರಮಾತ್ಮನೇ ನಟಿಸುತ್ತಿರುವನು. ಕೆಲವು ಸಮಯಗಳಲ್ಲಿ ಪರಮಾತ್ಮನಾಗಿ, ಸ್ವಲ್ಪ ಕಾಲ ಆತ್ಮನಾಗಿ, ಬಹಳ ಕಾಲ ಜೀವಾತ್ಮನಾಗಿ ಪರಮಾತ್ಮ ಭಗವಂತನ ಶರೀರದಲ್ಲಿ ಇರುವನು. ಆದ್ದರಿಂದ ಭಗವಂತನ ಶರೀರದಲ್ಲಿ ಪ್ರತ್ಯೇಕಿಸಿ ಆತ್ಮ, ಜೀವಾತ್ಮಗಳು ಇಲ್ಲ.

**591. (18) ಒಬ್ಬರಿಗೆ ತಾಯಿಯಾಗಿ, ಒಬ್ಬರಿಗೆ ಸೋದರಿಯಾಗಿ, ಒಬ್ಬರಿಗೆ ಹೆಂಡತಿಯಾಗಿ ಇರುವುದು ಯಾರು? ಯಾರಿಗೆ?**

ಉ. ತಾಯಿಯಾಗಿ ಜೀವಾತ್ಮನಿಗೂ, ಸೋದರಿಯಾಗಿ ಆತ್ಮನಿಗೂ, ಹೆಂಡತಿಯಾಗಿ ಪರಮಾತ್ಮನಿಗೂ ಇರುವುದು ಪ್ರಕೃತಿ.

**ವಿವರ :** ಕಾಲ ಪರಿಮಿತಿ ಇಲ್ಲದೆ ಎಲ್ಲದಕ್ಕು ಅತೀತವಾಗಿ, ಎಲ್ಲದಕ್ಕು ಅಧಿಪತಿಯಾಗಿ ಇರುವುದು ಪರಮಾತ್ಮ. ಅದರ ನಂತರ ಅದರಿಂದಲೇ ಹುಟ್ಟಿಸಲಾಗಿರುವವೆ ಸಮಸ್ತವು. ಅವುಗಳಲ್ಲಿ ಮೊಟ್ಟಮೊದಲು ಸೃಷ್ಠಿಸಲಾಗಿರುವುದು ಪ್ರಕೃತಿ. ಪ್ರಕೃತಿ ನನಗೆ ಪತ್ನಿಯಾಗಿ ಇದೆಯೆಂದು, ನಾನು ಬೀಜದಾತನಾಗಿ ಇದ್ದೇನೆಂದು, ಸರ್ವ ಜೀವಿಗಳಿಗೂ ತಾಯಿ ಪ್ರಕೃತಿಯಾದಾಗ ನಾನು ತಂದೆಯೆಂದು, ಭಗವದ್ಗೀತೆಯಲ್ಲಿ ಪರಮಾತ್ಮನೇ ಸ್ವತಃವಾಗಿ ತಿಳಿಸಿರುವುದರಿಂದ ಪರಮಾತ್ಮನಿಗೆ ಹೆಂಡತಿಯಾಗಿ, ಜೀವಾತ್ಮನಿಗೆ ತಾಯಿಯಾಗಿ ಪ್ರಕೃತಿ ಇದೆಯೆಂದು ತಿಳಿಯುತ್ತಿದೆ. ಪರಮಾತ್ಮ ತನ್ನಿಂದ ಆತ್ಮನನ್ನು ಸಹ ಬಿಡುಗಡೆ ಮಾಡಿ ಜೀವಾತ್ಮಗಳಿಗೆ ಜೊತೆಯಾಗಿ ಇಟ್ಟಿರುವುದರಿಂದ, ಪ್ರಕೃತಿಯೊಂದಿಗೆ ಸಹ ಹುಟ್ಟುವುದರಿಂದ, ಆತ್ಮನಿಗೆ ಪ್ರಕೃತಿ ಸೋದರಿಯಾಗಿದೆ. ಪ್ರಕೃತಿ ಆತ್ಮದೊಂದಿಗೆ ಸಹ ಹುಟ್ಟುವುದರಿಂದ ಆತ್ಮನಿಗೆ ಸೋದರಿ, ಜೀವಾತ್ಮನಿಗೆ ತಾಯಿ, ಪರಮಾತ್ಮನ ಬೀಜವನ್ನು ಭರಿಸುವುದಾದ್ದರಿಂದ ಪರಮಾತ್ಮನಿಗೆ ಹೆಂಡತಿಯಾಗಿ ಪ್ರಕೃತಿಯು ಇದೆಯೆಂದು ಹೇಳಬಹುದು.

**592. (19) ಮೋಕ್ಷವನ್ನು ಹೊಂದುವುದಕ್ಕೆ ಇರುವ ವಿಧಾನಗಳೆಷ್ಟು? ಒಂದಾ, ಎರಡಾ, ಮೂರಾ?**

ಉ. ಎರಡು ಮತ್ತು ಒಂದು, ಒಟ್ಟು ಮೂರು ಇವೆ.

**ವಿವರ :** ಜೀವ ಶರೀರ ಬಂಧದಿಂದ ಬಿಡುಗಡೆ ಹೊಂದುವುದಕ್ಕೆ ವಿಧಾನಗಳು ಎರಡು ಯಾವಾಗಲೂ, ಒಂದು ಅಪರೂಪವಾಗಿ ಒಟ್ಟು ಮೂರು ಇವೆ. ಒಂದು ಶರೀರದಲ್ಲಿನ ಆತ್ಮನನ್ನು ತಿಳಿದುಕೊಂಡು, ಜ್ಞಾನಾಗ್ನಿ ಸಮುಪಾರ್ಜನೆಯಿಂದ ಇರುವ ಕರ್ಮವನ್ನು ನಾಶ ಮಾಡುವುದರಿಂದ ಲಭಿಸುವುದು. ಅದನ್ನೇ **"ಬ್ರಹ್ಮಯೋಗ"** ವಿಧಾನ ಎನ್ನುತ್ತಾರೆ. ಎರಡನೆಯದು ಶರೀರದಲ್ಲಿನ ಯಂತ್ರಾಗವೆಲ್ಲಾ ತಿಳಿದು, ಅದರಲ್ಲಿನ ಅಹಂಕಾರವೊಂದರ ಕೆಲಸವನ್ನು ನಿಲ್ಲಿಸಿ, ಕೆಲಸ ಮಾಡುತ್ತಿದ್ದರೆ ಮುಂಬರುವ ಕರ್ಮ ಬಾರದೆ ಸುಟ್ಟು ಹೋಗುವುದು. ಅದನ್ನೇ **"ಯಜ್ಞಕರ್ಮ"** ವಿಧಾನ ಅಥವಾ **"ಕರ್ಮಯೋಗ"** ವಿಧಾನವೆನ್ನುತ್ತಾರೆ. ಈ ಎರಡೂ ಎಲ್ಲರಿಗೂ ತಿಳಿದಿರುವವೆ. ಯಾರಾದರೂ ಆಚರಿಸುವುದಕ್ಕೆ ಗೀತೆಯಲ್ಲಿ ತಿಳಿಸಿದ್ದಾರೆ. ಇನ್ನು ಮೂರನೆಯ ವಿಧಾನ ಅಪರೂಪವಾದದ್ದು. ಅದನ್ನೇ ಸೂಕ್ಷ್ಮದಲ್ಲಿ ಮೋಕ್ಷವೆಂದು ಸಹ ಕರೆದಿದ್ದಾರೆ. ಅದನ್ನೇ **"ಭಕ್ತಿಯೋಗವೆಂದು"** ಸಹ

ಹೇಳಿದ್ದಾರೆ. ಪರಮಾತ್ಮ ಭೂಮಿ ಮೇಲೆ ಭಗವಂತನಾಗಿ ಇದ್ದಾಗ, ಆತನನ್ನು ಇಂತಹವನೆಂದು ಗುರುತಿಸುವುದೇ ಮೂರನೆಯ ವಿಧಾನ. ಹಾಗೆ ಗುರುತಿಸುವುದರಿಂದ, ಉಳಿದ ಎರಡು ಯೋಗಗಳೊಂದಿಗೆ ಸಂಬಂಧವಿಲ್ಲದೇ ಮೋಕ್ಷವನ್ನು ಹೊಂದಬಹುದು. ಉದಾಹರಣೆಗೆ ಶ್ರೀಕೃಷ್ಣನನ್ನು ಭಗವಂತನಾಗಿ ಭೀಷ್ಮನು ಗುರುತಿಸುವುದರಿಂದ, ಭೀಷ್ಮನು ಕರ್ಮ ಬ್ರಹ್ಮಯೋಗಗಳನ್ನು ಆಚರಿಸದಿದ್ದರೂ, ಆ ಜನ್ಮದಲ್ಲೇ ಮೋಕ್ಷ ಹೊಂದಿದ್ದಾನೆ. ಇದನ್ನೇ ಭಕ್ತಿಯೋಗವೆಂದು, ಮೋಕ್ಷ ಹೊಂದುವುದಕ್ಕೆ ಮನುಷ್ಯನಿಗೆ ಈ ವಿಧವಾಗಿ ಮೂರು ಮಾರ್ಗಗಳು ಇವೆಯೆಂದು ಹೇಳಿಕೊಳ್ಳಬಹುದು.

**593. (20) ಜ್ಞಾನ ಬೇಕೆಂದುಕೊಳ್ಳುವವರಿಗೆ ಇರಬೇಕಾಗಿರುವುದು ಏನು?**

ಉ. ಶ್ರದ್ಧೆ.

**ವಿವರ :** ದೇವರ ಜ್ಞಾನ ಬೇಕೆಂದುಕೊಳ್ಳುವವರಿಗೆ ಮುಖ್ಯವಾಗಿ ಇರಬೇಕಾಗಿರುವುದು ಶ್ರದ್ಧೆ **"ಶ್ರದ್ಧಾವಾನ್ ಲಭತೇ ಜ್ಞಾನಂ"** ಎಂದು ಭಗವದ್ಗೀತೆಯಲ್ಲಿ ಸಹ ದೇವರೇ ಹೇಳಿದ್ದಾನೆ. ಶ್ರದ್ಧೆ ಎಷ್ಟಿದ್ದರೆ ಅಷ್ಟು ಜ್ಞಾನ ಲಭಿಸುತ್ತದೆ. ಶ್ರದ್ಧೆ ಸ್ವಲ್ಪವಿದ್ದರೆ ಪ್ರಯೋಜನವಿಲ್ಲ. ಶ್ರದ್ಧೆಯನ್ನನುಸರಿಸಿ ಜ್ಞಾನ ಎನ್ನುವ ಸೂತ್ರದ ಪ್ರಕಾರ, ಎಷ್ಟು ಶ್ರದ್ಧೆ ಇದ್ದರೆ ಅಷ್ಟು ಜ್ಞಾನ ಲಭಿಸುತ್ತದೆ.

## ಜ್ಞಾನ ಪರೀಕ್ಷೆ

**ಮಾಲ್ಯವಂತ (ಊರು)** **ದಿನಾಂಕ–13–09–1998**

**594. (1) ವಿದ್ಯೆಗಳಲ್ಲಿ ಮುಖ್ಯವಾದ ವಿದ್ಯೆ ಯಾವುದು?**

ಉ. ಬ್ರಹ್ಮವಿದ್ಯೆ.

**ವಿವರ :** ಪ್ರಪಂಚದಲ್ಲಿ ಚತುಷ್ಷಷ್ಟಿ (64) ವಿದ್ಯೆಗಳು ಇವೆಯೆಂದು ನಾಣ್ಣುಡಿ ಇದೆ. ಪ್ರಪಂಚದಲ್ಲಿ ಎಷ್ಟು ವಿದ್ಯೆಗಳಿದ್ದರೂ ಎಲ್ಲದಕ್ಕಿಂತ ದೊಡ್ಡದು, ಉತ್ತಮವಾದದ್ದು, ಬೆಲೆಕಟ್ಟಲಾಗದ್ದು ಒಂದು ಇದೆ. ಅದೇ ಬ್ರಹ್ಮವಿದ್ಯೆ. ಎಲ್ಲಾ ವಿದ್ಯೆಗಳನ್ನು ಎರಡು ಭಾಗಗಳಾಗಿ ವಿಭಜಿಸಬಹುದು. ಎಲ್ಲಾ ವಿದ್ಯೆಗಳು ಕೂಳಿಗೋಸ್ಕರವೇ ಆದರೆ, ಬ್ರಹ್ಮವಿದ್ಯೆ ಮಾತ್ರ ಮುಕ್ತಿಗೋಸ್ಕರ ಇದೆ. ಆತ್ಮಜ್ಞಾನ ಇಲ್ಲದ ಜೀವನ ಹುತ್ತದಲ್ಲಿನ ಗೆದ್ದಲಿಗೆ ಸಮಾನವೆಂದು

ವೇಮನಯೋಗಿ ಹೇಳಿದಾಗ, ವಾಸನೆ ಇಲ್ಲದ ಹೂವಿಗೆ ಸಮಾನವೆಂದು ಮತ್ತೆ ಕೆಲವರು ಹೇಳಿದ್ದಾರೆ. ಈಗಿನ ಮನುಷ್ಯರು ಬ್ರಹ್ಮವಿದ್ಯೆ ಎಂದರೆ ಏನೋ ತಿಳಿಯದ ಸ್ಥಿತಿಯಲ್ಲಿ ಇದ್ದು, ಕೂಳಿಗೋಸ್ಕರ ಉಪಯೋಗವಾಗುವ ವಿದ್ಯೆಗಳ ಸಮುಪಾರ್ಜನೆಯಲ್ಲಿ ಯುಕ್ತ ವಯಸ್ಸೆಲ್ಲಾ ಕಳೆಯುತ್ತಾ, ನಂತರ ಆ ವಿದ್ಯೆಗಳಿಂದ ಕೆಲವರು ಬದುಕುತ್ತಿದ್ದಾರೆ, ಕೆಲವರು ಬದುಕದೆ ಹೋಗುತ್ತಿದ್ದಾರೆ. ಕೂಳಿಗೋಸ್ಕರ ವಿದ್ಯೆಗಳು ಅವಶ್ಯಕವೇ ಆದರೂ, ಆತ್ಮಜ್ಞಾನ ಕ್ಕೋಸ್ಕರ ಬ್ರಹ್ಮವಿದ್ಯೆ ಇನ್ನೂ ಮುಖ್ಯವಾದುದು. ಎಲ್ಲಾ ವಿದ್ಯೆಗಳಲ್ಲಿಲ್ಲದ ತೃಪ್ತಿ, ಶಾಂತಿ ಒಂದೇ ಒಂದು ಬ್ರಹ್ಮವಿದ್ಯೆಯಲ್ಲಿ ಇದೆ. ಆದ್ದರಿಂದ ಅದು ಎಲ್ಲರಿಗೂ ಮುಖ್ಯವಾಗಿದೆ.

**595. (2) ಮನಸ್ಸು ವೊಂದರ ಸ್ಥಾನಯಾವುದು?**

ಉ. ಬ್ರಹ್ಮನಾಡಿ.

**ವಿವರ :** ಶರೀರದಲ್ಲಿನ 25 ಭಾಗಗಳಲ್ಲಿ ಪ್ರತಿಯೊಂದಕ್ಕೂ ನಿರ್ಧಿಷ್ಟವಾದ ಕೆಲಸ, ಆಕಾರ, ನಿವಾಸಿಸುವ ಸ್ಥಳಗಳು ಇವೆಯೆಂದು ಶಾಸ್ತ್ರಬದ್ಧ ಸೂತ್ರವಿದೆ. ಅದರ ಪ್ರಕಾರ ಮನಸ್ಸಿಗೆ ಆಕಾರ, ಕೆಲಸ, ನಿವಶಿಸುವ ಸ್ಥಳ ಇವೆ. ಈ ಪ್ರಶ್ನೆಯಲ್ಲಿ ಸ್ಥಾನವೊಂದರ ಪ್ರಸ್ತಾವನೆ ಬಂದಿದೆ, ಆದ್ದರಿಂದ ಮನಸ್ಸು ಎಲ್ಲಿ ನಿವಾಸಿಸುತ್ತಿದೆ? ಎಷ್ಟು ಸಮಯ ಎಲ್ಲೆಲ್ಲಿದೆ? ನಾವು ತಿಳಿದುಕೊಳ್ಳಬೇಕಾಗಿದೆ. ಮನಸ್ಸೊಂದರ ಸ್ವಸ್ಥಾನ ಶರೀರದಲ್ಲಿನ ದೊಡ್ಡನಾಡಿಯಾದ ಬ್ರಹ್ಮನಾಡಿಯೆಂದು ತಿಳಿಯಬೇಕು. ಬ್ರಹ್ಮನಾಡಿ ಮನಸ್ಸಿಗೆ ಸ್ವಂತ ಊರಿನಂತದ್ದು. ಹಾಗೆಂದು ಮನಸ್ಸು ಯಾವಾಗಲೂ ಬ್ರಹ್ಮನಾಡಿಯಲ್ಲಿ ಇರುವುದಿಲ್ಲ. ಮನಸ್ಸು ಆಗಾಗ ಬ್ರಹ್ಮನಾಡಿಯನ್ನು ಬಿಟ್ಟು ಶರೀರವೆಲ್ಲಾ ವ್ಯಾಪಿಸಿರುತ್ತದೆ. ಬ್ರಹ್ಮನಾಡಿ ಪಕ್ಕದಲ್ಲಿರುವ ಸೂರ್ಯ ಚಂದ್ರನಾಡಿಗಳ ಮೇಲೆ ಸಹ ನಿವಾಸಿಸುತ್ತಿರುವುದು. ಬ್ರಹ್ಮನಾಡಿಯಲ್ಲಿ ಇರುವಾಗ ಯಾವ ಕೆಲಸ ಮಾಡದೆ ನಿಂತುಹೋಗುವುದು. ಆ ಸ್ಥಿತಿಯನ್ನೇ ನಿದ್ರಾ ಸ್ಥಿತಿ ಎನ್ನುತ್ತೇವೆ. ಬ್ರಹ್ಮನಾಡಿಯನ್ನು ಬಿಟ್ಟು ಸೂರ್ಯ ಚಂದ್ರ ನಾಡಿಗಳ ಮೇಲೆ ಶರೀರವೆಲ್ಲಾ ವ್ಯಾಪಿಸಿದಾಗ ಇರುವ ಸ್ಥಿತಿಯನ್ನು ಜಾಗ್ರತ್ತ ಸ್ಥಿತಿ ಅಥವಾ ಎಚ್ಚರ ಎನ್ನುತ್ತೇವೆ. ಎಚ್ಚರದಲ್ಲಿ ಶರೀರವೆಲ್ಲಾ ವ್ಯಾಪಿಸಿದ ಮನಸ್ಸು ಶರೀರ ಆಕೃತಿಯನ್ನು ಹೋಲಿ ಇರುತ್ತದೆ. ಬ್ರಹ್ಮನಾಡಿಯೊಳಗೆ ಹೋದಾಗ ಮುದಿರಿಕೊಂಡು ಒಂದು ಬಿಂದುವಿನಹಾಗೆ ಬದಲಾಗಿರುತ್ತದೆ. ಎಚ್ಚರದಲ್ಲಿ ಎಷ್ಟೊತ್ತಿದ್ದರೂ ನಿದ್ರೆಯೊಳಗೆ ಹೋಗಬೇಕೆಂದು, ಮನಸ್ಸು ಚಡಪಡಿಸುತ್ತಿರುತ್ತದೆ. ಆದ್ದರಿಂದಲೇ ಹೆಚ್ಚಿನ ಕಾಲ ಯಾರೂ ಎಚ್ಚರವಾಗಿರರು. ಸ್ವಂತ ಊರು ಬಿಟ್ಟು ಬೇರೆ ಊರಿಗೆ ಬಂದವನು, ಮತ್ತೆ ತನ್ನ ಊರು ಸೇರು ವವರೆಗು ತೃಪ್ತಿ ಇಲ್ಲದಹಾಗೆ, ಮನಸ್ಸು ಸಹ ಮತ್ತೆ ತನ್ನ ಸ್ವಸ್ಥಾನವಾದ ಬ್ರಹ್ಮನಾಡಿಯನ್ನು ಸೇರುವವರೆಗು ತೃಪ್ತಿ ಹೊಂದಲಾರದು.

**596. (3) ನಿನಗೆ ಗುರುವಾ ಅಥವಾ ಬೋಧಕನಾ ಯಾರು ಬೇಕು?**

ಉ. ಗುರುವು ಬೇಕು.

**ವಿವರ :** ಜನ್ಮಗಳಿಂದ, ಕರ್ಮಗಳಿಂದ ಬಿಡುಗಡೆ ಹೊಂದಬೇಕೆಂದರೆ ಗುರುವು ಅವಶ್ಯಕ. ಗುರುವನ್ನು ಬೋಧಕನೆಂದು, ಬೋಧಕನನ್ನು ಗುರುವೆಂದು ತಿಳಿದುಕೊಳ್ಳುತ್ತಾ ಗುರುವನ್ನು ಗುರ್ತಿಸದೆ ಹೋಗುವುದು ಮನುಷ್ಯರಲ್ಲಿನ ದೊಡ್ಡ ಲೋಪ. ಮಾರ್ಗವನ್ನು ಹಾಕುವವನು ಗುರುವು. ಹಾಕಿದ ಮಾರ್ಗವನ್ನು ಹೇಳುವವನು ಬೋಧಕನು. ಹೀಗೆ ಗುರುವಿಗೂ ಬೋಧಕನಿಗೂ ಎಷ್ಟೋ ವ್ಯತ್ಯಾಸವಿದೆ. ಪದ್ಧತಿ ಪ್ರಕಾರ ಮೋಕ್ಷ ಬೇಕೆಂದರೆ ತಪ್ಪದೆ ಗುರುವೇ ಅವಶ್ಯ. ಗುರುವನ್ನು ತಿಳಿದುಕೊಳ್ಳಬೇಕೆಂದರೆ ತಪ್ಪದೆ ಶ್ರದ್ಧೆ ಅಗತ್ಯ. ಶ್ರದ್ಧೆಇದ್ದು ಗುರುವನ್ನು ಸಂಪಾದಿಸಿಕೊಂಡವನು ತಪ್ಪದೆ ಮೋಕ್ಷ ಹೊಂದುವನು.

**597. (4) ನಿದ್ರೆಯಲ್ಲಿ ಜೀವಿಯು ಎಲ್ಲಿರುವನು?**

ಉ. ಗುಣಚಕ್ರದಲ್ಲಿ.

**ವಿವರ :** ಶರೀರದಲ್ಲಿ ಒಟ್ಟು 25 ಭಾಗಗಳಿವೆಯೆಂದು, ಅವುಗಳಿಗೆ ಸ್ಥಾನಗಳು, ಆಕಾರ, ಕೆಲಸಗಳು ಇವೆಯೆಂದು ಬಹಳ ಸಲ ಹೇಳಿಕೊಂಡಿದ್ದೇವೆ. ಅವುಗಳಲ್ಲಿ ಜೀವಿಯು ಸಹ ಒಬ್ಬನು. ಜೀವಾತ್ಮನಿಗೂ ಸಹ ಆಕಾರ, ಕೆಲಸ, ಸ್ಥಾನ ಇವೆ. ಜೀವಾತ್ಮ ಆಗಾಗ ಅಲ್ಲದೆ ಯಾವಾಗಲೂ ಗುಣಚಕ್ರದಲ್ಲಿನ ಮೂರು ಭಾಗಗಳಲ್ಲಿ ಯಾವುದೋ ಒಂದು ಭಾಗದಲ್ಲಿ ನಿವಾಸವಿರುವನು. ತಾಮಸ, ರಾಜಸ, ಸಾತ್ವಿಕ, ಯೋಗವೆನ್ನುವ ನಾಲ್ಕು ಭಾಗಗಳಾಗಿರುವ ಚಕ್ರದಲ್ಲಿ ಸಾಧಾರಣ ಜೀವಾತ್ಮ ಮೂರು ಭಾಗಗಳಲ್ಲಿ ಯಾವುದೋ ಒಂದರಲ್ಲಿ ನಿವಾಸವಿರುವನು. ಮುಕ್ತಿಯನ್ನು ಹೊಂದಬೇಕೆನ್ನುವವನು ಅಪರೂಪವಾಗಿ ಮೂರು ಗುಣಗಳನ್ನು ಬಿಟ್ಟು ಆಗಾಗ ಸ್ವಲ್ಪ ಸಮಯ ನಾಲ್ಕನೇ ಭಾಗವಾದ ಯೋಗದಲ್ಲಿರುವನು. ಯೋಗ ಪ್ರತ್ಯೇಕವಾದದ್ದು, ಆದ್ದರಿಂದ ಅದನ್ನು ಬಿಟ್ಟು ಮುಖ್ಯವಾಗಿ ಮೂರು ಭಾಗಗಳನ್ನೇ ಹೇಳಿಕೊಳ್ಳಬೇಕು. ಮೂರು ಗುಣಭಾಗಗಳಲ್ಲಿ ಒಂದರಲ್ಲಿ ಜೀವಾತ್ಮನಿರುವುದರಿಂದ ಯಾವಾಗಲೂ ಗುಣಚಕ್ರದಲ್ಲಿ ಜೀವಾತ್ಮ ನಿವಾಸಿಸುತ್ತಿದ್ದಾನೆ. ನಿದ್ರೆಯಲ್ಲಾಗಲಿ, ಎಚ್ಚರದಲ್ಲಾಗಲಿ ಜೀವಾತ್ಮ ಗುಣಚಕ್ರದಲ್ಲಿಯೇ ಇರುವನು.

**598. (5) ಮನುಷ್ಯನ ಜೀವನ ಯಾವುದರ ಪ್ರಕಾರ ನಡೆಯುತ್ತಿದೆ?**

ಉ. ಕರ್ಮ.

**ವಿವರ :** ಮನುಷ್ಯನ ಜೀವನವೆಲ್ಲವೂ ಕರ್ಮದ ಮೇಲೆ ಆಧಾರಪಟ್ಟಿದೆ. ಯಾರ ಕರ್ಮ ಪ್ರಕಾರ ಅವರ ಜೀವನ ನಡೆಯುತ್ತಿದೆ. ಒಬ್ಬೊಬ್ಬರ ಜೀವನ ಒಂದೊಂದು ವಿಧವಾಗಿ ಇರುವುದರಿಂದ, ಅವರವರ ಕರ್ಮ ಹಾಗೆ ಇದೆಯೆಂದು ಹೇಳಬಹುದು. ಶರೀರವನ್ನು ಕದಲಿಸುವುದು ಆತ್ಮ ಆದರು ಆ ಕದಲಿಕೆಗಳು ಕರ್ಮವನ್ನನುಸರಿಸಿ ಇರುತ್ತವೆ. ಆದ್ದರಿಂದ ಮಾನವನ ಜೀವನ ಕರ್ಮದೊಂದಿಗೆ ನಡೆಯುತ್ತಿದೆ. ಶರೀರದಲ್ಲಿ ಕೆಲಸಗಳನ್ನು ನಿರ್ಣ ಯಿಸುವ ಚಿತ್ತ ಕರ್ಮಾನುಸಾರಿಣಿ, ಆತ್ಮ ಚಿತ್ತಾನುಸಾರಿಣಿ, ಬುದ್ಧಿ ಗುಣಾನುಸಾರಿಣಿ ಎನ್ನುವ ನಾಣ್ನುಡಿಯೂ ಸಹ ಇದೆ.

**599. (6) ಜೀವಾತ್ಮನಿಗೆ ಕೊನೆಯ ಗಮ್ಯ(ಗುರಿ)ಯಾವುದು?**

ಉ. ಮೋಕ್ಷ.

**ವಿವರ :** ಜೀವಾತ್ಮನಿಗೆ ಹಂತಗಳು ಎಷ್ಟಾದರೂ ಇರಬಹುದು ಆದರೆ ಗಮ್ಯ(ಗುರಿ) ಒಂದೇ ಇದೆ. ಜೀವಿಯು ಸ್ವಲ್ಪಕಾಲ ಒಂದು ಶರೀರವನ್ನು ಧರಿಸಿ, ಮರಣದೊಂದಿಗೆ ಆ ಶರೀರವನ್ನು ಬಿಟ್ಟು ಮತ್ತೊಂದು ಶರೀರವನ್ನು ಹೊಂದಿ, ಹೊಸ ಹಂತ ಪ್ರಾರಂಭಮಾಡುತ್ತಿರುವನು. ಹೀಗೆ ಎಷ್ಟೋ ಜನ್ಮಗಳೆನ್ನುವ ಹಂತಗಳು ಬದಲಾದರೂ ಕೊನೆಯ ಗಮ್ಯ ಮೋಕ್ಷ. ಮೋಕ್ಷದಲ್ಲಿ ಜೀವಾತ್ಮನಿರುವುದಿಲ್ಲ, ಜನ್ಮಗಳಿರುವುದಿಲ್ಲ. ಎಲ್ಲದಕ್ಕೂ ಅಂತ್ಯವೇರ್ಪಡುವ ಮೋಕ್ಷವೇ ಜೀವಿ ಯೊಂದರ ಕೊನೆಯ ಗಮ್ಯ.

**600. (7) ಸ್ಥೂಲ, ಸೂಕ್ಷ್ಮ ಶರೀರಗಳನ್ನು ಸ್ಥಂಬಿಸುವ ಹಾಗೆ ಮಾಡುವ ಅವಸ್ಥೆ ಯಾವುದು?**

ಉ. ನಿದ್ರಾವಸ್ಥೆ.

**ವಿವರ :** ಎಚ್ಚರದಲ್ಲಿ ಸ್ಥೂಲಶರೀರ, ಸ್ವಪ್ನದಲ್ಲಿ ಸೂಕ್ಷ್ಮಶರೀರ ಜ್ಞಾಪಕವನ್ನು ಹೊಂದಿರುವುದಕ್ಕೆ ಮುಖ್ಯ ಕಾರಣ ಮನಸ್ಸು. ಮನಸ್ಸು ಪ್ರಪಂಚ ಜ್ಞಾಪಕಹೊಂದಿ ವಿಷಯಗಳನ್ನು ಒಳಗಿನ ಬುದ್ಧಿಗೆ ತಿಳಿಸುತ್ತಿದೆ. ವಿಷಯಗಳ ಜ್ಞಾಪಕ ಮನಸ್ಸಿನಿಂದ ಎಚ್ಚರ, ಸ್ವಪ್ನದಲ್ಲಿ ಇರುತ್ತದೆ. ನಿದ್ರೆಯಲ್ಲಿ ಮನಸ್ಸು ಯಾವ ಕೆಲಸ ಮಾಡುವುದಿಲ್ಲ. ಆದ್ದರಿಂದ ಜಾಗ್ರತಾವಸ್ಥೆಯಲ್ಲಿ ಸ್ಥೂಲಶರೀರ, ಸ್ವಪ್ನಾವಸ್ಥೆಯಲ್ಲಿ ಸೂಕ್ಷ್ಮಶರೀರ ಕೆಲಸ ಮಾಡುವುವು. ಸ್ಥೂಲ ಸೂಕ್ಷ್ಮ ಶರೀರಗಳು ಎರಡು ನಿದ್ರೆಯಲ್ಲಿ ಸ್ಥಂಭಿಸಿಹೋಗುತ್ತವೆ.

**601.** **(8) ಸರ್ವಜೀವಿಗಳಿಗು ಚೈತನ್ಯಶಕ್ತಿ ಯಾವುದು?**

ಉ. ಆತ್ಮ.

**ವಿವರ :** ಒಬ್ಬ ಮನುಷ್ಯನಿಗೇ ಅಲ್ಲದೆ 84 ಲಕ್ಷ ಜೀವ ಜಾತಿಗಳಿಗೂ ಶರೀರಗಳಲ್ಲಿ ಕದಲಿಕೆ ಶಕ್ತಿ ಕೊಡುವುದು ಆತ್ಮನೇ. ಆತ್ಮ ಚೈತನ್ಯ ಶಕ್ತಿ ಎಲ್ಲಾ ಅವಯವಗಳಲ್ಲಿ ಕೆಲಸ ಮಾಡುವುದರಿಂದ ಶರೀರವೆಲ್ಲಾ ಕದಲುತ್ತಿದೆ. ಉದಾಹರಣೆಗೆ ಹೇಳಬೇಕೆಂದರೆ ಅನೇಕ ವಿದ್ಯುತ್ ಪರಿಕರಗಳನ್ನು ಒಂದೇ ವಿದ್ಯುತ್ ಶಕ್ತಿ ಕೆಲಸ ಮಾಡಿಸಿದಹಾಗೆ, ಎಲ್ಲಾ ಜೀವರಾಶಿಗಳ ಶರೀರ ಅವಯವಗಳನ್ನು ಕದಲಿಸುವ ಶಕ್ತಿ ಒಂದೇಒಂದು ಆತ್ಮಶಕ್ತಿ. ಆದ್ದರಿಂದ ಎಲ್ಲರ ಚೈತನ್ಯ ಶಕ್ತಿ ಆತ್ಮನೆಂದು ಹೇಳಬಹುದು.

**602.** **(9) ಸರ್ವ ಜೀವಿಗಳಿಗು ಸಾಕ್ಷಿಭೂತನ್ಯಾರು?**

ಉ. ಪರಮಾತ್ಮ.

**ವಿವರ :** ಸರ್ವ ಜೀವರಾಶಿಗಳಿಗೂ ಸಾಕ್ಷಿ ಆತ್ಮನೆಂದು ಬಹಳ ಜನ ಹೇಳುತ್ತಿರುವರು. ಶರೀರದಲ್ಲಿನ ಜೀವಾತ್ಮ, ಆತ್ಮ, ಪರಮಾತ್ಮ, ಇರುವಾಗ ಅದರಲ್ಲಿ ಜೀವಾತ್ಮ ಯಾವ ಕೆಲಸ ಮಾಡದೆ ಅನುಭವಿಸುವುದು ಮಾತ್ರವೇ. ಅದೇ ಜೀವಾತ್ಮನ ಅನುಭವಕ್ಕೆ ಬೇಕಾದ ಕೆಲಸವೆಲ್ಲವೂ ಅವಯವಗಳಿಂದ ಮಾಡಿಡಬೇಕಾಗಿದ್ದು ಆತ್ಮ. ಆತ್ಮ ಕೆಲಸಮಾಡಿ ಸಂಪಾದಿಸಿದ್ದನ್ನು ತಿಂದು ಕುಳಿತುಕೊಳ್ಳುವುದು ಜೀವಾತ್ಮ. ಕೆಲಸ ಮಾಡುವ ಆತ್ಮನನ್ನು, ಕೆಲಸದಲ್ಲಿನ ಫಲಿತಗಳನ್ನು ಅನುಭವಿಸುವ ಜೀವಾತ್ಮನನ್ನು, ಎಲ್ಲಾ ಸಮಯದಲ್ಲೂ ನೋಡುವವನು ಪರಮಾತ್ಮ. ಆದ್ದರಿಂದ ಆತ್ಮನಿಗೂ, ಜೀವಾತ್ಮನಿಗೂ ಇಬ್ಬರಿಗೂ ಸಾಕ್ಷಿಭೂತನು ಪರಮಾತ್ಮನೆಂದೇ ಹೇಳಬಹುದು. ನಿದ್ರೆಯಲ್ಲಿ ಮನಸ್ಸು ಕೆಲಸಮಾಡದೆ ಇರುವುದರಿಂದ ಜೀವಾತ್ಮನಿಗೆ ಆ ಸಮಯದಲ್ಲಿ ಆತ್ಮ ಸಾಕ್ಷಿ ಅಲ್ಲ. ಪರಮಾತ್ಮ ಆತ್ಮನಲ್ಲಿಯೂ, ಜೀವಾತ್ಮನಲ್ಲಿಯೂ ಇರುವುದರಿಂದ ಎಲ್ಲಾ ವೇಳೆಯಲ್ಲೂ ಇಬ್ಬರಿಗೂ ಸಾಕ್ಷಿಯಾಗಿ ಇದ್ದಾನೆಂದು ಹೇಳಬಹುದು.

**603.** **(10) ಜೀವಾತ್ಮನ ಸುತ್ತಲೂ ಇರುವ ಮೂರನೆಯ ಪೊರೆ ಯಾವುದು?**

ಉ. ಅಹಂ.

**ವಿವರ :** ಶರೀರದಲ್ಲಿನ ಎಲ್ಲಾ ಭಾಗಗಳಿಗೂ ಸ್ಥಿತಿ ಗತಿ, ಆಕಾರ ನಾಮಗಳು ಇವೆಯೆಂದು

ತಿಳಿದುಕೊಂಡಿದ್ದೇವೆ. ಶರೀರದಲ್ಲಿನ ಜೀವಾತ್ಮನಿಗೂ ಸಹ, ಆಕಾರ, ಜೀವಾತ್ಮನೆನ್ನುವ ಹೆಸರು ಇದೆ. ಮೂರು ಪೊರೆಗಳು ಜೀವಾತ್ಮ ಸುತ್ತಾ ಆವರಿಸಿ ಇರುವುದರಿಂದ ಜೀವಾತ್ಮನಿಗೆ ಆಕಾರ ತಯಾರಾಗಿದೆ. ಮೂರು ಪೊರೆಗಳ ಮಧ್ಯೆ ಇರುವ ಖಾಲಿ ಭಾಗವನ್ನು ಜೀವಾತ್ಮ ಎನ್ನುತ್ತೇವೆ. ಜೀವಾತ್ಮನಿಗೆ ಸುತ್ತುವರಿದ ಆಕಾರವನ್ನೇರ್ಪಡಿಸಿದ ಮೂರು ಪೊರೆಗಳಲ್ಲಿ ಜೀವಾತ್ಮನಿಗೆ ಅಂಟಿಕೊಂಡಿರುವ ಮೊದಲನೆಯ ಪೊರೆ ಬುದ್ಧಿ ಆದಾಗ, ಎರಡನೆಯ ಪೊರೆ ಚಿತ್ತ ಆದಾಗ, ಮೂರನೆ ಪೊರೆ ಅಹಂಕಾರವಾಗಿದೆ.

**604. (11) ಮಾಯೆ ಎಂದರೇನು?**

ಉ. ಗುಣಗಳು.

**ವಿವರ : "ಗುಣಮಯಿ ಮಮ ಮಾಯಾ"** ಎಂದು ಭಗವದ್ಗೀತೆಯಲ್ಲಿ ಹೇಳಿದ ಹಾಗೆ ನಮ್ಮ ತಲೆಯಲ್ಲಿನ ಗುಣಗಳೇ ಮಾಯ ರೂಪವಾಗಿ ಇವೆ. ಮಾಯ ಶರೀರದ ಹೊರಗಿಲ್ಲ ಶರೀರದ ಒಳಗೇ ಗುಣಗಳ ರೂಪದಲ್ಲಿದೆ. ಮಾಯೆಯಲ್ಲಿ ಬಿದ್ದಿರುವೆಯೆಂದರೆ ಶರೀರದ ಹೊರಗಲ್ಲ, ಶರೀರದ ಒಳಗೇ ಬಿದ್ದಹಾಗೆಂದು ತಿಳಿಯಬೇಕು. ಇಂದೂಮತದಲ್ಲಿ ಮಾಯ ಎಂದು ಹೇಳುವುದು ಇಸ್ಲಾಮ್ ಮತದಲ್ಲಿ ಸೈತಾನಾಗಿ, ಕ್ರೈಸ್ತ ಮತದಲ್ಲಿ ಸಾತಾನಾಗಿ ಹೇಳಲಾಗುತ್ತಿದೆ. ಸಾತಾನು ಅಥವಾ ಸೈತಾನು ಅಥವಾ ಮಾಯೆ ಎಂದು ಒಂದನ್ನೇ ಕರೆಯಬಹುದು.

**605. (12) ಪಂಚಾಕ್ಷರೀ ನಾದವೆಂದರೇನು?**

ಉ. ಓಂ ಕಾರನಾದ.

**ವಿವರ :** ಪಂಚ ಎಂದರೆ ಐದು ಆದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಭೂತಗಳು. ಅಕ್ಷರಿ ಎಂದರೆ ನಾಶನವಾಗದ್ದು. ಪಂಚಾಕ್ಷರಿ ಎಂದರೆ ಪಂಚ ಭೂತಗಳಿಗೆ ನಾಶವಾಗದ್ದನ್ನು ಪಂಚಾಕ್ಷರಿ ಎನ್ನುತ್ತಾರೆ. ಪಂಚ ಭೂತಗಳಿಗೆ ನಾಶವಾಗದ್ದನ್ನು ದೇವರೆಂದು ಹೇಳಬಹುದು. ದೇವರಿಗೆ ಪ್ರತ್ಯಮ್ನಾಯವಾಗಿ **"ಓಂ"**ನ್ನು ಗುರುತಿಸಿದ್ದಾರೆ. ಪಂಚ ಭೂತಗಳಿಗೆ ಒಂದೊಂದಕ್ಕೆ ಒಂದೊಂದು ಬೀಜಾಕ್ಷರವನ್ನು ಇಟ್ಟಿದ್ದಾರೆ. ಅವೇ **"ನಮಃ ಶಿವಾಯ"**. ಪ್ರಕೃತಿ ಬೀಜಾಕ್ಷರಗಳು ಐದು ಆದಾಗ, ಅವುಗಳಿಗೆ ನಾಶವಾಗದ್ದು ಓಂ ಬೀಜಾಕ್ಷರ. ಒಟ್ಟು ಎಲ್ಲಾ ಸೇರಿಸಿ ಪಂಚಭೂತಗಳಿಗೆ ನಾಶವಾಗದ್ದು ಎಂದು ತಿಳಿಯುವಹಾಗೆ **"ಓಂ**

**ನಮಃ ಶಿವಾಯ"** ಎನ್ನುವ ಆರು ಅಕ್ಷರಗಳ ಸಮ್ಮಿಲನವನ್ನು ಇಟ್ಟು **"ಪಂಚಾಕ್ಷರಿ"** ಎಂದಿದ್ದಾರೆ.

**606. (13) ಜೀವಾತ್ಮನಿಗೆ ಪ್ರಬಲ ಶತ್ರುಯಾವುದು?**

ಉ. ಆಸೆ.

**ವಿವರ :** ಜೀವಾತ್ಮನಿಗೆ ಶರೀರದಲ್ಲಿನ ವ್ಯತಿರೇಖ ಗುಣಗಳನ್ನೇ ಶತ್ರುಗಳಾಗಿ ಲೆಕ್ಕಿಸಬೇಕು. ಶರೀರದಲ್ಲಿ ಆರು ಶತ್ರು ಗುಣಗಳಿವೆ. ಅದರಲ್ಲಿ ಅತಿ ಪ್ರಾಬಲ್ಯವಾದ ಗುಣ, ನಿತ್ಯ ಶತ್ರುತ್ವವನ್ನು ಹೊಂದಿರುವುದು ಕಾಮ. ಕಾಮವೆಂದರೆ ಆಸೆ. ಆಸೆ ಎನ್ನುವ ಗುಣ ಮನುಷ್ಯನಿಗೆ ಬಹಳ ಶತ್ರುವಾಗಿ ಇದ್ದು ಅನೇಕ ಅನರ್ಥಗಳಿಗೆ ಕಾರಣವಾಗುತ್ತಿದೆ. ಭಗವದ್ಗೀತೆಯಲ್ಲಿ ಸಹ ಮನುಷ್ಯನಿಗೆ ನಿತ್ಯ ಶತ್ರು ಕಾಮಗುಣವೆಂದು ಹೇಳಲಾಗಿದೆ.

**607. (14) "ದೀಪವಿರುವಾಗಲೇ ಮನೆ ಸರಿಮಾಡಿಕೋ" ಎನ್ನುವ ಮಾತಲ್ಲಿ ದೀಪವೆಂದರೆ ಯಾವುದು?**

ಉ. ಆತ್ಮ.

**ವಿವರ :** ಮನೆ ಎಂದರೆ ಶರೀರ. ಶರೀರವೆನ್ನುವ ಮನೆಯಲ್ಲಿ ದೀಪದಹಾಗೆ ಇರುವುದು ಆತ್ಮ. ಆತ್ಮ ಇರುವವರೆಗು ಶರೀರ ಕದಲುತ್ತಿದೆ. ಆದ್ದರಿಂದ ಶರೀರಕ್ಕೆ ಆತ್ಮ ದೀಪದಂತದ್ದು.

**608. (15) ಆತ್ಮ ಎಲ್ಲಿದೆ?**

ಉ. ಶರೀರವೆಲ್ಲ ಇದೆ.

**ವಿವರ :** ಶರೀರದಲ್ಲಿ ಆತ್ಮ, ಜೀವಾತ್ಮ ಜೋಡು ಆತ್ಮಗಳಾಗಿ ಇವೆ. ಅದರಲ್ಲಿ ಜೀವಾತ್ಮ ತಲೆಯಲ್ಲಿ ಒಂದುಕಡೆ ಇರುವಾಗ, ಉಳಿದ ಎರಡನೆಯ ಆತ್ಮ ಶರೀರವೆಲ್ಲಾ ವ್ಯಾಪಿಸಿ ಎಲ್ಲಾ ಅವಯವಗಳನ್ನು ಕೆಲಸ ಮಾಡಿಸುತ್ತಿದೆ. ಒಂದು ವೇಳೆ ಶರೀರದಲ್ಲಿ ಯಾವ ಭಾಗದಲ್ಲಾದರು ಆತ್ಮ ವ್ಯಾಪಿಸದೆ ಹೋದರೆ ಆ ಅವಯವ ಕೆಲಸ ಮಾಡುವುದಿಲ್ಲ. ಪ್ರತಿ ಒಬ್ಬರಲ್ಲಿಯೂ ಆತ್ಮ ಶರೀರವೆಲ್ಲಾ ವ್ಯಾಪಿಸಿ ಇರುವುದರಿಂದ ಶರೀರವೆಲ್ಲಾ ಕದಲಿ ಕೆಲಸಮಾಡುತ್ತಿದೆ.

# ಜ್ಞಾನ ಪರೀಕ್ಷೆ

**ಅನಂತಸಾಗರ** **ದಿನಾಂಕ–10–10–1998**

**609.** **(1) ಕಲಿಯುಗ ಒಟ್ಟು ಎಷ್ಟು ಸಂವತ್ಸರಗಳು?**

ಉ. 4,32,000 ಸಂವತ್ಸರಗಳು.

**ವಿವರ :** ಮನುಷ್ಯನ ಶರೀರದಲ್ಲಿ ಒಳ್ಳೆ ಗುಣಗಳು ಆರು, ಕೆಟ್ಟ ಗುಣಗಳು ಆರು ಇವೆ. ಒಳ್ಳೆದು, ಕೆಟ್ಟದು ಅಥವಾ ಮಿತ್ರ, ಶತ್ರು ಗುಣಗಳು ಒಟ್ಟು 12 ಇವೆ. ಒಂದೊಂದು ಗುಣ ನವಗ್ರಹಗಳ ಪ್ರಕಾರ ಒಂಬತ್ತು ಭಾಗಗಳಾಗಿ ವಿಭಜಿಸಲಾಗಿದೆ. ಹಾಗೆ ವಿಭಜಿಸುವುದರಿಂದ 12X9=108 ಭಾಗಗಳಾಗಿ ಇವೆ. 108 ಭಾಗಗಳಲ್ಲಿ ಜೀವಾತ್ಮನು ನಿವಾಸಿಸುತ್ತಿದ್ದಾನೆಂದು ತಿಳಿದುಕೊಳ್ಳಬೇಕು. ಶರೀರದಲ್ಲಿ ಜೀವಾತ್ಮನು ಮೂರು ಗುಣಭಾಗಗಳಲ್ಲಿ ಯಾವುದೋ ಒಂದು ಭಾಗದಲ್ಲಿ ಇರುವುದರಿಂದ, ಒಂದು ಗಂಟೆಗೆ ಗುಣಚಕ್ರ ಒಂದು ಸುತ್ತು ತಿರುಗುವುದರಿಂದ, ಮೂರು ಭಾಗಗಳಲ್ಲಿನ ಒಟ್ಟು ಮುಖ್ಯ ಗುಣಗಳು 12X3=36 ಒಂದು ಗಂಟೆಗೆ ತಿರುಗಿದಂತಾಗುತ್ತದೆ. ಆದ್ದರಿಂದಲೇ ಗಂಟೆಗೆ 36 ಗುಣಗಳು ಬದಲಾಗುತ್ತವೆಂದು ನುಡಿಯುತ್ತಿರುತ್ತಾರೆ. ಒಂದು ಗಂಟೆಗೆ ಮೂರು ಗುಣ ಭಾಗಗಳಲ್ಲಿನ 36 ಗುಣಗಳು ತಿರುಗುವುದರಿಂದ, ಒಂದು ದಿನಕ್ಕೆ 36X12=432 ಗುಣಗಳು ಬದಲಾದಂತಾಗುತ್ತದೆ. ಮಾನವನ ಹಗಲು ಕಾಲದಲ್ಲಿ 432 ಗುಣಗಳು ತಿರುಗುತ್ತಿವೆ. ಪರಮಾತ್ಮನ ಹಗಲು ಕಾಲ ಸಾವಿರ ಯುಗಗಳಾದ್ದರಿಂದ ಮಾನವನ ಹಗಲನ್ನು ಸಾವಿರಸಲ ಗುಣಿಸಬೇಕಾಗಿದೆ. ಹಾಗೆ ಗುಣಿಸುವುದರಿಂದ 432X1000=4,32,000 ಗುಣಗಳ ಸಂಖ್ಯೆ ಬಂದಿದೆ. ಗುಣಗಳಿಂದಲೇ ಪ್ರಪಂಚ ಹೆಚ್ಚುವುದು ಇಳಿಯುವುದು ನಡೆಯುತ್ತಿರುವುದರಿಂದ 4,32,000 ಗುಣಗಳ ಸಂಖ್ಯೆಯನ್ನೇ ಆಧಾರಮಾಡಿಕೊಂಡು ಯುಗಕಾಲವನ್ನು ನಿರ್ಣಯಿಸಬೇಕಾಗಿದೆ. ಅದರ ಪ್ರಕಾರ ಕಲಿಯುಗ 4,32,000. ಎರಡನೆಯದಾದ ದ್ವಾಪರಯುಗ ಕಲಿಯುಗದ ಎರಡರಷ್ಟು ಹೆಚ್ಚು 8,64,000. ಮೂರನೆಯದಾದ ತ್ರೇತಾಯುಗ ಕಲಿಯುಗಕ್ಕೆ ಮೂರುಪಟ್ಟು 12,96,000. ನಾಲ್ಕನೆಯದಾದ ಕೃತಯುಗ ಕಲಿಯುಗದ ನಾಲ್ಕರಷ್ಟು 17,28,000 ಸಂವತ್ಸರಗಳು. ಎಲ್ಲಾ ಯುಗಗಳನ್ನು ನಿರ್ಣಯಿಸುವುದಕ್ಕೆ ಮೊದಲು ಸಣ್ಣದಾದ ಕಲಿಯುಗವನ್ನು ಗುಣಗಳ ಪ್ರಕಾರ ಲೆಕ್ಕಿಸಿ 4,32,000 ಸಂವತ್ಸರಗಳಾಗಿ ನಿರ್ಣಯಿಸಿದ್ದಾರೆ.

**610. (2) ಭೀಷ್ಮನು ಸಂಪೂರ್ಣ ಜ್ಞಾನಿಯಾ, ಸಂಪೂರ್ಣ ಯೋಗಿಯಾ?**

ಉ. ಸಂಪೂರ್ಣ ಭಕ್ತನು.

**ವಿವರ :** ಭೀಷ್ಮನು ಎಂದಿಗೂ ಜ್ಞಾನ ತಿಳಿದುಕೊಳ್ಳಲಿಲ್ಲ, ಹಾಗೇ ಎಂದಿಗೂ ಯೋಗವನ್ನು ಮಾಡಲಿಲ್ಲ. ಆದ್ದರಿಂದ ಆತನನ್ನು ಕೊನೆಯವರೆಗು ಯಾರು ಯಾವ ವಿಧಧಲ್ಲಿಯೂ ಗುರುತಿಸದೇ ಹೋಗಿದ್ದಾರೆ. ಆತನ ಹತ್ತಿರ ಯಾವ ಧರ್ಮಗಳು ಆಚರಣೆಯಲ್ಲಿಲ್ಲ, ಅಷ್ಟೇ ಅಲ್ಲದೆ ಆತನಿಗೆ ಧರ್ಮಗಳು ತಿಳಿಯವೆಂದೇ ಹೇಳಬಹುದು. ಆದರೆ ಧರ್ಮಗಳಿಗೆ ಅತೀತವಾದ ಭಕ್ತಿ ಆತನಲ್ಲಿ ಇದ್ದಿತೆಂದು ತಿಳಿಯುತ್ತಿದೆ. ಶ್ರೀಕೃಷ್ಣನು ಸಾಧಾರಣ ಮನುಷ್ಯ ಮಾತ್ರನಲ್ಲವೆಂದು, ಎಲ್ಲದಕ್ಕೂ ಅತೀತವಾದ ಪರಮಾತ್ಮನೇ ಶ್ರೀಕೃಷ್ಣನಾಗಿ ಹುಟ್ಟಿದ್ದಾನೆಂದು, ಭೀಷ್ಮನು ಗ್ರಹಿಸಿ ಮೊದಲಿನಿಂದ ಆತನ ಹತ್ತಿರ ಗೌರವ ಭಕ್ತಿ ಭಾವಗಳನ್ನು ಪ್ರದರ್ಶಿಸಿದ್ದಾನೆ. ಅದರಿಂದಲೇ ಆತನದ್ದು ಭಕ್ತಿ ಯೋಗವಾಗಿದೆ. ಅದರಿಂದಲೇ ಆತನು ಕೊನೆಯಲ್ಲಿ ಪರಮಾತ್ಮನಲ್ಲಿ ಐಕ್ಯವಾಗಿದ್ದಾನೆ.

**611. (3) ಕಾಲವೆಂದರೇನು?**

ಉ. ಪರಮಾತ್ಮ.

**ವಿವರ :** ಮೂರು ಆತ್ಮಗಳಲ್ಲಿ ಪರಮಾತ್ಮ ಎಲ್ಲದಕ್ಕೂ ಅತೀತವಾದದ್ದು. ಅದನ್ನು ಏನೆಂದು ಹೇಳುವುದಕ್ಕೂ ಸಾಧ್ಯವಿಲ್ಲ. ಯಾವುದರೊಂದಿಗೂ ಹೋಲಿಸಲಾರೆವು. ಹಾಗೇ ಪಂಚ ಭೂತಗಳಿಗೆ ಸಂಬಂಧವಿಲ್ಲದ್ದು ಕಾಲ. ಕಾಲವನ್ನು ಇಂತದ್ದೆ ಎಂದು ಹೇಳಲಾರೆವು, ನಿಲ್ಲಿಸಲಾರೆವು, ತಾಕಲಾರೆವು. ಕಾಲ ಪರಮಾತ್ಮ ಸ್ವರೂಪವೆಂದು ಭಗವದ್ಗೀತೆಯಲ್ಲಿ ಹೇಳಲಾಗಿದೆ. ಪ್ರಪಂಚವೆಲ್ಲಾ ನಾಶವಾದರೂ ಕಾಲ ಉಳಿದಿರುತ್ತದೆ. ಕಾಲ ಪರಮಾತ್ಮನ ಹಾಗೆ ಎಲ್ಲದಕ್ಕೂ ಅತೀತವಾಗಿದೆ. ಕಾಲದಲ್ಲಿ ಇದ್ದರೂ ಅದನ್ನು ಯಾರೂ ಅನುಭವಿಸಲಾರರು. ಆದ್ದರಿಂದ ಕಾಲವೆಂದರೆ ಪರಮಾತ್ಮ ಎಂದು ತಿಳಿಯಬೇಕು.

**612. (4) ಕರ್ಮಾನುಸಾರ ಶರೀರದಲ್ಲಿ ಯಾವ ಭಾಗ ಕೆಲಸಮಾಡುತ್ತಿದೆ?**

ಉ. ಎಲ್ಲಾ ಭಾಗಗಳು ಕೆಲಸಮಾಡುತ್ತಿವೆ.

**ವಿವರ :** ಶರೀರದಲ್ಲಿ ಎಲ್ಲಾ ಭಾಗಗಳು ಕರ್ಮವನ್ನನುಸರಿಸಿ ಕದಲುತ್ತಿವೆ. ಅವು ಸ್ವತಃವಾಗಿ ಕದಲುವುದಿಲ್ಲ, ಆದರೆ ಕರ್ಮ ಪ್ರಕಾರ ಆತ್ಮ ಎಲ್ಲಾ ಭಾಗಗಳನ್ನು ಕದಲಿಸುತ್ತಿರುತ್ತದೆ.

ಪ್ರತಿ ಕದಲಿಕೆ ಆತ್ಮನದೇ ಆದರೂ ಆ ಕದಲಿಕೆ ಕರ್ಮವನ್ನನುಸರಿಸಿ ಇರುತ್ತದೆ. ಆತ್ಮ ಶರೀರವೆಲ್ಲಾ ವ್ಯಾಪಿಸಿ ಇರುವುದರಿಂದ ಶರೀರದಲ್ಲಿನ ಎಲ್ಲಾ ಭಾಗಗಳು ಕದಲಿ ಕೆಲಸ ಮಾಡುತ್ತಿವೆಯೆಂದು ಹೇಳಬಹುದು.

**613. (5) ನಿದ್ರೆ ಸಮಯದಲ್ಲಿ ಬಾಹ್ಯೇಂದ್ರಿಯವಾದ ಕಿವಿ ಕೆಲಸ ಮಾಡುತ್ತಿದೆಯಾ?**

ಉ. ಕೆಲಸ ಮಾಡುತ್ತಿದೆ.

**ವಿವರ :** ನಿದ್ರೆ ಸಮಯದಲ್ಲಿಯೂ ಸಹ ಎಲ್ಲಾ ಇಂದ್ರಿಯಗಳು ತಮತಮ ಕೆಲಸವನ್ನು ಮಾಡುತ್ತಲೇ ಇವೆ. ಆತ್ಮ ಶರೀರವೆಲ್ಲಾ ವ್ಯಾಪಿಸಿರುವವರೆಗು ಎಲ್ಲಾ ಇಂದ್ರಿಯಗಳನ್ನು ಕೆಲಸ ಮಾಡಿಸುತ್ತಲೇ ಇರುತ್ತದೆ. ಆದ್ದರಿಂದ ನಿದ್ರೆಯಲ್ಲಿ ಸಹ ಕಿವಿ ಕೇಳುವ ಸಾಮರ್ಥ್ಯವನ್ನು ಹೊಂದಿದೆ. ನಿದ್ರೆಯಲ್ಲಿ ಒಂದೇ ಒಂದು ಮನಸ್ಸು ಬ್ರಹ್ಮನಾಡಿಯನ್ನು ಸೇರಿ ಇರುವುದರಿಂದ ಕಿವಿ ಕೇಳಿದ ವಿಷಯವನ್ನು ಬುದ್ಧಿವರೆಗು ಸೇರುವುದಿಲ್ಲ. ಆದ್ದರಿಂದ ನಿದ್ರೆಯಲ್ಲಿ ಏನು ಕೇಳಿರುವುದು ಬುದ್ಧಿಗೆ ತಿಳಿಯದು. ಒಳಗಿನ ವಿಷಯಗಳನ್ನು ಹೊರಗೆ, ಹೊರಗಿನ ವಿಷಯಗಳನ್ನು ಒಳಗೆ ಸೇರಿಸುವ ಮನಸ್ಸು ಇಲ್ಲದಿರುವುದರಿಂದ ವಿಷಯ ತಿಳಿದಿಲ್ಲ. ಆದರೆ ಎಲ್ಲಾ ವೇಳೆಯಲ್ಲಿ ಎಲ್ಲಾ ಅವಯವಗಳು ಕೆಲಸಮಾಡುತ್ತಲೇ ಇವೆ. ಹಾಗೇ ಕಿವಿ ಸಹ ನಿದ್ರೆಯಲ್ಲಿ ಕೆಲಸ ಮಾಡುತ್ತಿದೆ.

**614. (6) ಕೋರಿಕೆಗಳನ್ನು ಹೇಗೆ ಸಾಯಿಸಬೇಕು?**

ಉ. ಸಾಧನೆಯಿಂದ.

**ವಿವರ :** ಶರೀರದಲ್ಲಿನ 12 ಗುಣಗಳಲ್ಲಿ ಕೋರಿಕೆ ಅಥವಾ ಆಸೆ ಅಥವಾ ಕಾಮ ಎನ್ನುವ ಗುಣ ಇರುವುದು ಸಹಜವೇ. ಆದರೆ ಆಸೆ ಎನ್ನುವ ಗುಣ ಬಹಳ ಬಲವಾದದ್ದು, ದೃಢವಾದದ್ದು. ಅದು ಮನುಷ್ಯನಿಗೆ ನಿತ್ಯ ಶತ್ರುವಂತದ್ದು ಎಂದು ಭಗವದ್ಗೀತೆಯಲ್ಲಿ ಸಹ ಹೇಳಲಾಗಿದೆ. ಅಂತಹ ಗುಣವನ್ನು ಜಯಿಸುವುದು ಒಂದು ದಿನದಲ್ಲಾಗಲಿ, ಒಂದು ತಿಂಗಳಲ್ಲಾಗಲಿ ನಡೆಯುವ ಕೆಲಸವಲ್ಲ. ಎಷ್ಟೋ ಅಭ್ಯಾಸದಿಂದ ಸ್ವಲ್ಪ ಸ್ವಲ್ಪವಾಗಿ ಕ್ರಮೇಣ ಆಸೆ ಗುಣವೊಂದರ ಬಲ ಕಡಿಮೆಯಾಗುತ್ತಾ ಬರುತ್ತದೆ. ಹಾಗೆ ಬಹಳ ಕಾಲ ಅಭ್ಯಾಸ ಮಾಡುವುದರಿಂದ ಕೋರಿಕೆಗಳನ್ನು ಕಡಿಮೆ ಮಾಡಿಕೊಳ್ಳಬಹುದು. ಭಗವದ್ಗೀತೆಯಲ್ಲಿಯೂ ಸಹ ಅಭ್ಯಾಸ ವೈರಾಗ್ಯಗಳಿಂದ ಮನಸ್ಸನ್ನು ಗುಣಗಳ ಕಡೆ ಹೋಗದಂತೆ ಮಾಡಿಕೊಳ್ಳಬಹುದೆಂದಿದ್ದಾರೆ. ಮನಸ್ಸಿಗು ಗುಣಗಳಿಗು ಸಂಬಂಧವಿಲ್ಲದಂತೆ ಮಾಡುವುದೆನ್ನುವ ಅಭ್ಯಾಸದಿಂದಲೇ ಗುಣಗಳಿಂದ ಹೊರಬೀಳಬಹುದು.

**615. (7) ತತ್ತ್ವವೆಂದರೇನು?**

ಉ. ಆತ್ಮ.

**ವಿವರ :** ಶರೀರ 25 ತತ್ತ್ವಗಳಿಂದ ಕೂಡಿಕೊಂಡಿದೆಯೆಂದು ಹೇಳುವುದು ಕೇಳಿದ್ದೇವೆ. ಶರೀರದಲ್ಲಿನ ಯಾವ ಭಾಗಕ್ಕೂ ಸ್ವಯಂಶಕ್ತಿ ಇಲ್ಲ. ಆತ್ಮಶಕ್ತಿ ಆಯಾ ಭಾಗಗಳೊಂದಿಗೆ ಸೇರಿದಾಗಲೇ ಅವು ಕೆಲಸ ಮಾಡುತ್ತವೆ. ಶರೀರದಲ್ಲಿನ 25 ಭಾಗಗಳೊಂದಿಗೆ ಆತ್ಮ ಸೇರಿದಾಗ ಆತ್ಮಶಕ್ತಿಯೊಂದಿಗೆ ಸೇರಿ 25 ತತ್ತ್ವಗಳು ಎನ್ನುತ್ತಿದ್ದೇವೆ. ಇರುವುದು ಒಂದೇ ಆತ್ಮವಾದರೂ 25 ಭಾಗಗಳೊಂದಿಗೆ ಸೇರಿರುವದರಿಂದ 25 ಭಾಗಗಳಾಗಿ ಹೇಳಲಾಗುತ್ತಿದೆ. ಇದನ್ನನುಸರಿಸಿ ಆತ್ಮವನ್ನು ತತ್ತ್ವವೆಂದು ಸಹ ಕರೆಯುತ್ತಿರುವರೆಂದು ತಿಳಿಯುತ್ತಿದೆ.

**616. (8) ಶರೀರದಲ್ಲಿ ಒಂದು ಭಾಗವಾದ ಕೈಗಳು ಪ್ರಕೃತಿಯಲ್ಲಿ ಯಾವ ಭಾಗಗಳೊಂದಿಗೆ ತಯಾರಾಗಿವೆ?**

ಉ. ಭೂಮಿ ಐದು, ಗಾಳಿ ಐದು.

**ವಿವರ :** ಶರೀರದಲ್ಲಿನ ಒಟ್ಟು 25 ಭಾಗಗಳು ತಯಾರಾಗುವುದಕ್ಕೆ ಪಂಚ ಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಕಾರಣವಾಗಿವೆ. ಪಂಚ ಭೂತಗಳು ಒಂದೊಂದು ಐದು ಭಾಗಗಳಾಗಿ ಸೀಳಿಹೋಗಿ, ಒಟ್ಟು 25 ಭಾಗಗಳಾಗಿ ತಯಾರಾಗಿ, ಅವು ಒಂದ ರೊಂದಿಗೆ ಮತ್ತೊಂದು ಬೆರೆಯುವುದರಿಂದ 25 ಶರೀರ ಭಾಗಗಳು ತಯಾರಾಗಿವೆ. ಆಕಾಶವೊಂದರ ಐದು ಭಾಗಗಳಿಂದ ಜೀವಾತ್ಮ, ಮನಸ್ಸು, ಬುದ್ಧಿ, ಚಿತ್ತ, ಅಹಂ ತಯಾರಾಗಿರುವಾಗ, ಗಾಳಿ ಯೊಂದರ ಐದು ಭಾಗಗಳು ಉಳಿದ ಪ್ರಕೃತಿ ಭಾಗಗಳಿಂದ ಬೆರೆಯುವುದರಿಂದ ವ್ಯಾನ, ಉದಾನ, ಸಮಾನ, ಪ್ರಾಣ, ಅಪಾನ ವಾಯುಗಳು ತಯಾರಾಗಿವೆ. ಹಾಗೆ ಅಗ್ನಿ ಐದು ಭಾಗಗಳಿಂದ ಜ್ಞಾನೇಂದ್ರಿಯಗಳಾದ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ತಯಾರಾದಾಗ, ನೀರಿನಿಂದ ದೃಷ್ಟಿ, ಶಬ್ದ, ವಾಸನೆ, ರುಚಿ, ಸ್ಪರ್ಶ ತಯಾರಾಗಿವೆ. ಕೊನೆಯ ಭೂಮಿ ಐದು ಭಾಗಗಳಿಂದ ಕರ್ಮೇಂದ್ರಿಯಗಳಾದ ಕಾಲು, ಕೈಯಿ, ಬಾಯಿ, ಗುದ, ಗುಹ್ಯವೆನ್ನುವವು ತಯಾರಾಗಿವೆ. ಪ್ರತ್ಯೇಕಿಸಿ ಕೈಗಳನ್ನು ಕುರಿತು ವಿವರಿಸಿಕೊಳ್ಳುವುದಾದರೆ ಭೂಮಿ ಯೊಂದರ ಐದನೆ ಭಾಗದೊಂದಿಗೆ ಗಾಳಿ ಯೊಂದರ ಐದನೆ ಭಾಗ ಬೆರೆಯುವುದರಿಂದ ಕೈಗಳು ತಯಾರಾಗಿವೆ.

**617. (9) ಓಂ ಕಾರ ಯಾವ ಶಕ್ತಿಯಿಂದ ಹುಟ್ಟುತ್ತಿದೆ?**

ಉ. ಆತ್ಮಶಕ್ತಿಯಿಂದ.

**ವಿವರ :** ಶರೀರದಲ್ಲಿ ಆತ್ಮ ಶಕ್ತಿ ಎಲ್ಲಾ ಪ್ರದೇಶಗಳಲ್ಲಿ ವ್ಯಾಪಿಸಿ ಶರೀರವೆಲ್ಲವನ್ನು ಕೆಲಸ ಮಾಡಿಸುತ್ತಿದೆಯೆಂದು ತಿಳಿದುಕೊಂಡಿದ್ದೇವೆ. ಆತ್ಮಶಕ್ತಿಯಿಂದಲೇ ಉಸಿರಾಟದ ಚೀಲಗಳು ಕದಲುತ್ತಿವೆ. ಉಸಿರಾಟದ ಚೀಲಗಳು ಕದಲುವುದರಿಂದಲೇ ಮೂಗಿನ ರಂಧ್ರಗಳಲ್ಲಿ ಶ್ವಾಸ ಆಡುತ್ತಿದೆ. ಶ್ವಾಸ ಮೂಗು ರಂಧ್ರಗಳಲ್ಲಿ ಆಡುವುದರಿಂದಲೇ "ಸೋಹಂ" ಶಬ್ದ ಏರ್ಪಡುತ್ತಿದೆ. ಸೋಹಂ ಶಬ್ದ ಏರ್ಪಡುವುದರಿಂದಲೇ "ಓಮ್" ಹುಟ್ಟುತ್ತಿದೆ. ವಿವರವಾಗಿ ಹೇಳಬೇಕೆಂದರೆ ಮೂಗು ರಂಧ್ರಗಳಲ್ಲಿ ಆಡುವ ಶ್ವಾಸಗಳಲ್ಲಿ ಒಳಗೆ ಹೋಗುವಾಗ "ಸೋ" ಎನ್ನುವ ಶಬ್ದ ಹುಟ್ಟುತ್ತಿದೆ. ಈ ಶಬ್ದದಲ್ಲಿ ಕೊನೆಯಲ್ಲಿರುವುದು "ಓ" ಎನ್ನುವ ಶಬ್ದ. ಹಾಗೇ ಹೊರಗೆ ಬರುವ ಶ್ವಾಸದಲ್ಲಿ "ಹಂ" ಎನ್ನುವ ಶಬ್ದ ಹುಟ್ಟುತ್ತಿದೆ. ಈ ಶಬ್ದದಲ್ಲಿ ಕೊನೆಯದಾಗಿ "ಮ್" ಇದೆ. ಒಂದು ಸಲ ಶ್ವಾಸ ಒಳಗೆ ಹೋಗಿ ಹೊರಗೆ ಬರುವುದರಲ್ಲಿ ಸೋಹಂ ಶಬ್ದದಲ್ಲಿ ಓಮ್ ಹೇಳಲಾಗುತ್ತಿದೆ. ಈ ಓಂಕಾರವನ್ನು ಹೇಳಿಸುವುದು, ಶ್ವಾಸಕೋಶಗಳನ್ನು ಕದಲಿಸುವ ಆತ್ಮಶಕ್ತಿಯೆಂದು ಹೇಳಬಹುದು.

**618. (10) ನೆಲುವಿಗೆ ಹತ್ತಲಾರೆನಮ್ಮ ಸ್ವರ್ಗಕ್ಕೆ ಹತ್ತುತ್ತದಾ! ಅರಿವು ಹೇಳುವವನಿಗೆ ಆರುದುಡ್ಡು, ಎಲೆ ಕೀಳುವವನಿಗೆ ಮೂರು ದುಡ್ಡು ಎನ್ನುವ ಗಾದೆಯಲ್ಲಿ ಯಾವುದು ಜ್ಞಾನ ಪರವಾದದ್ದು?**

ಉ. ಎರಡು ಜ್ಞಾನಪರವಾದವುಗಳೆ.

**ವಿವರ :** ಪೂರ್ವದಲ್ಲಿ ಜ್ಞಾನಿಗಳು ಎಷ್ಟೋ ವಿಧಗಳಲ್ಲಿ ಪ್ರಜೆಗಳಿಗೆ ಆತ್ಮ ಜ್ಞಾನವನ್ನು ಬೋಧಿಸುತ್ತಿದ್ದರು. ಕೆಲವರು ಪ್ರಜೆಗಳ ಅವಗಾಹನೆಗೋಸ್ಕರ ಕಥೆಗಳ ರೂಪವಾಗಿ ಜ್ಞಾನವನ್ನು ಬೋಧಿಸಿದಾಗ, ಕೆಲವರು ಗಾದೆಗಳ ರೂಪವಾಗಿ, ಮತ್ತೆ ಕೆಲವರು ಹಾಡುಗಳ ರೂಪವಾಗಿ, ಬೈಗುಳ ರೂಪವಾಗಿ, ಪದ್ಯಗಳ ರೂಪವಾಗಿ ಬೋಧಿಸುತ್ತಿದ್ದರು. ಅವುಗಳಲ್ಲಿ ಗಾದೆಗಳ ರೂಪದಲ್ಲಿ ಹೇಳುವ ಸಣ್ಣ ಮಾತುಗಳಲ್ಲಿ ಹೆಚ್ಚಿನ ಜ್ಞಾನವಿರುವಹಾಗೆ ತಯಾರಿಸಿದ್ದಾರೆ. ಅಂತವುಗಳೇ ಮೇಲಿನ ಎರಡು ಗಾದೆಗಳು. ಆತ್ಮ ಪರಮಾತ್ಮರನ್ನು ತಿಳಿಸುವುದು ಮೊದಲನೆ ಗಾದೆಯಾದಾಗ, ಗುರುವು ಶಿಷ್ಯನ ವಿಷಯವನ್ನು ತಿಳಿಸುವುದು ಎರಡನೆಯ ಗಾದೆ. ಆದ್ದರಿಂದ ಎರಡೂ ಜ್ಞಾನ ಪರವಾದ ಗಾದೆಗಳೆಂದು ಉತ್ತರ ಹೇಳಲಾಗಿದೆ. ನೂರಕ್ಕೆ ತೊಂಬತ್ತು ಪಾಲು ಗಾದೆಗಳು ಜ್ಞಾನ ಪರವಾಗಿ ಇರುತ್ತವೆ. ಆದ್ದರಿಂದ ನಮ್ಮ ರಚನೆಗಳಲ್ಲಿ **"ಗಾದೆಗಳ ಜ್ಞಾನ"** ಎನ್ನುವ ಪುಸ್ತಕವಿದೆ.

# ಜ್ಞಾನ ಪರೀಕ್ಷೆ

**ತಿರುಪತಿ** **ದಿನಾಂಕ–08–11–1998**

**619. (1)ಸಜೀವ ಶರೀರದಲ್ಲಿ ಒಟ್ಟು ಭೂತಗಳೆಷ್ಟು ಇವೆ?**

ಉ. ಏಳು.

**ವಿವರ :** ಶರೀರ ಪಂಚ ಭೂತಗಳಿಂದ ನಿರ್ಮಾಣವಾಗಿದೆ. ಅಂತಹ ಶರೀರದಲ್ಲಿ ಜೀವಾತ್ಮ, ಆತ್ಮ ಎನ್ನುವ ಎರಡು ಭೂತಗಳಿವೆ. ಶರೀರ ನಿರ್ಮಿತದಲ್ಲಿ ಐದು, ಶರೀರವನ್ನು ಕದಲಿಸುವುದಕ್ಕೆ ಒಂದು, ಶರೀರದಲ್ಲಿ ಅನುಭವಿಸುವುದಕ್ಕೆ ಒಂದು ಒಟ್ಟು ಏಳು ಸಜೀವ ಶರೀರದಲ್ಲಿರುವ ಭೂತಗಳೆಂದು ಹೇಳಬಹುದು. ವಿವರವಾಗಿ ಹೇಳಬೇಕೆಂದರೆ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ, ಆತ್ಮ, ಜೀವಾತ್ಮ ಸಜೀವ ಶರೀರದಲ್ಲಿರುವ ಭೂತಗಳೆಂದು ಹೇಳಬಹುದು.

**620. (2) ಪ್ರಪಂಚದಲ್ಲಿ ಎಷ್ಟೋ ಸಲ ಮಾಯೆ ಕೈಯಲ್ಲಿ ಸೋತುಹೋದ ದೈವ ದೊಡ್ಡದಾ?**

ಉ. ದೊಡ್ಡದಲ್ಲ.

**ವಿವರ :** ಪ್ರಪಂಚದಲ್ಲಿ ದೇವರು, ಮಾಯೆ ಎರಡೂ ಇವೆ. ಪ್ರಪಂಚವೆಲ್ಲಾ ಮಾಯೆ ಸಾಮ್ರಾಜ್ಯವಾಗಿರುವಾಗ, ಮೋಕ್ಷ ಅಥವಾ ಪರಮಪದ ದೇವರ ರಾಜ್ಯವಾಗಿದೆ. ಮಾಯೆ ಪ್ರಭಾವ ಪ್ರಪಂಚವೆಲ್ಲಾ ಆವರಿಸಿ, ತನ್ನ ಸಾಮ್ರಾಜ್ಯದಲ್ಲಿ ಯಾರನ್ನು ದೇವರ ಕಡೆ ಹೋಗದಹಾಗೆ ಮಾಡುವುದೇ ಅದರ ಮುಖ್ಯವಾದ ಕೆಲಸ. ಆ ಕಾರ್ಯದಲ್ಲಿ ದೇವರಿಗಿಂತಲೂ ಹೆಚ್ಚಿನ ಮಹಿಮೆಗಳು ತೋರಿಸುತ್ತಾ, ತಾನೇ ದೇವರೆಂದು ಎಲ್ಲರನ್ನು ನಂಬಿಸಿ, ಅಸಲಾದ ದೇವರ ಕಡೆಯಿಂದ ಮರಳಿಸಿಕೊಳ್ಳುವುದೇ ತನ್ನ ವಿಧಾನ. ಇಲ್ಲಿಗೆ 90% ಮನುಷ್ಯರು ದೇವರನ್ನು ವಿಶ್ವಾಸಿಸುತ್ತಿದ್ದೇವೆಂದುಕೊಂಡು ತಪ್ಪಾಗಿ ಅರ್ಥೈಸಿಕೊಂಡು ಮಾಯೆಯನ್ನು ನಂಬಿದ್ದಾರೆ. ಪರಮಾತ್ಮನೆ ಭಗವಂತನಾಗಿ ಭೂಮಿ ಮೇಲೆಬಂದಾಗ, ಆತನನ್ನು ಸಹ ಧರ್ಮಪ್ರಚಾರ ಮಾಡದ ಹಾಗೆ ಎಷ್ಟೋ ಆತಂಕಗಳನ್ನು ಮಾಡುತ್ತಿದೆ. ಪ್ರಪಂಚದಲ್ಲಿ ಪರಮಾತ್ಮ ಅಂಶವಾದ ಭಗವಂತನು ಸಹ ಮಾಯೆ ಕೈಯ್ಯಲ್ಲಿ ಎಷ್ಟೋ ಕಷ್ಟಗಳು ಬೀಳಬೇಕಾಗಿದೆ. ಮಾಯೆ ಕೈಯಲ್ಲಿ ಎಷ್ಟೋ ಸಲ ಸೋತುಹೋಗಬೇಕಾಗಿ ಬರುತ್ತಿದೆ. ಮಾಯೆ ಸಾಮ್ರಾಜ್ಯದಲ್ಲಿ ಮಾಯೆ ದೊಡ್ಡದು, ದೈವ ದೊಡ್ಡದಲ್ಲ. ದೇವರ

ಸಾಮ್ರಾಜ್ಯದಲ್ಲಿ ದೇವರೆ ದೊಡ್ಡವನು, ಮಾಯೆ ದೊಡ್ಡದಲ್ಲ. ಉದಾಹರಣೆಗೆ ಕುಸ್ತಿ ಸ್ಪರ್ದೆ ರಿಂಗ್‌ನಲ್ಲಿ ಕುಸ್ತಿ ಸ್ಪರ್ಧಿಯು ಬಲಾಢ್ಯನಾಗಿ ಇರುತ್ತಾನೆ. ರಿಂಗ್‌ನೊಳಗೆ ಬರುವ ಯಾರನ್ನಾದರೂ ಹೊಡೆಯಬಲ್ಲನು. ಸ್ಪರ್ಧಿಗೆ ರಿಂಗ್ ಅವನ ರಾಜ್ಯ ಅಲ್ಲಿ ಜಯಿಸಬಲ್ಲನು. ಅದೇ ಸ್ಪರ್ಧಿಯು ರಿಂಗ್ ದಾಟಿ ಹೊರಗೆ ಬಂದರೆ ಹೊರಗೆ ನಿಬಂಧನೆಗಳಿರುವುದಿಲ್ಲ, ಆದ್ದರಿಂದ ಆಯುಧಗಳಿಂದ ಯಾರಾದರೂ ಅವನನ್ನು ಜಯಿಸಬಲ್ಲರು. ಬಲಹೀನನಾದರೂ ಬಲವಾದ ಸ್ಪರ್ಧಿಯನ್ನು ಜಯಿಸಬಲ್ಲನು. ರಿಂಗ್‌ನಲ್ಲಿ ನಿಬಂಧನೆಗಳ ಪ್ರಕಾರ ಆಯುಧಗಳು ಉಪಯೋಗಿಸಬಾರದು. ಆದ್ದರಿಂದ ತೋಳುಬಲವಿರುವ ಸ್ಪರ್ಧಿಯು ಬಲವಿಲ್ಲದವನನ್ನು ಸುಲಭವಾಗಿ ಜಯಿಸಬಲ್ಲನು. ಅದೇ ಹೊರಗಾದರೆ ನಿಬಂಧನೆಗಳಿಲ್ಲ, ಆದ್ದರಿಂದ ಅದು ಬಲಹೀನನ ರಾಜ್ಯ. ಯಾವುದೋ ಒಂದು ಬುದ್ಧಿಯನ್ನುಪಯೋಗಿಸಿ ಬಲಹೀನನು ಜಯಿಸಬಲ್ಲನು. ರಿಂಗ್‌ನಲ್ಲಿಯಾದರೆ ತೋಳುಬಲವೇ ಅವಶ್ಯ, ಆದ್ದರಿಂದ ಅಲ್ಲಿರುವುದು ಸ್ಪರ್ಧಿಯ ರಾಜ್ಯ. ಹಾಗೇ ಪ್ರಪಂಚವೆನ್ನುವ ರಿಂಗ್‌ನಲ್ಲಿ ಮಾಯೆ ಬಲವಾದ ಸ್ಪರ್ಧಿಗೆ ಸಮಾನ. ದೈವ ಬಲಹೀನನು. ಅದೇ ಪರಲೋಕ ರಾಜ್ಯದಲ್ಲಿ ದೈವ ದೊಡ್ಡವನು, ಮಾಯ ಬಲಹೀನ. ಈ ಲೆಕ್ಕ ಪ್ರಕಾರ ಪ್ರಪಂಚದಲ್ಲಿ ದೈವ ಮಾಯೆಗಿಂತಲೂ ದೊಡ್ಡದಲ್ಲ. ಪ್ರಪಂಚದಲ್ಲಿ ದೈವಕ್ಕೆ ನಿಬಂಧನೆಗಳಿವೆ. ಮಾಯೆಗೆ ಇಷ್ಟಾರಾಜ್ಯ ಆದ್ದರಿಂದಲೆ ದೈವಗಿಂತಲೂ ಮಾಯೆ ಪ್ರಪಂಚದಲ್ಲಿ ದೊಡ್ಡದು.

**621. (3) ಎತ್ತರ ಮತ್ತು ಕುಳ್ಳ ಇರುವ ಇಬ್ಬರಲ್ಲಿ ಆತ್ಮಗಳಿವೆಯಾ? ಇದ್ದರೆ ಯಾವ ಆಕಾರದಲ್ಲಿವೆ?**

ಉ. ಇಬ್ಬರಲ್ಲಿ ಆತ್ಮಗಳಿವೆ. ಅವರ ಹೋಲಿಕೆಗಳ ರೂಪದಲ್ಲೇ ಆತ್ಮಗಳಿವೆ.

**ವಿವರ :** ಭೂಮಿ ಮೇಲೆ ಪ್ರತಿ ಜೀವರಾಶಿಯಲ್ಲೂ ಆತ್ಮಗಳಿವೆ. ಒಂದು ಶರೀರದಲ್ಲಿ ಒಂದು ಜೀವಾತ್ಮ, ಒಂದು ಆತ್ಮ ಇದೆ ಎನ್ನುವುದು ಸೂತ್ರ. ಆದ್ದರಿಂದ ಸೂತ್ರದ ಪ್ರಕಾರ ಎತ್ತರ, ಕುಳ್ಳರಲ್ಲಿ ಇಬ್ಬರಲ್ಲಿ ಜೀವಾತ್ಮಗಳೊಂದಿಗೆ ಆತ್ಮಗಳು ಇವೆ. ಒಂದು ಶರೀರದಲ್ಲಿ ನಿವಾಸಿಸುವ ಆತ್ಮ, ಆ ಶರೀರವೆಲ್ಲಾ ವ್ಯಾಪಿಸಿ ಇರುತ್ತದೆನ್ನುವುದು ಸಹ ಸೂತ್ರವೆ. ಆ ಸೂತ್ರದ ಪ್ರಕಾರ ಯಾವ ಶರೀರದಲ್ಲಿನ ಆತ್ಮ ಆ ಶರೀರವೆಲ್ಲಾ ವ್ಯಾಪಿಸಿ ಆ ಶರೀರ ಆಕೃತಿಯನ್ನು ಹೋಲಿರುತ್ತದೆ. ಎತ್ತರ ಇರುವವನಲ್ಲಿರುವ ಆತ್ಮ ಎತ್ತರವಾಗಿ, ಕುಳ್ಳಗಿರುವವನಲ್ಲಿ ಆತ್ಮ ಕುಳ್ಳದಾಗಿ ಇರುತ್ತದೆ. ಪಾತ್ರೆಯಲ್ಲಿ ಹಾಕಿದ ನೀರು ಪಾತ್ರೆ ಆಕಾರವನ್ನು ಹೋಲಿದಹಾಗೆ, ಬೆಳವಣೆಗೆಯಾದ ಶರೀರದಲ್ಲಿನ ಆತ್ಮ ಆ ಶರೀರವೆಲ್ಲಾ ವ್ಯಾಪಿಸಿ, ಅದೇ ಆಕೃತಿಯನ್ನು

ಹೋಲಿರುವುದು ಸಹಜ. ಹಾವು ಶರೀರದಲ್ಲಿನ ಆತ್ಮ ಹಾವು ಆಕೃತಿಯನ್ನು, ನಾಯಿ ಶರೀರದಲ್ಲಿನ ಆತ್ಮ ನಾಯಿ ರೂಪವನ್ನು, ಸಿಂಹದಲ್ಲಿನ ಆತ್ಮ ಸಿಂಹದ ಹಾಗೆ ಆಕೃತಿಯನ್ನು ಸಂತರಿಸಿಕೊಂಡಿರುತ್ತದೆ. ಸ್ಥೂಲ ಶರೀರವನ್ನು ಅನುಸರಿಸಿ ಆತ್ಮ ಸೂಕ್ಷ್ಮಾಕಾರವನ್ನು ಹೊಂದಿದೆ. ಆತ್ಮಕ್ಕೆ ಆಕಾರವಿದೆ ಎನ್ನುವ ಮಾತು ಎಲ್ಲಿಯೂ ಕೇಳಿರುವುದಿಲ್ಲ. ಯಾವ ಗ್ರಂಥದಲ್ಲಿಯೂ ಬರೆದಿರುವುದಿಲ್ಲ. ಇಲ್ಲಿ ಮೊದಲು ಬರೆಯಲಾಗುತ್ತಿದೆ, ಹೇಳಲಾಗುತ್ತಿದೆ. ಆದ್ದರಿಂದ ಅಸತ್ಯವೆಂದುಕೊಳ್ಳಬೇಡಿ. ಆತ್ಮನಿಗು, ಜೀವಾತ್ಮನಿಗೂ ಆಕಾರವಿದೆಯೆನ್ನುವ ನಮ್ಮ ಮಾತು ನೂರಕ್ಕೆ ನೂರುಪಾಲು ಸತ್ಯ, ಶಾಸ್ತ್ರಬದ್ಧ.

**622. (4) ಹದ್ದು ಹಾವನ್ನು, ಹಾವು ಕಪ್ಪೆಯನ್ನು, ಕಪ್ಪೆ ಹುಳಗಳನ್ನು, ಹುಳಗಳನ್ನು ಪಕ್ಷಿಗಳು, ಪಕ್ಷಿಗಳನ್ನು ಮನುಷ್ಯ ತಿನ್ನುತ್ತಿದ್ದಾನೆ ಇದರಲ್ಲಿ ಯಾರಿಗೆ ಹೆಚ್ಚು ಕರ್ಮ ಬರಬಹುದು?**

ಉ. ಮನುಷ್ಯನಿಗೆ.

**ವಿವರ :** ಹದ್ದು ಹಾವನ್ನು, ಹಾವು ಕಪ್ಪೆಯನ್ನು ತಿನ್ನುತ್ತಿವೆ. ಮನುಷ್ಯ ಹೊರತು ಯಾವುದು ಯಾವುದನ್ನು ತಿಂದರೂ ಅವುಗಳಿಗೆ ಮನುಷ್ಯಗಿಂತ ಕರ್ಮ ಅಂಟುವುದು ಕಡಿಮೆ. ಮನುಷ್ಯ ಪಕ್ಷಿಗಳನ್ನು ತಿಂದರೂ, ಜಂತುಗಳನ್ನು ತಿಂದರೂ, ಉಳಿದ ಜಂತುಗಳಿಗೆ ಸಂಭವಿಸುವ ಕರ್ಮಗಿಂತಲೂ ಹೆಚ್ಚು ಕರ್ಮ ಬರುತ್ತಿದೆ. ಉಳಿದ ಜಂತುಗಳು ಯಾವುದನ್ನು ಸಾಯಿಸಿ ತಿಂದರೂ, ಅವುಗಳಲ್ಲಿನ ಅಹಂ ಕಡಿಮೆ. ಮನುಷ್ಯನಲ್ಲಿ ಅಹಂವೊಂದರ ಕೆಲಸ ಹೆಚ್ಚಾಗಿರುವುದರಿಂದ, ಕರ್ಮ ಹೆಚ್ಚಾಗಿ ಸಂಭವಿಸುತ್ತಿದೆ. ಶರೀರದಲ್ಲಿ ಒಂದು ಕೆಲಸ ಮಾಡಿದಾಗ, ಅದು ಗತ ಕರ್ಮ ಪ್ರಕಾರ ನಡೆದಾಗ, ಆ ಕೆಲಸಕ್ಕೂ ಜೀವಿಗೂ ಎಂತಹ ಸಂಬಂಧವಿಲ್ಲದಿದ್ದರೂ, ಹಿಂದಿನ ಕರ್ಮ ಎನ್ನುವುದು ಜೀವಾತ್ಮನಿಗೆ ತಿಳಿಯದೆ ಹೋಗುವುದರಿಂದಲೂ, ಅಹಂ ನೀನೇ ಮಾಡಿದ್ದೀಯೆಂದು ಜೀವಾತ್ಮನಿಗೆ ಬೋಧಿಸುವುದರಿಂದಲೂ, ಅಹಂಭಾವವನ್ನು ಜೀವಾತ್ಮ ಹೊಂದಿ, ನನ್ನಿಂದಲೇ ಈ ಕೆಲಸ ನಡೆದಿದೆಯೆಂದು ಶರೀರ ಮೊತ್ತವನ್ನು ತಾನಾಗಿ ಭಾವಿಸುವುದರಿಂದ, ನಡೆದ ಕೆಲಸದಲ್ಲಿನ ಹೊಸ ಕರ್ಮ ಜೀವಾತ್ಮನಿಗೆ ಸೇರುತ್ತಿದೆ. ಉಳಿದ ಜೀವರಾಶಿಗಳು ಅಹಂಭಾವವನ್ನು ಹೊಂದುವುದು ಬಹಳ ಕಡಿಮೆ, ಕೆಲವು ಕೆಲಸಗಳಲ್ಲಿ ಅಹಂಭಾವವೇ ಇರುವುದಿಲ್ಲ. ಆದ್ದರಿಂದ ಅವುಗಳಿಗೆ ಮಾನವನಿಗಿಂತಲೂ ಬಹಳ ಕಡಿಮೆ ಕರ್ಮ ಅಂಟುತ್ತಿದೆ ಎಂದು ಹೇಳಬಹುದು.

**623. (5) 90% ಜ್ಞಾನ, 10% ಅಜ್ಞಾನ ಇರುವವನು, ಹಾಗೇ 10% ಜ್ಞಾನ, 90%**

**ಅಜ್ಞಾನ ಇರುವವನು ಇಬ್ಬರು ಮಾಯೆಯಲ್ಲಿ ಬಿದ್ದಿದ್ದಾರೆ, ಅವರಲ್ಲಿ ದೇವರಿಗೆ ಬಹಳ ದೂರವಾಗಿ ಇರುವವರು ಯಾರು?**

ಉ. ಮೊದಲನೆಯವನು.

**ವಿವರ :** ಹೆಚ್ಚು ಜ್ಞಾನವನ್ನು ಹೊಂದಿ ಕಡಿಮೆ ಅಜ್ಞಾನ ಇರುವವನು, ಕಡಿಮೆ ಜ್ಞಾನ ಇದ್ದು ಹೆಚ್ಚು ಅಜ್ಞಾನ ಇರುವವನಿಗಿಂತ ಉತ್ತಮನು. ನಿಜವಾಗಿ ಅವನೇ ದೇವರಿಗೆ ಹತ್ತಿರವಾಗಿ ಇರುವವನು. ಹೆಚ್ಚಾಗಿ ಜ್ಞಾನ ಇರುವವನನ್ನು ಜ್ಞಾನಿ ಎಂದು, ಹೆಚ್ಚು ಅಜ್ಞಾನ ಇರುವವನನ್ನು ಅಜ್ಞಾನಿ ಎನ್ನುತ್ತೇವೆ. ಅಜ್ಞಾನಿ ಮಾಯೆಯಲ್ಲಿ ಬೀಳುವುದು ಸಹಜವೇ ಏಕೆಂದರೆ ಅವನಿಗೆ ಜ್ಞಾನ ಕಡಿಮೆ. ಆದ್ದರಿಂದ ಮಾಯೆಯಲ್ಲಿ ಬಿದ್ದರೂ ಅದು ಅಷ್ಟು ದೊಡ್ಡದಾಗಿ ಕಾಣಿಸುವುದಿಲ್ಲ. ಆದರೆ ಜ್ಞಾನಿ ಮಾಯೆಯಲ್ಲಿ ಬೀಳಬಾರದು. ಜ್ಞಾನಿ ಮಾಯೆಯಲ್ಲಿ ಬಿದ್ದರೆ ಅದು ದೊಡ್ಡದಾಗಿ ಲೆಕ್ಕಿಸಿಕೊಳ್ಳಬೇಕಾದ್ದೆ. ದೇವರಿಗೆ ಯಾರು ಹತ್ತಿರ, ಯಾರು ದೂರ ಎಂದು ನೋಡಿದರೆ ಜ್ಞಾನಿಯಾಗಿ ಮಾಯೆಯಲ್ಲಿ ಬಿದ್ದವನೇ ಅಜ್ಞಾನಿಗಿಂತ ಹೆಚ್ಚು ದೂರವಾಗುತ್ತಿದ್ದಾನೆಂದು ತಿಳಿಯುತ್ತಿದೆ. ತಿಳಿಯದೆ ತಪ್ಪು ಮಾಡಿದರೆ ಅದು ಹೆಚ್ಚಾಗಿ ಲೆಕ್ಕಿಸಲಾಗದು. ತಿಳಿದು ತಪ್ಪು ಮಾಡಿದರೆ ಅದು ಹೆಚ್ಚಾಗಿ ಲೆಕ್ಕಿಸಲಾಗುತ್ತದೆ. ಆದ್ದರಿಂದ ಜ್ಞಾನ ತಿಳಿದವನೇ ಹೆಚ್ಚು ದೂರವಿರುವಹಾಗೆ ಗುರುತಿಸಲಾಗುತ್ತಿದೆ.

**624. (6) ಸುಂದರವಾಗಿರುವ ಆಕಾರ, ಇಂಪಾದ ಸ್ವರ ಇರುವ ಗಾಯಕಿ ಹಾಡುತ್ತಿರುವಾಗ ಒಬ್ಬ ಕುರುಡನು, ಒಬ್ಬ ಕುಂಟನು ಕೇಳುತ್ತಿದ್ದಾರೆ. ಇಬ್ಬರಲ್ಲಿ ಯಾರಿಗೆ ಹೆಚ್ಚು ಕರ್ಮ ಬರುವ ಅವಕಾಶವಿದೆ?**

ಉ. ಕುಂಟನಿಗೆ.

**ವಿವರ :** ಇಲ್ಲಿ ಇಬ್ಬರು ವ್ಯಕ್ತಿಗಳಲ್ಲಿ ಒಬ್ಬನಾದ ಕುಂಟನು ಕೇಳುವನು ಮತ್ತು ನೋಡಬಲ್ಲನು. ಎರಡನೆಯವನಾದ ಕುರುಡನು ಕೇಳಬಲ್ಲನು ಆದರೆ ನೋಡಲಾರನು. ಕುಂಟನಿಗೆ ಕಣ್ಣು ಕಿವಿ ಎರಡೂ ಅವಯವಗಳು ಕೆಲಸಮಾಡುತ್ತಿವೆ. ಕುರುಡನಿಗೆ ಕಿವಿ ಒಂದು ಮಾತ್ರ ಕೆಲಸ ಮಾಡುತ್ತಿದೆ. ಕುಂಟನು ಹಾಡನ್ನು ಕೇಳುವುದೇ ಅಲ್ಲದೆ ಅವಳ ಅಂದವನ್ನು ನೋಡಿ ಆಕೆ ಸುಂದರವಾಗಿದ್ದಾಳೆಂದುಕೊಳ್ಳುತ್ತಾ, ಹಾಡೂ ಸಹ ಚೆನ್ನಾಗಿ ಹಾಡುತ್ತಾಳೆಂದು ತಿಳುದುಕೊಳ್ಳುತ್ತಿದ್ದಾನೆ. ಕುರುಡನಿಗೆ ಅವಳ ಅಂದ ತಿಳಿಯದು. ಹಾಡು ಮಾತ್ರ ಕೇಳುತ್ತಿದ್ದಾನೆ. ಪಾಪವಾಗಲಿ, ಪುಣ್ಯವಾಗಲಿ ಒಂದು ಇಂದ್ರಿಯದಿಂದ ಬರುವದಕ್ಕಿಂತ ಎರಡು ಇಂದ್ರಿಯಗಳಿಂದ ಬರುವುದು ಎರಡರಷ್ಟಿರುತ್ತದೆ. ಇಬ್ಬರು ಒಂದೇ ಸಂಘಟನೆ ಹತ್ತಿರ

ಇದ್ದರೂ ನಾನು ನೋಡುತ್ತಿದ್ದೇನೆ ಕೇಳುತ್ತಿದ್ದೇನೆಂದು ಕುಂಟನು, ನಾನು ಕೇಳುತ್ತಿದ್ದೇನೆಂದು ಕುರುಡನು ತಿಳಿದುಕೊಳ್ಳುವುದರಿಂದ, ಕುಂಟನಲ್ಲಿ ಅಹಂ ಎರಡರಷ್ಟು, ಕುರುಡನಲ್ಲಿನ ಅಹಂ ಒಂದರಷ್ಟು ಕೆಲಸ ಮಾಡುವುದರಿಂದ, ಕುಂಟನಿಗೆ ಹೆಚ್ಚು, ಕುರುಡನಿಗೆ ಕಡಿಮೆ ಕರ್ಮ ಉಂಟಾಗುತ್ತಿದೆ.

**625. (7) ಮನಸ್ಸಿಗೆ ಆಕಾರವಿದೆಯಾ? ಹೇಗಿದೆ?**

ಉ. ಆಕಾರವಿದೆ. ಎಚ್ಚರದಲ್ಲಿ ನಿನ್ನ ಶರೀರದ ಹಾಗೆ, ನಿದ್ರೆಯಲ್ಲಿ ಬಿಂದುವಿನಹಾಗೆ ಇದೆ.

**ವಿವರ :** ಶರೀರದಲ್ಲಿನ 25 ಭಾಗಗಳಿಗೇ ಅಲ್ಲದೆ ಆತ್ಮಕ್ಕೂ ಸಹ ಆಕಾರವಿದೆ ಎಂದು ಮೊದಲೇ ಹೇಳಿಕೊಂಡಿದ್ದೇವೆ. ಆದ್ದರಿಂದ ಇಲ್ಲಿಯೂ ಸಹ ಮನಸ್ಸಿಗೆ ಆಕಾರವಿದೆ ಎಂದು ಹೇಳುತ್ತಿದ್ದೇವೆ. ಮನಸ್ಸಿಗೆ ಆಕಾರ ಎಲ್ಲವುಗಳಹಾಗೆ ಒಂದೇ ವಿಧವಾಗಿ ಇರದೇ ನಿದ್ರೆಯಲ್ಲಿ ಒಂದು ವಿಧವಾಗಿ, ಎಚ್ಚರದಲ್ಲಿ ಒಂದು ವಿಧವಾಗಿ ಇರುವುದು ವಿಶೇಷ. ಎಚ್ಚರದಲ್ಲಿ ಮನಸ್ಸು ಆತ್ಮನೊಂದಿಗೆ ಶರೀರವೊಂದರ ಚರ್ಮದ ಅಂಚಿನವರೆಗು ವ್ಯಾಪಿಸಿದೆ. ಇಂದ್ರಿಯಗಳವರೆಗು ವ್ಯಾಪಿಸಿ ಅವುಗಳ ಸಮಾಚಾರವನ್ನು ತೆಗೆದುಕೊಂಡು ಹೋಗುವುದು ಮನಸ್ಸಿನ ಒಂದು ಕೆಲಸ, ಆದ್ದರಿಂದ ಚರ್ಮದವರೆಗು ಮನಸ್ಸು ವಿಸ್ತರಿಸಿದೆ. ಯಾವ ಶರೀರದಲ್ಲಿನ ಮನಸ್ಸು ಆ ಶರೀರದ ಹೊರಗಿನ ಅಂಚಿನವರೆಗು ಇರುವುದರಿಂದ ಆ ಶರೀರವೊಂದರ ಆಕೃತಿಯನ್ನು ಹೋಲಿ ಇರುತ್ತದೆ. ನಾಯಿ ಶರೀರದಲ್ಲಿನ ಮನಸ್ಸು ನಾಯಿ ಆಕೃತಿ, ಮನುಷ್ಯ ಶರೀರದಲ್ಲಿನ ಮನಸ್ಸು ಮನುಷ್ಯ ಆಕೃತಿಯನ್ನು ಹೋಲಿದೆಯೆಂದು ಹೇಳಬಹುದು. ಒಂದು ಶರೀರದಲ್ಲಿನ ಆತ್ಮ ಆ ಶರೀರವೊಂದರ ಆಕಾರವನ್ನು ಹೋಲಿರುವಹಾಗೆ, ಮನಸ್ಸು ಸಹ ಆತ್ಮನ ಹಾಗೆ ಆ ಶರೀರ ಆಕಾರವನ್ನೇ ಹೋಲಿದೆ. ಆತ್ಮ ನಿದ್ರೆಯಲ್ಲಿಯೂ ಎಚ್ಚರದಲ್ಲಿಯೂ ಒಂದೇ ಆಕಾರವನ್ನು ಹೊಂದಿರುವಾಗ, ಮನಸ್ಸು ಮಾತ್ರ ಎಚ್ಚರದಲ್ಲಿ ಶರೀರ ಆಕೃತಿಯನ್ನು ಹೋಲಿದ್ದು, ನಿದ್ರೆಯಲ್ಲಿ ಅವಯವಗಳವರೆಗು ವ್ಯಾಪಿಸದೆ ಬ್ರಹ್ಮನಾಡಿಯೊಳಗೆ ಮುದಿರಿಕೊಂಡು ಹೋಗುವುದರಿಂದ, ಎಚ್ಚರದಲ್ಲಿರುವ ಶರೀರ ಆಕಾರವನ್ನು ನಿದ್ರೆಯಲ್ಲಿ ಕಳೆದುಕೊಳ್ಳುತ್ತಿದೆ. ನಿದ್ರೆಯಲ್ಲಿ ಬ್ರಹ್ಮನಾಡಿಯಲ್ಲಿ ಒಂದೇ ಕೇಂದ್ರವಾಗಿ ಬದಲಾಗುವುದರಿಂದ ನಿದ್ರೆಯಲ್ಲಿ ಮನಸ್ಸು ಬಿಂದುವಾಕೃತಿಯನ್ನು ಹೊಂದುತ್ತಿದೆ. ನಿದ್ರೆಯಲ್ಲಿ ಬಿಂದುವಾಗಿರುವ ಮನಸ್ಸು, ಎಚ್ಚರದಲ್ಲಿ ಶರೀರವೆಲ್ಲಾ ವಿಸ್ತರಿಸಿ ಶರೀರಾಕೃತಿಯನ್ನು ಹೊಂದುವುದರಿಂದ, ನಿದ್ರೆಯಲ್ಲಿ ಒಂದು ಆಕಾರ, ಎಚ್ಚರದಲ್ಲಿ ಒಂದು ಆಕಾರವನ್ನು

ಹೊಂದಿದೆಯೆಂದು ಹೇಳಬಹುದು. ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ! ಇಲ್ಲಿಯವರೆಗು ಮನಸ್ಸಿಗೆ ಆಕಾರವಿದೆಯೆಂದು ಎಲ್ಲಿ ಯಾರೂ ಹೇಳಲಿಲ್ಲ. ಅದ್ದರಿಂದ ವಿಶ್ವಾಸಿಸಬೇಕಾದ ವಿಷಯವಲ್ಲವೆಂದು ತೆಗೆದುಹಾಕದೆ ಅರ್ಥ ಮಾಡಿಕೊಳ್ಳುತ್ತೀರೆಂದು ನಂಬುತ್ತಿದ್ದೇವೆ. ಮನಸ್ಸಿಗೆ ಆಕಾರವಿರುವುದೇ ಅಲ್ಲದೆ, ನಿದ್ರೆಯಲ್ಲಿ ಒಂದು ವಿಧ, ಎಚ್ಚರದಲ್ಲಿ ಒಂದು ವಿಧವಿದೆಯೆಂದು ತಿಳಿಯಬೇಕು.

**626. (8) ದೊಡ್ಡ ಆಲೋಚನೆಗಳು ಹೃದಯದಿಂದ ಬರುವವು ಎನ್ನುವ ಮಾತು ನಿಜವಾ?**

ಉ. ನಿಜವೇ.

**ವಿವರ :** ಭಗವದ್ಗೀತೆಯಲ್ಲಿ ನಾನು ಸರ್ವಜೀವಿಗಳ ಹೃದಯದಲ್ಲಿದ್ದೇನೆಂದು, ನನ್ನಿಂದಲೇ ಸ್ಮೃತಿ, ಊಹೆ, ಜ್ಞಾನ ಉಂಟಾಗುತ್ತದೆಂದು ಪುರುಷೋತ್ತಮ ಪ್ರಾಪ್ತಿ ಯೋಗ ಹದಿನೈದನೆ ಶ್ಲೋಕದಲ್ಲಿ ಹೇಳಿದಹಾಗೆ, ನಮಗೆ ತಿಳಿಯದ ದೊಡ್ಡ ಯೋಚನೆಗಳನ್ನು ಹೃದಯದಲ್ಲಿರುವ ದೇವರೇ ಕೊಡುತ್ತಿದ್ದಾನೆ. ಒಬ್ಬ ವಿಜ್ಞಾನತಜ್ಞ (ಶಾಸ್ತ್ರಜ್ಞಾ) ಒಂದು ಹೊಸ ವಿಷಯವನ್ನು ಕಂಡುಹಿಡಿದಾಗ ಅವನ ಹೃದಯದಲ್ಲಿರುವ ದೇವರೇ ಆ ಹೊಸ ವಿಷಯಕ್ಕೆ ಸಂಬಂಧಿಸಿದ ಯೋಚನೆ ಕೊಟ್ಟು ಪರಿಶೋಧನೆ ಮಾಡಿಸುವನು. ಮೇಲಕ್ಕೆ ಇಂತಹವನು, ಇಂತಹ ವಿಷಯವನ್ನು ಹೊಸದಾಗಿ ಕಂಡುಹಿಡಿದಿದ್ದಾನೆಂದರೂ, ನಿಜವಾಗಿ ಒಳಗೆ ತಿಳಿಸಿದವನು ಹೃದಯದಲ್ಲಿರುವವನೆ. ಹಳೆ ವಿಷಯವಾದರೆ ಮನಸ್ಸಿನಿಂದ ಜ್ಞಾಪಕ ಬರುತ್ತಿರುತ್ತದೆ. ಎಲ್ಲಿ ಇಲ್ಲದ ಹೊಸದಾದರೆ ಹೃದಯದಿಂದ ಬಂದಿದೆಯೆಂದು ತಿಳಿದುಕೊಳ್ಳಬೇಕು. ಹೊಸದಾಗಿ ಕಂಪ್ಯೂಟರನ್ನು ಕಂಡುಹಿಡಿದಾಗ ಅದನ್ನು ಕಂಡುಹಿಡಿದವನ ಕೆಲಸವಲ್ಲವೆಂದು, ಅವನಲ್ಲಿರುವವನು ತಿಳಿಸಿದ ಯೋಚನೆ ಫಲಿತವೆಂದು ತಿಳಿಯಬೇಕು. ಆದ್ದರಿಂದ ಕೆಲವು ದೊಡ್ಡ ಯೋಚನೆಗಳು ಹೃದಯದಿಂದ ಬರುವವೆಂದು ಹೇಳಬಹುದು.

**627. (9) ಕೈ ಉಗುರಿನವರೆಗು ಆತ್ಮ ಇದೆ, ಉಗುರನ್ನು ಕತ್ತರಿಸಿದಾಗ ಆತ್ಮ ಮುರಿಯುತ್ತದೆ. ಆದ್ದರಿಂದ ಪಾಪಬರುತ್ತದಾ ಇಲ್ಲವಾ?**

ಉ. ಬರುವುದಿಲ್ಲ.

**ವಿವರ :** ಆತ್ಮ ಶರೀರವೆಲ್ಲಾ ವ್ಯಾಪಿಸಿರುವುದರಿಂದ ಉಗುರನ್ನು ಕತ್ತರಿಸಿದಾಗ ಉಗುರೊಂದಿಗೆ ಆತ್ಮಸಹ ಮುರಿಯುವುದು ವಾಸ್ತವವೆ. ಆದರೆ ಅಲ್ಲಿ ನಡೆಯುತ್ತಿರುವ

ಕೆಲಸದಲ್ಲಿ ಸುಖವಾಗಲಿ ದುಃಖವಾಗಲಿ ಇಲ್ಲ. ಕತ್ತರಿಸುವ ಉಗುರಲ್ಲಿ ನೋವಿಲ್ಲ. ಹಾಗೇ ಸುಖವಿಲ್ಲ. ನಡೆಯುವ ಕೆಲಸದಲ್ಲಿ ಒಳ್ಳೆಯ ಕೆಟ್ಟದ್ದನ್ನು ಅನುಸರಿಸಿ ಪುಣ್ಯ ಪಾಪಗಳು ಬರುತ್ತವೆ. ಉಗುರನ್ನು ಕತ್ತರಿಸುವುದರಲ್ಲಿ ಒಳ್ಳೆದಕ್ಕೆ ಫಲಿತವಾದ ಪುಣ್ಯವಾಗಲಿ, ಕೆಟ್ಟದಕ್ಕೆ ಫಲಿತವಾದ ಪಾಪವಾಗಲಿ ಬರುತ್ತಿಲ್ಲ. ಸುಖ ದುಃಖಗಳಿಲ್ಲದ ಕೆಲಸದಲ್ಲಿ ಪುಣ್ಯಪಾಪ ಫಲಿತಗಳಿರುವುದಿಲ್ಲ. ಆದ್ದರಿಂದ ಉಗುರನ್ನು ಕತ್ತಿರಿಸಿದಾಗ ಆತ್ಮ ಮುರಿದರೂ, ಅದರಿಂದ ಪಾಪವಾಗಲಿ, ಪುಣ್ಯವಾಗಲಿ ಬರುವುದಿಲ್ಲ. ಕೆಲವು ಕೆಲಸಗಳಲ್ಲಿ ಕರ್ಮಗಳಿದ್ದರೂ ಅಹಂ ಇಲ್ಲದೆ ಹೋಗುವುದರಿಂದ ಕರ್ಮ ಅಂಟುವುದಿಲ್ಲ. ಕೆಲವು ಕೆಲಸಗಳಲ್ಲಿ ಅಹಂ ಇದ್ದರು, ಆಗಾಮಿಕರ್ಮ ಇಲ್ಲದಿರುವುದರಿಂದ ಕರ್ಮ ಬರುವುದಿಲ್ಲ. ಕೆಲಸದಲ್ಲಿ ಕರ್ಮವಿದ್ದು, ಭಾವದಲ್ಲಿ ಅಹಂ ಇದ್ದರೆ ಆಗಾಮಿ ಕರ್ಮ ತಪ್ಪದೆ ಅಂಟಿಕೊಳ್ಳುತ್ತದೆ. ಕೆಲಸದಲ್ಲಿ ಕರ್ಮವಿಲ್ಲದೆ, ಭಾವದಲ್ಲಿಯೂ ಸಹ ಅಹಂ ಇಲ್ಲದಿದ್ದರೆ ಕರ್ಮ ಸಮಸ್ಯೇ ಇರುವುದಿಲ್ಲ. ಒಂದು ವೇಳೆ ಕೆಲಸದಲ್ಲಿ ಆಗಾಮಿ ಕರ್ಮ ಇದ್ದು, ಭಾವದಲ್ಲಿ ಅಹಂ ಇಲ್ಲದಿದ್ದರೆ ಕರ್ಮ ಬರುವುದಿಲ್ಲ.

**628. (10) ಭಗವಂತನ ಶರೀರದಲ್ಲಿ ಪರಮಾತ್ಮ ನಿತ್ಯವೂ ಮಾತನಾಡುತ್ತಿದ್ದಾನಾ?**

ಉ. ಇಲ್ಲ.

**ವಿವರ :** ಪರಮಾತ್ಮನ ಒಂದುಅಂಶ ಭೂಮಿಮೇಲೆ ಹುಟ್ಟಿದಾಗ ಆ ಹುಟ್ಟುವಿಕೆಯನ್ನು ಭಗವಂತನೆನ್ನುತ್ತೇವೆ. ಭಗವಂತನ ಶರೀರದಲ್ಲಿ ಕರ್ಮಬದ್ಧನಾದ ಜೀವಾತ್ಮ, ಅದಕ್ಕೆ ಜೊತೆಯಾಗಿ ಆತ್ಮ ಇರುವುದಿಲ್ಲ. ಭಗವಂತನ ಶರೀರದಲ್ಲಿ ಪರಮಾತ್ಮನೇ ಸ್ವಲ್ಪ ಸಮಯ ಜೀವಾತ್ಮನಾಗಿ, ಸ್ವಲ್ಪ ಸಮಯ ಆತ್ಮನಾಗಿ, ಯಾವಾಗಲಾದರೂ ಸ್ವಲ್ಪ ಸಮಯ ಪರಮಾತ್ಮನಾಗಿ ಇರುವನು. ಸಾಧಾರಣ ಜೀವಾತ್ಮನಾಗಿ ಇರುವಾಗ, ಸಾಧಾರಣ ವ್ಯಕ್ತಿಯಾಗೆ ಇದ್ದು ಪ್ರಪಂಚದಲ್ಲಿ ಕಷ್ಟ ಸುಖಗಳಿಗೆ ಒಳಗಾಗುತ್ತಿರುವನು. ಆಗ ಅವುಗಳ ಬಾಧೆ ಅನುಭವಿಸಬೇಕಾಗುತ್ತದೆ. ಆತ್ಮನಾಗಿ ಇರುವಾಗ ಯಾರಿಗೂ ತಿಳಿಯದ ಜ್ಞಾನ ಬೋಧನೆಗಳನ್ನು ತಿಳಿಸುವನು. ಪರಮಾತ್ಮನಾಗಿ ಇರುವಾಗ ಪ್ರಪಂಚವನ್ನೇ ಶಾಸಿಸುವನು. ಭಗವಂತನ ಶರೀರದಲ್ಲಿ ಪರಮಾತ್ಮ ಅಪರೂಪವಾಗಿರುವನು. ಆಗ ಪಂಚ ಭೂತಗಳನ್ನೇ ಶಾಸಿಸುವ ಅಧಿಕಾರದೊಂದಿಗೆ ಇರುವನು. ಹಾಗೆ ಯಾವಾಗಲಾದರು ಶಾಸಿಸಿದಾಗ ಆ ಶರೀರದಲ್ಲಿನ ಪರಮಾತ್ಮ ಪಾತ್ರ ಸ್ವತಃವಾಗಿ ಆ ಕ್ಷಣದಲ್ಲಿದೆಯೆಂದು ತಿಳಿಯಬಹುದು. ಭೂಮಿ ಮೇಲೆ ಎಷ್ಟೋ ಸಾವಿರ ಸಂವತ್ಸರಗಳಿಗೊಮ್ಮೆ ಭಗವಂತನು ಬರುವನು. ಬಂದರೂ ಯಾರಿಗೂ ತಿಳಿಯದು. ಭಗವಂತನನ್ನು ತಿಳಿಯುವುದೇ ದುರ್ಲಭವಾದಾಗ, ಭಗವಂತನನ್ನು

ಅದರಲ್ಲಿ ಪರಮಾತ್ಮನನ್ನು ತಿಳಿಯುವುದು ಬಹಳ ಅಸಂಭವ. ಅಸಂಭವವಾದ ಸಂಘಟನೆ ಒಂದು ವೇಳೆ ನಡೆದರೆ, ಒಂದು ವೇಳೆ ಭಗವಂತನನ್ನು ಗುರುತಿಸುವುದಾದರೆ, ಒಂದು ವೇಳೆ ಭಗವಂತನ ಶರೀರದಲ್ಲಿ ಪ್ರಕೃತಿಯನ್ನೆ ಶಾಸಿಸುವ ಪರಮಾತ್ಮ ಇರುವ ಸಮಯವನ್ನೇ ನೋಡುವುದಾದರೆ, ಅವರಿಗಿಂತ ಧನ್ಯಜೀವಿಗಳು ಇಲ್ಲವೆಂದು ಹೇಳಬಹುದು. ಇದೆಲ್ಲವನ್ನು ಗಮನಿಸಿ ನೋಡಿದರೆ ಪರಮಾತ್ಮ ಭಗವಂತನ ಶರೀರದಲ್ಲಿ ನಿತ್ಯ ಮಾತನಾಡುವುದಿಲ್ಲವೆಂದು ತಿಳಿಯುತ್ತಿದೆ.

## ಜ್ಞಾನ ಪರೀಕ್ಷೆ

**ಮಾಲ್ಯವಂತ** **ದಿನಾಂಕ–05–12–1998**

**629. (1) ಸರ್ವ ಜೀವರಾಶಿಗಳ ಹತ್ತಿರ ಆತ್ಮ ಸಮಾನವಾಗಿ ಇದೆಯಾ?**

ಉ. ಇಲ್ಲ.

**ವಿವರ :** ಮನುಷ್ಯ ಹುಟ್ಟಿದ ಕೂಡಲೇ ಸಂವತ್ಸರದವರೆಗು ನಡೆಯಲಾರನು. ಮನುಷ್ಯನಲ್ಲಿನ ಆತ್ಮ ಸಂವತ್ಸರಕಾಲದ ವರೆಗು ಮನುಷ್ಯನನ್ನು ನಡೆಸುವುದಿಲ್ಲ. ಹಾಗೇ ಮನುಷ್ಯನಲ್ಲಿನ ಆತ್ಮ ಮನುಷ್ಯನಿಗೆ ನೀರಿನಲ್ಲಿ ಈಜುವ ಹಾಗೆ ಮಾಡುವುದಿಲ್ಲ. ಜಿಂಕೆಯಲ್ಲಿನ ಆತ್ಮ ಜಿಂಕೆ ಹುಟ್ಟಿದ ಕೂಡಲೇ ನಡೆಸಬಲ್ಲದು. ಹಾಗೇ ಜಿಂಕೆ ಹುಟ್ಟಿದ ಕೂಡಲೇ ನೀರಿನಲ್ಲಿ ಈಜುವ ಹಾಗೆ ಮಾಡಬಲ್ಲದು. ಇದನ್ನನುಸರಿಸಿ ಸರ್ವ ಜೀವರಾಶಿಗಳಲ್ಲಿಯೂ ಆತ್ಮಗಳು ಜೀವರಾಶಿಗಳಲ್ಲಿ ನಮಾನವಾಗಿಲ್ಲ.

**630. (2) ಯೇಸುವನ್ನು ಕಂಡುಕೊಳ್ಳುವುದೇ ನಿತ್ಯ ಜೀವನವೆಂದಿದ್ದೀರ. ನಿತ್ಯ ಜೀವನ ವೆಂದರೆ ಏನು?**

ಉ. ಮೋಕ್ಷ.

**ವಿವರ :** ಪರಮಾತ್ಮ ಮನುಷ್ಯ ಶರೀರ ಧರಿಸಿ ಭಗವಂತನಾಗಿ ಬಂದಾಗ, ಆತನನ್ನು ಜ್ಞಾನದಿಂದ ಗುರುತಿಸುವುದರಿಂದ ಸೂಕ್ಷ್ಮದಲ್ಲಿ ಮೋಕ್ಷ ದೊರಕುತ್ತದೆ. ಹಾಗೇ ಪರಮಾತ್ಮ ಆದ ಯೇಸುವನ್ನು ಕಂಡುಕೊಂಡವರಿಗೆ ಮೋಕ್ಷ ಲಭಿಸುತ್ತದೆ. ಮೋಕ್ಷ ಎಂದರೆ ನಾಶವಿಲ್ಲದ್ದು ನಿತ್ಯ ಇರುವುದು. ಆದ್ದರಿಂದ ಅದನ್ನು ನಿತ್ಯ ಜೀವನವೆಂದಿದ್ದಾರೆ. ನಿತ್ಯ ಜೀವನವೆಂದರೆ

ಪರಮಪದವಿ ಅಥವಾ ಮೋಕ್ಷವೆಂದು ಸಹ ಹೇಳಬಹುದು. ಯೇಸು ಸಜೀವವಾಗಿ ಬಂದಾಗ ಆತನನ್ನು ಕಂಡುಕೊಳ್ಳುವುದೇ ನಿತ್ಯ ಜೀವನ.

**631. (3) ಶರೀರದಲ್ಲಿ ರೋಗಗಳಿವೆ. ಶರೀರದಲ್ಲಿ ಔಷಧಗಳಿವೆ. ಇದರಲ್ಲಿ ಯಾವುದು ನಿಜ?**

ಉ. ಎರಡೂ ನಿಜವೇ.

**ವಿವರ :** ಪ್ರತಿ ಜೀವರಾಶಿ ಶರೀರದಲ್ಲಿಯೂ ಗ್ರಂಥಿಗಳಿಂದ ರೋಗಗಳು ಹುಟ್ಟುತ್ತಿವೆ. ಅವೇ ಗ್ರಂಥಿಗಳಿಂದ ಔಷಧಗಳು ಹುಟ್ಟುತ್ತಿವೆ. ಶರೀರದಲ್ಲಿನ ಆರೋಗ್ಯಕ್ಕೂ ಅನಾರೋಗ್ಯಕ್ಕೂ ಶರೀರದಲ್ಲಿನ ಸಪ್ತಗ್ರಂಥಿಗಳೇ ಕಾರಣ. ಗ್ರಂಥಿಗಳವೊಂದರ ಬಿಡುಗಡೆ ದ್ರವಗಳನ್ನನುಸರಿಸಿ ಆರೋಗ್ಯ ಅನಾರೋಗ್ಯವಿರುತ್ತದೆ. ಉದಾಹರಣೆಗೆ ಕ್ಲೋಮರಸ ಗ್ರಂಥಿಯಲ್ಲಿ ದ್ರವ ಊರುವಿಕೆ ಒಣಗಿಹೋದರೆ ಶುಗರ್ ವ್ಯಾಧಿ ಬರುತ್ತದೆ. ಗ್ರಂಥಿಯಿಂದ ರಸ ಊರಿದರೆ ಶುಗರ್ ರೋಗ ಹೋಗುವುದು. ಆರೋಗ್ಯಕ್ಕೆ ಬೇಕಾದ ಔಷಧ ಆ ಗ್ರಂಥಿ ರಸದಲ್ಲಿ ಇರುತ್ತದೆ.

**632. (4) ಮರಣವನ್ನು, ಬದುಕಿರುವವನೊಂದರ ಒಂದೇ ಒಂದು ಸ್ಥಿತಿಯೊಂದಿಗೆ ಹೋಲಿಸಬಹುದು. ಆ ಸ್ಥಿತಿ ಯಾವುದು?**

ಉ. ನಿದ್ರೆ.

**ವಿವರ :** ಮರಣ ನಿದ್ರೆಯಂತದ್ದು. ಮರಣ ಮರೆವಿನಿಂದಲೇ ಬರುತ್ತದೆ. ಹಾಗೇ ನಿದ್ರೆಯೂ ಸಹ ಮರುವುನಿಂದಲೆ ಬರುತ್ತದೆ. ಮರಣ ಹೊಂದುವಾಗ ನಿದ್ರೆ ಹೊಂದುವಾಗ ಮನಸ್ಸೊಂದರ ಕೊನೆಯ ಮರೆವಿನಿಂದಲೇ ನಡೆಯುತ್ತದೆ. ಮರಣಿಸಿದವನು ನಿದ್ರಿಸಿದಹಾಗೆ ಇರುತ್ತಾನೆ. ಅದೇ ವಿಧವಾಗಿ ನಿದ್ರಿಸಿದವನು ಮರಣಿಸಿದ ಹಾಗೇ ಇರುತ್ತಾನೆ.

**633. (5) ಮಾಯೆಯನ್ನು ಕುರಿತು ಸಂಪೂರ್ಣವಾಗಿ ಯಾರಿಗೆ ತಿಳಿಯುವುದು?**

ಉ. ಭಗವಂತನಿಗೆ.

**ವಿವರ :** ಪರಮಾತ್ಮನಾದ ಭಗವಂತನಿಗೇ ಮಾಯೆಯೊಂದರ ವಿವರವೆಲ್ಲಾ ತಿಳಿದಿರುವುದು. ಪರಮಾತ್ಮನೇ ಮಾಯೆಯನ್ನು ತಯಾರು ಮಾಡಿ ಅದಕ್ಕೆ ಶಕ್ತಿಯನ್ನು ಕೊಟ್ಟು ಕಳಿಸಿದ್ದಾನೆ. ಆದ್ದರಿಂದ ಅದರ ವಿಷಯವೆಲ್ಲಾ ಭಗವಂತನಿಗೆ ತಿಳಿದಿರುತ್ತದೆ. ಭಗವಂತನಲ್ಲದೆ ಮಾಯೆಯನ್ನು ಕುರಿತು ವಿವರವಾಗಿ ಹೇಳುವವನು ಮತ್ತೊಬ್ಬನಿರುವುದಿಲ್ಲ.

**634. (6) ಪರಮಾತ್ಮನನ್ನು ಕುರಿತು ಸಂಪೂರ್ಣವಾಗಿ ಯಾರಿಗೆ ತಿಳಿದಿರುತ್ತದೆ?**

ಉ. ಭಗವಂತನಿಗೆ.

**ವಿವರ :** ಪರಮಾತ್ಮನೇ ಭಗವಂತನು, ಭಗವಂತನೇ ಪರಮಾತ್ಮ. ಆದ್ದರಿಂದ ಪರಮಾತ್ಮನನ್ನು ಕುರಿತು ಭೂಮಿ ಮೇಲೆ ಭಗವಂತನಿಗೆ ಹೊರತು ಯಾವ ಇತರ ಯೋಗಿಗಳಿಗಾಗಲಿ, ಜ್ಞಾನಿಗಳಿಗಾಗಲಿ, ತಪಸ್ವಿಗಳಿಗಾಗಲಿ ತಿಳಿಯಲಾರದು.

**635. (7) ನಿದ್ರೆಯಲ್ಲಿ ಸ್ವಪ್ನಬಂದಾಗ ಜೀವಾತ್ಮ ಎಚ್ಚರದಲ್ಲಿದ್ದಾನಾ? ನಿದ್ರೆ ಹೋಗಿದ್ದಾನಾ?**

ಉ. ಎಚ್ಚರದಲ್ಲಿದ್ದಾನೆ.

**ವಿವರ :** ಜೀವಾತ್ಮ ನಿದ್ರೆಹೋಗುವವನಲ್ಲ. ಮನಸ್ಸನ್ನನುಸರಿಸಿ ನಿದ್ರೆ ಎಚ್ಚರಗಳಿವೆ. ಸ್ವಪ್ನದಲ್ಲಿ ಜೀವಾತ್ಮ ಎಚ್ಚರದಲ್ಲೇ ಇದ್ದಾನೆ. ಏಕೆಂದರೆ! ಸ್ವಪ್ನದಲ್ಲಿ ಸುಖ ದುಃಖಗಳೊಂದರ ಅನುಭವಗಳನ್ನು ಜೀವಾತ್ಮ ಹೊಂದುತ್ತಿದ್ದಾನೆ. ಸ್ವಪ್ನದಲ್ಲಿ ಭಯ ಹೊಂದಿದ ಜೀವಾತ್ಮ ಎಚ್ಚರವಾದ ನಂತರವೂ ಸಹ ಕೆಲವು ಸಮಯ ಆ ಭಯದಿಂದ ಚೇತರಿಸಿಕೊಳ್ಳಲಾರನು. ಇದನ್ನನುಸರಿಸಿ ನಿದ್ರೆಯಲ್ಲಿಯೂ, ಎಚ್ಚರದಲ್ಲಿಯೂ, ಸ್ವಪ್ನದಲ್ಲಿಯೂ ಜೀವಿಯು ಎಚ್ಚರದಲ್ಲೇ ಇದ್ದಾನೆ. ಎಚ್ಚರದಲ್ಲಿ, ಸ್ವಪ್ನದಲ್ಲಿ ಇರುವ ಮನಸ್ಸು ನಿದ್ರೆಯಲ್ಲಿಲ್ಲ. ಆದ್ದರಿಂದ ಆಗ ಜೀವಾತ್ಮನಿಗೆ ಏನೂ ತಿಳಿಯುವುದಿಲ್ಲ.

**636. (8) ಮದುವೆ ಮಾಡಿಕೊಂಡು ಸಂವತ್ಸರ ಸಂಸಾರ ಮಾಡಿದ ನಂತರ ಬ್ರಹ್ಮಚರ್ಯ ತೆಗೆದುಕೊಂಡು ಕಾಷಾಯವನ್ನು ಧರಿಸಿದವನೊಬ್ಬನು, ಮದುವೆ ಸಹ ಮಾಡಿಕೊಳ್ಳದೆ ಚಿಕ್ಕಂದಿನಿಂದ ಬ್ರಹ್ಮಚರ್ಯವನ್ನು ತೆಗೆದುಕೊಂಡು ಕಾಷಾಯವನ್ನು ಧರಿಸಿದವನೊಬ್ಬನು ಇದ್ದಾರೆ. ಅವರಿಬ್ಬರು ಬ್ರಹ್ಮಚಾರಿಗಳೇ ಅವರಿಬ್ಬರಲ್ಲಿ ಒಬ್ಬರು ಆಂಜನೆಯ ಸ್ವಾಮಿ ಪೂಜಾರಿ, ಮತ್ತೊಬ್ಬರು ರಾಮನ ಪೂಜಾರಿ. ಅವರಲ್ಲಿ ಯಾರು ದೊಡ್ಡ ಬ್ರಹ್ಮಚಾರಿ.**

ಉ. ಯಾರೂ ಅಲ್ಲ.

**ವಿವರ :** ಬ್ರಹ್ಮ ವೊಂದರ ಆಚರಣೆಯನ್ನು ಆಚರಿಸುವವನು ಬ್ರಹ್ಮಚಾರಿ ಎನ್ನುವ ಸೂತ್ರದ ಪ್ರಕಾರ ಇವರಿಬ್ಬರು ಬ್ರಹ್ಮಚಾರಿಗಳಲ್ಲ. ಪರಮಾತ್ಮ ಆಚರಣೆಯಾದ ಧರ್ಮ ಪ್ರಚಾರ ಮಾಡುವವನು ಮಾತ್ರವೇ ಬ್ರಹ್ಮಚಾರಿ. ಅವರು ಧರ್ಮಪ್ರಚಾರಕರಲ್ಲ. ಅವರು ಕೇವಲ ಆಂಜನೇಯಸ್ವಾಮಿ, ರಾಮನ ಪೂಜಾರಿಗಳು. ಆದ್ದರಿಂದ ಇವರನ್ನು ಪೂಜಾರಿಗಳೆನ್ನ ಬಹುದು. ಬ್ರಹ್ಮಚಾರಿಗಳೆನ್ನಬಾರದು.

**637. (9) ಸಾವು ಹುಟ್ಟುಗಳ ಮಧ್ಯ ಕಾಲವನ್ನು ಏನನ್ನುತ್ತಾರೆ?**

ಉ. ಏನೂ ಎನ್ನುವುದಿಲ್ಲ.

**ವಿವರ :** ಸಾವು ಹುಟ್ಟುಗಳ ಮಧ್ಯ ಕಾಲವೆನ್ನುವುದು ಇರುವುದಿಲ್ಲ. ಮರಣಿಸಿದ ನಂತರವೇ ಅದೇ ಕ್ಷಣವೇ ಹುಟ್ಟುವಿಕೆ ಇದೆ. ಹುಟ್ಟು ಸಾವುಗಳ ಮಧ್ಯೆ ಕಾಲವಿರುತ್ತದೆ. ಅದನ್ನು ಜೀವನ ಎನ್ನುತ್ತೇವೆ. ಹುಟ್ಟಿನಿಂದ ಸಾವಿನವರೆಗು ಇರುವ ಜೀವನ ಕಾಲವಿರುತ್ತದಾಗಲಿ, ಸಾವಿನಿಂದ ಹುಟ್ಟುವವರೆಗು ಅಸಲು ಕಾಲವಿಲ್ಲ.

**638. (10) ಈಗ ನೀನು ಹುಟ್ಟುವ ಮುನ್ನ ಯಾರಾಗಿ ಇದ್ದೆ?**

ಉ. ಜೀವಾತ್ಮನಾಗಿ.

**ವಿವರ :** ಈಗ ಈ ಜನ್ಮ ಬರುವ ಮುನ್ನ ಹಿಂದಿನ ಜನ್ಮದಲ್ಲಿ ಯಾವ ಶರೀರದಲ್ಲಾದರೂ ಜೀವಾತ್ಮನಾಗೇ ಇರುವರು. ಮೊಟ್ಟಮೊದಲು ಹುಟ್ಟುವುದಕ್ಕೆ ಮುಂಚೆಯಾದರೆ ಪರಮಾತ್ಮನಾಗಿ ಇರುವರು. ಈಗಾದರೂ ಹಿಂದಿನ ಜನ್ಮದಲ್ಲಿ ಜೀವಾತ್ಮನಾಗಿ ಇರುವೆವು.

## ಜ್ಞಾನ ಪರೀಕ್ಷೆ

**ಮಲ್ಲಿಕಾರ್ಜುನ ಕೋನ** **ದಿನಾಂಕ–16–01–1999**

**639. (1) ಅಯಮಾತ್ಮ ಬ್ರಹ್ಮ. ಅಹಂ ಬ್ರಹ್ಮಾಸ್ಮಿ ಎನ್ನುವ ಈ ಎರಡರಲ್ಲಿ ಯಾವುದು ವೇದವಾಕ್ಯ?**

ಉ. ಅಹಂ ಬ್ರಹ್ಮಾಸ್ಮಿ.

**ವಿವರ :** ಇದರಲ್ಲಿ ಒಂದು ವೇದವಾಕ್ಕು ಮತ್ತೊಂದು ವೇದಾಂತ ವಾಕ್ಯ ಇದೆ. **"ಅಯಮಾತ್ಮ ಬ್ರಹ್ಮ"** ಎನ್ನುವ ಮಾತನ್ನು ತೆಗೆದುಕೊಳ್ಳೋಣ. ಅಯಮಾತ್ಮ ಎಂದರೆ ನನ್ನವೊಂದರ ಆತ್ಮ ಎಂದು ಅರ್ಥ. ಬ್ರಹ್ಮ ಎಂದರೆ ದೇವರು ಎಂದು ಅರ್ಥ. ಪ್ರತಿ ಶರೀರದಲ್ಲಿಯೂ ಜೀವಾತ್ಮನೊಂದಿಗೆ ಆತ್ಮ ಸಹ ನಿವಾಸವಿದೆ. ಶರೀರದಲ್ಲಿನ ಆತ್ಮವೇ ಶರೀರಕ್ಕೆ ಶಕ್ತಿಯನ್ನು ಕೊಟ್ಟು ಕದಲಿಸುತ್ತಿದೆ. ಶರೀರದಲ್ಲಿನ ಚೈತನ್ಯ ರೂಪವಾದ ಆತ್ಮನೇ ಆ ಜೀವಾತ್ಮನಿಗೆ ದೇವರು. ಎಷ್ಟೋ ಜ್ಞಾನಿಗಳು ಆತ್ಮನನ್ನೆ ದೈವವಾಗಿ ಆರಾಧಿಸುತ್ತಾ ಶರೀರದಲ್ಲಿನ ಹಣೆಯ

ಭಾಗದಲ್ಲಿ ಆತ್ಮನನ್ನು ಪೂಜಿಸುವಹಾಗೆ ಚಂದನ ಅಥವಾ ಕುಂಕುಮ ಬೊಟ್ಟನ್ನು ಇಡುತ್ತಿದ್ದರು. ಮತ್ತೆ ಕೆಲವರು ನಾಮದಲ್ಲಿ ಮಧ್ಯೆ ಇರುವುದಕ್ಕೆ ಕೆಂಪು ಬಣ್ಣ ತಿದ್ದಿ ಆತ್ಮವೊಂದರ ಇರುವಿಕೆಯನ್ನು ಅದರ ಆಧಿಕ್ಯತೆಯನ್ನು ಪವಿತ್ರತೆಯನ್ನು ಸೂಚಿಸಿದ್ದಾರೆ. ಬ್ರಹ್ಮ ಯೋಗವನ್ನಾಚರಿಸಿ ಶರೀರದಲ್ಲಿನ ದೈವವಾದ ಆತ್ಮನನ್ನು ತಿಳಿದುಕೊಂಡು, ಅದರಿಂದ ಮುಕ್ತಿಯನ್ನು ಹೊಂದಿದವರೆಷ್ಟೋ ಇದ್ದಾರೆ. ಜೀವಾತ್ಮ ಪರಮಾತ್ಮನನ್ನು ಸೇರಬೇಕೆಂದರೆ ಮಾರ್ಗ ಆತ್ಮ ಜ್ಞಾನವೇ. ಆತ್ಮನನ್ನು ಕುರಿತು ತಿಳಿಯದವನು ಪರಮಾತ್ಮನನ್ನು ಹೊಂದಲಾರನು. ಪ್ರತಿ ನಿತ್ಯ ಕರ್ಮ ಪ್ರಕಾರ ಕೆಲಸಗಳು ಮಾಡಿಸುತ್ತಾ, ಶರೀರದಲ್ಲಿ ಶ್ವಾಸವನ್ನಾಡಿಸುತ್ತಾ, ಜೀವಾತ್ಮನಿಗೆ ಜ್ಞಾನರೀತ್ಯಾ ಪೂಜ್ಯವಾಗಿದ್ದು, ದೈವಸ್ಥಾನವನ್ನು ಹೊಂದಿರುವ ಆತ್ಮನನ್ನು ದೊಡ್ಡದಾಗಿ (ಬ್ರಹ್ಮನಾಗಿ) ಗುರುತಿಸಬೇಕೆಂದರೆ, ಅದಕ್ಕೆ ತಕ್ಕ ಜ್ಞಾನ ಅವಶ್ಯಕವೆಂದಿದ್ದೇವೆ ಅಲ್ಲವೆ. ಎಷ್ಟೋ ಜನ ಕಷ್ಟಪಟ್ಟು ಜ್ಞಾನ ಸಮುಪಾರ್ಜನೆ ಮಾಡಿ, ಮೂರು ಗುಣಗಳಿಂದ ಹೊರಬಿದ್ದು, ಆತ್ಮ ಸ್ಥಾನವನ್ನು ಹೊಂದಿದಾಗ ಆತ್ಮವೇ ಬ್ರಹ್ಮವೆಂದು, ಅದರಿಂದಲೇ ಪರಬ್ರಹ್ಮವನ್ನು ಸೇರಬಹುದೆಂದು ತಿಳಿಯುವುದು. ಹಾಗೆ ತಿಳಿದವನು ನನ್ನೊಂದರ ಆತ್ಮವೇ ದೇವರೆಂದು ತಿಳಿಸುತ್ತಾ "ಅಯಮಾತ್ಮ ಬ್ರಹ್ಮ" ಎಂದಿದ್ದಾನೆ. ಮೂರು ಗುಣಗಳ ವಿಷಯಗಳೇ ವೇದಗಳೆನ್ನುವ ಗೀತಾವಾಕ್ಯದ ಪ್ರಕಾರ ಮೂರು ಗುಣಗಳನ್ನು ಬಿಟ್ಟ ಬ್ರಹ್ಮಯೋಗಿ, ಮೂರು ಗುಣಗಳಿಗೆ ಅತೀತನಾಗಿ, ನಾಲ್ಕನೆ ಸ್ಥಾನವಾದ ಆತ್ಮ ಸ್ಥಾನದಲ್ಲಿ ಇದ್ದಾನೆ. ಆದ್ದರಿಂದ ಆತನನ್ನು ವೇದಾಂತನೆನ್ನಬಹುದು. ಅಯಮಾತ್ಮ ಬ್ರಹ್ಮ ಎನ್ನುವ ಮಾತನ್ನು ವೇದಾಂತ ವಾಕ್ಕೆಂದು ಕರೆಯಬಹುದು. ಇನ್ನು **"ಅಹಂ ಬ್ರಹ್ಮಾಸ್ಮಿ"** ಎನ್ನುವ ವಾಕ್ಕು ವೇದವಾಕ್ಕೆಂದು ಹೇಳಬಹುದು. ಅದು ಹೇಗೆಂದರೆ! ಜೀವಾತ್ಮ ಆತ್ಮಗಳು ಎಂದಿಗೂ ಬೇರೆ ಬೇರೆಯಾಗಿ ಇರುವವೇ. ಒಂದು ವೇಳೆ ಬ್ರಹ್ಮಯೋಗವನ್ನು ಹೊಂದಿದಾಗ, ಆತ್ಮವೊಂದರ ಅನುಭೂತಿಯನ್ನು ಮಾತ್ರ ಜೀವಾತ್ಮನು ಹೊಂದುವನು. ಆಗ ಆತ್ಮನೆಂದರೆ ಏನೋ ಅವನಿಗೆ ತಿಳಿಯುವುದು. ಅಷ್ಟು ಹೊರತು ಜೀವಾತ್ಮ ಆತ್ಮ ಎರಡೂ ಒಂದರಲ್ಲೊಂದು ಬೆರೆಯುವುದಿಲ್ಲ. ವಾಸ್ತವ ಜ್ಞಾನ ತಿಳಿಯದವನು, ಗುಣಗಳಲ್ಲಿ ಸಿಲುಕಿಕೊಂಡವನು, ವೇದಗಳಲ್ಲಿರುವವನಾಗಿ ಜೀವಾತ್ಮ ಆತ್ಮನಾಗಿ ಬದಲಾಗುತ್ತಿದೆಯೆಂದು ತಿಳಿದುಕೊಳ್ಳುತ್ತಿದ್ದಾನೆ. ನಾನು ಬ್ರಹ್ಮನಾದೆನೆನ್ನುವ ಮಾತನ್ನು **"ಅಹಂ ಬ್ರಹ್ಮಾಸ್ಮಿ"** ಎಂದು ಹೇಳುತ್ತಿದ್ದಾನೆ. ಸೂತ್ರದ ಪ್ರಕಾರ ಈ ಮಾತು ವೇದವಾಕ್ಕೆಂದು ತಿಳಿಯುತ್ತಿದೆ. ಗುಣಗಳೊಂದಿಗೆ ಕೂಡಿಕೊಂಡಾಗ ಹೇಳುವ ಮಾತನ್ನು ವೇದವಾಕ್ಕೆಂದು, ಗುಣಗಳಿಗೆ ಅತೀತನಾಗಿ ಹೇಳುವ ಮಾತನ್ನು ವೇದಾಂತ ವಾಕ್ಕೆಂದು ಹೇಳಬಹುದು.

**640. (2) ನಿನ್ನೊಂದಿಗೆ ಯಾವಾಗಲೂ ಹಿತವಾಗಿ ಇರುವವನು ಯಾರು? ಹಾಗೇ ಯಾವಾಗಲೂ ಬಿಡುವಾದರೆ ಕೆಟ್ಟದ್ದನ್ನು ಮಾಡಬೇಕೆಂದು ನೋಡುವ ಶತ್ರು ಯಾರು?**

ಉ. ಆತ್ಮ.

**ವಿವರ :** ಜೀವಾತ್ಮನೊಂದಿಗೆ ಶರೀರದಲ್ಲಿ ಯವಾಗಲೂ ಹಿತವಾಗಿ ಮತ್ತು ಶತ್ರುವಾಗಿ ಇರುವವನು ಆತ್ಮ, ಮಲಗಿರುವಾಗ ಸಹ ಶ್ವಾಸ ಆಡಿಸುತ್ತಾ, ಎಷ್ಟೋ ಶರೀರ ಕಾರ್ಯಗಳು ಮಾಡುತ್ತಿರುವ ಆತ್ಮ, ಪುಣ್ಯ ಪ್ರಕಾರ ಸ್ನೇಹಿತನಹಾಗೆ ಹಿತ ಮಾಡುತ್ತಿದೆ. ಹಾಗೇ ನಮ್ಮ ಪಾಪದ ಪ್ರಕಾರ ಶತ್ರು ಹಾಗೆ ಕೆಟ್ಟದ್ದನ್ನು ಮಾಡುತ್ತಿದೆ. ಆದ್ದರಿಂದ ನಮ್ಮೊಂದಿಗೆ ಸ್ನೇಹಿತನಹಾಗೆ ಮತ್ತು ಶತ್ರು ಹಾಗೆ ಎಲ್ಲಾಕಾಲವಿರುವುದು ಆತ್ಮನೇ ಎಂದು ಹೇಳಬಹುದು.

**641. (3) ಆತ್ಮನಿಗೆ ಅಂಗಲೋಪವಿದೆಯಾ?**

ಉ. ಶರೀರವನ್ನು ಅನುಸರಿಸಿ ಇರಬಹುದು.

**ವಿವರ :** ಶರೀರದಲ್ಲಿನ ಯಾವುದೋ ಒಂದು ಭಾಗಕ್ಕೆ ಆತ್ಮ ಚೈತನ್ಯವಿಲ್ಲದಿರುವಾಗ ಆ ಭಾಗ ಆತ್ಮವೊಂದರ ಅಧೀನದಲ್ಲಿ ಇಲ್ಲವೆಂದು ಹೇಳಬಹುದು. ಶರೀರದಲ್ಲಿನ ಯಾವ ಭಾಗಕ್ಕೂ ಆತ್ಮಶಕ್ತಿ ಪ್ರವಹಿಸಲಿಲ್ಲವೋ, ಆ ಭಾಗವೊಂದರ ಆಕಾರವನ್ನು ಆತ್ಮ ಕಳೆದುಕೊಂಡಂತಾಗುತ್ತದೆ. ಉಳಿದ ಶರೀರವೆಲ್ಲಾ ವ್ಯಾಪಿಸಿದ ಆತ್ಮ ಆ ಶರೀರ ಆಕೃತಿ ಎಲ್ಲವನ್ನು ಹೊಂದಿ, ಪ್ಯಾಪಿಸದ ಭಾಗವೊಂದರ ಆಕೃತಿಯನ್ನು ಹೊಂದದೆ ಇದೆ. ಆದ್ದರಿಂದ ಶಕ್ತಿ ಇಲ್ಲದೆ ಕುಂಟುಬಿದ್ದ ಶರೀರದಲ್ಲಿನ ಆತ್ಮ ಅಂಗಲೋಪವಾಗಿದೆ ಎಂದು ಹೇಳಬಹುದು.

**642. (4) ಶರೀರ ಹೊರಗಿನ ಇಂದ್ರಿಯಗಳೊಂದಿಗೆ ನಡೆಯುವ ಕೆಲಸಗಳಲ್ಲಿ ಯಾವಾಗಲೂ ಬುದ್ಧಿ, ಚಿತ್ತ ಕೆಲಸ ಮಾಡುತ್ತವಾ?**

ಉ. ಮಾಡುವುದಿಲ್ಲ.

**ವಿವರ :** ಶರೀರದ ಹೊರಗಿನ ಇಂದ್ರಿಯಗಳ ಕೆಲಸದಲ್ಲಿ ಬುದ್ಧಿ, ಚಿತ್ತವೊಂದರ ಜೋಕ್ಯ ಸಾಧಾರಣವಾಗಿ ಇದ್ದರು, ಪ್ರತ್ಯೇಕಿಸಿ ಯಾವುದೋ ಒಂದು ಸಮಯದಲ್ಲಿ ಬುದ್ಧಿ, ಚಿತ್ತವೊಂದರ ಆದೇಶ ಇಲ್ಲದೇನೆ ಹೊರಗಿನ ಇಂದ್ರಿಯಗಳು ಕೆಲಸ ಮಾಡುತ್ತವೆ. ಆಗ ಸ್ವತಃವಾಗಿ ಆತ್ಮನೇ ಆ ಕೆಲಸವನ್ನು ಮಾಡಿಸುತ್ತದೆ. ಉದಾಹರಣೆಗೆ ನಿದ್ರೆಯಲ್ಲಿ ಎದ್ದು ನಡೆಯುವವರು ಕೆಲವರು ಇದ್ದಾರೆ. ಆ ಕೆಲಸ ಬುದ್ಧಿಗೆ ತಿಳಿಯದೆ, ಚಿತ್ತವೊಂದರ

ಆದೇಶವಿಲ್ಲದೆ ನಡೆಯುತ್ತದೆ. ಮತ್ತು ಕೆಲವು ಸಂದರ್ಭಗಳಲ್ಲಿ ಬುದ್ಧಿಗೆ ತಿಳಿಯದೇ, ನಮಗೆ ಅರ್ಥವಾಗದೇ, ಕೈಗಳು ತನ್ನಷ್ಟಕ್ಕೆ ತಾನೆ ಕದಲುವುದು, ಹಾಗೇ ಕಾಲು ಜಾಡಿಸುವುದು, ನಿದ್ರೆಯಲ್ಲಿ ಎಚ್ಚರದಲ್ಲಿರುವಾಗ ಕಾಲುಗಳಾಗಲಿ, ಕೈಗಳಾಗಲಿ ಎಗಿರಿ ಬೀಳುವುದು ನಡೆಯುತ್ತಿರುತ್ತದೆ. ಇಂತಹ ಕೆಲಸಗಳೆಲ್ಲವೂ ಆತ್ಮನೇ ಸ್ವತಃವಾಗಿ ಮಾಡಿಸುತ್ತಿದೆ. ಆದ್ದರಿಂದ ಎಲ್ಲಾ ಸಮಯಗಳಲ್ಲೂ ಬುದ್ಧಿ ಚಿತ್ತವೊಂದರ ಅನುಮತಿಯಿಂದ ಹೊರಗಿನ ಇಂದ್ರಿಯಗಳು ಕೆಲಸ ಮಾಡುವುದಿಲ್ಲವೆಂದು ಹೇಳಬಹುದು.

**643. (5) ಒಂದು ಕಾರ್ಯ ಮಾಡುವಾಗ ಶರೀರದಲ್ಲಿನ ಅಹಂ ನಿನ್ನಿಂದಲೇ ಕಾರ್ಯ ನಡೆಯುತ್ತಿದೆಯೆಂದು, ಜೀವಾತ್ಮನಿಗೆ ತಿಳಿಸುವುದು ಕಾರ್ಯ ಮೊದಲಿನಲ್ಲಾ ಕೊನೆಯಲ್ಲಾ?**

ಉ. ಮೊದಲಿನಿಂದ ಕೊನೆಯವರೆಗು.

**ವಿವರ :** ಕಾರ್ಯ ನಡೆಯುವಾಗ ಕಾರ್ಯ ಮೊದಲಿನಿಂದ ಅಹಂ ಜೀವಿಯನ್ನು ನೀನೇ ಮಾಡುತ್ತಿದ್ದೀಯೆನ್ನುವ ಭಾವವನ್ನು ಕಲ್ಪಿಸುತ್ತದೆ. ಆದ್ದರಿಂದ ಕಾರ್ಯ ಮಧ್ಯೆದಲ್ಲಿ ನಿಂತುಹೋದರೂ, ಮೊದಲಿನಲ್ಲೇ ನಿಂತು ಹೋದರೂ, ಆ ಕಾರ್ಯಕ್ಕೆ ಕರ್ತ ತಾನೇ ಎಂದು ಜೀವಾತ್ಮನೆಂದುಕೊಳ್ಳುತ್ತಿರುವನು. ಶರೀರದಲ್ಲಿನ ಜೀವಾತ್ಮನು ಯಾವುದನ್ನು ಸ್ವತಃವಾಗಿ ಗ್ರಹಿಸಲಾರನು. ಕಣ್ಣು ತೋರಿಸಿರುವುದನ್ನು ನೋಡುತ್ತಿದ್ದಾನೆ. ಕಿವಿ ಕೇಳಿರುವುದನ್ನು ಕೇಳುತ್ತಿದ್ದಾನೆ. ಹಾಗೇ ಅಹಂ ಕಲ್ಪಿಸಿದ ಭಾವವನ್ನು ಹೊಂದುತ್ತಿದ್ದಾನೆ. ಅಹಂಭಾವ ಮಗ್ನನಾದ ಜೀವಾತ್ಮ ಅಹಂ ಹೇಳಿದಹಾಗೆ ಎಲ್ಲಾ ತಾನೇ ಮಾಡುತ್ತಿದ್ದೇನೆಂದು ತಿಳುದುಕೊಳ್ಳುತ್ತಿದ್ದಾನೆ.

**644. (6) ಎಲ್ಲಾ ಭೂತಗಳಿಗೂ ಚೈತನ್ಯವಾಗಿರುವವು ಯಾವವು?**

ಉ. ಆತ್ಮ, ಪರಮಾತ್ಮ.

**ವಿವರ :** ಎಲ್ಲಾ ಭೂತಗಳೆಂದರೆ ಪಂಚ ಭೂತಗಳೈದು, ಮಹಾ ಭೂತಗಳು ಎರಡು ಒಟ್ಟು ಏಳಾಗುತ್ತವೆ. ಎರಡು ವಿಧಗಳಾಗಿ ವಿಭಜಿಸಲ್ಪಟ್ಟಿರುವ ಭೂತಗಳಿಗೆ, ಮಹಾ ಭೂತಗಳಿಗೆ ಚೈತನ್ಯ ಆತ್ಮ, ಪರಮಾತ್ಮ ಎಂದು ಹೇಳಬಹುದು. ಭೂತಗಳಿಗೆ ಮಹಾಭೂತಗಳಲ್ಲಿನ ಆತ್ಮ ಚೈತನ್ಯವಾಗಿದ್ದು ನಡೆಸುತ್ತಿದೆ. ಹಾಗೆ ಮಹಾ ಭೂತಗಳಾದ ಜೀವಾತ್ಮಕ್ಕು, ಆತ್ಮಕ್ಕು ಸ್ವತಃವಾಗಿ ಪರಮಾತ್ಮವೇ ಚೈತನ್ಯವಾಗಿದೆ. ಭೂತಗಳಿಗೆ ಪರಮಾತ್ಮ ಆಧಾರವಲ್ಲ. ಭೂತಗಳಿಗೆ ಮಹಾಭೂತವಾದ ಆತ್ಮ, ಮಹಾ ಭೂತಗಳಿಗೆ ಪರಮಾತ್ಮ

ಆಧಾರವಾಗಿದೆ. ಇದನ್ನನುಸರಿಸಿ ನೋಡಿದರೆ ಸರ್ವ ಭೂತಗಳಿಗೂ ಆತ್ಮ ಒಂದೇ ಚೈತನ್ಯವಲ್ಲ. ಹಾಗೆಯೇ ಪರಮಾತ್ಮ ಒಂದೇ ಸಹ ಚೈತನ್ಯವಲ್ಲ. ಕೆಲವುಗಳಿಗೆ ಒಂದು, ಮತ್ತೆ ಕೆಲವುಗಳಿಗೆ ಮತ್ತೊಂದು ಆಧಾರವಾಗಿ ಇವೆಯೆಂದು ತಿಳಿಯಬೇಕು.

**645. (7) "ಯೋಗ ಕ್ಷೇಮಂ ವಹಾಮ್ಯಹಂ" ಎನ್ನುವ ಗೀತಾ ವಾಕ್ಯದ ಪ್ರಕಾರ, ಒಬ್ಬ ಯೋಗಿ ಪ್ರಯಾಣಿಸುವಾಗ ಅಪಘಾತ ನಡೆದರೆ, ಅವನಿಗೆ ಗಾಯವಾಗದಂತೆ ಅವನ ಕ್ಷೇಮವನ್ನು ಪರಮಾತ್ಮ ವಹಿಸುವನಾ? ಇಲ್ಲವಾ?**

ಉ. ಇಲ್ಲ.

**ವಿವರ :** ಪರಮಾತ್ಮ ಯೋಗವೊಂದರ ಕ್ಷೇಮವನ್ನು ವಹಿಸುತ್ತೇನೆಂದಿದ್ದಾನೆ, ಆದರೆ ಭೋಗವೊಂದರ ಕ್ಷೇಮವನ್ನು ವಹಿಸುತ್ತೇನೆಂದು ಹೇಳಲಿಲ್ಲ. ಪ್ರಪಂಚ ವಿಷಯಗಳನ್ನು ಭೋಗಿಸುವಾಗ, ಯೋಗಿ ಎಂದು ಹೆಸರುವಾಸಿಯಾದವನ ವೊಂದರ ಕ್ಷೇಮವನ್ನು ಸಹ ಪರಮಾತ್ಮ ವಹಿಸುವುದಿಲ್ಲ. ಯೋಗಿಯ ಯೋಗಕ್ಕೆ ಸಂಬಂಧಿಸಿದ ವಿಷಯಗಳಲ್ಲೇ ಪರಮಾತ್ಮ ಜವಾಬ್ದಾರಿ ವಹಿಸುತ್ತಾ, ಯೋಗಕ್ಕೆ ಪ್ರಕೃತಿಯಿಂದ ಅಥವಾ ಪ್ರಪಂಚದಿಂದ ಆತಂಕ ಆಗದಂತೆ ಯೋಗವೊಂದರ ಕ್ಷೇಮವನ್ನು ನೋಡುವನು. ಅಷ್ಟೇ ಆಗಲಿ ಯೋಗಿ ಆದಷ್ಟು ಮಾತ್ರಕ್ಕೆ ಪ್ರಪಂಚ ಕ್ಷೇಮವನ್ನು ನೋಡುವವನಲ್ಲ. ಅವನ ಬದುಕಿನಲ್ಲಿ ಎಂತಹ ಸಹಾಯವಾಗಲಿ, ಕ್ಷೇಮವಾಗಲಿ ನೋಡುವವನಲ್ಲ.

**646. (8) ಕರ್ಮ ಎಷ್ಟು ಭಾಗಗಳಾಗಿ ಇದೆ? ಒಂದಾ, ಎರಡಾ, ಮೂರಾ, ನಾಲ್ಕಾ?**

ಉ. ಮೂರು ಭಾಗಗಳು.

**ವಿವರ :** ಕರ್ಮ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. 1. ಪ್ರಾರಬ್ಧ, 2. ಆಗಾಮಿಕ, 3. ಸಂಚಿತ.

**647. (9) ಶೂನ್ಯದಲ್ಲಿ ಗಾಳಿ ಕದಲುವುದಕ್ಕೆ ಆಧಾರವಾದ ಶಕ್ತಿ ಆತ್ಮನಾ? ಪರಮಾತ್ಮನಾ?**

ಉ. ಆತ್ಮ.

**ವಿವರ :** ಪಂಚಭೂತಗಳಲ್ಲಿ ಗಾಳಿ ಒಂದು ಭೂತ. ಪಂಚ ಭೂತಗಳಿಗೆ ಆಧಾರವಾದ ಶಕ್ತಿ ಆತ್ಮ. ಆದ್ದರಿಂದ ಶೂನ್ಯದಲ್ಲಿ ಗಾಳಿ ಕದಲುವುದಕ್ಕೆ ಆತ್ಮಶಕ್ತಿಯೇ ಉಪಯೋಗವಾಗುತ್ತಿದೆ. ಶೂನ್ಯದಲ್ಲಿ ಸ್ವಲ್ಪದವರೆಗೇ ವ್ಯಾಪಿಸಿರುವ ಗಾಳಿಗೆ ಆಧಾರ ಆತ್ಮನೇ ಎಂದು ತಿಳಿಯಬೇಕು.

ಐದು ಭೂತಗಳಿಗೆ ಅವಧಿಗಳಿವೆ. ಎಲ್ಲದಕ್ಕಿಂತ ದೊಡ್ಡದು ಮೊದಲನೆಯದಾದ ಆಕಾಶಕ್ಕೂ ಸಹ ಹದ್ದು ಆಕಾರವಿದೆ. ಆಕಾಶವಿಲ್ಲದ ಶೂನ್ಯ ಜೀವಿಯಲ್ಲಿ ಸಹ ಇದೆ. ಆಕಾಶವಿಲ್ಲದ ಶೂನ್ಯ ವಿಶ್ವಾಂತರಾಳವಾದ ಬ್ಲಾಕ್ ಹೋಲ್ ಎನ್ನುವ ಸುವಿಶಾಲವಾದ ಪ್ರಾಂತವು ಸಹ ಇದೆ. ಜೀವಿಯಲ್ಲಿರುವ ಶೂನ್ಯದಲ್ಲಿಯೂ ವಿಶ್ವಾಂತರಾಳದಲ್ಲಿಯೂ ಪಂಚ ಭೂತಗಳು ಇಲ್ಲ.

**648. (10) ಗುರುವಿನ ಹತ್ತಿರ ರಾಜನೂ ಸಹ ಸೇವಕನೇ ಎಂದಿದ್ದೀರ. ಹಾಗೆ ಇರಬೇಕಾಗಿರುವುದು ನಿರಂತರವಾಗಿಯಾ? ಆಗಾಗ?**

ಉ. ನಿರಂತರವಾಗಿಯೂ.

**ವಿವರ :** ಗುರುವಿನ ಹತ್ತಿರ ಎಂತಹವನಾದರೂ ಸೇವಕನ ಹಾಗೇ ಇರುವುದು ಧರ್ಮ. ನಿಜವಾದ ಗುರುಭಕ್ತಿ ಇರುವವನು ಯಾವಾಗಲೂ ಗುರುವನ್ನು ಸೇವಿಸುವುದು ಧರ್ಮ. ಸುಖಗಳಲ್ಲಿ ಸೇವಿಸಿ ಕಷ್ಟದಲ್ಲಿ ಬಿಡುವುದು. ರಾಜನಾಗಿರುವಾಗ ಸೇವಿಸಿ, ಬಡವನಾಗಿರುವಾಗ ಸೇವಿಸದೆ ಇರುವುದು ಪದ್ಧತಿ ಅಲ್ಲ.

## ಜ್ಞಾನ ಪರೀಕ್ಷೆ

**ಗುತ್ತಿ (ಅನಂತಪುರಂ ಜಿಲ್ಲಾ) ದಿನಾಂಕ–05–04–1999**

**649. (1) ಆಂಜನೇಯನಿಗೆ ರಾಮನು ಗುರುವಾ ದೈವವಾ?**

ಉ. ಯಾವುದುಅಲ್ಲ.

**ವಿವರ :** ಆಂಜನೇಯನಿಗೆ ಶ್ರೀರಾಮನು ದೈವಜ್ಞಾನವನ್ನು ಕುರಿತು ಎಂದಿಗೂ ಬೋಧಿಸಲಿಲ್ಲ. ಆದ್ದರಿಂದ ರಾಮನು ಆಂಜನೇಯನಿಗೆ ಗುರುವು ಅಲ್ಲವೆಂದು ಹೇಳಬಹುದು. ಆಂಜನೇಯನಿಗೆ ರಾಮನು ದೈವವಾ ಎನ್ನುವಮಾತಿಗೆ ಬಂದರೆ, ರಾಮನು ವಾಸ್ತವವಾಗಿ ಪರಮಾತ್ಮ ಅಂಶ ಅಲ್ಲ. ರಾಮನದು ಸಾಧಾರಣ ಜನ್ಮವೆ. ರಾಮನನ್ನು ಆಂಜನೇಯನು ತನ್ನ ಭಾವದಲ್ಲಿ ದೈವವಾಗಿ ಭಾವಿಸಿಕೊಂಡು ರಾಮ ಜಪವನ್ನೇ ಮಾಡಿರಬಹುದು, ಆತನನ್ನೇ ದೈವವಾಗಿ ತಿಳಿದಿರಬಹುದು. ಪರಮಾತ್ಮ ಅಂಶವಾದವನು ಭಗವಂತನೆನ್ನುವ ಸೂತ್ರದ ಪ್ರಕಾರ ರಾಮನದು ಪರಮಾತ್ಮ ಅಂಶ ಅಲ್ಲ. ರಾಮನು ವಿಷ್ಣುವಾಂಶ ಎಂದು

ಬಹಳ ಜನ ತಿಳಿದಿದ್ದಾರೆ. ಒಂದು ವೇಳೆ ವಿಷ್ಣುವಾಗಿ ಇರಬಹುದಾಗಲಿ ಪರಮಾತ್ಮ ಅಂಶವಾದ ದೈವವಲ್ಲ. ಭಗವಂತನಾದವನೇ ಗುರುವಾಗುವುದಕ್ಕೆ ಅವಕಾಶವಿದೆ. ಆಂಜನೇಯನಿಗೆ ಯಾವ ಜ್ಞಾನ ಬೋಧನೆ ಮಾಡದ ರಾಮನು ಗುರುವು ಸಹ ಅಲ್ಲವೆಂದು ಹೇಳಬಹುದು.

**650. (2) ಆಕಾಶಕ್ಕೆ ಭೂಮಿಗೆ ಮಧ್ಯೆ ಇರುವ ಆತ್ಮಗಳ್ಯಾವವು?**

ಉ. ಜೀವಾತ್ಮ, ಆತ್ಮ, ಪರಮಾತ್ಮ.

**ವಿವರ :** ಆಕಾಶ ಅಂತ್ಯವಿಲ್ಲದ್ದು ಅದರಲ್ಲಿ ಭೂಮಿಯ ಹಾಗೆ ಎಷ್ಟೋ ಗ್ರಹಗಳು ತೇಲಾಡುತ್ತಿವೆ. ಅವುಗಳ ವಿಷಯ ನಮಗಷ್ಟು ತಿಳಿಯದಿದ್ದರೂ ಭೂಮಿ ಮೇಲೆ ಪ್ರಾಣಿಗಳನ್ನು, ಆಕಾಶದಲ್ಲಿ ಸಂಚರಿಸುವ ಪಕ್ಷಿಗಳನ್ನು ನೋಡುತ್ತಿದ್ದೇವೆ. ಕಣ್ಣಿಗೆ ಕಾಣಿಸುವವಾದ, ಕಾಣಿಸದೆ ಇರುವವಾದ ಆಕಾಶದಲ್ಲಿರುವ ಜೀವರಾಶಿಗಳಲ್ಲಿ ಜೀವಾತ್ಮ ಆತ್ಮ ತಪ್ಪದೆ ಇದ್ದು ಅವುಗಳ ಜೊತೆಗೆ ಪರಮಾತ್ಮ ಸಹ ಇರುತ್ತಿದೆ. ಭೂಮಿ ಮೇಲೆ ಪ್ರಾಣಿಗಳಲ್ಲಿ ಆತ್ಮಗಳು ಮೂರು ಇರಬಹುದು. ಭೂಮಿಯಿಂದ ಇರುವ ಆಕಾಶದಲ್ಲಿ ಏನಿದೆಯೆಂದು ಸಂಶಯ ಬಂದಾಗ ಶರೀರಗಳಲ್ಲಿಯೂ ಶರೀರಗಳ ಹೊರಗೆ ಶೂನ್ಯದಲ್ಲಿಯೂ ಅಣುವಣುವಿನಲ್ಲಿ ಒಂದೇ ಒಂದು ವ್ಯಾಪಿಸಿ ಇದೆ ಅದನ್ನೇ ಪರಮಾತ್ಮನೆಂದು ಉತ್ತರ ಹೇಳಬಹುದು. ಶರೀರಗಳಲ್ಲಿ ಮಾತ್ರ ಆತ್ಮ ಜೀವಾತ್ಮಗಳಿರುವಾಗ ಶರೀರದ ಹೊರಗೆ ಶೂನ್ಯದಲ್ಲಿಯೂ ಸಹ ಪರಮಾತ್ಮ ವ್ಯಾಪಿಸಿ ಇದೆ. ಭೂಮಿಗೂ ಆಕಾಶಕ್ಕು ಮಧ್ಯೆ ಎಂದಾಗ ಭೂಮಿ ಮೇಲೆ ಇರುವ ಜೀವಿಗಳೊಂದಿಗೆ ಸೇರಿಸಿ ಹೇಳಿದರು ಮೂರು ಆತ್ಮಗಳು ಇವೆಯೆಂದು ಹೇಳಬೇಕು.

**651. (3) ನಮ್ಮ ಶರೀರದಲ್ಲಿ ನಾಡಿಗಳಲ್ಲಿ ಪ್ರವಹಿಸುವುದು ಯಾವುದು?**

ಉ. ಆತ್ಮಶಕ್ತಿ.

**ವಿವರ :** ಶರೀರದಲ್ಲಿ ಪ್ರವಹಿಸುವುದು ರಕ್ತವೆಂದು ಬಹಳ ಜನರಿಗೆ ತಿಳಿದಿದೆ. ಆದರೆ ನಾಡಿಗಳಲ್ಲಿ ಆತ್ಮಶಕ್ತಿ ಪ್ರವಹಿಸುತ್ತಿದೆಯೆಂದು ಕೆಲವರಿಗೆ ತಿಳಿಯದು. ಶರೀರದಲ್ಲಿನ ಅಪದಮನಿಗಳು (ದಮನಗಳು ಶಿರಲು) ಎನ್ನುವ ಕೊಳವೆಯಲ್ಲಿ ರಕ್ತ ಪ್ರವಹಿಸುತ್ತಿದೆ. ಆದರೆ ಬೆಳ್ಳಗಿರುವ ನರಗಳಲ್ಲಿ ರಕ್ತ ಪ್ರವಹಿಸುವುದಿಲ್ಲ. ನರಗಳಲ್ಲಿ ಆತ್ಮ ಶಕ್ತಿ ಮಾತ್ರ ಪ್ರವಹಿಸುತ್ತಿರುತ್ತದೆ. ಶಿರಸ್ಸನ್ನು ಕೇಂದ್ರವಾಗಿ ಮಾಡಿಕೊಂಡು, ಆತ್ಮಶಕ್ತಿ ಶರೀರವೆಲ್ಲಾ ನಾಡಿಗಳಿಂದ ಹರಡಿ, ಶರೀರವನ್ನು ತೇಜಸ್ಸು ಮಾಡುತ್ತಿದೆ. ನಾಡಿಗಳಲ್ಲಿ ಸಮಾನ

ವಾಯುವೆನ್ನುವುದು ಸಹ ವ್ಯಾಪಿಸಿಕೊಂಡಿದೆ, ಆದರೆ ಪ್ರವಹಿಸುವುದು ಅಲ್ಲ. ಪ್ರವಹಿಸುವುದು ಒಂದೇ ಒಂದು ಆತ್ಮಶಕ್ತಿ ಎಂದು ತಿಳಿಯಬೇಕು.

**652. (4) ನಿನ್ನ ಶರೀರದಲ್ಲಿ ಹಸಿವಿನ ಬಾಧೆ ಯಾರಿಗೆ ತಿಳಿಯುತ್ತಿದೆ?**

ಉ. ಜೀವಾತ್ಮನಿಗೆ.

**ವಿವರ :** ಶರೀರದಲ್ಲಿ ಯಾವ ಅನುಭವವನ್ನಾದರೂ ಅನುಭವಿಸುವವನು ಜೀವಾತ್ಮ. ಜೀವಾತ್ಮವೊಂದರ ಕೆಲಸ ಕಷ್ಟ ಸುಖಗಳನ್ನು ಅನುಭವಿಸುವುದೇ. ಹಸಿವಿನಿಂದ ಆತ್ಮ ಶಕ್ತಿ ಪ್ರವಹಿಸುವುದರಲ್ಲಿ ವ್ಯತ್ಯಾಸಗಳು ಬರುತ್ತಿವೆ. ಆದರೆ ಹಸಿವಿನಿಂದ ಬರುವ ಬಾಧೆ ಜೀವಾತ್ಮನೇ ಅನುಭವಿಸಬೇಕು.

**653. (5) ದಿನಕ್ಕೆ ಮೂರು ಸಲ ತಿನ್ನುವ ಮನುಷ್ಯರಿಗೂ, ವಾರಕ್ಕೊಮ್ಮೆ ತಿನ್ನುವ ಹಾವುಗಳಿಗೂ ಜೀವಾತ್ಮ, ಆತ್ಮ, ಪರಮಾತ್ಮರಲ್ಲಿ ಯಾವುದರಲ್ಲಿ ಭೇದವಿದೆ?**

ಉ. ಆತ್ಮನಲ್ಲಿ.

**ವಿವರ :** ಪ್ರತಿ ಜೀವರಾಶಿಯಲ್ಲೂ ಅಣುಅಣುವಿನಲ್ಲೂ ವ್ಯಾಪಿಸಿ ಇರುವುದರಲ್ಲಿ ಪರಮಾತ್ಮನಿಗೆ ಯಾವ ವ್ಯತ್ಯಾಸವಿಲ್ಲ. ಎಲ್ಲಾ ಶರೀರಗಳಲ್ಲಿಯೂ ಜೀವಾತ್ಮನು ಅನುಭವಗಳನ್ನು ಅನುಭವಿಸುವುದರಲ್ಲಿ ಏನು ವ್ಯತ್ಯಾಸವಿಲ್ಲ. ಇನ್ನು ಆತ್ಮ ಮಾತ್ರ ಎಲ್ಲಾ ಜೀವರಾಶಿಗಳಲ್ಲಿಯೂ ಭೇದವನ್ನು ಹೊಂದಿದೆ. ಜೀವರಾಶಿಗಳಿಗೆ ಶಕ್ತಿ ಕೊಡುವುದು ಆತ್ಮವೇ ಆದ್ದರಿಂದ, ಒಂದೊಂದು ಜೀವರಾಶಿ ಒಂದೊಂದು ಬಲವನ್ನು ಹೊಂದಿರುವು ದರಿಂದ, ಆತ್ಮ ಒಂದೊಂದರಲ್ಲಿ ಒಂದೊಂದು ವಿಧವಾಗಿದೆಯೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಶರೀರಾಕೃತಿಯನ್ನು ಆತ್ಮ ಹೋಲಿರುವುದರಿಂದ, ಒಂದೊಂದು ಶರೀರ ಒಂದೊಂದು ಆಕಾರದಲ್ಲಿ ಇರುವುದರಿಂದ, ಆತ್ಮ ಸಹ ಶರೀರಾಕಾರಗಳನ್ನು ಅನುಸರಿಸಿ ವಿವಿಧ ಆಕಾರಗಳಲ್ಲಿ ಬಹಳ ವ್ಯತ್ಯಾಸವನ್ನು ಹೊಂದಿದೆ ಎಂದು ತಿಳಿಯುತ್ತಿದೆ. ಮನುಷ್ಯನಲ್ಲಿನ ಆತ್ಮ ಮನುಷ್ಯ ಶಿಶುವಾಗಿ ಹುಟ್ಟಿದ ಕೂಡಲೆ ನಡೆಯುವ ಹಾಗೆ ಮಾಡದೆ ಸಂವತ್ಸರಕ್ಕೆ ನಡೆಸುತ್ತದೆ. ಅದೇ ಜಿಂಕೆ ಶರೀರ ಶಿಶುವಾಗಿ ಹುಟ್ಟಿದಕೂಡಲೇ ನಡೆಯುವಹಾಗೆ ಮಾಡುತ್ತದೆ. ಈ ವಿಧವಾಗಿ ಆತ್ಮ ಎಲ್ಲಾ ಜೀವರಾಶಿಗಳ ಬಗ್ಗೆ ಸಮಾನವಾಗಿ ಇಲ್ಲದೆ ಅವುಗಳ ಕರ್ಮವನ್ನನುಸರಿಸಿ ಭೇದವಾಗಿ ವರ್ತಿಸುತ್ತದೆ.

**654. (6) ಮೋಸವು ಗುಣವಾ! ಆದರೆ ಯಾವುದು?**

ಉ. ಗುಣವೇ. ಕಾಮಗುಣ.

**ವಿವರ :** ಆಸೆ ಎನ್ನುವ ಗುಣ ಎಷ್ಟೋ ಕೆಲಸಗಳನ್ನು ಮಾಡಿಸುತ್ತದೆ. ಉದಾಹರಣೆಗೆ ಒಂದು ದಾರಿಯಲ್ಲಿ ಹೋಗುವವನ ಹತ್ತಿರ ಹಣವಿದೆ ಎಂದುಕೊಳ್ಳೋಣ. ಅವನೊಂದಿಗೆ ಹಣ ಇಲ್ಲದವನು ಸಹ ಹೋಗುತ್ತಿದ್ದಾನೆ. ಸ್ವಲ್ಪ ದೂರ ಹೋದನಂತರ ನಿರ್ಮಾನುಷ್ಯವಾದ ಕಡೆ ಹಣವಿಲ್ಲದವನಿಗೆ ಆಸೆ ಎನ್ನುವ ಗುಣ ಹುಟ್ಟಿ ಹಣವಿರುವವನನ್ನು ಹೊಡೆದು ಅವನ ಹತ್ತಿರ ಇರುವ ಹಣವನ್ನು ಕಸಿದುಕೊಂಡು ಹೋದನು. ಈ ಕೆಲಸವನ್ನು ಕಳ್ಳತನ ಎನ್ನುತ್ತೇವೆ. ಆಸೆ ಎನ್ನುವ ಗುಣದಿಂದ ಕಳ್ಳತನ ಮಾಡಬಹುದು. ಮೋಸ ಮಾಡಬಹುದು. ಹಾಗೆ ಸ್ತ್ರೀಯರ ಮೇಲಿನ ಆಸೆಯಿಂದ ವ್ಯಭಿಚಾರ ಮಾಡಬಹುದು. ಕಳ್ಳತನ, ಮೋಸ, ವ್ಯಭಿಚಾರ ಪ್ರತ್ಯೇಕವಾದ ಗುಣಗಳಲ್ಲ. ಆಸೆಯಿಂದ ನಡೆಯುವ ಕ್ರಿಯೆಗಳ ಹೆಸರುಗಳೇ ಆಗಲಿ ಅವು ಗುಣಗಳಲ್ಲ. ಇದನ್ನನುಸರಿಸಿ ಮೋಸ, ಆಸೆ ಎನ್ನುವ ಗುಣಕ್ಕೆ ಸಂಬಂಧಿಸಿರುವುದೆಂದು, ಅದು ಗುಣ ಅಲ್ಲದಿದ್ದರೂ ಆಸೆ ಎನ್ನುವ ಗುಣದ ಕೆಳಗೆ ಸೇರಿಸಿ ಹೇಳಬೇಕಾಗಿದೆ. ಹಾಗೆ ಹೇಳುವುದರಿಂದ ಅದು ಇಂತಹ ಗುಣವೊಂದರ ಸಂಬಂಧವಾದದ್ದೆಂದು ಅರ್ಥವಾಗುತ್ತದೆ.

**655. (7) ಮಾಯೆ ಮನುಷ್ಯನನ್ನು ಎಲ್ಲಿಯ ವರೆಗು ಮೋಸ ಮಾಡಬಲ್ಲದು.**

ಉ. ಮೋಕ್ಷ ಹೊಂದುವವರೆಗು.

**ವಿವರ :** ಮನುಷ್ಯ ಎಷ್ಟು ಜನ್ಮಗಳು ಬದಲಾದರೂ, ಬದಲಾದ ಜನ್ಮದಲ್ಲೂ ಸಹ ಗುಣಗಳಿರುವುದರಿಂದ, ಮಾಯೆ ಮನುಷ್ಯನನ್ನು ಅಂಟಿಕೊಂಡೇ ಇರುತ್ತದೆ. ಮನುಷ್ಯ ಜನ್ಮಿಸದೆ ಮೋಕ್ಷವನ್ನು ಹೊಂದಿದಾಗ ಅವನೊಂದಿಗೆ ಮಾಯೆ ಸಂಬಂಧ ಇಲ್ಲದೆ ಹೋಗುತ್ತದೆ. ಜೀವಾತ್ಮ ಶರೀರವನ್ನು ಧರಿಸುವವರೆಗು ಮಾಯೆ ಬಿಡುವುದಿಲ್ಲ.

**656. (8) ಬುದ್ಧಿ ಕಡಿಮೆ ಇರುವವನಿಗೆ ಜ್ಞಾಪಕಗಳು ಚೆನ್ನಾಗಿರುತ್ತವಾ?**

ಉ. ಇರಬಹುದು, ಇರದೆ ಹೋಗಬಹುದು.

**ವಿವರ :** ಶರೀರದಲ್ಲಿ ಬುದ್ಧಿ ವಿಷಯವನ್ನು ವಿವರಿಸುವುದಕ್ಕೆ ಇದೆ. ಬುದ್ಧಿಗೆ ಜ್ಞಾಪಕಗಳಿಗೆ ಸಂಬಂಧ ಎಷ್ಟು ಮಾತ್ರ ಇಲ್ಲ. ಮನಸ್ಸಿಗೆ ನೆನಪುಗಳ ಕೆಲಸವಿದೆ. ಯಾವ ನೆನಪಾದರೂ

ಮನಸ್ಸಿನಿಂದಲೇ ಬರಬೇಕು. ಮನಸ್ಸಿನ ಜ್ಞಾಪಕದಿಂದ ಬಂದಿರುವ ವಿಷಯವನ್ನು ಬುದ್ಧಿ ವಿವರಿಸುತ್ತಾ ಮಾಡಬಹುದೆಂದು, ಮಾಡಬಾರದೆಂದು, ಲಾಭವಿಷ್ಟುಯೆಂದು, ನಷ್ಟವಿಷ್ಟುಯೆಂದು, ಸುಖವಿಷ್ಟೆಂದು, ದುಃಖವಿಷ್ಟು ಇರುತ್ತದೆಂದು ತಿಳಿಸುತ್ತಾ ಹೋಗುವುದು. ಬುದ್ಧಿಯನ್ನು ಅನುಸರಿಸಿ ವಿವರ, ಮನಸ್ಸನ್ನನುಸರಿಸಿ ಜ್ಞಾಪಕವಿರಬಹುದು. ಬುದ್ಧಿ ಕಡಿಮೆ ಇರುವವನು ವಿಷಯವನ್ನು ಚೆನ್ನಾಗಿ ಯೋಚಿಸದೇ ಇರಬಹುದು. ಅವನಿಗೆ ಮನಸ್ಸು ಬಲವಾಗಿದ್ದರೆ ಜ್ಞಾಪಕ ಶಕ್ತಿ ಹೆಚ್ಚಾಗಿರುತ್ತದೆ. ಮನೋ ಬಲಹೀನತೆ ಇದ್ದರೆ ಜ್ಞಾಪಕ ಶಕ್ತಿ ಕಡಿಮೆ ಇರಬಹುದು. ಆದ್ದರಿಂದ ಬುದ್ಧಿ ಕಡಿಮೆಯನ್ನು ಅನುಸರಿಸಿ ಜ್ಞಾಪಕಗಳನ್ನು ನಿರ್ಣಯಿಸಲಾರೆವು.

**657. (9) ನಮ್ಮ ಶರೀರ ಬೆಳೆಯುವುದು ಕೆಳಕ್ಕಾ ಮೇಲಕ್ಕಾ?**

ಉ. ಕೆಳಕ್ಕೆ.

**ವಿವರ :** ನಮ್ಮ ಶರೀರ ಮೇಲಕ್ಕೆ ಬೆಳೆಯುತ್ತಿದೆಯೆಂದು ಎಲ್ಲರೂ ತಿಳಿದುಕೊಳ್ಳುತ್ತಾರೆ. ವಾಸ್ತವವಾಗಿ ಮಾನವ ಶರೀರ ಮೇಲಕ್ಕೆ ಬೆಳೆಯುತ್ತಿಲ್ಲ. ಕೆಳಕ್ಕೆ ಬೆಳೆಯುತ್ತಿದೆ. ಈ ಮಾತು ಬಹಳ ಆಶ್ಚರ್ಯವಾಗಿದ್ದರೂ ವಾಸ್ತವ ಕೆಳಕ್ಕೆ ಬೆಳೆಯುವುದೇ. ಅಷ್ಟೇ ಅಲ್ಲ ಜಂತುಗಳು ಅಡ್ಡವಾಗಿ, ವೃಕ್ಷಗಳು ಮೇಲಕ್ಕೆ ಬೆಳೆಯುವುದು ಸಹಜ. ಗಿಡಕ್ಕೆ ಮೂಲ ಕೆಳಗೆ ಬೇರುಗಳಲ್ಲಿ ಇದ್ದಹಾಗೆ, ಮನುಷ್ಯನಿಗೆ ಮೂಲ ಮೇಲೆ ತಲೆಯಲ್ಲಿ ಇದೆ. ಮನುಷ್ಯ ತಲೆಯಿಂದ ಕೆಳಕ್ಕೆ ಸಾಗುತ್ತಾ ಬರುವುದರಿಂದ ಮೇಲಕ್ಕೆ ಬೆಳೆದಹಾಗೆ ಕಾಣಿಸುತ್ತದೆ. ಕೆಳಕ್ಕೆ ಬೆಳೆಯುತ್ತಿದ್ದಾನೆನ್ನುವುದಕ್ಕೆ ಉದಾಹರಣೆಯಾಗಿ ಒಂದು ವಿಷಯವನ್ನು ನೋಡೋಣ. ಒಬ್ಬನಿಗೆ ಸಣ್ಣ ವಯಸ್ಸಿನಲ್ಲಿ ಅಂದರೆ ಐದು ಸಂವತ್ಸರಗಳ ವಯಸ್ಸಲ್ಲಿ ಕೈ ಮಣಿಕಟ್ಟು ಹತ್ತಿರ ಸಣ್ಣ ಗಾಯವಾಗಿ ಅದು ವಾಸಿಯಾಗಿ ಅದರ ಮಚ್ಚೆ ಹಾಗೇ ಇದ್ದು, ಆತನಿಗೆ 25 ಸಂವತ್ಸರಗಳು ವಯಸ್ಸು ಬರುವುದರಲ್ಲಿ ಮಣಿಕಟ್ಟು ಹತ್ತಿರ ಇರುವ ಮಚ್ಚೆ ಅಲ್ಲಿಯೇ ಇರದೇ ಎರಡು ಇಂಚುಗಳು ಮೇಲಕ್ಕೆ ಸರಿದಿದೆ. ಇದನ್ನನುಸರಿಸಿ ಕೈಯಿ ಉದ್ದ ಕೆಳಕ್ಕೆ ಬೆಳದಿದೆಯೆಂದು ತಿಳಿಯುತ್ತಿದೆ. ಹಾಗೇ ಅಂತಹ ಗುರ್ತುಗಳು ಸಣ್ಣ ವಯಸ್ಸಲ್ಲಿ ಇರುವ ಕಡೆ ಇರದೆ ಮೇಲಕ್ಕೆ ಹೋಗುವುದರಿಂದ ಶರೀರ ಕೆಳಕ್ಕೆ ಬೆಳದಿದೆ ಎಂದು ಹೇಳಬಹುದು.

**658. (10) ಅಂತರಂಗಗಳಾದ ಮನಸ್ಸು, ಬುದ್ಧಿ, ಚಿತ್ತ, ಅಹಂ ಎನ್ನುವುದರಲ್ಲಿ ಯಾವುದು ಅತ್ಯುನ್ನತವಾದದ್ದು?**

ಉ. ಬುದ್ಧಿ.

**ವಿವರ :** ಅಂತರಂಗಗಳಾದ ಬುದ್ಧಿ, ಚಿತ್ತ, ಮನಸ್ಸು ಅಹಂಕಾರ ಯಾವುದಕ್ಕವು ಎಲ್ಲವೂ ದೊಡ್ಡವೇ. ನಿಜಕ್ಕೆ ಅಹಂ ಮಾನವನಿಗೆ ಕರ್ಮಗಳು ಅಂಟಿಸುವುದರಲ್ಲಿ, ಶರೀರದಲ್ಲಿ ತನ್ನ ಪಾತ್ರ ಯಾರೂ ಗ್ರಹಿಸದ ಹಾಗೆ ಇರುವುದರಲ್ಲಿ ಅದಕ್ಕೆ ಅದೇ ಸಾಟಿಯೆಂದು ಹೇಳಬಹುದು. ಹಾಗೇ ಮನಸ್ಸು ಯಾವಾಗಲೂ ಮನುಷ್ಯನಿಗೆ ಹೊರಗಿನ ವಿಷಯಗಳನ್ನು ಅಂಟಿಸುವುದರಲ್ಲಿ ಅದಕ್ಕೆ ಅದೇ ಸಾಟಿ. ಮಹತ್ವ ನಿರ್ಣಯಗಳನ್ನು ಕರ್ಮಕ್ಕೆ ಅನುಗುಣವಾಗಿ ತೆಗೆದುಕೊಳ್ಳುವುದರಲ್ಲಿ ಯಾವ ತಪ್ಪಾಗಿ ನಿರ್ಣಯ ಮಾಡದೆ ಇರುವುದು ಚಿತ್ತ. ಚಿತ್ತವೊಂದರ ಪಾತ್ರವೂ ಸಹ ಯಾರಿಗೂ ತಿಳಿಯದು. ಎಲ್ಲರಲ್ಲಿ ಗುರುತನ್ನು ಹೊಂದಿರುವವು ಮನಸ್ಸು, ಬುದ್ಧಿ ಮಾತ್ರವೇ. ಬುದ್ಧಿ ಪ್ರತಿ ವಿಷಯವನ್ನು ವಿವರಿಸುತ್ತಾ ಹೋಗುತ್ತದೆ. ಪ್ರತಿ ವಿಷಯವನ್ನು ವಿವರಿಸಿದಹಾಗೆ ವಿಶೇಷ ಜ್ಞಾನವನ್ನು ಸಂಪಾದಿಸಿಕೊಳ್ಳುವ ಶಕ್ತಿಯೂ ಸಹ ಬುದ್ಧಿಗೆ ಇದೆ. ಯಾವ ರಂಗದಲ್ಲಾದರೂ ಜ್ಞಾನವಿದೆ ಎಂದರೆ ಅದು ಬುದ್ಧಿ ಯೊಂದರ ಕೆಲಸವೇ. ಅಷ್ಟೇ ಅಲ್ಲದೆ ಆತ್ಮವೊಂದರ ಜ್ಞಾನವನ್ನು ಸಹ ತಿಳಿದು, ಶರೀರದಲ್ಲಿನ ಆತ್ಮ ವಿವರ ತಿಳಿಸುವ ಶಕ್ತಿ ಬುದ್ಧಿಗೆ ಇದೆ. ಉಳಿದ ಅಂತರಂಗಗಳಿಗೆ ಆತ್ಮ ವಿಷಯ ತಿಳಿಯದೆ ಹೋಗುವುದರಿಂದ, ಬುದ್ಧಿಗೆ ಆತ್ಮ ಅವಗಾಹನೆ ಇರುವುದರಿಂದ, ಎಲ್ಲದಕ್ಕಿಂತ ಬುದ್ಧಿ ದೊಡ್ಡದೆಂದು ಹೇಳಬಹುದು.

## ಜ್ಞಾನ ಪರೀಕ್ಷೆ

**ಮುಷ್ಟಿಕೋವೆಲ (ಊರು)** **ದಿನಾಂಕ–04–07–1999**

**659. (1) ಪ್ರಪಂಚದಲ್ಲಿ ದೇವರಿಗಿಂತಲೂ ಅಧಿಕವಾಗಿ ನೆನಪಿಸುವಹಾಗೆ ಮಾಡುವ ವಸ್ತು ಯಾವುದು?**

ಉ. ಧನ.

**ವಿವರ :** ಪ್ರಪಂಚವೆಲ್ಲದಕ್ಕೂ ಅಧಿಪತಿ ದೇವರಾದರೂ, ಕಾಣಿಸದ ದೈವಕ್ಕಿಂತ ಕಾಣಿಸುವ ಹಣ ಅಧಿಕವಾಗಿ ಕಾಣಿಸುತ್ತದೆ. ದೇವರಿಗೆ ಕೈ ಮುಗಿದರೂ ನಡೆಯದ ಕೆಲಸ ಹಣವಿದ್ದರೆ ನಡೆಯುತ್ತದೆಂದು ಎಲ್ಲರಿಗೂ ತಿಳಿಯುವುದು. ದೇವರು ಕೆಲಸಗಳನ್ನು ಈಡೇರಿಸುವ ವನಲ್ಲವೆಂದು ತಿಳಿಯದೆ, ಹಣದಿಂದ ನಡೆಯುವ ಕೆಲಸಗಳು ದೇವರಿಂದಾದರೂ ನಡೆಯುವುದಿಲ್ಲವೆಂದು ಮಾನವನ ನಂಬಿಕೆ. ಪ್ರಪಂಚದಲ್ಲಿ ಕೆಲಸಗಳು ಈಡೇರಬೇಕೆಂದರೆ,

ಕೂಳು ಬಟ್ಟೆ ಮನೆ ಬೇಕೆಂದರೂ, ಹಣ ಅವಶ್ಯಕವೆಂದು ಎಲ್ಲರಿಗೂ ತಿಳಿದಿರುವುದೆ. ಕೊನೆಗೆ ದೇವಾಲಯಗಳಲ್ಲಿ ದರ್ಶನವೂ ಸಹ ಹಣವಿರುವವನಿಗೆ ಸಿಕ್ಕ ಹಾಗೆ ಹಣವಿಲ್ಲದವನಿಗೆ ಸಿಗುವುದಿಲ್ಲ. ಬಡವನಿಂದ ಧನಿಕನವರೆಗು ಎಲ್ಲರಿಗೂ ಹಣ ಅವಶ್ಯವೇ. ಹಣವೆಂದರೇ ಆಸೆ ಇಲ್ಲದವನು ಯಾರೂ ಇಲ್ಲ. ಹಣದ ಪ್ರಭಾವ ಅರ್ಥವಾದಹಾಗೆ ದೇವರ ಪ್ರಭಾವ ಅರ್ಥವಾಗಲಿಲ್ಲ. ಹಣದ ಕೆಲಸ ಬೇರೆ ದೇವರ ಕೆಲಸ ಬೇರೆಂದು ತಿಳಿಯದು. ದೇವರ ವಿಧಾನವೇನೆಂದು ತಿಳಿಯದವರು ಭೂಮಿ ಮೇಲೆ ತುಂಬಿರುವುದರಿಂದ, ಭೂಮಿ ಮೇಲೆ ಇರುವವರಿಗೆಲ್ಲರಿಗೂ ಹಣದ ಪ್ರಭಾವ ತಿಳಿಯುವುದರಿಂದ, ದೇವರಿಗಿಂತ ಹಣವೇ ಶಕ್ತಿವಂತವಾಗಿರುವುದೆಂದು ಎಲ್ಲರಿಗೂ ಅರ್ಥವಾಗಿದೆ. ಸಂಪೂರ್ಣವಾಗಿ ದೇವರ ಜ್ಞಾನ ತಿಳಿಯದೆ ಇರುವುದರಿಂದ ಎಲ್ಲರೂ ಹಣಕ್ಕೆ ದಾಸೋಹವೆನ್ನುತ್ತಿದ್ದಾರೆ. ಸ್ವಲ್ಪ ಜ್ಞಾನ ತಿಳಿದವರು ಸಹ ದೇವರಿಗಿಂತ ಹಣಕ್ಕೆ ಹೆಚ್ಚಿನ ಬೆಲೆ ಕೊಡುತ್ತಿದ್ದಾರೆ.

**660. (2) ರಾಗ ನಮ್ಮ ಶರೀರದಲ್ಲಿ ಕಂಠದಲ್ಲಾ, ಮುಖದಲ್ಲಾ, ಹೊಟ್ಟೆಯಲ್ಲಾ ಅಥವಾ ಮತ್ತೆಲ್ಲಾದರೂ ಇದೆಯಾ?**

ಉ. ತಲೆಯಲ್ಲಿ.

**ವಿವರ :** ರಾಗ ಎಂದರೆ ಸಂಗೀತ ರಾಗದೊಳಗೆ ಹೋಗಬಾರದು. ರಾಗ ಎಂದರೆ ಪ್ರೇಮ ಎಂದು ಅರ್ಥ. ರಾಗ ದ್ವೇಷಗಳು ಎಂದರೆ ಪ್ರೇಮ, ಅಸೂಯಗಳೆಂದು ಅರ್ಥ ಮಾಡಿಕೊಳ್ಳಬೇಕು. ರಾಗ ಒಂದು ಗುಣ, ಆದ್ದರಿಂದ ಆ ಗುಣ ತಲೆಯಲ್ಲಿ ಗುಣಚಕ್ರದಲ್ಲಿ ಇದೆಯೆಂದು ಹೇಳಬಹುದು.

**661. (3) ಒಬ್ಬ ಸ್ತ್ರೀಯನ್ನು ನೋಡಿದಾಗ ಪುರುಷನಲ್ಲಿ ಹುಟ್ಟುವುದು ಮೋಹಗುಣವಾ ಅಥವಾ ಆಸೆ ಗುಣವಾ?**

ಉ. ಆಸೆ ಗುಣ.

**ವಿವರ :** ಮೋಹಕ್ಕೆ ಸರಿಯಾದ ಅರ್ಥ ತಿಳಿಯದೆ ಬಹಳ ಜನ ಇಂತಹ ಸಂದರ್ಭದಲ್ಲಿ ಇವನು ಅವಳನ್ನು ನೋಡಿ ಮೋಹದಲ್ಲಿ ಬಿದ್ದಾನೆಂದು ಹೇಳುತ್ತಾರೆ. ಆಸೆ ಗುಣ, ಮೋಹ ಗುಣ, ಎರಡೂ ಬೇರೆ ಬೇರೆಯಾಗಿ ಇದ್ದು ಬೇರೆ ಬೇರೆಯಾಗಿ ಸ್ಪಂದಿಸುತ್ತಿವೆ. ಸ್ತ್ರೀಯನ್ನು ನೋಡಿದಾಗ ಪುರುಷನಲ್ಲಿ ಮೋಹ ಗುಣ ಬರುತ್ತಿಲ್ಲ. ಕಾಮ ಗುಣ ಎಂದರೆ

ಆಸೆ ಗುಣ ಬರುತ್ತಿದೆ. ಮೋಹ **"ನಾ"** ಎನ್ನುವ ಸಂಬಂಧವನ್ನು ಇಡುತ್ತಿದೆ. ಇಲ್ಲಿ ನನ್ನವರು ಅನ್ನಿಸದೆ, ಸ್ಪರ್ಶ ಸುಖವನ್ನು ಆಶಿಸುತ್ತಿದ್ದಾನೆ, ಆದ್ದರಿಂದ ಕಾಂಕ್ಷಿಸುವುದು ಆಸೆ ಎಂದು ತಿಳಿಯಬೇಕು.

**662. (4) ನಿದ್ರಿಸುವಾಗ ಎಚ್ಚರದಲ್ಲಿರುವ ಅವಸ್ಥೆಯನ್ನು ಏನೆನ್ನುತ್ತಾರೆ?**

ಉ. ಸ್ವಪ್ನಾವಸ್ಥೆ.

**ವಿವರ :** ಮನುಷ್ಯನಿಗೆ ಸಹಜವಾಗಿ ಮೂರು ಅವಸ್ಥೆಗಳು ಇವೆ. ನಿದ್ರೆ, ಎಚ್ಚರ, ಸ್ವಪ್ನ. ನಿದ್ರೆಯಲ್ಲಿ ಮನಸ್ಸು ಬ್ರಹ್ಮನಾಡಿಯಲ್ಲಿ ಅಡಗಿಕೊಂಡು, ಹೊರಗಿನ ಜ್ಞಾನೇಂದ್ರಿಯ ವಿಷಯಗಳನ್ನಾಗಲಿ, ಒಳಗಿನ ಜ್ಞಾಪಕಗಳನ್ನಾಗಲಿ, ಬುದ್ಧಿಗೆ ಸೇರಿಸದೆ ಇರುತ್ತದೆ. ಆ ಸಮಯದಲ್ಲಿ ಬುದ್ಧಿಗು ಜೀವಿಗು ಏನೂ ತಿಳಿಯದು. ಏನೂ ತಿಳಿಯದ ಸ್ಥಿತಿಯನ್ನೇ ನಿದ್ರೆ ಎನ್ನುತ್ತೇವೆ. ಮನಸ್ಸು ಸೂರ್ಯ ಚಂದ್ರನಾಡಿಗಳಿಂದ ಶರೀರವೆಲ್ಲಾ ವ್ಯಾಪಿಸಿ ಇಂದ್ರಿಯ ವಿಷಯಗಳನ್ನು ಒಳಗಿನ ಬುದ್ಧಿಗೆ ಸೇರಿಸುವುದನ್ನು ಎಚ್ಚರ ಎನ್ನುತ್ತೇವೆ. ನಿದ್ರೆ ಎಚ್ಚರವಲ್ಲದೆ, ಹೊರಗಿನ ವಿಷಯಗಳನ್ನು ಸೇರಿಸದೆ, ಶರೀರದಿಂದ ಮುಕುಳಿಸಿಕೊಂಡು ಬ್ರಹ್ಮನಾಡಿಯಲ್ಲಿ ಸೇರಿ, ಅಲ್ಲಿಯೂ ಸಹ ಕರ್ಮಾನುಸಾರ ಬರುವ ವಿಷಯಗಳನ್ನು ಸೂಕ್ಷ್ಮ ಶರೀರದಿಂದ ಬುದ್ಧಿಗೆ ಸೇರಿಸುವುದನ್ನು, ಜೀವಾತ್ಮನು ಅನುಭವಿಸುವುದನ್ನು, ನಡೆಯುವ ಅವಸ್ಥೆಯನ್ನು ಸ್ವಪ್ನ ಎನ್ನುತ್ತೇವೆ. ಸ್ವಪ್ನ ಎಚ್ಚರದಹಾಗೆ ಒಳಗೆ, ನಿದ್ರೆ ಹಾಗೆ ಹೊರಗೆ ಇರುತ್ತದೆ. ಸ್ವಪ್ನಾವಸ್ಥೆಯಲ್ಲಿ ಬುದ್ಧಿಯಿಂದ ಜೀವಾತ್ಮ ಎಚ್ಚರದಲ್ಲಿನ ಹಾಗೆ ಅನುಭೂತಿಗಳನ್ನು ಹೊಂದುತ್ತಿದ್ದಾನೆ. ಆದ್ದರಿಂದ ನಿದ್ರೆಯಲ್ಲಿ ಎಚ್ಚರದಂತಿರುವ ಒಂದು ಅವಸ್ಥೆ ಎಂದು ಸ್ವಪ್ನವನ್ನು ಕರೆಯುತ್ತಾರೆ.

**663. (5) ಭಗವಂತನ ಶರೀರದಲ್ಲಿ ಸಣ್ಣ ಸಣ್ಣ ನೋವುಗಳಿರುತ್ತವಾ?**

ಉ. ಇರಬಹುದು.

**ವಿವರ :** ಹುಟ್ಟಿದವನು ಭಗವಂತನಾದರೂ ಧರಿಸಿರುವುದು ಪಂಚಭೂತ ನಿರ್ಮಿತವಾದ ಶರೀರವೇ. ಪಂಚಭೂತ ಶರೀರದಲ್ಲಿ ಇರುವವನ್ಯಾರಾದರೂ ಅದರಲ್ಲಿ ಬರುವ ಅನುಭೂತಿಗಳನ್ನು ಹೊಂದಬೇಕಾಗಿದೆ. ಶರೀರವಿದ್ದ ಮೇಲೆ ಎಲ್ಲರಿಗಿರುವಹಾಗೆ ಆರೋಗ್ಯ ಅನಾರೋಗ್ಯಗಳು ಇರುತ್ತವೆ. ದೇವರಾದರೂ ತಾನು ನಿರ್ಮಿಸಿಟ್ಟಿರುವ ಪದ್ಧತಿಯನ್ನು ತಾನು ಅತಿಕ್ರಮಿಸದೇ ಪದ್ಧತಿ ಪ್ರಕಾರವೇ ನಡೆದುಕೊಳ್ಳುವನು. ಆದ್ದರಿಂದ

ಭಗವಂತನಿಗಾದರೂ ಶರೀರದಲ್ಲಿನ ಬಾಧೆಗಳು ತಪ್ಪುವುದಿಲ್ಲ. ಸಣ್ಣ ನೋವನ್ನಾದರೂ ಅನುಭವಿಸಬೇಕಾಗುತ್ತದೆ.

**664. (6) ನಡೆಯುತ್ತಿರುವ ಕಾಲದಲ್ಲಿ ಗುರುಗಳಾಗಿ ಚಲಾವಣೆ ಆಗುತ್ತಿರುವ ಸ್ವಾಮೀಜೀಗಳೆಲ್ಲರೂ ಬೋಧಿಸದೆ ಇರುವ ಆಧ್ಯಾತ್ಮಿಕ ಸಿದ್ಧಾಂತ ಯಾವುದು?**

ಉ. ತ್ರೈತ ಸಿದ್ಧಾಂತ.

**ವಿವರ :** ಎಷ್ಟು ಜನ ಸ್ವಾಮೀಜೀಗಳಿದ್ದರೂ, ಎಷ್ಟೋ ಗುರುಗಳಾಗಿ ಇದ್ದರೂ, ಅವರು ಬೋಧಿಸುವುದು ಅದ್ವೈತ ಮತ್ತು ದ್ವೈತ. ಅದ್ವೈತ, ದ್ವೈತಗಳು ಇಂದೂ ಮತದಲ್ಲಿ ಪರಸ್ಪರ ವಿರುದ್ಧ ಸಿದ್ಧಾಂತಗಳಿಂದ ಆಧ್ಯಾತ್ಮಿಕವನ್ನು ಬೋಧಿಸುತ್ತಿದ್ದರೂ ಅವು ಶಾಸ್ತ್ರಬದ್ಧವಲ್ಲವೆಂದು ಹೇಳಬಹುದು. ಗೀತೆಯಲ್ಲಿ ಭಗವಂತನು ಹೇಳಿರುವುದಕ್ಕೆ ಭಿನ್ನವಾಗಿ ಇರುವುದ್ಯಾವುದಾದರೂ ಶಾಸ್ತ್ರಬದ್ದವಲ್ಲ. ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಇರುವ ಕ್ಷರಾಕ್ಷರ ಪುರುಷೋತ್ತಮರೆನ್ನುವ **"ತ್ರೈತವನ್ನು"** ಯಾರೂ ಬೋಧಿಸುತ್ತಿಲ್ಲ. ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮುವ್ವರ ಮಾತನ್ನು ಬಿಟ್ಟು ಕೆಲವರು ಪರಮಾತ್ಮ ಒಬ್ಬನನ್ನು ಬೋಧಿಸುತ್ತಾ ಅದ್ವೈತವೆಂದು, ಕೆಲವರು ಜೀವಾತ್ಮ ಪರಮಾತ್ಮನನ್ನು ಬೋಧಿಸುತ್ತಾ ದ್ವೈತವೆಂದು ಕರೆಯುತ್ತಿದ್ದಾರೆ. ಮಧ್ಯೆದಲ್ಲಿ ಆತ್ಮನನ್ನು ಬಿಟ್ಟಿದ್ದಾರೆ. ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ತ್ರೈತವನ್ನು ಯಾರು ಬೋಧಿಸುತ್ತಿಲ್ಲ.

**665. (7) ಭಯ, ಭಕ್ತಿ ಎನ್ನುವ ಮಾತುಗಳಲ್ಲಿ ಭಕ್ತಿಗೆ ವ್ಯತಿರೇಖ ಪದ ಭಯವಾ ಅಥವಾ ಮತ್ತೆ ಯಾವುದಾದರೂ ಇದೆಯಾ?**

ಉ. ಅವಿಶ್ವಾಸ.

**ವಿವರ :** ಸರ್ವ ಸಾಧಾರಣವಾಗಿ ಭಯ, ಭಕ್ತಿ ಎನ್ನುವ ಮಾತು ಕೇಳುತ್ತಿದ್ದೇವೆ. ಒಬ್ಬ ವ್ಯಕ್ತಿಯ ಹತ್ತಿರ ಸಕ್ರಮವಾಗಿ ಪ್ರವರ್ತಿಸುವುದಕ್ಕೆ ಆ ವ್ಯಕ್ತಿ ಯೊಂದರ ಭಯವಾಗಲಿ, ಅಥವಾ ಆ ವ್ಯಕ್ತಿಯ ಮೇಲೆ ಭಕ್ತಿಯಾಗಲಿ ಇರಬೇಕು. ಹಾಗೆ ಯಾವುದೋ ಒಂದು ಇರುವುದರಿಂದ ಆ ವ್ಯಕ್ತಿಗೆ ಮರ್ಯಾದೆ ಕೊಡುವುದು ನಡೆಯುತ್ತದೆ. ಉದಾಹರಣೆಗೆ ಒಬ್ಬ ಟೀಚರ್ ಹೇಳಿದ ಪಾಠವನ್ನು ಕಲಿಯಬೇಕೆಂದರೆ, ಟೀಚರ್ ಭಯವಾಗಲಿ ಇರಬೇಕು, ಅಥವಾ ಟೀಚರ್ ಮೇಲೆ ಭಕ್ತಿಯಾದರೂ ಇರಬೇಕು. ಆ ಸಮಯದಲ್ಲೇ ಭಯದಿಂದಾಗಲಿ, ಅಥವಾ ಭಕ್ತಿಯಿಂದಾಗಲಿ ಆ ಪಾಠ ಕಲಿಯಬಹುದು. ಭಯ, ಭಕ್ತಿ ಎರಡೂ ಇಲ್ಲದೆ

ಹೋದರೆ ಟೀಚರನ್ನಾಗಲಿ, ಟೀಚರ್ ಮಾತನ್ನಾಗಲಿ ಲೆಕ್ಕ ಮಾಡುವುದಿಲ್ಲ. ಭಯ ಎನ್ನುವುದು ಒಂದು ಗುಣ, ಅದಕ್ಕೆ ವ್ಯತಿರೇಖ ಗುಣ ಧೈರ್ಯ. ಭಕ್ತಿಗೆ ವ್ಯತಿರೇಖ ಭಯವಲ್ಲವೆಂದು ತಿಳಿಯುತ್ತಿದೆ. ಭಕ್ತಿಗೆ ನಿರ್ವಚನವಾಗಿ ಶ್ರದ್ಧೆ, ವಿಶ್ವಾಸ ಎಂದು ಹೇಳಬಹುದು. ಅಶ್ರದ್ಧೆ ಅವಿಶ್ವಾಸ ಎನ್ನುವವು ಭಕ್ತಿಗೆ ವಿರುದ್ಧ ಪದಗಳು.

**666. (8) ಕರ್ತ, ಕರ್ಮ, ಕ್ರಿಯ, ಸಾಕ್ಷಿ ಎಲ್ಲಿ ಇವೆ?**

ಉ. ಸಜೀವ ಶರೀರದಲ್ಲಿ ಇವೆ.

**ವಿವರ :** ಒಬ್ಬ ಜೀವಾತ್ಮ ಶರೀರವನ್ನು ಧರಿಸಿ ಅದರಲ್ಲಿ ಜೀವಯಾತ್ರೆ ಸಾಗಿಸುವುದಕ್ಕೆ ಬೇಕಾಗಿರುವವರೆಲ್ಲಾ ಪರಮಾತ್ಮ ಹೊಂದಿಸಿ ಇಟ್ಟಿದ್ದಾನೆ. ಒಂದು ಸಜೀವ ಶರೀರದಲ್ಲಿ ಕರ್ತ, ಕರ್ಮ, ಕ್ರಿಯೆ, ಸಾಕ್ಷಿ ನಾಲ್ವರಿದ್ದಾರೆ. ಕರ್ತ, ಕರ್ಮ, ಕ್ರಿಯ, ಸಾಕ್ಷಿ ಇರುವಾಗಲೇ ಶರೀರ ಯಂತ್ರಾಂಗ ತನ್ನಷ್ಟಕ್ಕೆ ತಾನು ಸಾಗಿಹೋಗಬಲ್ಲದು. ನಾಲ್ವರಲ್ಲಿ ಯಾರೊಒಬ್ಬರು ಇಲ್ಲದೆ ಹೋದರು ಶರೀರ ಯಂತ್ರಾಂಗವು ಅಸಂಪೂರ್ಣವಾಗುವುದು. ಶರೀರದಲ್ಲಿ ನಾಲ್ವರು ಯಾರ ಕರ್ತವ್ಯವನ್ನು ಅವರು ನೆರವೇರಿಸುವುದರಿಂದ ಜೀವಯಾತ್ರೆ ಸಾಗುತ್ತಿದೆ.

**667. (9) ಒಂದೇ ಜ್ಞಾನೇಂದ್ರಿಯದಿಂದ ಎರಡು ತನ್ಮಾತ್ರಗಳು ಕೆಲಸ ಮಾಡುವ ವಿಧಾನ ಯಾವ ಪ್ರಾಣಿಗಳಿಗೆ ಇದೆ?**

ಉ. ಹಾವುಗಳಿಗೆ ಇದೆ.

**ವಿವರ :** ಕೆಲವು ಹಾವುಗಳಿಗೆ ಎರಡು ಜ್ಞಾನೇಂದ್ರಿಯಗಳು ಒಂದರಲ್ಲಿ ಒಂದು ಸೇರಿಕೊಂಡಿವೆ. ಪ್ರತ್ಯೇಕಿಸಿ ನಾಗರ ಹಾವುಗಳಿಗೆ ಶಬ್ದ, ನೋಟ ಎರಡು ತನ್ಮಾತ್ರಗಳು ಒಂದೇ ಸ್ಥಳದಲ್ಲಿ ಇರುವುದು ಆಶ್ಚರ್ಯ. ಹಾವಿಗೆ ಕಣ್ಣುಗಳಿವೆ, ಕಣ್ಣುಗಳಲ್ಲೇ ಕಿವಿಗಳು ಸಹ ಇವೆ. ಕಣ್ಣುಗಳಲ್ಲಿ ದೃಷ್ಟಿ ಕೆಲಸ ಮಾಡುತ್ತಿರುವಾಗ ಹಾವುಗಳಿಗೆ ಶಬ್ದ ಕೇಳಿಸುವುದಿಲ್ಲ. ಹಾಗೆಯೇ ಶಬ್ಧ ಕೇಳುವಾಗ ದೃಷ್ಟಿ ಇರುವುದಿಲ್ಲ. ನಾಗರ ಹಾವಿನ ಹತ್ತಿರ ಶಬ್ದ ಮಾಡಿದರೆ, ಶಬ್ದದ ಕಡೆ ತಲೆ ತಿರುಗಿಸಬಲ್ಲವು ಆದರೆ ಆ ದೃಶ್ಯವನ್ನು ನೋಡಲಾರವು. ಆದ್ದರಿಂದಲೇ ಹಾವುಗಳನ್ನು ಹಿಡಿಯುವವರು ಪುಂಗಿಯಿಂದ ಶಬ್ದ ಊದುತ್ತಾ, ಅವುಗಳಿಗೆ ಕಣ್ಣು ಕಾಣಿಸದಹಾಗೆ ಮಾಡಿ, ಶಬ್ದವನ್ನು ಕೇಳುವಾಗ ಸುಲಭವಾಗಿ ಹಿಡಿಯುತ್ತಿದ್ದಾರೆ.

**668. (10) ಜೀವಿಗಳ ಶರೀರಗಳಿಗೆ ಒಂದುವರೆ ದಶ ಯಾವುದು?**

ಉ. ಯವ್ವನ.

**ವಿವರ :** ಜೀವ ಶರೀರಕ್ಕೆ ನಾಲ್ಕು ದಶಗಳಿವೆ. ಅವು 1. ಬಾಲ್ಯ, 2. ಯವ್ವನ, 3. ಕೌಮಾರ, 4. ವೃದ್ಧಾಪ್ಯ. ಇಲ್ಲಿ ಒಂದು ದಶ ಬಾಲ್ಯ ದಾಟಿದ ನಂತರ ಎರಡು ಪೂರ್ತಿ ಯಾಗುವವರೆಗು ಯವ್ವನವೆಂದು ತಿಳಿಯುತ್ತಿದೆ. ಆದ್ದರಿಂದ ಒಂದುವರೆ ದಶ ಎಂದರೆ ಯವ್ವನದಲ್ಲಿ ಇದೆಯೆಂದು ತಿಳಿಯುತ್ತಿದೆ. ಇನ್ನೂ ವಿವರವಾಗಿ ತಿಳಿಯಬೇಕೆಂದರೆ ನವಗ್ರಹಗಳ ದಶಗಳನ್ನು ಅನುಸರಿಸಿ ಮಾನವನ ಆಯಸ್ಸು 120 ಸಂವತ್ಸರಗಳಾಗಿ ಲೆಕ್ಕಿಸಲಾಗುತ್ತಿದೆ. ಇದನ್ನನುಸರಿಸಿ ಪೂರ್ವದಲ್ಲಿ ಮಾನವನ ಬಾಲ್ಯ 30 ಸಂವತ್ಸರಗಳೆಂದು, ನಂತರ 60 ಸಂವತ್ಸರಗಳ ವರೆಗು ಯವ್ವನವೆಂದು, ನಂತರ 90 ಸಂವತ್ಸರಗಳ ವರೆಗು ಕೌಮಾರ್ಯವೆಂದು, 90 ರಿಂದ 120 ರವರೆಗು ವೃದ್ಧಾಪ್ಯವೆಂದು ಲೆಕ್ಕಿಸುತ್ತಿದ್ದರು. ಪೂರ್ವಿಕರು ಹಾಗೇ ಬದುಕುತ್ತಿದ್ದರು. ಈ ಕಾಲದಲ್ಲಿ ಆಯಸ್ಸು ದಶಗಳೆಲ್ಲವು ಇಳಿಕೆಯಾದಂತೆ ಕಾಣಿಸುತ್ತಿವೆ. 15 ಸಂವತ್ಸರಗಳಿಗೆ ಬಾಲ್ಯ, 30 ಸಂವತ್ಸರಗಳಿಗೆ ಯವ್ವನ, 45 ಸಂವತ್ಸರಗಳಿಗೆ ಕೌಮಾರ್ಯ, 60 ಸಂವತ್ಸರಗಳಿಗೆ ವೃದ್ಧಾಪ್ಯವು ಮುಗಿದುಹೋಗುವ ಕಾಲ ಆಸನ್ನವಾಗಿದೆ. ಪೂರ್ವಕಾಲದ ಪ್ರಕಾರವಾದರೆ ಒಂದುವರೆ ದಶ ಎಂದರೆ 45 ಸಂವತ್ಸರಗಳೆಂದು, ಈ ಕಾಲದಲ್ಲಾದರೆ 22 ಸಂವತ್ಸರಗಳೆಂದು ಅರ್ಥ ಮಾಡಿಕೊಳ್ಳಬೇಕು.

# ಜ್ಞಾನ ಪರೀಕ್ಷೆ

**ಮಾಲ್ಯವಂತಮು** **ದಿನಾಂಕ–08–08–1999**

**669. (1) ನಿನಗೆ ರುಚಿ ತಿಳಿಯುತ್ತಿರುವುದು ಅಂಗೈಯಲ್ಲಾ, ಕಣ್ಣಿನಲ್ಲಾ, ಹೊಟ್ಟೆಯಲ್ಲಾ ಮತ್ತೆ ಎಲ್ಲಿ ತಿಳಿಯುತ್ತಿದೆ?**

ಉ. ತಲೆಯಲ್ಲಿ.

**ವಿವರ :** ರುಚಿ ತಿಳಿಯುವುದು ನಾಲಿಗೆ ಹತ್ತಿರವೇ ತಾನೆ ಎಂದು ಬಹಳ ಜನ ಭ್ರಮಿಸುವುದಕ್ಕೆ ಅವಕಾಶವಿದೆ. ಬಾಯಲ್ಲಿನ ನಾಲಿಗೆಗೆ ರುಚಿ ತಿಳಿಯುವುದು ವಾಸ್ತವವೇ, ಆದರೆ ಪ್ರಶ್ನೆ ನಿನಗೆ ತಿಳಿಯುವುದೆಲ್ಲಿ ಎಂದು ಕೇಳುವುದು ನಡೆದಿದೆ. ನಾಲಿಗೆಗೆ ರುಚಿ ತಿಳಿದರೂ ಅದು ನಿನಗೆ ತಿಳಿಯುವುದಕ್ಕೆ ಮಧ್ಯೆದಲ್ಲಿ ಮನಸ್ಸು ಬುದ್ಧಿ ಎರಡೂ ಕೆಲಸ ಮಾಡುತ್ತಿವೆ. ನೀನು ಎಲ್ಲಿದ್ದೀಯೋ ಅಲ್ಲಿಗೆ ರುಚಿ ಯೊಂದರ ವಿಷಯವನ್ನು ಮನಸ್ಸುತೆಗೆದುಕೊಂಡು ಬಂದು ತಿಳಿಸುತ್ತಿದೆ. ಮನಸ್ಸು ನಾಲಿಗೆ ಹತ್ತಿರ ತಿಳಿದಿರುವುದನ್ನು

ತಲೆಯಲ್ಲಿನ ನಿನ್ನಹತ್ತಿರಕ್ಕೆ ತಂದಾಗಲೇ ನಿನಗೆ ತಿಳಿಯುತ್ತಿದೆ. ಆದ್ದರಿಂದ ನಿನಗೆ ಎಲ್ಲಿ ರುಚಿ ತಿಳಿಯುತ್ತದೆಂದರೆ ತಲೆಯಲ್ಲಿಯೇ ಎಂದು ಹೇಳುವುದು ಉತ್ತರವಾಗಿದೆ.

**670. (2) ಮರುಳು ಔಷಧ ಇಡುವುದು ಎನ್ನುತ್ತಾರೆ. ಪುನಃ ಔಷಧವನ್ನು ಕಕ್ಕಿಸುವವರು ಸಹ ಇದ್ದಾರೆ. ಮರ್ಲು ಔಷಧ ಜೀರ್ಣಾಶಯದಲ್ಲಿ ಜೀರ್ಣವಾಗದೆ ಇರುತ್ತದಾ?**

ಉ. ಜೀರ್ಣವಾಗುತ್ತದೆ.

**ವಿವರ :** ಮರುಳು ಔಷಧ ಕುರಿತು ಬಹಳ ಜನ ಹೇಳುತ್ತಿರುವುದು ನಾವೂ ಕೇಳಿದ್ದೇವೆ. ಎಷ್ಟೋ ಜನ ಅದನ್ನು ಕಕ್ಕಿಸುವವರು ಇದ್ದಾರೆಂದು ಸಹ ಕೇಳಿದ್ದೇವೆ. ಮರುಳು ಔಷಧ ಶರೀರದಲ್ಲಿನ ಜೀರ್ಣಾಶಯದಲ್ಲಿ ನಿಂತಿದ್ದು ಅದರ ಪ್ರಭಾವ ತೋರಿಸುತ್ತಿರುವುದೆಂದು, ಅದನ್ನು ಹೊರಗೆ ಕಕ್ಕಿಸುವುದರಿಂದ ಅದರ ಪ್ರಭಾವ ಇಲ್ಲದೆ ಹೋಗುವುದೆಂದು ಸಹ ಕೇಳಿದ್ದೇವೆ. ಇದರ ವಿಷಯವಾಗಿ ನಿಜ ಹೇಳಬೇಕೆಂದರೆ ಅನಾರೋಗಿಗಳನ್ನನುಸರಿಸಿ ಕೆಲವರು ವೈದ್ಯರು ಸೃಷ್ಟಿಸಿರುವುದೇ ಮರುಳು ಔಷಧ, ಅದನ್ನು ಕಕ್ಕಿಸುವುದು. ವಾಸ್ತವಕ್ಕೆ ಮರುಳು ಔಷಧ ಇಲ್ಲವೇ ಇಲ್ಲ. ಕೆಲವರು ಇದೆಯೆಂದು ವಾದಿಸಿದರೂ ಅದು ಜೀರ್ಣಾಶಯದಲ್ಲಿ ಉಳಿದಿರುವುದಕ್ಕೆ ಅವಕಾಶವಿಲ್ಲ. ತಿಂದಿರುವುದು ಏನಾದರೂ ಮೂರು ಗಂಟೆಗಳಿಗೆ ಮೀರಿ ಜೀರ್ಣಾಶಯದಲ್ಲಿ ಇರುವುದಕ್ಕೆ ಅವಕಾಶವಿಲ್ಲ. ಜೀರ್ಣಾಶಯದಲ್ಲಿನ ರಸಗಳ ಪ್ರಭಾವಕ್ಕೆ ಪ್ರತಿಯೊಂದು ಜೀರ್ಣವಾಗಬೇಕು. ಜೀರ್ಣವಾಗದಿದ್ದರೆ ವಾಂತಿ ಯಿಂದ ಹೊರಗೆ ಬರಬೇಕು. ಹಾಗಲ್ಲದೆ ದಿನಗಳು, ತಿಂಗಳುಗಳ ವರೆಗೆ ಔಷಧ ಹೊಟ್ಟೆಯಲ್ಲಿ ಇರುತ್ತದೆನ್ನುವುದು ಶುದ್ಧ ಅಸತ್ಯ. ಕಕ್ಕಿಸುವ ವೈದ್ಯರು ವಾಂತಿ ಆಗುವುದಕ್ಕೆ ಔಷಧ ಕೊಟ್ಟು, ವಾಂತಿ ಆಗುವಹಾಗೆ ಮಾಡಿ, ಅದರೊಳಗೆ ಯಾವುದೋ ಒಂದು ತಿಳಿಯದಹಾಗೆ ಹಾಕಿ, ಇದನ್ನೇ ಕಕ್ಕಿದೆಯೆಂದು ಇಲ್ಲಿಗೆ ಈ ಔಷಧ ಹೋಗಿದೆಯೆಂದು ಮೋಸಮಾಡಿ ದುಡ್ಡು ಕಸಿಯುತ್ತಿದ್ದಾರೆ. ಹಾಗೆ ಮಾಡುವುದರಲ್ಲಿ ನನಗೆ ಔಷಧ ಇಟ್ಟಿದ್ದಾರೆನ್ನುವ ಮನೋರೋಗ ಹೋಗುತ್ತಿದೆ ಹೊರತು, ಔಷಧ ಇಲ್ಲ ಕಕ್ಕುವುದು ಇಲ್ಲ. ಜೀರ್ಣಾಶಯದೊಳಗೆ ಏನು ಹೋದರೂ ಜೀರ್ಣವಾಗುತ್ತದೆ.

**671. (3) ಪ್ರಪಂಚದಲ್ಲಿ ಜೀವನವನ್ನು ಸಾಗಿಸುತ್ತಿರುವ ವೈಶ್ಯರ ಸ್ವಧರ್ಮ ಯಾವುದು?**

ಉ. ತನ್ನನ್ನು ತಾನು ತಿಳಿಯುವುದು.

**ವಿವರ :** ವೈಶ್ಯರ ಸ್ವಧರ್ಮ ವ್ಯಾಪಾರ ಮಾಡುವುದೆಂದು ಕೆಲವರು ಸ್ವಾಮೀಜೀಗಳು

ಹೇಳುವುದು, ಭಗವದ್ಗೀತೆಯಲ್ಲಿಯೂ ಸಹ ಕಲ್ಪಿಸಿ ಬರೆಯುವುದು, ಭೂಮಿ ಮೇಲೆ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರರೆನ್ನುವ ನಾಲ್ಕು ವರ್ಣಗಳು ಇವೆಯೆಂದು ಹೇಳುವುದು, ಅದರಲ್ಲಿ ಅವರವರ ಸ್ವಧರ್ಮಗಳನ್ನು ವಿವರಿಸುತ್ತಾ ವ್ಯಾಪಾರ ಮಾಡುವುದು ವೈಶ್ಯರ ಸ್ವಧರ್ಮವೆಂದು ಹೇಳುವುದು ನಡೆದಿದೆ. ಅದನ್ನನುಸರಿಸಿ ಎಲ್ಲರೂ ಹಾಗೇ ತಿಳಿದುಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಭಗವದ್ಗೀತೆಯಲ್ಲಿ ಕುಲಗಳ ಮಾತೇ ಇಲ್ಲ. ನಾಲ್ಕು ವರ್ಣಗಳೆಂದು ಹೇಳಿದ ಮಾತು ನಿಜವೇ ಆದರೂ, ಅವನ್ನು ಕುಲಗಳಾಗಿ ಅರ್ಥ ಮಾಡಿಕೊಳ್ಳುವುದು ನಮ್ಮ ತಪ್ಪು. ಪ್ರಪಂಚದಲ್ಲಿ ಪ್ರಜೆಗಳೆಲ್ಲರು ಭಗವದ್ಗೀತೆ ಪ್ರಕಾರ ನಾಲ್ಕು ವರ್ಣಗಳಲ್ಲೇ ಇದ್ದಾರೆ. ಆದರೆ ನಾಲ್ಕು ಕುಲಗಳಾಗಿ ಇಲ್ಲ. ದೇವರ ಭಾವದ ಪ್ರಕಾರ ಸಾತ್ವಿಕರು, ರಾಜಸರು, ತಾಮಸರು, ಯೋಗಿಗಳು ಎಂದು ನಾಲ್ಕು ವಿಧಗಳಾಗಿ ಪ್ರಪಂಚ ಜನಸಂಖ್ಯೆ ಇದೆ. ಹಾಗಲ್ಲದೆ ಕುಲಗಳನ್ನು ಲೆಕ್ಕಿಸಿಕೊಂಡರೆ ಈ ನಾಲ್ಕು ಕುಲಗಳು ಭಾರತ ದೇಶದಲ್ಲಿ ಹೊರತು ಮತ್ತೆ ಯಾವ ದೇಶದಲ್ಲಿಯೂ ಇಲ್ಲ. ಆಗ ಮನುಷ್ಯರೆಲ್ಲರಿಗೂ ಎನ್ನುವ ದೇವರ ಮಾತೇ ತಪ್ಪಾಗುತ್ತದೆ. ಆದ್ದರಿಂದ ಕುಲಗಳ ವಿಷಯವನ್ನು ಬಿಟ್ಟು ಗುಣಗಳ ವಿಷಯ ತೆಗೆದುಕೊಳ್ಳೋಣ.

ಭೂಮಿ ಮೇಲೆ ನಾವು ಏರ್ಪಡಿಸಿಕೊಂಡ ಕುಲಗಳ ಪ್ರಕಾರ ವೈಶ್ಯರಿಗೆ ಆಗಲಿ, ಬ್ರಾಹ್ಮಣರಿಗಾಗಲಿ, ಶೂದ್ರರಿಗಾಗಲಿ, ಯಾರಿಗಾದರೂ ದೈವತ್ವವನ್ನು ಕುರಿತು ತಿಳಿಯುವುದೇ ಸ್ವಧರ್ಮವಾಗುತ್ತದೆ. ಆತ್ಮಗಳಲ್ಲಿ ಜೀವಾತ್ಮಗಳಾಗಿ ಇರುವ ಜೀವಿಗಳೆಲ್ಲರು **"ಸ್ವ"** ಆತ್ಮನನ್ನು ಕುರಿತು, ಪರಮಾತ್ಮನನ್ನು ಕುರಿತು, ತಿಳಿದುಕೊಳ್ಳುವುದು ಅದರ ಪ್ರಕಾರ ನಡೆದುಕೊಳ್ಳುವುದು ಸ್ವಧರ್ಮವಾಗುತ್ತದೆ. ನೀನು ಯಾವ ಕುಲಸ್ಥನಾದರೂ ಆಗಲಿ, ನೀನು ಯಾರೆಂದು, ನಿನ್ನನ್ನು ನಡೆಸುವವನ್ಯಾರೆಂದು, ನಿನ್ನನ್ನು ನೋಡುವವನ್ಯಾರೆಂದು ತಿಳಿಯುವುದೇ ನಿನ್ನ ಸ್ವಧರ್ಮ.

**672. (4) ಜಗತಿ ಎನ್ನುವ ಪದದಲ್ಲಿ ಎರಡೇ ಭಾಗಗಳಿವೆ. ಆ ಎರಡರಲ್ಲಿ ಒಂದು ನಿನಗೆ ಮುಗಿದು ಹೋಗಿದೆ. ಎರಡನೆಯದು ಉಳಿದಿದೆ. ಆ ಉಳಿದಿರುವುದು ಯಾವುದು?**

ಉ. ಮರಣಿಸುವುದು.

**ವಿವರ :** ಜಗತಿಯಲ್ಲಿ ಎರಡು ಭಾಗಗಳಿವೆ. ಜಗತಿ ಪದವನ್ನು ಬಿಡಿಸಿ ನೋಡಿದರೆ **"ಜ"** ಎಂದರೆ ಜನಿಸುವುದು ಅಥವಾ ಹುಟ್ಟುವುದೆಂದು ಅರ್ಥ. ಹಾಗೇ **"ಗತಿ"** ಎಂದರೆ ಗತಿಸುವುದು ಅಥವಾ ಮರಣಿಸುವುದು ಎಂದು ಅರ್ಥ. ಜಗತಿ ಎಂದರೆ ಹುಟ್ಟುವುದು

ಸಾಯುವುದು ಎಂದು ಪೂರ್ತಿ ಅರ್ಥವಿದೆ. ಜಗತಿಯಲ್ಲಿ ಕಾಣಿಸುವಹಾಗೆ ಜನಿಸುವುದು ಗತಿಸುವುದು ಕಾಣಿಸುತ್ತಲೇ ಇದೆ. ಜಗತಿ ಪದದಲ್ಲಿ ನಾವು ಹುಟ್ಟಿದ್ದೇವೆ, ಆದ್ದರಿಂದ ಜ ಎನ್ನುವುದು ಮುಗಿದು ಹೋಗಿದೆ. ಇನ್ನು ಉಳಿದಿರುವುದು ಗತಿ ಎಂದರೆ ಗತಿಸುವುದೆಂದು ತಿಳಿಯಬೇಕು.

**673. (5) ಸತ್ತುಹೋದವನಿಗೆ ಪ್ರಾಣವಿದೆಯಾ?**

ಉ. ಇದೆ.

**ವಿವರ :** ಸತ್ತುಹೋದವನು ಬದುಕಿದ್ದಾನೆಂದರೆ ಆಶ್ಚರ್ಯವೇ ತಾನೆ! ಆದರೆ ನಿಜ ತಿಳಿದುಕೊಂಡರೆ ಆಶ್ಚರ್ಯಪಡಬೇಕಾಗಿರುವುದು ಏನೂ ಇಲ್ಲ. ಮರಣಿಸಿದವನು ಪುನಃ ಹುಟ್ಟುವುದು, ಹುಟ್ಟಿದವನು ಮರಣಿಸುವುದು ನಡೆಯುತ್ತಿರುವ ಕೆಲಸವೇ ಎಂದು ಗೀತೆಯಲ್ಲಿ ಸಹ ಹೇಳಿದ್ದಾರೆ. ಸತ್ತುಹೋದವನು ತಕ್ಷಣವೆ ಆಕ್ಷಣವೇ ಮರುಜನ್ಮ ಸೇರಿ ಪ್ರಾಣವನ್ನು ಹೊಂದಿ ಬದುಕಿದ್ದಾನೆ. ಅವನು ಎಲ್ಲಿ ಹುಟ್ಟಿರುವುದು ನಮಗೆ ತಿಳಿದಿಲ್ಲ, ಆದ್ದರಿಂದ ಸತ್ತುಹೋದವನು ಇನ್ನು ಇಲ್ಲ ಎಂದುಕೊಳ್ಳುತ್ತಿದ್ದೇವೆ. ನಿಜಕ್ಕೆ ಮತ್ತೊಂದು ಕಡೆ ಉಸಿರನ್ನು ತೆಗೆದುಕೊಂಡು ಬದಿಕಿರುವುದು ಸತ್ಯ. ಆದ್ದರಿಂದ ಸತ್ತವನು ಪ್ರಾಣದೊಂದಿಗೆ ಇದ್ದಾನೆಂದು ಹೇಳುವುದು ಸರಿಯಾದ ಸಮಾಧಾನ.

**674. (6) ಶರೀರದಲ್ಲಿನ 25 ಭಾಗಗಳಲ್ಲಿ ಮಾನವನು ಎಲ್ಲಾ ಜೀವರಾಶಿಗಳಿಗಿಂತಲೂ ಯಾವುದರಲ್ಲಿ ದೊಡ್ಡವನು?**

ಉ. ಬುದ್ಧಿಯಲ್ಲಿ

**ವಿವರ :** ಎಲ್ಲಾ ಜೀವರಾಶಿಗಳಿಗೂ 25 ಭಾಗಗಳಿದ್ದರೂ ಮಾನವನಿಗೆ ಉಳಿದ ಜೀವರಾಶಿ ಗಳಿಗೂ ಸ್ವಲ್ಪ ವ್ಯತ್ಯಾಸವಿದೆ. ಮಾನವನ ಶರೀರದಲ್ಲಿನ ಬುದ್ಧಿಗೂ ಉಳಿದ ಸಮಸ್ತ ಜೀವರಾಶಿಗಳ ಬುದ್ಧಿಗೂ ಎಷ್ಟೋ ವ್ಯತ್ಯಾಸವಿದೆ. ಮಾನವನ ಬುದ್ಧಿಗೂ ಎಲ್ಲಾ ಜೀವರಾಶಿ ಗಳ ಬುದ್ಧಿಗಿಂತ ದೊಡ್ಡದು ಚುರುಕಾದ್ದು. ಆದ್ದರಿಂದ ಮಾನವನು ತನ ಬುದ್ಧಿ ಬಲದಿಂದ ಎಲ್ಲಾ ಜೀವರಾಶಿಗಳನ್ನು ತನ್ನ ಅಧೀನದಲ್ಲಿ ತಂದುಕೊಂಡು ತನ್ನಮಾತನ್ನು ಕೇಳುವಹಾಗೆ ಮಾಡಿಕೊಳ್ಳುತ್ತಿದ್ದಾನೆ. ಸಿಂಹ ಬಲವಾದದ್ದಾದರೂ ಮಾನವನ ಬುದ್ಧಿಗಿಂತ ಕಡಿಮೆ ಇರುವುದು. ದೇಹ ಬಲಗಿಂತಲೂ ಬುದ್ಧಿ ಬಲದಲ್ಲಿ ಮಾನವರಿಗೆ ಉಳಿದ ಜೀವರಾಶಿಗಳಿಗೆ ಬಹಳ ವ್ಯತ್ಯಾಸವಿದೆ ಎಂದು ಹೇಳಬಹುದು.

**675. (7) ಅಂಗೈಯಲ್ಲಿ ವೈಕುಂಠವಿದೆಯೆಂದು ಕೆಲವರು, ಅಂಗೈಯಲ್ಲಿ ಎಲ್ಲಾ ಇದೆಯೆಂದು ಕೆಲವರು, ಅಂಗೈಯಲ್ಲಿ ಅಸಲಾದ ರಹಸ್ಯವಿದೆಯೆಂದು ಕೆಲವರು ಹೇಳುತ್ತಿರುತ್ತಾರೆ. ಆ ರಹಸ್ಯವೇನಿದೆ?**

ಉ. ಮುಕ್ತಿ ರಹಸ್ಯ.




**ಹಸ್ತದ ಚಿತ್ರ.**

**ವಿವರ :** ಹಸ್ತದಲ್ಲಿ ಆಧ್ಯಾತ್ಮಿಕವೆಲ್ಲಾ ಒಳಗೊಂಡಿದೆ. ಆಧ್ಯಾತ್ಮಿಕ, ಗುಣಗಳು, ಆತ್ಮ, ಪರಮಾತ್ಮರು, ಯೋಗ, ಮೋಕ್ಷ ಎಲ್ಲಾ ಹಸ್ತದಲಿ ಒಳಗೊಂಡಿವೆ ಆದ್ದರಿಂದ ದೇವಾಲಯಗಳಲ್ಲಿ ಮುಖ್ಯವಾಗಿ ಪ್ರತಿಮೆ ಹಸ್ತ ತೋರಿಸುತ್ತಿರುತ್ತದೆ. ಹಸ್ತದಲ್ಲಿ ಮುಖ್ಯವಾಗಿ ಮೂರು ರೇಖಗಳಿರುತ್ತವೆ. ಅವುಗಳೇ ಆತ್ಮ, ಜೀವಾತ್ಮ, ಪರಮಾತ್ಮ ಸೂಚನೆಯಾಗಿವೆ. ಪ್ರಪಂಚವೆಲ್ಲಾ ಜೀವರಾಶಿಗಳ ರೂಪದಲ್ಲಿ ಇದ್ದು ಸೃಷ್ಟಿಗೆ ಅರ್ಥ ಕೊಡುವ ಜೀವಾತ್ಮ, ಆತ್ಮ, ಪರಮಾತ್ಮಗಳಿರುವುದರಿಂದ ಎಲ್ಲಾ ಅಂಗೈಯಲ್ಲಿದೆ ಎಂದಿದ್ದಾರೆ. ಬೆರಳುಗಳು ಮೂರು ಗಣ್ಣುಗಳಾಗಿ ವಿಭಜಿಸಲ್ಪಟ್ಟು, ಮೂರು ಗುಣಗಳನ್ನು ಸೂಚಿಸುತ್ತಿವೆ. ಹಾಗೆಯೇ ಬೆಳ್ಳಗಿರುವ ಉಗುರು ಯೋಗವನ್ನು, ಬೆಳ್ಳಗಿರುವ ಉಗುರಲ್ಲಿ ಅರ್ಧಚಂದ್ರಾಕಾರವು ಜ್ಞಾನವನ್ನು ಸೂಚಿಸಿದಾಗ, ಕೊನೆಯ ನೀಲವರ್ಣದ ಉಗುರು ನೇರವಾಗಿ ಮೋಕ್ಷವನ್ನು ಗುರುತು ಮಾಡುತ್ತಿದೆ. ಈ ವಿಧವಾಗಿ ಗುಣಗಳು, ಜ್ಞಾನ, ಯೋಗ, ಮೋಕ್ಷವು

ಬೆರಳುಗಳಲ್ಲಿವೆ. ಅಂಗೈಯಲ್ಲಿ ಪ್ರಪಂಚಕ್ಕೆ ಮೂಲವಾದ ಜೀವಾತ್ಮ ಆತ್ಮಗಳು ಬರೆತಿರುವ ರೇಖೆಗಳಾಗಿ, ಪರಮಾತ್ಮ ಪ್ರತ್ಯೇಕವಾದ ರೇಖೆಯಾಗಿ ಇರುವುದರಿಂದ, ಸರ್ವವು ಹಸ್ತದಲ್ಲೇ ಇವೆ ಎಂದಿದ್ದಾರೆ. ಹಸ್ತವನ್ನು ಕುರಿತು ಪೂರ್ತಿ ವಿವರ ವಿವರವಾಗಿ ತಿಳಿಯಬೇಕೆಂದರೆ ನಮ್ಮ ರಚನೆಗಳಲ್ಲಿನ **"ದೇವಾಲಯ ರಹಸ್ಯಗಳು"** ಎನ್ನುವ ಪುಸ್ತಕವನ್ನು ಓದಿರಿ.

**676. (8) ಸರ್ವ ಜೀವರಾಶಿಗಳಲ್ಲಿ ಯಾವ ಜಾತಿಗೆ ಮುಖ್ಯವಾಗಿ ಪರಮಾತ್ಮ ಜ್ಞಾನ ಅವಶ್ಯಕ?**

ಉ. ಮನುಷ್ಯ ಜಾತಿಗೆ.

**ವಿವರ :** ಸರ್ವ ಜೀವರಾಶಿಗಳನ್ನು ಮೂರು ವಿಧಗಳಾಗಿ ವಿಭಜಿಸಬಹುದು. 84 ಲಕ್ಷ ವಿಧಗಳಾದ ಜಾತಿಗಳಲ್ಲಿ ಮೇಲಕ್ಕೆ ಬೆಳೆಯುವವು, ಪಕ್ಕಕ್ಕೆ ಬೆಳೆಯುವವು, ಕೆಳಕ್ಕೆ ಬೆಳೆಯುವವು ಎಂದು ವಿಭಜಿಸಬಹುದು. 83,99,999 ಲ ಜಾತಿಗಳು ಮೇಲಕ್ಕೆ ಪಕ್ಕಕ್ಕೆ ಬೆಳೆಯುವುದರಲ್ಲಿ ಇವೆ. ಒಂದೇ ಒಂದು ಮನುಷ್ಯ ಜಾತಿ ಮಾತ್ರ ಕೆಳಕ್ಕೆ ಬೆಳೆಯುವುದಾಗಿ ಇದೆ. ಎಲ್ಲಾ ಜಾತಿಗಳಿಗಿಂತಲೂ ಮನುಷ್ಯ ಜಾತಿ ದೇವರ ಜ್ಞಾನಕ್ಕೆ ಬಹಳ ದೂರವಾಗಿದೆ ಎನ್ನುವುದಕ್ಕೆ ಅದು ಕೆಳಕ್ಕೆ ಬೆಳೆಯುವುದೇ ಸಾಕ್ಷಿ. ಜಂತುಗಳಿಗಿಂತಲೂ ಮನುಷ್ಯನಲ್ಲೇ ಗುಣ ಪ್ರಭಾವಗಳು ಹೆಚ್ಚಾಗಿರುವುದರಿಂದ ಮನುಷ್ಯನಿಗೆ ಹೆಚ್ಚು ಜ್ಞಾನ ಅವಶ್ಯಕ. 83,99,999 ವಿಧಗಳಲ್ಲಿ ಒಂದೇ ಒಂದು ಮನುಷ್ಯಜಾತಿಗೆ ಮಾತ್ರ ಬುದ್ಧಿ ಹೆಚ್ಚಾಗಿ, ದೈವಜ್ಞಾನ ಕಡಿಮೆಯಾಗಿ ಇರುವುದು ಗಮನಾರ್ಹ.

**677. (9) ಗುಣಗಳಿಗೂ ಶರೀರಕ್ಕು ಆಹಾರವಾಗಿರುವವು ಯಾವುವು?**

ಉ. ವಿಷಯಗಳು, ಪೋಷಕ ಪದಾರ್ಥಗಳು.

**ವಿವರ :** ಗುಣಗಳಿಗೆ ವಿಷಯಗಳೇ ಆಹಾರ. ಮನಸ್ಸಿನಿಂದ ಬರುವ ವಿಷಯಗಳಿಂದಲೇ ಗುಣಗಳಿಗೆ ಬಲ ಬರುತ್ತದೆ. ಹಾಗೇ ಶರೀರಕ್ಕೆ ನಾಲ್ಕು ವಿಧಗಳ ಪೋಷಕ ಪದಾರ್ಥಗಳು ಆಹಾರವಾಗಿ ಇದ್ದು, ಶರೀರವನ್ನು ಆರೋಗ್ಯವಾಗಿ ಇಡುವುದರಲ್ಲಿಯೂ, ಬಲವನ್ನು ಕೈಗೂಡಿಸುವುದರಲ್ಲಿಯೂ ಸಹಾಯವಾಗುತ್ತವೆ. ಶರೀರಕ್ಕೆ ಪೋಷಕ ಪದಾರ್ಥಗಳು, ಶರೀರದಲ್ಲಿನ ಗುಣಗಳಿಗೆ ಮನೋ ವಿಷಯಗಳು ಆಹಾರವೆಂದು ತಿಳಿಯಬೇಕು.

**678. (10) ಪರಮಾತ್ಮನನ್ನು ಆರಾಧಿಸುವುದರಲ್ಲಿ ಯಾವ ವಿಧಾನಗಳು ಕೆಲಸಕ್ಕೆ ಬರುವುದಿಲ್ಲ?**

ಉ. ವೇದಾಧ್ಯಯನ, ದಾನಮಾಡುವುದು, ಯಜ್ಞಗಳು ಮಾಡುವುದು, ತಪಸ್ಸು ಮಾಡುವುದು.

**ವಿವರ :** ಪರಮಾತ್ಮನನ್ನು ಆರಾಧಿಸುವುದು, ಪ್ರಕೃತಿಯನ್ನು ಆರಾಧಿಸುವುದು ಎಂದು ಎರಡು ವಿಧಗಳ ಆರಾಧನೆಗಳು ಇವೆ. ವೇದಾಧ್ಯಯನ ಮಾಡುವುದು, ಯಜ್ಞಗಳು ಮಾಡುವುದು ಉಗ್ರತಪಸ್ಸುಗಳು ಮಾಡುವುದು ಮೊದಲಾದವು ಪ್ರಕೃತಿ ಆರಾಧನೆಗಳಲ್ಲಿ ಬರುವವು. ಬ್ರಹ್ಮ ಯೋಗ, ಕರ್ಮ ಯೋಗ, ಭಕ್ತಿ ಯೋಗ ಮೂರು ಪರಮಾತ್ಮವೊಂದರ ಆರಾಧನೆಗಳಾಗುತ್ತವೆ. ಮಾಯ ಪ್ರಭಾವದಿಂದ ಯಜ್ಞಗಳು, ತಪಸ್ಸುಗಳು, ವೇದಗಳನ್ನು ಓದುವುದು ಎಲ್ಲಾ ಪರಮಾತ್ಮನನ್ನು ಆರಾಧಿಸುವುದೆಂದು ಪ್ರಜೆಗಳು ಸ್ವಾಮಿಗಳು ಎಲ್ಲರೂ ತಪ್ಪಾಗಿ ತಿಳಿದು ಅವನ್ನೇ ಆಚರಿಸುತ್ತಿದ್ದಾರೆ. ಮೂರು ಯೋಗಗಳ ವಿನಹಾ ಯಾವ ಆರಾಧನೆಯಾದರೂ ಅದು ಮಾಯೆಯೊಂದರ ಆರಾಧನೆಯೆಂದು ತಿಳಿಯಬೇಕು. ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿ ಭಗವಂತನು ಸ್ವತಃವಾಗಿ ತಪಸ್ಸುಗಳು, ಯಜ್ಞಗಳು, ವೇದಾಧ್ಯಯನಗಳು ನನ್ನ ಹತ್ತಿರಕ್ಕೆ ಸೇರಿಸಲಾರವೆಂದಿದ್ದಾನೆ. ಆದ್ದರಿಂದ ಪರಮಾತ್ಮನನ್ನು ಆರಾಧಿಸುವುದಕ್ಕೆ ಯಾವುವು ಕೆಲಸಕ್ಕೆ ಬರುವ ಆರಾಧನೆಗಳೂ, ಯಾವುವು ಕೆಲಸಕ್ಕೆ ಬಾರದ ಆರಾಧನೆಗಳೊ ತಿಳಿದು ಮಾಡಬೇಕಾಗಿದೆ. ಇಲ್ಲದೇ ಹೋದರೆ ವೃಥಾ ಪ್ರಯಾಸವಾಗುತ್ತದೆ.

## ಜ್ಞಾನ ಪರೀಕ್ಷೆ

**ಧರ್ಮವರಂ** **ದಿನಾಂಕ–02–09–1999**

**679. (1) ಕುರಡುತನ, ಕುಂಟತನ ಜೀವಾತ್ಮನಿಗಾ, ಆತ್ಮನಿಗಾ, ಪರಮಾತ್ಮನಿಗಾ?**

ಉ. ಆತ್ಮನಿಗೆ.

**ವಿವರ :** ಶರೀರದಲ್ಲಿ ಜೀವಾತ್ಮ ಒಂದು ಕಡೆ ಕದಲದೆ ಇದೆ. ಅದಕ್ಕೆ ಬುದ್ಧಿ ಮನಸ್ಸಿನಿಂದ ಎಲ್ಲಾ ವಿಷಯಗಳು ಸೇರುತ್ತವೆ. ಆದ್ದರಿಂದ ಅದಕ್ಕೆ ಕಣ್ಣು, ಕಿವಿ ಇರುತ್ತವೆ, ಇಲ್ಲವೆನ್ನುವ ಸಮಸ್ಯೇಯೇಯಿಲ್ಲ. ಇನ್ನು ಪರಮಾತ್ಮ ಅಣುವಣುವಲ್ಲಿ ವ್ಯಾಪಿಸಿರುವುದು. ಶರೀರದ ಒಳಗೆ, ಶರೀರದ ಹೊರಗಿರುವ ಪರಮಾತ್ಮನಿಗೆ ನೋಡಬೇಕಾಗಿರುವುದು ಕೇಳಬೇಕಾಗಿರು ವುದು ಇಲ್ಲ.ನಂತರ ಉಳಿದ ಆತ್ಮನನ್ನು ನೋಡಿದರೆ, ಆತ್ಮ ಶರೀರವೆಲ್ಲಾ ವ್ಯಾಪಿಸಿ

ಶರೀರಾಕೃತಿಯನ್ನು ಹೋಲಿರುತ್ತದೆ. ಎಲ್ಲಾ ಅವಯವಗಳ ಸಾಮರ್ಥ್ಯವನ್ನು ಹೊಂದಿ ಎಲ್ಲಾ ಅವಯವಗಳಿಗೂ ಶಕ್ತಿ ಕೊಡುತ್ತಿದೆ. ಶರೀರದಲ್ಲಿನ ಕಣ್ಣಿಗೆ ದೃಷ್ಠಿ ಇಲ್ಲದಿದ್ದರೂ, ಕಿವಿಗೆ ಶಬ್ದ ಇಲ್ಲದಿದ್ದರೂ ಅಲ್ಲಿಯವರೆಗು ಆತ್ಮ ಶಕ್ತಿ ಇಲ್ಲವೆಂದೇ ಅರ್ಥ. ಎಲ್ಲಿಯವರೆಗು ವ್ಯಾಪಿಸಿದರೆ ಅಲ್ಲಿಯವರೆಗೇ ಆತ್ಮ ಆಕಾರ. ಆದ್ದರಿಂದ ಕಣ್ಣು ಕಿವಿ ವರೆಗು ವ್ಯಾಪಿಸದ ಆತ್ಮಕ್ಕೂ ತನ್ನ ಆಕಾರದಲ್ಲಿ ಎರಡು ಅವಯವಗಳು ಇಲ್ಲವೆಂದು ತಿಳಿಯುತ್ತಿದೆ. ಇದನ್ನನುಸರಿಸಿ ಅಂಗಲೋಪ ಮೂರು ಆತ್ಮಗಳಲ್ಲಿ ಜೀವಾತ್ಮನಿಗೂ, ಪರಮಾತ್ಮನಿಗೂ ಅಲ್ಲದೆ ಒಂದು ಆತ್ಮಕ್ಕೆ ಮಾತ್ರವಿದೆಯೆಂದು ತಿಳಿಯುತ್ತಿದೆ.

**680. (2) ಜೀವಾತ್ಮ ಆತ್ಮಗಳಲ್ಲಿ ಸ್ವಯಂಶಕ್ತಿ ಹೊಂದಿರುವುದು ಇದೆಯಾ?**

ಉ. ಇಲ್ಲ.

**ವಿವರ :** ಶರೀರದಲ್ಲಿ ಜೀವಾತ್ಮ, ಆತ್ಮ ಎರಡೂ ಜೋಡಿ ಆತ್ಮಗಳು. ಆತ್ಮ ಶರೀರವೆಲ್ಲವನ್ನು ಕದಲಿಸಿ ಕೆಲಸ ಮಾಡಿಸುತ್ತಿದ್ದರೂ ಆ ಶಕ್ತಿ ಸ್ವತಃವಾಗಿ ತನ್ನದಲ್ಲ. ಜೀವಾತ್ಮಕ್ಕಾಗಲಿ, ಆತ್ಮಕ್ಕಾಗಲಿ ಸ್ವಯಂಶಕ್ತಿ ಇಲ್ಲ. ಅವುಗಳಿಗೆ ಶಕ್ತಿ ಕೊಡುವುದು ಪರಮಾತ್ಮವೇ. ಶರೀರದಲ್ಲಿಯು, ಶರೀರ ಹೊರಗು ಎಲ್ಲಾ, ಪರಮಾತ್ಮ ಇದ್ದು ಶರೀರದೊಳಗೆ ಜೀವಾತ್ಮನಿಗೂ ಆತ್ಮಕ್ಕೂ ಶಕ್ತಿ ಕೊಡುತ್ತಿದ್ದಾನೆ. ಹಾಗೇ ಶರೀರಕ್ಕೂ ಪ್ರಕೃತಿಗೂ ಬಲವನ್ನು ಕೊಡುತ್ತಿದ್ದಾನೆ. ಎಲ್ಲಾಕಡೆ ಇರುವ ಪರಮಾತ್ಮನ ಮೇಲೆಯೇ ಶರೀರದಲ್ಲಿನ ಆತ್ಮಗಳು, ಶರೀರ, ಹೊರಗೆ ಪ್ರಕೃತಿ ಆಧಾರಪಟ್ಟಿವೆ.

**681. (3) ಪರಮಾತ್ಮ ಒಂದು ಶರೀರವನ್ನು ಧರಿಸಿದಾಗ ಮತ್ತೊಂದು ಕಡೆ ಇರುತ್ತದಾ?**

ಉ. ಇರುತ್ತದೆ.

**ವಿವರ :** ವಿಶ್ವವೆಲ್ಲಾ ವ್ಯಾಪಿಸಿರುವುದು ಪರಮಾತ್ಮ. ಪರಮಾತ್ಮ ಇಲ್ಲಿಯವರೆಗೆ ಇದೆಯೆಂದು ಅದಕ್ಕೆ ಹದ್ದನ್ನು ಏರ್ಪಡಿಸಿ ಯಾರು ಹೇಳಲಾರರು. ಅನಂತವಾದ ಪರಮಾತ್ಮನಿಂದ ಅದರಲ್ಲಿನ ಸ್ವಲ್ಪ ಭಾಗ ಅವಶ್ಯಕತೆ ಬಂದಾಗ ಭೂಮಿ ಮೇಲೆ ಜನ್ಮ ತೆಗೆದುಕೊಳ್ಳುವನು. ಆ ಜನ್ಮವನ್ನು ಭಗವಂತನು ಎನ್ನುತ್ತಿದ್ದೇವೆ. ಪರಮಾತ್ಮ ಅಂಶ ಭೂಮಿ ಮೇಲೆ ರೂಪದೊಂದಿಗೆ ಇರುವಾಗಾಗಲಿ, ಇಲ್ಲದಿರುವಾಗಾಗಲಿ, ಪರಮಾತ್ಮ ಎಂದಿಗೂ ಒಂದೇ ವಿಧವಾಗಿರುವನು. ಎಲ್ಲಾಕಡೆ ವ್ಯಾಪಿಸಿರುವುದು ಭಗವಂತನಾಗಿ ಜನ್ಮ ತೆಗೆದುಕೊಂಡರೂ ಎಲ್ಲಾ ವ್ಯಾಪಿಸಿಯೇ ಇರುತ್ತದೆ. ಸ್ವಲ್ಪ ಭಾಗ ಭಗವಂತನಾದಾಗ ಆ ಸ್ವಲ್ಪ ಕಡಿಮೆಯಾಗಿದೆ

ಎನ್ನುವ ಅನುಮಾನ ಇಟ್ಟುಕೊಳ್ಳಬೇಕಾದ ಅವಶ್ಯವಿಲ್ಲ. ಸ್ವಲ್ಪ ಸೀಳಿಸಿ ಹಾಕಿದರೆ ಆ ಸ್ವಲ್ಪ ಖಾಲೀ ಆಗುತ್ತದೇನೋ ಎನ್ನುವುದಕ್ಕೆ ಪರಮಾತ್ಮ ಒಂದು ಪದಾರ್ಥವಲ್ಲ. ಪರಮಾತ್ಮ ಅನಂತ ವಿಶ್ವಶಕ್ತಿ, ಅದನ್ನು ಇಷ್ಟು ಅಷ್ಟು ಎಂದು ಹೇಳಲಾರೆವು. ಭಗವಂತನಾಗಿ ಇಷ್ಟು ಹುಟ್ಟಿದೆ ಎಂದಾಗಲಿ, ಇಷ್ಟು ಉಳಿದಿದೆ ಎಂದಾಗಲಿ ಹೇಳುವುದಕ್ಕೆ ಸಾಧ್ಯವಿಲ್ಲ. ಎಲ್ಲಾ ಕಡೆ ಇದ್ದು ಒಂದು ಕಡೆ ಭಗವಂತನಾಗಿ ಇರಬಲ್ಲದು. ಭೂಮಿ ಮೇಲೆ ರೂಪ ತೆಗೆದುಕೊಂಡರೂ ತೆಗೆದುಕೊಳ್ಳದಿದ್ದರೂ ಎಂದಿಗೂ ಒಂದೇ ರೀತಿ ಪರಮಾತ್ಮ ಇರುವುದೆಂದು ತಿಳಿಯಬೇಕು.

**682. (4) ಪರಮಾತ್ಮನಿಗೆ ಇಷ್ಟರು ಅಯಿಷ್ಟರು ಇದ್ದಾರೆಂದು ಭಗವದ್ಗೀತೆಯಲ್ಲಿ ಹೇಳಿದ್ದಾರೆ. ಪರಮಾತ್ಮನಿಗೆ ಇಷ್ಟರು ಜ್ಞಾನದ ಮೇಲೆ ಆಸಕ್ತಿ ಇರುವವರಾ ಅಥವಾ ಜ್ಞಾನವನ್ನು ಆಚರಿಸುವವರಾ?**

ಉ. ಜ್ಞಾನವನ್ನು ಆಚರಿಸುವವರು.

**ವಿವರ :** ಜ್ಞಾನದ ಮೇಲೆ ಆಸಕ್ತಿ ಇರುವವರಿಗಿಂತಲೂ ಜ್ಞಾನವನ್ನು ತಿಳಿದು ಆಚರಿಸುವವರು ಮುಖ್ಯರು. ಆಸಕ್ತಿ ಇರುವವನಿಗಿಂತಲೂ ಜ್ಞಾನವನ್ನು ತಿಳಿಯುವವನು ಮುಖ್ಯ. ತಿಳಿದವನಿಗಿಂತ ಆಚರಿಸುವವನು ಮುಖ್ಯನು.

**683. (5) ಪರಮಾತ್ಮ ಜನ್ಮವನ್ನು ಹೇಗೆ ಗುರುತಿಸಬಹುದು?**

ಉ. ಬೋಧಿಸುವ ಧರ್ಮಗಳನ್ನನುಸರಿಸಿ.

**ವಿವರ :** ಪರಮಾತ್ಮ ರೂಪಧರಿಸಿ ಭಗವಂತನಾಗಿ ಭೂಮಿ ಮೇಲೆ ಬಂದಾಗ ಆತನನ್ನು ಗುರುತಿಸುವುದಕ್ಕೆ ಯಾವ ಆಧಾರಗಳು ಕಾಣಿಸುವುದಿಲ್ಲ. ಪರಮಾತ್ಮನಿಗೆ ಯಾವ ನಿಯಮಗಳು ಇಲ್ಲ, ಆದ್ದರಿಂದ ಆತನು ಯಾವ ನಿಯಮಗಳಿಂದ ಕಾಣಿಸುವುದಿಲ್ಲ. ಸಾಧಾರಣ ವ್ಯಕ್ತಿಯಾಗಿ ಇರುವ ಆತನನ್ನು ಗುರುತಿಸಬೇಕೆಂದರೆ ನಮಗೆ ಜ್ಞಾನ ಅವಶ್ಯ. ಜ್ಞಾನವಿದ್ದಾಗ ಆತನು ಹೇಳುವ ಮಾತುಗಳಲ್ಲಿನ ಧರ್ಮಗಳನ್ನು ಗುರುತಿಸಬಹುದು. ಎಲ್ಲಿ ಯಾವ ಶರೀರದಿಂದ ಆತ್ಮ ಧರ್ಮಗಳು ಸ್ಪಷ್ಟವಾಗಿ ಬೋಧಿಸಲಾಗುತ್ತಿವೆಯೋ, ಅಲ್ಲಿ ಭಗವಂತನು ಇದ್ದಾನೆಂದು ಹೇಳಬಹುದು. ಎಲ್ಲರೂ ಹೇಳುವವು ಧರ್ಮಗಳೇ ಎನಿಸಿದಾಗ, ಧರ್ಮಗಳಿಗು ಮಾಯೆಗು ವ್ಯತ್ಯಾಸ ತಿಳಿಯದಿದ್ದಾಗ, ಭಗವಂತನನ್ನು ಗುರ್ತಿಸುವುದು ಕಷ್ಟ.

**684. (6) ಪರಮಾತ್ಮನ ಬೆಲೆ ದೊಡ್ಡದೆಂದು ತಿಳಿದರೂ ಪ್ರಕೃತಿಯಲ್ಲಿನ ಮನುಷ್ಯರಿಗೂ, ಸಂಘಟನೆಗಳಿಗೂ, ಮನುಷ್ಯ ಏಕೆ ಪ್ರಾಧಾನ್ಯತೆಯನ್ನು ಕೊಡುತ್ತಿದ್ದಾನೆ?**

ಉ. ಭಯದಿಂದ.

**ವಿವರ :** ಶರೀರದಲ್ಲಿರುವ ಗುಣಗಳಿಗೆಲ್ಲ ಸೂಕ್ಷ್ಮವಾದ ಗುಣಗಳು ಎರಡು ಇವೆ. ಒಂದು ಧೈರ್ಯ, ಎರಡನೆಯದು ಭಯ. ಧೈರ್ಯ ಜ್ಞಾನಪರವಾದದ್ದು, ಭಯ ಅಜ್ಞಾನ ಪರವಾದದ್ದು. ಪರಮಾತ್ಮ ಜ್ಞಾನ ಎಷ್ಟು ತಿಳಿದರೂ ಒಬ್ಬ ಮನುಷ್ಯನಿಗಾಗಲಿ, ಒಂದು ಸಂಘಟನೆಗಾಗಲಿ ಮಾನವನು ಭಯಪಡುತ್ತಿದ್ದಾನೆ. ತನ್ನ ಭಯದಿಂದ ದೇವರಿಗಿಂತ ಹೆಚ್ಚಾಗಿ ಮನುಷ್ಯನಿಗೇ ಬೆಲೆ ಕೊಡುತ್ತಿದ್ದಾನೆ. ದೇವರಿಗೆ ಹತ್ತಿರವಾಗಿರುವವನನ್ನು ಸಹಿತ ಭಯ ದೂರಮಾಡಬಲ್ಲದು. ಆದ್ದರಿಂದಲೇ ಭಯ ಪರಧರ್ಮವಾದದ್ದೆಂದು ಗೀತೆಯಲ್ಲಿ ಹೇಳಿದ್ದಾರೆ. ಭಯ ದೇವರನ್ನು ಬಿಟ್ಟು ಆಜ್ಞಾನಿಗಳ ಹತ್ತಿರ ಸೇರುವಹಾಗೆ ಮಾಡಬಲ್ಲದು. ಭಯಕ್ಕಿಂತಲೂ ಸ್ವಧರ್ಮವನ್ನು ಆಶ್ರಯಿಸಿ ಸಾಯುವುದೇ ಮೇಲು ಎಂದಿದ್ದಾರೆ. ಆದ್ದರಿಂದ ಅಜ್ಞಾನ ಪರವಾದ ಭಯವನ್ನು ಬಿಟ್ಟು ಜ್ಞಾನಪರವಾದ ಧೈರ್ಯವನ್ನು ಹೊಂದಬೇಕು.

**685. (7) ಹೆಸರು ವಾಸಿಯಾದ ಗುಣಗಳಲ್ಲಿ ಜ್ಞಾನಕ್ಕೆ ವಿರುದ್ಧವಾದದ್ದು ಆಸೆ ಎಂದು ಗೀತೆಯಲ್ಲಿ ಹೇಳಲಾಗಿದೆ. ಹಾಗೇ ಹೆಸರುವಾಸಿಯಾಗದ ಪ್ರಚಾರವಾಗದ ಗುಣಗಳಲ್ಲಿ ಆಸೆಗಿಂತ ಹೆಚ್ಚು ವಿರುದ್ಧವಿರುವ ಗುಣಯಾವುದು?**

ಉ. ಭಯ.

**ವಿವರ :** ಹೆಸರುವಾಸಿಯಾದ ಕಾಮ ಕ್ರೋದಾದಿ ಗುಣಗಳಲ್ಲಿ ಕಾಮ ಜ್ಞಾನಕ್ಕೆ ನಿತ್ಯ ಶತ್ರುತ್ವವನ್ನು ಹೊಂದಿದೆ ಎಂದು ಹೇಳುವುದು ಕೇಳಿದ್ದೇವೆ. ಹೆಸರುವಾಸಿಯಾಗದ ಗುಣಗಳಲ್ಲಿ ಕಾಮಗಿಂತಲೂ ಹೆಚ್ಚು ಶತ್ರುತ್ವವನ್ನು ಹೊಂದಿರುವುದು ಮತ್ತೊಂದಿದೆ, ಅದೇ ಭಯ. ಕಾಮ ನಿತ್ಯ ಶತ್ರುವಾದಾಗ, ಭಯ ತಿಂಗಳಿಗೆ ಒಂದು ದಿನ ಬಂದರೆ ಸಾಕು. ತಿಂಗಳು ಸಂಪಾದಿಸಿಕೊಂಡ ಜ್ಞಾನವೆಲ್ಲಾ ಒಂದೇ ದಿನ ಹೋಗುವುದು. ಆದ್ದರಿಂದ ಕಾಮಕ್ಕಿಂತಲೂ ಭಯ ಅಪಾಯಕರವಾದ ಶತ್ರುವೆಂದು ತಿಳಿಯಬೇಕು. ನೀನು ಎಲ್ಲಿ ಭಯಪಟ್ಟರು ಪರವಾಗಿಲ್ಲ ಜ್ಞಾನ ವಿಷಯಗಳಲ್ಲಿ ಭಯಪಡಬಾರದು ಎಂದು ಎಚ್ಚರದಲ್ಲಿರಬೇಕು.

**686. (8) ಪಶ್ಚಾತ್ತಾಪದಿಂದ ಪರಿಹಾರವಾಗುವುದೆಂದು ಕೆಲವರನ್ನುತ್ತಿದ್ದಾರೆ ಅದು ನಿಜವೇನಾ?**

ಉ. ನಿಜವಲ್ಲ.

**ವಿವರ :** ಈ ಮಾತು ಮೇಲ್ನೋಟಕ್ಕೆ ಮಾತ್ರ ಹೇಳುತ್ತಿದ್ದಾರಾಗಲಿ ಒಳಗೆ ಪಾಪ ಮಾತ್ರ ಪರಿಹಾರವಾಗುವುದಿಲ್ಲ. ಕರ್ಮ ಸಿದ್ಧಾಂತದ ಪ್ರಕಾರ ಪಶ್ಚಾತ್ತಾಪದಿಂದ ಕರ್ಮ ಹೋಗುವುದಿಲ್ಲ. ಕರ್ಮ ಮಾಡಿದವನು ಆ ಕರ್ಮವನ್ನು ತಪ್ಪದೆ ಅನುಭವಿಸಬೇಕಾದ್ದೇ. ಮುಖ್ಯವಾಗಿ ಪರಿಶೀಲಿಸಿ ನೋಡಿದರು ಕರ್ಮ ಹೋಗುವುದಕ್ಕೆ ಎರಡೆ ಎರಡು ವಿಧಾನಗಳು ಇವೆ. ಒಂದು ಅನುಭವಿಸಬೇಕು, ಎರಡು ಜ್ಞಾನಾಗ್ನಿಯಿಂದ ಸುಟ್ಟು ಹಾಕಬೇಕು. ಜ್ಞಾನಾಗ್ನಿ ಇಲ್ಲದವನು ಕರ್ಮವನ್ನು ತಪ್ಪದೆ ಅನುಭವಿಸಬೇಕಾದ್ದೆ.

**687. (9) ಕರ್ಮ ಕಾರ್ಯಾಚರಣೆಗು, ಪಾಪ ಪುಣ್ಯ ಸಮುಪಾರ್ಜನೆಗು ಕಾಮಾಧಿ ಗುಣಗಳು ಕಾರಣವಾದಾಗ, ಜ್ಞಾನಾಚರಣೆಗು ಮೋಕ್ಷಾರ್ಜನೆಗು ಸಹ ಗುಣಗಳೇ ಕಾರಣವಾ?**

ಉ. ಗುಣಗಳೇ ಕಾರಣ.

**ವಿವರ :** ಕಾರ್ಯಾಚರಣೆಗು ಪಾಪ ಪುಣ್ಯಗಳು ಸಂಪಾದಿಸುವುದಕ್ಕು ಗುಣಗಳೇ ಕಾರಣ. ಗುಣಗಳು ಕೆಲಸ ಮಾಡುತ್ತಿರುವುದರಿಂದ ಕೆಲಸಗಳು ನಡೆಯುವುದು, ಕರ್ಮ ಬರುವುದು ನಡೆಯುತ್ತಿದೆ. ಹಾಗೇ ಜ್ಞಾನಾಚರಣೆಗೂ ಮೋಕ್ಷ ಬರುವುದಕ್ಕೂ ಸಹ ಗುಣಗಳೇ ಕಾರಣವೆಂದು ಹೇಳಬಹುದು. ಏಕೆಂದರೆ! ಗುಣಗಳು ಕೆಲಸ ಮಾಡದಿರುವಾಗ ಜ್ಞಾನ, ಮೋಕ್ಷ ಲಭಿಸುವುದು ನಡೆಯುತ್ತದೆ. ಆದ್ದರಿಂದ ಮೋಕ್ಷ ಬರುವುದಕ್ಕಾಗಲಿ, ಬಾರದೆ ಹೋಗುವುದಕ್ಕಾಗಲಿ, ಮುಖ್ಯವಾಗಿ ಗುಣಗಳೇ ಕಾರಣ. ಗುಣಗಳೇ ಮಾಯೆ ಎಂದು ನೆನಪಿಟ್ಟುಕೊಳ್ಳಬೇಕು.

**688. (10) ಅಂಗೈಯಲ್ಲಿನ ಜೀವರೇಖೆ ಕೆಳಗಿನಿಂದ ಹೊರಡುವುದಕ್ಕೆ ಅರ್ಥವೇನಿದೆ?**

ಉ. ಗುಣಚಕ್ರದಲ್ಲಿದ್ದಾನಲ್ಲವೆ!

**ವಿವರ :** ಅಂಗೈ ಕೆಳಗೆ ಮೂರು ಗುಣಗಳನ್ನು ಸೂಚಿಸುವ ಭಾಗಗಳಿವೆ. ಮೂರು ಗುಣ ಭಾಗಗಳಲ್ಲಿ ಜೀವಾತ್ಮನಿದ್ದಾನೆ, ಆದ್ದರಿಂದ ಗುಣ ಭಾಗಗಳಿರುವ ಕೆಳಗಿನಿಂದ ಜೀವರೇಖೆ ಪ್ರಾರಂಭವಾಗಿ ಮೇಲಕ್ಕೆ ಹೋಗಿದೆ. ಈ ವಿಷಯ ಪೂರ್ತಿ ಅರ್ಥವಾಗಬೇಕೆಂದರೆ ನಮ್ಮ ರಚನೆಗಳಲ್ಲಿನ **"ದೇವಾಲಯ ರಹಸ್ಯಗಳು"** ಎನ್ನುವ ಗ್ರಂಥದಲ್ಲಿ ಹಸ್ತವನ್ನು ಕುರಿತು ಬರೆದ ವಿಷಯವನ್ನು ಅದರಲ್ಲಿನ ಹಸ್ತದ ಚಿತ್ರವನ್ನು ನೋಡಿರಿ.

# ಜ್ಞಾನ ಪರೀಕ್ಷೆ

**ಕೊತ್ತಕೋಟ** **ದಿನಾಂಕ–03–11–1999**

**689. (1) ಶರೀರದಲ್ಲಿನ ಆತ್ಮನನ್ನು ಕಂಡುಕೊಳ್ಳುವ ಮಾರ್ಗಗಳು ಎಷ್ಟು?**

ಉ. ಒಂದೇ.

**ವಿವರ :** ಶರೀರದಲ್ಲಿನ ಆತ್ಮನನ್ನು ಕಂಡುಕೊಳ್ಳುವುದಕ್ಕೆ ಬ್ರಹ್ಮಯೋಗ ಎನ್ನುವ ಒಂದೇ ಒಂದು ಮಾರ್ಗವಿದೆ. ಬ್ರಹ್ಮಯೋಗದಲ್ಲಿ ಮನಸ್ಸು ಹೊರಗಿನ ವಿಷಯಗಳನ್ನು ತಿಳಿಸದೆ ಬ್ರಹ್ಮನಾಡಿಯಲ್ಲಿ ಅಡಗಿಕೊಂಡು, ಅಲ್ಲಿರುವ ಆತ್ಮನನ್ನು ಕುರಿತು ತಿಳಿಸಬಲ್ಲದು. ಅದನ್ನು ಬುದ್ಧಿ ವಿವರಿಸಿ ಜೀವಾತ್ಮನಿಗೆ ತಿಳಿಸಬಲ್ಲದು.

**690 (2) ಪೂರ್ವದಲ್ಲಿ ಮೊದಲು ಭಗವದ್ಗೀತೆ ಯಾರಿಂದ ಯಾರಿಗೆ ಹೇಳಲಾಗಿದೆ?**

ಉ. ಪರಮಾತ್ಮ ನಿಂದ ಸೂರ್ಯನಿಗೆ ಹೇಳಲಾಗಿದೆ.

**ವಿವರ :** ಆದಿಯಲ್ಲಿ ಪರಮಾತ್ಮ ಸೂರ್ಯನಿಗೆ ತಿಳಿಸಿದ ಹಾಗೆ ಗೀತೆಯಲ್ಲಿ ಹೇಳಲಾಗಿದೆ. ಗೀತೆ 5,150 ಸಂವತ್ಸರಗಳ ಪೂರ್ವದಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ಹೇಳದ ಮೊದಲೇ ಹುಟ್ಟಿದೆ. ಆದಿಯಲ್ಲಿ ಮೊದಲು ಕೇಳಿರುವುದನ್ನು ಸೂರ್ಯ ಮನುವಿಗೆ ತಿಳಿಸಿದ ಹಾಗೆ, ಮನುವು ಇಕ್ಷ್ವಾಕನೆನ್ನುವ ರಾಜನಿಗೆ ತಿಳಿಸಿದಹಾಗೆ ಇದೆ.

**691. (3) ಪೂರ್ವ ಕಾಲದಲ್ಲಿ ಭಗವದ್ಗೀತೆ ಕೊನೆಯದಾಗಿ ಯಾರು ಯಾರಿಗೆ ಹೇಳಿದ್ದಾರೆ?**

ಉ. ಯೇಸು ಪ್ರಭು ಯೂದರಿಗೆ ಹೇಳಿದ್ದಾನೆ.

**ವಿವರ :** ಈ ಮಾತು ಬಹಳ ವಿಚಿತ್ರವಾಗಿರುತ್ತದೆ. ಭಗವದ್ಗೀತೆ ಎಂದರೆ ದ್ವಾಪರ ಯುಗದಲ್ಲಿನದು ಎಂದು ಕೃಷ್ಣನು ಅರ್ಜುನನಿಗೆ ಹೇಳಿರುವುದೆಂದು ಎಲ್ಲರಿಗೂ ತಿಳಿದಿರುವಾಗ, ಯೇಸು ಪ್ರಭು 2000 ಸಂವತ್ಸರಗಳ ಪೂರ್ವದಲ್ಲಿ ತನ್ನ ಶಿಷ್ಯರಿಗೆ ಹೇಳಿದ್ದಾನೆನ್ನುವುದು ಬಹಳ ಜನರಿಗೆ ಆಶ್ಚರ್ಯವಾಗಿ ಅಸತ್ಯವಾಗಿ ತೋಚಬಹುದು. ಇತ್ತ ಇಂದೂಗಳು ಅತ್ತ ಕ್ರೈಸ್ತರು ಇಬ್ಬರೂ ಅಲ್ಲವೆನ್ನಬಹುದು. ಆದರೂ ಇದು ಸತ್ಯವಾದ ಮಾತು. ಹೇಗೆಂದರೆ! ಭಗವದ್ಗೀತೆ ಎಂದರೆ ಭಗವಂತನು ಹೇಳಿರುವುದೆಂದು ಅರ್ಥ. ಭಗವಂತನು ಎಲ್ಲಾದರೂ ಯಾವ ಕಾಲದಲ್ಲಾದರೂ, ಮನುಷ್ಯರಿಗೆ ಹದ್ದನ್ನು ಏರ್ಪಡಿಸಿ

ಹೇಳಿರುವುದು ಭಗವದ್ಗೀತೆಯೇ ಆಗುತ್ತದೆ. ಐದು ಸಾವಿರ ಸಂವತ್ಸರಗಳ ಪೂರ್ವದಲ್ಲಿ ಕೃಷ್ಣನು ಭಗವಂತನು, ಆದ್ದರಿಂದ ಆದಿನ ಆತನು ಹೇಳಿರುವುದು ಭಗವದ್ಗೀತೆ. ಆ ದಿನವೇ ಕೃಷ್ಣನು ಹೇಳಿದ್ದಾನೆ ನನಗೆ ಯಾವಾಗ ಅವಶ್ಯವಾಗುತ್ತದೆಯೋ ಅಂದರೆ ಧರ್ಮಗಳು ಅಧರ್ಮಗಳಾಗಿ ಬದಲಾದರೆ ಆಗ ಬರುತ್ತೇನೆಂದು, ಹಾಗೆಯೇ ಯೇಸು ಪ್ರಭುವಾಗಿ ಎರಡು ಸಾವಿರ ಸಂವತ್ಸರಗಳ ಪೂರ್ವದಲ್ಲಿ ಬಂದಿದ್ದಾನೆಂದು ಅಂದುಕೊಳ್ಳುತ್ತಿದ್ದೇವೆ. ಪರಮಾತ್ಮ ಯಾವಾಗ ಯಾವ ಅವತಾರದಿಂದ ಬಂದರೂ ಅದನ್ನು ಭಗವಂತನೆಂದೇ ತಿಳಿಯಬೇಕು. ಪರಲೋಕದಿಂದ ಪರಮಾತ್ಮನಿಂದ ಬಂದವನು ಭಗವಂತನಾದಾಗ ಅದರ ಪ್ರಕಾರ ಯೇಸು ಪ್ರಭುವು ಭಗವಂತನೇ ಆಗುತ್ತಾನೆ. ಭಗವಂತನು ಮನುಷ್ಯನಿಗೆ ಹೇಳಿರುವುದು ಭಗವದ್ಗೀತೆಯೇ ಆಗುತ್ತದೆ. ಕೃಷ್ಣನು ಹೇಳಿರುವ ಭಾಷೆ, ಯೇಸು ಹೇಳಿರುವ ಭಾಷೆ ಬೇರೆ ಬೇರೆಯಾದರೂ, ಹೆಸರುಗಳು ವೇಷಗಳು ಆಕಾರಗಳು ಬೇರೆಯಾದರೂ, ಅವರು ಭಗವಂತರೇ, ಅವರು ಹೇಳಿರುವುದು ಭಗವದ್ಗೀತೆಗಳೆಂದೇ ತಿಳಿಯಬೇಕು.

**692. (4) ಗೀತೆಯಲ್ಲಿ ಆರನೆ ಅಧ್ಯಾಯ ಯಾವುದು?**

ಉ. ವಿಜ್ಞಾನ ಯೋಗ.

**ವಿವರ :** ಪ್ರತಿ ಭಗವದ್ಗೀತೆಯಲ್ಲೂ ಆತ್ಮ ಸಂಯಮ ಯೋಗ ಆರನೇ ಅಧ್ಯಾಯವಾಗಿ ಇದೆ. ಏಳನೆ ಅಧ್ಯಾಯವಾಗಿರುವ ವಿಜ್ಞಾನ ಯೋಗವನ್ನು ಇಲ್ಲಿ ನಾವು ಆರನೇ ಅಧ್ಯಾಯದ ಕೆಳಗೆ ಲೆಕ್ಕಿಸುತ್ತಿದ್ದೇವೆ. ಏಕೆಂದರೆ ಉಳಿದ ಗೀತಾ ಪುಸ್ತಕಗಳಲ್ಲಿ ಅರ್ಜುನ ವಿಷಾದಯೋಗ ವನ್ನು ಒಂದನೇ ಅಧ್ಯಾಯವಾಗಿ ಲೆಕ್ಕಿಸುವುದರಿಂದ ಆರನೆಯದಾಗಿ ಆತ್ಮ ಸಂಯಮ ಯೋಗವಿದೆ. ವಾಸ್ತವಕ್ಕೆ ಭಗವಂತನು ಹೇಳಿರುವುದೇ ಭಗವದ್ಗೀತೆ ಎನ್ನುವ ಸೂತ್ರದ ಪ್ರಕಾರ, ಅರ್ಜುನನು ಹೇಳಿದ ವಿಷಾದಯೋಗವನ್ನು ತೆಗೆದು ಹಾಕಿ, ಭಗವಂತನು ಹೇಳಿದ ಸಾಂಖ್ಯಯೋಗವನ್ನು ಮೊದಲನೆಯ ಅಧ್ಯಾಯವಾಗಿ ಲೆಕ್ಕಿಸುವುದರಿಂದ, ನಾವು ಹೇಳುವ ಭಗವದ್ಗೀತೆಯಲ್ಲಿ ಆರನೇ ಅಧ್ಯಾಯವಾಗಿ ವಿಜ್ಞಾನಯೋಗ ಹೇಳಲಾಗುತ್ತಿದೆ. ನಮ್ಮ ರಚನೆಗಳಲ್ಲಿನ **"ತ್ರೈತ ಸಿದ್ಧಾಂತ ಭಗವದ್ಗೀತೆ" ಯಲ್ಲಿ** ಆರನೇ ಅಧ್ಯಾಯ ವಿಜ್ಞಾನ ಯೋಗವೇ.

**693. (5) ಜಿಹ್ವವನ್ನು ಜಯಿಸುವುದೆಂದರೇ ಯಾವ ಗುಣವನ್ನು ಜಯಿಸಿದಹಾಗೆ?**

ಉ. ಆಸೆ (ಕಾಮ) ಎನ್ನುವ ಗುಣವನ್ನು ಜಯಿಸಿದಹಾಗೆ.

**ವಿವರ :** ಜಿಹ್ವ ಎಂದರೆ ನಾಲಿಗೆ. ನಾಲಿಗೆಯನ್ನು ಜಯಿಸುವುದೆಂದರೆ ಬಾಯಿ ರುಚಿಯನ್ನು

ಜಯಿಸುವುದೆಂದು ಅರ್ಥ. ಸೂತ್ರದ ಪ್ರಕಾರ ಐದು ಜ್ಞಾನ ಅವಯವಗಳಿಗೆ ಎಲ್ಲಾ ಗುಣಗಳು ಸಂಬಂಧವಿದೆ. ಚರ್ಮಕ್ಕೆ ಸ್ಪರ್ಶ ಆಸೆ ಹೇಗಿರುತ್ತದೋ ಹಾಗೇ ನಾಲಿಗೆಗೆ ರುಚಿ ನೋಡಬೇಕೆನ್ನುವ ಆಸೆ ಮುಖ್ಯವಾಗಿ ಇರುತ್ತದೆ. ರುಚಿ ನೋಡಬೇಕೆನ್ನುವ ಆಸೆಯನ್ನು ಬಂದಿಸಿದರೆ ಜಿಹ್ವವನ್ನು ಜಯಿಸಿದಂತೇ ಆಗುತ್ತದೆ. ಆಸೆ ಅರಿ (ಶತ್ರು) ಷಟ್ ವರ್ಗದಲ್ಲಿ ಮೊದಲನೆಯದು. ಶತ್ರು ವರ್ಗದಲ್ಲಿನ ಮೊದಲನೆಯ ಗುಣ ಆಸೆ ಆದ್ದರಿಂದ ಅದನ್ನು ಇಷ್ಟಬಂದಹಾಗೇ ಹೋಗಲು ಬಿಡದೆ ಸ್ವಲ್ಪವಾದರೂ ಬಿಗಿ ಮಾಡಿಕೊಳ್ಳಬೇಕು. ಕೈಲಾದರೆ ಪೂರ್ತಿ ಜಯಿಸಬೇಕು.

**694. (6) ಪ್ರಪಂಚದಲ್ಲಿ ಎಲ್ಲಾ ಮತಗಳವರನ್ನು ಒಂದೇ ವಿಶ್ವಾಸವೆನ್ನುವ ದಾರಿಯ ಮೇಲೆ ನಡೆಸುವ ಏಕೈಕ ಸಿದ್ಧಾಂತ ಯಾವುದು?**

ಉ. ತ್ರೈತ ಸಿದ್ಧಾಂತ.

**ವಿವರ :** ಪ್ರಪಂಚದಲ್ಲಿ ಮುಖ್ಯವಾದ ಮೂರು ಮತಗಳಾಗಿ ಇಸ್ಲಾಮ್, ಕ್ರೈಸ್ತ, ಇಂದೂ ಮತಗಳು ಇವೆ. ಈ ಮೂರು ಒಂದರೊಂದಿಗೆ ಒಂದು ವಿಭಿನ್ನವಾಗಿವೆ. ಮೂರು ಮತಗಳ ಪ್ರಕಾರ ಸೇರಬೇಕಾಗಿರುವುದು ದೇವರನ್ನು, ಹೇಳಿರುವ ವಿಷಯ ದೇವರದ್ದು. ಆದರೂ ಮೂರು ಮತಗಳವರು ಅವರವರ ದೇವರು ಬೇರೆಯೆಂದು, ಅವರಿಗೆ ಅವರ ದೇವರೇ ದೊಡ್ಡದೆಂದು, ಉಳಿದ ಮತಗಳ ದೇವರು ದೇವರಲ್ಲವೆಂದು ಅಂದುಕೊಳ್ಳುವುದು ಪರಿಪಾಟಿಯಾಗಿದೆ. ಈಗ ನಮ್ಮಿಂದ ಹೊರಬಂದ **"ತ್ರೈತ ಸಿದ್ಧಾಂತ"** ಮೂರು ಮತಗಳ ಸಾರಾಂಶವನ್ನು ಹೇಳುತ್ತಾ, ಮೂರು ಮತಗಳಲ್ಲಿ ಹೇಳಿದವನು ಒಬ್ಬನೇ, ಹೇಳಿರುವುದು ಒಂದೇ ಎಂದು ತಿಳಿಸುತ್ತಿದೆ. ಮೂರು ಮತಗಳಲ್ಲಿನ ಸಾರಾಂಶ ದೇವರ ಬಳಿಯಿಂದ ದೇವರಿಂದ ಕಳಿಸಲ್ಪಟ್ಟವರಿಂದ ದೇವರ ವಿಷಯಗಳೇ ಹೇಳಲಾಗಿದೆ ಎನ್ನುವುದು ಮುಖ್ಯ. **ತ್ರೈತ ಸಿದ್ಧಾಂತವನ್ನು ಅರ್ಥ ಮಾಡಿಕೊಂಡರೆ ಎಲ್ಲಿ ಮತ ಭೇದಗಳು ಆಗಲಿ, ಮತ ಘರ್ಷಣೆಗಳು ಆಗಲಿ ಇರುವುದಿಲ್ಲ**. ಒಂದು ಮತದವರಿಗೆ ಉಳಿದ ಮತಗಳೆಂದರೆ ಏನೆಂದು ಅರ್ಥವಾಗಬೇಕೆಂದರೆ ತ್ರೈತವನ್ನು ಅರ್ಥ ಮಾಡಿಕೊಳ್ಳಬೇಕು. ಯಾವ ಮತಸ್ಥನಾದರೂ ದೇವರು ಹೇಳಿದ ಹಾಗೆ ನಡೆದುಕೊಳ್ಳದಿದ್ದರೆ, ನಿನ್ನ ಮತದಲ್ಲಿ ನೀನು ಸಕ್ರಮವಾಗಿ ನಡೆದುಕೊಳ್ಳಲಿಲ್ಲವೆಂದು ಅರ್ಥವಾಗುವ ಹಾಗೆ ಹೇಳುವುದು ತ್ರೈತ ಸಿದ್ಧಾಂತ. ಆದ್ದರಿಂದ ಎಲ್ಲಾ ಮತಸ್ಥರನ್ನು ದೇವರ ಮೇಲೆ ವಿಶ್ವಾಸವೆನ್ನುವ ಒಂದೇ ದಾರಿಯ ಮೇಲೆ ತ್ರೈತ ಸಿದ್ಧಾಂತವೇ ನಡೆಸಬಲ್ಲದು.

**695. (7) ಒಂಬತ್ತು ಸಂವತ್ಸರಗಳ ಬಾಲಕನಿಗೂ, ತೊಂಬತ್ತು ಸಂವತ್ಸರಗಳ ಮುದುಕನಿಗೂ ಮೋಹಗುಣದಲ್ಲಿ ಎಷ್ಟು ಶಾತ ವ್ಯತ್ಯಾಸವಿದೆ?**

ಉ. ಏನೂ ವ್ಯತ್ಯಾಸವಿಲ್ಲ.

**ವಿವರ :** ಮೋಹ ಗುಣ ನನ್ನದು, ನಾ ಅನ್ನಿಸುವುದು. ನಿಜಕ್ಕೆ ಯಾವುದು ತನ್ನದು ಅಲ್ಲದಿದ್ದರೂ ಮೋಹಗುಣ ತನ್ನ ಪ್ರಭಾವದಿಂದ ಜೀವನನ್ನು ಭ್ರಮಿಸುವಂತೆಮಾಡುತ್ತಿದೆ. ಒಂಬತ್ತು ಸಂವತ್ಸರಗಳ ವಯಸ್ಸಿಗೆ ಗುಣಗಳು ಪರಿಪಕ್ವತೆ ಹೊಂದಿರುತ್ತವೆ. ನಂತರ ಎಷ್ಟು ವಯಸ್ಸು ಬಂದರೂ ಅವು ಮಾತ್ರ ವಯಸ್ಸನ್ನು ಅನುಸರಿಸಿ ಕಡಿಮೆ ಆಗುವುದೆನ್ನುವುದಿಲ್ಲ. ಆದ್ದರಿಂದ 9 ಸಂವತ್ಸರಗಳ ಬಾಲಕನಿಗೂ 90 ಸಂವತ್ಸರಗಳ ಮುದುಕನಿಗೂ ಗುಣಗಳಲ್ಲಿ ಏನೂ ವ್ಯತ್ಯಾಸವಿರುವುದಿಲ್ಲ.

**696. (8) ಯೇಸು ಪ್ರಭುವನ್ನು ಮರೆಯಿಂದ ಮುಟ್ಟಿದ ಸ್ತ್ರೀಗೆ ರಕ್ತಸ್ರಾವ ಎನ್ನುವ ರೋಗ ನಯವಾಗಿದೆ. ಅದು ಏಸು ಕೃಪೆಯಿಂದ ಆಗಿದೆಯಾ ಇಲ್ವಾ?**

ಉ. ಕೃಪೆಯಿಂದ ಅಲ್ಲ.

**ವಿವರ :** ಈ ವಿಷಯದಲ್ಲಿ ಆ ದಿನವೇ ಏಸು ಆಕೆಯನ್ನು ನೋಡಿ ನಿನ್ನ ನಂಬಿಕೆಯೇ ನಿನ್ನನ್ನು ಕಾಪಾಡಿದೆ ಎಂದು ಹೇಳಿದ್ದಾನೆ. ನನ್ನ ಕರುಣೆಯಿಂದ ನಿನಗೆ ನಯವಾಗಿದೆಯೆಂದು ಹೇಳಲಿಲ್ಲ. ಇದನ್ನನುಸರಿಸಿ ಪ್ರಭುವಿನ ಮೇಲೆ ಇರುವ ವಿಶ್ವಾಸವೇ ಆಕೆಗೆ ಕೆಲಸ ಮಾಡಿದೆಯೆಂದು ತಿಳಿಯುತ್ತಿದೆ. ಪ್ರಭುವಿಗೆ ಯಾವ ಗುಣಗಳು ಇಲ್ಲ. ಆತನು ಗುಣಾತೀತನು. ಅಲ್ಲಿ ಪ್ರಭುವಿನ ಪ್ರಮೇಯವೇ ಇಲ್ಲ. ಭಕ್ತರ ವಿಶ್ವಾಸವನ್ನು ಅನುಸರಿಸಿ ಪ್ರಭುವಿನಿಂದ ಫಲಿತ ಬಂದಿದೆಯೆಂದು ತಿಳಿಯಬೇಕು.

**697. (9) ಯೇಸು ಪ್ರಭುವನ್ನು ಕರುಣಾಮಯನು, ದಯಾಮಯನು ಎನ್ನುತ್ತಾರೆ. ಅದು ನಿಜವೇನಾ?**

ಉ. ನಿಜವಲ್ಲ.

**ವಿವರ :** ಮೇಲಿನ ಉತ್ತರ ಯೇಸು ಮೇಲೆ ವಿಶ್ವಾಸವಿರುವವರಿಗೆಲ್ಲಾ ಸ್ವಲ್ಪ ಬಾಧೆಯನ್ನುಂಟು ಮಾಡುವುದಾಗಿದೆ. ಆದರೂ ಸತ್ಯವನ್ನು ತಿಳಿಸುವುದು ನಮ್ಮ ಕರ್ತವ್ಯ. ಪ್ರಭುವು ಬಹಳ ಪವಿತ್ರನು ಆತನಿಗೆ ಕೆಟ್ಟ ಗುಣಗಳಾಗಲಿ, ಒಳ್ಳೆ ಗುಣಗಳಾಗಲಿ ಇಲ್ಲ. ಅಂದರೆ ಗುಣಾತೀತನು.

ದಯ, ಕರುಣೆಯಾಗಲಿ, ಕೋಪ, ದ್ವೇಷವಾಗಲಿ ಆತನಿಗೆ ಇಲ್ಲ. ನಮ್ಮ ವಿಶ್ವಾಸವನ್ನನುಸರಿಸಿ ಆತನಿಂದ ಯಾವುದು ಲಭಿಸಿದರೂ ಅದು ಆತನ ಗುಣವೆಂದುಕೊಳ್ಳಬಾರದು, ಪ್ರಭುವು ಆಕಾರದಿಂದ ಇದ್ದರೂ ಆತನು ಪರಲೋಕ ರಾಜ್ಯಾಧಿಪತಿ ಎಂದು ಹೇಳಲಾಗುವ ದೇವದೇವನು. ಆತನನ್ನು ಒಬ್ಬ ಮನುಷ್ಯನಾಗಿ ಹೋಲಿಸಿಕೊಂಡು, ಮನುಷ್ಯನಿಗಿರುವ ಗುಣಗಳನ್ನು ಆತನಿಗೆ ಅಂಟಿಸಬಾರದು. ಆತನ ಪೂರ್ತಿ ಸ್ವಭಾವವನ್ನು ಅರ್ಥ ಮಾಡಿಕೊಂಡರೆ ಪ್ರಭುವು ಕೋಪಮಯನು ಅಲ್ಲ. ಕರುಣಾಮಯನು ಅಲ್ಲ.

**698. (10) ನಾನು ಅಂದುಕೊಂಡರೆ ನೀನು ಎಲ್ಲಾಕಡೆ ಇರುತ್ತೀಯಾ. ನಾನು ಅಂದುಕೊಂಡರೆ ನೀನು ನೀನಾಗೇ ಇರುತ್ತೀಯಾ. ಎನ್ನುವ ವಾಕ್ಯದ ಪ್ರಕಾರ ದೇವರನ್ನು ಸೇರಬೇಕೆಂದರೆ ಜ್ಞಾನ ಯೋಗ ಅವಶ್ಯಕವಾ?**

ಉ. ಅವಶ್ಯವಿಲ್ಲ.

**ವಿವರ :** ಇಲ್ಲಿ ಎರಡು ವಾಕ್ಯಗಳಲ್ಲೂ ನಾನು ಅಂದುಕೊಂಡರೆ ಎಂದು ಇದೆ, ಮೊದಲನೆಯ ವಾಕ್ಯದಲ್ಲಿ ನೀನು ಎಲ್ಲಾ ಇರುತ್ತೀಯೆಂದು, ಎರಡನೆಯ ವಾಕ್ಯದಲ್ಲಿ ನೀನು ನೀನಾಗೇ ಇರುತ್ತೀಯೆಂದು ವ್ಯತ್ಯಾಸವಾಗಿ ಹೇಳಲಾಗಿದೆ. ಇಲ್ಲಿ ಅಂದುಕೊಳ್ಳುವವನು ಪರಮಾತ್ಮ ಒಬ್ಬನೇ ಆದ್ದರಿಂದ ಎರಡೂ ವಾಕ್ಯಗಳಲ್ಲಿಯೂ ನಾನು ಅಂದುಕೊಂಡರೆ ಎಂದು ಹೇಳಲಾಗಿದೆ. ಪರಮಾತ್ಮ ಅಂದುಕೊಂಡರೆ ಜೀವಾತ್ಮನಾಗಿ ಒಂದು ಶರೀರದಲ್ಲಿರುವವನು ಮುಕ್ತಿ ಹೊಂದಿ ಅಣುವಣುವಿನಲ್ಲಿ ಎಲ್ಲಾ ವ್ಯಾಪಿಸಿ ಪರಮಾತ್ಮನೊಳಗೆ ಐಕ್ಯವಾಗುವನು. ಆದ್ದರಿಂದ ಮೊದಲನೆಯ ವಾಕ್ಯದಲ್ಲಿ ನಾನು ಅಂದುಕೊಂಡರೆ ನೀನು ಎಲ್ಲಾಕಡೆ ಇರುತ್ತೀಯ ಎಂದಿದ್ದಾನೆ. ಹಾಗೇ ಪರಮಾತ್ಮ ಅಂದುಕೊಂಡರೆ ಮುಕ್ತಿ ಹೊಂದಬೇಕೆಂದು ಯಾರು ಯಾವ ಪ್ರಯತ್ನ ಮಾಡಿದರೂ ಮುಕ್ತಿ ಹೊಂದಲಾರರು. ಒಂದು ಶರೀರದಲ್ಲಿ ದೇವರು ಅಂದುಕೊಳ್ಳುವ ಜೀವಾತ್ಮನು ಶರೀರದಲ್ಲಿ ಅವನು ಅವನಾಗೇ ಇರುತ್ತಾನೆ. ಆದ್ದರಿಂದ ನಾನು ಅಂದುಕೊಂಡರೆ ನೀನು ನೀನಾಗೇ ಇರುತ್ತೀಯೆಂದಿದ್ದಾನೆ. ಎರಡು ವಾಕ್ಯಗಳು ವಾಸ್ತವವಾದವುಗಳೇ. ಪರಮಾತ್ಮ ಅಂದುಕೊಂಡರೆ ಯೋಗ, ಜ್ಞಾನ ಅವಶ್ಯವಿಲ್ಲದೆ ಮನುಷ್ಯನು ಮುಕ್ತಿ ಹೊಂದಬಲ್ಲನು. ಹಾಗೇ ಪರಮಾತ್ಮ ಅಂದುಕೊಂಡರೆ ಯೋಗ ಜ್ಞಾನ ಅವನನ್ನು ಮುಕ್ತಿಗೆ ಸೇರಿಸಲಾರವು. ಪರಮಾತ್ಮ ವಿಷಯದಲ್ಲಿ ಯೋಗ ಜ್ಞಾನಗಳು ಕೆಲಸಕ್ಕೆ ಬಾರವೆಂದು ತಿಳಿಯುತ್ತಿದೆ. ಗೀತೆಯಲ್ಲಿ ಸಹ ಜ್ಞಾನಕ್ಕೂ, ಬ್ರಹ್ಮ, ಕರ್ಮ ಯೋಗಕ್ಕೂ ವಿಶ್ವಾಸ ಅತೀತವಾದದ್ದು ಎಂದು ಹೇಳಲಾಗಿದೆ. ಅದನ್ನೇ ಭಕ್ತಿ ಯೋಗವೆಂದಿದ್ದಾರೆ.

# ಜ್ಞಾನ ಪರೀಕ್ಷೆ

**ಕಳ್ಯಾಣದುರ್ಗ** **ದಿನಾಂಕ–13–05–2000**

**699. (1) ಅಸೂಯೆಗೆ ವಿರುದ್ಧ ಗುಣಯಾವುದು?**

ಉ. ಪ್ರೇಮ.

**ವಿವರ :** ಅರಿಷಟ್ ವರ್ಗದಲ್ಲಿ ಕೊನೆಯದು ಅಸೂಯೆ ಗುಣ. ಮಿತ್ರ ವರ್ಗದಲ್ಲಿ ಅಸೂಯೆಗೆ ವಿರುದ್ಧ ಗುಣ ಪ್ರೇಮ. ಇವನ್ನು ರಾಗ ದ್ವೇಷಗಳೆಂದು ಸಹ ಅನ್ನುತ್ತಾರೆ. ರಾಗ ಎಂದರೆ ಪ್ರೇಮ, ದ್ವೇಷ ಎಂದರೆ ಅಸೂಯ. ಅರಿಷಟ್ ವರ್ಗಗಳಲ್ಲಿ ಬಹಳ ಪ್ರಭಾವವಾದವು ಮೊದಲನೆಯ ಗುಣವಾದ ಆಸೆ ಕೊನೆಯ ಗುಣವಾದ ಅಸೂಯೆ, ಹಾಗೇ ಮಿತ್ರ ವರ್ಗದಲ್ಲಿರುವ ದಾನ ಆಸೆಗೆ ವಿರುದ್ಧ ಗುಣವಾಗಿ ಇರುವಾಗ, ದ್ವೇಷಕ್ಕೆ ಪ್ರೇಮ ವಿರುದ್ಧ ಗುಣವಾಗಿ ಇದೆ. ಅಸೂಯೆಯಲ್ಲಿ ಏನಿದೆಯೋ ಅದಕ್ಕೆ ವಿರುದ್ಧವಾಗಿ ಪ್ರೇಮದಲ್ಲಿದೆ. ಕೆಲವರು ಪ್ರೇಮವೆ ದೈವವೆನ್ನುತ್ತಾರೆ. ಅಸೂಯೆಯಾಗಲಿ, ಪ್ರೇಮವಾಗಲಿ ಗುಣಗಳೇ ಆದ್ದರಿಂದ ದೈವವಲ್ಲ.

**700. (2) ಭಗವದ್ಗೀತೆಯಲ್ಲಿ ಹೇಳಿದ ಕ್ಷರಾಕ್ಷರ ಪುರುಷೋತ್ತಮರಲ್ಲಿ ಯಾರು ಪುರುಷರು?**

ಉ. ಮುವ್ವರು ಪುರುಷರೇ.

**ವಿವರ :** ಪ್ರಪಂಚದಲ್ಲಿ ಇರುವವು ಸ್ತ್ರೀ, ಪುರುಷ ಎನ್ನುವ ಎರಡು ಜಾತಿಗಳಿವೆ. ಆದಿಯಲ್ಲಿ ಪ್ರಕೃತಿ ಪುರುಷನೆನ್ನುವ ಎರಡೇ ಇವೆ. ಪ್ರಕೃತಿಗೆ ವಿರೋದವಾದವನು ಪುರುಷನು, ಆದ್ದರಿಂದ ಮರ್ಮಾವಯವಗಳು ವ್ಯತಿರೇಖವಾಗಿ ಹುಟ್ಟಿ ಎರಡು ಜಾತಿಗಳಾಗಿ ಮೇಲೆ ಕಾಣಿಸುತ್ತಿವೆ. ಪ್ರಕೃತಿ ಎಲ್ಲವೂ ಸ್ತ್ರೀ ತತ್ತ್ವವಾಗಿ ಪ್ರಕೃತಿ ಐದು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಆಕಾಶ, ಗಾಳಿ, ಅಗ್ನಿ ನೀರು, ಭೂಮಿ ಎಲ್ಲವೂ ಪ್ರಕೃತಿಯಲ್ಲಿನ ಭಾಗಗಳೇ, ಸ್ತ್ರೀ ತತ್ತ್ವಗಳೇ. ಹಾಗೇ ಪರಮಾತ್ಮ ಪುರುಷನಾಗಿ ಆತನು ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆ. ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವವು ಇದರಲ್ಲಿ ಮುವ್ವರನ್ನು ಪುರುಷರೆಂದೇ ಹೇಳಬಹುದು. ಆದರೆ ಪ್ರಕೃತಿಯೊಂದಿಗೆ ಕೂಡಿ, ಮಾಯೆಯಿಂದ ತುಂಬಿರುವ ಜೀವಾತ್ಮ ಪುರುಷನಾದರೂ, ಅವನಲ್ಲಿ ಸ್ತ್ರೀ ಲಕ್ಷಣಗಳು ಎಂದರೆ ಪ್ರಕೃತಿ ಲಕ್ಷಣಗಳು ತುಂಬಿವೆ. ಮೇಲಿನ ಆಕಾರದಲ್ಲಿ ಪುರುಷಾವಯವವನ್ನು ಹೊಂದಿದ ದೇಹವಿದ್ದರೂ, ಸ್ತ್ರೀ ಲಕ್ಷಣಗಳು ಇರುವವನನ್ನು

ನಪುಂಸಕನು ಎಂದಂತೆ, ಜೀವಾತ್ಮನನ್ನು ಪುರುಷನೆಂದು ಹೇಳಿದರು ಸ್ವಲ್ಪ ನಪುಂಸಕನೆಂದು ಹೇಳಬೇಕು.

**701. (3) ಸರ್ವರಲ್ಲಿ ಇರುವ ಪರಮಾತ್ಮ ಒಂದೇ, ಸರ್ವರಲ್ಲಿ ಇರುವ ಆತ್ಮ ಒಂದೇ, ಸರ್ವರಲ್ಲಿ ಇರುವ ಜೀವಾತ್ಮ ಒಂದೇ ಎನ್ನುವುದು ವಾಸ್ತವವೇನಾ?**

ಉ. ವಾಸ್ತವವಲ್ಲ.

**ವಿವರ :** ಸರ್ವರಲ್ಲಿ ಪರಮಾತ್ಮ ಒಂದೇ ಎನ್ನುವ ಮಾತು ವಾಸ್ತವವೇ. ಎಲ್ಲಾ ಶರೀರಗಳಲ್ಲಿಯೂ ಒಂದೇ ಪರಮಾತ್ಮ ಭಿನ್ನವಾಗದೆ ಇದೆ. ಆತ್ಮ ಎಲ್ಲಾ ಶರೀರಗಳಲ್ಲಿಯೂ ಒಂದೇ ಪದ್ಧತಿಯನ್ನು ಹೊಂದಿದ್ದರೂ, ಅದು ಭಿನ್ನಗಳಾಗಿ ಇರುತ್ತಿದೆ. ಆದ್ದರಿಂದ ಆತ್ಮಗಳು ಅನೇಕಗಳೆಂದು ಹೇಳಬಹುದು. ಜೀವಾತ್ಮ ಒಂದೊಂದು ಶರೀರದಲ್ಲಿ ಒಂದೊಂದಾಗಿದ್ದು, ಅನೇಕ ಶರೀರಗಳಲ್ಲಿ ಅನೇಕ ಜೀವಾತ್ಮಗಳು ಇವೆ. ಜೀವಾತ್ಮ ಎಲ್ಲಿ ಇದೆಯೋ ಆತ್ಮ ಸಹ ಅಲ್ಲಿ ಜೀವಾತ್ಮನೊಂದಿಗೆ ಜೊತೆಯಾಗಿ ಇರುತ್ತದೆ. ಶರೀರಗಳೆಷ್ಟಿವೆಯೋ, ಅವುಗಳಲ್ಲಿ ಜೀವಾತ್ಮಗಳೆಷ್ಟಿವೆಯೋ, ಆತ್ಮಗಳು ಸಹ ಅಷ್ಟೇ ಇವೆಯೆಂದು ಹೇಳಬಹುದು. ಬೇರೆಬೇರೆ ಶರೀರಗಳಲ್ಲಿ, ಬೇರೆಬೇರೆ ಜೀವಿಗಳು, ಬೇರೆಬೇರೆ ಆತ್ಮಗಳು ಇವೆಯೆಂದು ಹೇಳಬಹುದು.

**702. (4) ಮರಣದಲ್ಲಿ ನಿನ್ನ ಹಿಂದೆ ಬರುವುದು ಯಾವುದು? ನಿನ್ನ ಹಿಂದೆ ಬರುವವನಾರು? ನಿನ್ನ ಹಿಂದೆ ಬರುವವುಯಾವುವು?**

ಉ. ಕರ್ಮ, ಆತ್ಮ, ಗುಣಗಳು.

**ವಿವರ :** ಮರಣದಲ್ಲಿ ಜೀವಾತ್ಮನಹಿಂದೆ ಬಾಹ್ಯವಾಗಿ ಇರುವ ಧನ, ಕನಕ, ವಸ್ತು, ವಾಹನಗಳು ಬರುವುದಿಲ್ಲ. ಆದ್ದರಿಂದ ಶರೀರದ ಒಳಗೆ ನೋಡಬೇಕಾಗಿದೆ. ಶರೀರದ ಒಳಗೆ ಜೀವಾತ್ಮನ ಜೊತೆ ಬರುವುದು ಜೀವನವೆಲ್ಲಾ ಜೊತೆಯಾಗಿ ತನ್ನೊಂದಿಗೆ ಶರೀರದಲ್ಲಿರುವ ಆತ್ಮ ಮತ್ತು ಜೀವನವೆಲ್ಲಾ ಸಂಪಾದಿಸಿಕೊಂಡ ಕರ್ಮ ಎನ್ನುವ ಪಾಪ ಪುಣ್ಯಗಳು. ಇನ್ನೂ ಪಾಪ ಪುಣ್ಯಗಳಿಗೆ ಕಾರಣವಾದ ಒಳ್ಳೆ ಕೆಟ್ಟ ಗುಣಗಳು. ತಲೆಯಲ್ಲಿ ಹಣೆಯ ಮಧ್ಯ ಭಾಗದಲ್ಲಿ ನಾಲ್ಕು ಚಕ್ರಗಳ ನಿರ್ಮಾಣವಿದೆ. ಅದನ್ನೇ ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳು ಎನ್ನುತ್ತೇವೆ. ಮರಣದಲ್ಲಿ ನಾಲ್ಕು ಚಕ್ರಗಳ ಜೋಡಣೆಯ ಮೊತ್ತವು ಶರೀರವನ್ನು ಬಿಟ್ಟು ಮತ್ತೊಂದು ಶರೀರವನ್ನು ಸೇರುತ್ತಿವೆ. ಆ ನಾಲ್ಕು ಚಕ್ರಗಳ

ಮಧ್ಯೆದಲ್ಲಿರುವ ಆತ್ಮವೂ, ಗುಣ ಚಕ್ರದಲ್ಲಿನ ಗುಣಗಳು, ಅದರಲ್ಲಿನ ಜೀವಾತ್ಮ, ಕರ್ಮ ಚಕ್ರದಲ್ಲಿನ ಕರ್ಮ, ಮೊತ್ತವು ಮತ್ತೊಂದು ಶರೀರವನ್ನು ಸೇರುತ್ತಿವೆ.

**703. (5) ಹಸ್ತದಲ್ಲಿ ಮೂರು ಆತ್ಮಗಳ ಸುತ್ತಾ ಇರುವವು ಯಾವವು?**

ಉ. ಮೂರು ಗುಣಗಳು.

**ವಿವರ :** ಅಂಗೈಯಲ್ಲಿ ಮೂರು ರೇಖೆಗಳು ಮೂರು ಆತ್ಮಗಳಿಗೆ ಗುರುತು ಆದಾಗ, ಅವುಗಳ ಸುತ್ತಾ ಬೆರಳುಗಳ ಮೇಲೆ ಮೂರು ಗಣ್ಣುಗಳು ಮೂರು ಗುಣಗಳಿಗೆ ಗುರ್ತಾಗಿ ಇವೆ. ಮೇಲೆ ಬೆರಳುಗಳ ಮೇಲೆ ಗಣ್ಣುಗಳಾಗಿ ಕೆಳಗೆ ಮಣಿಕಟ್ಟು ಮೇಲೆ ಮೂರು ಮಡತೆಗಳಾಗಿ ಗುಣಗಳು ಗುರುತಿಸಲ್ಪಟ್ಟಿವೆ. ಹಸ್ತದಲ್ಲಿ ಮೂರು ಆತ್ಮಗಳು ಮೂರು ಗುಣಗಳೇ ಅಲ್ಲದೆ ಜ್ಞಾನ ಯೋಗ ಮೋಕ್ಷಗಳ ಗುರುತುಗಳು ಸಹ ಇವೆ.

**704. (6) ನಿನ್ನ ಜೀವನದಲ್ಲಿ ಬದಲಾವಣೆಯನ್ನು, ಅಂತ್ಯವನ್ನು ಏನನ್ನುತ್ತಾರೆ?**

ಉ. ಮರಣ, ಮೋಕ್ಷ ಎನ್ನುತ್ತೇವೆ.

**ವಿವರ :** ಜೀವಿವೊಂದರ ಜೀವನದಲ್ಲಿ ಬದಲಾವಣೆ ಒಂದು, ಎರಡನೆಯದು ಅಂತ್ಯ ಇವೆ. ಜೀವನ ಬದಲಾಗಿ ಹೊಸ ಜೀವನವನ್ನು ಪ್ರಾರಂಭಿಸುವುದು ಇದೆ. ಆ ಬದಲಾವಣೆಯನ್ನು ಮರಣ ಎನ್ನುತ್ತಿದ್ದೇವೆ. ಒಂದು ಜೀವಿಗೆ ಎಷ್ಟು ಬದಲಾವಣೆಗಳಾದರೂ ನಡೆಯುತ್ತಾ ಹೋಗಬಹುದು. ಎಂದಿಗಾದರೂ ಅಂತ್ಯವೆನ್ನುವುದು ಒಂದು ಇದೆ. ಆ ಅಂತ್ಯವನ್ನೆ ಮೋಕ್ಷ ಅಥವಾ ಬಿಡುಗಡೆ ಎನ್ನುತ್ತಿದ್ದೇವೆ. ಜೀವಾತ್ಮ ಕರ್ಮಬದ್ಧನಾಗಿರುವವರೆಗು ಬದಲಾವಣೆಗಳಿರುತ್ತವಾಗಲಿ ಅಂತ್ಯವಿರುವುದಿಲ್ಲ. ಕರ್ಮ ಬಂಧದಿಂದ ಹೊರಬೀಳುವುದನ್ನೇ ಬಿಡುಗಡೆ ಅಥವಾ ಮೋಕ್ಷ ಎನ್ನುತ್ತಿದ್ದೇವೆ.

**705 (7) ನಿನ್ನ ಶರೀರದಲ್ಲಿ ಯಾವಾಗಲೂ ಎಚ್ಚರದಲ್ಲಿರುವವನು ಆತ್ಮನಾ? ಜೀವಾತ್ಮನಾ?**

ಉ. ಆತ್ಮ, ಜೀವಾತ್ಮ ಎರಡೂ ಇವೆ.

**ವಿವರ :** ಶರೀರದಲ್ಲಿ ನಿದ್ರೆ ಮನಸ್ಸಿಗೆ ಮಾತ್ರ ಇದೆ. ಜೀವಾತ್ಮಕ್ಕೂ ಆತ್ಮಕ್ಕೂ ಇಲ್ಲ. ಆತ್ಮ ಹಗಲೂ ರಾತ್ರಿಯೂ ಶರೀರದಲ್ಲಿ ಕೆಲಸ ಮಾಡುತ್ತಿದೆ. ಗುಂಡಿಗೆಯನ್ನು ಆಡಿಸುವುದು ಉಸಿರಾಟದ ಚೀಲಗಳಿಂದ ಶ್ವಾಸವನ್ನು ಕದಲಿಸುವುದು ಮೊದಲಾದ ಕೆಲಸಗಳನ್ನು ಆತ್ಮ ಯಾವಾಗಲೂ ಮಾಡುವುದರಿಂದ ಅದು ನಿದ್ರಿಸುವುದಕ್ಕೆ ಅವಕಾಶವಿಲ್ಲ. ಜೀವಾತ್ಮನಿಗೆ

ಎಚ್ಚರದಲ್ಲೂ, ಸ್ವಪ್ನದಲ್ಲೂ ನಿದ್ರೆ ಇಲ್ಲವೆಂದು ಅಲ್ಲಿ ಅದು ಅನುಭವಿಸುವ ಕೆಲಸ ಮಾಡುತ್ತಿದೆಯೆಂದು ತಿಳಿಯುತ್ತಿದೆ. ನಿದ್ರೆಯಲ್ಲಿ ಜೀವಾತ್ಮ ನಿದ್ರಿಸುತ್ತಿದೆಯಾ ಅಥವಾ ಎಚ್ಚರದಲ್ಲಿದೆಯಾ ಎನ್ನುವ ಅನುಮಾನವಿರುತ್ತದೆ. ನಿದ್ರೆಯಲ್ಲಿ ಜೀವಾತ್ಮನಿಗೆ ಯಾವ ಅನುಭವಗಳು ಇಲ್ಲದಿರುವುದರಿಂದ ಅದನ್ನು ಸಹ ನಿದ್ರಿಸುವಹಾಗೆ ಕೆಲವರು ಹೇಳಿಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಜೀವಿಯು ಎಂದಿಗೂ ನಿದ್ರೆಮಾಡಿಲ್ಲವೆಂದೇ ಹೇಳಬಹುದು. ಯಾವಾಗ ಯಾವ ವಿಷಯಬಂದರೂ ಅನುಭವಿಸುವುದಕ್ಕೆ ಅನುಕೂಲವಾಗಿ ನಿದ್ರೆಯಿಲ್ಲದ ಸ್ಥಿತಿಯಲ್ಲಿ ಜೀವಾತ್ಮನಿದ್ದಾನೆ. ನಿದ್ರೆಯಲ್ಲಿ ಕೇವಲ ಮನಸ್ಸು ಕೆಲಸ ಮಾಡುತ್ತಿಲ್ಲ. ಆದ್ದರಿಂದ ಜೀವಾತ್ಮ ಸ್ಥಿತಿ ತಿಳಿಯದೆ ಇದೆ. ಜೀವಾತ್ಮ ಆತ್ಮ ಇಬ್ಬರು ಜೋಡು ಆತ್ಮಗಳಾಗಿರುವುದರಿಂದ ಆತ್ಮ ಎಚ್ಚರದಲ್ಲಿದೆ, ಜೀವಾತ್ಮ ಸಹ ಎಚ್ಚರದಲ್ಲೇ ಇದೆ. ಯಾವ ಸಮಯದಲ್ಲಿ ಬುದ್ಧಿ ತಿಳಿಸಿದರೂ, ಅದನ್ನು ಸ್ವೀಕರಿಸುವ ಹಾಗೆ ಜಾಗ್ರತೆಯಾಗಿ ಜೀವಾತ್ಮನಿದ್ದಾನೆ.

**706. (8) ಚಂದ್ರಗ್ರಹದಲ್ಲಿ ಯಾವ ಆತ್ಮಗಳಿವೆ?**

ಉ. ಜೀವಾತ್ಮ, ಆತ್ಮ, ಪರಮಾತ್ಮರು.

**ವಿವರ :** ಗ್ರಹ ಎಂದರೆ ಗ್ರಹಿಸುವುದು. ಚಂದ್ರ ಗ್ರಹ ಎಂದರೆ ಗ್ರಹಿಸುವ ಸ್ಥಿತಿಯಲ್ಲಿ ಇರುವ ಚಂದ್ರ. ಮನುಷ್ಯರು ಸಹ ಗ್ರಹಿಸುವ ಸ್ಥಿತಿಯಲ್ಲಿ ಇರುವರು. ಆದ್ದರಿಂದ ಮನುಷ್ಯರು ಸಹ ಗ್ರಹಗಳೇ. ಗ್ರಹಗಳು ವಿಗ್ರಹಗಳು ಎನ್ನುವ ಘಟ್ಟದಲ್ಲಿ ಮನುಷ್ಯರು ಗ್ರಹಗಳು ಎಂದು ಇಪ್ಪತ್ತು ಸಂವತ್ಸರಗಳ ಪೂರ್ವವೇ ನಾವು ಹೇಳಿದ್ದೇವೆ, ಬರೆದಿದ್ದೇವೆ. ಶರೀರದಲ್ಲಿ ಸೂಕ್ಷ್ಮ ಶರೀರ 15 ಭಾಗಗಳಾಗಿ ಇದ್ದು ಎಲ್ಲದನ್ನು ಗ್ರಹಿಸುವುದಾಗಿ ಇದೆ. ಆ ಸೂಕ್ಷ್ಮ ಶರೀವನ್ನೇ ಗ್ರಹ ಎನ್ನುತ್ತಿದ್ದೇವೆ. ಚಂದ್ರನು ಸಹ ಸ್ಥೂಲ, ಸೂಕ್ಷ್ಮ ಎನ್ನುವ ಎರಡು ಶರೀರಗಳಿಂದ ಇದ್ದು ಗ್ರಹಿಸುವುದಾಗಿ ಇದೆ. ಆದ್ದರಿಂದ ಚಂದ್ರನನ್ನು ಗ್ರಹ ಎನ್ನುತ್ತಿದ್ದೇವೆ. ಮನುಷ್ಯ ಗ್ರಹದಲ್ಲಿ ಮುಖ್ಯವಾಗಿ ಗ್ರಹಿಸುವ ಭಾಗಗಳು ಮನಸ್ಸು, ಬುದ್ಧಿ, ಅನುಭವಿಸುವವನು ಜೀವಾತ್ಮ. ಚಂದ್ರಗ್ರಹದಲ್ಲಿಯೂ ಅವೇ ಇವೆ. ಜೀವಾತ್ಮನಿದ್ದಾನೆ ಆದ್ದರಿಂದ ಆತ್ಮವು ಇದೆ. ಎಲ್ಲಾ ಇರುವ ಪರಮಾತ್ಮ ಚಂದ್ರಗ್ರಹದಲ್ಲಿಯೂ ಸಹ ಇದ್ದಾನೆ. ಇದನ್ನನುಸರಿಸಿ ಜೀವಾತ್ಮ, ಆತ್ಮ, ಪರಮಾತ್ಮ ಮುವ್ವರು ಚಂದ್ರನಲ್ಲಿ ಇದ್ದಾರೆಂದು ಹೇಳಬಹುದು.

**707. (9) ಒಂದು ವೇಳೆ ಪರಮಾತ್ಮ ಪ್ರಾಣಿಯಾಗಿ ಹುಟ್ಟಿದ್ದಾನೆಂದುಕೊಳ್ಳೋಣ. ಆಗ ಆ ಪ್ರಾಣಿಯನ್ನು ಏನನ್ನಬೇಕು?**

ಉ. ಭಗವಂತನು ಎನ್ನಬೇಕು.

**ವಿವರ :** ಪರಮಾತ್ಮನಿಗೆ ಪ್ರಾಣಿಯಾಗಿ ಹುಟ್ಟಬೇಕಾದ ಅವಶ್ಯವಿದೆಯೋ ಇಲ್ಲವೋ ನಮಗೆ ತಿಳಿಯದು. ಹುಟ್ಟಿದ್ದಾನೆಂದು ಊಹಿಸಿಕೊಳ್ಳುತ್ತಿದ್ದೇವೆ. ಎಲ್ಲಿ ಪರಮಾತ್ಮ ಹುಟ್ಟಿದರು ಪುರುಷ ಪ್ರಮೇಯವಿಲ್ಲದೆ ಅಂದರೆ ಪುರುಷ ಸಂಪರ್ಕದಿಂದ ಸಂಬಂಧವಿಲ್ಲದೆ ಹುಟ್ಟಬಲ್ಲನು. ಅಷ್ಟೇ ಅಲ್ಲದೆ ಎಲ್ಲರಹಾಗೆ ಹೊಸ ಶರೀರದೊಳಗೆ ಸೇರುವುದೆನ್ನುವುದು ಏನೂ ಇಲ್ಲದೆ, ತಾಯಿ ಗರ್ಭದಲ್ಲಿನ ಶಿಶುವಿನಲ್ಲೇ ವ್ಯಾಪಿಸಿದ್ದು, ಸಜೀವವಾಗಿ ಗರ್ಭದಿಂದಲೇ ಹುಟ್ಟುತ್ತಿದ್ದಾನೆ. ಉಳಿದ ಜೀವರಾಶಿಗಳು ತಾಯಿ ಗರ್ಭದಿಂದ ಹುಟ್ಟುವುದಿಲ್ಲವೆಂದು ನಮ್ಮ ವಾದ. ಭಗದಿಂದ ಹುಟ್ಟಿದವನು ಭಗವಂತನು ಎನ್ನುವ ಸೂತ್ರದ ಪ್ರಕಾರ, ಪರಮಾತ್ಮ ಯಾವ ಜನ್ಮವನ್ನು ತೆಗೆದುಕೊಂಡರೂ ಅದನ್ನು ಭಗವಂತನೆಂದು ತಿಳಿಯಬೇಕು.

**708. (10) ಶರೀರದಲ್ಲಿ ನಿದ್ರೆ ಯಾರಿಗೆ ಇದೆ?**

ಉ. ಮನಸ್ಸಿಗೆ.

**ವಿವರ :** ಮನನ ಮಾಡುವುದು ಮನಸ್ಸು. ಮನನ ಎಂದರೆ ಜ್ಞಾಪಕ. ಜ್ಞಪ್ತಿ ಮಾಡುವುದು ಮನಸ್ಸು. ಮನಸ್ಸು ಶರೀರವೆಲ್ಲಾ ವ್ಯಾಪಿಸಿದಾಗ ಜ್ಞಾಪಕದಿಂದಿದ್ದು ವಿಷಯಗಳನ್ನು ತಿಳಿಸುತ್ತಾ ಇರುತ್ತದೆ. ಅದು ಬ್ರಹ್ಮನಾಡಿಯನ್ನು ಸೇರಿದಾಗ ಯಾವ ವಿಷಯವನ್ನು ತಿಳಿಸದೆ ಹೋಗುವುದು, ಅದನ್ನೇ ನಿದ್ರೆ ಎನ್ನುತ್ತಿದ್ದೇವೆ. ಪ್ರಪಂಚವನ್ನು ತೋರಿಸುವುದು, ತೋರಿಸದೆ ಮುಚ್ಚಿಡುವುದು ಒಂದೇ ಒಂದು ಮನಸ್ಸು. ಎಲ್ಲಾ ಅವಯವಗಳು ಅವು ಅವುಗಳ ಕೆಲಸಗಳನ್ನು ಮಾಡುವ ಸಾಮರ್ಥ್ಯವನ್ನು ಹೊಂದಿದ್ದರೂ, ಮನಸ್ಸೊಂದು ಕೆಲಸ ಮಾಡದೆ ಹೋಗುವುದರಿಂದ ಏನೂ ತಿಳಿಯದೆ ಹೋಗುತ್ತಿದೆ. ಆದ್ದರಿಂದ ನಿದ್ರೆ ಮನಸ್ಸಿಗೆ ಇದೆಯೆಂದು ಹೇಳಬಹುದು.

## ಜ್ಞಾನ ಪರೀಕ್ಷೆ

**ಮಾಲ್ಯವಂತ** **ದಿನಾಂಕ–10–09–2000**

**709. (1) 33 ಕೋಟಿ ದೇವತೆಗಳನ್ನುತ್ತಾರೆ ವಾಸ್ತವವೇನಾ?**

ಉ. ವಾಸ್ತವವೇ.

**ವಿವರ :** ಜೀವರಾಶಿಗಳನ್ನು ಜೀವಕೋಟಿ ಎನ್ನುವುದು ನಡೆದಿದೆ. ಜೀವರಾಶಿಗಳು ಅಂಡಜ, ಪಿಂಡಜ, ಉದ್ಭಿಜಗಳೆಂದು ಮೂರು ವಿಧಗಳಾಗಿ ಇವೆ. ಒಂದೊಂದು ವಿಧದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮಗಳು ಮೂರು ಇವೆ. ಆದ್ದರಿಂದ ಮೂರು ವಿಧಗಳ ಜೀವರಾಶಿಗಳನ್ನು 3 ಎಂದು, ಅವುಗಳಲ್ಲಿ ಮೂರು ಆತ್ಮಗಳು ಇವೆ ಆದ್ದರಿಂದ ಮತ್ತೊಂದು 3 ಎಂದು, ಎರಡನ್ನು ಸೇರಿಸಿ 33 ಎಂದು, ಜೀವಕೋಟಿಯನ್ನು ಕುರಿತು ಹೇಳುವುದರಿಂದ ಅವನ್ನು 33 ಕೋಟಿ ಜೀವರಾಶಿಗಳೆಂದು ಹೇಳಿದ್ದಾರೆ. ಆತ್ಮ ವಿರುವ ಜೀವರಾಶಿಗಳೆಲ್ಲವನ್ನು ದೇವತೆಗಳಾಗಿ ಹೋಲಿಸಿ 33 ಕೋಟಿ ದೇವತೆಗಳೆಂದಿದ್ದಾರೆ. ಮೂರು ವಿಧಗಳ ಜೀವರಾಶಿಗಳಲ್ಲಿ ಮೂರು ಆತ್ಮಗಳಿವೆ ಎಂದು ಅದರ ಅರ್ಥ. ಆದರೆ 33 ಕೋಟಿ ದೇವತೆಗಳು ಇಲ್ಲ.

**710. (2) ಬೇ, ಮ, ರಾ, ದೇ, ಬ್ರ ಎನ್ನುವ ಬಿಡಿ ಅಕ್ಷರಗಳಿಗೆ ಮತ್ತೊಂದು ಎರಡಕ್ಷರಗಳನ್ನು ಸೇರಿಸಿದರೆ, ಜ್ಞಾನಪರವಾದ ಅರ್ಥಕೊಡುವ ಪದಗಳಾಗಿ ಬದಲಾಗುತ್ತವೆ. ಆ ಎರಡಕ್ಷರಗಳು ಯಾವವು?**

ಉ. ಹರ್ಷಿ.

**ವಿವರ :** ಹರ್ಷಿ ಎಂದರೆ ಸಂತೋಷಿಸುವವನು, ಹರ್ಷಿಸುವವನು ಎಂದು ಅರ್ಥ. ಪೂರ್ವದಲ್ಲಿ ಜ್ಞಾನ ಹೊಂದಿದವರು ಆತ್ಮಾನಂದವನ್ನು ಹೊಂದುತ್ತಿದ್ದರು. ಇಲ್ಲದೆ ಹೋದರೆ ಜ್ಞಾನಾನಂದವನ್ನು ಹೊಂದಿರುತ್ತಿದ್ದರು. ಆನಂದವನ್ನು ಹೊಂದಿದವರನ್ನು ಹರ್ಷಿ ಎನ್ನುವುದು ಸಹಜ. ಜ್ಞಾನಶಕ್ತಿ ಹೊಂದಿರುವವರಿಗೆ ಪೂರ್ವದಲ್ಲಿ ಸ್ಥಾನಗಳನ್ನು ಕಲ್ಪಿಸಿ ಅವರವರ ಜ್ಞಾನ ಶಕ್ತಿಯನ್ನು ಅನುಸರಿಸಿ ನಾಲ್ಕು ವಿಧಗಳಾಗಿ ವಿಭಜಿಸಿದ್ದಾರೆ. ಪಾವು, ಅರ್ಧಶೇರು ಮೂರು ಪಾವು, ಶೇರು ಎಂದು ನಾಲ್ಕು ವಿಧಗಳಿದ್ದಹಾಗೆ ಪೂರ್ತಿ ಜ್ಞಾನವಿರುವವರನ್ನು ಬ್ರಹ್ಮರ್ಷಿ ಎಂದು, ಅವನಿಗಿಂತ ಕಡಿಮೆಯವನನ್ನು ದೇವರ್ಷಿ ಎಂದು, ಅವನಿಗಿಂತ ಕಡಿಮೆ ಇರುವವನನ್ನು ರಾಜರ್ಷಿ ಎಂದು ಕೊನೆಯವನನ್ನು ಮಹರ್ಷಿ ಎಂದಿದ್ದಾರೆ. ಯಾವ ಶಕ್ತಿ ಇಲ್ಲದವನನ್ನು ಬೇವರ್ಷಿ ಎಂದಿದ್ದಾರೆ. ಬೇವರ್ಷಿ, ಮಹರ್ಷಿ, ರಾಜರ್ಷಿ, ದೇವರ್ಷಿ, ಬ್ರಹ್ಮರ್ಷಿ ಎನ್ನುವವರನ್ನು ನೆನಪಿರುವಹಾಗೆ ಮೊದಲನೆಯ ಅಕ್ಷರಗಳನ್ನು ಸೇರಿಸಿ **"ಬೇಮರಾದೇಬ್ರ"** ಎಂದು ನಾವು ಕರೆದಿದ್ದೇವೆ.

**711. (3) ಗಿಡಗಳಿಗೆ ಹೂವುಗಳ ಬಣ್ಣಗಳು ಆ ಗಿಡದ ಬೇರುಗಳಿಂದ ಏರ್ಪಡುತ್ತಿವೆಯಾ, ಕೊಂಬೆಗಳಿಂದಲಾ, ಎಲೆಗಳಿಂದಲಾ, ಬೇರೆ ಯಾವುದರಿಂದಲಾದರೂ ಏರ್ಪಡುತ್ತಿವೆಯಾ?**

ಉ. ಗಿಡದಲ್ಲಿನ ಆತ್ಮ ದಿಂದ ಏರ್ಪಡುತ್ತಿವೆ.

**ವಿವರ :** ಗಿಡಗಳಿಗೆ ಹೂಗಳ ಬಣ್ಣಗಳು ಆ ಗಿಡದಲ್ಲಿ ಅಡಗಿರುವ ಆತ್ಮ ಶಕ್ತಿಯಿಂದ ತಯಾರಾಗುತ್ತಿವೆ. ಗಿಡಗಳಿಗೆ ಎಲೆಗಳ ಬಣ್ಣಗಳಾಗಲಿ, ಹೂವುಗಳ ಬಣ್ಣಗಳಾಗಲಿ, ಆ ಗಿಡಗಳು ಬೆಳೆಯುವುದಕ್ಕಾಗಲಿ ಎಲ್ಲವೂ ಆತ್ಮದಿಂದಲೇ ನಡೆಯುತ್ತಿವೆ. ಮಾನವನ ಶರೀರದಲ್ಲಿ ಮನುಷ್ಯನಿಗೆ ಬಣ್ಣ ರೂಪ ಆತ್ಮ ಹೊಂದಿಸಿದ ಹಾಗೆ, ವೃಕ್ಷಗಳಿಗೂ ಬಳ್ಳಿಗಳಿಗೂ ಬಣ್ಣ ರೂಪವನ್ನು ಆತ್ಮೇ ಉಂಟುಮಾಡುತ್ತಿದೆ. ಮನುಷ್ಯನು ಪಿಂಡಜವಾದಾಗ, ಗಿಡಗಳು ಉದ್ಭಿಜಗಳಾಗಿ ಇವೆ. ಪಿಂಡಜಗಳಲ್ಲಾಗಲಿ, ಉದ್ಭಿಜಗಳಲ್ಲಾಗಲಿ, ಅಂಡಜಗಳಲ್ಲಾಗಲಿ ಮೂರು ಆತ್ಮಗಳು ಇವೆಯೆಂದು, ಅವುಗಳಲ್ಲಿ ಮಧ್ಯೆ ಆತ್ಮದಿಂದ ಎಲ್ಲಾ ನಡೆಯುತ್ತಿವೆಯೆಂದು ತಿಳಿಯಬೇಕು.

**712. (4) ಮದು ಮಗಳು, ಮದು ಮಗ ಗಂಡ ಹೆಂಡತಿಯಾಗಿ ಯಾವಾಗಾಗುತ್ತಾರೆ?**

ಉ. ಒಬ್ಬರಿಗೊಬ್ಬರು ಜ್ಞಾನ ತಿಳಿದುಕೊಂಡಾಗ.

**ವಿವರ :** ಮದುವೆ ಎನ್ನುವ ಪದ ಇಬ್ಬರಿಗೂ ಒಂದೇ ಆದರೂ ಮಗಳು ಮಗ ಎನ್ನುವುದು ಇದೆ. ಮಗಳು ಮಗ ಎಂದರೆ ಅಕ್ಕ ತಮ್ಮನಾಗಲಿ, ಅಣ್ಣ ತಂಗಿಯಾಗಲಿ ಎನ್ನುವಹಾಗೆ ಸೋದರತ್ವ ಭಾವ ತೋರಿಸುತ್ತಿದೆ. ಸೋದರತ್ವ ಭಾವ ಪದ ಹೋಗಿ, ಗಂಡ ಹೆಂಡತಿ ಎನ್ನುವ ಪದ ಅವರಿಗೆ ಅನ್ವಯಿಸಬೇಕೆಂದರೆ ಮದುವೆ ನಡೆದ ಪದ್ಧತಿ ಪ್ರಕಾರ ಒಬ್ಬರಿಗೊಬ್ಬರು ಜ್ಞಾನವನ್ನು ತಿಳಿಸಿಕೊಳ್ಳಬೇಕು. ಮದುವೆಯಲ್ಲಿ ಅಕ್ಷತೆಗಳು ಎರೆಯುವ ಈ ಪದ್ಧತಿಯನ್ನು ತಿಳಿಸುವ ಕೆಲಸವೆಂದು ತಿಳಿಯಬೇಕು. ಹಾಗೆ ಜ್ಞಾನವನ್ನು ತಿಳಿಸಿಕೊಳ್ಳದೆ ಹೋದರೆ ಅವರು ಹೆಂಡತಿ ಗಂಡ ಅಲ್ಲವೆಂದು ಪೂರ್ವದ ಹಿರಿಯರ ಭಾವ. ಮದುವೆಯ ಪದ್ಧತಿ ಪ್ರಕಾರ ಜ್ಞಾನ ತಿಳಿಸಿಕೊಳ್ಳಲಾರದವರು, ಸಂಸಾರವನ್ನು ಮಾಡಿ ಮಕ್ಕಳನ್ನು ಹೆತ್ತರೂ ಅದು ಅಕ್ರಮ ಸಂಬಂಧ ವಾಗುತ್ತದೆಂದು ಹಿರಿಯರ ಭಾವ. ಅಕ್ರಮ ಸಂಬಂಧದಲ್ಲಿಯೂ ಸಹ ಅಕ್ಕ ತಮ್ಮನಾಗಲಿ, ಅಣ್ಣ ತಂಗಿಯಾಗಲಿ, ಅಕ್ರಮ ಸಂಬಂಧವಾಗಿ ಇರುವ ಭಾವ. ಇದು ಬಹಳ ತಪ್ಪು ಆದ್ದರಿಂದ ಪೂರ್ವದಲ್ಲಿ ಗಂಡ ಹೆಂಡತಿಗೂ, ಹೆಂಡತಿ ಗಂಡನಿಗೂ ಜ್ಞಾನವನ್ನು ತಿಳಿಸುತ್ತಿದ್ದರು. ಹಾಗೆ ಮಾಡಿದದಿನವೇ ಅವರದು ಸಕ್ರಮ ಸಂಬಂಧವಾಗುತ್ತದೆ. ಮದುವೆಯಲ್ಲಿ ಪದ್ಧತಿ ಪ್ರಕಾರ ಅಕ್ಷತೆಗಳನ್ನು ತಲೆ ಮೇಲೆ ಹಾಕುವ ಅರ್ಥವನ್ನು ಪೂರ್ವದಲ್ಲಿ ತಿಳಿದು ನಡೆದುಕೊಳ್ಳುತ್ತಿದ್ದರು. ಈ ಕಾಲದಲ್ಲಿ ಅರ್ಥ ತಿಳಿಯದ ಆಚಾರಗಳಾಗಿ ಉಳಿದಿವೆ. ಆದ್ದರಿಂದ ಎಲ್ಲರೂ ಗಂಡ ಹೆಂಡತಿ

ಎನ್ನುವ ಮಾತಿಗೆ ಅರ್ಥವಿಲ್ಲದೆ, ಅಕ್ರಮ ಸಂಬಂಧವನ್ನು ಹೊಂದಿದ್ದಾರೆಂದು, ಅಂತಹವರಿಗೆ ಹುಟ್ಟಿದ ಸಂತತಿಯೂ ಸಹ ಅಕ್ರಮ ಕೆಲಸಗಳು ಮಾಡುವುದಾಗಿ, ದೈವವೆಂದರೆ ಏನೋ ತಿಳಿಯದೆ ಹೋಗುತ್ತಿದ್ದಾರೆ.

**713. (5) ತಾಯಿ ತಂದೆ ಎನ್ನುವ ಪದಗಳು ಮೊದಲು "ತ" ಯಿಂದ ಪ್ರಾರಂಭವಾಗುತ್ತಿವೆ ಏಕೆ?**

ಉ. ಇಬ್ಬರಲ್ಲಿಯೂ ಒಂದೇ ಶಕ್ತಿ ಇರುವುದರಿಂದ.

**ವಿವರ :** ಪ್ರಪಂಚ ಹುಟ್ಟದ ಪೂರ್ವ ಪರಮಾತ್ಮ ಒಬ್ಬನೇ ಇದ್ದಾನೆ. ಪ್ರಪಂಚವನ್ನು ಹುಟ್ಟಿಸಬೇಕೆಂದುಕೊಂಡ ನಂತರ ಪರಮಾತ್ಮ ಪ್ರಕೃತಿಯನ್ನು ಸೃಷ್ಟಿಸಿದ್ದಾನೆ. ಪರಮಾತ್ಮ ತನ್ನ ಶಕ್ತಿಯಿಂದ ಪ್ರಕೃತಿಯನ್ನು ಭಿನ್ನವಾಗಿ ಸೃಷ್ಟಿಸಿ ಅದರಲ್ಲಿ ತನ್ನ ಶಕ್ತಿಯನ್ನೇ ತುಂಬಿ ಇಟ್ಟಿದ್ದಾನೆ. ಪರಮಾತ್ಮ ಶಕ್ತಿಯಿಂದಲೇ ಪ್ರಕೃತಿ ನಡೆಯುತ್ತಿದೆ. ಪರಮಾತ್ಮ ಪುರುಷನಾಗಿ, ಪ್ರಕೃತಿ ಸ್ತ್ರೀಯನ್ನಾಗಿ ತಯಾರು ಮಾಡಲಾಗಿದೆ. ಪ್ರಪಂಚದಲ್ಲಿನ ಜೀವಕೋಟಿಗಳೆಲ್ಲವು ಪ್ರಕೃತಿ ಪುರುಷರಿಗೆ ಹುಟ್ಟಿರುವವೇ. ಕದಲುವ ಕದಲದ ಜೀವರಾಶಿಗಳೆಲ್ಲವುಗಳಿಗೆ ಪರಮಾತ್ಮ ತಂದೆಯಾಗಿ ಪ್ರಕೃತಿ ತಾಯಿಯಾಗಿ ಇದೆ. ಮೇಲ್ನೋಟಕ್ಕೆ ಕಾಣಿಸುವ ತಾಯಿ ತಂದೆಯರಲ್ಲಿಯೂ ಸಹ ಒಂದೇ ಪರಮಾತ್ಮ ಶಕ್ತಿ ಇದ್ದು, ಅವರನ್ನು ತಾಯಿ ತಂದೆಯರನ್ನು ಮಾಡುತ್ತಿದೆ. ಇಬ್ಬರಲ್ಲಿಯೂ ಒಂದೇ ಶಕ್ತಿ ಒಳಗೊಂಡಿದೆಯೆಂದು ತಿಳಿಸುವುದಕ್ಕೆ ಇಬ್ಬರನ್ನು "ತ" ಯಿಂದ ಪ್ರಾರಂಭವಾಗುವ ಪದಗಳಾಗಿ ತಾಯಿ ತಂದೆ ಎಂದಿದ್ದಾರೆ. ತಾಯಿ ತಂದೆ ಎರಡೂ ಆದವನು ಒಂದೇ ಪರಮಾತ್ಮನೆಂದು ತಿಳಿಯಬೇಕು.

**714. (6) ಎಲೆಗಳಲ್ಲಿ ಔಷಧ ಗುಣ ಮತ್ತು ರೋಗವನ್ನು ಹುಟ್ಟಿಸುವ ಗುಣ ಎರಡೂ ಇವೆ. ಅದು ಯಾವುದಕ್ಕೆ ಸೂಚನೆ?**

ಉ. ಮನುಷ್ಯರಲ್ಲಿ ಜ್ಞಾನ, ಅಜ್ಞಾನ ಎರಡೂ ಇವೆಯೆನ್ನುವ ಸೂಚನೆ.

**ವಿವರ :** ಮನುಷ್ಯರೆಲ್ಲರೂ ಹುಟ್ಟಿದಾಗಿನಿಂದ ಎರಡೇ ಎರಡು ವಿಧಾನಗಳಲ್ಲಿ ಮುಳುಗಿದ್ದಾರೆ. ಒಂದು ರೋಗ, ಎರಡು ಯೋಗ ಎನ್ನುವ ಪದ್ಧತಿಗಳು ಭೂಮಿ ಮೇಲೆ ಇವೆ. ರೋಗ ಇಲ್ಲದವನು ಯೋಗದಲ್ಲಿ ಇರುವನು. ಯೋಗದಲ್ಲಿಲ್ಲದವನು ರೋಗದಲ್ಲಿರುವನು. ರೋಗಕ್ಕೂ, ಯೋಗಕ್ಕು ಮುಖ್ಯ ಕಾರಣ ಮನುಷ್ಯನಲ್ಲಿರುವ ಜ್ಞಾನ ಅಜ್ಞಾನಗಳೆಂದೇ ತಿಳಿಯುತ್ತಿದೆ. ಜ್ಞಾನ ದಿಂದ ಯೋಗ, ಅಜ್ಞಾನ ದಿಂದ ರೋಗ ಮನುಷ್ಯನಿಗೆ

ಲಭ್ಯವಾಗುತ್ತಿವೆ. ಜ್ಞಾನ ಪರವಾದ ಯೋಗದಲ್ಲಿ ಇಲ್ಲದ ಪ್ರತಿ ಒಬ್ಬನು ಅಜ್ಞಾನ ಪರವಾದ ಅಸಂತೃಪ್ತಿ ಎನ್ನುವ ರೋಗದಲ್ಲೇ ಇದ್ದಾನೆ. ಭೂಮಿ ಮೇಲೆ ಯೋಗವಿಲ್ಲದ ರೋಗ ಇರುವವರು ಬಹಳ ಜನ ಇದ್ದಾರೆ. ರೋಗಿಗಳೆಲ್ಲರಿಗೂ ಅಸಂತೃಪ್ತಿ ಎನ್ನುವ ಬಾಧೆ ಪೀಡಿಸುತ್ತಿದೆ. ಮನುಷ್ಯರಲ್ಲಿ ರೋಗಿಗಳು, ಯೋಗಿಗಳು ಇದ್ದಾರೆಂದು ತಿಳಿಸುವ ನಿಮಿತ್ತ, ಗಿಡಗಳ ಎಲೆಗಳಲ್ಲಿ ಔಷಧಗುಣ ರೋಗಗುಣ ಎರಡನ್ನೂ ತುಂಬಿ ಪರಮಾತ್ಮ ಸೃಷ್ಠಿಸಿದ್ದಾನೆ.

**715.** **(7) 7 + 7 = 14 ಲೋಕಗಳು ಎನ್ನುತ್ತಾರೆ. ಅವು ನಮ್ಮ ಶರೀರದಲ್ಲಿ ಇವೆಯಾ?**

ಉ. ಇವೆ.

**ವಿವರ :** ಭುವರ್ಲೋಕ, ಸುವರ್ಲೋಕ, ಎಂದು ಪ್ರಾರಂಭವಾಗಿ ಕೊನೆಗೆ ಅತಲ, ವಿತಲ, ಸುತಲ, ಪಾತಾಳ ಎಂದು ಒಂದು ವಿಧ ಏಳು, ಮತ್ತೊಂದು ವಿಧ ಏಳು ಲೋಕಗಳು ಇರುವ ಹಾಗೆ ಹಿರಿಯರು ಹೇಳುವುದು ನಡೆದಿದೆ. ಹದಿನಾಲ್ಕು ಲೋಕಗಳಿವೆಯಾ ಎನ್ನುವ ಮಾತಿಗೆ ಬಂದರೆ ಇವೆಯೆಂದು ಒಪ್ಪಿಕೊಳ್ಳಬೇಕಾಗಿದೆ. ಲೋಕಗಳೇನು ಶರೀರದಲ್ಲಿರುವುದೇನು ಎಂದು ಕೆಲವರಿಗೆ ಸಂಶಯಬರಬಹುದು. ಅದಕ್ಕೆ ಸಮಾಧಾನವೇನೆಂದರೆ! ಶರೀರದಲ್ಲಿ ಏಳು ಗ್ರಂಥಿಗಳು, ಏಳು ನಾಡೀ ಕೇಂದ್ರಗಳು ಇವೆ. ಗ್ರಂಥಿಗಳು ನಾಡೀ ಕೇಂದ್ರಗಳು ಶರೀರವನ್ನು ನಡೆಸುವುದರಲ್ಲಿ ಉಪಯೋಗವಾಗುತ್ತಿವೆ. ಆತ್ಮ ತನ್ನ ಶಕ್ತಿಯನ್ನು ಗ್ರಂಥಿಗಳಿಂದ, ನಾಡೀ ಕೇಂದ್ರಗಳಿಂದ, ವಿಭಜಿಸಿ ಶರೀರವನ್ನು ನಡೆಸುತ್ತಿದೆ. ಆತ್ಮಶಕ್ತಿ ಎರಡು ವಿಧಗಳಾಗಿ ಇದೆ, ಆದ್ದರಿಂದ ಎರಡು ವಿಧಗಳ ಲೋಕಗಳೆಂದಿದ್ದಾರೆ. ಗ್ರಂಥಿಗಳು ಏಳು, ನಾಡೀ ಕೇಂದ್ರಗಳು ಏಳು ಆದ್ದರಿಂದ ಏಳು ಏಳು ಹದಿನಾಲ್ಕು ಲೋಕಗಳು ಇವೆ ಎಂದಿದ್ದಾರೆ. ಹದಿನಾಲ್ಕು ಲೋಕಗಳೆಂದರೆ ಭೂಮಿಗೆ ಮೇಲೆ ಕೆಳಗೆ ಇಲ್ಲವೆಂದು, ಅವು ನಮ್ಮ ಶರೀರದಲ್ಲೇ ಇವೆಯೆಂದು, ಅವುಗಳಲ್ಲಿ ಆತ್ಮಶಕ್ತಿ ಇದೆಯೆಂದು, ಏಳು ಕೇಂದ್ರಗಳಿಂದ ಆತ್ಮಶಕ್ತಿ ರೂಪದೊಂದಿಗೆ ಬಹಿರ್ಗತವಾಗಿ, ಏಳು ಗ್ರಂಥಿಗಳಲ್ಲಿ ರಸಗಳ ರೂಪವಾಗಿ ಹೊರಬೀಳುತ್ತಾ ಶರೀರ ಆರೋಗ್ಯವನ್ನು ಶಾಸಿಸುತ್ತಿದೆ ಎಂದು ತಿಳಿಯಬೇಕು.

**716.** **(8) ಕಾಷಾಯಾಂಬರಗಳಿಗೆ ಆ ಹೆಸರು ಏಕೆ ಬಂದಿದೆ?**

ಉ. ಕಷಾಯದ ಬಣ್ಣ ಇರುವುದರಿಂದ.

**ವಿವರ :** ಒಂದು ಗಿಡ ವೊಂದರ ಸಾರ ಬೇಕೆಂದರೆ ಆ ಗಿಡದ ಎಲೆಗಳನ್ನು ಕಾಂಡಗಳನ್ನು, ಹೂವುಗಳನ್ನು, ಬೇರುಗಳನ್ನು ಇವೆಲ್ಲವನ್ನು ನೀರಲ್ಲಿ ಹಾಕಿ ಕುದಿಸುವುದರಿಂದ ಕಷಾಯ

ತಯಾರಾಗುತ್ತದೆ. ಗಿಡದಲ್ಲಿನ ಸಾರವೆಲ್ಲವೂ ನೀರಲ್ಲಿ ಸೇರಿ ಸ್ವಲ್ಪ ಕೆಂಪು ಬಣ್ಣ ಹೊಂದಿ ಕಷಾಯ ತಯಾರಾಗುತ್ತದೆ. ಕಷಾಯವೆಂದರೆ ಗಿಡದ ಸಾರವನ್ನು ಹೊಂದಿರುವುದೆಂದು ಅರ್ಥ. ಹಾಗೇ ಜೀವನದಲ್ಲಿನ ಸಾರಾಂಶವನ್ನು ತಿಳಿದವರು, ಎಂದರೆ ಶರೀರದಲ್ಲಿನ ಸತ್ತನ್ನು ತಿಳಿದವರು, ನಾವು ಶರೀರದಲ್ಲಿನ ಸಾರವನ್ನು ತಿಳಿದಿದ್ದೇವೆನ್ನುವ ಗುರ್ತಾಗಿ, ಸಾರಕ್ಕೆ ಮತ್ತೊಂದು ಹೆಸರಾದ ಕಾಷಾಯ ಬಣ್ಣವಿರುವ ಬಟ್ಟೆಯನ್ನು ಧರಿಸುತ್ತಿದ್ದರು. ಆದ್ದರಿಂದ ಆಧ್ಯಾತ್ಮಿಕವನ್ನು, ಆತ್ಮನನ್ನು ತಿಳಿದ ಜ್ಞಾನಿಗಳು ಪೂರ್ವದಲ್ಲಿ ಕಾಷಾಯ ವಸ್ತ್ರಗಳು ಧರಿಸುತ್ತಿದ್ದರು. ಹಾಗೆ ಧರಿಸುವುದರಿಂದ ಕಷಾಯಬಣ್ಣಕ್ಕೂ ಅದನ್ನು ಧರಿಸಿದವರಿಗೂ ಸ್ವಲ್ಪ ಪ್ರತ್ಯೇಕತೆ ಇರುತ್ತಿತ್ತು. ಇಂದಿನ ಕಾಲದಲ್ಲಿ ಕಾಷಾಯವೊಂದರ ಬೆಲೆ ತಿಳಿಯದೆ ಬಿಕ್ಷುಕರು, ಜ್ಞಾನ ತಿಳಿಯದವರು ಧರಿಸುತ್ತಿದ್ದಾರೆ. ಕೆಲವರು ಜ್ಞಾನಿಗಳು ಸ್ವಾಮಿಗಳು ಧರಿಸಿದರೂ ಅವು ಏಕೆ ಧರಿಸಬೇಕೋ ಅವರಿಗೇ ತಿಳಿಯುತ್ತಿಲ್ಲ. ಪೂರ್ವದಲ್ಲಿ ಕಷಾಯ ಎಂದು ಕರೆಯುತ್ತಿದ್ದರು. ಈದಿನ ಕಾಷಾಯ ಎಂದು 'ಕ' ಗೆ ದೀರ್ಗ ಏರ್ಪಟ್ಟಿದೆ. ಕಷಾಯದಿಂದ ಕಾಷಾಯವೆನ್ನುವ ಮಾತು ಕಾಲಕ್ರಮದಲ್ಲಿ ಬದಲಾಗಿದೆಯೆಂದು, ಅಂತಹವರೇ ಅದನ್ನು ಧರಿಸುವುದರಿಂದ ಅರ್ಥ, ಬೆಲೆ ಇರುವುದೆಂದು ತಿಳಿದರೆ ಒಳ್ಳೆದು.

**717. (9) ಹೊರಗೆ ಐದು ಜ್ಞಾನೇಂದ್ರಿಯಗಳು ಇವೆ, ಒಳಗೆ 12 ಗುಣಗಳು ಇವೆ. ಕೆಲವು ಗುಣಗಳು ಯಾವ ಜ್ಞಾನೇಂದ್ರಿಯದಲ್ಲಿ ಗೋಚರಿಸುತ್ತವೆ?**

ಉ. ಕಣ್ಣುಗಳಲ್ಲಿ.

**ವಿವರ :** ಶರೀರದೊಳಗಿರುವ ಕೆಲವು ಗುಣಗಳು ಮನುಷ್ಯನ ಮುಖವರ್ಚಸ್ಸಲ್ಲಿ ಕಾಣಿಸುವುದೆಂದು ಕೆಲವರನ್ನುತ್ತಿರುತ್ತಾರೆ. ಆ ಮಾತು ವಾಸ್ತವವೇ. ಕೋಪದಿಂದ ಇರುವ ಮುಖವನ್ನು ದಯೆದಿಂದಿರುವ ಮುಖವನ್ನು ಸುಲಭವಾಗಿ ಗುರುತಿಸಬಹುದು. ಹಾಗೇ ಕೆಲವು ಗುಣಗಳು ಮುಖದಲ್ಲಿ ಗೋಚರಿಸುತ್ತವೆ. ಮುಖದಲ್ಲಿ ಗುಣ ಬದಲಾವಣೆಗಳು ಕಾಣಿಸುವುದಕ್ಕೆ ಮುಖ್ಯವಾದವು ಕಣ್ಣುಗಳು. ಕಣ್ಣುಗಳನ್ನು ಅನುಸರಿಸಿ ಮುಖವನ್ನು ಕಂಡುಕೊಳ್ಳಬಹುದು. ಪ್ರೇಮವಾದರೂ, ದಯೆಯಾದರೂ, ಕೋಪವಾದರೂ, ಅಸೂಯೆಯಾದರೂ ಕಣ್ಣಿನಲ್ಲಿ ಸುಲಭವಾಗಿ ಕಾಣಿಸುತ್ತದೆ. ಅದನ್ನೇ ಕೋಪದ ನೋಟ, ದಯಾವೀಕ್ಷಣ, ಆಸೆಯಾಗಿ ನೋಡುತ್ತಿದ್ದಾನೆ ಎಂದು ಮೊದಲಾದ ಮಾತುಗಳು ಅಲ್ಲಲ್ಲಿ ಕೇಳಿದ್ದೇವೆ. ಇದನ್ನನುಸರಿಸಿ ಕಣ್ಣುಗಳಲ್ಲಿ ಕೆಲವು ಗುಣಗಳು ಕಾಣಿಸುತ್ತವೆಂದು ಹೇಳಬಹುದು.

**718. (10) ಪ್ರಪಂಚದಲ್ಲಿ ಹಣವನ್ನು ಎಷ್ಟೋ ವಿಧಗಳಲ್ಲಿ ಖರ್ಚು ಮಾಡಬಹುದು. ಯಾವ ವಿಧಾನದಲ್ಲಿ ಖರ್ಚು ಮಾಡಿದರೆ ಎಲ್ಲದಕ್ಕಿಂತ ಹೆಚ್ಚು ಸಾರ್ಥಕವಾಗುತ್ತದೆ?**

ಉ. ಜ್ಞಾನ ಕಾರ್ಯಗಳಿಗೆ.

**ವಿವರ :** ಪ್ರಪಂಚದಲ್ಲಿ ಹಣವನ್ನು ಒಳ್ಳೆ ಕಾರ್ಯಗಳಿಗೆ ಮತ್ತು ಕೆಟ್ಟ ಕಾರ್ಯಗಳಿಗೆ ಖರ್ಚು ಮಾಡಬಹುದು. ಕೆಟ್ಟ ಕಾರ್ಯಗಳು ಎಷ್ಟೋ ಇದ್ದರೂ ಕೆಲವರು ಒಳ್ಳೆ ಕಾರ್ಯಗಳಿಗೂ ಸಹ ಖರ್ಚು ಮಾಡುತ್ತಿದ್ದಾರೆ. ಕೆಟ್ಟ ಕಾರ್ಯಗಳಿಗೆ ಖರ್ಚು ಮಾಡುವುದರಿಂದ ಪಾಪ ಮೂಟೆ ಕಟ್ಟಿಕೊಳ್ಳಬೇಕಾಗುತ್ತದೆ. ಒಳ್ಳೆ ಕಾರ್ಯಗಳಿಗೆ ಇಡುವುದಾದರೆ ಅದರಿಂದ ಪುಣ್ಯ ಬರುತ್ತಿದೆ. ಪಾಪ ಪುಣ್ಯಗಳು ಎರಡೂ ಕರ್ಮವೇ ಆಗುತ್ತದೆ. ಅವುಗಳಿಂದ ಜನ್ಮಗಳೇ ಬರುತ್ತವೆ. ಪಾಪ ಪುಣ್ಯಗಳಿಂದ ಮುಕ್ತಿ ಬರುವುದಿಲ್ಲವೆಂದು ಎಲ್ಲರಿಗೂ ತಿಳಿಯುವುದು. ಒಳ್ಳೆದು ಮಾಡಿದರೂ, ಕೆಟ್ಟದ್ದನ್ನು ಮಾಡಿದರೂ ಕರ್ಮವೇ ಬರುತ್ತದೆಂದು ತಿಳಿದ ಕೆಲವರು, ಅವರ ಕೆಲಸಗಳಿಗೆ ವಿನಿಯೋಗಿಸಿಕೊಳ್ಳದೇ ದಾನಗಳು ಮಾಡುವುದು, ಪೂಜೆಗಳು ಮಾಡಿಸುವುದು, ಮುಡುಪುಗಳನ್ನು ಹಾಕುವುದು ಮಾಡುತ್ತಿದ್ದಾರೆ. ಹಾಗೆ ಮಾಡಿದರೂ ಪೂಜೆಗಳು, ಮುಡುಪುಗಳು, ದಾನಗಳಿಂದ ಪುಣ್ಯವೇ ಬರುತ್ತಿದೆ. ಕರ್ಮ ಅಂಟದ ಮಾರ್ಗ ಪಾಪಪುಣ್ಯಗಳು ಬಾರದ ವಿನಿಯೋಗ ಒಂದೇ ಒಂದು ಇದೆ. ನಮ್ಮ ಹಣವನ್ನು ಜ್ಞಾನ ಮಾರ್ಗದಲ್ಲಿ ವಿನಿಯೋಗಿಸಿದರೆ ಜ್ಞಾನ ಕರ್ಮಾತೀತವಾದದ್ದು ಆದ್ದರಿಂದ ಪಾಪ ಪುಣ್ಯಗಳು ಬರುವುದಿಲ್ಲ. ಜ್ಞಾನವಿರುವವನಿಗೆ ತಿಳಿದಿರುವುದು ಪೂಜೆಗಳು, ಮುಡುಪುಗಳು, ದಾನ ಜ್ಞಾನಮಾರ್ಗದಲ್ಲಿ ಇಲ್ಲವೆಂದು. ಆದ್ದರಿಂದ ಜ್ಞಾನಿ ಜಾಗ್ರತೆಯಾಗಿ ದಾನಗಳು ಮುಡುಪುಗಳಿಗಿಂತ ಮೀರಿದ ಜ್ಞಾನಕ್ಕೇ ತನ್ನ ಹಣವನ್ನು ವಿನಿಯೋಗಿಸುವನು. ಹಾಗೆ ವಿನಿಯೋಗಿಸಿದ ಹಣವೇ ಸಾರ್ಥಕವಾಗುತ್ತದೆ. ಧನವಂತನಾಗಿ ಹಣಕೊಟ್ಟು ಪೂಜೆಗಳು ಮಾಡಿಸಿದರೂ, ದಾನಗಳು ಮಾಡಿಸಿದರೂ, ಯಾವ ದೇವರಿಗೆ ಮುಡುಪುಗಳನ್ನು ಹಾಕಿದರೂ ಅವು ಪುಣ್ಯದ ಸಾಲಿನಲ್ಲಿ ಸೇರಿಹೋಗುತ್ತವೆ.

## ಜ್ಞಾನ ಪರೀಕ್ಷೆ

**ತಾಡಿಪತ್ರಿ** **ದಿನಾಂಕ–08–12–2000**

**719. (1) ಚರ್ಮಕ್ಕೆ ಸ್ಪರ್ಶಗಳೆಷ್ಟು?**

ಉ. ಆರು.

**ವಿವರ :** ಶೀತಲ, ಉಷ್ಣ, ಕರಕು, ನುಣಪು, ಗಟ್ಟಿ, ಮೆತ್ತನೆಯ ಆರು ಸ್ಪರ್ಶಗಳಿವೆ. ಒಂದಕ್ಕೊಂದು ವಿರುದ್ಧವಾಗಿ ಇದ್ದು ಅವು ಅವುಗಳ ಪ್ರತ್ಯೇಕತೆಗಳನ್ನು ತಿಳಿಸಿಕೊಳ್ಳುತ್ತಿವೆ. ಚರ್ಮ ಒಟ್ಟು ಆರು ವಿಧಗಳ ಸ್ಪರ್ಶಗಳನ್ನು ಮನಸ್ಸು ತನ್ನಿಂದ ಒಳಗಿನ ಜೀವಾತ್ಮನಿಗೆ ತಿಳಿಸುತ್ತಿದೆ. ಸ್ಪರ್ಶಗಳು ಮೂರು ಜೊತೆಗಳಾಗಿವೆ. ಈ ಮೂರು ಜೊತೆಗಳನ್ನು ಜೀವಾತ್ಮನು ನಿತ್ಯ ಅನುಭವಿಸುತ್ತಿದ್ದಾನೆ.

**720. (2) ನಾಲಿಗೆಗೆ ತಿಳಿಯುವ ರುಚಿಗಳೆಷ್ಟು?**

ಉ. ಆರು.

**ವಿವರ :** ನಾಲಿಗೆಗೂ ಸಹ ಆರು ರುಚಿಗಳು ಇವೆ. ಅವು ಸಹ ಮೂರು ಜೊತೆಗಳಾಗಿ ಇದ್ದು ಮೂರು ಜೊತೆಗಳಲ್ಲಿ ಒಂದಕ್ಕೊಂದು ವಿರುದ್ಧವಾಗಿ ಇವೆ. ಅವು ಕಹಿ ಸಿಹಿ, ಉಪ್ಪು ಹುಳಿ, ಕಾರ, ವಗರು, ಅನ್ನುವವು ನಾಲಿಗೆಗೆ ರುಚಿಗಳಾಗಿ ಇವೆ. ಈ ರುಚಿಗಳನ್ನೇ ಜೀವಾತ್ಮ ನಾಲಿಗೆಯಿಂದ ಅನುಭವಿಸುತ್ತಿದ್ದಾನೆ.

**721. (3) ಕಿವಿಗೆ ಕೇಳಿಸುವ ಶಬ್ದಗಳೆಷ್ಟು?**

ಉ. ಏಳು.

**ವಿವರ :** ಕಿವಿಗೆ ಸಪ್ತ ಸ್ವರಗಳೆನ್ನುವ ಏಳು ಶಬ್ದಗಳು ಕೇಳಿಸುತ್ತಿವೆ. ಎಷ್ಟೋ ರಾಗಗಳಿದ್ದರೂ ಎಲ್ಲವೂ ಏಳು ಶಬ್ದಗಳಿಂದ ಹುಟ್ಟಿರುವವೇ. ಆ ಏಳು ಸ, ರಿ, ಗ, ಮ, ಪ, ದ, ನಿ ಅನ್ನುವವಾಗಿ ಇವೆ. ಇವು ಸ್ಪರ್ಶಗಳು ರುಚಿಗಳಿದ್ದಹಾಗೆ ಜೊತೆಗಳಾಗಿ ಇಲ್ಲ.

**722. (4) ಕಣ್ಣಿಗೆ ಕಾಣಿಸುವ ಬಣ್ಣಗಳೆಷ್ಟು?**

ಉ. ಏಳು.

**ವಿವರ :** ಕಣ್ಣಿಗೆ ಕಾಣಿಸುವುದು ಬೆಳಕು. ಬೆಳಕು ಸೂರ್ಯ ಕಿರಣಗಳಿಂದ ಏರ್ಪಡುತ್ತಿದೆ. ಒಂದು ಸೂರ್ಯ ಕಿರಣವನ್ನು ಬೇರ್ಪಡಿಸಿದರು ಏಳು ಬಣ್ಣಗಳಾಗಿ ವಿಭಜಿಸಲ್ಪಡುತ್ತದೆ. ಮಳೆಕಾಲದಲ್ಲಿ ಇಂದ್ರಧನಸ್ಸು ಅನ್ನುವ ಏಳು ಬಣ್ಣಗಳ ಅರ್ಧ ವಲಯ ಏರ್ಪಡುವುದು ನೋಡಿಯೇ ಇರುತ್ತೇವೆ. ಚರ್ಮಕ್ಕೂ ನಾಲಿಗೆಗೂ ತಿಳಿಯುವವು ಆರು ಸ್ಪರ್ಶಗಳು, ಆರು ರುಚಿಗಳು ಆದಾಗ, ಕಿವಿಗೂ ಕಣ್ಣಿಗೂ ತಿಳಿಯುವವು ಏಳು ಶಬ್ದಗಳು, ಏಳು ಬಣ್ಣಗಳು. ಇನ್ನು ಉಳಿದ ಒಂದೇ ಒಂದು ಜ್ಞಾನೇಂದ್ರಿಯವಾದ ಮೂಗಿಗೆ ತಿಳಿಯುವ

ವಾಸನೆಗಳು ಎರಡೇ ಎರಡು ಒಂದು ಸುವಾಸನೆ ಎರಡನೆಯದು ದುರ್ವಾಸನೆ. ಈ ವಿಧವಾಗಿ ಜ್ಞಾನೇಂದ್ರಿಯಗಳು ಐದು ಬೇರೆ ಬೇರೆ ಶಕ್ತಿಗಳು ಹೊಂದಿ ಇವೆ.

**723. (5) ಮೋಕ್ಷದಲ್ಲಿ ಸುಖವಿದೆಯಾ?**

ಉ. ಇಲ್ಲ.

**ವಿವರ :** ಪ್ರಪಂಚದಲ್ಲಿ ಸುಖ ದುಃಖಗಳು ಇರುತ್ತವೆ, ಆದರೆ ಮೋಕ್ಷದಲ್ಲಿ ಸುಖ ದುಃಖಗಳು ಇರುವುದಿಲ್ಲ. ಸುಖದುಃಖಗಳು ಇಲ್ಲದ ಸ್ಥಿತಿಯನ್ನೇ ಮೋಕ್ಷವೆನ್ನುತ್ತಾರೆ. ಈಗಿರುವ ಸ್ಥಿತಿಯಿಂದ ಬಿಡುಗಡೆ ಹೊಂದುವುದೇ ಮೋಕ್ಷ. ಈಗಿರುವ ಸ್ಥಿತಿಯ ಹಾಗೆ ಇರುವುದಿಲ್ಲ. ಅದು ಹೀಗಿರುತ್ತದೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಮೋಕ್ಷವೆಂದರೆ ಪರಮಾತ್ಮನೊಳಗೆ ಐಕ್ಯವಾಗುವುದು. ಬದುಕಿರುವ ಅವರಿಗೆ ಪರಮಾತ್ಮ ತಿಳಿಯದು. ಮೋಕ್ಷವೆಂದರೆ ಯಾರಿಗೂ ತಿಳಿಯದು.

**724. (6) ಮನಸ್ಸಿಗೆ ನಾಶನವಿದೆಯಾ?**

ಉ. ಇದೆ.

**ವಿವರ :** ಶರೀರದಲ್ಲಿ ಮನಸ್ಸು ಒಂದು ಭಾಗವಾಗಿ ಇದೆ. ಮರಣ ಸಮಯದಲ್ಲಿ ಶರೀರದಲ್ಲಿ ಎಲ್ಲಾ ಭಾಗಗಳು ನಶಿಸುತ್ತಾ ಹೋಗಿ ಕೊನೆಗೆ ಮನಸ್ಸು ಸಹ ನಶಿಸಿ ಹೋಗುತ್ತದೆ. ಜೀವಾತ್ಮನು ಶರೀರವನ್ನು ಬಿಟ್ಟು ಹೋಗುವಾಗ ಮನಸ್ಸನ್ನು, ಬುದ್ಧಿಯನ್ನು ಚಿತ್ತವನ್ನು, ಅಹಂನ್ನು ಎಲ್ಲವನ್ನು ಕಳೆದುಕೊಂಡು ಕೊನೆಗೆ ಕಾಲ, ಕರ್ಮ, ಗುಣ ಚಕ್ರಗಳೊಂದಿಗೆ ಸಹ ಬೇರೆ ಶರೀರವನ್ನು ಸೇರುತ್ತಿದ್ದಾನೆ. ಆದ್ದರಿಂದ ಮನಸ್ಸಿಗೆ ಮರಣದಲ್ಲಿ ನಾಶವಿದೆಯೆಂದು ಹೇಳಬಹುದು.

**725. (7) ಜೀವಾತ್ಮನಿಗೆ ಆಕಾರವಿದೆಯಾ?**

ಉ. ಇದೆ.

**ವಿವರ :** ಶರೀರದಲ್ಲಿ ಎಲ್ಲಾ ಭಾಗಗಳಿಗೂ ಆಕಾರವಿರುವುದೇ ಅಲ್ಲದೆ ಜೋಡು ಆತ್ಮಗಳಾದ ಜೀವಾತ್ಮನಿಗು ಆತ್ಮನಿಗೂ ಸಹ ಆಕಾರವಿದೆ. ಇಲ್ಲಿಯವರೆಗು ಎಲ್ಲಿ ಯಾರು ಜೀವಾತ್ಮಕ್ಕೂ ಆತ್ಮಕ್ಕೂ ಆಕಾರವಿದ್ದ ಹಾಗೆ ಹೇಳಲಿಲ್ಲ, ಬರೆಯಲಿಲ್ಲ. ಆದ್ದರಿಂದ ಈ ನಮ್ಮ ಮಾತು ಕೆಲವರಿಗೆ ಆಶ್ಚರ್ಯವಾಗಿ ಕಾಣಿಸಿದರೂ ವಾಸ್ತವವಾಗಿ ಜೀವಾತ್ಮಕ್ಕೆ ಆಕಾರವಿದೆ. ಜೀವಾತ್ಮ

ಸ್ಥೂಲವಲ್ಲ ಅಲ್ಲವೆ! ಸೂಕ್ಷ್ಮವಾಗಿರುವ ಅದರ ಆಕಾರ ಹೇಗೆ ಕಾಣಿಸುತ್ತದೆಂದು ಕೆಲವರಿಗೆ ಅನುಮಾನ ಬರಬಹುದು. ಅದಕ್ಕೆ ಸಮಾಧಾನ ಶರೀರದಲ್ಲಿ ಜೀವಾತ್ಮನೊಬ್ಬನೇ ಅಲ್ಲದೆ ಸೂಕ್ಷ್ಮವಾದವು ಮನಸ್ಸು, ಬುದ್ಧಿ ಚಿತ್ತ ಅಹಂ ಎನ್ನುವ ಮುಖ್ಯವಾದವು ಸಹ ಇವೆ. ಅವುಗಳಿಗು ಸಹ ಆಕಾರಗಳಿವೆ. ಶರೀರ ದೇವಾಲಯ, ಆತ್ಮ ದೇವರು ಎಂದು ಹೇಳುವ ಆತ್ಮಕ್ಕೂ ಸಹ ಆಕಾರವಿದೆ. ನೋಡುವುದಕ್ಕೆ ಜ್ಞಾನನೇತ್ರ ಬೇಕು.

**726. (8) ಆತ್ಮಕ್ಕೆ ಆಯುವಿದೆಯಾ?**

ಉ. ಇದೆ.

**ವಿವರ :** ಶರೀರದಲ್ಲಿ ಜೀವಾತ್ಮಕ್ಕೆ ಆಯುವು ಇದೆ. ಅದು ಸ್ವಲ್ಪ ಕಾಲ ಒಂದು ಶರೀರದಲ್ಲಿದ್ದು, ಅಲ್ಲಿ ಮರಣವನ್ನು ಹೊಂದಿ, ತಕ್ಷಣವೆ ಮತ್ತೊಂದು ಶರೀರವನ್ನು ಹೊಂದುತ್ತಿದೆ. ಜೀವಾತ್ಮ ಎಲ್ಲಿ ಇರುತ್ತದೊ ಅಲ್ಲಿ ಒಂದು ಆತ್ಮ ತಪ್ಪದೆ ಇರುತ್ತದೆ. ಜೀವಾತ್ಮ, ಆತ್ಮ ಎರಡೂ ಜೋಡಿಯಾಗಿ ಇರುವವು. ಯಾವ ಶರೀರದಲ್ಲೂ ಒಂದೇ ಆತ್ಮವಾಗಲಿ, ಒಂದೇ ಜೀವಾತ್ಮವಾಗಲಿ ಇರುವುದಿಲ್ಲ. ಜೀವಾತ್ಮ ಶರೀರವನ್ನು ಬಿಟ್ಟಾಗ ಆತ್ಮ ಸಹ ಬಿಟ್ಟು ಹೋಗುತ್ತಿದೆ. ಜೀವಾತ್ಮ ಯಾವ ಶರೀರದಲ್ಲಿ ಪ್ರವೇಶಿಸುತ್ತದೋ ಆತ್ಮ ಸಹ ಅದೇ ಶರೀರದಲ್ಲೆ ಪ್ರವೇಶಿಸುತ್ತಿದೆ. ಜೀವಾತ್ಮನಿಗೆ ಮರಣವಿದೆ, ಆದ್ದರಿಂದ ಆತ್ಮಕ್ಕು ಸಹ ಮರಣವಿದ್ದಹಾಗೇ, ಜೀವಾತ್ಮಕ್ಕು ಆಯಸ್ಸು ಇದೆ, ಆದ್ದರಿಂದ ಆತ್ಮಕ್ಕು ಸಹ ಆಯಸ್ಸು ಇದ್ದಹಾಗೇ ಎಂದು ಹೇಳಬಹುದು.

**727. (9) ಬುದ್ಧಿಗೆ ಮೇರೆ(ಎಲ್ಲೆ) ಇದೆಯಾ?**

ಉ. ಇಲ್ಲ.

**ವಿವರ :** ಇಲ್ಲಿ ಪ್ರಶ್ನೆ ಬುದ್ಧಿ ಕೆಲಸಕ್ಕೆ ಮಾತ್ರವೇ, ಆದರೆ ಬುದ್ಧಿ ಆಕಾರಕ್ಕೆ ಅಲ್ಲ. ಬುದ್ಧಿ ಆಕಾರಕ್ಕೆ ಹದ್ದು ಇದೆ ಆದರೆ ಬುದ್ಧಿ ಕೆಲಸಕ್ಕೆ ಹದ್ದು ಇಲ್ಲ. ಬುದ್ಧಿ ಒಂದು ವಿಷಯವನ್ನು ಎಲ್ಲಿಯವರೆಗಾದರೂ ಯೋಚಿಸಬಲ್ಲದು. ಬುದ್ಧಿಯೊಂದರ ಯೋಚನಾಶಕ್ತಿ ಭೂಮಿ ಮೇಲಿನ ವಿಷಯಗಳನ್ನೇ ಅಲ್ಲದೆ ಚಂದ್ರಮಂಡಲ, ಸೂರ್ಯಮಂಡಲ, ನಕ್ಷತ್ರಮಂಡಲದ ವರೆಗು ತನ್ನ ಯೋಚನೆಗಳನ್ನು ಹರಿಸುತ್ತದೆ. ಆದ್ದರಿಂದಲೇ ಶಾಸ್ತ್ರಜ್ಞರು ಎಷ್ಟೋ ವಿಷಯಗಳನ್ನು ಕಂಡುಹಿಡಿಯುತ್ತಿದ್ದಾರೆ. ಬುದ್ಧಿ ಯೋಚನೆಗೆ ಶಕ್ತಿ ಕೊಡುವವನು ಆತ್ಮನೇ ಎಂದು ಮರೆಯಬಾರದು.

**728. (10) ಪರಮಾತ್ಮನಿಗೆ ಶತ್ರುಗಳಿದ್ದಾರಾ?**

ಉ. ಇದ್ದಾರೆ.

**ವಿವರ :** ಪರಮಾತ್ಮನಿಗೆ ಶತ್ರುಗಳೇನು ಎಂದು ಆಶ್ಚರ್ಯವಾಗಿ ಇರಬಹುದು. ಪ್ರಪಂಚಕ್ಕೆ ಆದಿಕರ್ತನಾದವನಿಗೆ ಶತ್ರುಗಳಿರುತ್ತಾರ ಎಂದು ಅನುಮಾನ ಬರಬಹುದು. ಪರಮಾತ್ಮಕ್ಕೆ ಶತ್ರುಗಳನ್ನು ಪರಮಾತ್ಮೇ ತಯಾರುಮಾಡಿಕೊಂಡಿದ್ದಾನೆ. ಪರಮಾತ್ಮನ ಆಜ್ಞೆಯಿಂದಲೇ ಶತ್ರುಗಳಿದ್ದಾರಾಗಲಿ ಯಾರೂ ಸ್ವತಃವಾಗಿ ಶತ್ರುಗಳು ಇಲ್ಲ. ಪರಮಾತ್ಮನಿಗೆ ಮೊದಲ ಶತ್ರು ಮಾಯೆ. ಮಾಯೆಯನ್ನು ಹುಟ್ಟಿಸಿದವನು ನಿಯಮಿಸಿದವನು ಪರಮಾತ್ಮನೆ. ಪರಮಾತ್ಮನ ಆಜ್ಞೆಯಿಂದಲೇ ಮಾಯೆ ಶತ್ರು ಪಾತ್ರವನ್ನು ಪೋಷಿಸುತ್ತಿದೆ. ಈ ವಿಧವಾಗಿ ಎರಡು ಪಕ್ಷಗಳು ಏರ್ಪಟ್ಟಿವೆ. ಪರಮಾತ್ಮ ಪಕ್ಷ, ಮಾಯ ಪಕ್ಷ ಎರಡು ಪಕ್ಷಗಳು ಭೂಮಿ ಮೇಲೆ ಇವೆ. ಮಾಯ ಗುಣಗಳಲ್ಲಿ ಮುಳುಗಿ ಇರುವವರೆಲ್ಲಾ ಮಾಯ ಪಕ್ಷ. ಪರಮಾತ್ಮ ಜ್ಞಾನದಲ್ಲಿ ಮುಳುಗಿರುವವರೆಲ್ಲಾ ಪರಮಾತ್ಮ ಪಕ್ಷ. ಇಲ್ಲಿ ವಿಶೇಷವೇನೆಂದರೆ ಪರಮಾತ್ಮ ಪಕ್ಷ ಒಂದು ಶಾತವಾದಾಗ, ಮಾಯ ಶಾತ 99 ಎಂದು ಹೇಳಬಹುದು. ಪರಮಾತ್ಮ ಪಕ್ಷದಲ್ಲಿ ಒಂದು ಶಾತವಿರುವವರು ಸಹ ಬಲಹೀನವಾಗಿರುವಾಗ, ಮಾಯೆ ಕಡೆ ಇರುವವರು ಬಹಳ ಬಲವಾಗಿದ್ದಾರೆ. ಮಾಯ ಕಡೆ ಇರುವವರೆಲ್ಲಾ ಪರಮಾತ್ಮನಿಗೆ ಶತ್ರುಗಳಂತೆ ಲೆಕ್ಕಿಸಬೇಕಾಗಿದೆ.

## ಜ್ಞಾನ ಪರೀಕ್ಷೆ

**ಕೊತ್ತಕೋಟ** **ದಿನಾಂಕ–01–01–2001**

**729. (1) ಜ್ಞಾನಗಳು ಎಷ್ಟು ವಿಧಗಳು?**

ಉ. ಎರಡು ವಿಧಗಳು.

**ವಿವರ :** ಜ್ಞಾನಗಳು ಎರಡು ವಿಧಗಳಾಗಿವೆ. ಒಂದು ಪ್ರಕೃತಿ ಜ್ಞಾನ ಎರಡನೆಯದು ಪರಮಾತ್ಮ ಜ್ಞಾನ. ಪ್ರಕೃತಿ ಜ್ಞಾನ ಎಲ್ಲರಿಗೂ ತಿಳಿದಿರುವುದೇ, ಪರಮಾತ್ಮ ಜ್ಞಾನ ಯಾರಿಗು ತಿಳಿಯದೆ ಗೊಂದಲದಲ್ಲಿದ್ದಾರೆ. ಭೂಮಿ ಮೇಲೆ ಇರುವ ವಿದ್ಯೆಗಳೆಲ್ಲವು ಪ್ರಕೃತಿಗೆ ಸಂಬಂಧಿಸಿರುವವೇ. ಪರಮಾತ್ಮ ಜ್ಞಾನ ಬಹಳ ಅಪರೂಪವಾಗಿ ಇದೆ. ಪರಮಾತ್ಮನನ್ನು

ತಿಳಿದುಕೊಳ್ಳಬೇಕೆಂದುಕೊಳ್ಳುವವರು ಬಹಳ ಕಡಿಮೆ. ತಿಳಿದುಕೊಳ್ಳಬೇಕೆಂದರೂ ತಿಳಿಸುವವರು ಇಲ್ಲದೆ ಕೆಲವರು, ಹೇಳಿದರೂ ಅರ್ಥ ಮಾಡಿಕೊಳ್ಳದೆ ಕೆಲವರು ಪೂರ್ತಿ ಜ್ಞಾನವನ್ನು ತಿಳಿದುಕೊಳ್ಳದೆ ಹೋಗುತ್ತಿದ್ದಾರೆ.

**730. (2) ಯೋಗಗಳು ಎಷ್ಟು ವಿಧಗಳು, ಅವು ಯಾವುವು?**

ಉ. ಮೂರು ವಿಧಗಳು 1. ಬ್ರಹ್ಮ ಯೋಗ, 2. ಕರ್ಮ ಯೋಗ, 3. ಭಕ್ತಿ ಯೋಗ.

**ವಿವರ :** ಯೋಗಗಳು ಮುಖ್ಯವಾಗಿ ಎರಡೇ ಎಂದು ಹೇಳಬೇಕು. ಭಗವದ್ಗೀತೆಯಲ್ಲಿ ಬ್ರಹ್ಮ ಯೋಗ, ಕರ್ಮ ಯೋಗವನ್ನು ಕುರಿತು ಹೆಚ್ಚಾಗಿ ಹೇಳಿ ಕೊನೆಯಲ್ಲಿ ಪ್ರತ್ಯೇಕವಾದ ಯೋಗವೆಂದು ಭಕ್ತಿಯೋಗವನ್ನು ಹೇಳಿದ್ದಾನೆ. ಅದನ್ನು ಸಹ ಸೇರಿಸಿ ಹೇಳಿದರೆ ಒಟ್ಟು ಮೂರು ಯೋಗಗಳಾಗುತ್ತವೆ. ಪರಮಾತ್ಮನೊಳಗೆ ಐಕ್ಯವಾಗುವುದಕ್ಕೆ ಜೀವಾತ್ಮನಿಗೆ ಒಟ್ಟು ಮೂರು ಮಾರ್ಗಗಳೆಂದು ಅವನ್ನೇ ಯೋಗಗಳೆಂದು ತಿಳಿಸಿದ್ದಾರೆ.

**731. (3) ತಪಸ್ಸು ಎಷ್ಟು ವಿಧಗಳು?**

ಉ. ಒಂದೇ ವಿಧ.

**ವಿವರ :** ತಪಿಸುವುದನ್ನು ತಪಸ್ಸು ಎನ್ನುತ್ತಾರೆ. ಯಾವುದನ್ನು ಕುರಿತು ತಪಿಸಿದರೆ ಅದನ್ನು ತಪಸ್ಸು ಎಂದು ಕರೆಯುತ್ತಾರೆ. ಪೂರ್ವದಲ್ಲಿ ವಿಷ್ಣುವನ್ನು ಕುರಿತು, ಬ್ರಹ್ಮನನ್ನು ಕುರಿತು, ವಿವಿಧ ದೇವತೆಗಳನ್ನು ಕುರಿತು ಲಾಭವನ್ನು ಮನಸ್ಸಲ್ಲಿ ಇಟ್ಟುಕೊಂಡು ತಪಿಸುವುದು ನಡೆದಿದೆ. ಅವರ ತಪಸ್ಸಿಗೆ ಆ ದೇವತೆಗಳು ಪ್ರತ್ಯಕ್ಷವಾಗಿ ಅವರ ಕೋರಿಕೆಗಳನ್ನು ನೆರವೇರಿಸಿದ ಸಂದರ್ಭಗಳು ಸಹ ಇವೆ. ತಪಸ್ಸುಗಳು ನಿಯಮಗಳೊಂದಿಗೆ ಕೂಡಿಕೊಂಡಿರುವವಾಗಿ ಇರುತ್ತವೆ. ಪ್ರಪಂಚ ಕೋರಿಕೆಗಳ ನಿಮಿತ್ತ ಮಾಡುವವು ತಪಸ್ಸುಗಳು. ದೇವರ ನಿಮಿತ್ತ ಮಾಡುವವು ಯೋಗಗಳು. ಯೋಗಗಳಿಗು ತಪಸ್ಸುಗಳಿಗು ಎಷ್ಟೋ ವ್ಯತ್ಯಾಸವಿದೆ. ಪ್ರಕೃತಿಗೆ ಸಂಬಂದಿಸಿರುವುದು ತಪಸ್ಸೆಂದು ತಿಳಿಯಬೇಕು.

**732. (4) ಇಸ್ಲಾಮ್ ಮತದಲ್ಲಿ ತ್ರೈತ ಸಿದ್ಧಾಂತಕ್ಕೆ ಸರಿಹೋಗುವ ಗುರುತು ಯಾವುದು?**

ಉ. ಹಸ್ತ.

**ವಿವರ :** ಇಸ್ಲಾಮ್ ಮತದಲ್ಲಿನ ಅರ್ಧಚಂದ್ರಾಕಾರ, ನಕ್ಷತ್ರ, ಹಸ್ತ, ರೆಕ್ಕೆಗಳ ಕುದುರೆ ಎಷ್ಟೋ ವಿಶಿಷ್ಟವಾದ ದೇವರ ಜ್ಞಾನದಿಂದ ತುಂಬಿಕೊಂಡಿವೆ. ಅದರಲ್ಲಿ ತ್ರೈತ ಸಿದ್ಧಾಂತವನ್ನು

ಬೋಧಿಸುವ ಹಾಗೆ ತ್ರೈತ ಸಿದ್ಧಾಂತಕ್ಕೆ ಸರಿಹೋಗುವ ಹಸ್ತ ಇದೆ. ಹಸ್ತದಲ್ಲಿನ ಮೂರು ರೇಖೆಗಳು ತ್ರೈತ ಸಿದ್ಧಾಂತವನ್ನು ಬೋಧಿಸುತ್ತಿವೆ. ಸಂಪೂರ್ಣ ಜ್ಞಾನ ಚಿಹ್ನೆಯಾದ ಹಸ್ತ ಇಸ್ಲಾಮ್ ಮತದಲ್ಲಿಯೂ ಸಹ ಇರುವುದು ಸಂತೋಷಿಸಬೇಕಾದ ವಿಷಯ.

**733. (5) ಶ್ವಾಸಕ್ಕೆ ಉಸಿರು ಎಂಬ ಹೆಸರು ಏಕೆ ಬಂದಿದೆ?**

ಉ. ಆತ್ಮನಿಂದ ಊದುತ್ತಿರುವುದರಿಂದ.

**ವಿವರ :** ಶರೀರದಲ್ಲಿನ ಶ್ವಾಸ ತನ್ನಿಷ್ಟಕ್ಕೆ ತಾನು ಆಡುತ್ತಿಲ್ಲ. ಕೊಲಿಮೆಯ ಚೀಲವನ್ನು ಊದುವಹಾಗೆ ಶರೀರದಲ್ಲಿನ ಆತ್ಮಶಕ್ತಿ ತನ್ನ ಶಕ್ತಿಯಿಂದ ಉಸಿರಿನ ಚೀಲಗಳನ್ನು ಎಳೆಯುತ್ತಾ ಶ್ವಾಸವನ್ನು ಊದುತ್ತಿದೆ. ಶ್ವಾಸ ಊದಲ್ಪಡುವುದರಿಂದ ಅದಕ್ಕೆ ಉಸಿರು ಎಂದು ಹೆಸರು ಬಂದಿದೆ. ಶರೀರದಲ್ಲಿ ಆತ್ಮ ಇರುವವರೆಗು ಶ್ವಾಸವನ್ನು ಊದುತ್ತಿರುತ್ತದೆ. ಆತ್ಮ ಹೋದ ಕೂಡಲೇ ಶ್ವಾಸ ನಿಂತು ಹೋಗುವುದು.

**734. (6) ಅಹಂ ಎಷ್ಟು ವಿಧಗಳು?**

ಉ. ಎರಡು ವಿಧಗಳು.

**ವಿವರ :** ಶರೀರದಲ್ಲಿ ಅಹಂ ಒಂದೇ ಇದ್ದರೂ ಅದು ಎರಡು ವಿಧಗಳ ಕೆಲಸ ಮಾಡುವುದರಿಂದ ಅದನ್ನು ಎರಡು ವಿಧಗಳಾಗಿ ಹೇಳುತ್ತಿದ್ದಾರೆ. ನಾನು ಶರೀರವೆಂದು ತಿಳಿದುಕೊಳ್ಳುವುದು ಒಂದು ವಿಧವಾದ ಅಹಂಕಾರವಾದಾಗ, ನಾನು ಜೀವಾತ್ಮನೆಂದು ಕೊಳ್ಳುವುದು ಎರಡನೆಯ ವಿಧವಾದ ಅಹಂ ಆಗುತ್ತದೆ. ಶರೀರ ಮೊತ್ತವು ನಾನು ಅಂದುಕೊಳ್ಳುವುದು ಅಜ್ಞಾನ ಸಂಬಂಧವಾದ ಅಹಂಕಾರವಾಗುತ್ತದೆ. ಶರೀರವನ್ನು ನಾನಲ್ಲ, ಶರೀರದಲ್ಲಿನ ರವೆಯಷ್ಟಿರುವ ಜೀವಾತ್ಮನು ನಾನು ಎಂದುಕೊಳ್ಳುವುದು ಜ್ಞಾನಪರವಾದ ಅಹಂಕಾರವೆಂದು ತಿಳಿಯಬೇಕು. ಎಷ್ಟೋ ಜ್ಞಾನ ತಿಳಿದವರು ಹೊರತು ಎಲ್ಲರೂ ಶರೀರ ನಾನೆನ್ನುವ ಅಹಂಕಾರವನ್ನೇ ಹೊಂದಿದ್ದಾರೆ.

**735. (7) ಜ್ಞಾನದ ಪ್ರಕಾರ ಶರೀರದಲ್ಲಿ ಸರ್ಪವಾಗಿ ಯಾವುದನ್ನು ಹೋಲಿಸಿ ಹೇಳಿದ್ದಾರೆ?**

ಉ. ಶ್ವಾಸವನ್ನು.

**ವಿವರ :** ಶರೀರದಲ್ಲಿನ ಶ್ವಾಸ ಹಾವು ಬುಸಗುಟ್ಟಿದಹಾಗೆ ಶಬ್ದವನ್ನು ಮಾಡುತ್ತಾ ಆಡುವುದರಿಂದ ಶ್ವಾಸವನ್ನು ಸರ್ಪವಾಗಿ ಹೋಲಿಸಿ ಹೇಳಿದ್ದಾರೆ. ಪ್ರಾಣಾಯಾಮ

ಪದ್ಧತಿಯಲ್ಲಿ ಶ್ವಾಸವನ್ನು ಬಂಧಿಸುವುದನ್ನು ಕೆಲವರು ಹಾಡಿನ ರೂಪವಾಗಿ "ಹಾವು ಹಿಡಿಯಲು ಬರುತ್ತೀರೇನಣ್ಣ" ಎಂದು ಹಾಡಿದ್ದಾರೆ. ಶ್ವಾಸವನ್ನು ಹಾವಾಗಿ ಹೋಲಿಸಿ ಹೇಳಿರುವ ತತ್ತ್ವಗಳು ಸಹ ಎಷ್ಟೋ ಇವೆ.

**736. (8) ನಮ್ಮ ಶರೀರದಲ್ಲಿ ಗುಣವಲ್ಲದ ಗುಣಯಾವುದು?**

ಉ. ನಾಚಿಕೆ.

**ವಿವರ :** ನಾಚಿಕೆ ಶರೀರದಲ್ಲಿ ಒಂದು ಗುಣವಲ್ಲದ ಗುಣವಾಗಿ ಇದೆ. ವಾಸ್ತವಕ್ಕೆ ಅದು ಗುಣವಲ್ಲ. ನಮಗಿರುವ 12 ಗುಣಗಳು ಕೆಲಸ ಮಾಡುವುದನ್ನು ಆಗಾಗ ನಾಚಿಕೆ ನಿರೋಧಿಸುತ್ತಿರುತ್ತದೆ. ಯಾವ ಗುಣವನ್ನಾದರೂ ಸರಿಯಾಗಿ ಕೆಲಸ ಮಾಡದಹಾಗೆ ಮಾಡುವುದೇ ನಾಚಿಕೆಯೊಂದರ ಕೆಲಸ. ನಾವು ಮಾತಾಡುವ ಸಂದರ್ಭಗಳಲ್ಲಿ ಒಂದು ಕೆಲಸವನ್ನು ಸರಿಯಾಗಿ ಮಾಡದಿರುವಾಗ ಎಷ್ಟು ನಾಚಿಕೆಪಡುತ್ತಿದ್ದೀಯ ಎನ್ನುವುದು ನಡೆಯುತ್ತಿದೆ. ಮನುಷ್ಯ ಚುರುಕಾಗಿ ಇಲ್ಲದಾಗ, ಊಟ ಮಾಡುವಾಗ ಬಹುಶ ಈ ಪದ ಬಳಸುತ್ತೇವೆ. ನಾಚಿಕೆ ಎಲ್ಲಾ ಗುಣಗಳ ಮಧ್ಯೆ ಇದ್ದು ಅವುಗಳ ಕೆಲಸ ಸಾಮರ್ಥ್ಯವನ್ನು ಕಡಿಮೆ ಮಾಡುವುದಾಗಿ ಇದೆ. ಆದ್ದರಿಂದ ನಾಚಿಕೆ ಗುಣವಲ್ಲದ ಗುಣವೆಂದು ಹೆಸರು ಹೊಂದಿದೆ.

**737. (9) ಮರಣಿಸಿದ ಗಿಡದ ಶರೀರದಲ್ಲಿ ಶಕ್ತಿ ಕೆಲಸ ಮಾಡುತ್ತಿದೆಯಾ?**

ಉ. ಕೆಲಸ ಮಾಡುತ್ತಿದೆ.

**ವಿವರ :** ಬದುಕಿರುವ ಗಿಡದಲ್ಲಿ ಮೂರು ಆತ್ಮಗಳು ಇವೆ. ಮರಣಿಸಿದ ಗಿಡದಲ್ಲಿ ಒಂದೇ ಆತ್ಮ ಇದೆ. ಜೀವಾತ್ಮ, ಆತ್ಮ, ಪರಮಾತ್ಮರು ಬದುಕಿರುವ ಗಿಡದಲ್ಲಿದ್ದರೆ, ಮರಣಿಸಿದ ಗಿಡದಲ್ಲಿ ಜೀವಾತ್ಮ ಆತ್ಮ ಎರಡೂ ಹೋಗಿ ಮೂರನೆಯದಾದ ಪರಮಾತ್ಮ ಉಳಿದಿದೆ. ಪರಮಾತ್ಮ ಬದುಕಿರುವ ಮತ್ತು ಸತ್ತುಹೋಗಿರುವ ಎರಡರಲ್ಲೂ ಇದೆ. ಎಲ್ಲದಕ್ಕೂ ಮೂಲವಾದದ್ದು ಪರಮಾತ್ಮ. ಅಂಡಜ, ಪಿಂಡಜಗಳಿಗಿಂತಲೂ ಉದ್ಭಿಜಗಳಾದ ಗಿಡಗಳಲ್ಲಿ ಪರಮಾತ್ಮ ಶಕ್ತಿ ಹೆಚ್ಚಾಗಿ ಒಳಗೊಂಡಿದೆ. ಮೂಲ ಶಕ್ತಿಯಾದ ಪರಮಾತ್ಮ ಶಕ್ತಿ ಗಿಡಗಳಲ್ಲಿ ಹೆಚ್ಚಾಗಿರುವುದರಿಂದ ಅವುಗಳನ್ನು ಮೂಲಿಕೆ ಎನ್ನುತ್ತಿದ್ದೇವೆ. ಮೂಲಿಕೆ ಎಂದರೆ ಮೂಲವಾದ ಶಕ್ತಿ ಇರುವುದೆಂದು ಅರ್ಥ. ಮರಣಿಸಿದ ಯೋಗಿಗಳ ಶರೀರಗಳಲ್ಲಿ ಸ್ವಲ್ಪ ಪರಮಾತ್ಮ ಶಕ್ತಿ ಇದ್ದು ಅವರ ಸಮಾಧಿಗಳಿಂದ ಸಹ ಅವರ ಶಕ್ತಿ ಹೊರಗೆ ಬರುತ್ತಿರುತ್ತದೆಂದು

ಹೇಳಿದಹಾಗೆ, ಮರಣಿಸಿದ ಗಿಡಗಳಲ್ಲಿ ಸಹ ಮೂಲ ಶಕ್ತಿ ಒಳಗೊಂಡಿರುವುದರಿಂದ ಅವುಗಳ ಬೇರುಗಳು ಕೊಂಬೆಗಳು ಸಹ ಮೂಲಿಕೆಗಳೆನ್ನುವ ಹೆಸರನ್ನು ಹೊಂದಿವೆ. ಮೂಲ ಶಕ್ತಿ ಇರುವ ಮೂಲಿಕೆಗಳು ದೊಡ್ಡ ರೋಗವನ್ನಾದರೂ ವಾಸಿ ಮಾಡಬಲ್ಲವು. ಗಿಡದಲ್ಲಿರುವ ಮೂಲಶಕ್ತಿಯೇ ರೋಗವನ್ನು ಇಲ್ಲದಂತೆ ಮಾಡುತ್ತಿದೆ ಎಂದು ತಿಳಿಯುತ್ತದೆ. ಒಂದೊಂದು ಗಿಡದಲ್ಲಿ ಮೂಲಶಕ್ತಿ ಒಂದೊಂದು ವಿಧವಾಗಿ ಇರುವುದರಿಂದ ಅನೇಕ ಗಿಡಗಳು ಅನೇಕ ಮೂಲಿಕೆಗಳಾಗಿದ್ದೂ ಗಿಡ ಸತ್ತು ಹೋದರೂ ಅವುಗಳ ಕೊಂಬೆಗಳು ಬೇರುಗಳು ಮೂಲಿಕೆಗಳಾಗಿ ಕೆಲಸ ಮಾಡುತ್ತಿವೆ. ಪರಮಾತ್ಮ ಭಗವದ್ಗೀತೆಯಲ್ಲಿ ನನ್ನ ಶಕ್ತಿ ಚಂದ್ರನಿಂದ ಔಷಧಗಳಲ್ಲಿ ಪ್ರವೇಶಿಸುತ್ತಾ ಅವುಗಳಿಗೆ ಔಷದ ಗುಣಗಳನ್ನು ನೀಡುತ್ತಿದ್ದೇನೆಂದು ಸಹ ಹೇಳಿದ್ದಾನೆ. ಆದ್ದರಿಂದ ಮರಣಿಸಿದ ಗಿಡದಲ್ಲಿಯೂ ಸಹ ಇರುವ ಪರಮಾತ್ಮ ಔಷಧಿಶಕ್ತಿ ಕೊಡುತ್ತಾ, ಗಿಡವನ್ನು ಮೂಲ ಪುರುಷನಿದ್ದ ಮೂಲಿಕೆಯಾಗಿ ಮಾಡಿದ್ದಾನೆ.

**738. (10) ದೇವರಿಗೆ ಹತ್ತಿರವಾಗಿರುವ ಜೀವರಾಶಿ ಯಾವುದು?**

ಉ. ಉದ್ಭಿಜ ಜಾತಿ.

**ವಿವರ :** ಭೂಮಿ ಮೇಲೆ ಹುಟ್ಟುವಿಕೆಯನ್ನು ಅನುಸರಿಸಿ ಮೂರು ಜಾತಿಗಳು ಇವೆ. ಅವುಗಳೇ ಅಂಡಜ, ಪಿಂಡಜ, ಉದ್ಭಿಜಗಳು. ಅಂಡವೆಂದರೆ ಮೊಟ್ಟೆಯಿಂದ ಹುಟ್ಟಿರುವವು. ಪಿಂಡಜ ಎಂದರೆ ಭ್ರೂಣ(ಪಿಂಡ)ದಿಂದ ಹುಟ್ಟಿರುವವು. ಉದ್ಭಿಜ ಎಂದರೆ ಭೂಮಿಯಿಂದ ಹುಟ್ಟಿರುವವು. ಈ ವಿಧವಾಗಿರುವ ಮೂರು ಜಾತಿಗಳನ್ನು ಮತ್ತೊಂದು ವಿಧವಾಗಿ ಯಾರೂ ಇಲ್ಲಿಯವರೆಗು ಹೇಳದ ವಿಧದಲ್ಲಿ ವಿಭಜಿಸಲಾಗಿದೆ. ಒಂದು ಮೇಲಕ್ಕೆ ಬೆಳೆಯುವವು ವೃಕ್ಷಜಾತಿಗಳು, ಎರಡು ಅಡ್ಡವಾಗಿ ಬೆಳೆಯುವವು ಜಂತು ಜಾಲ, ಮೂರು ಕೆಳಕ್ಕೆ ಬೆಳೆಯುವವು ಒಂದೇ ಒಂದು ಮನುಷ್ಯ ಜಾತಿ. ಈ ಮೂರು ಜಾತಿಗಳಲ್ಲಿ ಮೇಲಕ್ಕೆ ಬೆಳೆಯುವ ಉದ್ಭಿಜಗಳು ದೇವರಿಗೆ ಹತ್ತಿರವಾಗಿವೆ. ಅಡ್ಡ ಬೆಳೆಯುವ ಅಂಡಜಗಳು ಮತ್ತು ಪಿಂಡಜಗಳಾದ ಜಂತು ಕ್ರಿಮಿಕೀಟಕಾದಿಗಳು ಎಲ್ಲವೂ ದೇವರಿಗೆ ಮಧ್ಯ ದೂರದಲ್ಲಿವೆ. ಪಿಂಡಜವಾದ ಒಂದೇ ಒಂದು ಮಾನವ ಜಾತಿ ಮಾತ್ರ ದೇವರಿಗೆ ಬಹಳ ದೂರವಾಗಿದೆ. ಕರ್ಮಗಳನ್ನು ಅನುಭವಿಸುವುದರಲ್ಲಿಯೂ, ಸಂಪಾದಿಸುವುದರಲ್ಲಿಯೂ ಎಲ್ಲದಕ್ಕಿಂತ ಮಾನವನದೇ ಮೇಲುಗೈಯಾಗಿದ್ದು ದೇವರಿಗೆ ದೂರವಾಗಿದ್ದಾನೆ.

# ಜ್ಞಾನ ಪರೀಕ್ಷೆ

**ತಾಡಿಪತ್ರಿ** **ದಿನಾಂಕ–03–02–2001**

**739. (1) ಆದಿಯಿಂದ ಪರಮಾತ್ಮ ಒಟ್ಟು ಎಷ್ಟು ಭಾಗಗಳಾಗಿ ಇದೆ?**

ಉ. ನಾಲ್ಕು ಭಾಗಗಳಾಗಿ.

**ವಿವರ :** ಪರವಾತ್ಮ ಮೂರು ಭಾಗಗಳಾಗಿ ಶರೀರದಲ್ಲಿದೆಯೆಂದು ಅದನ್ನೆ ತ್ರೈತವೆನ್ನುತ್ತಿದ್ದೇವೆಂದು ಹೇಳಿ, ಈಗ ನಾಲ್ಕು ಭಾಗಗಳೆನ್ನುತ್ತೀರಾ? ಎಂದು ಕೆಲವರಿಗೆ ಪ್ರಶ್ನೆ ಹುಟ್ಟಬಹುದು. ಅದಕ್ಕೆ ಉತ್ತರ ಏನೆಂದರೆ! ಈಗ ಶರೀರದಲ್ಲಿ ಇರುವುದು ಜೀವಾತ್ಮ, ಆತ್ಮ ಪರಮಾತ್ಮಗಳೆಂದು ಮೂರು ಭಾಗಗಳಾಗಿ ಇದ್ದರೂ ಮೊದಲು ಆದಿಯಲ್ಲಿ ಪರಮಾತ್ಮ ಎಷ್ಟು ಭಾಗಗಳಾಗಿ ವಿಭಜನೆ ನಡೆದಿದೆಯೋ ನೋಡಬೇಕಾಗಿದೆ. ಪ್ರಪಂಚವೇ ಇಲ್ಲದಿರುವಾಗ, ಪರಮಾತ್ಮ ಒಂದೇ ಇರುವಾಗ, ಆದಿಯಲ್ಲಿ ಪರಮಾತ್ಮ ಮೊದಲು ಪ್ರಕೃತಿಯನ್ನು ತನ್ನಿಂದ ಒಂದು ಭಾಗ ಮಾಡಿದೆ. ನಂತರ ಜೀವಾತ್ಮನನ್ನು ಆತ್ಮನನ್ನು ಸಹ ಭಾಗಗಳು ಮಾಡಿದೆ. ಆದಿಯಲ್ಲಿ 1. ಪ್ರಕೃತಿ, 2. ಜೀವಾತ್ಮ, 3. ಆತ್ಮ, 4. ಪರಮಾತ್ಮ ಎನ್ನುವ ಭಾಗಗಳಾಗಿ ವಿಭಜನೆಯಾಗಿ ಬರುವುದರಿಂದ ಪರಮಾತ್ಮ ಮೊದಲು ನಾಲ್ಕು ಭಾಗಗಳಾಗಿ ತಯಾರಾಗಿದೆಯೆಂದು ಹೇಳಬಹುದು. ಪ್ರಕೃತಿಯಿಂದ ಶರೀರ, ಪರಮಾತ್ಮನಿಂದ ಶರೀರದಲ್ಲಿ ಜೀವಾತ್ಮ ಆತ್ಮಗಳು ಇವೆ. ಈ ವಿಧಾನವನ್ನು ಅನುಸರಿಸಿ ಪರಮಾತ್ಮ ಆದಿಯಲ್ಲಿ ನಾಲ್ಕು ಭಾಗಗಳಾಗಿದ್ದಾನೆಂದು ಹೇಳಬಹುದು.

**740. (2) ಮಾಯೆ ಒಟ್ಟು ಎಷ್ಟು ವಿಧಗಳಾಗಿ ಇದೆ?**

ಉ. 108 ವಿಧಗಳಾಗಿದೆ.

**ವಿವರ :** ಮಾಯೆ ಎಂದರೆ ಗುಣಗಳ ಸಮ್ಮಿಲನವೆಂದು, ಮಾಯೆ ಗುಣಗಳ ರೂಪದಲ್ಲಿ ತಲೆಯಲ್ಲಿ ಇದೆಯೆಂದು ಬಹಳ ಸಲ ಹೇಳಿಕೊಂಡಿದ್ದೇವೆ. ಮಾಯೆ ಅನೇಕ ರೂಪಗಳೊಂದಿಗೆ ಅನೇಕ ವಿಧಗಳಾಗಿ ಮನುಷ್ಯನನ್ನು ಪೀಡಿಸುತ್ತಿದ್ದರೂ ಮಾಯೆ ಎನ್ನುವುದೊಂದಿದೆಯೆಂದು ಸಹ ಮನುಷ್ಯನಿಗೆ ತಿಳಿದಿಲ್ಲ. ಅನೇಕ ವಿಧಗಳಾಗಿ ಪೀಡಿಸುವ ಮಾಯೆಯನ್ನು ಒಂದು ಪದ್ಧತಿಯಾಗಿ ಲೆಕ್ಕಿಸಿ ಇಷ್ಟು ಭಾಗಗಳಾಗಿ ಇದೆಯೆಂದು ಹೇಳಬಹುದು. ಗುಣಗಳು 12 ಎಂದು ತಿಳಿದುಕೊಂಡಿದ್ದೇವೆ. ಒಂದೊಂದು ಗುಣ 9 ಭಾಗಗಳಾಗಿ ಬದಲಾಗಿದೆಯೆಂದು ಸಹ ಹೇಳಿಕೊಂಡಿದ್ದೇವೆ. ಒಂದು ಭಾಗದಲ್ಲಿನ 12

ಗುಣಗಳು 9 ಭಾಗಗಳಾದರೆ ಒಟ್ಟು 108 ಗುಣಗಳಾಗುತ್ತವೆ. 54 ಶತ್ರು ವರ್ಗ 54 ಮಿತ್ರ ವರ್ಗ ಒಟ್ಟು 108. ಮಣಿಗಳ ಸರ, ಜಪಮಾಲೆಯಲ್ಲಿ 54 ಮಣಿಗಳಾಗಲಿ 108 ಮಣಿಗಳಾಗಲಿ ಇರುವುದು ಗಮನಿಸಿರುವೆವು. 54 ಮಣಿಗಳ ಸರಗಳು ಗುಣಗಳ ವರ್ಗಗಳನ್ನು ತಿಳಿಸುವ ಹಾಗೆ ಇಟ್ಟಿದ್ದಾರೆ. 108 ಮಣಿಗಳು ಮಾಯೆಗೆ ಚಿಹ್ನೆಯಾಗಿ ಮಾಡಿ ಮಾಯೆ ಪ್ರಪಂಚವಿದೆಯೆಂದು, ಪ್ರಪಂಚ 108 ಕೋಟಿ ಸಂವತ್ಸರಗಳಿರುವುದೆಂದು, ಅಲ್ಲಿಯವರೆಗೂ 108 ಗುಣಗಳ ಪ್ರಭಾವಗಳಿರುತ್ತವೆಂದು ತಿಳಿಯುವಹಾಗೆ ಮಣಿಗಳನ್ನು ಮಾಲೆಯಲ್ಲಿ ಜೋಡಿಸಿದ್ದಾರೆ. ಮಾಯೆ ಪ್ರಪಂಚದಲ್ಲಿ ಎಲ್ಲಾ ಸಂಘಟನೆಗಳ ರೂಪದಲ್ಲಿದ್ದರೂ, ಎಷ್ಟು ಕ್ರಿಯೆಗಳಾಗಿದ್ದರೂ ಅದಕ್ಕೆ ಮೂಲ 108 ವಿಧಗಳಾಗಿದೆಯೆಂದು ಲೆಕ್ಕ ಹೇಳಬಹುದು.

**741. (3) ಸುಳ್ಳು (ಅಬದ್ಧ) ಹೇಳಿ ಮದುವೆ ಮಾಡಬಹುದು ಎಂದಿದ್ದಾರೆ. ಎಷ್ಟು ಸುಳ್ಳುಗಳು(ಅಬದ್ಧಗಳು)?**

ಉ. ಒಂದು.

**ವಿವರ :** ಬಂಧ ಕಟ್ಟಲ್ಪಡುವುದು, ಬಂಧನ ಕಟ್ಟಿ ಹಾಕುವುದು ಹಗ್ಗ ಎಂದು ಅರ್ಥವಿದೆ. ಬದ್ಧ ಕಟ್ಟಿಹಾಕಲ್ಪಟ್ಟಿರುವುದು ಅಥವಾ ಕಟ್ಟಿ ಹಾಕಲ್ಪಟ್ಟಿರುವವನು ಎಂದು ಸಹ ಅರ್ಥವಿದೆ. ಭೂಮಿ ಮೇಲೆ ಮನುಷ್ಯರೆಲ್ಲರೂ ಹಗ್ಗದಿಂದ ಕಟ್ಟಿಸಿಕೊಳ್ಳದಿದ್ದರೂ, ಕರ್ಮ ಎಂಬ ಹಗ್ಗದಿಂದ ಬಂಧಿಸಲ್ಪಟ್ಟು ಕರ್ಮಬದ್ಧರೆಂದು ಹೆಸರು ಹೊಂದಿದ್ದಾರೆ. ಜನ್ಮಿಸಿದ ಸರ್ವ ಜೀವರಾಶಿಗಳನ್ನು ಕರ್ಮ ಬದ್ಧರೆಂದೇ ಹೇಳಬಹುದು. ಜೀವಾತ್ಮನೊಂದಿಗೆ ಆತ್ಮ ಜೋಡಿಯಾಗಿ ಇದ್ದು ಜೀವಾತ್ಮನು ಕರ್ಮ ಅನುಭವಿಸುತ್ತಿರುವಾಗ, ಆತ್ಮ ಕರ್ಮ ಪ್ರಕಾರ ಕೆಲಸಗಳು ಮಾಡುತ್ತಿದೆ. ಇದರ ಪ್ರಕಾರ ನೋಡಿದರೆ ಆತ್ಮ ಸಹ ಕರ್ಮಾಚರಣೆ ಮಾಡುತ್ತಿರುವ ಕಾರಣದಿಂದ ಮತ್ತು ಜೀವಾತ್ಮನೊಂದಿಗೆ ಜೋಡಿಯಾಗಿ ಇರುವುದರಿಂದ, ಜೀವಾತ್ಮನು ಬಿಡುಗಡೆಯಾದರೆ ತಾನು ಬಿಡುಗಡೆ ಹೊಂದುವುದರಿಂದ ಆತ್ಮ ಸಹ ಕರ್ಮಬಂಧುವಾಗಿ ಇದೆ. ಜೀವಾತ್ಮ ಆತ್ಮಗಳು ಎರಡು ಕರ್ಮಬದ್ಧಗಳಾಗಿ ಇರುವಾಗ, ಪರಮಾತ್ಮ ಒಬ್ಬನು ಕರ್ಮದಿಂದಾಗಲಿ ಮತ್ತು ಯಾವ ಇತರೆಗಳಿಂದಾಗಲಿ ಬಂಧಿಸಲ್ಪಡದೆ ಅಂದರೆ ಬದ್ಧನಾಗದೆ ಅಬದ್ಧನಾಗಿ ಇದ್ದಾನೆ. ಇದನ್ನನುಸರಿಸಿ ಬದ್ಧವಾಗಿ ಇರುವವರು ಜೀವಾತ್ಮ ಆತ್ಮಗಳು, ಅಬದ್ಧವಾಗಿ ಇರುವವನು ಪರಮಾತ್ಮ.

ಜೀವಾತ್ಮ ಜ್ಞಾನವನ್ನು ತಿಳಿದು, ಕರ್ಮವನ್ನು ನಶಿಸುವಂತೆ ಮಾಡಿಕೊಂಡು, ಪರಮಾತ್ಮನೊಳಗೆ ಐಕ್ಯವಾಗುವುದು ಮೋಕ್ಷ ಎನ್ನುತ್ತಾರೆ. ಮೋಕ್ಷವನ್ನು ಮುಕ್ತಿ ಎಂದು,

ಬಿಡುಗಡೆ ಎಂದು, ಪರಮ ಪದವೆಂದು ಎಷ್ಟೋ ವಿಧಗಳಲ್ಲಿ ಕರೆದರು ಅದು ಪರಮಾತ್ಮನೊಳಗೆ ಪ್ರವೇಶಿಸುವುದೆ ಆಗುತ್ತದೆ. ಪರಮಾತ್ಮನೊಳಗೆ ಪ್ರವೇಶಿಸಿದ ನಂತರ ಪರಮಾತ್ಮೇ ಆಗುತ್ತದೆ. ಅದನ್ನೇ ಪೂರ್ವದಲ್ಲಿ ಮದುವೆ ಎಂದು ಸಹ ಜ್ಞಾನಿಗಳು ಕರೆಯುತ್ತಿದ್ದರು. ಮದುವೆ ಎಂಬ ಪದಕ್ಕೆ ಸರಿಯಾದ ಅರ್ಥ ಪರಮಾತ್ಮನೊಳಗೆ ಜೀವಾತ್ಮ ಐಕ್ಯವಾಗುವುದು, ಪರಮಾತ್ಮನಾಗಿ ಬದಲಾಗುವುದು. ಪರಮಾತ್ಮನಿಗೆ ಗುರುತಾಗಿ ಹೇಳುವುದು ಮದುವೆ. ಸರ್ವ ಜೀವರಾಶಿಗಳಿಗೂ ಪರಮಾತ್ಮ ತಂದೆಯಾಗುವನು. ಆದ್ದರಿಂದಲೇ ವಿವಾಹ ಸಮಯದಲ್ಲಿ ಯುವತಿ ಯುವಕನನ್ನು ಮದು ಮಗಳು, ಮದು ಮಗ ಎನ್ನುತ್ತಿದ್ದಾರೆ. ವಿವಾಹ ಮಾಡಿಕೊಳ್ಳುವ ಯುವತಿ ಯುವಕನು ಒಂದೇ ತಂದೆಯ ಮಕ್ಕಳೆನ್ನುವ ಮಾತು. ವಿವಾಹ ಸಮಯದಲ್ಲಿ ಜೀವಾತ್ಮ ಮೋಕ್ಷ ಹೊಂದುವುದಕ್ಕೆ ಬೇಕಾದ ಜ್ಞಾನವೆಲ್ಲವೂ ಮದು ಮಗ, ಮದುಮಗಳಿಗೆ ವಿವಾಹ ಕಾರ್ಯಗಳಿಂದ ಮಾಡಿಸಿ, ಅದರ ಪ್ರಕಾರ ಅವರು ಮೋಕ್ಷ ಹೊಂದುವ ಹಾಗೆ ಪದ್ಧತಿಯನ್ನು ಪೂರ್ವದಲ್ಲಿ ತಿಳಿಸುತ್ತಿದ್ದರು. ಮದುವೆ ಎಂದರೆ ಮೋಕ್ಷವೆಂದು, ಮದುವೆ ಸಾಂಪ್ರದಾಯ ಕೆಲಸಗಳೆಲ್ಲವೂ ಪರಮಾತ್ಮನನ್ನು ಹೊಂದುವ ಮಾರ್ಗಗಳ ಸೂಚನೆಗಳೆಂದು, ಅವುಗಳಿಂದ ಕೊನೆಗೆ ನಕ್ಷತ್ರ ದರ್ಶನ ಕಾರ್ಯದಿಂದ ಮದುವೆ ಪೂರ್ತಿ ಮುಗಿದಂತೆ, ಪರಮಾತ್ಮನನ್ನು ಹೊಂದಿದಂತೆ ಭಾವಿಸಿ ಹೇಳುತ್ತಿದ್ದರು. ಕೊನೆಗೆ ಮೋಕ್ಷ ಹೊಂದುವುದನ್ನು ಮದುವೆ ಮುಗಿದುಹೋಗಿದೆ ಎನ್ನುತ್ತಿದ್ದರು. ವಿವಾಹ ಸಮಯದಲ್ಲಿ ಸಹ ನಕ್ಷತ್ರ ದರ್ಶನದೊಂದಿಗೆ ಮದುವೆ ಮುಗಿದಿದೆ ಎನ್ನುತ್ತಿದ್ದರು. ಇದನ್ನನುಸರಿಸಿ ಆಧ್ಯಾತ್ಮಿಕ ಅರ್ಥದಿಂದ ಮದುವೆ ಎಂದರೆ ಮೋಕ್ಷವನ್ನು ಹೊಂದುವುದೆಂದು ಅರ್ಥ. ಇಲ್ಲಿ ಪ್ರಶ್ನೆ ಮದುವೆ ಮಾಡುವುದಕ್ಕೆ ಎಷ್ಟು ಸುಳ್ಳು (ಅಬದ್ಧ) ಹೇಳಬೇಕೆಂದು ಕೇಳುತ್ತಿದ್ದಾರೆ.

ವಿವಾಹ ಸಮಯದಲ್ಲಿ ಮಾಡಿಸುವ ಕೆಲಸಗಳೆಲ್ಲವೂ ಜ್ಞಾನ ಸಂಬಂಧವಾಗಿ ಇದ್ದು ಕೊನೆಗೆ ಮೋಕ್ಷವನ್ನು ಸೇರಿಸುವವಾಗಿ ಇವೆ. ಒಂದು ಸಲ ಮೋಕ್ಷವನ್ನು ಹೊಂದಿದವನು ಇನ್ನು ಎರಡನೆಯಸಲ ಹೊಂದುವುದೆನ್ನುವುದು ಇರುವುದಿಲ್ಲ. ಒಂದು ಸಲ ಪರಮಾತ್ಮನನ್ನು ಹೊಂದಿದ ಜೀವಾತ್ಮ ತಾನು ಸಹ ಪರಮಾತ್ಮನಾಗೇ ಬದಲಾಗುವನು. ಆದ್ದರಿಂದ ಮೋಕ್ಷ ಒಂದೇಸಲ ಎಂದು ತಿಳಿಯಬೇಕು. ಪರಮಾತ್ಮ ಬದ್ಧನಲ್ಲವೆಂದು, ಅಬದ್ಧನೆಂದು ಮೊದಲೇ ಹೇಳಿಕೊಂಡಿದ್ದೇವೆ. ಬದ್ಧನಾದ ಜೀವಾತ್ಮನನ್ನು ಅಬದ್ಧನಾದ ಪರಮಾತ್ಮನೊಳಗೆ ಸೇರಿಸುವುದು ಗುರುವಿನ ಕೆಲಸ. ಗುರುವು ಶ್ರಮಪಟ್ಟು ಒಂದು ಸಲ ಜೀವಾತ್ಮನನ್ನು ಮೋಕ್ಷ ಹೊಂದಿಸಿದರೆ ಜೀವಾತ್ಮನು ಪರಮಾತ್ಮನಾಗಿ ಬದಲಾಗುವನು.

ಆ ವಿಷಯವನ್ನೇ ಗುರುವು ಒಂದು ಅಬದ್ಧದಿಂದ ಶಿಷ್ಯನಿಗೆ ಮದುವೆ ಮಾಡುವನೆಂದಿದ್ದಾರೆ. ಮದುವೆ ಆಗುವುದಕ್ಕೆ ಎಷ್ಟೋ ಅಬದ್ಧಗಳು ಅವಶ್ಯವಿಲ್ಲ. ಒಂದು ಅಬದ್ದದಿಂದಲೇ ಮದುವೆ ಮಾಡಬಹುದು. ಇದು ಜ್ಞಾನ ಸಂಬಂಧವಾದ ಮಾತು. ಈ ಜ್ಞಾನ ಅರ್ಥವಾಗದವರು ಪ್ರಪಂಚ ಪರವಾಗಿರುವ ವಿವಾಹವನ್ನು ಮದುವೆ ಎಂದುಕೊಂಡು ಅಸತ್ಯಗಳನ್ನು ಅಬದ್ಧಗಳೆಂದುಕೊಂಡು, ಇಷ್ಟಬಂದಷ್ಟು ಹೇಳಬಹುದೆಂದು, ಕೆಲವರು ನೂರೆಂದು, ಮತ್ತೆ ಕೆಲವರು ಸಾವಿರ ಎಂದು ಹೇಳಿಕೊಂಡಿದ್ದಾರೆ. ಈ ವಿಷಯವನ್ನು ಜ್ಞಾನಪರವಾಗಿ ನೋಡುವುದಾದರೆ ಮದುವೆಗೆ ಪ್ರತ್ಯೇಕ ಅರ್ಥವಿದೆಯೆಂದು, ಆ ಸಮಯದಲ್ಲಿ ನಡೆಯುವ ಕಾರ್ಯಗಳೆಲ್ಲವೂ ಪವಿತ್ರವಾದ ಜ್ಞಾನಯುಕ್ತಗಳೆಂದು, ಜೀವನದಲ್ಲಿ ಹಾಗೆ ನಡೆದರೆ ಮೋಕ್ಷ ಹೊಂದಬಹುದೆಂದು ತಿಳಿಯುತ್ತಿದೆ. ಪೂರ್ವದಲ್ಲಿ ಜ್ಞಾನ ತಿಳಿದ ಬ್ರಹ್ಮಜ್ಞಾನಿಗಳು ವಿವಾಹ ಮಾಡಿಸುತ್ತಾ ಈ ಕೆಲಸ ಮಾಡಬೇಕೆಂದು, ಈ ಅರ್ಥದಿಂದಲೇ ಈ ಕೆಲಸ ಮಾಡುತ್ತಿದ್ದೇವೆಂದು, ಹೀಗೆ ಮಾಡುವುದನ್ನೇ ಮದುವೆ ಎಂದು ಹೇಳಿ ಮಾಡಿಸುತ್ತಿದ್ದರು. ಪ್ರಸ್ತುತ ಕಾಲದಲ್ಲಿ ಮದುವೆಗೆ ಅರ್ಥ ತಿಳಿದಿಲ್ಲ. ಮಾಡಿಸುವವರು ಜ್ಞಾನಿಗಳಲ್ಲ, ಮಾಡುವವರು ಇಷ್ಟವಿಲ್ಲದಿದ್ದರೂ ಮಾಡುತ್ತಿದ್ದಾರೆ. ಸಂಪ್ರದಾಯಗಳು ಹೆಸರಿಗೆ ಮಾತ್ರ ಇವೆ ಆದರೆ ಅರ್ಥರಹಿತವಾಗಿ ಹೋಗಿವೆ.

**742. (4) ಮೊದಲು ಪರಮಾತ್ಮ ಸ್ತ್ರೀಯಾ? ಪುರುಷನಾ?**

ಉ. ಯಾವುದು ಅಲ್ಲ.

**ವಿವರ :** ಪ್ರಪಂಚ ಹುಟ್ಟದ ಪೂರ್ವ ಮೊಟ್ಟ ಮೊದಲು ಪರಮಾತ್ಮ ಸ್ತ್ರೀ ಅಲ್ಲ, ಪುರುಷನು ಅಲ್ಲ. ಏನೂ ಅಲ್ಲದ ಪರಮಾತ್ಮ ಪ್ರಪಂಚವನ್ನು ಹುಟ್ಟಿಸುವುದಕ್ಕೆ ಸಂಕಲ್ಪಿಸಿದಾಗ ಮೂಲವಾದ ತನಗೆ ಒಂದು ಆಧಾರವಾಗಿ ಪ್ರಕೃತಿಯನ್ನು ತಯಾರುಮಾಡಿದ್ದಾನೆ. ಪ್ರಕೃತಿಯನ್ನು ಸ್ತ್ರೀ ತತ್ತ್ವವಾಗಿ ತಯಾರು ಮಾಡಿ ತಾನು ಪುರುಷತತ್ತ್ವವಾಗಿ ನಿಂತು ಹೋಗಿದ್ದಾನೆ. ಸ್ತ್ರೀ ಪುರುಷರಿಂದಲೇ ಸಂತಾನ ಅಭಿವೃದ್ಧಿ ನಡೆಯುವ ಹಾಗೆ ಯಂತ್ರಾಂಗವನ್ನು ಜೋಡಿಸಿ ಎಲ್ಲರಿಗೂ ತಾಯಿಯಾಗಿ ಪ್ರಕೃತಿಯನ್ನು, ಎಲ್ಲರಿಗೂ ತಂದೆಯಾಗಿ ಪರಮಾತ್ಮ ಇದ್ದು ಸಕಲ ಜೀವರಾಶಿಗಳನ್ನು ಪ್ರಪಂಚದಲ್ಲಿ ವೃದ್ಧಿ ಮಾಡಿದ್ದಾರೆ. ವಂಶ ಲಕ್ಷಣಗಳೆಂದಹಾಗೆ ಪುರುಷತ್ತ್ವವು, ಸ್ತ್ರೀ ತತ್ತ್ವವು ಇರುವಹಾಗೆ ಎರಡು ಜಾತಿಗಳ ಶರೀರಗಳನ್ನು ಭೂಮಿ ಮೇಲೆ ಇರುವಹಾಗೆ ಮಾಡಿದ್ದಾರೆ. ತಾಯಿ ತಂದೆ ವರಸೆಗಳು ಭೂಮಿ ಮೇಲೆ ಇರುವಂತೆ ಮಾಡಿದ್ದಾನೆ. ಇದನ್ನನುಸರಿಸಿ ನೋಡುವುದಾದರೆ ಮೊದಲು ಪ್ರಪಂಚ ಹುಟ್ಟದ ಪೂರ್ವ

ಪರಮಾತ್ಮ ಯಾವುದು ಅಲ್ಲ. ಪ್ರಪಂಚ ಹುಟ್ಟಿದ ನಂತರ ಪರಮಾತ್ಮ ಪುರುಷನಾಗಿ ಲೆಕ್ಕಿಸಲ್ಪಡುತ್ತಿದ್ದಾನೆ. ಮೊದಲು ಏನೂ ಅಲ್ಲದ ಪರಮಾತ್ಮನನ್ನು ನಾವು ಮಾತುಗಳ ಸಂದರ್ಭದಲ್ಲಿ ಅದು ಎಂದು, ಆತನು ಎಂದು, ಪರಮಾತ್ಮ ಇದೆ ಎಂದು, ಪರಮಾತ್ಮ ಇದ್ದಾನೆ ಎಂದು, ಎರಡು ವಿಧಗಳಾಗಿ ಹೆಣ್ಣಾಗಿ ಗಂಡಾಗಿ ಹೇಳುತ್ತಿದ್ದೇವೆ. ನಿಜವಾಗಿ ಪರಮಾತ್ಮನನ್ನು ಹೆಣ್ಣು ಗಂಡು ಎಂದು ನಿರ್ಣಯಿಸಲಾರೆವು. ಹೇಳಿಕೊಳ್ಳುವುದಕ್ಕೆ ಪದ್ಧತಿಯಾಗಿ ಭಗವದ್ಗೀತೆಯಲ್ಲಿ ಭಗವಂತನೇ ತನ್ನನ್ನು ಪುರುಷನೆಂದು ಪ್ರಕಟಿಸಿ ಕೊಂಡಿದ್ದಾನೆ.

**743. (5) ಜೀವಾತ್ಮ ಹೆಣ್ಣಾ, ಗಂಡಾ?**

ಉ. ಹೆಣ್ಣು ಲಕ್ಷಣಗಳಿರುವ ಗಂಡು.

**ವಿವರ :** ಪುರುಷನಾದ ಪರಮಾತ್ಮನಿಂದ ಮತ್ತೆ ಎರಡು ಆತ್ಮಗಳು ವಿಭಜಿಸಲ್ಪಟ್ಟಿವೆ. ಅವುಗಳೇ ಆತ್ಮ, ಜೀವಾತ್ಮ. ಪರಮಾತ್ಮ, ಆತ್ಮ, ಜೀವಾತ್ಮ ಮೂವರೂ ಪುರುಷರೇ ಎಂದು, ಅದರಲ್ಲಿ ಪರಮಾತ್ಮನನ್ನು ಇಬ್ಬರು ಪುರುಷರಿಗಿಂತ ಉತ್ತಮನಾದ ಪುರುಷೋತ್ತಮನೆಂದು ಸಹ ಹೇಳಲಾಗಿದೆ. ಭಗವದ್ಗೀತೆಯ ಪ್ರಕಾರ ಪ್ರಕೃತಿ ಸ್ತ್ರೀ ಆದಾಗ, ಮೂವರು ಪುರುಷರಲ್ಲಿ ಜೀವಾತ್ಮ ಸಹ ಪುರುಷನೇ. ಪ್ರಪಂಚದಲ್ಲಿ ಪುರುಷನು ಸ್ತ್ರೀಯನ್ನು ಗುರ್ತಿಸುವುದಕ್ಕೆ ಅವರ ಮರ್ಮಾಯವಗಳೇ ಕಾರಣ. ಲಿಂಗವನ್ನನುಸರಿಸಿ ಪುರುಷನೆಂದು, ಯೋನಿಯನ್ನನುಸರಿಸಿ ಸ್ತ್ರೀಯೆಂದು ಗುರುತಿಸುತ್ತಿದ್ದೇವೆ. ಭೂಮಿ ಮೇಲೆ ಪುರುಷಾಕಾರ ದಿಂದ ಹುಟ್ಟಿದ ಪುರುಷರಲ್ಲಿ ಸ್ತ್ರೀ ಲಕ್ಷಣಗಳು ಹೊಂದಿ ಸ್ತ್ರೀಯ ಹಾಗೆ ಪ್ರವರ್ತಿಸುವ ಸ್ವಭಾವವನ್ನು ಹೊಂದಿದ ಪುರುಷರೆಷ್ಟೋ ಪುಂಸತ್ವ ಇಲ್ಲದವರಾಗಿ ನಪುಂಸಕರಾಗಿ ಇರುವುದು ನಾವು ನೋಡುತ್ತಲೇ ಇದ್ದೇವೆ. ಹಾಗೇ ಮೂವರು ಪುರುಷರಲ್ಲಿ ಒಬ್ಬನಾದ ಜೀವಾತ್ಮ ಹೆಸರಿಗೆ ಪುರುಷನಾದರೂ ಪ್ರಕೃತಿಯೊಂದಿಗೆ ಕೂಡಿಕೊಂಡವನಾಗಿ, ಪ್ರಕೃತಿ ಲಕ್ಷಣಗಳು ತನ್ನಲ್ಲಿ ಒಳಗೊಂಡಿರುವುದರಿಂದ, ಪರಮಾತ್ಮ ಆತ್ಮನ ಹಾಗೆ ಸ್ವಚ್ಛವಾದ ಪುರುಷನು ಅಲ್ಲವೆಂದು ತಿಳಿಯುತ್ತಿದೆ. ಪರಮಾತ್ಮ, ಆತ್ಮ ಸ್ವಚ್ಛವಾದ ಪುರುಷರಾದಾಗ, ಅಂತಹವನು ಜೀವಾತ್ಮವಾದರೆ ಆತ್ಮ ಪರಮಾತ್ಮರ ಹಾಗೆ ಪುರುಷತ್ವ ಇಲ್ಲದವನಾಗಿ ನಪುಂಸಕನಾಗಿ ಇದ್ದಾನೆ. ಭೂಮಿ ಮೇಲೆ ಆಕಾರದಲ್ಲಿ ಪುರುಷನಾಗಿ ಕಾಣಿಸುತ್ತಾ, ಲಕ್ಷಣಗಳಲ್ಲಿ ಸ್ತ್ರೀಯಾಗಿ ತಿಳಿಯುವ ನಪುಂಸಕರಹಾಗೆ ಜೀವಾತ್ಮ ಹೆಸರಿಗೆ ಪುರುಷನಾಗಿ ಇದ್ದು ಪ್ರಕೃತಿ ವಾಸನೆಗಳಿಂದ ಕೂಡಿಕೊಂಡಿರುವವನಾಗಿ, ಪೂರ್ತಿ ಪುರುಷನು ಆಗದೆ, ಮುಂದೆ ಹೆಣ್ಣು ಹಿಂದೆ ಗಂಡು ಎನ್ನುವಹಾಗೆ ಅರ್ಧ ಪುರುಷನಾಗಿ ಅರ್ಧ ಸ್ತ್ರೀಯಾಗಿ

ಇದ್ದಾನೆ. ಜೀವಾತ್ಮ ಪರಮಾತ್ಮ ಅಂಶವಾಗಿ ಪುರುಷನಾದರೂ ಪರಮಾತ್ಮನಹಾಗೆ ಪುರುಷನಾಗದೆ ಪ್ರಕೃತಿಯೊಂದಿಗೆ ಕೂಡಿಕೊಂಡು ಪ್ರಕೃತಿ ಲಕ್ಷಣಗಳೊಂದಿಗೆ ಇರುವವನಾಗಿದ್ದಾನೆ. ಯಾವಾಗಾದರೆ ಜ್ಞಾನವನ್ನು ತಿಳಿದು ತನ್ನಲ್ಲಿರುವ ಪ್ರಕೃತಿ ಲಕ್ಷಣಗಳಿಂದ ಹೊರಗೆ ಬಂದಾಗ ಪೂರ್ತಿ ಪುರುಷನಾಗಿ ಬದಲಾಗಿ ಪರಮಾತ್ಮನಲ್ಲಿ ಐಕ್ಯವಾಗುವನು.

**744. (6) ಹೆಂಡತಿ ಇಲ್ಲದವನನ್ನು ವಿಧುರ ಗಂಡ ಇಲ್ಲದವರನ್ನು ವಿಧವೆ ಎನ್ನುತ್ತೇವೆ. ನೀನು ಯಾರು?**

ಉ. ವಿಧವೆ.

**ವಿವರ :** ಪರಮಾತ್ಮ ಎಲ್ಲಾ ತಾನಾಗಿ ಮೂಲ ಪುರುಷನಾಗಿ ಇರುವುದರಿಂದ ಆತನನ್ನು ಅನೇಕ ವಿಧಗಳಾಗಿ ಕರೆಯುತ್ತಿದ್ದೇವೆ. ಯಾವ ವಿಧವಾಗಿ ಕರೆದರೂ ಆತನು ಆತನೆ. ಗೀತೆಯಲ್ಲಿ ಎಲ್ಲರನ್ನು ಹುಟ್ಟಿಸುವುದರಲ್ಲಿ ಬೀಜದಾತನಾಗಿ ಇರುವುದರಿಂದ, ಆತನನ್ನು ತಂದೆ ಎಂದು ಹೇಳಲಾಗಿದೆ. ಅಷ್ಟೇ ಅಲ್ಲದೆ ಜಗತ್ತನ್ನು ಭರಿಸುವ ಮೂಲಶಕ್ತಿ, ಆದ್ದರಿಂದ ಜಗದ್ಭರ್ತ ಎಂದು ಸಹ ಹೇಳಲಾಗಿದೆ. ಒಬ್ಬ ಮನುಷ್ಯನಿಗೆ ಪರಮಾತ್ಮ ಎಲ್ಲಾ ವರಸೆಗಳ ಪ್ರಕಾರವಿದ್ದಾನೆಂದು ಹೇಳಬಹುದು. ಸಂದರ್ಭಾನುಸಾರ ಅರ್ಥ ಮಾಡಿಕೊಳ್ಳಬೇಕು. ಇಲ್ಲಿ ಗಂಡ ಹೆಂಡತಿ ವಿಷಯವಾಗಿ ಬಂದಾಗ ಆಧ್ಯಾತ್ಮಿಕ ರೀತ್ಯಾ ಜೀವಾತ್ಮನಿಗೆ ಗಂಡ ಪರಮಾತ್ಮಯೇ. ಪ್ರಪಂಚ ಪದ್ಧತಿಯಲ್ಲಿ ಪ್ರತಿ ಸ್ತ್ರೀಗೂ ಒಬ್ಬ ಗಂಡ ಇದ್ದೇ ಇರುವನು. ಗಂಡ ಇಲ್ಲದ ಹೆಂಡತಿಯನ್ನು ವಿಧವೆ ಎನ್ನುತ್ತಾರೆ. ಒಂದು ಕುಟುಂಬದಲ್ಲಿ ಗಂಡ ಸತ್ತುಹೋಗಿ ಹೆಂಡತಿ ಉಳಿದರೆ ಆಕೆಯನ್ನು ವಿಧವೆ ಎಂದು ಸಮಾಜದಲ್ಲಿ ಸ್ವಲ್ಪ ಕೀಳಾಗಿ ನೋಡುವುದು ನಡೆಯುತ್ತಿದೆ. ಆಕೆ ಗಂಡ ಸತ್ತುಹೋದನಂತರ ಭೂಮಿ ಮೇಲೆಯೇ ಆಕೆ ಗಂಡ ಮತ್ತೊಂದು ಕಡೆ ಹುಟ್ಟಿ ರೂಪ ಬದಲಾಗಿರುವುದರಿಂದ ಗಂಡನನ್ನು ನೋಡಿದರೂ ಹೆಂಡತಿ ಗುರುತಿಸಲಾರಳು. ವಿಧವೆಗಳಾದ ನಂತರ ತಮ್ಮ ಗಂಡನನ್ನು ಪೂರ್ತಿ ಮರೆತುಹೋದರೂ ಅವರು ಸಂವತ್ಸರಕ್ಕೆ ಒಮ್ಮೆ ಜ್ಞಾಪಕ ಮಾಡಿಕೊಳ್ಳುವವರು ಇದ್ದಾರೆ. ಪೂರ್ತಿ ಗಂಡನ ಜ್ಞಾಪಕವನ್ನು ಹೊಂದಿದವರು ಬಹಳ ಕಡಿಮೆ ಇರುವರು.

ಆಧ್ಯಾತ್ಮಿಕ ರೀತ್ಯಾ ಜೀವಾತ್ಮನಿಗೆ ಗಂಡ ಪರಮಾತ್ಮನೆಂದೇ ಹೇಳಿಕೊಂಡಿದ್ದೇವೆ. ಮರಣವೆಂಬ ಬದಲಾವಣೆಯೊಂದಿಗೆ ಹೆಂಡತಿ ಗಂಡನನ್ನು ಗುರುತಿಸದ ಹಾಗೆ, ಕರ್ಮ ಎಂಬ ಬದಲಾವಣೆಯೊಂದಿಗೆ ಜೀವಾತ್ಮನು ಪರಮಾತ್ಮನನ್ನು ಗುರುತಿಸದೆ ಹೋಗಿದ್ದಾನೆ. ಅಷ್ಟೇ ಅಲ್ಲದೆ ವಿಧವ ಸ್ತ್ರೀ ತನ್ನ ಗಂಡನ ಜ್ಞಾಪಕವನ್ನೇ ಮರೆತುಹೋದಹಾಗೆ, ಜೀವಾತ್ಮ

ಪ್ರಕೃತಿಯಲ್ಲಿ ಸಿಲುಕಿಕೊಂಡು ಪರಮಾತ್ಮನ ಜ್ಞಾಪಕವೇ ಇಲ್ಲದೇ ಹೋಗಿದ್ದಾನೆ. ಪರಮಾತ್ಮ ಅಣುಅಣುವಿನಲ್ಲಿ ವ್ಯಾಪಿಸಿ ಇದ್ದರೂ ಗಂಡ ಇಲ್ಲದವನಾಗಿ ಜೀವಾತ್ಮ ಇರುವುದರಿಂದ ಜೀವಾತ್ಮನನ್ನು ವಿಧವ ಎನ್ನುತ್ತಿದ್ದೇವೆ. ಹಾಗೆ ನಾವು ಈಗ ವಿಧವೆಗಳಾಗಿ ಬಹಳ ಜನ ಇದ್ದರೂ, ಕೆಲವರು ಮಾತ್ರ ತಮ್ಮ ಗಂಡ ಪರಮಾತ್ಮನೆಂದು, ಅದೇ ದೀಕ್ಷೆಯಿಂದ ಜ್ಞಾನವನ್ನು ತಿಳಿದುಕೊಳ್ಳುತ್ತಾ ಪತಿಯೇ ತಮ್ಮ ವ್ರತವಾಗಿ ಹೊಂದಿರುವುದರಿಂದ ಅವರನ್ನು ಪತಿವ್ರತ ಜೀವಿಗಳೆಂದು ಕರೆಯಬಹುದು. ಅಂತಹವರು ಬೇಗನೇ ತಮ್ಮ ಗಂಡನಾದ ಪರಮಾತ್ಮನನ್ನು ಸೇರಿಕೊಳ್ಳುವರು. ಭೂಮಿ ಮೇಲೆ ಪರಮಾತ್ಮ ಜ್ಞಾಪಕ, ಜ್ಞಾನ ಇಲ್ಲದ ಜೀವಿಗಳೆಲ್ಲರೂ ವಿಧವರೇ ಆಗುವರು.

**745. (7) ಆತ್ಮ ಶರೀರವೆಲ್ಲಾ ವ್ಯಾಪಿಸಿದೆಯಾ?**

ಉ. ರವೆಯೆಷ್ಟು ಮಾತ್ರ ವ್ಯಾಪಿಸಿಲ್ಲ.

**ವಿವರ :** ಇಲ್ಲಿಯವರೆಗು ಆತ್ಮ ಶರೀರವೆಲ್ಲಾ ವ್ಯಾಪಿಸಿದೆಯೆಂದು ಬಹಳ ಸಲ ಹೇಳಿಕೊಂಡಿದ್ದೇವೆ. ಇಲ್ಲಿ ಈ ಪ್ರಶ್ನೆಗೆ ಸಮಾಧಾನದಲ್ಲಿ ಇಲ್ಲ ಎಂದು ಹೇಳಿದಾಗ ಬಹಳ ಜನರಿಗೆ ಇದು ಸರಿಯಾದ ಉತ್ತರವೇನಾ ಎಂದು ಅನುಮಾನ ಬಂದಿರಬಹುದು. ಇದಕ್ಕೆ ವಿವರವೇನೆಂದರೆ ಆತ್ಮ ಶರೀರದಲ್ಲಿ ವ್ಯಾಪಿಸಿರುವುದು ನಿಜವೇ, ಆದರೆ ಶರೀರದಲ್ಲಿ ಒಂದು ಕಡೆ ಸ್ವಲ್ಪ ಭಾಗ ಮಾತ್ರ ವ್ಯಾಪಿಸಿಲ್ಲ. ಆದ್ದರಿಂದ ಎಲ್ಲಾ ಎನ್ನುವ ಮಾತಿಗೆ ಎಲ್ಲಾ ಇಲ್ಲವೆಂದು ಹೇಳಬೇಕಾಗಿ ಬಂದಿದೆ. ಶರೀರದಲ್ಲಿ ಆತ್ಮ ಜೀವಾತ್ಮ ಎರಡೂ ಇರುವುದು ನಿಜವೇ. ಶರೀರದಲ್ಲಿ ಎಲ್ಲಾ ಅವಯವಗಳನ್ನು ಚರ್ಮದವರೆಗು, ಕೂದಲಿನವರೆಗು ಆತ್ಮ ವ್ಯಾಪಿಸಿ ಇರುವುದು ನಿಜವೇ. ಜೀವಾತ್ಮನಲ್ಲಿ ಮಾತ್ರ ಆತ್ಮ ಇಲ್ಲ. ಶರೀರದಲ್ಲಿ ಜೀವಾತ್ಮ ಇರುವ ಕಡೆ ಆತ್ಮ ಇಲ್ಲದಿರುವುದರಿಂದ, ಜೀವಾತ್ಮನ ಆಕಾರವನ್ನು ಆತ್ಮ ಆಕ್ರಮಿಸಿಲ್ಲದಿರುವುದರಿಂದ, ಶರೀರದಲ್ಲಿ ಜೀವಾತ್ಮ ಇರುವಷ್ಟು ಜಾಗ ಬಿಟ್ಟು ಉಳಿದ ಭಾಗವೆಲ್ಲಾ ವ್ಯಾಪಿಸಿ ಇದೆಯೆಂದು ಹೇಳಬಹುದು. ಜೀವಾತ್ಮ ಶರೀರದಲ್ಲಿ ರವೆಯೆಷ್ಟು, ಇರುವೆಯಷ್ಟು ಪರಿಮಾಣದಲ್ಲಿ ಇದ್ದಾನೆಂದು ಆತನಿಗೆ ಆಕಾರವಿದೆಯೆಂದು ಹೇಳುತ್ತಿರುವ ನಾವು ಆ ರವೆಯಷ್ಟು ಮಾತ್ರ ಆತ್ಮ ಇಲ್ಲದೆ ಉಳಿದ ಶರೀರದಲ್ಲಿ ಎಲ್ಲಾ ಇದೆಯೆಂದು, ಆ ಸ್ವಲ್ಪ ಮಾತ್ರ ಇಲ್ಲದಿರುವುದರಿಂದ ಶರೀರವೆಲ್ಲಾ ಆತ್ಮ ಇಲ್ಲದಂತೇ ಜೀವಾತ್ಮನನ್ನು ಹೊರತು ಉಳಿದ ಭಾಗವೆಲ್ಲಾ ವ್ಯಾಪಿಸಿ ಇದೆಯೆಂದು ಹೇಳಬಹುದು.

**746. (8) ಭೂಮಿಯಲ್ಲಿ ಭೂಕಂಪ ಬರುವುದಕ್ಕೆ ಮೂರು ಆತ್ಮಗಳಲ್ಲಿ ಯಾವ ಆತ್ಮ ಕೆಲಸ ಮಾಡುತ್ತಿದೆ?**

ಉ. ಎರಡನೆಯ ಆತ್ಮ.

**ವಿವರ :** ಭೂಮಿ ಸ್ಥೂಲಶರೀರ ಆದಾಗ ಅದರಲ್ಲಿ ಜೀವಾತ್ಮ, ಆತ್ಮ ಎರಡು ಇವೆ. ಎಲ್ಲ ಪ್ರಾಣಿಗಳಿಗೆ ಗ್ರಹಿಸುವ ಶಕ್ತಿ ಇರುವಹಾಗೆ ಭೂಮಿಗೂ ಸಹ ಬುದ್ಧಿ ಗ್ರಾಹಿತ, ಕರ್ಮ ಅನುಭವವು ಇದೆ. ಈ ನಮ್ಮ ಮಾತುಗಳು ಕೆಲವರಿಗೆ ವಿಚಿತ್ರವಾಗಿ ತೋಚಿದರೂ ಇದು ವಾಸ್ತವ. ಗ್ರಹಿಸುವುದಾದ್ದರಿಂದ ಭೂಮಿಯನ್ನು ಗ್ರಹ ಎನ್ನುತ್ತಿದ್ದೇವೆ. ಶರೀರದಲ್ಲಿ ನಮಗೆ ಅನೇಕ ರೋಗಗಳು ಆತ್ಮದಿಂದಲೇ ಕರ್ಮರೀತ್ಯಾ ಬರುತ್ತವೆ. ಹಾಗೆಯೇ ಆತ್ಮ ಭೂಗ್ರಹಕ್ಕೂ ಸಹ ರೋಗಗಳನ್ನು ರುಗ್ಣತೆಗಳನ್ನು ತರಿಸಿ ಅನುಭವಿಸುವಹಾಗೆ ಮಾಡುತ್ತಿರುವುದು. ಭೂಮಿಗೆ ಬರುವ ರೋಗಗಳಲ್ಲಿ ಎಲ್ಲಾ ತಿಳಿಯದಿದ್ದರೂ ಕೆಲವು ಮಾತ್ರ ತಿಳಿಯುತ್ತಿವೆ. ಅವುಗಳೇ ಭೂಮಿ ಮೇಲೆ ನಡೆಯುವ ಉಪದ್ರವಗಳು, ಭೂಕಂಪಗಳು, ಅಗ್ನಿ ಪರ್ವತಗಳು ಸಿಡಿಯುವುದು, ಸಮುದ್ರದಲ್ಲಿ ಬಡಬಾಗ್ನಿ ಎಬ್ಬಿಸುವ ಭೀಬತ್ಸಗಳು ಮೊದಲಾದವು ನಮಗೆ ತಿಳಿಯುತ್ತಲೇ ಇವೆ. ಅಷ್ಟೇ ಅಲ್ಲದೆ ನಮಗೆ ಇರುವೆಗಳು ಸೊಳ್ಳೆಗಳ ಬಾಧೆ ಇರುವಹಾಗೆ ಆಗಾಗ ಬಾಂಬುಗಳು ಮೊದಲಾದ ಬಾಧೆಗಳು ಭೂಮಿಗೆ ಇವೆ. ಹೀಗೆ ಆಲೋಚಿಸಿದರೂ ಭೂಕಂಪ ಆತ್ಮದಿಂದಲೇ ಭೂಮಿಗೆ ಇರುವ ಕರ್ಮರೀತ್ಯಾ ನಡೆಯುತ್ತಿದೆಯೆಂದು ತಿಳಿಯುತ್ತಿದೆ.

**747. (9) ಶರೀರದಲ್ಲಿ ಆಗಾಗ ನಿದ್ರೆ ಹೋಗುವ ಆತ್ಮ ಯಾವುದು?**

ಉ. ಯಾವ ಆತ್ಮ ನಿದ್ರೆಹೋಗುವುದಿಲ್ಲ.

**ವಿವರ :** ಆತ್ಮಗಳು ಮೂರು ನಿದ್ರೆಹೋಗುವವು ಅಲ್ಲ. ಆತ್ಮಗಳಿಗೆ ನಿದ್ರೆಇಲ್ಲ. ಆತ್ಮಗಳಿಗೆ ರಾತ್ರಿ ಹಗಲು ಇವೆ, ಆದರೆ ನಿದ್ರೆ ಎಚ್ಚರಗಳು ಇಲ್ಲವೆಂದು ಗ್ರಹಿಸಬೇಕು. ನಿದ್ರೆ ಶರೀರದಲ್ಲಿನ ಒಂದೇ ಒಂದು ಮನಸ್ಸಿಗೆ ಇದೆ. ಮನಸ್ಸು ನಿದ್ರಿಸುವಾಗ ಜೀವಾತ್ಮನಿಗೆ ವಿಷಯಗಳು ತಿಳಿಯದೆ ಹೋಗುತ್ತಿವೆ. ಆದರೆ ಆತ್ಮ ಜೀವಾತ್ಮ ನಿದ್ರಿಸುವುದಿಲ್ಲವೆಂದು ಮೊದಲೇ ತಿಳಿದುಕೊಂಡಿದ್ದೇವೆ.

**748. (10) ಎಷ್ಟೋ ಮಹತ್ವಗಳು ಮಾಡುವ ಬಾಬಾಗಳು ಮೊದಲಾದವರಲ್ಲಿ ದೈವಶಕ್ತಿ ಇದೆಯಾ?**

ಉ. ಇಲ್ಲ.

**ವಿವರ :** ಪ್ರಪಂಚದಲ್ಲಿ ದೈವಕ್ಕಿಂತಲೂ ಹೆಚ್ಚು ಶಕ್ತಿಯಾಗಿರುವುದು ಮಾಯೆ. ಅದು

ದೈವದಂತೆ ತನ್ನನ್ನೇ ನಂಬುವಹಾಗೆ ಮಾಡಬಲ್ಲದು. ಆ ಕೆಲಸದಲ್ಲಿ ಭೂಮಿ ಮೇಲೆ ಎಷ್ಟೋ ಮಹತ್ವಗಳನ್ನು ಒಬ್ಬ ಮನುಷ್ಯನಿಂದ ತೋರಿಸಿ ಎಲ್ಲರೂ ಆತನನ್ನು ನಂಬುವಹಾಗೆ ಮಾಡಿ, ಆತನು ತೋರಿಸುವ ಮಾರ್ಗವೇ ಸರಿಯಾದುದೆಂದು ಆತನು ಹೇಳುವುದೇ ನಿಜವಾದ ಜ್ಞಾನ ಎನ್ನುವಂತೆ ಮಾಡುತ್ತಿದೆ. ಆದ್ದರಿಂದ ಬಹಳ ಜನ ಮಹತ್ವಗಳನ್ನು ಮಾಡುವ ಬಾಬಾಗಳನ್ನೇ ದೈವಗಳೆಂದು ನಂಬಿ ಅಸಲು ದೇವರ ವಿಷಯವನ್ನು ತಿಳಿಯದೆ ಹೋಗುತ್ತಿದ್ದಾರೆ. ದೇವರು ಭಗವಂತನಾಗಿ ಹುಟ್ಟಿದರೆ ಜ್ಞಾನಾಗ್ನಿಗೆ ಈ ಶಕ್ತಿ ಇದೆಯೆಂದು ನಿರೂಪಿಸುವ ನಿಮಿತ್ತ ಮಾನವನ ಕರ್ಮವನ್ನು ಸುಟ್ಟು ಇಲ್ಲದಂತೆ ಮಾಡಬಲ್ಲನು. ಅದೇ ದೇವರ ಮಹತ್ವ. ಮಾಯೆ ಮಹತ್ವ ಯಾವುದಾದರೂ ಮಾಡುವುದಾಗಿದ್ದು ತನ್ನನ್ನೇ ನಿಜ ದೈವವೆಂದು ನಂಬಿ ತನ್ನಕಡೆ ಬರುವ ಹಾಗೆ ಮಾಡುವ ಶಕ್ತಿ ಇದೆ. ಆದ್ದರಿಂದ ಮಹತ್ವಗಳು ಮಾಡುವ ಬಾಬಾಗಳಲ್ಲಿ ದೈವಶಕ್ತಿ ಇಲ್ಲವೆಂದು ಮಾಯೆಶಕ್ತಿ ಇದೆಯೆಂದು ಹೇಳಬಹುದು.

## ಜ್ಞಾನ ಪರೀಕ್ಷೆ

**ಚೆನ್ನೇ ಕೊತ್ತಪಲ್ಲಿ** **ದಿನಾಂಕ–03–03–2001**

**749.** **(1) ದೇವರು ಧರ್ಮಯುಕ್ತನಾ, ಅಧರ್ಮಯುಕ್ತನಾ?**

ಉ. ಧರ್ಮ, ಅಧರ್ಮ ಯುಕ್ತನಲ್ಲ.

**ವಿವರ :** ಇಲ್ಲಿ ಪರಮಾತ್ಮನನ್ನು ದೇವರೆಂದು ಹೇಳುವುದು ನಡೆದಿದೆ. ಪರಮಾತ್ಮ ಧರ್ಮಗಳಿಗೆ ಅಧರ್ಮಗಳಿಗೆ ಅತೀತವಾದವನು. ಧರ್ಮಗಳು ಅಧರ್ಮಗಳೆನ್ನುವವು ದೇವರನ್ನು ತಿಳಿಸುವ ಮಾರ್ಗಗಳು. ಅವು ಮಾನವನಿಗೆ ಅವಶ್ಯಕ, ಮಾನವನು ಧರ್ಮಯುಕ್ತನಾಗಿ ಇದ್ದರೆ ದೇವರನ್ನು ತಿಳಿಯಬಲ್ಲನು. ಅಧರ್ಮಯುಕ್ತನಾಗಿ ಇದ್ದರೆ ದೇವರನ್ನು ತಿಳಿಯಲಾರನು. ಧರ್ಮಗಳು ಮಾನವನಿಗಾಗಿಯೇ ಹೊರತು ದೇವರಿಗಾಗಿ ಇರುವವಲ್ಲ. ಧರ್ಮಗಳು ಜ್ಞಾನ ದಿಂದ ತಿಳಿಯಬಲ್ಲವು. ಧರ್ಮಾಚರಣೆಯೇ ಯೋಗವಾಗುವುದು. ಧರ್ಮಗಳನ್ನು ಪರಿತ್ಯಜಿಸಿ ಸಹ ದೇವರನ್ನು ತಿಳಿಯಬಹುದು. ಭಗವದ್ಗೀತೆಯಲ್ಲಿ ತನ್ನನ್ನು ತಿಳಿಯುವುದಕ್ಕೆ ಧರ್ಮಗಳನ್ನು ಬೋಧಿಸಿ ಕೊನೆಯಲ್ಲಿ ಧರ್ಮಗಳನ್ನು ಬಿಟ್ಟು ಸಹ ತನ್ನನ್ನು ಹೊಂದುವುದಕ್ಕೆ ಮಾರ್ಗವಿದೆಯೆಂದು ಹೇಳಿದ್ದಾನೆ.

ಆದ್ದರಿಂದ ದೇವರು ಧರ್ಮ, ಅಧರ್ಮಯುಕ್ತನು ಅಲ್ಲ. ಯಾವ ಧರ್ಮಗಳು ನಿಯಮಗಳು ದೇವರನ್ನು ಶಾಸಿಸಲಾರವು.

**750. (2) ದೇವರು ನಿಜವಾಗಿ ಇದ್ದಾನಾ?**

ಉ. ನಿಜವಾಗಿ ಇಲ್ಲ.

**ವಿವರ :** ದೇವರು ಅಬದ್ಧವಾಗಿ ಇದ್ದಾನೆ, ನಿಜವಾಗಿ ಇಲ್ಲ. ದೇವರು ಅಬದ್ಧನೆಂದು ಮೊದಲೇ ತಿಳಿದುಕೊಂಡಿದ್ದೇವೆ. ನಿಜ ಎಂದರೆ ಹುಟ್ಟಿದೆಯೆಂದು, ಪ್ರತ್ಯಕ್ಷವಾಗಿ ಇದೆಯೆಂದು ಅರ್ಥ. ನಿಜ ಎನ್ನುವ ಪದ ಹುಟ್ಟಿ ಇರುವ ಜೀವಾತ್ಮನಿಗೆ ಸರಿಹೋಗುತ್ತದೆ. ಕರ್ಮ ಬಂಧದಿಂದ ಹುಟ್ಟದ ದೇವರಿಗೆ ಸರಿಹೋಗುವುದಿಲ್ಲ. **"ಜ"** ಎಂದರೆ ಹುಟ್ಟುವುದು **"ನಿಜ"** ಎಂದರೆ ಹುಟ್ಟಿ ಇರುವುದು. ಕರ್ಮ ಬಂಧದಿಂದ ಹುಟ್ಟಿ ಇರುವವನನ್ನು ನಿಜವಾಗಿ ಇರುವವನು ಅಥವಾ ಪ್ರತ್ಯಕ್ಷವಾಗಿ ಇರುವವನು ಎನ್ನುವುದು ಸರಿಹೋಗುತ್ತದೆ. ದೇವರು ಕರ್ಮಬದ್ಧನಲ್ಲ, ಆತನು ಹುಟ್ಟಿ ಇರುವವನಲ್ಲ, ಪ್ರತ್ಯಕ್ಷವಾಗಿ ಇಲ್ಲ. ಆದ್ದರಿಂದ ದೇವರು ನಿಜವಾಗಿ ಇಲ್ಲ, ಅಬದ್ಧವಾಗಿ ಇದ್ದಾನೆಂದು ಹೇಳಬಹುದು.

**751. (3) ಜೀವಾತ್ಮನಿಗೂ ಅಹಂಕಾರಕ್ಕೂ ಮಧ್ಯ ಯಾರಿದ್ದಾರೆ?**

ಉ. ಪರಮಾತ್ಮ.

**ವಿವರ :** ಶರೀರದಲ್ಲಾಗಲಿ, ಶರೀರದ ಹೊರಗಾಗಲಿ ಅಣುವಣುವಿನಲ್ಲೂ ವ್ಯಾಪಿಸಿ ಇರುವವನು ಪರಮಾತ್ಮ. ಶರೀರದಲ್ಲಿ ಜೀವಾತ್ಮನು ಅಹಂ, ಚಿತ್ತ, ಬುದ್ಧಿ ಪೊರೆಗಳ ಮಧ್ಯದಲ್ಲಿ ಇದ್ದು ಗುಂಡಾಗಿರುವ ಆಕಾರದಿಂದ ಇದ್ದಾನೆ. ಜೀವಾತ್ಮನಿಗು ಅಹಂಕಾರಕ್ಕೂ ಮಧ್ಯದಲ್ಲಿ ಎರಡು ಅಂತರಂಗಗಳಲ್ಲದೆ ಇರುವುದು ಪರಮಾತ್ಮ. ಜೀವಾತ್ಮನಲ್ಲಿಯೂ, ಅಹಂಕಾರದಲ್ಲಿಯೂ, ಜೀವಾತ್ಮನಿಗೂ ಅಹಂಕಾರಕ್ಕೂ ಮಧ್ಯದಲ್ಲಿ ವ್ಯಾಪಿಸಿರುವುದು ಪರಮಾತ್ಮ.

**752. (4) ಯೋಗ ಎನ್ನುವ ಪದದಲ್ಲಿ ಎಷ್ಟು ಅಕ್ಷರಗಳಿವೆ?**

ಉ. ಒಂದೇ.

**ವಿವರ :** ಯೋಗವೆಂದರೆ ಸೇರುವಿಕೆ. ಜೀವಾತ್ಮ ಆತ್ಮದೊಂದಿಗೆ ಸೇರುವುದನ್ನು ಯೋಗ ಎನ್ನುತ್ತೇವೆ. ಜೀವಾತ್ಮ ಆತ್ಮನೊಂದಿಗೆ ಸೇರಿದಾಗ ಜೀವಾತ್ಮ ಎನ್ನುವವನು ಇಲ್ಲದೆ ಆತ್ಮ

ಒಂದೇ ಇರುವಹಾಗೆ ಲೆಕ್ಕಿಸಲಾಗುತ್ತದೆ. ಆತ್ಮದಲ್ಲಿ ಜೀವಾತ್ಮ ಒಳಗೊಂಡಿದೆ ಎಂಬ ಮಾತು. ಯೋಗ ಹೊಂದದವರೆಗು ಜೀವಾತ್ಮ ಆತ್ಮ ಪರಮಾತ್ಮರಾಗಿ ಇರುವ ಮೂರು ಆತ್ಮಗಳಲ್ಲಿ ಪರಮಾತ್ಮ ವಿನಃ ಒಬ್ಬನು ಕ್ಷರನು ಎರಡನೆಯವನು ಅಕ್ಷರನೆಂದಿದ್ದಾರೆ. ಜೀವಾತ್ಮನು ನಾಶವಾಗುವವನು ಆದ್ದರಿಂದ ಕ್ಷರನೆಂದು ಆತ್ಮ ನಾಶನವಾಗದು ಆದ್ದರಿಂದ ಅಕ್ಷರನೆಂದು ಹೇಳಿದ್ದಾರೆ. ಯೋಗ ಹೊಂದಿದಾಗ ಜೀವಾತ್ಮ ಇಲ್ಲದೇ ಆತ್ಮ ಮಾತ್ರ ಉಳಿಯುತ್ತಿದೆ. ಆದ್ದರಿಂದ ಯೋಗದಲ್ಲಿ ಅಕ್ಷರವೊಂದು ಇದೆಯೆಂದು ಹೇಳಬಹುದು. ಅಕ್ಷರ ಒಂದು ಎಂದರೆ ನಾಶನವಾಗದ ಆತ್ಮ ಒಂದು ಇದೆಯೆಂದು ಅರ್ಥ. ಅಲ್ಲಿಯವರೆಗು ತ್ರೈತವಾಗಿರುವ ಶರೀರ ವ್ಯವಸ್ಥೆ ದ್ವೈತವಾಗಿ ಬದಲಾಗಿದೆಯೆಂದು ಅರ್ಥ ಮಾಡಿಕೊಳ್ಳಬೇಕು. ಯೋಗದಲ್ಲಿ ಅಕ್ಷರನೊಬ್ಬನು ಇದ್ದಾನೆ ಪರಮಾತ್ಮನೂ ಇದ್ದಾನೆ. ಆತ್ಮ ಪರಮಾತ್ಮರು ಎರಡೇ ಇರುವುದರಿಂದ ಆ ಸಮಯವನ್ನು ದ್ವೈತ ಎನ್ನುತ್ತಿದ್ದೇವೆ. ಜೀವಾತ್ಮ ಆತ್ಮ ಎರಡು ಪರಮಾತ್ಮನಲ್ಲಿ ಸೇರಿದಾಗ ಅದ್ವೈತ ಎನ್ನಬಹುದು. ಮೋಕ್ಷ ಹೊಂದಿದಾಗ ಅದ್ವೈತ, ಯೋಗ ಹೊಂದಿ ಜೀವಾತ್ಮ ಅಥವಾ ಆತ್ಮ ಪರಮಾತ್ಮರು ಇಬ್ಬರಿರುವಾಗ ದ್ವೈತ, ಸಾಧಾರಣ ಸ್ಥಿತಿಯಲ್ಲಿ ಜೀವಾತ್ಮ ಆತ್ಮ ಪರಮಾತ್ಮರಿದ್ದಾಗ ತ್ರೈತ ಎಂದು ಕರೆಯಬಹುದು.

**753. (5) ಗೀತೆಯಲ್ಲಿ ಧರ್ಮಯುಕ್ತಗಳಾದ ಯೋಗಗಳು ಎಷ್ಟು ಇವೆ?**

ಉ. ಎರಡು.

**ವಿವರ :** ಭಗವದ್ಗೀತೆಯಲ್ಲಿ ಧರ್ಮ ಯುಕ್ತಗಳಾದ ಯೋಗಗಳು ಇವೆ. ಒಂದು ಧರ್ಮಾತೀತವಾದ ಯೋಗವು ಇದೆ. ಗೀತೆಯಲ್ಲಿ 95 ಪಾಲು ಧರ್ಮಯುಕ್ತಗಳಾದ ಮಾರ್ಗಗಳನ್ನು ಬೋಧಿಸಿ, 5 ಪಾಲು ಧರ್ಮಾತೀತವಾದ ಜ್ಞಾನ ಬೋಧಿಸಿದ್ದಾನೆ. ಕರ್ಮಯೋಗ, ಬ್ರಹ್ಮಯೋಗ ಎರಡೂ ಧರ್ಮಗಳೊಂದಿಗೆ ಕೂಡಿಕೊಂಡ ಯೋಗಗಳು ಆದಾಗ, ಭಕ್ತಿಯೋಗವೆನ್ನುವುದು ಧರ್ಮಾತೀತವಾದುದು.

**754. (6) ಬುದ್ಧಿಗೆ ವಯಸ್ಸಿದೆಯಾ?**

ಉ. ಇದೆ.

**ವಿವರ :** ಶರೀರದಲ್ಲಿನ ಪ್ರತಿ ಭಾಗಕ್ಕೂ ವಯಸ್ಸು ಇದೆ. ಮರಣದಲ್ಲಿ ಎಲ್ಲವೂ ನಶಿಸಿ ಹೋಗುತ್ತಿವೆ. ಕೆಲವು ಮರಣಕ್ಕಿಂತಲೂ ಮೊದಲು ಸಹ ಹೋಗುತ್ತಿವೆ. ಜೀವಾತ್ಮ ಶರೀರವನ್ನು

ಬಿಟ್ಟು ಹೋಗುವುದು ಮರಣ. ಮರಣದಲ್ಲಿ ಜೀವಾತ್ಮ ನಾಶವಾಗನು. ಜೀವಾತ್ಮ ತನ್ನ ಸಹಚರ ಬೃಂದವಾದ ಅವಯವಗಳೊಡನಾಡಿಯೆಲ್ಲರನ್ನು ಬಿಟ್ಟು ಆತ್ಮನೊಂದಿಗೆ ಮತ್ತೊಂದು ಶರೀರವನ್ನು ಸೇರುತ್ತಿದ್ದಾನೆ. ಜೀವಾತ್ಮ ಶರೀರ ಬಿಡುವ ಸಮಯಕ್ಕೆ ಮನಸ್ಸಿನೊಂದಿಗೆ ಬುದ್ಧಿ ಚಿತ್ತ ಮೊದಲಾದ ಅವಯವಗಳೆಲ್ಲವು ನಶಿಸಿ ಹೋಗುತ್ತಿವೆ. ಆದ್ದರಿಂದ ಬುದ್ಧಿಗು ಸಹ ಆಯುಸ್ಸು ಇದೆಯೆಂದು ಹೇಳುತ್ತಿದ್ದೇವೆ. ಮರಣಕ್ಕಿಂತಲೂ ಮೊದಲು ಸಹ ಕೆಲವು ಅವಯವಗಳಿಗೆ ಆಯುವು ಮುಗಿಯುವುದರಿಂದ ಅವು ಕೆಲಸ ಮಾಡುವುದನ್ನು ನಿಲ್ಲಿಸುತ್ತವೆ. ಆದ್ದರಿಂದ ಎಲ್ಲವುದಕ್ಕು ಆಯುವು ಮತ್ತು ವಯಸ್ಸು ಇದೆ.

**755. (7) ಜೀವಾತ್ಮನಿಗೆ ಹಸಿವು ಇದೆಯಾ?**

ಉ. ಇದೆ.

**ವಿವರ :** ಹಸಿವಿಗೆ ಆಹಾರ ತೃಪ್ತಿ ಕೊಡಬಹುದು. ಜೀರ್ಣಾಶಯದಲ್ಲಿ ಉಂಟಾಗುವ ಹಸಿವು ಜೀವಾತ್ಮನನ್ನು ಬಾಧೆಗೆ ಗುರಿಮಾಡುವುದು. ಆಹಾರದಿಂದ ಆ ಬಾಧೆ ಹೋಗುವುದು. ಜೀವಾತ್ಮನಿಗೆ ಆಹಾರ ಬೇರೆ, ಜೀರ್ಣಾಶಯಕ್ಕೆ ಆಹಾರ ಬೇರೆ. ಶರೀರ ಬೇರೆ, ಜೀವಾತ್ಮ ಬೇರೆ, ಶರೀರ ಪೋಷಣಗೆ ಆಹಾರ ಉಪಯೋಗವಾಗುತ್ತದೆ. ಆಹಾರದಿಂದ ಜೀವಾತ್ಮನಿಗೆ ಅನುಭೂತಿಗಳು ಬರುತ್ತವೆ. ಆಹಾರದಿಂದಲೇ ಅಲ್ಲದೆ ವಿಷಯಗಳೆಲ್ಲವೂ ಜೀವಾತ್ಮನಿಗೆ ಅನುಭೂತಿಗಳೇ ಆದ್ದರಿಂದ ಅನುಭೂತಿಗಳೆಲ್ಲವೂ ಜೀವಾತ್ಮನಿಗೆ ಅನುಭವಗಳೇ, ಎಷ್ಟು ಅನುಭವಗಳಿದ್ದರೂ ಜೀವಾತ್ಮನಿಗೆ ತೃಪ್ತಿಇಲ್ಲ. ನಿಜವಾದ ಆಹಾರ ತಿನ್ನುವವರೆಗು ಜೀವಿಯ ಹಸಿವು ತೀರುವುದಿಲ್ಲ. ಜೀವಾತ್ಮನಿಗೆ ಆಹಾರ ಶರೀರಕ್ಕೆ ಆಹಾರ ಎರಡು ವಿಧಗಳು ಇವೆ. ಆಹಾರದಲ್ಲಿ ಜೀವಾತ್ಮನಿಗೆ ತೃಪ್ತಿ ಕೊಡುವ ಆಹಾರ ಜ್ಞಾನ ಅನುಭವ. ಜ್ಞಾನ ಆಹಾರ ಇಲ್ಲದವನಿಗೆ ಎಷ್ಟು ಜನ್ಮಗಳೆತ್ತಿದರೂ ತೃಪ್ತಿಇಲ್ಲ.

**756. (8) ಗೀತೆಗಳಲ್ಲಿ ಯಾವ ಗೀತೆ ದೊಡ್ಡದು?**

ಉ. ಭಗವದ್ಗೀತೆ.

**ವಿವರ :** ಗೀತೆ ಎಂದರೆ ಒಂದು ಹದ್ದನ್ನು ತೋರಿಸುವುದೆಂದು ಅರ್ಥ. ಭೂಮಿ ಯೊಂದರ ಹದ್ದನ್ನು ಕಡ್ಡಿಯಿಂದ ಗೀಚಿ ತೋರಿಸಬಹುದು. ಪದಾರ್ಥವೊಂದರ ಹದ್ದನ್ನು ಚಾಕುವಿನಿಂದ ಕೊಯ್ದು ತೋರಿಸಬಹುದು. ಹಾಗೇ ಮನುಷ್ಯನಿಗೆ ಹದ್ದನ್ನು ಮಾತುಗಳೊಂದಿಗೆ ತೋರಿಸಬಹುದು. ಭಗವಂತನು ಮನುಷ್ಯರಿಗೆ ಹದ್ದನ್ನು ಮಾತುಗಳಿಂದ ಹೇಳಿದ್ದಾನೆ.

ಮನುಷ್ಯರ ಹದ್ದು ಬಹಳ ದೊಡ್ಡದು. ಅರ್ಥ ಮಾಡಿಕೊಂಡರೆ ಎಲ್ಲಾ ಗೀತೆಗಳಿಗಿಂತ ಮನುಷ್ಯರಿಗೆ ಮಾತುಗಳಿಂದ ಗೀಚಿದ ಭಗವದ್ಗೀತೆಯೇ ದೊಡ್ಡದು.

**757. (9) ಅನ್ನ ಪರಮಾನ್ನಗಳಲ್ಲಿ ಜೀವಾತ್ಮನು ಯಾವುದನ್ನು ತಿಂದು ತೃಪ್ತಿ ಹೊಂದುವನು.**

ಉ. ಪರಮಾನ್ನ.

**ವಿವರ :** ಇಲ್ಲಿ ಪರಮಾನ್ನವೆಂದರೆ ಸಿಹಿಯಾದ ಅಡಿಗೆ ಎಂದುಕೊಳ್ಳಬೇಡಿ. ಆಹಾರದಲ್ಲಿ ಯಾವ ಪದಾರ್ಥವಾಗಲಿ ಆಹಾರವೇ ಪರಮಾನ್ನ ಆಗುತ್ತದೆ. ಆದ್ದರಿಂದ ಎಲ್ಲಾ ರುಚಿಗಳ ಅಡಿಗೆಗಳನ್ನು ಅನ್ನವೆಂದು ತಿಳಿಯಬೇಕು. ಅನ್ನಕ್ಕಿಂತಲೂ ಬೇರೆಯಾಗಿರುವುದು, ಅಂದರೆ ಅನ್ನವಲ್ಲದ ಆಹಾರ ಆತ್ಮ ಜ್ಞಾನ. ಆಹಾರವನ್ನು ಅನ್ನವೆಂದು, ದೈವ ಜ್ಞಾನವನ್ನು ಪರಮಾನ್ನವೆಂದು ಪೂರ್ವದಲ್ಲಿ ಹಿರಿಯರನ್ನುತ್ತಿದ್ದರು. ಜೀವಾತ್ಮ ಪ್ರತಿ ದಿನ ಎಷ್ಟು ಆಹಾರಗಳು ತಿಂದರೂ. ಎಷ್ಟು ಅನುಭೂತಿಗಳು ಇದ್ದರೂ ತೃಪ್ತಿ ಇಲ್ಲ. ಜೀವಾತ್ಮ ಪರಮಾನ್ನವನ್ನು ಅಂದರೆ ಜ್ಞಾನವನ್ನು ತಿಂದರೇನೆ ತೃಪ್ತಿ ಹೊಂದುವನು. ಜೀವಾತ್ಮನು ಯಾವಾಗಲೂ ಅನ್ನ ತಿಂದರೂ ಆಗಾಗ ಪರಮಾನ್ನ ತಿಂದರೇನೆ ತೃಪ್ತಿ ಹೊಂದುವನು. ಪರಮಾನ್ನ ಸಿಗದ ಜೀವನ ಜೀವನವೇ ಅಲ್ಲ. ಪರಮಾನ್ನ ಇಲ್ಲದ ಆಹಾರ ಜೀವಾತ್ಮನಿಗೆ ಆಹಾರವೇ ಅಲ್ಲ.

**758. (10) ಮೂತಿಗೆ ಮೀಸೆ, ಕಾಲಿಗೆ ಉಗುರು ಇದ್ದಹಾಗೇ ನಿನಗೇನಾದರೂ ಇದೆಯಾ?**

ಉ. ಕರ್ಮವಿದೆ.

**ವಿವರ :** ಜೀವಾತ್ಮನಿಗೆ ಕರ್ಮ ಬೆಳೆಯುತ್ತಿದೆ. ಮೂತಿಗೆ ಮೀಸೆ ಬೆಳೆದಹಾಗೆ ಜೀವಾತ್ಮನಿಗೆ ಕರ್ಮ ಬೆಳೆಯುತ್ತಾ ಹೋಗುತ್ತಿದೆ. ಮೀಸೆಗಳನ್ನು ಕತ್ತಿರಿಸಿದರೂ ಮತ್ತೆ ಬೆಳೆದ ಹಾಗೆ ಕರ್ಮವನ್ನು ಜೀವಾತ್ಮ ಅನುಭವಿಸಿದರು ತಿರುಗಿ ಬೆಳೆಯುತ್ತಲೇ ಇದೆ. ಜೀವಾತ್ಮನಿಗೆ ಅನುಭವರೀತ್ಯಾ ಕಡಿಮೆ ಆಗುತ್ತಿದ್ದರೂ ಬೆಳೆಯುತ್ತಿರುವುದು ಕರ್ಮವೆಂದು ತಿಳಿಯಬೇಕು.

## ಜ್ಞಾನ ಪರೀಕ್ಷೆ

**ಚೆನ್ನೇಕೊತ್ತಪಲ್ಲಿ** **ದಿನಾಂಕ–05–04–2001**

**759. (1) ನಿನಗಿರುವ ಹೆಸರು ಯಾವುದು?**

ಉ. ಜೀವಾತ್ಮ.

**ವಿವರ :** ಸಾಮಾನ್ಯವಾಗಿ ಹೆಸರೆಂದಕೂಡಲೆ ವ್ಯವಹಾರಿಕ ಹೆಸರೆಂದುಕೊಂಡು ರಂಗಯ್ಯ ಎಂದೋ, ರಾಮಯ್ಯ ಎಂದೋ, ತಾಯಿ ತಂದೆಯರು ಇಟ್ಟ ಹೆಸರು ಹೇಳಬಾರದು. ಅಂತಹ ಹೆಸರುಗಳು ಜನ್ಮಕ್ಕೊಂದು ಇರುತ್ತವೆ. ಜನ್ಮ ಜನ್ಮಕ್ಕೂ ಬದಲಾಗುವ ಹೆಸರು ನಿನ್ನದಲ್ಲ, ನಿನ್ನ ಶರೀರದೆಂದುಕೊಳ್ಳಬೇಕು. ಏಕೆಂದರೆ ಶರೀರ ಬದಲಾದಂತೆಲ್ಲಾ ಹೆಸರು ಬದಲಾಗುತ್ತಿದೆ. ಆದ್ದರಿಂದ ಜನ್ಮ ಜನ್ಮಕ್ಕೂ ಬದಲಾಗುವ ಹೆಸರು ನಿನ್ನದಲ್ಲ. ಶಾಶ್ವತವಾದ ಯಾವ ಜನ್ಮಕ್ಕೂ ಬದಲಾಗದ ಹೆಸರೊಂದು ಇದೆ. ಅದೇ ನಿನಗೆ ಶಾಶ್ವತವಾಗಿರುವ ಹೆಸರು. ಆ ಹೆಸರು ಜೀವಾತ್ಮ ಎಂದು ಕರೆಯಲಾಗುತ್ತಿದೆ. ನಿನ್ನ ಶಾಶ್ವತ ಹೆಸರು ಜೀವಾತ್ಮ ಎಂದು ತಿಳಿದುಕೋ.

**760. (2) ನಿನಗಿರುವ ಆಯಸ್ಸು ಎಷ್ಟು?**

ಉ. 108 ಕೋಟಿ ಸಂವತ್ಸರಗಳು.

**ವಿವರ :** ಶರೀರಕ್ಕೆ ಆಯಸ್ಸಾದರೇ ಸುಮಾರು ನೂರು ವರ್ಷಗಳೆಂದೋ 80 ಅಥವಾ 70 ಎಂದೋ ಹೇಳಬಹುದು. ಇಲ್ಲಿ ಕೇಳಿರುವುದು ನಿನಗೆ ಅಂದರೆ ಜೀವಾತ್ಮಕ್ಕೆ. ಜೀವಾತ್ಮನ ಆಯುಸ್ಸು ಪ್ರಪಂಚವಿರುವವರೆಗು ಇರುತ್ತದೆ. ಆದ್ದರಿಂದ ಪ್ರಪಂಚವೊಂದರ ಆಯಸ್ಸೇ ಜೀವಾತ್ಮನಿಗೂ ಅನ್ವಯಿಸುವುದು. ಭಗವದ್ಗೀತೆ ಪ್ರಕಾರ ಪ್ರಪಂಚ ಆಯುಸ್ಸು ಸಾವಿರ ಯುಗಗಳು ಅಂದರೆ 108 ಕೋಟಿ ಸಂವತ್ಸರಗಳು. ಜೀವಾತ್ಮನ ಆಯುಸ್ಸು ಸಹ 108 ಕೋಟಿ ಸಂವತ್ಸರಗಳೆಂದು ಹೇಳಬಹುದು.

**761. (3) ನಿನಗೆ ಸ್ವಂತ ಊರು ಯಾವುದು?**

ಉ. ಮೋಕ್ಷ.

**ವಿವರ :** ಸೃಷ್ಟಿ ಆದಿಯಲ್ಲಿ ನೀನು ನಾನು ಎಲ್ಲರೂ ಒಂದೇ ಊರಿನಿಂದ ಹೊರಟು ಬಂದಿದ್ದೇವೆ. ಆದಿಯಲ್ಲಿ ಪರಮಾತ್ಮ, ಪರಮ ಪದವಿ, ಮೋಕ್ಷ ಎನ್ನುವ ದೈವ ಸ್ಥಾನದಿಂದ ದೇವರ ಸಂಕಲ್ಪದಿಂದ ಎಷ್ಟೋ ಜನ ಜೀವಿಗಳಾಗಿ ಹುಟ್ಟಿ ಬಂದಿದ್ದೇವೆ. ಮೊದಲನೆಯ ಸ್ಥಾನ ಮೋಕ್ಷಸಾಮ್ರಾಜ್ಯ. ಇದನ್ನನುಸರಿಸಿ ನಿನಗು, ಮತ್ತು ಎಲ್ಲರಿಗೂ ಸ್ವಂತ ಊರು ಮೋಕ್ಷವೆಂದು ಹೇಳಬೇಕು.

**762. (4) ನಿನಗೆ ತಂದೆ ಇದ್ದಾನಾ ಯಾರು?**

ಉ. ಇದ್ದಾನೆ. ಪರಮಾತ್ಮ.

**ವಿವರ :** ಸರ್ವ ಜೀವರಾಶಿಗಳಿಗೂ ಪರಮಾತ್ಮ ತಂದೆ, ಪ್ರಕೃತಿ ತಾಯಿಯೆಂದು ಭಗವದ್ಗೀತೆಯಲ್ಲಿ ಹೇಳಲಾಗಿದೆ. ಸರ್ವ ಜೀವರಾಶಿಗಳಲ್ಲಿ ಮನುಷ್ಯರಾದ ನಾವು ಸಹ ಪ್ರಕೃತಿ ಪರಮಾತ್ಮರ ಮಕ್ಕಳೇ. ಒಂದು ಜನ್ಮಕ್ಕೆ ತಾಯಿ ತಂದೆಯರು ಭೂಮಿ ಮೇಲೆ ಮನುಷ್ಯರು ಆದಾಗ, ಎಲ್ಲಾ ಜನ್ಮಗಳಿಗೆ ತಾಯಿ ತಂದೆಯರು ಪರಮಾತ್ಮ ಪ್ರಕೃತಿ. ನನಗೆ ತಂದೆ ಪರಮಾತ್ಮನೇ, ನಿನಗೂ ಸಹ ತಂದೆ ಪರಮಾತ್ಮನೇ.

**763. (5) ನಿನಗೆ ಆಸ್ತಿ ಇದೆಯಾ, ಯಾವುದು ಎಷ್ಟು?**

ಉ. ಇದೆ. ಜ್ಞಾನ. ಎಷ್ಟೆನ್ನುವುದು ತಿಳಿದಿಲ್ಲ.

**ವಿವರ :** ಪ್ರತಿ ಜೀವರಾಶಿಗೂ ಆಸ್ತಿ ಜ್ಞಾನವೇ. ನಾನು ಸ್ವಲ್ಪ ಜ್ಞಾನವನ್ನು ಸಂಪಾದಿಸಿಕೊಂಡಿದ್ದೇನೆ, ಆದ್ದರಿಂದ ನನಗೆ ಸ್ವಲ್ಪ ಆಸ್ತಿ ಇದೆ. ಆದರೆ ಎಷ್ಟು ಇರುವುದು ಹೇಳುವುದಕ್ಕೆ ಆಗುವುದಿಲ್ಲ. ಆಸ್ತಿ ಎಂದರೆ ಭೌತಿಕ ತಾಯಿ ತಂದೆಯರು ಸಂಪಾದಿಸಿ ಕೊಟ್ಟಿರುವ ಆಸ್ತಿಯೆಂದುಕೊಳ್ಳಬಾರದು. ಆಧ್ಯಾತ್ಮಿಕ ರೀತ್ಯ ನೋಡಿದರೆ ಪ್ರಪಂಚ ಆಸ್ತಿ ಒಂದೇ ಜನ್ಮದಲ್ಲಿ ಇದ್ದು ಮರಣದೊಂದಿಗೆ ಹೋಗುತ್ತಿದೆ. ಜ್ಞಾನವೆನ್ನುವ ಆಸ್ತಿ ಮರಣದೊಂದಿಗೆ ಹೋಗದೆ ನಿನ್ನಿಂದೆ ಬರುವುದು. ಪ್ರಪಂಚ ಆಸ್ತಿಯನ್ನು ಯಾರಾದರೂ ತೆಗೆದುಕೊಳ್ಳಬಹುದು. ಜ್ಞಾನಧನವೆನ್ನುವ ಆಸ್ತಿಯನ್ನು ಯಾರೂ ತೆಗೆದುಕೊಳ್ಳಲಾರರು. ಹೊರಗಿನ ಆಸ್ತಿ ಶರೀರಕ್ಕೆ ಜೀವಾತ್ಮಕ್ಕಲ್ಲ. ಒಳಗಿನ ಜ್ಞಾನ ಎನ್ನುವ ಆಸ್ತಿ ಜೀವಾತ್ಮಕ್ಕೇ ಸೇರುವುದು. ಆದ್ದರಿಂದ ನಿನ್ನ ಆಸ್ತಿ ನನ್ನ ಆಸ್ತಿ ಎಲ್ಲರ ಆಸ್ತಿ ಜ್ಞಾನವೇ.

**764. (6) ನಿನಗೆ ಮಕ್ಕಳಿರುವರಾ?**

ಉ. ಇಲ್ಲ.

**ವಿವರ :** ಮಕ್ಕಳೆಂದರೆ ಪ್ರಪಂಚಪರವಾಗಿ ವೀರ್ಯಕ್ಕೆ ಹುಟ್ಟಿದವರು ಬಿಂದು ಪುತ್ರರೆಂದು, ಜ್ಞಾನ ವಿವರವಾಗಿ ನಾದಪುತ್ರರೆಂದು ಎರಡು ವಿಧಗಳಾಗಿ ಇದ್ದಾರೆ. ಪ್ರಪಂಚಪರವಾಗಿ ಯಾರಿಗಾದರೂ ಎಷ್ಟಾದರೂ ಮಕ್ಕಳಿರಬಹುದು. ಅವರನ್ನು ಶರೀರ ಪುತ್ರರೆಂದು ಕರೆಯುತ್ತೇವೆ. ಜ್ಞಾನದಿಂದ ಹುಟ್ಟಿದವರನ್ನು ಅಂದರೆ ಜ್ಞಾನ ಕೇಳಿ ತಯಾರಾದ ಶಿಷ್ಯರನ್ನು

ನಾದ ಪುತ್ರರೆನ್ನುತ್ತೇವೆ. ನನಗೆ ಬಿಂದುಪುತ್ರರಿದ್ದಾರೆ ಆದರೆ, ನಾದಪುತ್ರರಿಲ್ಲವೆಂದು ಹೇಳುತ್ತಿದ್ದೇವೆ.

**765. (7) ನಿನಗೆ ಸ್ನೇಹಿತರಿದ್ದಾರಾ ಯಾರು?**

ಉ. ಇದ್ದಾರೆ. ಆತ್ಮ, ಪರಮಾತ್ಮರು.

**ವಿವರ :** ತನ್ನೊಂದಿಗೆ ಶರೀರದಲ್ಲಿ ಇರುವವರು ಇಬ್ಬರೇ. ಆತ್ಮ ಪರಮಾತ್ಮ ಎನ್ನುವವರು. ಜೀವಾತ್ಮನೆಲ್ಲಿದ್ದರೆ ಅಲ್ಲೇ ಇದ್ದು, ತನ್ನಂತೆ ಅವರು ಸಹ ಆತ್ಮಗಳೇ ಆಗುವುದರಿಂದ, ಇಬ್ಬರನ್ನು ಸ್ನೇಹಿತರೆನ್ನುತ್ತಿದ್ದೇವೆ. ಹಿತವನ್ನು ಕೋರುವವರು ಸ್ನೇಹಿತರು, ಪ್ರಕೃತಿ ಜೀವಾತ್ಮನಿಗೆ ಕಡಕನ್ನು ಮಾಡುತ್ತಿದೆ. ಆದ್ದರಿಂದ ಪ್ರಕೃತಿ ಶತ್ರುವಾಗಿರುವಾಗ, ಜೀವಾತ್ಮನಿಗೆ ಹಿತವನ್ನು ಕೋರುವವರು ಆತ್ಮ ಪರಮಾತ್ಮರು, ಅವರ ಜ್ಞಾನದಿಂದ ಜೀವಾತ್ಮನಿಗೆ ಮುಕ್ತಿಹೊಂದುವಹಾಗೆ ಮಾಡುವವರು ಆದ್ದರಿಂದ ಅವರನ್ನು ಸ್ನೇಹಿತರೆನ್ನಬಹುದು.

**766. (8) ನಿನಗೆ ಬಂಧುಗಳಿದ್ದಾರಾ? ಯಾರು?**

ಉ. ಇದ್ದಾರೆ. ಗುಣಗಳು.

**ವಿವರ :** ಬಂಧಿಸುವವರು ಬಂಧುಗಳು ಎಂದು ಅರ್ಥ. ಶರೀರ ಬಂಧುಗಳು ಬೇರೆ, ಆತ್ಮ ಬಂಧುಗಳು ಬೇರೆ. ಶರೀರಕ್ಕೆ ಬಂಧುಗಳು ಎಲ್ಲರಿಗೂ ಇದ್ದಾರೆ. ಹಾಗೆಯೇ ಆತ್ಮ ಬಂಧುಗಳು ಎಲ್ಲರಿಗೂ ಇದ್ದಾರೆ. ಶರೀರ ಬಂಧುಗಳು ಹೊರಗಿನವರು, ಆತ್ಮ ಬಂಧುಗಳು ಒಳಗಿನವರು. ಹೊರಗಿನ ಬಂಧುಗಳು ಅಮ್ಮ, ಅಪ್ಪ, ಅತ್ತೆ, ಮಾವ, ಅಜ್ಜಿ, ತಾತ ಎನ್ನುವ ಆರು ವಿಧಗಳಾಗಿ ಇದ್ದಾರೆ. ಹಾಗೇ ಒಳಗಿನ ಬಂಧುಗಳು ಶತ್ರುವರ್ಗಗಳು ಆರು ಮಿತ್ರವರ್ಗಗಳು ಆರು ಇವೆ. ಇಲ್ಲಿ ಶರೀರಕ್ಕೆ ಅಲ್ಲದೆ ನಿನಗೆ ಎಂದು ಕೇಳಿದ್ದಾರೆ ಆದ್ದರಿಂದ ಒಳಗಿನ ಗುಣಗಳೇ ಜೀವಾತ್ಮನಿಗೆ ಬಂಧುಗಳೆಂದು ಹೇಳಬೇಕು.

**767. (9) ನಿನಗೆ ವಾಹನವಿದೆಯಾ? ಯಾವುದು? ಚಾಲಕ ಯಾರು?**

ಉ. ಇದೆ. ಶರೀರ. ಆತ್ಮ.

**ವಿವರ :** ಪ್ರತಿ ಜೀವಾತ್ಮನಿಗೂ ಶರೀರ ವಾಹನವಾಗಿದೆ. ಹೊರಗಿನ ಶರೀರಕ್ಕೆ ವಾಹನವಿರಬಹುದು ಇರದೇ ಹೋಗಬಹುದು. ಶರೀರ ಮಾತ್ರ ಜೀವಾತ್ಮನಿಗೆ ವಾಹನವಾಗಿದೆ. ಶರೀರವಾಹನವನ್ನು ನಡೆಸುವವನು ಒಳಗಿರುವ ಆತ್ಮ. ಶರೀರ ರಥದಲ್ಲಿ

ಜೀವಾತ್ಮ ಕುಳಿತಿರುವಾಗ, ಆತ್ಮ ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳೆನ್ನುವ ಹತ್ತು ಕುದುರೆಗಳನ್ನು ಓಡಿಸುತ್ತಾ, ರಥವನ್ನು ನಡೆಸುತ್ತಿದೆ.

**768. (10) ನಿನಗೆ ಮನೆ ದೇವರಿದ್ದಾನಾ ಯಾರು?**

ಉ. ಇದ್ದಾನೆ. ಆತ್ಮ.

**ವಿವರ :** ಪ್ರತಿ ಜೀವರಾಶಿಗೂ ಶರೀರ ನಿವಾಸವಾಗಿದೆ. ಆದ್ದರಿಂದ ಜೀವಾತ್ಮನಿಗೆ ಶರೀರ ಮನೆಯಂತದ್ದು. ಪ್ರತಿ ಶರೀರದಲ್ಲಿಯೂ ಶರೀರಕ್ಕೆ ಶಕ್ತಿ ಕೊಟ್ಟು ಶರೀರವನ್ನು ನಡೆಸುವುದು ಆತ್ಮ. ಆತ್ಮ ಶರೀರ ಒಳಗಿನ ದೇವರಾದಾಗ, ಶರೀರದೊಳಗಿನ ದೇವರಿಗೂ ಸಹ ದೇವರು ಪರಮಾತ್ಮ. ಮನೆ ದೇವರು ಯಾರು ಎಂದಾಗ ಆತ್ಮವೇ ಮನೆ ದೇವರೆಂದು ಹೇಳಬೇಕು. ಮನೆ ದೇವರೆಂದರೆ ಹೊರಗಿರುವ ನರಸಿಂಹಸ್ವಾಮಿ, ರಂಗನಾಯಕ ಸ್ವಾಮಿ, ಆಂಜನೇಯಸ್ವಾಮಿ ಎನ್ನಬಾರದು. ಹೊರಗಿನ ಮನೆ ಹಳೆ ಗುಡಿಸಲು ಆಗಬಹುದು, ಗಟ್ಟಿ ಮನೆ ಆಗಬಹುದು, ಮಹಡಿ ಆಗಬಹುದು. ಆದರೆ ಒಳಗಿನ ಮನೆ ಶರೀರ ಮಾತ್ರವೇ. ಅದರಲ್ಲಿ ದೇವರು ಆತ್ಮ ಮಾತ್ರವೇ.

## ಜ್ಞಾನ ಪರೀಕ್ಷೆ

**ಚಿನ್ನಪೊಲಮಡ** **ದಿನಾಂಕ–07–05–2001**

**769. (1) ದೇವರಹತ್ತಿರವಾಗಲಿ, ಮತ್ತೆಲ್ಲಾಗಲಿ ಗೋವಿಂದ ಎನ್ನುವಾಗ ಎರಡುಬಾರಿ ಹೇಳುತ್ತಾರೆ ಏಕೆ?**

ಉ. ನನಗೆ ಈ ಜಗತಿನಲ್ಲಿ ಬೇಕಾಗಿರುವವು ಏನೂ ಇಲ್ಲ ಎಂಬ ಅರ್ಥದಿಂದ ಗೋವಿಂದಾ.... ಎಂದೂ, ಹಾಗೇ ಶರೀರದೊಳಗೆ ನನ್ನನ್ನು ಅಂಟಿಕೊಂಡು ಕರ್ಮ ಏನೂ ಇಲ್ಲ ಎಂಬ ಅರ್ಥಬರುವಹಾಗೆ ಗೋ.... ವಿಂದ ಎನ್ನುತ್ತಿದ್ದರು.

**ವಿವರ :** ಎಲ್ಲಾದರೂ ಗೋವಿಂದ ಎಂಬ ಪದ ಎರಡು ಸಲ ಉಚ್ಚರಿಸುವುದೇ ನಡೆಯುತ್ತಿದೆ. ಈ ಪದ ಎರಡು ಸಲ ಉಚ್ಚರಿಸುವುದರಲ್ಲಿಯೂ ಸಹ ಪದ ಪದಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಮೊದಲು ಉಚ್ಚರಿಸುವ ಪದದಲ್ಲಿ ಗೋವಿಂದಾ.... ಎನ್ನುವ ದೀರ್ಗವಿರುತ್ತದೆ. ಎರಡನೆಯ ಬಾರಿ ಉಚ್ಚರಿಸುವ ಪದದಲ್ಲಿ ಗೋ....ವಿಂದ ಎನ್ನುವ

ದೀರ್ಗವಿರುತ್ತದೆ. ವಾಸ್ತವಕ್ಕೆ ಗೋವಿಂದಾ ಎಂಬ ಪದದಲ್ಲಿ ಒಂದೇ ಅರ್ಥವಿದ್ದರೂ ಎರಡು ಬಾರಿ ಉಚ್ಚರಿಸುವುದೇನೂ? ಎನ್ನುವುದು ಪ್ರಶ್ನೆ. ಅಷ್ಟೇ ಅಲ್ಲದೆ ಮೊದಲ ಗೋವಿಂದಾ.......ದಲ್ಲಿ ದಾ ಅನ್ನು ಬಹಳ ದೀರ್ಗಿಸುವುದು, ಎರಡನೆಯ ಸಲ ಎನ್ನುವ ಗೋ... ವಿಂದಾದಲ್ಲಿ ಗೋ ಅನ್ನು ದೀರ್ಗಿಸುವುದರಲ್ಲಿಯೂ ಸಹ ವಿಶೇಷವೇನೋ ಇರುತ್ತದೆ, ಅದು ಏನೆನ್ನುವುದು ಸಹ ಪ್ರಶ್ನೆಯೇ. ಇವುಗಳ ಉತ್ತರಕ್ಕೋಸ್ಕರ ಹುಡುಕಿದರೆ ಕೃತಯುಗದಲ್ಲಿ ಈ ಪದ ಇರುವಹಾಗೆ ಆ ಕಾಲದಲ್ಲಿಯೇ ಮಹರ್ಷಿಗಳು ಸಹಿತ ಗೋವಿಂದಾ ಪದವನ್ನು ಉಚ್ಚರಿಸುವ ಹಾಗೆ ಚರಿತ್ರೆಯಲ್ಲಿ ತಿಳಿಯುತ್ತಿದೆ. ಆ ದಿನವೇ ತಿಳಿದ ಹಿರಿಯರು ಗೋವಿಂದ ಎನ್ನುವ ಪದಕ್ಕೆ ಅರ್ಥವನ್ನು ಜೋಡಿಸಿ, ಆ ಅರ್ಥದ ಪ್ರಕಾರವೇ ಎರಡು ಸಲ ಗೋವಿಂದ ಪದವನ್ನು ಉಚ್ಚರಿಸುವಹಾಗೆ ಅದೂ ಒಂದಕ್ಕೊಂದು ಸ್ವಲ್ಪ ವ್ಯತ್ಯಾಸವಿರುವಹಾಗೆ ತಿಳಿಸಿ ಇಟ್ಟಿದ್ದಾರೆ. ಆದಿನ ಅವರು ಏನು ಮಾಡಿದರೂ ಭವಿಷ್ಯತ್ತಿನಲ್ಲಿ ಮಾನವರಿಗೆ ಜ್ಞಾನ ಸಿಗುವಹಾಗೆ ಯೋಚಿಸಿ ಮಾಡುತ್ತಿದ್ದರು. ಶಾಶ್ವತವಾಗಿ ಜ್ಞಾನವನ್ನು ಪ್ರಬೋಧಿತ ಮಾಡುವ ಆದಿನ ಅವರ ಉದ್ದೇಶವೇನೋ ಅಲ್ಲಿಗೇ ಹೋಗಿ ಅವರನ್ನೇ ಕೇಳಿ ತಿಳಿದುಕೊಳ್ಳೋಣ.

"ಗೋವಿಂದ" ಎನ್ನುವ ಪದದಲ್ಲಿ ಇನ್ನಿಲ್ಲ ಎಂದೂ, ಅಥವಾ ಎಲ್ಲಾ ಮುಗಿದು ಹೋಗಿದೆ ಎಂದೂ ಅರ್ಥವನ್ನು ಜೋಡಿಸಿದ್ದಾರೆ. ತಿಳಿದವರಾಗಲಿ, ತಿಳಿಯದವರಾಗಲಿ ಶವವನ್ನು ತೆಗೆದುಕೊಂಡು ಹೋಗುವಾಗ ಅದೇ ಅರ್ಥದಿಂದಲೇ ಕರೆಯುತ್ತಿದ್ದಾರೆ. ತಿಳಿಯದವರು ಹೇಳಬೇನ್ನುವ ಪದ್ಧತಿಯಂತೆ ಹೇಳಿದರೂ ಸಂದರ್ಭ ಅದೇಯೆಂದು ಯೋಚಿಸುವವರಿಗೆಲ್ಲಾ ತಿಳಿಯಬಲ್ಲದು. ಹಾಗೇ ಜೂಜಿನಲ್ಲಿ ಇರುವುದೆಲ್ಲಾ ಕಳೆದುಕೊಂಡಾಗ ಸಹ ಗೋವಿಂದ ಪದವನ್ನೇ ಬಳಸುತ್ತಿದ್ದಾರೆ. ಅಲ್ಲಿಯೂ ಸಹ ಮುಗಿದುಹೋಗಿದೆ ಎನ್ನುವ ಸಂದರ್ಭವೇ ಇದೆ. ಈಗ ಯಾರು ಎಷ್ಟು ಸಂದರ್ಭಗಳಲ್ಲಿ ಬಳಸಿದರೂ, ಪೂರ್ವದಲ್ಲಿ ದೇವರ ಹತ್ತಿರ ಮಾತ್ರ ಗೋವಿಂದ ಎನ್ನುತ್ತಿದ್ದರು. ಆದಿನ ದೇವರ ಸನ್ನಿಧಿಯಲ್ಲಿ ಅಂದರೆ ದೇವಾಲಯಗಳಲ್ಲಿ ಪ್ರತಿಮೆ ಮುಂದೆ ನನಗೆ ಈ ಜಗತಿಯಲ್ಲಿ ಬೇಕಾಗಿರುವುದು ಏನೂ ಇಲ್ಲ ಎಂಬ ಅರ್ಥದಿಂದ ಗೋವಿಂದಾ.... ಎಂದೂ, ಹಾಗೇ ಶರೀರದೊಳಗೆ ನನ್ನನ್ನು ಅಂಟಿಕೊಂಡಿರುವ ಕರ್ಮವು ಏನೂ ಇಲ್ಲ ಎಂದು ಅರ್ಥಬರುವಹಾಗೆ ಗೋ.... ವಿಂದ ಎನ್ನುತ್ತಿದ್ದರು. ಅಂದರೆ ಬಾಹ್ಯವಾಗಿರುವ ಅವುಗಳ ಮೇಲೆ ಆಸೆ ಮೊದಲಾದ ಯಾವ ಗುಣಗಳ ಕೆಲಸ ಇಲ್ಲವೆಂದು, ಹಾಗೇ ಶರೀರಾಂತರ್ಗತ ದಲ್ಲಿ ಅಂಟಿಕೊಂಡ ಕರ್ಮ ಯಾವುದು ಇಲ್ಲವೆಂದು ಎರಡು ಗೋವಿಂದಗಳನ್ನು ಸ್ವಲ್ಪ

ವ್ಯತ್ಯಾಸದಿಂದ ಹೇಳುತ್ತಿದ್ದರು. ಇನ್ನೂ ಅರ್ಥವಾಗಬೇಕೆಂದರೆ ಹೊರಗಿನ ಸಂಬಂಧ ಇಲ್ಲದೆ ಬ್ರಹ್ಮಯೋಗ, ಒಳಗಿನ ಸಂಬಂಧ ಇಲ್ಲದೆ ಕರ್ಮಯೋಗ ಹೊಂದಿ ಇದ್ದೇನೆನ್ನುವ ಅರ್ಥದಿಂದ ಬಾಹ್ಯವಾಗಿ ಒಂದು ಗೋವಿಂದ, ಅಂತರಂಗವಾಗಿ ಒಂದು ಗೋವಿಂದ ಎನ್ನುತ್ತಿದ್ದರು.

ಎರಡು ಯೋಗಗಳೇ ಆದರೂ ಅವುಗಳಲ್ಲಿ ಸ್ವಲ್ಪ ವ್ಯತ್ಯಾಸ ಇರುವುದರಿಂದ ಗೋವಿಂದ ಎನ್ನುವ ಮಾತಲ್ಲಿ ಸಹ ಸ್ವಲ್ಪ ವ್ಯತ್ಯಾಸ ತೋರಿಸಬೇಕೆಂದು ಆದಿನದ ಹಿರಿಯರೇ ಹೇಳಿದ್ದಾರೆ. ಎರಡು ಪದ್ಧತಿಗಳು ಕರ್ಮ ಇನ್ನು ಇಲ್ಲವೆಂದು ತಿಳಿಸುವವೇ ಆದರೂ, ಅವು ಬೇರೆಬೇರೆಯೆಂದು ತಿಳಿಯುವಹಾಗೆ ಒಂದಕ್ಕೆ ಕೊನೆಯಲ್ಲಿ ದೀರ್ಘ, ಮತ್ತೊಂದಕ್ಕೆ ಮೊದಲಿನಲ್ಲಿ ದೀರ್ಘ ಇಟ್ಟಿದ್ದಾರೆ. ಎರಡು ಸಲ ಉಚ್ಚರಿಸುವುದರಲ್ಲಿ ಅದು ಸ್ವಲ್ಪ ವ್ಯತ್ಯಾಸದಿಂದ ಹೇಳುವುದು ಎಲ್ಲರಿಗೂ ತಿಳಿದ ವಿಷಯವಾಗಿ ಆದಿನ ಇರುತ್ತಿತ್ತು. ಈಗಿನ ಕಾಲಕ್ಕೆ ಅದು ಅರ್ಥಹೀನವಾಗಿ ಹೋಗಿದೆ. ಹೇಳುವವರಿಗೆ ಅದರ ವಿಷಯ ಪೂರ್ತಿ ತಿಳಿಯದೆ ಹೋಗಿರುವುದರಿಂದ ಅದರಲ್ಲಿನ ಜ್ಞಾನ ಸಂದೇಶ ಪ್ರಬೋಧಿತವಾಗದೆ ಹೋಗಿದೆ. ಆದಿನ ಇಂದೂ ಧರ್ಮಗಳಲ್ಲಿ ಮುಖ್ಯವಾದ ಧರ್ಮವಾಗಿ ಇರುವ ಗೋವಿಂದಾ ಈದಿನ ಅದರ ಬೆಲೆಯನ್ನು ಕಳೆದುಕೊಂಡಿದೆ. ಅರ್ಥವಿಲ್ಲದಿದ್ದರೂ, ಆಚರಣಾ ರೂಪದಲ್ಲಿ ಗೋವಿಂದ ಉಳಿದಿದ್ದರೂ, ಗುರುವು ಹತ್ತಿರ ಸರ್ವವೂ ತಿಳಿದುಕೊಂಡಿದ್ದೇವೆ ಎಂದುಕೊಳ್ಳುವವರಿಗೆ, ನಮ್ಮ ಗುರುವು ದೊಡ್ಡವನೆಂದು ಹೇಳಿಕೊಳ್ಳುವವರಿಗೆ, ಬಹಳ ಸಂವತ್ಸರಗಳು ಗುರುವು ತಿಳಿಸಿದ ವಿಷಯಗಳೆಲ್ಲವೂ ಜೀರ್ಣಿಸಿ ಕೊಂಡಿದ್ದೇವೆನ್ನುವವರಿಗೆ, ಕೊನೆಗೆ ನಮ್ಮ ಶಿಷ್ಯರಿಗು ಸಹ ಗೋವಿಂದ ಪದ ಎರಡು ಸಲ ಹೇಳುವುದಾಗಲಿ, ಹೇಳುವುದರಲ್ಲಿ ಅವುಗಳ ವ್ಯತ್ಯಾಸ ತಿಳಿಯದೆ ಹೋಗುವುದಾಗಲಿ, ನೋಡಿದರೆ ನೀವಿನ್ನೂ ಸಂಪೂರ್ಣ ಜ್ಞಾನಿಗಳೇ ಆಗಿಲ್ಲವೆನ್ನುವ ಬರೆ ಹಾಕಿದಂತಿದೆ. ಪೂರ್ತಿ ಜ್ಞಾನವೊಂದರ ಆಚರಣೆ ಇಲ್ಲದೆ ಹೋಗಿದ್ದರೂ, ಕನಿಷ್ಟ ಪೂರ್ತಿಯಾಗಿ ಜ್ಞಾನವಾದರೂ ತಿಳಿದುಕೊಳ್ಳಬೇಕೆಂದು ಕೋರುತ್ತಿದ್ದೇವೆ.

**770. (2) ತಾಡು ಪೇಡು ಇಲ್ಲದವನು ಯಾವನಾದರೂ ಇದ್ದಾನಾ?**

ಉ. ಇದ್ದಾನೆ, ಪರಮಾತ್ಮ.

**ವಿವರ :** ಪೇಡು ಎಂದರೆ ಕಟ್ಟಿಗೆ ಎಂದು ಅರ್ಥ. ಕಟ್ಟಿಗೆಗಳು ಇದ್ದಾಗ ಅವುಗಳನ್ನು ಕಟ್ಟುವುದಕ್ಕೆ ತಾಡು (ಹಗ್ಗ) ಅವಶ್ಯಕ. ಕಟ್ಟಿಗೆ ಎಂದರೆ ಕಟ್ಟುವಂತದ್ದು. ಹಗ್ಗ ಎಂದರೆ

ಬಂಧಿಸುವ ಬಂಧ. ತಾಡು ಪೇಡು ಇಲ್ಲದವನು ಎಂದರೆ ಬಂಧಿಸುವುದಾಗಲಿ, ಬಂಧಿಸಲ್ಪಡುವುದಾಗಲಿ ಇಲ್ಲದವನೆಂದು ಅರ್ಥ. ಇನ್ನೂ ವಿವರವಾಗಿ ತಿಳಿದುಕೊಂಡರೇ ಬಂಧಿಸಲ್ಪಡುವ ಶರೀರವೆನ್ನುವ ಕಟ್ಟಿಗೆಯಾಗಲಿ, ಬಂದಿಸುವ ಕರ್ಮ ಎನ್ನುವ ಬಂಧವಾಗಲಿ ಇಲ್ಲದವನು. ಕರ್ಮ ಎನ್ನುವ ತಾಡು ಇಲ್ಲದವನು ಮತ್ತು ಶರೀರವೆನ್ನುವ ಪೇಡು ಇಲ್ಲದವನು ಪರಮಾತ್ಮ ಒಬ್ಬನೇ ಇದ್ದಾನೆ. ದೇವರನ್ನು ಮಾತ್ರ ತಾಡು ಪೇಡು ಇಲ್ಲದವನೆಂದು ಪೂರ್ವದಲ್ಲಿ ಕರೆಯುತ್ತಿದ್ದರು. ಈ ಕಾಲದಲ್ಲಿ ಆ ಮಾತು ಎಲ್ಲಾದರೂ ಇದ್ದರೂ ಮನುಷ್ಯರ ಬಗ್ಗೆ ಉಪಯೋಗಿಸುತ್ತಿದ್ದಾರೆ. ಇದು ದೇವರಿಗೇ ಹೊರತು ಯಾರಿಗೂ ಅರ್ಥ ಕೊಡುವುದಿಲ್ಲ.

**771. (3) ಬಿಕ್ಷಾಂದೇಹಿ ಎಂದು ಬೇಡುವ ಪರಿಸ್ಥಿತಿ ನಿನಗೆ ಯಾವಾಗಾದರೂ ಬಂದಿದೆಯಾ?**

ಉ. ಬಂದಿದೆ. ಗುರುವು ಕಾಣಿಸಿದಾಗ.

**ವಿವರ :** ಇದೇನು ಪ್ರಶ್ನೆಯೆಂದು ಕೆಲವರನ್ನಬಹುದು. ಕೂಳಿಗೋಸ್ಕರ ಕೋಟಿ ವಿದ್ಯೆಗಳೆನ್ನುವಂತೆ ಪ್ರಪಂಚದಲ್ಲಿ ಎಷ್ಟೋ ಕೆಲಸಗಳು ಮಾಡಿದರೂ ಕೊನೆಗೆ ಎಲ್ಲವೂ ಶರೀರ ಪೋಷಣೆಗೇ ಎಂದು ಹೇಳಬಹುದು. ನಾವು ಕೆಲಸ ಮಾಡಿ ಸಂಪಾದಿಸುವುದರಿಂದ ಬೇಡಿಕೊಂಡು ತಿನ್ನುವ ಪರಿಸ್ಥಿತಿ ಬಾರದೇ ಇರಬಹುದು. ಕೆಲವರು ಏನೂ ಸಂಪಾದಿಸಲಾರದೆ ಕೊನೆಗೆ ಬಿಕ್ಷಾಟನೆ ಮಾಡಬೇಕಾಗಿ ಬರುತ್ತಿದೆ. ಅಂತಹವರು ಬೇಡುವಾಗ "ಬಿಕ್ಷಾಂ ದೇಹಿ" ಎನ್ನುವುದು ಸಹ ಕೇಳಿದ್ದೇವೆ. ಅವರು ಹಸಿವಿನಿಂದ ಬಿಕ್ಷೆ ಕೇಳುವಾಗ, ಆಹಾರವಿಲ್ಲದೆ ಶರೀರ ಯಾತ್ರೆ ಸಾಗುವುದಿಲ್ಲ ಆದ್ದರಿಂದ ಬಿಕ್ಷೆ ಶರೀರಕ್ಕೋಸ್ಕರ ಎನ್ನುವಹಾಗೆ **"ಬಿಕ್ಷಾಂ ದೇಹ"** ಎನ್ನಬೇಕು.

ಪೂರ್ವ ಕಾಲದಲ್ಲಿ ಸಹ ಎರಡು ವಿಧಗಳಾಗಿ ಬೇಡುವವರಿದ್ದರು. ಕೆಲವರೇನೋ **"ಬಿಕ್ಷಾಂ ದೇಹ"** ಎಂದು ಮತ್ತೆ ಕೆಲವರೇನೋ **"ಬಿಕ್ಷಾಂ ದೇಹಿ"** ಎಂದು ಕೇಳುತ್ತಿದ್ದರು. ಹೊಟ್ಟೆ ಗೋಸ್ಕರವಾದರೆ ಬಿಕ್ಷಾಂ ದೇಹ ಎನ್ನುತ್ತಿದ್ದರು. ಅದೇ ಜೀವಾತ್ಮನ ಗೋಸ್ಕರವಾದರೆ ಬಿಕ್ಷಾಂ ದೇಹಿ ಎನ್ನುತ್ತಿದ್ದರು. ಬಡವರು, ಆಹಾರ ಇಲ್ಲದವರು, ಕೆಲಸ ಮಾಡದವರು ದೇಹಕ್ಕೋಸ್ಕರ ಬಿಕ್ಷೆ ಕೇಳುತ್ತಿದ್ದರು. ರಾಜರು ಧನಿಕರು ತಿಂಡಿ ಕೊರತೆ ಇಲ್ಲದವರು ಸಹ ಬಿಕ್ಷಾಂ ದೇಹಿ ಎಂದು ಬೇಡುತ್ತಿರುವರು. ತಿಂಡಿ ಇಲ್ಲದವರು ಬೀಧಿಗಳಲ್ಲಿ ಮನೆಗಳ ಹತ್ತಿರ ಬೇಡಿದರೆ, ತಿಂಡಿ ಇರುವವರು ಗುರುಗಳ ಹತ್ತಿರ ಹೋಗಿ ಬಿಕ್ಷಾಂ ದೇಹಿ ಎಂದು

ಜೀವಾತ್ಮನಿಗೆ ಬೇಕಾದ ಜ್ಞಾನವೆನ್ನುವ ಭಿಕ್ಷೆ ನೀಡಿರೆಂದು ಅದರಿಂದ ಕರ್ಮ ಎಂಬ ಹಸಿವು ಕಳೆದುಕೊಳ್ಳುತ್ತೇವೆಂದು ಕೇಳುತ್ತಿದ್ದರು. ಈ ವಿಧವಾಗಿ **"ಭಿಕ್ಷಾಂ ದೇಹ"** ಎಂದು ಮತ್ತು **"ಭಿಕ್ಷಾಂ ದೇಹಿ"** ಎಂದು ಕೇಳುವ ಎರಡು ವಿಧಗಳ ಭಿಕ್ಷುಕರಿದ್ದರು. ಒಂದು ವೇಳೆ ನೀನು ಗುರುವಿನ ಹತ್ತಿರಕ್ಕೆ ಹೋಗಿ ಜ್ಞಾನವನ್ನು ಕೇಳಿದ್ದರೇ ಎರಡನೇ ವಿಧದ ಭಿಕ್ಷುಕನಾಗುತ್ತೀಯಾ. ಇದನ್ನನುಸರಿಸಿ ಈ ಕಾಲದಲ್ಲಿ ಸಹ ಎರಡು ವಿಧಗಳ ಭಿಕ್ಷುಕರು ಇದ್ದಾರೆಂದು ತಿಳಿಯುತ್ತಿದೆ.

**772. (4) ನೀನು ಮಠದಲ್ಲಿದ್ದೀಯಾ, ಘಟದಲ್ಲಿದ್ದೀಯಾ?**

ಉ. ಮಠವೆನ್ನುವ ಊರಿನ ಘಟದಲ್ಲಿದ್ದೇನೆ.

**ವಿವರ :** ಯೋಗಿ ನಿವಾಸ ಮಾಡುವುದು ಮಠ ಎನ್ನುತ್ತಾರೆ. ಆದ್ದರಿಂದಲೇ ಕೆಲವು ಆಶ್ರಮಗಳಿಗೆ ಮಠಗಳೆಂದು ಹೆಸರಿದೆ. ಈಗ ಹೇಗಿದ್ದರೂ ಪೂರ್ವಕಾಲದಲ್ಲಿ ಮಠ ಎಂದರೆ ಮೋಕ್ಷ ಎಂದು ಅರ್ಥ. ಸತ್ತು ಹೋದ ವ್ಯಕ್ತಿಯನ್ನು ಕುರಿತು ಆತನು ಮಠಕ್ಕೆ ಹೋಗಿದ್ದಾನಾ? ಅಥವಾ ಘಟಕ್ಕೆ ಹೋಗಿದ್ದಾನಾ ಎನ್ನುತ್ತಿದ್ದರು. ಮಠ ಎಂದರೆ ನಿಜವಾದ ಅರ್ಥ ಮೋಕ್ಷ. ಹಾಗೇ ಘಟ ಎಂದರೆ ಸೋರೆ ಅಥವಾ ಶರೀರ. ಸೋರೆ ಯಾವಾಗಾದರೂ ಹೊಡೆದುಹೋಗುವುದೇ ಆದ್ದರಿಂದ ಯಾವಾಗಾದರೂ ಬಿದ್ದುಹೋಗುವ ಶರೀರವನ್ನು ಸೋರೆಗೆ ಹೋಲಿಸಿದ್ದಾರೆ. ಸೋರೆಯಲ್ಲಿನ ನೀರು ಎಷ್ಟು ಕಾಲವಿದ್ದರೂ ಹೊಡೆದುಹೋದ ದಿನದಂದು ಸೋರೆಯಿಂದ ಹೊರಗೆ ಹೋಗುವುದು ತಪ್ಪುವುದಿಲ್ಲ. ಹಾಗೇ ಶರೀರದಲ್ಲಿನ ಜೀವಾತ್ಮನು ಎಷ್ಟು ಕಾಲವಿದ್ದರೂ ಶರೀರ ಛಿದ್ರವಾದ ದಿನ ಅಥವಾ ಶರೀರ ವಯಸ್ಸಾಗಿ ಸತ್ತು ಹೋದ ದಿನ ಜೀವಾತ್ಮನು ಹೊರಗೆ ಹೋಗುವುದು ತಪ್ಪುವುದಿಲ್ಲ. ಆದ್ದರಿಂದಲೇ ಶರೀರವನ್ನು ಘಟ ಎಂದಿದ್ದಾರೆ. ಘಟಕ್ಕೆ ವ್ಯತಿರೇಖವಾದದ್ದು ಮಠ. ಒಂದು ಸಲ ಇದರೊಳಗೆ ಹೋದವನು ತಿರುಗಿ ಎಲ್ಲರಹಾಗೆ ಹುಟ್ಟುವುದಿಲ್ಲ. ಒಂದು ಸಲ ಅದರೊಳಗೆ ಹೋದರೆ ತಿರುಗಿ ಅವನು ಹೊರಗೆ ಬರುವುದಿಲ್ಲ. ಆದ್ದರಿಂದಲೇ ಘಟಕ್ಕೂ ಮಠಕ್ಕೂ ಎಷ್ಟೋ ವ್ಯತ್ಯಾಸವಿದೆ. ಇದನ್ನನುಸರಿಸಿ ನಾವೆಲ್ಲರೂ ಘಟದಲ್ಲೇ ಇದ್ದೇವೆ.

**773. (5) ಒಬ್ಬನಿಗೆ ಇಬ್ಬರು ಹೆಂಡತಿಯರಿದ್ದಾರೆ. ಮೊದಲನೆ ಹೆಂಡತಿ ಅಂದವಾಗಿದ್ದಾಳೆ, ಎರಡನೆಯ ಹೆಂಡತಿ ಅಂದವಿಲ್ಲ. ಗಂಡ ಮೊದಲನೆ ಹೆಂಡತಿಯನ್ನು ನೋಡಿ ನಿನಿಗೆ ಅಂದವಿದೆ ಚಂದವಿಲ್ಲ, ಎರಡನೆ ಹೆಂಡತಿಯನ್ನು ನಿನಗೆ ಚಂದವಿದೆ ಅಂದ ಇಲ್ಲ ಎಂದಿದ್ದಾನಂತೆ ಏಕೆ?**

ಉ. **ಅಂದ :** ಬಾಹ್ಯವಾಗಿ ಕಾಣಿಸುವುದು ಅಂದ, **ಚಂದ :** ಮೇಲ್ನೋಟಕ್ಕೆ ಕಾಣಿಸದೆ ಅಂತರಂಗದಲ್ಲಿ ಇರುವುದು ಜ್ಞಾನ.

**ವಿವರ :** ಈಡು ಜೋಡು, ಅಂದ ಚಂದ ಎನ್ನುವ ಪದಗಳು ಗಂಡ ಹೆಂಡತಿಯರ ಬಗ್ಗೆ ಬಳಸುತ್ತಲೇ ಇದ್ದೇವೆ. ಈಡು ಇಲ್ಲದಿದ್ದರೂ ಜೋಡಿ ಇರಬೇಕು ಎಂದೂ, ಅದೇ ವಿಧವಾಗಿ ಅಂದವಿಲ್ಲದಿದ್ದರೂ ಚಂದವಿರಬೇಕೆಂದು ಪೂರ್ವದಲ್ಲಿ ಹೇಳುತ್ತಿದ್ದರು. ಈ ಕಾಲದಲ್ಲಿ ಕೈಗೆ ಕೊಡುವ ಹಣವನ್ನು, ಮೇಲೆ ಕಾಣಿಸುವ ಅಂದವನ್ನೇ ನೋಡುತ್ತಿದ್ದಾರೆ. ಚಂದ ಹೋಗಿ ಅಂದವೊಂದೇ ಉಳಿದಿದೆ. ಅದೇ ವಿಧವಾಗಿ ಜೋಡು ಹೋಗಿ ಈಡು ಮಾತ್ರ ಉಳಿದಿದೆ. ಅಂದ ಎಲ್ಲರಿಗೂ ತಿಳಿದ ವಿಷಯವೇ ಆದರೂ ಚಂದ ಮಾತ್ರ ತಿಳಿಯದೇ ಹೋಗಿದೆ.

ಒಬ್ಬನಿಗಿರುವ ಇಬ್ಬರು ಹೆಂಡತಿಯರಲ್ಲಿ ಒಬ್ಬಳು ಅಂದವಾಗಿದ್ದಾಳೆಂದಿದ್ದೇವೆ ಆದರೆ ಆಕೆಗೆ ಚಂದ ಇಲ್ಲ. ಚಂದವೆಂದರೇ ಏನೋ ನಮಗೆ ತಿಳಿದಿಲ್ಲ ಆದ್ದರಿಂದ ಆತನನ್ನೇ ಕೇಳಿದರೇ ಹೀಗೆ ಹೇಳಿದ್ದಾನೆ. "ಚಂದವೆಂದರೇ ದೈವ ಜ್ಞಾನ. ಅಂದವಿರುವ ಹೆಂಡತಿಗೆ ಜ್ಞಾನವಿಲ್ಲ. ಹಾಗೇ ಜ್ಞಾನವಿರುವ ಎರಡನೆಯ ಹೆಂಡತಿಗೆ ಅಂದವಿಲ್ಲ. ಮೇಲೆ ಕಾಣಿಸುವ ಅಂದಕ್ಕಿಂತಲೂ ಕಾಣಿಸದೆ ಒಳಗಿರುವ ಜ್ಞಾನವೇ ಬಹಳ ಅಂದವಾಗಿರುವುದು. ಆದ್ದರಿಂದಲೇ ಮೇಲಿನ ಅಂದವಿರುವ ಮೊದಲನೆಯ ಹೆಂಡತಿಗಿಂತಲೂ ಒಳಗೆ ಅಂದವಾದ ಜ್ಞಾನವಿರುವ ಎರಡನೆ ಹೆಂಡತಿ ಮೇಲೆನೇ ನನಗೆ ಬಹಳ ಪ್ರೀತಿ" ಎಂದನು. ಆದ್ದರಿಂದ ಅಂದ ಚಂದ ಎರಡೂ ಇರುವ ಹೆಂಡತಿ ಇರುವವನೇ ಅದೃಷ್ಟವಂತನು. ಅಂದವಿಲ್ಲದೇ ಚಂದ ಮಾತ್ರ ಇದ್ದರೇ ಅವನನ್ನು ಸ್ವಲ್ಪ ಅದೃಷ್ಟವಂತನೆಂದು ಹೇಳಬಹುದು. ಅಂದ ಚಂದ ಎರಡೂ ಇಲ್ಲದ ಹೆಂಡತಿ ಇರುವವನನ್ನು ದುರದೃಷ್ಟವಂತನೆಂದು ಹೇಳಬಹುದು.

**774. (6) ನಿನ್ನ ಶರೀರದಲ್ಲಿ ವಾರ್ತಾಹರನು ಯಾರು?**

ಉ. ಮನಸ್ಸು.

**ವಿವರ :** ವಾರ್ತೆಗಳನ್ನು ಸೇರಿಸುವವನನ್ನು ವಾರ್ತಾಹರನು ಎನ್ನುತ್ತಾರೆ. ಶರೀರದಲ್ಲಿ ಜೀವಾತ್ಮ ಎನ್ನುವವನು ಯಾವ ವಿಷಯವನ್ನು ಸ್ವತಃವಾಗಿ ತಿಳಿದುಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಇಂತಹವನು ಮಾತನಾಡುತ್ತಿದ್ದಾನೆಂದು, ಇಂತಹ ವಿಷಯವನ್ನೇ ಹೇಳುತ್ತಿದ್ದಾನೆಂದು, ತಿನ್ನುವ ತಿಂಡಿ ಇಂತಹ ರುಚಿ ಇದೆಯೆಂದು, ಇದು ಇಂತಹ ಸ್ಪರ್ಶ ಎಂದು, ಇದು ಇಂತಹ ವಾಸನೆ ಎಂದು ಐದು ವಿಷಯಗಳನ್ನು ತಿಳಿಸುವವನು ಒಬ್ಬನು ಇದ್ದಾನೆ.

ಶರೀರದಲ್ಲಿನ ಜೀವಾತ್ಮ ಆ ವಾರ್ತಾಹರನಿಂದ ಎಲ್ಲಾ ವಿಷಯಗಳು ತಿಳಿದುಕೊಳ್ಳುತ್ತಿದ್ದಾನೆ. ಶರೀರದಲ್ಲಿನ ಹೊರಗಿನ ವಿಷಯಗಳೆಲ್ಲವನ್ನೂ ಒಳಗೆ ಜೀವಾತ್ಮನಿಗೆ ತಿಳಿಸುವುದು ಮನಸ್ಸು. ಆದ್ದರಿಂದ ಶರೀರದಲ್ಲಿನ ಮನಸ್ಸು ವಾರ್ತಾಹರನೆಂದು ಹೆಸರು ಹೊಂದಿದೆ. ಪ್ರಪಂಚದಲ್ಲಿ ಬಹಳ ವಾರ್ತೆಗಳನ್ನು ಸೇರಿಸುವುದು ಮನಸ್ಸೇ. ಇದನ್ನು ಮೀರಿದ ವಾರ್ತಾಹರನು ಎಲ್ಲೂ ಇಲ್ಲ.

**775. (7) ದೇಶವಲ್ಲದ ದೇಶ ಭೂಮಿ ಮೇಲೆ ಇದೆಯಾ?**

ಉ. ಇದೆ.

**ವಿವರ :** ದೇಶವಲ್ಲದ ದೇಶ ಎಂದಿದ್ದಾರೆ ಆದ್ದರಿಂದ ಇದು ಕಾಣಿಸುವ ದೇಶದ ಹಾಗೆ ಇರುವುದಿಲ್ಲವೆಂದು ತಿಳಿಯುತ್ತಿದೆ. ಕಣ್ಣಿಗೆ ಕಾಣಿಸದಿರುವುದು ಜ್ಞಾನ ನೇತ್ರಕ್ಕೆ ಮಾತ್ರ ಕಾಣಿಸುವುದಾದ ದೇಶ ಒಂದೇ ಒಂದಿದೆ. ಅದು ಭೂಮಿ ಮೇಲೆ ಇರುವ ಎಲ್ಲಾ ದೇಶಗಳಿಗಿಂತಲೂ ಮೀರಿರುವುದು ಮತ್ತು ಅದು ಭೂಮಿ ಮೇಲೆನೇ ಇದೆ. ಅದನ್ನೇ ಉಪದೇಶ ಎನ್ನುತ್ತೇವೆ. ಆ ಉಪದೇಶವನ್ನು ಜ್ಞಾನನೇತ್ರ ಹೊಂದಿದ ಪ್ರತಿ ಒಬ್ಬರು ನೋಡಬಹುದು. ಜ್ಞಾನನೇತ್ರ ಕೊಟ್ಟು ಆ ದೇಶವನ್ನು ತೋರಿಸುವವರು ಗುರುಗಳು. ತೋರಿಸುವ ಗುರುಗಳು ಮೊದಲು ಆ ದೇಶವನ್ನು ನೋಡಿರಬೇಕು. ಹಾಗೆ ನೋಡಿದವರೇ ಅವರ ಶಿಷ್ಯರಿಗೂ ಸಹ ತೋರಿಸಬಲ್ಲರು. **ಶ್ರದ್ಧಾವಾನ್ ಲಭತೇ ಜ್ಞಾನಂ** ಎನ್ನುವ ಗೀತಾಚಾರ್ಯನ ಮಾತಿನ ಪ್ರಕಾರ ನಮಗಿರುವ ಶ್ರದ್ಧೆಯನ್ನು ಅನುಸರಿಸಿ ಗುರುವು, ಜ್ಞಾನ ಲಭಿಸುತ್ತದೆ, ಹಾಗೇ ಉಪದೇಶ ಲಭಿಸುತ್ತದೆ. ಮುಖ್ಯವಾಗಿ ತಿಳಿಯಬೇಕಾಗಿರುವುದು ಏನೆಂದರೆ! ಉಪದೇಶ ಮಂತ್ರಗಳಿಂದಾಗಲಿ ಮುದ್ರೆಗಳಿಂದಾಗಲಿ ಲಭಿಸುವುದಲ್ಲ. ದೇಶವಲ್ಲದ ದೇಶಕ್ಕೆ ಯಾವಾಗಲಾದರೂ ಹೋಗಿದ್ದೀಯಾ? ಹೋಗದಿದ್ದರೆ ಹೋಗಬೇಕೆಂದು ಪ್ರಯತ್ನ ಮಾಡು.

**776. (8) ಮಮಕಾರವೆಂದು ಯಾವುದನ್ನು ಕರೆಯುತ್ತಾರೆ?**

ಉ. ಮೋಹ ಗುಣ.

**ವಿವರ :** ಮಮಕಾರವೆಂದರೆ ಬಹಳ ಜನ ತಪ್ಪಾಗಿ ಅರ್ಥೈಸಿಕೊಂಡು ಪ್ರೀತಿಯೆಂದು ತಿಳಿದುಕೊಳ್ಳುತ್ತಾರೆ. ಮಮ ಎಂದರೆ ನನ್ನದು. ನಾ ಎನ್ನುವ ಅರ್ಥಕೊಡಬಲ್ಲದು. ಈ ಅರ್ಥವನ್ನು ಅನುಸರಿಸಿ ನೋಡಿದರೆ ನನ್ನದು ಎಂದು ಅನಿಸುವ ಹಾಗೆ ಮಾಡುವ ಮೊಹವೇ ಮಮಕಾರವೆಂದು ತಿಳಿಯುತ್ತದೆ.

**777. (9) ಬೇವರ್ಷಿ ಎಂದರೆ ಪೂರ್ತಿ ಅರ್ಥವೇನು?**

ಉ. ಸಂತೋಷ ಇಲ್ಲದವನೆಂದು ಅರ್ಥ.

**ವಿವರ :** ಒಬ್ಬನಿಗೆ ಬಾಕಿ ಇರುವಾಗ ಆ ಬಾಕಿ ಎಲ್ಲಾ ಆತನಿಗೆ ಕೊಟ್ಟನಂತರ ಬೇಬಾಕಿ ಆಗಿದೆ ಎನ್ನುವುದು ಕೇಳಿರುತ್ತೇವೆ. ಬೇ ಬಾಕಿ ಎಂದರೆ ಬಾಕಿ ಇಲ್ಲವೆಂದು ಅರ್ಥ. ಹರ್ಷ ಎಂದರೆ ಸಂತೋಷ. ಹರ್ಷಿ ಎಂದರೆ ಸಂತೋಷಿಸುವವನೆಂದು ಅರ್ಥ. ಜ್ಞಾನ ತಿಳಿದಂತೆಲ್ಲಾ ಸಂತೋಷ ಉಂಟಾಗುತ್ತದೆ. ಆದ್ದರಿಂದ ಜ್ಞಾನಶಕ್ತಿಯನ್ನು ಅನುಸರಿಸಿ ಅವನು ಸಂತೋಷ ಇರುವವನೆಂದು ತಿಳಿಸಿದ್ದಾರೆ. ಆ ತಾರತಮ್ಯಗಳನ್ನು ನಾಲ್ಕು ವಿಧಗಳಾಗಿ ತಿಳಿಸಿದ್ದಾರೆ. ಮಹಾ ಎಂದೂ, ರಾಜ ಎಂದೂ, ದೇವ ಎಂದೂ, ಬ್ರಹ್ಮ ಎಂದೂ ನಾಲ್ಕು ವಿಧಗಳಾಗಿ ತಿಳಿಸಿದ್ದಾರೆ. ಹರ್ಷದಲ್ಲಿ ಭೇದಗಳು ಇರುವವರು ಆದ್ದರಿಂದ ಈ ನಾಲ್ಕು ವಿಭಜನೆಗಳಿಗೆ ಕೊನೆಯಲ್ಲಿ ಹರ್ಷಿ ಎಂದು ಕರೆಯುತ್ತಿದ್ದಾರೆ. ಮಹರ್ಷಿ, ರಾಜರ್ಷಿ, ದೇವರ್ಷಿ, ಬ್ರಹ್ಮರ್ಷಿ ಎಂದು ಅವರ ಹೆಸರುಗಳು ಇವೆ. ವಾಸ್ತವಕ್ಕೆ ಅವು ಹೆಸರುಗಳು ಅಲ್ಲ ಯೋಗ್ಯತೆಗಳೆಂದು ತಿಳಿಯಬೇಕು. ಮನುಷ್ಯರಲ್ಲಿ ಸಾಮಾನ್ಯನು, ದೊಡ್ಡವನು, ರಾಜ ಎಂದು ಮೂರು ವಿಧಗಳಾಗಿ ಇದ್ದಾರೆ. ಮನುಷ್ಯರನ್ನು ಬಿಟ್ಟರೇ ಆತ್ಮ (ದೇವರು), ಪರಮಾತ್ಮ ಎಂದು ಎರಡೇ ಭಾಗಗಳು ಇವೆ. ಜೀವಾತ್ಮ ಮೂರು ವಿಧಗಳಾಗಿ ದೇವರು ಒಂದು ವಿಧವಾಗಿ, ಪರಮಾತ್ಮ ಒಂದು ವಿಧವಾಗಿ ಇರುವುದರಿಂದ ಜ್ಞಾನಶಕ್ತಿಯನ್ನು ಅನುಸರಿಸಿ ಮನುಷ್ಯರನ್ನು ಒಟ್ಟು ಐದು ಭಾಗಗಳಾಗಿ ವಿಭಜಿಸಬೇಕಾಗಿ ಬಂದಿದೆ. ಸಾಮಾನ್ಯವಾದವನಿಗೆ ಯಾವ ಜ್ಞಾನಶಕ್ತಿ ಇಲ್ಲ. ಆದ್ದರಿಂದ ಅವನನ್ನು ಬೇವರ್ಷಿ ಎನ್ನುವುದು ನಡೆದಿದೆ. ಬೇ ಬಾಕಿ ಎಂದರೆ ಬಾಕೀ ಇಲ್ಲ ಎನ್ನುವಹಾಗೆ ಬೇವರ್ಷಿ ಎಂದರೆ ಹರ್ಷ ಇಲ್ಲದವನೆಂದು ಅರ್ಥ. ಯಾವ ಸಂತೋಷ ಇಲ್ಲದವನನ್ನು ಅಂದರೆ ಜ್ಞಾನ ಸ್ವಲ್ಪವೂ ಸಹ ಇಲ್ಲದವನನ್ನು ಬೇವರ್ಷಿ ಎನ್ನುವುದು ನಡೆಯುತ್ತಿದೆ. ಇಲ್ಲಿ ಬೇವರ್ಷಿ ಎನ್ನುವವನಿಗೆ ಬಹಳ ಧನವಿದ್ದರೆ ಸಂತೋಷವಿರುತ್ತದೆ ಅಲ್ಲವೆ! ಎಂದು ಕೆಲವರನ್ನಬಹುದು. ಅದಕ್ಕೆ ಉತ್ತರ ಏನೆಂದರೆ! ಜ್ಞಾನದಿಂದ ಸಿಗುವ ಸುಖ ಸಂತೋಷದ ಮುಂದೆ ಪ್ರಪಂಚ ಸಂತೋಷ ಬಹಳ ಅಲ್ಪವಾದದ್ದು. ಅಷ್ಟೇ ಅಲ್ಲದೆ ಯೋಗದಲ್ಲಿ ಇಲ್ಲದವನು ನಿತ್ಯ ರೋಗದಲ್ಲಿ ಇದ್ದಾನೆಂದು ಹಿರಿಯರು ಹೇಳಿದ್ದಾರೆ. ಆದ್ದರಿಂದ ಪ್ರಪಂಚ ಸಂತೋಷ ದುಃಖದೊಂದಿಗೆ ಸಮಾನವೇಯೆಂದು ಅದು ಒಂದು ವಿಧವಾದ ದುಃಖವೇ ಎಂದು ತಿಳಿಯಬೇಕು. ಆದ್ದರಿಂದಲೇ ತಿಳಿದ ಹಿರಿಯರು ಯೋಗವನ್ನು ವಿನಹ ಉಳಿದಿರುವುದೆಲ್ಲಾ ರೋಗವೇ ಎಂದಿದ್ದಾರೆ. ನೀವು ಮಾತ್ರ ಬೇವರ್ಷಿಗಳು ಆಗದೆ ಮಹರ್ಷಿಗಳಾದರೂ ಆಗಬೇಕೆಂದು ಕೋರುತ್ತಿದ್ದೇವೆ.

**778. (10) ಯಾರಿಗಾದರೂ ಯಾವಾಗಾದರೂ ಸ್ವಾಗತವನ್ನು ಹೇಳಿದ್ದೀಯಾ?**

ಉ. ಇಲ್ಲ.

**ವಿವರ :** ಪೂರ್ವಕಾಲದಲ್ಲಿ ಜ್ಞಾನಿಗಳೆಲ್ಲರೂ ಸೇರಿ ಆಗಾಗ ಸಮಾವೇಶವಾಗುತ್ತಿದ್ದರು. ಸಂವತ್ಸರಕ್ಕೆ ಒಮ್ಮೆ ಯಾಗಲಿ ಅಥವಾ ತಿಂಗಳಿಗೊಮ್ಮೆ ಆಗಲಿ ಒಂದು ನಿಯಮದ ಪ್ರಕಾರ ಸಭೆ ನಡೆಸಿಕೊಳ್ಳುತ್ತಿದ್ದರು. ಆ ಸಮಾವೇಶದಲ್ಲಿ ಪ್ರತಿ ಒಬ್ಬರು, ಅವರವರ ಗತವನ್ನು ಕುರಿತು ಹೇಳುತ್ತಿದ್ದರು. ತಿಂಗಳಿಗೊಮ್ಮೆ ಸಮಾವೇಶವಾದರೆ ಆ ತಿಂಗಳೆಲ್ಲವೂ ನಡೆದ ಗತವನ್ನು ಕುರಿತು ಹೇಳಿ ಆ ಗತದಲ್ಲಿ ತಾನು ಜ್ಞಾನಪರವಾಗಿ ಎಷ್ಟು ಮುಂದುವರೆದಿರುವುದು, ಹಾಗೇ ಪ್ರಪಂಚ ಪರವಾಗಿ ಅಜ್ಞಾನರೀತ್ಯಾ ಎಷ್ಟು ಮುಂದುವರೆದಿರುವುದು ಬಿಚ್ಚಿ ಹೇಳುತ್ತಿದ್ದರು. ಹಾಗೆ ಹೇಳುವುದರಲ್ಲಿ ನನ್ನ ಗತಕಾಲ ಎಲ್ಲರಿಗಿಂತಲೂ ಜ್ಞಾನಪರವಾಗಿ ಇರಬೇಕೆಂದು ಪೋಟಿಗೆ ಬೀಳುತ್ತಿದ್ದರು. ಆದ್ದರಿಂದ ಹಾಗೆ ತಿಂಗಳಿಗೊಮ್ಮೆ ಸಮಾವೇಶವಾಗುವವರೆಲ್ಲರು ಅವರವರ ಗತಗಳು ಸಕ್ರಮವಾಗಿ ಜ್ಞಾನಪರವಾಗಿ ಇರುವಹಾಗೆ ಜಾಗ್ರತೆಯಾಗಿ ಇರುತ್ತಿದ್ದರು. ಹಾಗೆ ನಡೆಯುವ ಸಮಾವೇಶಕ್ಕೆ **"ಸ್ವಗತ"** ಎಂದು ಹೆಸರಿಟ್ಟು ಮಾಡುತ್ತಿದ್ದರು. ಅಲ್ಲಿ ನಡೆಯುವ ಚರ್ಚೆ ಸ್ವಗತವನ್ನು ಕುರಿತಾದ್ದರಿಂದ ಸ್ವಗತ ಎಂದು ಹೂವಿನಿಂದಾಗಲಿ, ಎಲೆಗಳಿಂದಾಗಲಿ ಅಣೆದು ತಯಾರಿಸುತ್ತಿದ್ದರು. ಸಮಾವೇಶವಾದಾಗೆಲ್ಲಾ ಸ್ವಗತ ಎಂದು ಬರೆದಿಡುವುದು ಗಮನಿಸಿದ ಕೆಲವರು ಅಲ್ಲಿ ನಡೆಯುವ ವಿಷಯವೇನೋ ಅದರ ಅರ್ಥವೇನೋ ತಿಳಿಯದಿದ್ದರೂ ಸಭೆ ನಡೆದರೆ ಸ್ವಗತ ಎಂದು ಬರೆದಿಡುವುದು ಪದ್ಧತಿ ಎಂದುಕೊಂಡಿದ್ದಾರೆ. ಕಾಲಕ್ರಮದಲ್ಲಿ ತಿಳಿಯದತನ ಬೆಳೆದು ಹೋಗಿರುವುದರಿಂದ ಎಲ್ಲಿ ಸಮಾವೇಶ ನಡೆದರೂ "ಸ್ವಗತ" ಎಂದು ಬರೆದಿಡುವುದು ನಡೆದಿದೆ. ಹಾಗೆ ಕಾಲ ಕಳೆದಂತೆಲ್ಲ, ನೂರು ಸಾವಿರ ಸಂವತ್ಸರಗಳು ಕಳೆದಂತೆಲ್ಲಾ ಕೊನೆಗೆ ಸ್ವಗತ "ಸ್ವಾಗತವಾಗಿ" ಬದಲಾಗಿದೆ. ಈಗ ಎಲ್ಲಿ ಸಭೆಗಳು ನಡೆದರು "ಸ್ವಾಗತ" ಎಂದು ಬರೆದಿರುವವೇ ಕಾಣಿಸುತ್ತವೆ. ಆಹ್ವಾನ ಎನ್ನುವುದನ್ನು ಬರೆಯುವುದು ಹೋಗಿ ಸ್ವಾಗತ ಎಂದು ಬರೆಯುತ್ತಿದ್ದಾರೆ. ಅವರ ಉದ್ದೇಶದಲ್ಲಿ ಆಹ್ವಾನಿಸುವ ಭಾವವನ್ನು ಹೊಂದಿದ್ದು ತಿಳಿಯದೇನೇ ಸ್ವಾಗತ ಎಂದು ಬರೆಯುತ್ತಿದ್ದಾರೆ. ಪೂರ್ವದಲ್ಲಿ ಸಂಪೂರ್ಣ ಜ್ಞಾನ ಇರುವವರು ಸಮಾವೇಶವಾದಾಗ ಅವರ ಪ್ರವರ್ತನೆ ಎಲ್ಲವೂ ಜ್ಞಾನಪರವಾಗಿ ತುಂಬಿ ಇರುವುದರಿಂದ ನಮ್ಮದು ಒಳ್ಳೆಯ ಗತ ಕಾಲ ಎಂದು ತಿಳಿಸುತ್ತಾ ಗತಕ್ಕೆ ಒಳ್ಳೆದನ್ನು ಸೂಚಿಸುವ "ಸು" ಎನ್ನುವ ಅಕ್ಷರವನ್ನು ಸೇರಿಸಿ **"ಸುಸ್ವಗತ"** ಎಂದು ಬರೆದು ಇಡುತ್ತಿದ್ದರು. ಅದು ಕೊನೆಗೆ "ಸುಸ್ವಾಗತ" ಆಗಿದೆ.

ಅವರ ಗತಕಾಲ ಹೇಗಿದ್ದರೂ ಮುಖ್ಯವಾಗಿ ನಮ್ಮ ಗತಕಾಲ ಏನೋ ಹೇಗೆ ನಡೆದಿದೆಯೋ ಸ್ವಲ್ಪವಾದರೂ ಯೋಚಿಸಿದ್ದೀರಾ? ಪ್ರತಿ ತಿಂಗಳು ಸಮಾವೇಶವಾಗುವ ನೀವು ನಿಮ್ಮ ಸ್ವಗತವನ್ನು ಕುರಿತು ಯಾರಿಗಾದರೂ ಹೇಳಿದ್ದೀರಾ! ನಿಮ್ಮ ಗತ ಸುಗತವಾ ಅಥವಾ ದುರ್ಗತವಾ? ಇಲ್ಲಿಂದ ಪ್ರತಿ ತಿಂಗಳೂ ಸಮಾವೇಶವಾದಾಗ ನಿಮ್ಮ ಸ್ವಗತವನ್ನು ಕುರಿತು ಹೇಳಿ ಗತದಲ್ಲಿನ ತಪ್ಪುಗಳನ್ನು ಸರಿಮಾಡಿಕೊಂಡು ಒಳ್ಳೆ ಮಾರ್ಗದಲ್ಲಿ ಪಯಣಿಸುವುದಕ್ಕೆ ತಿಳಿದವರ ಹತ್ತಿರ ಸಲಹೆಗಳನ್ನು ತೆಗೆದುಕೊಳ್ಳಿ.

## ಜ್ಞಾನ ಪರೀಕ್ಷೆ

**ಕೊತ್ತಕೋಟ** **ದಿನಾಂಕ–04–07–2001**

**779. (1) ನಡೆಯುತ್ತಿರುವ ಕಾರ್ಯವನ್ನು ನಡೆಯದಂತೆ ಯಾರಾದರೂ ನಿಲ್ಲಿಸಬಲ್ಲರಾ?**

ಉ. ಬ್ರಹ್ಮಯೋಗಿಗಳು.

**ವಿವರ :** ಪ್ರಾರಬ್ಧಕರ್ಮದ ಪ್ರಕಾರ ಕಾರ್ಯಗಳು ನಡೆಯುತ್ತಿರುತ್ತವೆ. ಪ್ರಾರಬ್ಧಕರ್ಮ ಜೀವನದಲ್ಲಿನ ಕಾರ್ಯಗಳನ್ನು ಮಾತ್ರ ನಿರ್ಣಯಿಸುತ್ತಿರುತ್ತದೆ. ದೈವ ಸಂಬಂಧವಾದ ಜ್ಞಾನ ಯೋಗಗಳನ್ನು ಪ್ರಾರಬ್ಧ ನಿರ್ಣಯಿಸಲಾರದು. ಜ್ಞಾನ ಕರ್ಮವನ್ನೇ ಶಾಸಿಸಬಲ್ಲದು, ಸುಟ್ಟು ಬೂದಿ ಮಾಡಬಲ್ಲದು. ಪ್ರಾರಬ್ಧವನ್ನು ಭೂಮಿ ಮೇಲೆ ವಿಷ್ಣು ಈಶ್ವರ ಬ್ರಹ್ಮ ಮೊದಲಾದ ದೇವತೆಗಳು ಸಹ ಬದಲಾಯಿಸಲಾರರು. ಆದರೆ ಯೋಗ ಕರ್ಮವನ್ನು ಬದಲಾಯಿಸಬಲ್ಲದು. ಬ್ರಹ್ಮಯೋಗ ಮಾಡುವಾಗ ವಿನಿಯೋಗವಾಗುವ ಕಾಲದಲ್ಲಿ ಪ್ರಾರಬ್ಧದ ಪ್ರಕಾರ ನಡೆಯುವ ಕೆಲಸಗಳು ನಿಂತುಹೋಗುತ್ತವೆ. ಬ್ರಹ್ಮಯೋಗ ಮಾಡುವ ಸಮಯದಲ್ಲಿ ನಡೆಯಬೇಕಾಗಿರುವುದು ನಂತರ ನಡೆಯುತ್ತದೆ. ಆದ್ದರಿಂದ ನಡೆಯುತ್ತಿರುವ ಕಾರ್ಯವನ್ನು ಬ್ರಹ್ಮಯೋಗಿಗಳು ನಡೆಯದಂತೆ ನಿಲ್ಲಿಸಬಲ್ಲರು. ಅಂದರೆ ಇತರರ ಕಾರ್ಯಗಳು ಅಂದುಕೊಳ್ಳಬಾರದು. ಯಾರ ಕೆಲಸವನ್ನು ಅವರು ಬ್ರಹ್ಮಯೋಗ ಆಚರಿಸುವುದರಿಂದ ನಿಲ್ಲಿಸಬಹುದು. ಕರ್ಮವನ್ನು ನಿಲ್ಲಿಸುವ ಶಕ್ತಿ ಒಂದೇ ಒಂದು ಜ್ಞಾನಶಕ್ತಿ ಎಂದು ತಿಳಿಯಬೇಕು.

**780. (2) ಗಿಡಗಳೆಲ್ಲವೂ ಒಂದೇ ಬಣ್ಣ ಹೊಂದಿವೆ ಏಕೆ?**

ಉ. ಒಂದೇ ದೈವವನ್ನು ನಂಬುವುದರಿಂದ.

ವಿವರ : ಮನುಷ್ಯರಲ್ಲಿ ಜ್ಞಾನಶಕ್ತಿಯನ್ನು ಅನುಸರಿಸಿ ಮಹರ್ಷಿ, ರಾಜರ್ಷಿ, ದೇವರ್ಷಿ, ಬ್ರಹ್ಮರ್ಷಿ ಎಂದು ನಾಲ್ಕು ಭಾಗಗಳಾಗಿ ವಿಭಜಿಸಿದಹಾಗೆ, ಭೂಮಿ ಮೇಲೆ ಹುಟ್ಟಿದ ಎಲ್ಲಾ ಜೀವರಾಶಿಗಳನ್ನು ದೈವ ಸಾಮೀಪ್ಯವನ್ನು ಅನುಸರಿಸಿ ಮೂರು ವಿಧಗಳಾಗಿ ವಿಭಜಿಸಿದ್ದೇವೆ. ಆ ಮೂರು ಜಾತಿಗಳು ಅವು ಬೆಳೆಯುವುದರಲ್ಲೇ ಪ್ರತ್ಯೇಕತೆ ಹೊಂದಿವೆ. ಈ ವಿಷಯವನ್ನು ಮೊದಲೆ ಸ್ವಲ್ಪ ಹೇಳಿಕೊಂಡಿದ್ದೇವೆ. ಮೇಲಕ್ಕೆ ಬೆಳೆಯುವವು ವೃಕ್ಷ ಜಾತಿಗಳು, ಅಡ್ಡ ಬೆಳೆಯುವವು ಜಂತು ಕ್ರಿಮಿ ಕೀಟಕಗಳು, ಕೆಳಕ್ಕೆ ಬೆಳೆಯುವವು ಮನುಷ್ಯ ಜಾತಿ ಒಂದೇ. ದೇವರಿಗೆ ಬಹಳ ಹತ್ತಿರವಾಗಿದ್ದು ಕರ್ಮವನ್ನು ಸಂಪಾದಿಸಿಕೊಳ್ಳುವುದರಲ್ಲಿ ಎಲ್ಲದಕ್ಕಿಂತಲೂ ಕಡಿಮೆ ಸ್ಥಾನದಲ್ಲಿ ಇರುವವು ವೃಕ್ಷಜಾತಿಗಳು. ವೃಕ್ಷಜಾತಿಗಳೆಲ್ಲ ಒಂದೇ ದೇವರನ್ನು ಅಂದರೆ ಪರಮಾತ್ಮನನ್ನು ನಂಬಿ ನಾವೆಲ್ಲರೂ ಒಂದೇ ಮಾರ್ಗದಲ್ಲಿ ಇದ್ದೇವೆಂದು, ನಮ್ಮೆಲ್ಲರಿಗೂ ಒಬ್ಬನೇ ದೇವರಿದ್ದಾನೆಂದು ತಿಳಿಸುವಹಾಗೆ ಒಂದೇ ಬಣ್ಣ ಹೊಂದಿವೆ. ಉಳಿದ ಎರಡು ವಿಧಗಳಲ್ಲಿ ಒಂದೇ ಬಣ್ಣ ಇಲ್ಲದೇ ಹೋಗುವುದು ಒಂದೊಂದು ಜೀವರಾಶಿ ಒಂದೊಂದು ಬಣ್ಣ ಹೊಂದಿರುವುದು ಗಮನಾರ್ಹ. ಗಿಡಗಳೆಲ್ಲವೂ ಭೂಮಿಯಿಂದ ಮೇಲಕ್ಕೆ ಬೆಳೆಯುತ್ತಾ ನಾವು ದೇವರ ಕಡೆ ಪಯಣಿಸುತ್ತಿದ್ದೇವೆಂದು ತಿಳಿಸುತ್ತಾ, ಮತ್ತು ಒಂದೇ ಹಸಿರುತನವನ್ನು ಹೊಂದಿ ನಾವೆಲ್ಲರೂ ದೇವರನ್ನು ನಂಬಿದ್ದೇವೆಂದು ತಿಳಿಸುತ್ತಿವೆ.

**781. (3) ಮೂಢಾತ್ಮನೆಂದರೆ ಯಾವ ಆತ್ಮ?**

ಉ. ಜೀವಾತ್ಮ.

**ವಿವರ :** ಮೂಢ ಎಂದರೆ ಅಜ್ಞಾನ. ಮೌಢ್ಯ ಎಂಬ ಪದಕ್ಕೆ ಅನುಸಂಧಾನವಾಗಿ ಹುಟ್ಟಿದ ಪದ ಮೂಢ. ಮೌಢ್ಯ ಎಂದರೂ, ಕತ್ತಲು ಎಂದರೂ ಅಜ್ಞಾನವೆಂಬ ಅರ್ಥ ಬರುತ್ತದೆ. ಮೂಢಾತ್ಮನು ಎಂದರೆ ಅಜ್ಞಾನದಿಂದ ಕೂಡಿಕೊಂಡಿರುವ ಆತ್ಮ ಎಂದು ಅರ್ಥ. ಶರೀರದಲ್ಲಿನ ಮೂರು ಆತ್ಮಗಳಲ್ಲಿ ಜೀವಾತ್ಮ ಒಂದೇ ಮೂಢಾತ್ಮನಾಗಿ ಇರುವುದಕ್ಕೆ ಅವಕಾಶವಿದೆ. ಪರಮಾತ್ಮ ಆತ್ಮ ಇಬ್ಬರು ಅಜ್ಞಾನಿಗಳಲ್ಲ. ಜೀವಾತ್ಮ ಒಬ್ಬನೇ ಅಜ್ಞಾನಿ ಆದ್ದರಿಂದ ಮೂಢಾತ್ಮ ಎಂದು ಜೀವಾತ್ಮನನ್ನು ಕರೆದಿದ್ದಾರೆ.

**782. (4) ಮುಕ್ಕಣ್ಣ ಎಂದು ಯಾರನ್ನು ಕರೆಯಬಹುದು?**

ಉ. ಮನಸ್ಸಿರುವವರನ್ನೆಲ್ಲಾ ಕರೆಯಬಹುದು.

**ವಿವರ :** ಮುಕ್ಕಣ್ಣ ಎಂದರೆ ಮೂರು ಕಣ್ಣುಗಳು ಇರುವವನೆಂದು ಅರ್ಥ. ಎರಡು ಕಣ್ಣುಗಳು ಹೊರಗೆ ಕಾಣಿಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ. ಮೂರನೆ ಕಣ್ಣು ಕಾಣಿಸದೆ ತಲೆಯಲ್ಲಿ ಇದೆ. ತಲೆಯಲ್ಲಿ ಇರುವ ಮನಸ್ಸು ಮೂರನೆಯ ಕಣ್ಣಾಗಿ ಇದೆ. ಹೊರಗಿನ ಕಣ್ಣುಗಳಿಂದ ನೋಡಿದ ದೃಶ್ಯವನ್ನು ಕೆಲವು ದಿನಗಳ ನಂತರವಾದರೂ ಮನೋನೇತ್ರ ತಿರುಗಿ ಅದೇ ದೃಶ್ಯವನ್ನು ತೋರಿಸಬಲ್ಲದು. ಸರ್ಕಸ್‌ನಲ್ಲಿ ಒಂದು ಹುಲಿಯನ್ನು ನೋಡಿದವನು ಎರಡು ದಿನಗಳನಂತರ ಆ ಹುಲಿ ದೃಶ್ಯವನ್ನು ಮೊದಲು ನೋಡಿದ ಹಾಗೆ ನೋಡಬಲ್ಲನು. ಆ ದೃಶ್ಯವನ್ನು ಮನೋ ಪಲಕದ ಮೇಲೆ ಬರುವುದರಿಂದ ಮನಸ್ಸಿನಿಂದ ನೋಡುತ್ತಿದ್ದೇವೆಂದು ಹೇಳಬಹುದು. ಒಂದು ಸಲ ನೋಡಿರುವವು ನೋಡಿದ ಹಾಗೆ ಮನಸ್ಸು ತೋರಿಸುವುದೇ ಅಲ್ಲದೆ, ನೋಡದವುಗಳನ್ನು ಸಹ ಮನೋ ಊಹದಿಂದ ತೋರಿಸಬಲ್ಲದು. ಕಣ್ಣು ಮುಚ್ಚಿಕೊಂಡರು ಕಾಣಿಸುವ ದೃಶ್ಯಗಳು ಕೆಲವು ಮನೋ ಊಹಾ ಜನಿತಗಳಾಗಿ ಇರುವವು. ಎಂದೂ ನೋಡದ ವಿಷಯಗಳನ್ನು ಸಹ ತೋರಿಸುವುದರಲ್ಲಿ ಸಾಮರ್ಥ್ಯವನ್ನು ಹೊಂದಿರುವುದು ಮನಸ್ಸು. ಇದನ್ನನುಸರಿಸಿ ಮನಸ್ಸಿರುವ ಜೀವಿಗಳೆಲ್ಲರಿಗೂ ಮನೋನೇತ್ರವಿದೆ.

**783. (5) ಜೀವಾತ್ಮಗೆ ಬಹಳ ಹತ್ತಿರವಾಗಿ ಇರುವುದು ಯಾವುದು?**

ಉ. ಬುದ್ಧಿ, ಮಾಯ.

**ವಿವರ :** ಜೀವಾತ್ಮನಿಗೆ ಬಹಳ ಹತ್ತಿರವಾಗಿರುವುದು ಬುದ್ಧಿ ಪೊರೆ. ಬುದ್ಧಿ ಹತ್ತಿರವಾಗಿರುವಾಗ ಮಾಯೆ ಸಹ ಹತ್ತಿರವಾಗಿದೆಯೆಂದು ಹೇಳುವುದರಲ್ಲಿ ಕಾರಣವೇನು ಎಂದು ಕೆಲವರು ಕೇಳಬಹುದು. ಅದಕ್ಕೆ ಸಮಾಧಾನವೇನೆಂದರೆ! ಮಾಯೆ ಎಂದರೆ ಗುಣಗಳು. ಗುಣಗಳಲ್ಲೇ ಜೀವಾತ್ಮ ನಿವಾಸವಿದ್ದರೂ, ಜೀವಾತ್ಮನಿಗೆ ಅಂಟಿಕೊಂಡು ಹತ್ತಿರವಾಗಿರುವುದು ಬುದ್ಧಿ. ಬುದ್ಧಿ ಬೇರೆ, ಜೀವಾತ್ಮ ಬೇರೆ, ಗುಣಗಳು ಬೇರೆಯಾಗಿ ಇವೆ. ಬುದ್ಧಿ ನಂತರ ಚಿತ್ತ, ಚಿತ್ತ ನಂತರ ಅಹಂ ಇವೆ. ಬುದ್ಧಿ, ಚಿತ್ತ, ಅಹಂ ಮೂರು ಪೊರೆಗಳ ಮಧ್ಯೆದಲ್ಲಿ ಇರುವುದು ಜೀವಾತ್ಮ. ಇಲ್ಲಿ ಜೀವಾತ್ಮನಿಗೆ ಬುದ್ಧಿ ನಂತರ ಚಿತ್ತ ಹತ್ತಿರವಾಗಿರುವಹಾಗೆ ತಿಳಿದರೂ ಇವುಗಳನ್ನು ಹೇಳದೆ ಗುಣಗಳೇ ಹತ್ತಿರವಾಗಿವೆ ಎಂದು ಹೇಳುವುದರಲ್ಲಿ ಒಂದು ವಿಶೇಷತೆ ಇದೆ. ಮೂರು ಪೊರೆಗಳಿಗೆ ಹೊರಗಿರುವವು ಗುಣಗಳೇ ಆದರೂ ಗುಣಗಳಿಂದಲೇ ಬುದ್ಧಿ ಯೊಚಿಸುತ್ತಿದೆ. ಬುದ್ಧಿ ಗುಣವನ್ನೇ ಯೋಚಿಸುವುದರಿಂದ, ಆ ಯೋಚನೆಗಳಿಗೆ ಜೀವಾತ್ಮ ಹತ್ತಿರದಿಂದ ನೋಡುತ್ತಿರುವುದರಿಂದ, ಜೀವಾತ್ಮ ಮಾಯೆಗೆ

ಹತ್ತಿರವಾಗಿದೆಯೆಂದು ಹೇಳಬಹುದು. ಬುದ್ಧಿ, ಚಿತ್ತ, ಅಹಂ ಹತ್ತಿರವಾಗಿದ್ದರೂ ಬುದ್ಧಿ ಯೊಚನೆಗಳ ರೂಪದೊಂದಿಗೆ, ಮಾಯೆ ಮತ್ತಷ್ಟು ಹತ್ತಿರವಾಗಿದೆ. ಯೊಚನೆಗಳು ಇಲ್ಲದಿರುವಾಗ ಬುದ್ಧಿ ಹತ್ತಿರವಾಗಿದ್ದರೆ, ಯೋಚನೆಗಳು ಇದ್ದಾಗ ಮಾಯೆಯೇ ಜೀವಾತ್ಮನಿಗೆ ಹತ್ತಿರವಾಗಿದೆಯೆಂದು ಹೇಳಬಹುದು.

**784. (6) ನಿನಗೂ ನನಗೂ ಮಧ್ಯದಲ್ಲಿ ಏನಾದರೂ ಇದೆಯಾ?**

ಉ. ಇದೆ.

**ವಿವರ :** ಇಲ್ಲಿ ಇಬ್ಬರು ಜೀವಾತ್ಮಗಳಿಗೆ ಮಧ್ಯೆ ಇರುವುದು ಎರಡು ಶರೀರಗಳು. ಎರಡು ಶರೀರಗಳಲ್ಲಿ ಹೊರಗಿನ ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು, ಅಂತರೇಂದ್ರಿಯಗಳು ಎಲ್ಲವೂ ಮಧ್ಯದಲ್ಲಿರುವವೇ. ಅಷ್ಟೇ ಅಲ್ಲದೇ ಗುಣಗಳು, ಆತ್ಮಗಳು ಸಹ ಮಧ್ಯದಲ್ಲಿರುವವೆಂದೇ ತಿಳಿಯಬೇಕು.

**785. (7) ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ "ಅಹಂ ವೈಶ್ವಾನರೋ" ಎನ್ನುವ ಶ್ಲೋಕದಲ್ಲಿ ಆಹಾರ ನಾಲ್ಕು ವಿಧಗಳೆಂದಿದ್ದಾರೆ. ಆ ಆಹಾರಗಳು ಇವೆಯಾ?**

ಉ. ಇವೆ.

**ವಿವರ :** ನಾಲ್ಕು ವಿಧಗಳ ಆಹಾರಗಳಿರುವುದು ವಾಸ್ತವವೇ. ಅವು 1. ಮಾಂಸ ಪದಾರ್ಥಗಳು 2. ಹಿಟ್ಟಿನ ಪದಾರ್ಥಗಳು, 3. ಕೊಬ್ಬಿನ ಪದಾರ್ಥಗಳು, 4. ಖನಿಜಲವಣಗಳು. ಈ ನಾಲ್ಕು ವಿಧಗಳ ಪೋಷಕ ಪದಾರ್ಥಗಳು ನಾವು ನಿತ್ಯ ತಿನ್ನುವ ಆಹಾರದಲ್ಲಿ ಇವೆ. ಬಹಳ ಜನ ಗೀತಾವಕ್ತರು ಈ ನಾಲ್ಕು ವಿಧ ಆಹಾರಗಳನ್ನು ಹೇಳಿಕೊಳ್ಳದೆ ಭಕ್ಷ, ಭೋಜ್ಯ, ಚೋಹ್ಯ, ಲೇಹ್ಯ ಎಂದು ಹೇಳಿಕೊಂಡಿದ್ದಾರೆ. ತಿನ್ನುವ ಪದಾರ್ಥಗಳು ಮೃದುವಾಗಿರುವವು, ಗಟ್ಟಿಯಾಗಿರುವವು, ಚಪ್ಪರಿಸುವವು, ಚಪ್ಪರಿಸದೇ ನುಂಗುವವೆಂದು ಹೇಳಿಕೊಳ್ಳುವುದು ತಪ್ಪು. ಗಟ್ಟಿ ಇರುವವಾಗಲಿ, ಮೃದುವಾಗಿ ಇರುವವಾಗಲಿ ಆಹಾರಗಳು ಮತ್ತೆ ಯಾವ ವಿಧವಾಗಿದ್ದರೂ ಅವುಗಳಲ್ಲಿ ಶರೀರವನ್ನು ಪೋಷಿಸುವ ಪದಾರ್ಥಗಳು ನಾಲ್ಕೆಂದು ಭಗವಂತನು ತಿಳಿಸಿದ್ದಾನೆಂದು ಗ್ರಹಿಸಬೇಕು.

**786. (8) ಗೀತೆಯಲ್ಲಿ ಕಾಗೆಕೂಟಮಿ ಕುರಿತು ಕಾಗೆ ಎನ್ನುವ ಪದವನ್ನು ಉಪಯೊಗಿಸಿ ಒಂದು ಶ್ಲೋಕವನ್ನು ಹೇಳಿದ್ದಾರೆ. ಅದು ಯಾವ ಅಧ್ಯಾಯ, ಎಷ್ಟನೇ ಶ್ಲೋಕ?**

ಉ. 6 ನೇ ಅಧ್ಯಾಯ, 10 ನೇ ಶ್ಲೋಕ. ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ 5 ನೇ ಅಧ್ಯಾಯ, 10 ನೇ ಶ್ಲೋಕ.

**ವಿವರ :** ಆತ್ಮ ಸಂಯಮ ಯೋಗವೆನ್ನುವ ಅಧ್ಯಾಯದಲ್ಲಿ ಹತ್ತನೇ ಶ್ಲೋಕದಲ್ಲಿ **"ಏಕಾಕೀ ಯತ ಚಿತ್ತಾತ್ಮಾ"** ಎಂದು ಹೇಳಲಾಗಿದೆ.

**787. (9) ಮನುಷ್ಯನಾಗಿ ಹುಟ್ಟಿದ ನಂತರ ಸ್ವಲ್ಪವಾದರೂ ಪೌರುಷವಿರಬೇಕು ಎನ್ನುತ್ತಾರೆ. ಪೌರುಷವೆಂದರೆ ಗುಣವಾ ಅಲ್ಲವಾ? ಅದು ನಿನಗಿದೆಯಾ?**

ಉ. ಗುಣವಲ್ಲ. ನನಗೆ ಸ್ವಲ್ಪವಿದೆ.

**ವಿವರ :** ಪೌರುಷ ಗುಣವಲ್ಲ. ಪುರುಷತ್ವವನ್ನು ಹೊಂದಿರುವುದು ಪೌರುಷ. ಪೌರುಷ ಎಂದರೆ ಪುರುಷನಿಗೆ ಸಂಬಂಧಿಸಿರುವುದು ಅಥವಾ ದೈವಜ್ಞಾನ ಎಂದು ಅರ್ಥ. ಅಪೌರುಷವೆಂದರೆ ಪುರುಷನಲ್ಲದ್ದು ಪ್ರಕೃತಿಗೆ ಸಂಬಂಧಿಸಿರುವುದೆಂದು ಅರ್ಥ. ವೇದಗಳು ಅಪೌರುಷಗಳು ಎಂದರೆ ವೇದಗಳು ಮಾಯೆಗೆ ಸಂಬಂಧಿಸಿರುವವೆಂದು ಅಥವಾ ಪ್ರಕೃತಿಗೆ ಸಂಬಂಧಿಸಿರುವವೆಂದು ತಿಳಿಯುತ್ತಿದೆ. ಪೌರುಷ ಎಂದರೆ ದೈವ, ದೈವವೊಂದರ ಜ್ಞಾನವೆಂದು ತಿಳಿಯುತ್ತಿದೆ. ದೈವಜ್ಞಾನ ನನಗೆ ಸ್ವಲ್ಪ ಇರುವುದರಿಂದ ನನಗೆ ಸ್ವಲ್ಪ ಪೌರುಷವಿದೆಯೆಂದು ಹೇಳುತ್ತಿದ್ದೇನೆ.

**788. (10) ಕಣ್ಣಿಂದ ನೋಡುವುದು ನಿಜ, ಕಿವಿಯಿಂದ ಕೇಳುವುದು ಸುಳ್ಳು. ಉದಾಹರಣೆಗೆ ನೀನು ನೋಡಿದ ನಿಜ, ನೀನು ಕೇಳಿರುವ ಸುಳ್ಳು ಬರೆಯಿರಿ?**

**ವಿವರ :** ಕಣ್ಣಿಂದ ನೋಡುವುದು ನಿಜ. ನಿಜ ಎಂದರೆ ಹುಟ್ಟಿರುವುದು ಪ್ರತ್ಯಕ್ಷವಾಗಿ ಇದೆಯೆಂದು ಅರ್ಥ. "ಜ" ಎಂದರೆ ಹುಟ್ಟುವುದು ಎಂದು ಅರ್ಥ, ನಿಜ ಎಂದರೆ ಹುಟ್ಟಿ ಇರುವುದು. ಹುಟ್ಟಿದ್ದು ಪ್ರತ್ಯಕ್ಷವಾಗಿ ಇರುವುದು ಪ್ರಕೃತಿ ಅಥವಾ ಮಾಯೆ. ಕಣ್ಣಿಂದ ನೋಡಲಾಗುವುದು ಪ್ರಕೃತಿಯೇ, ಆದ್ದರಿಂದ ಕಾಣಿಸುವುದೆಲ್ಲವೂ ಮಾಯೆ ಅಥವಾ ಪ್ರಕೃತಿ ಎಂದು ಹೇಳುತ್ತಿದ್ದೇವೆ. ಅಬದ್ಧ ಎಂದರೆ ಬದ್ಧವಲ್ಲದ್ದು, ಬಂಧಿಸಲಾರದ್ದು ಎಂದು ಅರ್ಥ. ದೇವರು ಬಂಧಿಸಲ್ಪಡದ ಅಬದ್ಧನು. ಕಿವಿಯಿಂದ ಕೇಳುವ ದೈವಜ್ಞಾನ ಅಬದ್ಧವಾದದ್ದು. ಜ್ಞಾನ ಅಬದ್ಧ ಎಂದರೆ ಆಶ್ಚರ್ಯಪಡಬೇಕಾದ ಅವಶ್ಯವಿಲ್ಲ. ಅಬದ್ಧವೆಂದರೆ ಅಸತ್ಯವೆಂದುಕೊಳ್ಳಬಾರದು. ಕರ್ಮ ಬಂಧನದಲ್ಲಿ ಸಿಲುಕಿಕೊಳ್ಳುವುದಲ್ಲವೆಂದು ಅರ್ಥ ಮಾಡಿಕೊಳ್ಳಬೇಕು. ಜ್ಞಾನ ಕರ್ಮವನ್ನು ಶಾಸಿಸುವುದು, ಕರ್ಮವನ್ನು

ದಹಿಸುವುದು. ಕರ್ಮಕ್ಕೆ ಜ್ಞಾನವು ಬಂಧಿಯಾಗುವುದಲ್ಲ. ಆದ್ದರಿಂದ ಕಿವಿಯಿಂದ ಕೇಳುವ ಜ್ಞಾನ ಅಬದ್ಧವಾದದ್ದು. ಕಣ್ಣಿಂದ ನಿಜವಾದ ಪ್ರಕೃತಿಯನ್ನು ನೋಡುತ್ತಿದ್ದೇನೆ. ಹಾಗೇ ಕಿವಿಯಿಂದ ಅಬದ್ಧವಾದ ಜ್ಞಾನವನ್ನು ಕೇಳುತ್ತಿದ್ದೇನೆ. ಪೂರ್ವದಲ್ಲಿ ಹಿರಿಯರು ಸಹ ಎಲ್ಲರಿಗೂ ತಿಳಿಯುವಹಾಗೆ ನೋಡುವುದು ನಿಜ, ಕೇಳುವುದು ಅಬದ್ಧವೆಂದಿದ್ದಾರೆ.

## ಜ್ಞಾನ ಪರೀಕ್ಷೆ

**ಕೊತ್ತಕೋಟ** **ದಿನಾಂಕ–12–08–2001**

789. (1) ತನ್ನನ್ನು ಹೊಡೆಯುವವನಿದ್ದಾಗ, ಅವನ ತಲೆಯನ್ನು ಹೊಡೆಯುವ ವನಿದ್ದಾನೆನ್ನುತ್ತಾರೆ. ತನ್ನನ್ನು ಹೊಡೆಯುವವನ್ಯಾರು? ತನ್ನನ್ನು ಹೊಡೆಯುವವನ ತಲೆಯನ್ನು ಹೊಡೆಯುವವನ್ಯಾರು?

ಉ. ಹೊಡೆಯುವವನು ಕರ್ಮ. ಅವನನ್ನು ಹೊಡೆಯುವವನು ಜ್ಞಾನ.

**ವಿವರ :** ಪ್ರತಿ ಜೀವರಾಶಿಯನ್ನು ಕರ್ಮ ಶಾಸಿಸಿ ನಡೆಸುತ್ತಿದೆ. ನಾನು ನೀನು ಎನ್ನುವ ತಾರತಮ್ಯವಿಲ್ಲದೆ ಎಲ್ಲರೂ ಕರ್ಮ ಕೈಯಲ್ಲಿ ಸಿಲುಕಿ ಬಾಧೆಬೀಳುತ್ತಿದ್ದೇವೆ. ಅಂದರೆ ಮೇಲಿನ ಪ್ರಶ್ನೆಯಲ್ಲಿ ಹೇಳಿದ ಹಾಗೆ ತನ್ನನ್ನು ಹೊಡೆಯುವವನು ಕರ್ಮ ಎಂದು ಹೇಳಬಹುದು. ಎಲ್ಲರನ್ನು ಹೊಡೆಯುವವನು ಕರ್ಮವಾದರೇ, ಅವನ ತಲೆಯನ್ನು ಹೊಡೆಯುವವನು ಮತ್ತೊಬ್ಬನು ಇದ್ದಾನೆ. ಕರ್ಮ ಎಲ್ಲರನ್ನು ಹೊಡೆಯುವುದಾದರೆ ಕರ್ಮವನ್ನು ಹೊಡೆದು ಓಡುಸುವುದು ಜ್ಞಾನ. ಜ್ಞಾನವೆನ್ನುವ ಅಗ್ನಿ, ಕರ್ಮಗಳೆನ್ನುವ ಕಟ್ಟಿಗೆಗಳನ್ನು ಸುಟ್ಟು ಹಾಕುವುದೆಂದು ಗೀತೆಯಲ್ಲಿ ಸಹ ಹೇಳಿದ್ದಾರೆ. ಹುಟ್ಟಿದ ಪ್ರತಿ ಒಬ್ಬರನ್ನು ತನ್ನ ಅಧೀನದ ಪ್ರಕಾರ ನಡೆಸುವ ಕರ್ಮ ಜ್ಞಾನದ ಕೈಯಲ್ಲಿ ನಶಿಸುತ್ತಿದೆ. ಆದ್ದರಿಂದ ತನ್ನನ್ನು ಹೊಡೆಯುವವನಿದ್ದರೆ, ಅವನ ತಲೆಹೊಡೆಯುವವನಿದ್ದಾನೆಂದು ಹಿರಿಯರು ಗಾದೆಯಾಗಿ ಹೇಳಿದ್ದಾರೆ.

**790. (2) ಮನೆಗೆದ್ದು ಬೀದಿಗೆಲ್ಲು ಎಂದಿದ್ದಾರೆ. ಮನೆ ಬೀದಿಯ ಅರ್ಥವೇನು?**

ಉ. ಮನೆ ಶರೀರ. ಬೀದಿ ಹೊರಗೆ ಬಯಲು.

**ವಿವರ :** ಮನೆ ಶರೀರವಾದಾಗ, ಅದರಲ್ಲಿರುವ ಆತ್ಮನನ್ನು ತಿಳಿಯುವುದು, ಕರ್ಮವನ್ನು

ಜಯಿಸುವುದನ್ನು ಮನೆ ಗೆಲ್ಲುವುದೆಂದಿದ್ದಾರೆ. ಶರೀರದಲ್ಲಿನ ಆತ್ಮ ಜ್ಞಾನ ತಿಳಿದು, ಕರ್ಮವನ್ನು ನಿರೋಧಿಸುವ ಶಕ್ತಿ ಇರುವವನು ಮನೆ ಗೆದ್ದಂತೆ ಎಂದಿದ್ದಾರೆ. ಅಂತಹವನು ಶರೀರದ ಹೊರಗೆ ಅಣುವಣುವಿನಲ್ಲಿ ವ್ಯಾಪಿಸಿದ ಪರಮಾತ್ಮನೊಳಗೆ ಸೇರಬಲ್ಲನು. ಮೊದಲು ಶರೀರದಲ್ಲಿನ ಆತ್ಮವೊಂದರ ಜ್ಞಾನವನ್ನಾಗಲಿ, ಕರ್ಮವನ್ನು ಸುಡುವ ಶಕ್ತಿಯನ್ನಾಗಲಿ ಸಂಪಾದಿಸದವನು ಹೊರಗೆ ಬಯಲಿನಲ್ಲಿನ ಪರಮಾತ್ಮನನ್ನು ಸೇರಲಾರನು. ಶರೀರದಲ್ಲಿನ ಜ್ಞಾನವನ್ನು ತಿಳಿಯುವುದನ್ನು ಮನೆ ಗೆಲ್ಲುವುದೆಂದು ಹೊರಗೆ ಪರಮಾತ್ಮನನ್ನು ತಿಳಿಯುವುದನ್ನು ಬೀದಿ ಗೆಲ್ಲುವುದೆಂದು, ಗಾದೆಯಾಗಿ ಹೇಳಿದ್ದಾರೆ.

**791. (3) ಕರ್ಮಾತೀತವಾಗಿರುವವು ನಿನ್ನ ಶರೀರದಲ್ಲಿ ಇವೆಯಾ?**

ಉ. ಇವೆ.

**ವಿವರ :** ಶರೀರದಲ್ಲಿ ಪ್ರತಿ ಭಾಗ ಕರ್ಮಾಧೀನದಲ್ಲಿ ಇದ್ದು, ಕರ್ಮದಿಂದ ಬರುವ ಸುಖ ದುಃಖವನ್ನು ಮನಸ್ಸಿನಿಂದ ಒಳಗಿರುವ ಜೀವಾತ್ಮನಿಗೆ ಸೇರಿಸುತ್ತಿವೆ. ಶರೀರದಲ್ಲಿ ಸುಮಾರು ಎಲ್ಲಾ ಭಾಗಗಳು ಕರ್ಮಾಧೀನದಲ್ಲಿರುವಾಗ, ಶರೀರ ಅಂಚಿನಲ್ಲಿರುವ ಉಗುರು ಕೂದಲು ಕರ್ಮಾತೀತವಾಗಿವೆ. ಉಗುರು ಕೂದಲುಗಳಿಂದ ಎಂತಹ ಕರ್ಮ ಅನುಭವಕ್ಕೆ ಬಾರದು. ಉಗುರುಗಳನ್ನು ಕತ್ತರಿಸಿದರೂ, ಕೂದಲುಗಳನ್ನು ಕತ್ತರಿಸಿದರೂ ಅವುಗಳಿಂದ ಬಾಧೆ ಇರುವುದಿಲ್ಲ. ಅವುಗಳಿಂದ ಕರ್ಮವನ್ನು ಜೀವಾತ್ಮನು ಅನಿಭವಿಸುವುದಿಲ್ಲ. ಆದ್ದರಿಂದ ನಮ್ಮ ಶರೀರದಲ್ಲಿನ ಉಗುರು ಕೂದಲು ಕರ್ಮಕ್ಕೆ ಅತೀತವಾಗಿ ಇವೆಯೆಂದು ಹೇಳಬಹುದು.

**792. (4) ಮುಪ್ಪು ತಿಪ್ಪಲಿಟ್ಟು ಮೂರು ಕೆರೆಯ ನೀರನ್ನು ಕುಡಿಸುತ್ತಿರುವುದು ಯಾರು?**

ಉ. ಕರ್ಮ.

**ವಿವರ :** ಪ್ರತಿ ಮನುಷ್ಯನನ್ನು ಮುಪ್ಪು ತಿಪ್ಪಲಿಟ್ಟು ಮೂರು ಕೆರೆಯ ನೀರನ್ನು ಕುಡಿಸುತ್ತಿರುವುದು ಅವರವರ ಕರ್ಮ. ಇದು ಗಾದೆ ರೂಪವಾಗಿ ಹೇಳಿರುವುದು. ಮುಪ್ಪು ಎಂದರೆ ಅಪಘಾತ, ಅಪಾಯ ಎಂದು ಅರ್ಥ. ಅಪಘಾತ ಅಪಾಯಗಳೊಂದಿಗೆ ಕೂಡಿಕೊಂಡು ತಿಪ್ಪಲು ಇಡುವುದು ಕರ್ಮ. ತಿಪ್ಪಲು ಎಂದರೆ ಕಷ್ಟಗಳು. ಎಷ್ಟೋ ಭಯಂಕರವಾದ ಕಷ್ಟಗಳಿಗೆ ಗುರಿ ಮಾಡುವುದು ಪ್ರಾರಬ್ಧಕರ್ಮ ಎಂದು ತಿಳಿಯಬೇಕು. ಮೂರು ಕೆರೆಯ ನೀರು ಎಂದರೆ ಮೂರು ಗುಣಗಳ ವಿಷಯಗಳೆಂದು ಗುರುತಿಸಬೇಕು. ಮೂರು ಗುಣಗಳನ್ನು ಮೂರು ಕೆರೆಗಳಾಗಿ ವರ್ಣಿಸಿ, ಮೂರು ಗುಣ ವಿಷಯಗಳು

ಪ್ರವಾಹದಹಾಗೆ ಒಂದರಿಂದೆ ಒಂದು ಬರುತ್ತಿವೆ ಆದ್ದರಿಂದ ವಿಷಯಗಳನ್ನು ಕೆರೆ ನೀರಿನಂತೆ ವರ್ಣಿಸಿದ್ದಾರೆ. ಮೂರು ಗುಣಗಳ ವಿಷಯಗಳನ್ನು ಮನುಷ್ಯನ ಮೇಲೆ ತೋರಿಸುತ್ತಾ ತಿಪ್ಪಲು ಇಡುವುದು ಕರ್ಮ ಎಂದು ತಿಳಿಯಬೇಕು.

**793. (5) ಜೀವಾತ್ಮನಾಗಿರುವ ಭಗವಂತನು ಸಹ ಪರಮಾತ್ಮನನ್ನು ಆರಾಧಿಸಬೇಕಾಗಿದ್ದೇನಾ?**

ಉ. ಆರಾಧಿಸಬೇಕಾಗಿದ್ದೇ.

**ವಿವರ :** ಪರಮಾತ್ಮ ಶರೀರವನ್ನು ಧರಿಸಿ ಬಂದಾಗ ಭಗವಂತನಾಗುತ್ತಾನೆ. ಭಗವಂತನ ಶರೀರದಲ್ಲಿ ಒಂದೇ ಪರಮಾತ್ಮ ಜೀವಾತ್ಮನಾಗಿ, ಆತ್ಮನಾಗಿ ಇರುತ್ತಿದ್ದಾನೆ. ಜೀವಾತ್ಮನಾಗಿ ಇರುವಾಗ ಭಗವಂತನು ಸಹ ಪರಮಾತ್ಮನನ್ನು ಆರಾಧಿಸುತ್ತಿದ್ದಾನೆ. ಆತನಿಗೆ ಮೋಕ್ಷ ಅವಶ್ಯವಿಲ್ಲದಿದ್ದರೂ, ಇತರರಿಗೆ ಮಾರ್ಗದರ್ಶಕತೆ ಗೋಸ್ಕರ ಜೀವಾತ್ಮನಾಗಿ ಇರುವವನು ಹೀಗೆ ಮಾಡಬೇಕಾಗಿದ್ದೇ ಎಂದು, ತಾನು ನಡೆದು ಇತರರ ನಡಿಗೆಗೆ ಮಾರ್ಗವನ್ನು ತೋರಿಸಿದವನಾಗುತ್ತಿದ್ದಾನೆ. ಆದ್ದರಿಂದ ಭಗವಂತನಾಗಿದ್ದರೂ ಪರಮಾತ್ಮನನ್ನು ಆರಾಧಿಸಬೇಕಾಗಿದ್ದೇ.

**794. (6) ತಲೆಗೆ ಕೂದಲು, ಕೈಗೆ ಕಾಲಿಗೆ ಉಗುರುಗಳು ಇವೆ. ಅವುಗಳಲ್ಲಿ ತಲೆ ಕೂದಲು ಕಪ್ಪಾಗಿ, ಕೈಯಿ ಉಗುರುಗಳು ಬೆಳ್ಳಗೆ ಇರುವುದಕ್ಕೆ ಕಾರಣವಿದೆಯಾ?**

ಉ. ಇದೆ.

**ವಿವರ :** ತಲೆಕೂದಲು ಕೈಉಗುರುಗಳು ಶರೀರದಲ್ಲಿ ಮೋಕ್ಷ ಚಿಹ್ನೆಗಳಾಗಿ ಇದ್ದು ಮತ್ತೊಂದು ಅರ್ಥವನ್ನು ಸಹ ತಿಳಿಸುತ್ತಿವೆ. ತಲೆಯೊಳಗೆ ಅನೇಕವಾಗಿ ಎಷ್ಟೋ ಲೆಕ್ಕವಿಲ್ಲದಷ್ಟು ಆಲೋಚನೆಗಳಿವೆ. ಅವುಗಳಿಗೆ ಗುರ್ತಾಗಿ ಲೆಕ್ಕವಿಲ್ಲದಷ್ಟು ಕೂದಲು ತಲೆಮೇಲೆ ಇವೆ. ತಲೆಯೊಳಗಿರುವ ಅವುಗಳಿಗೆ ನಮೂನೆಯಾಗಿ ತಲೆ ಮೇಲೆ ಕೂದಲುಗಳು ಇರುವುದಲ್ಲದೇ ಕೂದಲು ಕಪ್ಪಾಗಿ ಇರುವುದಕ್ಕೆ ಕಾರಣವಿದೆ. ಅದು ಏನೆಂದರೆ! ತಲೆ ಒಳಗಿರುವ ಗುಣ ವಿಷಯಗಳಿಂದಲೇ ಕರ್ಮ ಏರ್ಪಡುತ್ತಿದೆ. ಕರ್ಮ ಅಜ್ಞಾನ ಸಂಬಂಧ ವಾಗಿ ಜನ್ಮಿಸುತ್ತಿದೆ. ಆದ್ದರಿಂದ ಲೆಕ್ಕವಿಲ್ಲದಷ್ಟು ತಲೆಯಲ್ಲಿನ ಯೊಚನೆಗಳಿಂದ ಕರ್ಮ ಬರುತ್ತಿದೆಯೆಂದು, ವಿಷಯರೂಪದಲ್ಲಿ ಕರ್ಮ ಇದೆಯೆಂದು ತಿಳಿಯುವಹಾಗೆ, ಕರ್ಮಕ್ಕೆ

ಗುರ್ತಾಗಿ ಕೂದಲುಗಳು ಕಪ್ಪಾಗಿ ಹುಟ್ಟುತ್ತಿವೆ. ಕರ್ಮೇಂದ್ರಿಯಗಳಲ್ಲಿ ಮುಖ್ಯವಾದವು ಕಾಲು ಕೈಗಳು. ಕರ್ಮದಿಂದ ನಡೆಯುವ ಕೆಲಸಗಳನ್ನು ಹೆಚ್ಚಾಗಿ ಕೈಗಳು ಕಾಲುಗಳು ಮಾಡುತ್ತಿವೆ. ಕೆಲಸಗಳು ಮಾಡುವುದರಲ್ಲಿ ಎಲ್ಲದಕ್ಕಿಂತ ಮೊದಲು ಕೈಗಳಿದ್ದರೂ ಅವುಗಳಿಂದ ಕರ್ಮ ಅಂಟುತ್ತಿಲ್ಲ. ನಾವು ನಿಮಿತ್ತ ಮಾತ್ರವಾಗಿ ಮಾಡುತ್ತಿದ್ದೇವೆ. ನಮ್ಮಿಂದಾಗಲಿ, ನಮಗಾಗಲಿ ಕರ್ಮ ಅಂಟುವುದಿಲ್ಲವೆಂದು ತಿಳಿಸುವ ಸಲುವಾಗಿ ಕೊನೆಯಲ್ಲಿ ಉಗುರುಗಳು ಬೆಳ್ಳಗೆ ಇವೆ.

**795. (7) ವಾಚಾ ಜ್ಞಾನ, ಸಾಧನೆ ಜ್ಞಾನ ಎನ್ನುತ್ತಾರೆ. ಈ ಎರಡರಲ್ಲಿ ಯಾವುದು ಮುಖ್ಯವಾದದ್ದು.**

ಉ. ಎರಡೂ ಮುಖ್ಯವೇ.

**ವಿವರ :** ಭಗವದ್ಗೀತೆಯಲ್ಲಿ ಭಗವಂತನು ಮೊದಲು ಎರಡು ಯೋಗಗಳನ್ನು ಕುರಿತು ಹೇಳಿದ್ದಾನೆ. ಅದರಲ್ಲಿ ಒಂದು ಕರ್ಮಯೋಗ, ಎರಡನೆಯದು ಬ್ರಹ್ಮಯೋಗ ಅನ್ನುತ್ತೇವೆ. ಈ ಎರಡು ಯೋಗಗಳನ್ನು ತಿಳಿದುಕೊಳ್ಳಬೇಕೆಂದರೆ ಮೊದಲು ಯಾರಿಂದಾದರೂ ಬಾಯಿಂದ ಹೇಳುವ ಮಾತುಗಳಿಂದಲೇ ತಿಳಿದುಕೊಳ್ಳಲಾಗುವುದು. ವಾಚಾ ಜ್ಞಾನದಿಂದಲೇ ಯೋಗ ವಿಷಯಗಳು ತಿಳಿಯುತ್ತವೆ. ಕೆಲವರು ವಾಚಾ ಜ್ಞಾನ ನಮಗೆ ಅವಶ್ಯವಿಲ್ಲ. ಎಷ್ಟು ಕೇಳಿದರೂ ಕೊನೆಗೆ ಸಾಧನೆ ಮಾಡಬೇಕಾದ್ದೇ ತಾನೆ! ಆದ್ದರಿಂದ ನಮಗೆ ಸಾಧನೆ ಅವಶ್ಯಕ ಎನ್ನುತ್ತಾರೆ. ಸಾಧನೆ ಮಾಡುವುದಕ್ಕಾದರೂ ಅದು ಹೇಗೆ ಮಾಡಬೇಕೋ ವಾಚಾಜ್ಞಾನದಿಂದ ತಿಳಿದುಕೊಳ್ಳಬೇಕಾಗಿದೆ. ಶ್ರೀಕೃಷ್ಣನು ಅರ್ಜುನನಿಗೆ ಹೇಳಿರುವುದು ಸಹ ವಾಚಾ ಜ್ಞಾನವೆಂದು ಮರೆಯಬಾರದು. ಮೊದಲು ಗುರುವುನಿಂದ ಕೇಳಿರುವ ವಾಚಾ ಜ್ಞಾನವನ್ನು ಆಚರಣೆಯಲ್ಲಿಟ್ಟುಕೊಂಡು ಸಾಧನೆ ಜ್ಞಾನವಾಗಿ ಮಾಡಿಕೊಳ್ಳಬಹುದು. ಮೊದಲು ವಾಚಾ ಜ್ಞಾನ ಅವಶ್ಯ. ವಾಚಾ ಜ್ಞಾನ ಪೂರ್ತಿ ತಿಳಿದುಕೊಂಡ ನಂತರ ಸಾಧನೆ ಜ್ಞಾನ ಅವಶ್ಯಕ. ವಾಚಾ ಜ್ಞಾನ ಪೂರ್ತಿಯಾಗಿ ತಿಳಿದುಕೊಳ್ಳುವುದಕ್ಕೆ ಕೆಲವು ಸಂವತ್ಸರಗಳ ಕಾಲ ಬೇಕಾಗುತ್ತದೆ. ಪೂರ್ತಿಯಾಗಿ ತಿಳಿದುಕೊಂಡನಂತರ ಸಾಧನೆ ಜ್ಞಾನ ಕೆಲವು ನಿಮಿಷಗಳು ಅಥವಾ ಕೆಲವು ಸೆಕೆಂಡುಗಳಲ್ಲಿ ತಿಳಿಯುವುದು. ವಾಚಾ ಜ್ಞಾನವಿಲ್ಲದೆ ಸಾಧನೆ ಜ್ಞಾನ ತಿಳಿಯುವುದಕ್ಕೆ ಕೆಲವು ಜನ್ಮಗಳಾದರೂ ಸಾಧ್ಯವಾಗುವುದಿಲ್ಲ.

# ಜ್ಞಾನ ಪರೀಕ್ಷೆ

**ಧರ್ಮವರಂ** **ದಿನಾಂಕ–08–09–2001**

**796. (1) ಧೈರ್ಯ ಯಾರಿಗಿರುತ್ತದೆ ಧೈರ್ಯವಂತನಿಗಾ, ಪರಾಕ್ರಮವಂತನಿಗಾ ಇನ್ನೂ ಯಾರಿಗಾದಾರೂ ಇರುತ್ತದಾ?**

ಉ. ಜ್ಞಾನಿಗೆ.

**ವಿವರ :** ಪರಧರ್ಮದಲ್ಲಿ ಭಯವಿರುತ್ತದೆನ್ನುವ ಗೀತಾವಾಕ್ಯದ ಪ್ರಕಾರ ಭಯ ಅಜ್ಞಾನ ಸಂಬಂಧವಾದುದೆಂದು, ಧೈರ್ಯ ಜ್ಞಾನ ಸಂಬಂಧವಾದುದೆಂದು ತಿಳಿಯುತ್ತಿದೆ. ಭಯ ಧೈರ್ಯ ಗುಣಗಳ ಗುಂಪುಗಳಲ್ಲಿ ಇಲ್ಲದಿದ್ದರೂ ಸಪ್ತಗ್ರಹಗಳಿಗೆ ಎರಡು ಛಾಯಾ ಗ್ರಹಗಳಾದ ರಾಹು ಕೇತುಗಳು ಸೇರಿದಹಾಗೆ 12 ಗುಣಗಳಿಗೆ ಎರಡು ಛಾಯಾ ಗುಣಗಳು ಸೇರಿವೆ. ಅವುಗಳೆ ಧೈರ್ಯ, ಭಯ. ಇವನ್ನು ಛಾಯಾ ಗುಣಗಳೆಂದು ಹೇಳಿ ಗುಣಗಳೆಂದೇ ಲೆಕ್ಕಿಸಬೇಕಾಗುತ್ತದೆ. ಧೈರ್ಯವಂತರೆಂದು ಹೇಳಿಕೊಳ್ಳುವವರಲ್ಲಿಯೂ ಮತ್ತು ಪರಾಕ್ರಮ ವಂತರೆಂದು ಹೇಳಿಕೊಳ್ಳುವವರಲ್ಲಿಯೂ ನಿಜವಾದ ಧೈರ್ಯವಿರುವುದಿಲ್ಲ. ಪರಿಸ್ಥಿತಿಗಳನ್ನು ಅನುಸರಿಸಿ ಅವರಲ್ಲಿ ಭಯ ಉಂಟಾಗಿ ಧೈರ್ಯವಿಲ್ಲದೆ ಹೋಗುವುದು. ಸಂಪೂರ್ಣ ಜ್ಞಾನಿಯಲ್ಲಿ ಭಯ ಸ್ಥಾನ ಮಾಡಿಕೊಳ್ಳಬೇಕೆಂದು ನೋಡಿದರೂ ಧೈರ್ಯ ನಿಂತಿರುತ್ತದೆ. ಧೈರ್ಯ ಜ್ಞಾನ ಸಂಬಂಧವಾದುದು ಆದ್ದರಿಂದ ಜ್ಞಾನಿಗಳು ಧೈರ್ಯವನ್ನು ಕಳೆದು ಕೊಳ್ಳುವುದಿಲ್ಲ. ಸ್ವಧರ್ಮದಲ್ಲಿ ಸಾಯುವುದಕ್ಕಾದರೂ ಸಿದ್ಧವಾಗುತ್ತಾರೆ ಆದರೆ ಪರಧರ್ಮದಲ್ಲಿನ ಭಯವನ್ನು ಹೊಂದುವುದಿಲ್ಲ.

**797. (2) ಮೂರ್ಖನೆಂದರೆ ಯಾರು ಬುದ್ಧಿ ಕಡಿಮೆ ಇರುವವನಾ! ನೋಡದೆ ನಂಬುವವನಾ?**

ಉ. ಜ್ಞಾನ ಇಲ್ಲದವನು.

**ವಿವರ :** ಮೂಢ ಮೌಢ್ಯ ಎನ್ನುವ ಪದಗಳು ಕತ್ತಲು ಅಜ್ಞಾನ ಎನ್ನುವ ವಿಷಯವನ್ನು ತಿಳಿಸುತ್ತಿವೆ, ಮೂರ್ಖವೆಂದರೆ ಅಜ್ಞಾನವೆಂದು ಅರ್ಥ. ಮೂರ್ಖನೆಂದರೆ ಅಜ್ಞಾನಿ ಅಥವಾ ಜ್ಞಾನ ಇಲ್ಲದವನೆಂದು ಹೇಳಬಹುದು. ಬುದ್ಧಿ ಕಡಿಮೆ ಇರುವವನು ನೋಡದೆ ನಂಬುವವರು ಮೂರ್ಖರಲ್ಲ. ಬುದ್ಧಿ ಕಡಿಮೆ ಇರುವವರಲ್ಲೂ, ನೋಡದೆ ನಂಬುವವರಲ್ಲೂ ಜ್ಞಾನವಿರಬಹುದು.

**798. (3) ಪ್ರಸಾದವೆಂದರೆ ಯಾವುದು ತೆಂಗಿನ ನೀರಾ! ಸಿಹಿ ಪದಾರ್ಥವಾ! ಇನ್ನೂ ಯಾವುದಾದರೂ ಇರಬಹುದಾ?**

ಉ. ಆತ್ಮಶಕ್ತಿ ಅಥವಾ ದೈವಶಕ್ತಿ ಕೂಡಿಕೊಂಡಿರುವ ಯಾವ ಪದಾರ್ಥವಾದರೂ ಪ್ರಸಾದವೇ.

**ವಿವರ :** ದೇವಾಲಯಗಳಲ್ಲಾಗಲಿ ಮತ್ತೆಲ್ಲಾದರಾಗಲಿ ದೈವಪೂಜೆ ಮಾಡಿದಾಗ ಪ್ರಸಾದ ತೆಗೆದುಕೊಳ್ಳುವುದು ಸಹಜ. ಪೂರ್ವದಲ್ಲಿ ಹಿರಿಯರು ಹೇಳಿದ ಪ್ರಕಾರ ಆರಾಧನೆ ವಿಧಾನ ತಿಳಿದು, ಅದೇ ಪದ್ಧತಿ ಅದೇ ಭಾವದಿಂದ ಪೂಜೆ ಮಾಡುವುದಾದರೇ, ಆ ಪೂಜೆಯೊಂದರ ಫಲಿತವಾಗಿ ಕಣ್ಣಿಗೆ ಕಾಣಿಸದ ದೈವಶಕ್ತಿ ನಾವು ಪ್ರಸಾದವಾಗಿ ತೆಗೆದುಕೊಳ್ಳುವ ಪದಾರ್ಥಗಳಲ್ಲಿ ಸೇರಿಹೋಗುವುದು. ಪದಾರ್ಥ ಪ್ರಸಾದವಾಗಿ ಬದಲಾಗುವುದಕ್ಕೆ ಅದರಲ್ಲಿ ದೈವಶಕ್ತಿ ಸೇರುವುದೇಯೆಂದು ತಿಳಿಯಬೇಕು. ಒಳ್ಳೆ ಭಕ್ತಿ ಜ್ಞಾನ ಭಾವದೊಂದಿಗೆ ಮಾಡಿದ ಆರಾಧನೆಯಲ್ಲೇ ಅಂತಹಶಕ್ತಿ ಇರುತ್ತದೆ. ಜ್ಞಾನವಿಲ್ಲದ ಪೂಜೆ ಮಾಡಿದರೆ ಇಟ್ಟಿರುವ ನೈವೇದ್ಯ ಪ್ರಸಾದವಾಗಿ ಬದಲಾಗುವುದಿಲ್ಲ, ಪದಾರ್ಥವಾಗೇ ಇರುತ್ತದೆ.

**799. (4) ಯಾವಾಗಾದರೂ ಎಲ್ಲಾದರೂ ಮನಸ್ಸಿಲ್ಲದ ಜೀವಿ ಇದೆಯಾ?**

ಉ. ಇದೆ.

**ವಿವರ :** ಪ್ರತಿ ಜೀವಿಗೂ, ಪ್ರತಿ ಮನುಷ್ಯನಿಗೂ ಶರೀರ ಕೆಲವು ಭಾಗಗಳಾಗಿ ಇದೆಯೆಂದು, ಅದರಲ್ಲಿ ಬಾಹ್ಯೇಂದ್ರಿಯಗಳು ಅಂತರೇಂದ್ರಿಯಗಳು ಇವೆಯೆಂದು, ಅಂತರೇಂದ್ರಿಯಗಳಲ್ಲಿ ಮನಸ್ಸು ಇದೆಯೆಂದು, ಹೇಳಿದ ನೀವೇ ಮನಸ್ಸು ಇಲ್ಲದ ಜೀವಿ ಇದೆ ಎನ್ನುವುದಕ್ಕೆ ಕಾರಣವೇನೆಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರವೇನೆಂದರೆ! ಶರೀರದಲ್ಲಿ ಮನಸ್ಸು ಇಲ್ಲದ ಜೀವಿ ಇದೆಯೆಂದು ಇಲ್ಲಿ ನಾನು ಹೇಳಲಿಲ್ಲವೆಂದು ಗ್ರಹಿಸಬೇಕು. ಯಾವಾಗಾದರೂ ಎಲ್ಲಾದರೂ ಎನ್ನುವ ಪ್ರಶ್ನೆಗೆ ಉತ್ತರವಾಗಿ ಮಲಗಿರುವ ಸಮಯದಲ್ಲಿ, ನಿದ್ರಾವಸ್ಥೆಯಲ್ಲಿ ಮನಸ್ಸು ಬ್ರಹ್ಮನಾಡಿಯಲ್ಲಿನ ಆತ್ಮನೊಳಗೆ ಸೇರಿ ಹೋಗಿದೆ. ಆದ್ದರಿಂದ ಆಗ ಮನಸ್ಸೊಂದರ ಕೆಲಸ ಏನೂ ಇಲ್ಲದಿರುವುದರಿಂದ ಆ ಸಮಯದಲ್ಲಿ ಮನಸ್ಸು ಇಲ್ಲವೆಂದೇ ಹೇಳಬಹುದು. ನಿದ್ರೆಯಲ್ಲಿ ಇಲ್ಲದ ಮನಸ್ಸು ಎಚ್ಚರದಲ್ಲಿ ಇದೆ. ನಿದ್ರಾವಸ್ಥೆಯಲ್ಲಿ ಮನಸ್ಸು ಬ್ರಹ್ಮನಾಡಿಯಲ್ಲಿ ಅಡಗಿ ಕಾಣಿಸದೆ ಹೋಗುತ್ತಿದೆ. ಆದ್ದರಿಂದ ಆ ಸಮಯದಲ್ಲಿ

ಮಾತ್ರ ಇಲ್ಲವೆಂದು ಹೇಳುತ್ತಿದ್ದೇವೆ. ಶಾಶ್ವತವಾಗಿ ಇಲ್ಲ ಎಂದು ತಿಳಿದುಕೊಳ್ಳಬಾರದು. ಶಾಶ್ವತವಾಗಿ ಮನಸ್ಸು ಇಲ್ಲದ ಜೀವರಾಶಿ ಎಲ್ಲಿಯೂ ಇರುವುದಿಲ್ಲ.

**800. (5) ಹುಟ್ಟಿದ ಮನೆ ಮೆಟ್ಟಿದ ಮನೆ ಇವೆ. ನಿನ್ನ ಮಗಳಿಗಾ, ನಿನ್ನ ಸೊಸೆಗಾ, ಇನ್ನೂ ಯಾರಿಗಾದರೂ ಇವೆಯಾ?**

ಉ. ಸರ್ವ ಜೀವರಾಶಿಗಳಿಗೂ ಇವೆ.

**ವಿವರ :** ಆಧ್ಯಾತ್ಮಿಕ ರೀತ್ಯಾ ಮಗಳಿಗೂ ಸೊಸೆಗೇ ಅಲ್ಲದೆ ಒಟ್ಟಾರೆ ಎಲ್ಲರಿಗೂ ಹುಟ್ಟಿದ ಮನೆ ಮೆಟ್ಟಿದ ಮನೆ ಇದೆ. ಪ್ರಪಂಚ ರೀತ್ಯಾ ಆದರೇ ಮಗಳಿಗೆ ಹುಟ್ಟಿದ ಮನೆ ಆಗಿದೆ ಸೊಸೆಗೆ ಮೆಟ್ಟಿದ ಮನೆ ಆಗುವುದು ಸಹಜ. ಜ್ಞಾನ ರೀತ್ಯಾ ನೋಡುವುದಾದರೆ ಮಗಳವೊಂದು ಹುಟ್ಟಿದ ಮನೆಯೇ ಸೊಸೆಗೂ ಸಹ ಹುಟ್ಟಿದ ಮನೆ ಆಗುತ್ತಿದೆ. ಎಲ್ಲರಿಗೂ ಒಂದೇ ಹುಟ್ಟಿದ ಮನೆ ಎಲ್ಲರಿಗೂ ಒಂದೇ ಮೆಟ್ಟಿದ ಮನೆಯಾಗಿದೆ. ಸರ್ವ ಜೀವಿಗಳು ಮನುಷ್ಯರು ಸಹಿತ ಮೊದಲು ಪರಮಾತ್ಮನಿಂದ ಬಂದಿದ್ದಾರೆ, ಆದ್ದರಿಂದ ಆ ಪರಮಪದ ಎಲ್ಲರಿಗೂ ಹುಟ್ಟಿದ ಮನೆ. ಮೊದಲು ಪರಮಾತ್ಮನಿಂದ ಬಂದಿರುವವರೆಲ್ಲರೂ ತಿರುಗಿ ಕೊನೆಗೆ ಪರಮಾತ್ಮನಲ್ಲೇ ಐಕ್ಯವಾಗಿ ಹೋಗಬೇಕು. ಆದ್ದರಿಂದ ಎಲ್ಲರಿಗು ಮೆಟ್ಟಿದ ಮನೆ ಸಹ ಪರಮಪದವೇ. ಹುಟ್ಟಿ ಬಂದಿರುವುದು, ಅಂತ್ಯವಾಗಿ ಹೋಗುವುದು, ಒಂದೇ ಸ್ಥಳವಾದ್ದರಿಂದ ಅದೇ ಎಲ್ಲರಿಗೂ ಹುಟ್ಟಿದ ಮನೆ, ಮೆಟ್ಟಿದ ಮನೆಯಾಗಿ ಇದೆ.

**801. (6) ಬ್ರಹ್ಮಯೋಗಿ, ಕರ್ಮಯೋಗಿ ಹೊರತು ಯಾವಾಗಾದರೂ ಎಲ್ಲಾದರೂ ಯಾರಾದರೂ ಅಹಂ ಇಲ್ಲದವನಿದ್ದಾನಾ?**

ಉ. ಇದ್ದಾನೆ.

**ವಿವರ :** ಯೋಗಿಗಳು ವಿನಃ ಸಾಧಾರಣ ವ್ಯಕ್ತಿ ಎಚ್ಚರದಿಂದಿರುವ ಸಮಯದಲ್ಲಿ ಅಹಂನ್ನು ಹೊಂದಿರುತ್ತಾರೆ. ರಾತ್ರಿ ನಿದ್ರೆ ಸಮಯದಲ್ಲಿ ನಿದ್ರಿಸುವವನು ಅಹಂಕಾರವನ್ನು ಕಳೆದುಕೊಂಡಿರುತ್ತಾನೆ. ಅಹಂ ನಿದ್ರೆ ಸಮಯದಲ್ಲಿ ಕೆಲಸ ಮಾಡುವುದಿಲ್ಲ. ಎಚ್ಚರದಲ್ಲಿ ಇರುವವನು ಕೆಲಸಮಾಡಿದಾಗ ಮಾತ್ರವೇ ಅಹಂ ಕೆಲಸ ಮಾಡುವುದು. ಎಚ್ಚರದಲ್ಲಿ ಸ್ವಪ್ನದಲ್ಲಿ ಮನಸ್ಸಿನ ಹಾಗೆ ಅಹಂ ಕೆಲಸ ಮಾಡುತ್ತಿದೆ. ನಿದ್ರೆಯಲ್ಲಿ ಮಾತ್ರ ಮನಸ್ಸಿನಂತೆ ಕೆಲಸ ಮಾಡುತ್ತಿಲ್ಲ. ಆದ್ದರಿಂದ ಆ ಸಮಯದಲ್ಲಿ ಅಹಂ ಇಲ್ಲವೆಂದು ಹೇಳುತ್ತಿದ್ದೇವೆ.

**802. (7) ಸ್ತ್ರೀ, ಪುರುಷ, ನಪುಂಸಕರಲ್ಲಿ ಸ್ತ್ರೀಯನ್ನು ಪ್ರಕೃತಿಯೊಂದಿಗೆ, ಪುರುಷನನ್ನು ಪರಮಾತ್ಮನೊಂದಿಗೆ ಹೋಲಿಸುತ್ತಿದ್ದೇವೆ. ನಪುಂಸಕನನ್ನು ಯಾರೊಂದಿಗೆ ಹೋಲಿಸಬಹುದು?**

ಉ. ಜೀವಾತ್ಮನೊಂದಿಗೆ.

**ವಿವರ :** ಇದಕ್ಕೂ ಹಿಂದಿನ ಪ್ರಶ್ನೆಗಳಲ್ಲೂ ಸಹ ಈ ವಿಷಯಕ್ಕೆ ಉತ್ತರ ಬಂದಿದೆ. ಈಗ ಸಹ ಸ್ವಲ್ಪ ಹೇಳುತ್ತಿದ್ದೇವೆ. ಪರಮಾತ್ಮ ಅಂಶವಾಗಿ ಕರ್ಮಬದ್ಧನಾದವನು ಜೀವಾತ್ಮ. ಜೀವಾತ್ಮ ಸಹ ಪುರುಷನೇ ಆದರೂ ಸ್ತ್ರೀ ತತ್ವವಾದ ಪ್ರಕೃತಿಯೊಂದಿಗೆ ಅಂದರೆ ಮಾಯೆಯೊಂದಿಗೆ ಸಮ್ಮಿಲನವಾಗಿ ಇದ್ದಾನಾದ್ದರಿಂದ ಪ್ರಕೃತಿ ಲಕ್ಷಣಗಳು ಜೀವಾತ್ಮನಲ್ಲಿ ಜೀರ್ಣಿಸಿಇವೆ. ಪರಮಾತ್ಮ ಅಂಶವಾಗಿ ಪುರುಷನಾದ ಜೀವಾತ್ಮ ಕರ್ಮಬದ್ಧನಾಗಿ ಮಾಯೆ ಭಾವದಲ್ಲಿರುವುದರಿಂದ ಅರ್ಧ ಪುರುಷನು, ಅರ್ಧ ಸ್ತ್ರೀಯಾಗಿ ಹೋಲಿಸಿ ನಪುಂಸಕನಾಗಿ ವರ್ಣಿಸುತ್ತಿದ್ದೇವೆ.

**803. (8) ಭಗವದ್ಗೀತೆ ಯಾರಿಂದ, ಯಾರ ಸುತ್ತಲೂ, ಯಾವುದರಿಂದ ಗೀಚಲಾಗಿದೆ?**

ಉ. ಭಗವಂತನಿಂದ, ಜೀವಿಗಳ ಸುತ್ತಾ, ಜ್ಞಾನದಿಂದ ಬರೆಯಲಾಗಿದೆ.

**ವಿವರ :** ಭಗವದ್ಗೀತೆಯನ್ನು ಭಗವಂತನಾದ ಶ್ರೀ ಕೃಷ್ಣನು ತಿಳಿಸಿದ್ದಾನೆ. ಭಗವಂತನು ಜ್ಞಾನವೆನ್ನುವ ಹದ್ದನ್ನು ಮಾನವನ ಸುತ್ತಾ ಗೀಚಿ ತೋರಿಸಿದ್ದಾನೆ. ರಾಮಾಯಣದಲ್ಲಿ ಲಕ್ಷ್ಮಣನು ಸೀತೆಗೆ ಹದ್ದನ್ನು ಏರ್ಪಡಿಸಿ, ಈ ಗೆರೆಯನ್ನು ದಾಟಬೇಡೆಂದು ಈ ಗೆರೆಯನ್ನು ದಾಟಿದರೆ ಅಪಾಯವಿರುತ್ತದೆಂದು ಹೇಳಿದ್ದಾನಂತೆ. ಹಾಗೇ ಭಗವಂತನು ಜ್ಞಾನ ಹದ್ದನ್ನು ಮನುಷ್ಯನಿಗೆ ಏರ್ಪಡಿಸಿ, ಈ ಗೆರೆ ದಾಟಿದರೆ ಮಾಯೆಯಿಂದ ಅಪಾಯವಿರುತ್ತದೆಂದು, ಈ ಗೆರೆ ಭಾವದೊಳಗೇ ಇರು ಎಂದು ಹೇಳಿದ್ದಾನೆ. ದೇವರು ಗೆರೆ ಗೀಚಿದರೂ, ಗೆರೆಯೊಳಗೆ ಇರು ಎಂದು ಹೇಳಿದರೂ, ಮನುಷ್ಯನಿಗೆ ಅಜ್ಞಾನವೆನ್ನುವ ಕುರಡುತನದಿಂದ ಗೆರೆ ಕಾಣಿಸದೆ, ಇದು ನಮಗೆ ಹದ್ದು ಎಂದು ತಿಳಿಯದೆ, ಅದರ ಧ್ಯಾಸವೇ ಇಲ್ಲದೆ ಗೆರೆಯನ್ನು ದಾಟಿ ಮಾಯೆಯ ಕೈಗೆ ಸಿಗುತ್ತಿದ್ದಾನೆ. ಮಾಯೆ ಎನ್ನುವ ರಾಕ್ಷಸಿಗೆ ಸಿಕ್ಕರೂ ಅದರಿಂದ ರಕ್ಷಣೆ ಬೇಕೆಂದರೆ, ದೇವರು ಗೀಚಿದ ಭಗವದ್ಗೀತೆ ಭಾವದೊಳಗೆ ಹೋದರೇನೇ ರಕ್ಷಣೆಯು ಸಾಧ್ಯವಾಗುತ್ತದೆ. ಗೆರೆಯೊಳಗೆ ಹೋಗದವರೆಗೂ ಮಾಯೆಯಿಂದ ರಕ್ಷಿಸುವವನೇ ಇಲ್ಲ.

**804. (9) ಹಸಿವಿಗೆ ಅನ್ನ, ಬಳಲಿಕೆಗೆ ನಿದ್ರೆ ಇರುವಹಾಗೆ ಕಷ್ಟಕ್ಕೆ ಏನು ಅವಶ್ಯಕ?**

ಉ. ಜ್ಞಾನ.

**ವಿವರ :** ಸರ್ವದುಃಖಗಳಿಗೂ ಹಾನಿಯನ್ನುಂಟುಮಾಡುವುದು ಜ್ಞಾನವೆಂದು ಗೀತೆಯಲ್ಲಿ ಹೇಳಿದ್ದಾರೆ. ಜ್ಞಾನ ಇರುವ ಮನುಷ್ಯನಿಗೆ ಕರ್ಮ ಸಿದ್ಧಾಂತವೆಲ್ಲವೂ ತಿಳಿದಿರುತ್ತದೆ. ಅಂತಹ ವ್ಯಕ್ತಿಗೆ ಎಷ್ಟು ದುಃಖ ಬಂದರೂ ಆತನು ಬಾಧೆಪಡುವುದಿಲ್ಲ. ದುಃಖಗಳಿಗೇ ಅಲ್ಲದೆ ಸಂತೋಷಗಳಿಗೂ ಸಹ ಹಿಗ್ಗುವುದಿಲ್ಲ, ಕಷ್ಟಗಳಿಗೆ ಕುಗ್ಗುವುದಿಲ್ಲ. ಆತ್ಮಜ್ಞಾನದಿಂದ ದುಃಖಗಳನ್ನು ಅನುಭವಿಸದ ಸ್ಥಿತಿಗೆ ಮನುಷ್ಯ ಸೇರಿಕೊಳ್ಳುವನು. ಹಸಿವಿಗೆ ಆಹಾರ ನಿವಾರಣೆಯಾದಂತೆ, ದುಃಖಗಳಿಗೆ ಜ್ಞಾನ ನಿವಾರಣೆಯಾಗಿ ಇದೆ.

**805. (10) ಹೆಂಡತಿ ಗಂಡ ಎಂದು, ಲಕ್ಷ್ಮೀನಾರಾಯಣರೆಂದು, ಪಾರ್ವತೀ ಪರಮೇಶ್ವರರೆಂದು, ಸೀತಾರಾಮರೆಂದು ಮೊದಲು ಹೆಂಗಸರನ್ನು ನಂತರ ಗಂಡಸರನ್ನು ಕರೆಯುವುದರಲ್ಲಿ ಕಾರಣವೇನಿದೆ?**

ಉ. ಜಗತಿಯಲ್ಲಿ ದೇವರಿಗಿಂತಲೂ ಮಾಯೆ ಮುಂದಿರುವುದರಿಂದ.

**ವಿವರ :** ಜಗತಿಯಲ್ಲಿ ದೇವರಿಗಿಂತ ಮಾಯೆಗೆ ಹೆಚ್ಚು ಬಲವಿದೆ. ಅಷ್ಟೇ ಅಲ್ಲದೆ ಪ್ರತಿ ಒಬ್ಬರಿಗೂ ದೇವರಿಗಿಂತಲೂ ಮೊದಲು ಮಾಯೆ ಅರ್ಥವಾಗುತ್ತಿದೆ. ಪ್ರಕೃತಿ ಪುರುಷರಲ್ಲಿ ಪ್ರಕೃತಿ ಹೆಸರು ಪುರುಷನ ಹೆಸರಿಗಿಂತಲೂ ಮೊದಲು ಹೇಳುತ್ತಿದ್ದೇವೆ. ವಿಶ್ವವೆಲ್ಲಾ ಬಲ ಹೊಂದಿರುವವನು, ಜಗತಿಯಲ್ಲಿ ಜೀವರಾಶಿಗಳ ಹತ್ತಿರ ಮಾತ್ರ ಬಲ ಇಲ್ಲದವನಾಗಿ ಇದ್ದರೇ, ಆತನಿಂದಲೇ ಸೃಷ್ಟಿಸಲಾದ ಮಾಯೆ ಆತನಿಗಿಂತಲೂ ಹೆಚ್ಚು ಬಲ ಹೊಂದಿದೆ. ದೇವರೇ ಮನುಷ್ಯನಾಗಿ ಮನುಷ್ಯರ ಹತ್ತಿರಕ್ಕೆ ಬಂದ ಆತನನ್ನು ಸಹ ಬಲಹೀನನನ್ನು ಮಾಡಿ ಕಷ್ಟಗಳ ಪಾಲು ಮಾಡುವ ಸಾಮರ್ಥ್ಯವನ್ನು ಹೊಂದಿದೆ. ಮಾಯೆ ಸ್ತ್ರೀ ಹೋಲಿಕೆಯಾದಾಗ, ಪರಮಾತ್ಮ ಪುರುಷನಾಗಿ ಇದ್ದಾನೆಂದು ಹೇಳಿದ್ದೇವೆ ಅಲ್ಲವೆ! ಸ್ತ್ರೀ ಅಂಶ ಹೊಂದಿದ ಮಾಯೆ ತನ್ನದಾದ ಹಿರಿಮೆಯನ್ನು ಪ್ರತಿ ಕ್ಷಣವೂ ಪ್ರಕಟಿಸಿಕೊಳ್ಳುತ್ತಿದೆ. ಪ್ರತಿಯೊಂದು ಕಡೆ ಜೋಡಿಗಳಲ್ಲಿ ಸ್ತ್ರೀ ಹೆಸರು ಮೊದಲು ಬರುವುದೇ ಅಲ್ಲದೆ ಕೊನೆಗೆ ತರಕಾರಿ ಮಾರುವವನು ಸಹ ಬದನೇಕಾಯಮ್ಮೊ ಎನ್ನುತ್ತಿದ್ದಾನೆ ಬದನೇಕಾಯಪ್ಪೊ ಎನ್ನುತ್ತಿಲ್ಲ. ಜಗತಿಯಲ್ಲಿ ಮಾಯೆ ತತ್ತ್ವ ಹೆಚ್ಚು, ದೈವತತ್ತ್ವ ಕಡಿಮೆ ಇದೆ ಎನ್ನುವುದಕ್ಕೆ ಇಂತಹವು ಬಹಳ ನಿದರ್ಶನಗಳು ಇವೆ.

# ಜ್ಞಾನ ಪರೀಕ್ಷೆ

**ಕೊತ್ತಕೋಟ** **ದಿನಾಂಕ–06–10–2001**

**806. (1) ಎಲ್ಲರಲ್ಲೂ ಇದ್ದು ಹೊರಗೆಲ್ಲಾ ಇಲ್ಲದಿರುವುದು, ಎಲ್ಲಾ ಕಡೆ ಇದ್ದು ಎಲ್ಲರಲ್ಲಿ ಇರುವುದು, ಎಲ್ಲರಲ್ಲಿ ಎಲ್ಲಾ ಕಡೆ ಇಲ್ಲದಿರುವುದು ಹೊರಗೆ ಇಲ್ಲದಿರುವುದು ಯಾವುದು?**

ಉ. ಆತ್ಮ, ಪರಮಾತ್ಮ, ಜೀವಾತ್ಮ.

**ವಿವರ :** ಎಲ್ಲರಲ್ಲೂ ಇದ್ದು ಎಲ್ಲಾ ಕಡೆ ಇಲ್ಲದಿರುವುದು ಆತ್ಮ. ಪ್ರತಿ ಜೀವರಾಶಿಯಲ್ಲೂ ಆತ್ಮ ಶರೀರವೆಲ್ಲಾ ವ್ಯಾಪಿಸಿ ಇದೆ. ಆತ್ಮವೇ ಪ್ರತಿ ಶರೀರಗಳನ್ನು ಕದಲಿಸುತ್ತಿದೆ. ಶ್ವಾಸವನ್ನು ಆಡಿಸುತ್ತಿದೆ. ಶರೀರಗಳಲ್ಲಿ ಮಾತ್ರ ಜೀವಾತ್ಮದೊಂದಿಗೆ ನಿವಾಸ ಮಾಡುವುದು ಆತ್ಮ. ಶರೀರಗಳ ಒಳಗೆ ಹೊರತು ಶರೀರಗಳ ಹೊರಗೆ ಮಾತ್ರ ಆತ್ಮವಿಲ್ಲ. ಆದ್ದರಿಂದಲೇ ಎಲ್ಲರಲ್ಲೂ ಇರುವುದೆಂದು, ಹೊರಗೆ ಎಲ್ಲೂ ಇಲ್ಲವೆಂದು, ಆತ್ಮನನ್ನು ಕುರಿತು ಹೇಳಿದ್ದೇವೆ. ಎಲ್ಲಾ ಇರುವುದು, ಎಲ್ಲರಲ್ಲೂ ಇರುವುದು ಪರಮಾತ್ಮ. ಪರಮಾತ್ಮ ಪ್ರತಿ ಅಣುವಿನಲ್ಲೂ ವ್ಯಾಪಿಸಿ ಇದೆ. ಶರೀರದೊಳಗೆ ಶರೀರದ ಹೊರಗೆ ಪ್ರತಿ ಪದಾರ್ಥದಲ್ಲಿಯೂ, ಪದಾರ್ಥವಿಲ್ಲದ ಶೂನ್ಯದಲ್ಲಿಯೂ, ಅಣುವಿನಲ್ಲಿಯೂ ಪರಮಾಣುವುನಲ್ಲಿಯೂ ವ್ಯಾಪಿಸಿರುವುದು ಪರಮಾತ್ಮ. ಇಲ್ಲಿದ್ದಾನೆ ಅಲ್ಲಿಲ್ಲವೆನ್ನುವುದಕ್ಕೆ ಅವಕಾಶವಿಲ್ಲದೆ ಒಟ್ಟು ಎಲ್ಲಾ ವ್ಯಾಪಿಸಿರುವವನು ಪರಮಾತ್ಮ ಆದ್ದರಿಂದ ಆತನನ್ನು ಎಲ್ಲಾ ಕಡೆ ಇದ್ದಾನೆಂದು, ಎಲ್ಲರಲ್ಲೂ ಇದ್ದಾನೆಂದು ಹೇಳಬಹುದು. ಪರಮಾತ್ಮ ಎಲ್ಲಾ ತಾನಾಗಿರುವುದರಿಂದ ಇದೆ ಎಂದು, ಇದ್ದಾನೆ ಎಂದು ಸ್ತ್ರೀಲಿಂಗ ಪುರುಷಲಿಂಗಗಳನ್ನು ಎರಡನ್ನೂ ಬಳಸುತ್ತಿದ್ದೇವೆ. ಇನ್ನು ಎಲ್ಲಾ ಕಡೆ ಎಲ್ಲರಲ್ಲಿ ಇಲ್ಲದಿರುವುದು ಜೀವಾತ್ಮ. ಜೀವಾತ್ಮ ಶರೀರಗಳಲ್ಲಿ ಮಾತ್ರ ನಿವಾಸಿಸುತ್ತಿದೆ. ಅದು ಆತ್ಮದಹಾಗೆ ಶರೀರದಲ್ಲಿ ಎಲ್ಲಾ ವ್ಯಾಪಿಸದೆ ತಲೆಯಲ್ಲಿ ಒಂದು ಕಡೆ ಗುಣಚಕ್ರದಲ್ಲಿ ಮಾತ್ರ ಇರುವುದು ಒಂದೇ ವಿಧವಾದ ಜೀವಾತ್ಮ ಎಲ್ಲರಲ್ಲೂ ಇಲ್ಲ. ಒಂದೊಂದು ಶರೀರದಲ್ಲಿ ಒಂದೊಂದು ಜೀವಾತ್ಮ ನಿವಾಸಿಸುತ್ತಿದೆ. ಒಂದು ಶರೀರದಲ್ಲಿ ಇರುವ ಜೀವಾತ್ಮನಿಗೂ ಮತ್ತೊಂದು ಶರೀರದಲ್ಲಿರುವ ಜೀವಾತ್ಮನಿಗೂ ಕರ್ಮದಲ್ಲಿ ಎಷ್ಟೋ ವ್ಯತ್ಯಾಸಗಳಿರುತ್ತವೆ. ಆದ್ದರಿಂದ ಆತ್ಮನ ಹಾಗೆ ಒಂದಾಗಿ ಲೆಕ್ಕಿಸುವುದಕ್ಕೆ ಆಗುವುದಿಲ್ಲ. ಶರೀರದಲ್ಲಿ ಮಾತ್ರವಿದ್ದು ಶರೀರದ ಹೊರಗೆ ಇಲ್ಲದಿರುವುದು ಜೀವಾತ್ಮ. ಎಲ್ಲಾ ಶರೀರಗಳಲ್ಲಿ ಒಂದೇ ಇಲ್ಲ ಆದ್ದರಿಂದ ಎಲ್ಲರಲ್ಲೂ ಇಲ್ಲದಿರುವುದೆಂದು, ಶರೀರದ ಹೊರಗೆ ಇಲ್ಲ ಆದ್ದರಿಂದ ಎಲ್ಲಾ ಇಲ್ಲದಿರುವುದೆಂದು ಜೀವಾತ್ಮನನ್ನು ಕುರಿತು ಹೇಳಿದ್ದಾರೆ. ಈ ಪ್ರಶ್ನೆಯಲ್ಲಿ

ಮೂರು ಆತ್ಮಗಳ ಇರುವಿಕೆಯ ಪ್ರತ್ಯೇಕತೆಯನ್ನು ತಿಳಿಸಿದ್ದಾರೆ. ಇಲ್ಲಿಯವರೆಗು ಎಲ್ಲೂ ಹೇಳದ ಮೂರು ಆತ್ಮಗಳ ವಿಷಯ ಅಂದರೆ ತ್ರೈತಸಿದ್ಧಾಂತವನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳುವಿರೆಂದು ಆಶಿಸುತ್ತಿದ್ದೇವೆ. ತ್ರೈತಸಿದ್ಧಾಂತವನ್ನು ಅರ್ಥ ಮಾಡಿಕೊಂಡರೆ ಜ್ಞಾನ ಸುಲಭವಾಗಿ ಅರ್ಥವಾಗುತ್ತದೆ.

**807. (2) ಹೃದಿಯಲ್ಲಿ, ಮದಿಯಲ್ಲಿ ಇರುವುದೇನು?**

ಉ. ಆತ್ಮ, ವಿಷಯಗಳು.

**ವಿವರ :** ಎಲ್ಲರ ಹೃದಯಗಳಲ್ಲಿ ಆತ್ಮ ನಿವಾಸವಾಗಿದೆ. ಹೃದಯವೆಂದರೆ ಗುಂಡಿಗೆ ಎಂದುಕೊಳ್ಳಬೇಡಿ. ಮೆದುಳಿನಿಂದ ವ್ಯಾಪಿಸಿದ ಬ್ರಹ್ಮನಾಡಿಯನ್ನೇ ಹೃದಯವಾಗಿ ಭಾವಿಸಬೇಕು. ಬ್ರಹ್ಮನಾಡಿಯಲ್ಲಿ ನಿವಾಸಿಸುತ್ತಾ ಶರೀರವೆಲ್ಲಾ ಹರಡಿರುವುದು ಆತ್ಮ. ಆದ್ದರಿಂದ ಹೃದಿಯಲ್ಲಿ ಇರುವುದು ಅತ್ಮವೇ ಎಂದು ಹೇಳಬಹುದು. ಹಾಗೆಯೇ ಮದಿಯಲ್ಲಿ ಇರುವುದು ವಿಷಯಗಳ ಜ್ಞಾಪಕಗಳೆಂದು ಹೇಳಬಹುದು. ಮದಿ ಎಂದರೆ ಮನಸ್ಸು, ಮನನ ಮಾಡುವುದು ಮನಸ್ಸು, ಸರ್ವ ವಿಷಯಗಳು ಮನಸ್ಸಿನಿಂದಲೇ ಬರುತ್ತಿವೆ ಆದ್ದರಿಂದ ಮನಸ್ಸಲ್ಲಿರುವವು ವಿಷಯಗಳೆಂದಿದ್ದೇವೆ.

**808. (3) ಇಹದಲ್ಲಿ ನಿನಗೆ ಕೊನೆಯ ದಿನ ಯಾವುದು?**

ಉ. ಮುಕ್ತಿ ದಿನ.

**ವಿವರ :** ಇಹ ಎಂದರೆ ಪ್ರಪಂಚ ಎಂದು ಅರ್ಥ. ಪ್ರಪಂಚದಲ್ಲಿ ಹುಟ್ಟಿದ ಪ್ರತಿ ಒಬ್ಬರಿಗೂ ಮೊದಲನೆಯ ದಿನ, ಕೊನೆಯ ದಿನ ಎರಡು ಇವೆ. ಹುಟ್ಟಿದ ದಿನ ಮೊದಲನೆಯ ದಿನವೆಂದು, ಸತ್ತ ದಿನವೇ ಕೊನೆಯ ದಿನವೆಂದು ಬಹಳ ಜನ ತಿಳಿದುಕೊಳ್ಳುತ್ತಿದ್ದಾರೆ. ಎಷ್ಟೋ ಸಲ ಹುಟ್ಟುತ್ತಿರುವ ನಮಗೆ ಎಷ್ಟೋ ಹುಟ್ಟಿದ ಮೊದಲನೆಯ ದಿನಗಳು, ಎಷ್ಟೋ ಮರಣಿಸಿದ ಕೊನೆಯ ದಿನಗಳು ಇವೆಯೆಂದು ತಿಳಿಯುತ್ತಿದ್ದಾರೆ. ಇಲ್ಲಿ ನಾವು ಹಾಗೆ ತಿಳಿದುಕೊಳ್ಳುವುದು ಸರಿಯಲ್ಲವೆಂದು ಹೇಳುತ್ತಿದ್ದೇವೆ. ಸತ್ತ ದಿನ ಆ ಜನ್ಮಕ್ಕೆ ಕೊನೆಯ ದಿನವಾಗುತ್ತಿದೆ ಆದರೆ ಅವನಿಗಲ್ಲ, ಹಾಗೇ ಹುಟ್ಟಿದ ದಿನವೂ ಸಹ ಆ ಜನ್ಮಕ್ಕೆ ಮೊದಲನೆಯ ದಿನವಾಗುತ್ತದೆ ಆದರೆ ಅವನಿಗಲ್ಲವೆಂದು ತಿಳಿಯಬೇಕು. ಯಾವ ಜೀವಾತ್ಮನಿಗಾದರೂ ಮೊದಲನೆಯ ದಿನ, ಕೊನೆಯ ದಿನ ಒಂದೇ ಇರುತ್ತದೆ, ಬಹಳ ಇರುವುದಿಲ್ಲ. ಪರಮಾತ್ಮ ನಿಂದ ಹೊರಗೆ ಬಂದು ಜೀವಾತ್ಮನಾಗಿ ಶರೀರ ಧರಿಸಿದ

ಆದಿಯಲ್ಲಿನ ಹುಟ್ಟಿದ ದಿನವೇ ಮೊದಲನೆಯ ದಿನ. ಹಾಗೇ ಎಂದಿಗಾದರೂ ಜ್ಞಾನದಿಂದ ಕರ್ಮ ಶೇಷವನ್ನು ಇಲ್ಲದೇ ಮಾಡಿಕೊಂಡು, ತಿರುಗಿ ಪರಮಾತ್ಮನೊಳಗೆ ಐಕ್ಯವಾದ ದಿನ ಅಂದರೆ ಮುಕ್ತಿ ಹೊಂದಿದ ದಿನ ಕೊನೆಯ ದಿನವಾಗುತ್ತದೆ. ಪ್ರಪಂಚದಲ್ಲಿ ಹುಟ್ಟುವಿಕೆ, ಪರಮಾತ್ಮನೊಳಗೆ ಸೇರುವಿಕೆ ಜೀವಾತ್ಮನಿಗೆ ಮೊದಲನೆಯ ದಿನ ಕೊನೆಯ ದಿನವಾಗಿ ಗುರುತಿಸಲ್ಪಡುತ್ತಿವೆ.

**809. (4) ಪ್ರಪಂಚಕ್ಕೆ ಕೊನೆಯ ದಿನ ಯಾವುದು,ಆ ದಿನದ ಹೆಸರೇನು?**

ಉ. ಪ್ರಳಯ, ಶನಿವಾರ.

**ವಿವರ :** ಪ್ರಪಂಚಕ್ಕೆ ಕೊನೆಯ ದಿನ ಮೊದಲನೆಯ ದಿನ ಇವೆ. ಪ್ರಭವ ಪ್ರಪಂಚದ ಮೊದಲನೆಯ ದಿನ. ಕಲ್ಪದಲ್ಲಿ ಎರಡು ಸಾವಿರ ಯುಗಗಳಿರುವಾಗ ಸಾವಿರ ಯುಗಗಳು ಪ್ರಪಂಚವಿರುವುದು, ಸಾವಿರ ಯುಗಗಳು ಪ್ರಪಂಚ ಇಲ್ಲದಿರುವುದು ಇದೆ. ಪ್ರಪಂಚವಿರುವುದನ್ನು ಪ್ರಭವವೆಂದು, ಇಲ್ಲದೇ ಹೋಗುವುದನ್ನು ಪ್ರಳಯವೆಂದು ಕರೆಯುತ್ತಿದ್ದೇವೆ. ಪ್ರಭವದಲ್ಲಿ ಮೊದಲನೆಯ ದಿನ ಪ್ರಪಂಚ ಹುಟ್ಟಿದ ದಿನವಾಗಿ ಲೆಕ್ಕಿಸುತ್ತಿದ್ದೇವೆ. ಪ್ರಭವ ಸಾವಿರ ಯುಗಗಳು ಮುಗಿದುಹೋದ ನಂತರ ಪ್ರಪಂಚ ಕೊನೆಯ ದಿನದೊಂದಿಗೆ ಪ್ರಳಯ ಪ್ರಾರಂಭವಾಗುತ್ತಿದೆ. ಪ್ರಳಯಕ್ಕಿಂತ ಮೊದಲ ದಿನ ಪ್ರಪಂಚಕ್ಕೆ ಕೊನೆಯ ದಿನವಾಗುತ್ತದೆ. ಪ್ರಪಂಚ ನವಗ್ರಹಗಳನ್ನು ಆಧಾರ ಮಾಡಿಕೊಂಡು ನಡೆಯುತ್ತಿದೆ. ಪ್ರಪಂಚ ಮೊದಲಿನಿಂದ ಕೊನೆಯ ವರೆಗು ಸಪ್ತ ಗ್ರಹಗಳ ಅಧಿಕಾರ ಚಲಾವಣೆ ಆಗುತ್ತಿದೆ. ಮೊದಲನೆಯ ದಿನ ಸೂರ್ಯನ ಅಧಿಕಾರದಿಂದ ಆರಂಭವಾಗುತ್ತಿದೆ ಕೊನೆಯ ದಿನ ಶನಿವಾರದೊಂದಿಗೆ ಮುಗಿಯುತ್ತಿದೆ. ವಾರಗಳಲ್ಲಿ ಮೊದಲನೆಯ ವಾರ ಎಂದು ತಿಳಿಯುವಹಾಗೆ ಆದಿವಾರ ಎಂದು ಹೆಸರು ಇಟ್ಟಿದ್ದಾರೆ. ಆದಿ ಎಂದರೆ ಮೊದಲು ಎಂದು ಅರ್ಥ. ಕೊನೆಯ ದಿನ ಎಂದರೆ ಶನಿವಾರ ಎಂದು ಎಲ್ಲರಿಗೂ ತಿಳಿದಿದೆ. ಅದುವೇ ಪ್ರಪಂಚಕ್ಕೆ ಕೊನೆಯ ದಿನ.

**810. (5) ಇಹದಲ್ಲಿ ಪ್ರಕೃತಿ ಪುರುಷರ ಚಿಹ್ನೆಯಾವುದಾದರೂ ಇದೆಯಾ?**

ಉ. ಪಾಣಿಮಟ್ಟ, ಶಿವಲಿಂಗ.

**ವಿವರ :** ಪ್ರಪಂಚಕ್ಕೆ ಮೂಲಾಧಾರವಾದ ಪ್ರಕೃತಿ ಪುರುಷರನ್ನು ಎಲ್ಲರೂ ಗುರುತಿಸುವ ಹಾಗೆ, ಎಲ್ಲರಿಗೂ ಪ್ರಕೃತಿ ತಾಯಿ, ತಂದೆ ಪರಮಾತ್ಮ ಎಂದು ತಿಳಿಯುವ ಹಾಗೆ,

ದೇವರಿಗೆ ಆಕಾರ ಇಲ್ಲ ಎನ್ನುವಂತೆ, ಆಕಾರವಿಲ್ಲದ ಪರಮಾತ್ಮನಿಗೆ ಪ್ರಕೃತಿ ಆಧಾರಭೂತವಾಗಿದೆಯೆಂದು ತಿಳಿಯುವಹಾಗೆ, ಪ್ರಕೃತಿಗೆ ಸ್ತ್ರೀ ಸ್ವರೂಪವಾದ ಭಗವೊಂದರ ಆಕಾರವನ್ನು ಇಟ್ಟು, ಪರಮಾತ್ಮಗೆ ಪುರುಷ ಸ್ವರೂಪವಾದ ಲಿಂಗವೊಂದರ ಆಕೃತಿಯನ್ನು ಕಲ್ಪಿಸಿ, ಎರಡನ್ನು ಸೇರಿಸಿ ಎರಡೂ ಕಾಣಿಸುವ ಹಾಗೆ ಲಿಂಗ ಪ್ರತಿಷ್ಠೆ ಮಾಡಿ ಇಟ್ಟಿದ್ದಾರೆ. ಎಲ್ಲಾದರೂ ಪಾಣಿಮಟ್ಟದೊಂದಿಗೆ ಕೂಡಿಕೊಂಡಿರುವ ಲಿಂಗವೇ ಇರುತ್ತದೆ. ಅದರ ಆಧಾರದೊಂದಿಗೆ ಪ್ರಪಂಚದಲ್ಲಿ ಪರಮಾತ್ಮ ಪ್ರಕೃತಿ ಯೊಂದಿಗೆ ಕೂಡಿಕೊಂಡಿದೆ ಎಂದು ತಿಳಿಯುತ್ತಿದೆ. ಪ್ರಕೃತಿಗೆ ಪ್ರತಿ ರೂಪ ಪಾಣಿಮಟ್ಟವೆಂದು, ಪರಮಾತ್ಮನಿಗೆ ಪ್ರತಿರೂಪ ಲಿಂಗವೆಂದು ತಿಳಿಯಬೇಕು.

**811. (6) ಇಹದಲ್ಲಿ ರೋಗವನ್ನು ಹುಟ್ಟಿಸುವವನು, ರೋಗಕ್ಕೆ ಔಷದವನ್ನು ಸೃಷ್ಠಿಸುವವನು ಯಾರು?**

ಉ. ರೋಗ ಹುಟ್ಟುವುದು ಆತ್ಮಶಕ್ತಿಯಿಂದ ಗ್ರಂಥಿಗಳ ಕೆಲಸದಿಂದ, ಹಾಗೇ ಔಷಧಿಯನ್ನು ಸಹ ಗ್ರಂಥಿಗಳಿಂದಲೇ ಆತ್ಮ ಹುಟ್ಟಿಸುತ್ತಿದೆ.

**ವಿವರ :** ಶರೀರದಲ್ಲಿ ರೋಗ ಹುಟ್ಟುವುದು ಶರೀರದಲ್ಲಿನ ಗ್ರಂಥಿಗಳಿಂದಲೇ. ಶರೀರದಲ್ಲಿನ ಏಳು ಗ್ರಂಥಿಗಳಲ್ಲಿಯೂ ಆತ್ಮ ಶಕ್ತಿ ಕೆಲಸ ಮಾಡುತ್ತಿದೆ. ಆತ್ಮ ಕರ್ಮ ಚಕ್ರದಲ್ಲಿನ ಕರ್ಮವನ್ನು ಅನುಸರಿಸಿ ತನ್ನ ಶಕ್ತಿಯಲ್ಲಿ ಬದಲಾವಣೆಗಳನ್ನು ಮಾಡುತ್ತಿರುತ್ತದೆ. ಶಕ್ತಿ ಬದಲಾವಣೆಗಳನ್ನು ಅನುಸರಿಸಿ ಕೆಲಸ ಮಾಡುತ್ತಾ ಶರೀರ ಆರೋಗ್ಯವನ್ನು ಅನಾರೋಗ್ಯವನ್ನು ಸೃಷ್ಠಿಸುತ್ತಿವೆ. ಶರೀರದಲ್ಲಿ ಒಂದು ರೋಗ ಬಂದಿದೆಯೆಂದರೆ ಅದು ಗ್ರಂಥಿಗಳಿಂದಲೇ ಬಂದಿದೆಯೆಂದು ತಿಳಿಯಬೇಕು. ರೋಗಕ್ಕೆ ಮೇಲೆ ಕಾಣಿಸುವ ಕಾರಣಗಳೆಷ್ಟಿದ್ದರೂ, ಮೂಲ ಗ್ರಂಥಿಗಳ ಕೆಲಸವೆಂದೇ ಗ್ರಹಿಸಬೇಕು. ಇಲ್ಲಿಯವರೆಗು ರೋಗಕ್ಕೆ ಕಾರಣಗಳನ್ನು ಕಂಡುಕೊಂಡ ಭೌತಿಕ ಶಾಸ್ತ್ರಜ್ಞರಿದ್ದರೂ ಮೇಲಿನ ಕಾರಣಗಳವರೆಗೆ ಅವರ ದೃಷ್ಠಿ ಪರಿಶೋಧನೆ ಇದೆ. ಎಲ್ಲಾ ರೋಗಗಳಿಗೂ ಮೂಲ ಕಾರಣ ಗ್ರಂಥಿಗಳೆನ್ನುವ ವಿಷಯ ಅವರಿಗೆ ತಿಳಿದಿಲ್ಲ. ಅಷ್ಟೇ ಅಲ್ಲದೇ ರೋಗಕ್ಕೆ ಕಂಡುಹಿಡಿದ ಔಷಧಕ್ಕಿಂತಲೂ ಗ್ರಂಥಿಗಳಲ್ಲಿ ತಯಾರಾಗುವ ರೋಗನಿರೋದಕವು ಬಹಳ ಶಕ್ತಿವಂತವಾದದ್ದೆನ್ನುವ ವಿಷಯವು ಸಹ ತಿಳಿದಿಲ್ಲ. ಈ ವಿಷಯಗಳಲ್ಲಿ ನಮ್ಮ ಮಾತಿನ ಮೇಲೆ ಬಹಳ ಜನರಿಗೆ ನಂಬಿಕೆ ಇಲ್ಲದಿದ್ದರೂ, ಇದು ಸತ್ಯವಾದ ಮಾತು. ಆದ್ದರಿಂದ ರೋಗ ಔಷಧ ಎರಡೂ ಗ್ರಂಥಿಗಳಲ್ಲಿನ ಆತ್ಮ ಶಕ್ತಿ ಯಿಂದಲೇ ತಯಾರಾಗುತ್ತಿದೆ ಎಂದು ಹೇಳುತ್ತಿದ್ದೇವೆ.

**812**. **(7) ಹೃದಿಗೂ ಮದಿಗೂ ಎಷ್ಟು ದೂರವೆಂದು ಹೋಲಿಸಿ ಹೇಳಬಹುದು?**

ಉ. ಕಾಯಿಗೂ ಸಿಪ್ಪೆಗೂ ಇರುವಷ್ಟು ದೂರ.

**ವಿವರ :** ಹೃದಿ ಎಂದರೆ ಆತ್ಮಯೆಂದು, ಮದಿ ಅಂದರೆ ಮನಸ್ಸು ಎಂದು ಅರ್ಥ ಮಾಡಿಕೊಳ್ಳಬೇಕು. ಆತ್ಮ ಮನಸ್ಸು ಶರೀರವೆಲ್ಲಾ ವ್ಯಾಪಿಸಿವೆ. ಮನಸ್ಸು ಎಚ್ಚರದಲ್ಲಿ ಮಾತ್ರ ಶರೀರವೆಲ್ಲಾ ಆಕ್ರಮಿಸಿ ಇರುತ್ತದೆ. ಆತ್ಮ ಶರೀರವೆಲ್ಲಾ ಅಹರ್ನಿಶೆಯಲ್ಲೂ ವ್ಯಾಪಿಸಿರುತ್ತದೆ. ಯಾವಾಗಲೂ ವ್ಯಾಪಿಸಿರುವ ಆತ್ಮನನ್ನು, ಎಚ್ಚರ ಬಂದ ಕೂಡಲೇ ಮನಸ್ಸು ಆಕ್ರಮಿಸಿ ಮುಚ್ಚಿಹಾಕುತ್ತಿದೆ. ಮನಸ್ಸು ಅಡ್ಡ ಇರುವುದರಿಂದ ಆತ್ಮ ಜೀವನಿಗೆ ತಿಳಿಯುತ್ತಿಲ್ಲ. ಉದಾಹರಣೆಗೆ ಒಂದು ಕಿತ್ತಳೆ ಕಾಯನ್ನು ತೆಗೆದುಕೊಳ್ಳೋಣ. ಒಳಗೆ ರಸದೊಂದಿಗೆ ತುಂಬಿರುವ ತೊಳೆಗಳ ಮೇಲೆ ಸಿಪ್ಪೆ ಕಾಯಿ ಎಲ್ಲದನ್ನು ಆಕ್ರಮಿಸಿ ಸಿಪ್ಪೆಯೇ ಕಾಣಿಸುತ್ತದೆ. ಸಿಪ್ಪೆ ತೆಗೆದರೂ ಒಳಗೆ ರಸದ ರುಚಿಸಾರ ತುಂಬಿದ ಹಣ್ಣು ಕಾಣಿಸುತ್ತದೆ. ಕಿತ್ತಳೆ ಕಾಯಿನಂತೆ ಆತ್ಮ ಮನಸ್ಸುಗಳು ಇವೆ. ರಸಸಾರದೊಂದಿಗೆ ತುಂಬಿದ ಒಳಗಿನ ತೊಳೆ ಆತ್ಮ ಅಂದುಕೊಳ್ಳಿ. ಅದನ್ನು ಹೊದ್ದಿರುವ ಸಿಪ್ಪಿಯನ್ನು ಮನಸ್ಸೆಂದುಕೊಳ್ಳಿ. ಸಿಪ್ಪೆ ಮೇಲಿರುವುದರಿಂದ ಒಳಗಿನ ಆಕಾರ ಕಾಣಿಸದ ಹಾಗೆ ಮನಸ್ಸು ಆತ್ಮನನ್ನು ವ್ಯಾಪಿಸಿ ಇರುವುದರಿಂದ ನಮಗೆ ಮನೋ ವಿಷಯಗಳೇ ಕಾಣಿಸುತ್ತಿವೆ. ಒಳಗೆ ಆತ್ಮ ಕಾಣಿಸುತ್ತಿಲ್ಲ. ಆದ್ದರಿಂದ ಹೃದಿಯನ್ನು ಮದಿಯನ್ನು ಕಿತ್ತಳೆ ಹಣ್ಣಿನೊಂದಿಗೆ ಹೋಲಿಸಿ ಹೇಳಬಹುದು. ಹೃದಿಗೆ ಮದಿಗೆ ದೂರ ಕಾಯಿಗೂ ಸಿಪ್ಪೆಗೂ ಇರುವ ದೂರವೆಂದು ಹೇಳಬಹುದು.

**813**. **(8) ಬೋಧಿಸಿದವನೊಬ್ಬನೇ ಆದಾಗ ಮತಗಳು ಯಾವುದರಿಂದ ತಯಾರಾಗಿವೆ?**

**ಉ. ಮಾಯೆಯಿಂದ. (ಸಾತಾನ್ ಅಥವಾ ಸೈತಾನ್ ಮೂಲಕ).**

**ವಿವರ :** ಬೋಧಿಸಿದವನು ಒಬ್ಬನೇ, ಬೋಧಿಸಲಾಗಿರುವ ವಿಷಯ ಒಂದೇ ಆದರೂ, ಮಾಯೆ ಬೋಧಿಸಿದವನಿಗೂ ಕೇಳಿದವರಿಗೂ ಮಧ್ಯದಲ್ಲಿದ್ದು, ಬೋಧಿಸಿರುವ ವಿಷಯವನ್ನೆ ಬೇರೆ ಬೇರೆ ವಿಧಗಳಲ್ಲಿ ಅರ್ಥವಾಗುವ ಹಾಗೆ ಮಾಡಿದೆ. ಆದ್ದರಿಂದ ವಿಷಯ ಒಂದೇ ಆದರೂ ಬೇರೆ ಬೇರೆ ಮತಗಳಾಗಿ ತಯಾರಾಗಿದೆ. ಕೇಳುವವನಿಗೆ ಭಾವದಲ್ಲಿ ಭೇದಬಂದಿದೆ, ಆದ್ದರಿಂದ ಹೇಳಿರುವವನು ಸಹ ಬೇರೆ ಬೇರೆ ಎನ್ನುವ ಹಾಗೆ ಮಾಯೆ ಮಂತ್ರಿಸಿ ಇಟ್ಟಿದೆ. ಬೋಧಿಸಿದವನು ಬೇರೆ ಬೇರೆ ಸ್ಥಳಗಳಲ್ಲಿ ಬೋಧಿಸುವುದರಿಂದ, ಬೇರೆ ಬೇರೆ ರೂಪಗಳಲ್ಲಿ ಬೋಧಿಸುವುದರಿಂದ, ಮಾಯೆ ಅದನ್ನು ಒಳ್ಳೆ ಅವಕಾಶವಾಗಿ ತೆಗೆದುಕೊಂಡು ಕೇಳುವವರಿಗೆ ಬೋಧಿಸಿದವನು ಬೇರೆ ಬೇರೆ ಎನ್ನುವ ಹಾಗೆ ತಲೆತುಂಬಿದೆ. ಮಾಯೆ

ಪ್ರಭಾವ ಮನುಷ್ಯರ ಮದಿಯಲ್ಲಿ ಬೇರೂರಿರುವುದರಿಂದ ಮತಗಳು, ದೇವರು ಬೇರೆ ಬೇರೆ ಯಾಗಿದ್ದಾರೆ. ಈಗ ದೇವರು ಇಳಿದು ಬಂದು ಅಲ್ಲಿ ಇಲ್ಲಿ ಇರುವುದು ನಾನೇ ಎಂದು, ಹೇಳಿರುವುದು ನಾನೇ ಎಂದರೂ ಪ್ರಜೆಗಳು ಕೇಳುವ ಪರಿಸ್ಥಿತಿಯಲ್ಲಿ ಇಲ್ಲ. ಮತಗಳ ಮೌಢ್ಯ ಹೋಗಬೇಕೆಂದರೆ ಪರಮಾತ್ಮ ಮತ್ತೊಮ್ಮೆ ಜನ್ಮ ಎತ್ತಿ, ಬೇಗ ಅವತಾರವನ್ನು ಮುಗಿಸದೆ, ಕನಿಷ್ಠ ಸಾವಿರ ಸಂವತ್ಸರಗಳಿದ್ದರೂ ಸಾಧ್ಯವಾಗುವುದಿಲ್ಲವೇನೋ! ಆದ್ದರಿಂದ ಎಲ್ಲರೂ ಆತನ ಬರುವಿಕೆಗೋಸ್ಕರ ಎದುರು ನೋಡೋಣ.

**814. (9) ಇಹದಲ್ಲಿ ನಿನಗೆ ಅನುಕೂಲ ಅನಾನುಕೂಲ ಯಾವುದರಿಂದ ನಡೆಯುತ್ತಿದೆ?**

ಉ. ಪ್ರಾರಬ್ಧಕರ್ಮದಿಂದ.

**ವಿವರ :** ಪ್ರತಿ ಮನುಷ್ಯನಿಗೂ ಪ್ರಾರಬ್ಧಕರ್ಮ ದಿಂದಲೇ ಪ್ರಪಂಚದಲ್ಲಿ ಎಲ್ಲಾ ನಡೆಯುತ್ತಿವೆ. ಕಷ್ಟ ಸುಖಗಳಾಗಲಿ, ಅನುಕೂಲ ಅನಾನುಕೂಲಗಳಾಗಲಿ ಯಾವಾದರೂ ಕರ್ಮ ವನ್ನನುಸರಿಸಿ ನಡೆಯಬೇಕಾದ್ದೇ. ಕೆಲವರು ದುಡ್ಡಿದ್ದರೇ ನಡೆಯುತ್ತದೆಂದು, ಕೆಲವರು ಬುದ್ಧಿ ಇದ್ದರೇ ನಡೆಯುತ್ತದೆಂದು, ಮತ್ತೆ ಕೆಲವರು ಬಲವಿದ್ದರೇ ನಡೆಯುತ್ತದೆಂದು ಹೇಳುತ್ತಿರುತ್ತಾರೆ. ಅವರಂದುಕೊಂಡ ಹಾಗೆ ಧನದಿಂದಲೋ, ಬಲದಿಂದಲೋ, ಬುದ್ಧಿ ಯಿಂದಲೋ ನಡೆದರೂ ಆ ಧನ, ಬಲ, ಬುದ್ಧಿ ಎಲ್ಲವೂ ಕರ್ಮದಿಂದಲೇ ಪ್ರಾಪ್ತಿಸುತ್ತಿವೆ ಯೆಂದು ತಿಳಿಯಬೇಕು. ಹಿಂದಿನ ಕರ್ಮ ಕಾಣಿಸದೆ ಇದ್ದು ಕಾಣಿಸುವ ಕಾರಣಗಳಿಂದಲೇ ನಡೆಸುತ್ತಿರುತ್ತದೆ. ಅಷ್ಟು ಮಾತ್ರಕ್ಕೆ ಮೇಲ್ನೋಟಕ್ಕೆ ಕಾಣಿಸುವವುಗಳಿಂದಲೇ ಎಲ್ಲಾ ನಡೆಯುತ್ತಿವೆ ಎಂದು ತಿಳಿದುಕೊಳ್ಳಬಾರದು. ಎಲ್ಲದಕ್ಕೂ ಮೂಲ ಕಾರಣವಾಗಿ ಪ್ರಾರಬ್ಧಕರ್ಮ ಇದೆಯೆಂದು ತಿಳಿಯಬೇಕು.

**815. (10) ನಿನ್ನ ಶರೀರವೊಂದರ ಆಯಸ್ಸು ಮೊದಲೇ ತಿಳಿದರೇ, ನೀನೇನು ಮಾಡುತ್ತೀಯ?**

ಉ. ನಾನಾದರೇ ಜ್ಞಾನದ ಮೇಲೆ ಶ್ರದ್ಧೆ ಬೆಳೆಸುಕೊಳ್ಳುತ್ತೇನೆ.

**ವಿವರ :** ಭೂಮಿ ಮೇಲೆ ಅಜ್ಞಾನಿಗಳು, ಜ್ಞಾನಿಗಳೆಂಬ ಎರಡು ವಿಧಗಳ ಮನುಷ್ಯರು ಇದ್ದಾರೆ. ಆಯಸ್ಸು ಮೊದಲೇ ತಿಳಿಯುವುದರಿಂದ ಜ್ಞಾನಿಗಳು ಒಂದು ವಿಧವಾಗಿ ಅಜ್ಞಾನಿಗಳು ಮತ್ತೊಂದು ವಿಧವಾಗಿ ಪ್ರವರ್ತಿಸುವರು. ಜ್ಞಾನಿಗಳಾದರೆ ತಮಗಿರುವ ಆಯಸ್ಸು ಕಡಿಮೆ ಎಂದು ತಿಳಿದು, ಅಷ್ಟರೊಳಗೆ ಸಂಪೂರ್ಣ ಜ್ಞಾನವನ್ನು ತಿಳಿದು

ದೈವಸನ್ನಿಧಿ ಸೇರಬೇಕೆಂದು ಶ್ರದ್ಧೆಯಿಂದ, ನಿರಂತರ ಜ್ಞಾನಕ್ಕೋಸ್ಕರ ಆಸಕ್ತಿಯಿಂದಿರುವರು. ಅದೇ ಅಜ್ಞಾನಿಗಳಾದರೆ ತಮ್ಮ ಮರಣವನ್ನು ನೆನೆಸಿಕೊಂಡು ದುಃಖಿಸುವುದಕ್ಕೆ ಆರಂಭಿಸುತ್ತಾರೆ. ಅಂತಹವನು ಮರಣ ಬರುವ ಮುನ್ನವೇ ಕೃಂಗಿ ಕೃಶಿಸಿ ಹೋಗುವನು. ಭೂಮಿ ಮೇಲೆ ಇರುವ ವಸ್ತುಗಳನ್ನು ಮನುಷ್ಯರನ್ನು ಬಿಟ್ಟು ಹೋಗುವೆನಲ್ಲಾ ಎಂದು ಹೋಗುವ ಮೊದಲೇ ದುಃಖದಲ್ಲಿ ಮುಳಿಗಿಹೋಗುವನು. ಆಗಲಾದರೂ ಪ್ರಪಂಚ ವಿಷಯಗಳ ಮೇಲಿನ ಮಮಕಾರ ಬಿಟ್ಟು ದೈವ ವಿಷಯಗಳ ಮೇಲೆ ಮನಸ್ಸನ್ನು ಮರಳಿಸುವುದಿಲ್ಲ.

## ಜ್ಞಾನ ಪರೀಕ್ಷೆ

**ಕೆ. ನರ್ಸಾಪುರ** **ದಿನಾಂಕ–24–12–2001**

**816. (1) ಬಿಕ್ಷಾಂದೇಹಿ ಎನ್ನುತ್ತಾರೆ. ಬಿಕ್ಷೆ ಯಾರಿಗೆ ಅವಶ್ಯ ಆತ್ಮನಿಗಾ, ಜೀವಾತ್ಮನಿಗಾ?**

ಉ. ಆತ್ಮನಿಗೆ.

**ವಿವರ :** ಶರೀರವನ್ನು ಕದಿಲಿಸಿ ಆಡಿಸುವುದು ಆತ್ಮ. ಶರೀರವನ್ನು ಕದಲಿಸುವ ಕೆಲಸ ಜೀವಾತ್ಮಕ್ಕೆ ಇಲ್ಲ. ಅದಕ್ಕೆ ಯಾವ ಕೆಲಸ ಕೈಲಾಗುವುದಿಲ್ಲ. ಎಲ್ಲಾ ಅವಯವಗಳನ್ನು ಕದಲಿಸುವುದಕ್ಕೆ ಆತ್ಮಕ್ಕೂ ಸಹ ಸ್ವಲ್ಪ ಶಕ್ತಿ ಅವಶ್ಯಕ. ಆ ಶಕ್ತಿ ನಾವು ಭುಜಿಸುವ ಆಹಾರದಲ್ಲಿದೆ. ಆಹಾರದಲ್ಲಿನ ಪೋಷಕ ಪದಾರ್ಥಗಳಿಂದ ಏರ್ಪಡುವ ಶಕ್ತಿಯನ್ನು ಆತ್ಮ ಅವಯವಗಳ ಕಡೆ ವಿನಿಯೋಗಿಸುತ್ತಾ ಕಾರ್ಯಗಳನ್ನು ಮಾಡಿಸುತ್ತಾ ಇದೆ. ಒಂದು ದಿನ ಆಹಾರ ತೆಗೆದುಕೊಳ್ಳದೆ ಹೋದರೆ ಸಾಯಂಕಾಲಕ್ಕೆ ಆತ್ಮ ಸತ್ತು ಕಡಿಮೆಯಾಗಿ ಶರೀರ ಕೆಲಸ ಮಾಡದ ಸ್ಥಿತಿ ಏರ್ಪಡುತ್ತದೆ. ಆಹಾರ ತಿಂದಕೂಡಲೇ ಸ್ವಲ್ಪ ಸಮಯಕ್ಕೆ ತಿರುಗಿ ಶಕ್ತಿ ತಯಾರಾಗುತ್ತಿದೆ. ಇದರಿಂದ ಆಹಾರದಿಂದ ಆತ್ಮಕ್ಕೆ ಶಕ್ತಿ ಬರುತ್ತಿದೆಯೆಂದು, ಆಹಾರ ಇಲ್ಲದಿರುವುದರಿಂದ ಆತ್ಮ ಶಕ್ತಿ ಹೀನವಾಗುತ್ತಿದೆ ಎಂದು ತಿಳಿಯುತ್ತಿದೆ. ಆಹಾರ ಇಲ್ಲದಿದ್ದರೆ ಜೀವಾತ್ಮನಿಗೆ ಹಸಿವಿನ ಬಾಧೆ ಬರುತ್ತಿದೆ. ಆದರೆ ಜೀವಾತ್ಮನು ಶಕ್ತಿಹೀನನಲ್ಲ. ಬಾಧೆ ಸುಖ ಅನುಭವಿಸುವುದು ಜೀವಾತ್ಮನಿಗೆ ಸಾಧಾರಣವಾಗಿರುವ ವಿಷಯ. ಆದ್ದರಿಂದ ಅದರಲ್ಲಿ ಇದು ಒಂದು ಅನುಭವವೇ ಆದರೆ ಹೊಸದಲ್ಲ. ಆತ್ಮಕ್ಕೆ ಆಹಾರವಿಲ್ಲದಿದ್ದರೆ ಶಕ್ತಿ ಹೀನನಾಗಿ ಹೋಗಿ ಕೊನೆಗೆ ಆತ್ಮ ಮರಣವಾಗುತ್ತದೆ. ಎಂದರೆ ಆತ್ಮ ಹತ್ಯೆ ಆಗುತ್ತದೆ.

ಶರೀರವೆಲ್ಲಾ ವ್ಯಾಪಿಸಿ ಪೋಷಿಸಿ ಕದಲಿಸುವ ಆತ್ಮ ಬಲಹೀನವಾಗುವುದರಿಂದ ಶರೀರವು ಸಹ ಬಲಹೀನವಾಗಿ ಹೋಗುತ್ತದೆ. ಮೇಲೇಳದ ಬಲಹೀನ ಶರೀರದಲ್ಲಿ ಆತ್ಮ ಸಹ ಬಲಹೀನ ಆತ್ಮವೇ ಇರುತ್ತದೆಂದು ತಿಳಿಯಬೇಕು. ಇದರಿಂದ ಆಹಾರ ಆತ್ಮಕ್ಕೇ ವಿನಿಯೋಗ ವಾಗುತ್ತಿದೆಯೆಂದು ಹೇಳಬಹುದು. ಆಹಾರದಿಂದ ಆತ್ಮ ಚೈತನ್ಯ , ಕರ್ಮದಿಂದ ಜೀವಾತ್ಮನ ಜೀವನ ಇದೆಯೆಂದು ತಿಳಿಯಬೇಕು. ಒಬ್ಬ ಮನುಷ್ಯನಿಗಾಗಲಿ, ಜಂತುಗಾಗಲಿ ಆಹಾರ ಇಡುವುದರಿಂದ ಅದು ಆತ್ಮಕ್ಕೇ ಸೇರುತ್ತದೆ. ಆದ್ದರಿಂದಲೇ ವಸ್ತುದಾನದಲ್ಲಿ ಅನ್ನ ದಾನವೇ ದೊಡ್ಡದೆಂದು ಹಿರಿಯರೆಂದಿದ್ದಾರೆ. ಜೀವಾತ್ಮನಿಗೆ ಜ್ಞಾನ ದಾನ, ಆತ್ಮಕ್ಕೆ ಅನ್ನದಾನ ಮುಖ್ಯ. ಮೂರು ಹೊತ್ತು ಭೋಜನ ಮಾಡುವವನು ಮೂಢಭಕ್ತಿಯಿಂದ ದಿನ ಪೂರ್ತಿ ಉಪವಾಸವಿದ್ದರೆ ಅದು ಆತ್ಮದ್ರೋಹವೇ ಆಗುತ್ತದೆ. ಮೂಢ ಎಂದರೆ ಅಜ್ಞಾನ ಎಂದು ಅರ್ಥ. ಮೂಢ ಭಕ್ತಿ ಎಂದರೆ ಅಜ್ಞಾನ ಭಕ್ತಿ ಎಂದು ಅರ್ಥ. ಉಪವಾಸವಿರುವುದು ಅಜ್ಞಾನ ಭಕ್ತಿಯೇ ಆಗಲಿ ಆತ್ಮ ಜ್ಞಾನ ಭಕ್ತಿ ಅಲ್ಲ. ಉಪವಾಸ ಆತ್ಮಹಿಂಸೆ ಆಗುತ್ತದೆ. ಅದರಿಂದ ಪಾಪಬರುವುದು ನಿಜ. ಇದನ್ನನುಸರಿಸಿ ಆಹಾರ ಶರೀರದಲ್ಲಿ ಆತ್ಮಕ್ಕೆ ಅವಶ್ಯವೆಂದು ತಿಳಿದು, ಯಾರೂ ಉಪವಾಸವಿರದೇ, ಆತ್ಮ ಜ್ಞಾನ ತಿಳಿಯಬೇಕೆಂದು ಕೋರುತ್ತಿದ್ದೇವೆ.

**817. (2) ಮದ್ಯವನ್ನು ಸೇವಿಸಿದಾಗ ನಶೆ ಯಾರಿಗೆ ಬರುತ್ತದೆ? ಆತ್ಮನಿಗಾ ಜೀವಾತ್ಮನಿಗಾ?**

ಉ. ಆತ್ಮಕ್ಕೆ.

**ವಿವರ :** ಮದ್ಯಪಾನ ಸೇವಿಸುವುದರಿಂದ ಶರೀರದಲ್ಲಿನ ಜೀವಾತ್ಮನಿಗೆ ಒಂದು ವಿಧವಾದ ಆನಂದ ಏರ್ಪಡುತ್ತಿದೆ. ಜೀವಾತ್ಮನು ಸುಖ ದುಃಖಗಳನ್ನು ಅನುಭವಿಸುವವನೇ ಎಂದು ಮೊದಲೇ ತಿಳಿದುಕೊಂಡಿದ್ದೇವೆ. ಆದ್ದರಿಂದ ಮತ್ತಿನಲ್ಲಿನ ಮಜವನ್ನು ಜೀವಾತ್ಮ ಅನುಭವಿಸುತ್ತಿರುವಾಗ ಶರೀರವನ್ನು ನಡೆಸುವ ಆತ್ಮ ಮತ್ತಿನಿಂದ ಬಲಹೀನವಾಗಿ ಶರೀರವನ್ನು ಸರಿಯಾಗಿ ಕದಲಿಸಲಾಗದೆ ನಡೆಸಲಾಗದೆ ಹೋಗುವುದು, ಹೆಚ್ಚು ಭಾಗ ಮತ್ತಿಗೆ ಶರೀರ ತೂಗಿ ಕೆಳಗೆ ಬೀಳುವ ಬಲಹೀನತೆಗೆ ಸೇರಿಕೊಳ್ಳುತ್ತದೆ. ಶರೀರಕ್ಕೆ ಶಕ್ತಿ ಕೊಡುವ ಆತ್ಮ ತನ್ನ ಶಕ್ತಿಯನ್ನು ಮತ್ತಿನಲ್ಲಿ ಕಳೆದುಕೊಳ್ಳುತ್ತಿದೆ. ಮದ್ಯ ಸೇವಿಸಿದಾಗ ಜೀವಾತ್ಮ ಆನಂದ ಅನುಭವಿಸಿದರೆ, ಆತ್ಮ ನಶೆಯೇರಿ ಬಲಹೀನವಾಗುತ್ತಿದೆ. ಇದರಿಂದ ನಶೆ ಆತ್ಮಕ್ಕೆ, ಆನಂದ ಜೀವಾತ್ಮಕ್ಕೆ ಸೇರುತ್ತಿದೆಯೆಂದು ಹೇಳಬಹುದು. ಮದ್ಯಪಾನದಲ್ಲಿನ ನಶೆ ಆತ್ಮನ ಮೇಲೆ ಕೆಲಸಮಾಡುತ್ತಿದೆಯೆಂದು ತಿಳಿಯಬೇಕು. ಆತ್ಮನನ್ನು ಬಲಹೀನಪಡಿಸುವ ನಶೆಯ (ಮತ್ತ) ನ್ನು ಬಳಸುವುದು ಆತ್ಮಕ್ಕೆ ದ್ರೋಹ ಮಾಡಿದಂತಾಗುತ್ತದೆ.

**818. (3) ಶರೀರದಲ್ಲಿ ಜ್ಞಾನ ತಿಳಿದುಕೊಳ್ಳುವವರು ಯಾರು? ಆತ್ಮನಾ ಜೀವಾತ್ಮನಾ ಯಾರು?**

ಉ. ಯಾವುದೂ ಅಲ್ಲ ಬುದ್ಧಿ.

**ವಿವರ :** ಶರೀರದಲ್ಲಿನ ಆತ್ಮನಿಗೆ ಜ್ಞಾನವೆನ್ನುವುದು ತನ್ನ ವಿಷಯವೇ ಆಗಿರುವುದರಿಂದ ತನಗೆ ಅದು ಅವಶ್ಯವಿಲ್ಲ. ಆತ್ಮ ವಿಷಯ ಆತ್ಮನಿಗೆ ತಿಳಿದಿರುವುದರಿಂದ ಆತ್ಮ ಜ್ಞಾನವನ್ನು ತಿಳಿದುಕೊಳ್ಳುವುದಿಲ್ಲ. ಜೀವಾತ್ಮ ಕಷ್ಟ ಸುಖಗಳನ್ನು ಅನುಭವಿಸುವುದೇ ಆದ್ದರಿಂದ ಅದಕ್ಕೂ ಸಹ ಜ್ಞಾನದೊಂದಿಗೆ ಕೆಲಸವಿಲ್ಲ. ಜೀವಾತ್ಮನಿಗೆ ಅನುಭವಗಳನ್ನು ಅನುಭವಿಸುವುದು ಹೊರತುಪಡಿಸಿ ಬೇರೆ ಏನೂ ತಿಳಿದಿಲ್ಲ. ಆದ್ದರಿಂದ ಶರೀರದಲ್ಲಿನ ಆತ್ಮನಾಗಲಿ, ಜೀವಾತ್ಮನಾಗಲಿ ಜ್ಞಾನವನ್ನು ತಿಳಿಯುವುದಿಲ್ಲ. ಆತ್ಮ ಜೀವಾತ್ಮವಲ್ಲದೆ ಶರೀರದಲ್ಲಿನ ಬುದ್ಧಿ ಮಾತ್ರ ಜ್ಞಾನವನ್ನು ತಿಳಿಯುತ್ತಿದೆ. ಆದ್ದರಿಂದ ಜ್ಞಾನವನ್ನು ಗ್ರಹಿಸಿಕೊಳ್ಳುವ ಬುದ್ಧಿ ಇರುವವರಾಗಿ ಇರಬೇಕೆಂದು ತಿಳಿಸುತ್ತಿದ್ದೇವೆ. ಎಲ್ಲವನ್ನೂ ಗ್ರಹಿಸಿಕೊಳ್ಳುವ ಬುದ್ಧಿ ಸ್ವಲ್ಪಕ್ಕೆ ಸ್ವಲ್ಪವಾದರೂ ಜ್ಞಾನವನ್ನು ತಿಳಿದುಕೊಳ್ಳುವುದು ಒಳ್ಳೆದು. ಬುದ್ಧಿ ಜೀವಾತ್ಮನಲ್ಲಿ ಭಾಗವಾಗಿರುವುದರಿಂದ ಪ್ರತ್ಯೇಕಿಸಿ ಜೀವಾತ್ಮನು ಜ್ಞಾನವನ್ನು ತಿಳಿದುಕೊಳ್ಳದಿದ್ದರೂ, ಬುದ್ಧಿ ತಿಳಿದುಕೊಂಡರೆ ಜೀವಾತ್ಮನು ತಿಳಿದುಕೊಂಡಹಾಗೆ ಆಗುತ್ತದೆ.

**819. (4) ಭಾರವನ್ನು ಹೊರುವಾಗ ಭಾರ ಯಾರಿಗೆ ಆಗುತ್ತದೆ? ಆತ್ಮನಿಗಾ ಜೀವಾತ್ಮನಿಗಾ?**

ಉ. ಆತ್ಮಕ್ಕೆ.

**ವಿವರ :** ಭಾರವನ್ನು ಹೊರುವಾಗ ಶರೀರವೆಲ್ಲಾ ಆವರಿಸಿರುವ ಆತ್ಮನಿಗೇ ಭಾರವಾಗುತ್ತದೆ. ಹೊರುವ ಜಾಗದಲ್ಲಿನ ಶರೀರ ಭಾಗದಲ್ಲಿ ಇರುವ ಆತ್ಮ ಶಕ್ತಿಗೆ ಗ್ಲಾನಿಯೂ ಸಹ ಏರ್ಪಡುತ್ತದೆ ಗ್ಲಾನಿ ಎಂದರೆ ಬಲಹೀನತೆ ಆಗುವುದೆಂದು ಅರ್ಥ. ಶರೀರ ಭಾಗಗಳಲ್ಲಿನ ಗ್ಲಾನಿ(ಮುಪ್ಪು) ಆತ್ಮನಿಗೇ ಆಗಲಿ ಎಲ್ಲೋ ದೂರವಾಗಿ ಇರುವ ಜೀವಾತ್ಮಕ್ಕೆ ಅಲ್ಲ. ಜೀವಾತ್ಮ ಭಾರ ಹೊರುವುದರಿಂದ ಬಂದಿರುವ ಕಷ್ಟವನ್ನು, ಗ್ಲಾನಿ ಯಿಂದ ಬಂದಿರುವ ಬಾಧೆಯನ್ನು ಅನುಭವಿಸುತ್ತಿದೆ. ಶರೀರವೆಲ್ಲಾ ವ್ಯಾಪಿಸಿದ ಆತ್ಮವೇ ವಸ್ತುವೊಂದರ ಭಾರವನ್ನು ಹೊಂದುತ್ತಿದೆ. ಆ ಭಾರದಿಂದ ತನ್ನ ಶಕ್ತಿಯನ್ನು ಸಹ ಕಳೆದುಕೊಳ್ಳುತ್ತಿದೆ. ವಸ್ತು ಬಹಳ ಭಾರವಾದದ್ದಾದರೇ ಶರೀರ ಎತ್ತಲಾರದ ಸ್ಥಿತಿಗೆ ಬರುತ್ತಿದೆ. ಅಂದರೆ ಆತ್ಮ ಎತ್ತಲಾರದ ಸ್ಥಿತಿಗೆ ಬಂದಿದೆನ್ನುವ ಮಾತು. ಇದನ್ನನುಸರಿಸಿ ಭಾರ ಎತ್ತುವವನು ಆತ್ಮನೆಂದು ತಿಳಿಯುತ್ತಿದೆ. ಬಾಧೆಯನ್ನು ಅನುಭವಿಸುವವನು ಜೀವಾತ್ಮನೆಂದು ತಿಳಿಯುತ್ತಿದೆ.

**820. (5) ಮೋಕ್ಷವನ್ನು ಹೊಂದಿದಾಗ ಪರಮಾತ್ಮನಲ್ಲಿ ಐಕ್ಯವಾಗುವವನು ಆತ್ಮನಾ? ಜೀವಾತ್ಮನಾ?**

ಉ. ಆತ್ಮ, ಜೀವಾತ್ಮ ಇಬ್ಬರು.

**ವಿವರ :** ಒಂದೊಂದು ಜೀವಾತ್ಮಕ್ಕೆ ಒಂದೊಂದು ಆತ್ಮ ಜೋಡಿಯಾಗಿ ಇರುತ್ತದೆ. ಆತ್ಮನನ್ನು ಜೀವಾತ್ಮ, ಜೀವಾತ್ಮನನ್ನು ಆತ್ಮ ಬಿಡಲಾರದವರಾಗಿ ಇದ್ದಾರೆ. ಸಾವಿನಲ್ಲೂ ಹುಟ್ಟುವಿಕೆಯಲ್ಲೂ ಒಬ್ಬರ ಹಿಂದೆ ಒಬ್ಬರು ಪ್ರಯಾಣಿಸುತ್ತಾ, ಯುಗಗಳ ಪರ್ಯಂತವೂ ಕಾಲ ಕಳೆದ ಅವರು, ಕರ್ಮ ರಾಹಿತ್ಯದಿಂದ ಜೀವಾತ್ಮನು ಮೋಕ್ಷ ಹೊಂದುವ ಸಮಯದಲ್ಲಿ, ಜೀವಾತ್ಮನೊಂದಿಗೆ ಅಷ್ಟು ಕಾಲವಿದ್ದ ಆತ್ಮನೂ ಸಹ ಪರಮಾತ್ಮನೊಳಗೆ ಐಕ್ಯವಾಗುತ್ತದೆ. ಒಂದು ಶರೀರದಲ್ಲಿನ ಜೀವಾತ್ಮ, ಆತ್ಮನಿಂದ ಪರಮಾತ್ಮನೊಳಗೆ ಪ್ರವೇಶಿಸುತ್ತಿದೆ. ಇದರಿಂದ ಆತ್ಮ, ಜೀವಾತ್ಮ ಎರಡೂ ಮೋಕ್ಷ ಹೊಂದಿದಂತಾಗುತ್ತವೆ. ಜೀವಾತ್ಮ ಮೋಕ್ಷ ಹೊಂದಬಹುದು, ಆದರೆ ಆತ್ಮ ಮೋಕ್ಷ ಹೊಂದುವುದೇನೆಂದು ಕೆಲವರಿಗೆ ಪ್ರಶ್ನೆ ಬರಬಹುದು. ಅದಕ್ಕೆ ಉತ್ತರ ಏನೆಂದರೆ ಪರಮಾತ್ಮ ಅಖಂಡವಾದದ್ದು. ಆತ್ಮ ಖಂಡವಾದದ್ದು, ಒಂದೊಂದು ಶರೀರದಲ್ಲಿ ಒಂದೊಂದು ಆತ್ಮ ಇದೆ. ಬೇರೆ ಬೇರೆ ಶರೀರಗಳಲ್ಲಿ ಬೇರೆ ಬೇರೆ ಜೀವಾತ್ಮಗಳಿರುವಹಾಗೆ, ಬೇರೆ ಬೇರೆ ಶರೀರಗಳಲ್ಲಿ ಬೇರೆ ಬೇರೆ ಆತ್ಮಗಳಿವೆ. ಆತ್ಮಗಳು ಅನೇಕವಾದರೂ ಅವುಗಳ ಅಂಶ ಒಂದೇ ಆಗಿರುವುದರಿಂದ, ಒಂದು ಶರೀರದಲ್ಲಿನ ಆತ್ಮ ಯಾವ ಕೆಲಸಕ್ಕಾಗಿ ನಿಯಮಿಸಲಾಗಿದೆಯೊ, ಎಲ್ಲಾ ಶರೀರಗಳಲ್ಲಿನ ಆತ್ಮಗಳು ಅದೇ ಕೆಲಸ ಹೊಂದಿವೆ. ಒಂದು ಶರೀರದಲ್ಲಿನ ಆತ್ಮ ಜೀವಾತ್ಮನೊಂದಿಗೆ ಮೋಕ್ಷ ಹೊಂದಿದರೂ, ಉಳಿದ ಶರೀರಗಳಲ್ಲಿನ ಆತ್ಮಗಳು ಒಂದೇ ಅಂಶದೊಂದಿಗೆ, ಒಂದೇ ಕೆಲಸ ಮಾಡುತ್ತಿರುತ್ತದೆ. ಎಲ್ಲಿಯವರೆಗು ಜೀವಾತ್ಮಗಳಿರುತ್ತವೋ, ಅಲ್ಲಿಯವರೆಗು ಆತ್ಮಗಳಿರುತ್ತವೆ. ಇದರಿಂದ ಜೀವಾತ್ಮ ಮೋಕ್ಷ ಹೊಂದಿದಾಗ ಆ ಶರೀರದಲ್ಲಿನ ಆತ್ಮ ಸಹ ಮೋಕ್ಷ ಹೊಂದುತ್ತಿದೆ.

**821. (6) ಕಣ್ಣು ಚೆನ್ನಾಗಿದ್ದು ನೋಡಲಾರದ ಕುರುಡನ ಕಣ್ಣಿನಲ್ಲಿ ಇಲ್ಲದಿರುವುದು ಯಾವುದು? ಆತ್ಮನಾ ಜೀವಾತ್ಮನಾ?**

ಉ. ಜೀವಾತ್ಮ.

**ವಿವರ :** ಕಣ್ಣು ಕುರುಡಾದರೂ ಒಳ್ಳೆಯದಾದರೂ ಅದರಲ್ಲಿ ಆತ್ಮ ವ್ಯಾಪಿಸಿದೆ. ಜೀವಾತ್ಮ ಮಾತ್ರ ಒಳ್ಳೆ ಕಣ್ಣಿನಲ್ಲಾಗಲಿ, ಕುರುಡು ಕಣ್ಣಿನಲ್ಲಾಗಲಿ ವ್ಯಾಪಿಸಿ ಇರುವುದಿಲ್ಲ. ಕಣ್ಣು

ಚೆನ್ನಾಗಿದೆ ಆದ್ದರಿಂದ ಆತ್ಮ ವ್ಯಾಪಿಸಿ ಇದೆಯೆಂದು ಹೇಳಬಹುದು. ಅದು ಕುರುಡದು ಆದ್ದರಿಂದ ಅದಕ್ಕೆ ದೃಷ್ಟಿ ಇಲ್ಲ. ಆದರೆ ಅದರಲ್ಲಿ ಆತ್ಮ ಇದೆ. ಜೀವಾತ್ಮ ಯಾವ ಕಣ್ಣಲ್ಲಿ ಇರುವುದಿಲ್ಲ. ಅದು ತಲೆಯಲ್ಲಿನ ಗುಣಚಕ್ರದಲ್ಲಿ ಇರುತ್ತದೆ.

**822. (7) ಶರೀರದ ಮೇಲೆ ಆಧಾರಬಿದ್ದು ಬದುಕುವವರು ಯಾರು? ಆತ್ಮನಾ ಜೀವಾತ್ಮನಾ?**

ಉ. ಆತ್ಮ.

**ವಿವರ :** ಶರೀರವೆಲ್ಲಾ ವ್ಯಾಪಿಸಿ ಶರೀರದ ಮೇಲೆ ಆಧಾರಬಿದ್ದು ಇರುವುದು ಆತ್ಮ. ಶರೀರ ಖಂಡಿಸಲ್ಪಟ್ಟರೆ ಆತ್ಮ ಅದರಲ್ಲಿ ನಿವಾಸವಿರಲಾರದು. ಶರೀರದೊಂದಿಗೆ ಆತ್ಮ ಸಹ ಖಂಡಿಸಲ್ಪಡುತ್ತದೆ. ಆದ್ದರಿಂದ ಶರೀರದ ಮೇಲೆ ಆಧಾರವಾಗಿರುವುದು ಆತ್ಮನೆಂದೇ ಹೇಳಬಹುದು. ಶರೀರ ನಾಶನವಾದರೆ ಮೊದಲು ಆತ್ಮ ಶರೀರವನ್ನು ಬಿಡಬೇಕಾಗುತ್ತದೆ. ಅದರ ಹಿಂದೆ ಜೀವಾತ್ಮನು ಸಹ ಹೋಗುತ್ತದೆ.

**823. (8) ಶರೀರದಲ್ಲಿ ಆಯಸ್ಸು ಇದೆ. ಅದು ಆತ್ಮಕ್ಕಾ? ಜೀವಾತ್ಮಕ್ಕಾ?**

ಉ. ಆತ್ಮಕ್ಕೂ, ಜೀವಾತ್ಮಕ್ಕೂ ಇಬ್ಬರಿಗೂ.

**ವಿವರ :** ಶರೀರದಲ್ಲಿ ಆಯಸ್ಸು ಆತ್ಮಕ್ಕೂ ಮತ್ತು ಜೀವಾತ್ಮಕ್ಕೂ ಇಬ್ಬರಿಗೂ ಇದೆ. ಆತ್ಮ ಆಯಸ್ಸು ಮುಗಿದರೆ ಅದು ಅಕಾಲ ಮರಣವಾಗುತ್ತದೆ. ಒಂದು ವೇಳೆ ಜೀವಾತ್ಮಕ್ಕೆ ಆಯಸ್ಸು ಮುಗಿದರೆ ಅದು ಕಾಲಮರಣವಾಗುತ್ತದೆ. ಶರೀರದಲ್ಲಿ ಆತ್ಮಕ್ಕೆ ಆಯಸ್ಸು ಮುಗಿದರೆ ಮೊದಲು ಆತ್ಮ ಹೊರಗೆ ಹೋಗಬೇಕಾಗುತ್ತದೆ. ಹಾಗೇ ಜೀವಾತ್ಮನಿಗೆ ಮೊದಲು ಆಯಸ್ಸು ಮುಗಿದರೆ ಜೀವಾತ್ಮ ಮೊದಲು ಹೊರಗೆ ಹೋಗಬೇಕಾಗುತ್ತದೆ. ಜೀವಾತ್ಮ ಮೊದಲು ಹೋದರೆ ಅದರ ಹಿಂದೆ ಆತ್ಮ ಸಹ ಹೋಗುವುದು. ಒಂದು ವೇಳೆ ಆತ್ಮ ಮೊದಲು ಹೋದರೆ ಅದರ ಹಿಂದೆ ಜೀವಾತ್ಮ ಸಹ ಹೋಗಬೇಕಾಗಿರುತ್ತದೆ. ಆದ್ದರಿಂದ ಆತ್ಮಕ್ಕೂ, ಜೀವಾತ್ಮಕ್ಕೂ ಆಯಸ್ಸು ಇದೆಯೆಂದು ಹೇಳಬಹುದು.

**824. (9) ಜನ್ಮದಲ್ಲಿ ಮೊದಲು ಶರೀರದಲ್ಲಿ ಪ್ರವೇಶಿಸುವುದು ಆತ್ಮನಾ ಜೀವಾತ್ಮನಾ?**

ಉ. ಆತ್ಮ.

**ವಿವರ :** ಜನ್ಮದಲ್ಲಿ ಶರೀರದೊಳಗೆ ಪ್ರವೇಶಿಸುವುದು ಆತ್ಮನೇ. ಕಾಲ ಕರ್ಮ ಗುಣ

ಚಕ್ರಗಳಲ್ಲಿ ಆತ್ಮ ವ್ಯಾಪಿಸಿ ಇದೆ. ಜೀವಾತ್ಮ ಗುಣ ಚಕ್ರದಲ್ಲಿ ಒಂದು ಭಾಗದಲ್ಲಿ ಮಾತ್ರವೇ ಇರುತ್ತದೆ. ಗುಣ ಕರ್ಮ ಚಕ್ರಗಳ ಕೊನೆಯ ಅಂಚಿನವರೆಗು ಆತ್ಮ ವ್ಯಾಪಿಸಿ ಇದೆ. ಆದ್ದರಿಂದ ಶರೀರದಲ್ಲಿ ಆತ್ಮನೇ ಪ್ರವೇಶಿಸುತ್ತಿದ್ದಾನೆ ಎಂದು ಹೇಳಬಹುದು.

**825. (10) ಶರೀರದಲ್ಲಿ ಬಹಳ ಭಾರವಾದದ್ದು ಆತ್ಮನಾ ಜೀವಾತ್ಮನಾ?**

ಉ. ಆತ್ಮ.

**ವಿವರ :** ಶರೀರವೆಲ್ಲವು ವ್ಯಾಪಿಸಿರುವುದು ಆತ್ಮ. ಜೀವಾತ್ಮ ಶರೀರದಲ್ಲಿ ಒಂದು ಕಡೆ ಮಾತ್ರವಿದೆ. ಆತ್ಮ ಆವರಣ ವಿಸ್ತೀರ್ಣ ಜೀವಾತ್ಮ ವಿಸ್ತೀರ್ಣಕ್ಕಿಂತಲೂ ಎಷ್ಟೋ ಪಟ್ಟು ಹೆಚ್ಚು, ಆದ್ದರಿಂದ ಜೀವಾತ್ಮನಿಗಿಂತಲೂ ಆತ್ಮವೆ ಹೆಚ್ಚು ಭಾರವಾದದ್ದೆಂದು ಹೇಳಬಹುದು. ಆತ್ಮಗಳಿಗೆ ಭಾರವಿರುತ್ತದೆಯಾ ಎಂದು ಕೆಲವರಂದುಕೊಳ್ಳಬಹುದು. ಆತ್ಮ ಜೀವಾತ್ಮಗಳಿಗೆ ಆಕಾರ ಪರಿಣಾಮ ಮರಣ ಇರುವಾಗ ಭಾರವೇಕೆ ಇರುವುದಿಲ್ಲ. ಆಕಾರವಿದೆ, ಹೆಸರು ಇದೆ, ಸಾವು ಇದೆ, ನಾಶವೂ ಇದೆ ಹಾಗೇ ಭಾರವೂ ಇದೆಯೆಂದು ತಿಳಿಯಬೇಕು.

## ಜ್ಞಾನ ಪರೀಕ್ಷೆ

**ತಾಡಿಪತ್ರಿ** **ದಿನಾಂಕ–28–01–2002**

**826. (1) ಆತ್ಮನಲ್ಲಿ ಪರಮಾತ್ಮ ಇದೆಯಾ? ಪರಮಾತ್ಮನಲ್ಲಿ ಆತ್ಮ ಇದೆಯಾ?**

ಉ. ಆತ್ಮನಲ್ಲಿ ಪರಮಾತ್ಮ ಇದೆ. ಪರಮಾತ್ಮನಲ್ಲಿ ಆತ್ಮ ಇದೆ.

**ವಿವರ :** ಆತ್ಮನಲ್ಲಿ ಪರಮಾತ್ಮ ಇದೆ. ಪರಮಾತ್ಮನಲ್ಲಿ ಆತ್ಮ ಇದೆ. ಪರಮಾತ್ಮ ಸರ್ವವ್ಯಾಪಿ, ಅಣುವಣುವಿನಲ್ಲಿ ವ್ಯಾಪಿಸಿದವನು, ಪರಮಾತ್ಮ ಇಲ್ಲದಿರುವುದು ಏನೂ ಇಲ್ಲ. ಎಲ್ಲಾ ವ್ಯಾಪಿಸಿದ ಪರಮಾತ್ಮ ಆತ್ಮನಲ್ಲೂ ಸಹ ಇದೆ. ಆದ್ದರಿಂದ ಪರಮಾತ್ಮ ಆತ್ಮನಲ್ಲಿ ಇದ್ದಾನೆಂದೇ ಹೇಳಬಹುದು. ಪರಮಾತ್ಮ ಎಲ್ಲದರಲ್ಲೂ ಇರುವುದೇ ಅಲ್ಲದೆ ಸರ್ವತ್ರ ವ್ಯಾಪಿಸಿದ ಪರಮಾತ್ಮನಲ್ಲಿ ಎಲ್ಲಾ ಇವೆ. ಸಮಸ್ತ ಪ್ರಪಂಚ ಪರಮಾತ್ಮನಲ್ಲೇ ಇದೆ. ಆದ್ದರಿಂದ ಆತ್ಮ, ಜೀವಾತ್ಮರು, ಪಂಚಭೂತಗಳು, ಸಮಸ್ತ ವಸ್ತುಜಾಲವೂ ಆತನಲ್ಲೇ ಒಳಗೊಂಡಿವೆ. ಆದ್ದರಿಂದ ಪರಮಾತ್ಮನಲ್ಲಿ ಆತ್ಮ ಇದೆಯೆಂದು ಹೇಳಬಹುದು. ಎಲ್ಲದರಲ್ಲೂ, ಎಲ್ಲದರ ಹೊರಗೂ ಇರುವುದು ಪರಮಾತ್ಮ ಒಂದೇ, ಆದ್ದರಿಂದ ಆತ್ಮನಲ್ಲಿ ಪರಮಾತ್ಮ ಇದೆಯೆಂದು ಮತ್ತು

ಪರಮಾತ್ಮನಲ್ಲಿ ಆತ್ಮ ಇದೆಯೆಂದು ಹೇಳಬಹುದು. ಚೈತನ್ಯವನ್ನು ಹೊಂದಿದ ಆತ್ಮನಲ್ಲೇ ಅಲ್ಲದೆ, ಚೈತನ್ಯವಿಲ್ಲದ ಯಾವ ವಸ್ತುವಿನಲ್ಲಾದರೂ ಪರಮಾತ್ಮ ಇದೆಯೆಂದು ಹೇಳಬಹುದು. ಹಾಗೆಯೇ ಯಾವ ವಸ್ತುವಾದರೂ ಪರಮಾತ್ಮನಲ್ಲೇ ಇದೆಯೆಂದು ಸಹ ಹೇಳಬಹುದು.

**827. (2) ಪ್ರಪಂಚ ಗತಿಸಿದನಂತರವೂ ಸಹ ಪರಮಾತ್ಮ ಇದೆ. ಆಗ ಅದನ್ನು ಪರಮಾತ್ಮ ಎನ್ನಬಹುದಾ? ಅಥವಾ ಪುರುಷೋತ್ತಮಾ ಎನ್ನಬಹುದಾ? ಏನನ್ನಬಹುದು?**

ಉ. ಅವ್ಯಕ್ತವಾದ ಅಕ್ಷರವೆನ್ನಬಹುದು. ಪುರುಷೋತ್ತಮ, ಪರಮಾತ್ಮ ಎನ್ನುವುದರಲ್ಲಿ ಅರ್ಥವಿಲ್ಲ.

**ವಿವರ :** ಪ್ರಪಂಚ ಗತಿಸಿದ ನಂತರ ಸಹ ಈಗಿರುವ ಪರಮಾತ್ಮ ಆಗಲೂ ಸಹ ಇದೆ. ಆದರೆ ಆಗ ಅದನ್ನು ಪರಮಾತ್ಮ ಎಂದಾಗಲಿ, ಪುರುಷೋತ್ತಮ ಎಂದಾಗಲಿ ಕರೆಯಬಾರದು. ಏಕೆಂದರೆ! ಪ್ರಪಂಚವೇ ಇಲ್ಲದಿರುವಾಗ ಜೀವಾತ್ಮಗಳಾಗಲಿ, ಆತ್ಮಗಳಾಗಲಿ ಇರುವುದಿಲ್ಲ. ಆತ್ಮವೇ ಇಲ್ಲ ಆದುದರಿಂದ ಆಗ ಪರಮಾತ್ಮ ಎನ್ನಬಾರದು. ಒಂದು ವಸ್ತುವಿದ್ದಾಗ ಆ ವಸ್ತುವಿನೊಂದಿಗೆ ಹೋಲಿಸಿ ಮತ್ತೊಂದು ವಸ್ತುವನ್ನು ಸಣ್ಣದೆಂದೋ ಅಥವಾ ದೊಡ್ಡದೆಂದೋ ಹೇಳಬಹುದು. ಒಂದೇ ವಸ್ತುವಿದ್ದು ಎರಡನೇ ವಸ್ತು ಇಲ್ಲದಿರುವಾಗ ಅದನ್ನು ಸಣ್ಣದೆಂದಾಗಲಿ ದೊಡ್ಡದೆಂದಾಗಲಿ ಹೇಳುವ ಅವಶ್ಯವೇ ಇಲ್ಲ. ಹೋಲಿಸುವುದಕ್ಕೆ ಮತ್ತೊಂದು ಇಲ್ಲ. ಆದ್ದರಿಂದ ಇರುವ ಒಂದು ವಸ್ತುವನ್ನು ಸಣ್ಣದು ದೊಡ್ಡದೆಂದು ಹೇಳಲಾರೆವು. ಹಾಗೇ ಪ್ರಪಂಚವಿದ್ದಾಗ ಆತ್ಮ ಇದೆ, ಆದ್ದರಿಂದ ಆತ್ಮಗಿಂತಲೂ ಬೇರೆಯಾಗಿ ಇರುವುದನ್ನು ಪರಮಾತ್ಮ ಎಂದು ಹೇಳಿದ್ದೇವೆ. ಹಾಗೇ ಕ್ಷರ, ಅಕ್ಷರ ಪುರುಷರಾದ ಜೀವಾತ್ಮ, ಆತ್ಮಗಳಿಗಿಂತಲೂ ಉತ್ತಮವಾದದ್ದು ಆದ್ದರಿಂದ ಪುರುಷೋತ್ತಮ ಎಂದಿದ್ದೇವೆ. ಪ್ರಪಂಚ ಇಲ್ಲದಿರುವಾಗ ಇರುವುದು ಒಂದೇ ಆದ್ದರಿಂದ ಯಾವ ವಿಧವಾಗಿ ಹೋಲಿಸಲಾರೆವು. ಆದ್ದರಿಂದ ಅದನ್ನು ಪುರುಷೋತ್ತಮ ಎಂದಾಗಲಿ, ಪರಮಾತ್ಮ ಎಂದಾಗಲಿ ಹೇಳಲಾರೆವು. ಆ ಸಮಯದಲ್ಲಿ ಇರುವುದನ್ನು ಗೀತೆಯಲ್ಲಿ ಅಕ್ಷರ ಪರಬ್ರಹ್ಮ ಯೋಗವೆನ್ನುವ ಅಧ್ಯಾಯದಲ್ಲಿ 21 ನೇ ಶ್ಲೋಕದಲ್ಲಿ ಅವ್ಯಕ್ತವಾದ ಅಕ್ಷರವೆಂದಿದ್ದಾರೆ. ಅಂದರೆ ತಿಳಿಯದ ನಾಶವು ಇಲ್ಲದಿರುವುದೆಂದಿದ್ದಾರೆ.

**828. (3) ಭೂಮಿ ಮೇಲೆ ಬಲವಂತವಾದ ಆತ್ಮ ಯಾವುದು? ಹಾಗೇ ಬಲಹೀನವಾದ ಆತ್ಮ ಯಾವುದು? ಜೀವಾತ್ಮನಾ, ಆತ್ಮನಾ, ಪರಮಾತ್ಮನಾ?**

ಉ. ಬಲವಂತವಾದದ್ದು, ಬಲಹೀನವಾದದ್ದು ಎರಡೂ ಆತ್ಮನೇ.

**ವಿವರ :** ಭೂಮಿ ಮೇಲೆ ಬಲವಂತನಲ್ಲಾಗಲಿ, ಬಲಹೀನನಲ್ಲಾಗಲಿ ಚೈತನ್ಯವಾಗಿರುವುದು ಆತ್ಮವೇ. ಜೀವಾತ್ಮ ಬಲಾ ಬಲಗಳೊಂದಿಗೆ ಎಂತಹ ಸಂಬಂಧವೂ ಇಲ್ಲ. ಶರೀರಕ್ಕೆ ಬಲವನ್ನು ಕೊಡುವುದು ಆತ್ಮವೇ. ಕರ್ಮವನ್ನನುಸರಿಸಿ ಬಲವನ್ನು ಹೊಂದಿರಬೇಕಾದದ್ದು ಆತ್ಮವೇ, ಆದ್ದರಿಂದ ಬಲವಂತನಲ್ಲಾಗಲಿ, ಬಲಹೀನನಲ್ಲಾಗಲಿ ಬಲವನ್ನು ಹೊಂದಿರುವುದು, ಬಲಹೀನವಾಗಿರುವುದು ಆತ್ಮವೇ. ಆದ್ದರಿಂದ ಇರುವ ಮೂರು ಆತ್ಮಗಳಲ್ಲಿ ಬಲ ಅಬಲಗಳ ತಂತು ಆತ್ಮನದೇ ಆಗಲಿ ಜೀವಾತ್ಮ ಪರಮಾತ್ಮಗಳದ್ದಲ್ಲ.

**829. (4) ಕುರುಡು ಕಿವುಡು ಆದ ಆತ್ಮ ಯಾವುದು?**

ಉ. ಜೀವಾತ್ಮ.

**ವಿವರ :** ನಿಜವಾಗಿ ನೋಡಲಾರದ್ದು, ಕೇಳಲಾರದ್ದು ಜೀವಾತ್ಮ. ಹಾಗೇ ಪ್ರಪಂಚವನ್ನು ಯಾವ ವಿಧವಾಗಿ ಗ್ರಹಿಸಲಾರದ್ದು ಜೀವಾತ್ಮ. ಕಣ್ಣು ತೋರಿಸಿದರಾಗಲಿ, ಕಿವಿ ಕೇಳಿಸಿದರಾಗಲಿ ತಿಳಿಯದಿರುವುದು ಜೀವಾತ್ಮ. ಆದ್ದರಿಂದ ಜೀವಾತ್ಮನನ್ನು ಸ್ವತಃವಾಗಿ ಏನೂ ತಿಳಿಯದಿರುವುದೆಂದು, ಇತರರಿಂದ ತಿಳಿಯುವುದೆಂದು ತಿಳಿಸುವ ಸಲುವಾಗಿ ಜೀವಾತ್ಮನನ್ನು ಅಂಧನೆಂದಿದ್ದಾರೆ. ಕುರುಡನ ಕೆಲಸಕ್ಕೆ ಮುವ್ವರು ಕೇಡು ಎಂದು ಹೇಳುವ ವಾಕ್ಯದಲ್ಲಿ ಜೀವಾತ್ಮನನ್ನು ಕುರುಡನಾಗಿ ಹೇಳುವುದು ವಿಶೇಷ. ಕಾಣುವುದು, ಕೇಳುವುದು, ಸ್ಪರ್ಶಿಸುವುದು, ರುಚಿ ನೋಡುವುದು, ವಾಸನೆ ನೋಡುವುದು ಇಲ್ಲದಿರುವುದು ಜೀವಾತ್ಮ. ಕಣ್ಣು ತೋರಿಸಿದರಾಗಲಿ ನೋಡಲಾರದು, ಕಿವಿ ಕೇಳಿಸಿದರಾಗಲಿ ತಿಳಿಯಲಾರದು, ನಾಲಿಗೆ ರುಚಿ ತೋರಿಸಿದರಾಗಲಿ ತಿಳಿಯದು ಮೂಗು ತಿಳಿಸಿದರಾಗಲಿ ವಾಸನೆಯನ್ನು ತಿಳಿಯಲಾರದು, ಸ್ಪರ್ಶ ತಿಳಿಸಿದರಾಗಲಿ ಇಂತಹದೆಂದು ತಿಳಿಯದವನು ಜೀವಾತ್ಮ. ಆದ್ದರಿಂದ ಕುರುಡನು ಕಿವಡನು ಎಂದು ಜೀವಾತ್ಮನನ್ನು ಕರೆಯಬಹುದು.

**830. (5) ಶ್ವಾಸ ಇರುವುದು ಆತ್ಮನಿಗಾ ಜೀವಾತ್ಮನಿಗಾ?**

ಉ. ಆತ್ಮನಿಗೆ.

**ವಿವರ :** ಶ್ವಾಸ ಸ್ಥೂಲವಾಗಿ ಆಗಲಿ, ಸೂಕ್ಷ್ಮವಾಗಿ ಆಗಲಿ ಆತ್ಮನಿಗೇ ಇದೆ. ಜೀವಾತ್ಮ ಅನುಭವಗಳನ್ನು ಅನುಭವಿಸುವುದು ಹೊರತು ಏನೂ ಮಾಡುವುದಿಲ್ಲವೆನ್ನುವ ಸೂತ್ರದ ಪ್ರಕಾರ ಜೀವಾತ್ಮ ಶ್ವಾಸಿಸುವುದಿಲ್ಲ. ಶ್ವಾಸಗಳು ಆತ್ಮ ಸ್ಥೂಲವಾಗಿ ಸೂಕ್ಷ್ಮವಾಗಿ ಶ್ವಾಸವಾಡಿಸುತ್ತಿದೆ. ಆತ್ಮ ತನ್ನ ಶಕ್ತಿಯನ್ನು ಏಳು ಭಾಗಗಳಾಗಿ ವಿಭಜಿಸಿಕೊಂಡು ಒಂದು

ದಿನಕ್ಕೆ 21,600 ಶ್ವಾಸಗಳನ್ನು ಲೆಕ್ಕದ ಪ್ರಕಾರ ಶ್ವಾಸಿಸುತ್ತಿದೆ. ಆತ್ಮನೇ ತನ್ನ ನಾಡೀ ಕೇಂದ್ರಗಳಿಂದ ಕ್ರಮವಾಗಿ 600, 6000, 6000, 6000, 1000, 1000, 1000 ಶ್ವಾಸಗಳನ್ನು ನಡೆಸುತ್ತಿದೆ. ಈ ವರಸೆ ಕ್ರಮವಾಗಲಿ, ಶ್ವಾಸವನ್ನು ಕದಲಿಸುವುದಾಗಲಿ ಜೀವಾತ್ಮನಿಗೆ ಸಂಬಂಧವಿಲ್ಲ. ಇದನ್ನನುಸರಿಸಿ ಶ್ವಾಸ ಆತ್ಮಕ್ಕೇ ಆಗಲಿ ಜೀವಾತ್ಮನಿಗಲ್ಲವೆಂದು ತಿಳಿಯುತ್ತಿದೆ.

**831. (6) ಒಬ್ಬನು ಹೂವಿನ ತೋಟದಲ್ಲಿ ಹೂವನ್ನು ಕೀಳುತ್ತಾ ಸುವಾಸನೆಯನ್ನು ಆಸ್ವಾದಿಸುತ್ತಾ ಇದ್ದನು. ಇಲ್ಲಿ ಹೂವು ಕೀಳುತ್ತಾ ಸುಗಂಧವನ್ನು ಅನುಭವಿಸುವವನು ಯಾರು?**

ಉ. ಹೂವನ್ನು ಕೀಳುತ್ತಿರುವದು ಆತ್ಮ. ಸುಗಂಧವನ್ನು ಅನುಭವಿಸುತ್ತಿರುವುದು ಜೀವಾತ್ಮ.

**ವಿವರ :** ಒಂದು ಸಜೀವ ಶರೀರ ಕೆಲಸ ಮಾಡುತ್ತಿದೆಯೆಂದರೆ ಅದರಲ್ಲಿ ಕರ್ಮವನ್ನು ಆಚರಿಸುವವನು ಒಬ್ಬನು, ಕರ್ಮವನ್ನು ಅನುಭವಿಸುವವನು ಒಬ್ಬನಿರುವನೆನ್ನುವುದು ಸೂತ್ರ. ಒಂದು ಸಜೀವ ಶರೀರದಲ್ಲಿ ಇಬ್ಬರಿರುವುದು ಎಲ್ಲರಿಗೂ ತಿಳಿದ ವಿಷಯವೇ. ಆ ಇಬ್ಬರಲ್ಲಿ ಕರ್ಮವನ್ನು ಆಚರಿಸುವವನು ಆತ್ಮನಾದಾಗ, ಅನುಭವಿಸುವವನು ಜೀವಾತ್ಮ ಎಂದು ತಿಳಿಯಬೇಕು. ಜೀವಾತ್ಮ ಗುಣಚಕ್ರವನ್ನು ಬಿಟ್ಟು ಎಲ್ಲೂ ಕದಲದವನು. ಆದ್ದರಿಂದ ಜೀವಾತ್ಮ ಯಾವ ಕೆಲಸ ಮಾಡಲಾರನು. ಇದನ್ನನುಸರಿಸಿ ಹೂವನ್ನು ಕೀಳುವವನು ಆತ್ಮ, ಹೂವುಗಳಲ್ಲಿ ವಾಸನೆ ಸುಖವನ್ನು ಅನುಭವಿಸುವವನು ಜೀವಾತ್ಮನೆಂದು ತಿಳಿಯಬೇಕು.

**832. (7) ನಿದ್ರೆ ಹೋಗುವಾಗ ಸಾಕ್ಷಿ ಭೂತನಾಗಿರುವ ಆತ್ಮ ಯಾವುದು?**

ಉ. ಪರಮಾತ್ಮ.

**ವಿವರ :** ಸಾಕ್ಷಿ ಎಂದರೆ ನೋಡುತ್ತಿರುವುದು ಅಥವಾ ನೋಡುವವನು ಎಂದು ಅರ್ಥ. ಕಾಲ ಬದಲಾವಣೆಯಲ್ಲಿ ಧರ್ಮಗಳೇ ಅಧರ್ಮಗಳಾಗಿ ಬದಲಾಗುತ್ತಿರುವಾಗ ಪದಗಳು ಸಹ ಎಷ್ಟೋ ಬದಲಾಗಿವೆ. ಹಾಗೇ ಸಾಕ್ಷಿ ಎಂಬ ಪದ ಪೂರ್ವದಲ್ಲಿ ಅಕ್ಷಿ ಎನ್ನುವ ಪದವಾಗಿ ಇರುತ್ತಿತ್ತು. ಅಕ್ಷಿ ಎಂದರೆ ಕಣ್ಣು ಎಂದು ಅರ್ಥವಿದೆ. ಒಂದು ವಿಷಯವನ್ನು ನೋಡುವುದು ಕಣ್ಣು, ಆದ್ದರಿಂದ ಪೂರ್ವದಲ್ಲಿ ಯಾವ ವಿಷಯವನ್ನಾದರೂ ನೋಡಿದರೆ ಅವನನ್ನು ಅಕ್ಷಿ ಎನ್ನುತ್ತಿದ್ದರು. ಕಾಲ ಕ್ರಮದಲ್ಲಿ ಅಕ್ಷಿ ಎನ್ನುವ ಪದ ಸಾಕ್ಷಿಯಾಗಿ ಬದಲಾಗಿದೆ. ಒಬ್ಬ ಮನುಷ್ಯ ಎಚ್ಚರದಲ್ಲಿರುವಾಗ ಜೀವಾತ್ಮ ಏನನ್ನು ಅನುಭವಿಸುತ್ತಿರುವುದು ಆತ್ಮ

ನೋಡುತ್ತಿದೆ. ಒಬ್ಬ ಮನುಷ್ಯ ನಿದ್ರೆ ಹೋಗುವಾಗ ಮನಸ್ಸು ಬ್ರಹ್ಮನಾಡಿಯಲ್ಲಿ ಅಡಗಿ ಹೋಗುತ್ತಿದೆ. ಆದ್ದರಿಂದ ಜೀವಾತ್ಮ ಏನೂ ಅನುಭವಿಸುವುದು ಇಲ್ಲ. ಆದ್ದರಿಂದ ಅದಕ್ಕೆ ಸಾಕ್ಷಿ ಅವಶ್ಯವಿಲ್ಲ. ನಿದ್ರೆ ಹೋಗುವಾಗ ಕೇಳಿದ್ದೀರಾದ್ದರಿಂದ ಆ ಸಮಯದಲ್ಲಿ ಆತ್ಮ ಒಂದೇ ಕೆಲಸ ಮಾಡುತ್ತಿದೆ. ಆಗ ಆತ್ಮನನ್ನು ನೋಡುವವನು ಪರಮಾತ್ಮ. ಆದ್ದರಿಂದ ನಿದ್ರೆ ಹೋಗುವವನಿಗೆ ಪರಮಾತ್ಮವೇ ಸಾಕ್ಷಿ ಎಂದು ತಿಳಿಯಬೇಕು. ಪೂರ್ವವು ಎಚ್ಚರದಲ್ಲಿದ್ದು ತಪ್ಪು ಮಾಡಿಲ್ಲ ಎನ್ನುವುದಕ್ಕೆ ಆತ್ಮ ಸಾಕ್ಷಿಯಾಗಿದೆ ಎಂದು ಹೇಳುತ್ತಿದ್ದರು. ನಿದ್ರೆಯಲ್ಲಿ ಸಹ ತಪ್ಪು ಮಾಡಿಲ್ಲ ಎನ್ನುವುದಕ್ಕೆ ಪರಮಾತ್ಮ ಸಾಕ್ಷಿಯಾಗಿ ಎಂದು ಹೇಳುತ್ತಿದ್ದರು. ಆತ್ಮ ಸಾಕ್ಷಿಯಾಗಿ, ಪರಮಾತ್ಮ ಸಾಕ್ಷಿಯಾಗಿ ಎನ್ನುವುದರಲ್ಲಿ ಎಚ್ಚರದಲ್ಲಾಗಲಿ, ನಿದ್ರೆಯಲ್ಲಾಗಲಿ ಎಂದು ಹೇಳುವುದೆಂದು ತಿಳಿಯಬೇಕು. ಇದನ್ನನುಸರಿಸಿ ನಿದ್ರೆಯಲ್ಲಿ ಸಾಕ್ಷಿಯಾಗಿರುವುದು ಪರಮಾತ್ಮನೆಂದು ಹೇಳಬಹುದು. ಜೀವಾತ್ಮನಿಗೆ ಸಾಕ್ಷಿ ಆತ್ಮನಾದಾಗ, ಆತ್ಮಕ್ಕೆ ಸಾಕ್ಷಿ ಪರಮಾತ್ಮ ಆಗುತ್ತದೆ.

**833. (8) ಅಂದವಾಗಿರುವ ಆತ್ಮ ಯಾವುದು? ಅಂದಹೀನವಾಗಿರುವ ಆತ್ಮ ಯಾವುದು?**

ಉ. ಆತ್ಮ.

**ವಿವರ :** ಆತ್ಮವೇ ಶರೀರವನ್ನು ಬೆಳೆಸುತ್ತಾ ಶರೀರದ ಕೊನೆಯ ಅಂಚಿನವರೆಗು ತನ್ನ ಶಕ್ತಿಯನ್ನು ವ್ಯಾಪಿಸುವ ಹಾಗೆ ಮಾಡುತ್ತಿದೆ. ಪ್ರಾರಬ್ಧಕರ್ಮವನ್ನು ಅನುಸರಿಸಿ ಶರೀರ ಬೆಳವಣಿಗೆಯನ್ನು ಕ್ರಮಬದ್ದೀಕರಿಸುತ್ತಿದೆ. ಕರ್ಮವನ್ನು ಅನುಸರಿಸಿ ಬೆಳೆದ ಕ್ರಮದಲ್ಲೇ ಶರೀರ ಕೆಲವರಿಗೆ ಅಂದವಾಗಿ ಕೆಲವರಿಗೆ ಅಂದಹೀನವಾಗಿ ತಯಾರಾಗುತ್ತಿದೆ. ಶರೀರವೆಲ್ಲಾ ಆತ್ಮ ವ್ಯಾಪಿಸಿ ಇದೆ, ಆದ್ದರಿಂದ ಶರೀರ ಆಕಾರದೊಂದಿಗೆ ಆತ್ಮ ಆಕಾರವನ್ನು ಹೋಲಿಸಬಹುದು. ಶರೀರವೆಲ್ಲಾ ವ್ಯಾಪಿಸಿರುವುದರಿಂದ ಶರೀರ ಆಕಾರವನ್ನೇ ಆತ್ಮ ಹೋಲಿದೆ ಎನ್ನುವುದು ಸೂತ್ರ. ಆದ್ದರಿಂದ ಭೂಮಿ ಮೇಲೆ ಅಂದವಾದ ಶರೀರದಲ್ಲಿನ ಆತ್ಮ ಅಂದವಾಗಿ ಇದೆಯೆಂದು, ಅಂದಹೀನ ಶರೀರದಲ್ಲಿನ ಆತ್ಮ ಅಂದಹೀನವಾಗಿದೆ ಯೆಂದು ಹೇಳಬಹುದು. ಜೀವಾತ್ಮ, ಆತ್ಮ, ಪರಮಾತ್ಮರಲ್ಲಿ ಜೀವಾತ್ಮ ಯಾರಿಗೆ ಕಾಣಿಸುವುದಲ್ಲ. ಅಷ್ಟೇ ಅಲ್ಲದೆ ಎಲ್ಲರಲ್ಲೂ ಜೀವಾತ್ಮ ಒಂದೇ ಆಕೃತಿಯನ್ನು ಹೋಲಿದೆ, ಆದ್ದರಿಂದ ಅದಕ್ಕೆ ಅಂದ ಅಂದಹೀನ ಎನ್ನುವ ಸಮಸ್ಯೆಯೇ ಇಲ್ಲ. ಇನ್ನು ಪರಮಾತ್ಮನಿಗೆ ಹದ್ದು (ಅಂಚು) ಆಕೃತಿ ಇಲ್ಲ. ಉಳಿದ ಆತ್ಮ ಒಂದಕ್ಕೇ ಅಂದ ಆಕಾರವಿದೆಯೆಂದು ತಿಳಿಯಬೇಕು.

**834. (9) ಎಲ್ಲರಲ್ಲೂ ಒಂದೇ ಆಕೃತಿಯನ್ನು ಹೋಲಿರುವುದು ಯಾವುದು?**

ಉ. ಜೀವಾತ್ಮ.

**ವಿವರ :** ರೂಪವನ್ನು ಹೊಂದಿರುವವು ಆತ್ಮ ಜೀವಾತ್ಮಗಳು ಮಾತ್ರವೇ. ರೂಪವೇ ಇಲ್ಲದ್ದು ಪರಮಾತ್ಮ, ಎಲ್ಲರಲ್ಲೂ ಇದ್ದು ಬೇರೆ ಬೇರೆ ಆಕೃತಿಗಳನ್ನು ಹೊಂದಿರುವುದು ಆತ್ಮವಾದಾಗ, ಎಲ್ಲರಲ್ಲೂ ಒಂದೇ ಆಕೃತಿ ಹೊಂದಿರುವುದು ಜೀವಾತ್ಮ. ಶರೀರಗಳು ಎಷ್ಟು ರೂಪಗಳು ಹೊಂದಿದ್ದರೆ ಅಷ್ಟು ವಿಧಗಳ ಆಕೃತಿ ಹೊಂದಿದೆ ಆತ್ಮ. ಹಾಗೆಯೇ ಶರೀರಗಳೆಷ್ಟು ರೂಪಗಳಾಗಿದ್ದರೂ ಬುದ್ಧಿ, ಚಿತ್ತ, ಅಹಂ ಪೊರೆಗಳ ಮಧ್ಯೆ ಸಿಲುಕಿಕೊಂಡಿರುವುದು ಜೀವಾತ್ಮ. ಎಲ್ಲ ಶರೀರಗಳಲ್ಲೂ ಬುದ್ಧಿ, ಚಿತ್ತ, ಅಹಂಗಳ ಆಕಾರಗಳು ಒಂದೇ ವಿಧವಾಗಿ ದುಂಡಾಗಿ ಇರುವುದರಿಂದ, ಜೀವಾತ್ಮ ಅವುಗಳ ಮಧ್ಯೆ ಬಂಧಿಸಲಾಗಿರುವುದರಿಂದ, ಮಧ್ಯದಲ್ಲಿ ಇರುವ ದುಂಡಾದ ಆಕಾರವನ್ನು ಜೀವಾತ್ಮ ಸಂತರಿಸಿಕೊಂಡು ಇದೆ. ಆದ್ದರಿಂದ ಯಾವ ಜೀವರಾಶಿ ಶರೀರದಲ್ಲಾದರೂ ಆತ್ಮ ರೂಪಗಳು ಅನೇಕ ಹಾಗೆಯೇ ಯಾವ ಜೀವರಾಶಿ ಶರೀರದಲ್ಲಾದರೂ ಜೀವಾತ್ಮ ರೂಪಗಳು ಒಂದೇ ವಿಧವೆಂದು ಹೇಳಬಹುದು.

**835. (10) ಆತ್ಮಗಿಂತಲೂ ಪರಮಾತ್ಮ ಸಣ್ಣದಾ, ದೊಡ್ಡದಾ?**

ಉ. ಸಣ್ಣದು ಮತ್ತು ದೊಡ್ಡದು.

ವಿವರ : ಆತ್ಮನಲ್ಲಿ ಪರಮಾತ್ಮ ಇದೆ ಆದ್ದರಿಂದ ಆತ್ಮಗಿಂತಲೂ ಪರಮಾತ್ಮ ಚಿಕ್ಕದೆಂದು ಹೇಳಬಹುದು. ಹಾಗೇ ಪರಮಾತ್ಮನಲ್ಲಿ ಆತ್ಮ ಇರುವುದರಿಂದ ಆತ್ಮಗಿಂತಲೂ ಪರಮಾತ್ಮ ದೊಡ್ಡದೆಂದು ಸಹ ಹೇಳಬಹುದು. ಇದನ್ನನುಸರಿಸಿ ಆತ್ಮಗಿಂತಲೂ ಪರಮಾತ್ಮ ದೊಡ್ಡದು ಮತ್ತು ಚಿಕ್ಕದು ಎಂದು ಹೇಳಬಹುದು.

## ಜ್ಞಾನ ಪರೀಕ್ಷೆ

**ಕೆ. ನರ್ಸಾಪುರ** **ದಿನಾಂಕ–01–03–2002**

**836. (1) ಪವಿತ್ರ ಆತ್ಮಗಳು ಅಪವಿತ್ರ ಆತ್ಮಗಳಿವೆಯಾ?**

ಉ. ಇಲ್ಲ.

**ವಿವರ :** ಆತ್ಮಗಳಲ್ಲಿ ಅಪವಿತ್ರ ಆತ್ಮಗಳಿರುವುದಿಲ್ಲ. ಜೀವಾತ್ಮವಾಗಲಿ, ಆತ್ಮವಾಗಲಿ, ಪರಮಾತ್ಮವಾಗಲಿ ಯಾವುವು ಅಪವಿತ್ರವಾದವುಗಳಿಲ್ಲ. ಜೀವಾತ್ಮ ಪರಮಾತ್ಮ ಅಂಶವೇ ಆದರೂ ಕರ್ಮ ಬಂಧವನ್ನು ಹೊಂದಿದೆ. ಅಷ್ಟಕ್ಕೂ ಮೀರಿ ಅಪವಿತ್ರತೆ ಏನೂ ಇಲ್ಲ. ಆತ್ಮ ಯಾವಾಗಲೂ ಸ್ವಚ್ಛವಾದುದಾಗಿ, ಯಾವ ಸಂಬಂಧ ಇಲ್ಲದಾಗಿ, ಶರೀರದಲ್ಲಿ ದೇವರಾಗಿ, ಜೀವಾತ್ಮಗಿರುವ ಕರ್ಮವನ್ನು ಆಚರಿಸುತ್ತಾ ಜೀವಾತ್ಮನನ್ನು ಅನುಭವಿಸುವಂತೆ ಮಾಡುತ್ತಿದೆ. ಪರಮಾತ್ಮ ಎಲ್ಲದಕ್ಕೂ ಅತೀತನಾಗಿ, ಒಳಗೂ ಹೊರಗೂ ಅವರಿಸಿದವನಾಗಿ ಇದ್ದಾನೆ. ಆದ್ದರಿಂದ ಆತ್ಮದ ಬಗ್ಗೆ ಅಪವಿತ್ರತೆ ಎನ್ನುವ ಪದ ಅನ್ವಯಿಸುವುದಿಲ್ಲ.

**837. (2) ಆಡವಾರು(ಹೆಂಗಸರು) ಎಂದರೇ ಅರ್ಥವೇನು?**

ಉ. ಅಡ್ಡ ಬರುವವರು.

**ವಿವರ :** ಆಡ ಎಂದರೆ ಅಡ್ಡ ಆತಂಕ ಎಂದು ಅರ್ಥ. ಪ್ರಪಂಚ ಹುಟ್ಟದ ಪೂರ್ವ ಪರಮಾತ್ಮ ಒಬ್ಬನೇ ಇರುತ್ತಿದ್ದನು. ಸೃಷ್ಟಿ ಆದಿಯಲ್ಲಿ ಪರಮಾತ್ಮ ತನಗೆ ವಿರುದ್ಧವಾದ ಮಾಯೆಯನ್ನು ತಯಾರು ಮಾಡಿ ಇಟ್ಟಿದ್ದಾನೆ. ಆತನ ಸಂಕಲ್ಪದಿಂದಲೇ ಪ್ರಕೃತಿ ಎನ್ನುವ ಮಾಯೆ ತಯಾರಾಗಿದೆ. ಪರಮಾತ್ಮ ಮೊದಲು ಆದೇಶಿಸಿದ ಪ್ರಕಾರ ಯಾವಾಗಲೂ ದೈವ ಜ್ಞಾನಕ್ಕೂ, ಮೋಕ್ಷಕ್ಕೂ ಅಡ್ಡವಾಗಿ ನಿಂತಿದೆ. ದೈವಕ್ಕೇ ಅಡ್ಡವಾಗಿರುವುದರಿಂದ ಮಾಯೆಯನ್ನು ಆಡದಿ (ಹೆಂಗಸು) ಎಂದಿದ್ದಾರೆ. ಪ್ರಕೃತಿ ಪುರುಷರ ಲಕ್ಷಣಗಳೊಂದಿಗೆ ಹುಟ್ಟಿದ ಸ್ತ್ರೀ ಪುರುಷರನ್ನು ಹೆಣ್ಣು ಗಂಡು ಎನ್ನುವುದು ನಡೆಯುತ್ತಿದೆ. ಪುರುಷತ್ವವನ್ನು ಹೊಂದಿ ಹುಟ್ಟಿಸುವ ಬೀಜ ಹೊಂದಿರುವುದರಿಂದ ಪುರುಷರನ್ನು ಪುರುಷತ್ವ ಹೊಂದಿದ ಪುರುಷರೆಂದು ಕರೆಯುತ್ತಿದ್ದೇವೆ. ಹಾಗೇ ಪುರುಷ ಬೀಜಕ್ಕೆ ಗರ್ಭ ಧರಿಸಿ ಶರೀರಕ್ಕೆ ರೂಪವನ್ನು ಕೊಡುವ ಪ್ರಕೃತಿ ಲಕ್ಷಣಗಳಲ್ಲಿ ತುಂಬಿರುವುದರಿಂದ, ಪ್ರಕೃತಿ ಯೊಂದರ ಆಡ (ಸ್ತ್ರೀ) ಲಕ್ಷಣಗಳು ಇರುವುದರಿಂದ ಸ್ತ್ರೀಯರನ್ನು ಸ್ತ್ರೀ ತನ ಹೊಂದಿದ ಆಡವಾ (ಹೆಂಗಸ) ರೆಂದು ಕರೆಯುತ್ತಿದ್ದೇವೆ.

**838. (3) ಪವಿತ್ರ ಪ್ರೇಮ ಇದೆಯಾ?**

ಉ. ಇಲ್ಲ.

**ವಿವರ :** ಪ್ರೇಮ ಎನ್ನುವುದು ಅರಿಷಟ್ ವರ್ಗದಲ್ಲಿನ ಅಸೂಯೆಗೆ ವ್ಯತಿರೇಖವಾದ ಗುಣ. ಪ್ರೇಮ ಒಂಬತ್ತು ಭಾಗಗಳಾಗಿ ಇದೆ. ಪ್ರೇಮದಲ್ಲಿ ಸಣ್ಣ ಪ್ರೇಮ, ದೊಡ್ಡ ಪ್ರೇಮ

ಎಂದು ಒಂಬತ್ತು ವಿಧಗಳಾಗಿ ಇದೆ ಆದರೆ ಪವಿತ್ರ ಅಪವಿತ್ರ ಎನ್ನುವವು ಇಲ್ಲ. ಪ್ರೇಮ ದಿಂದ ಬರುವ ಫಲಿತ ಪುಣ್ಯವಿರಬಹುದು ಆದರೆ ಪವಿತ್ರತೆ ಎನ್ನುವುದು ಇರುವುದಿಲ್ಲ. ಪ್ರೇಮ ಗುಣ ಭಾಗದ ವರಸೆಯಲ್ಲಿ ಕೊನೆಯದಾಗಿ ಇದೆ.

**839. (4) ನಿದ್ರೆಯಲ್ಲಿ ಪರಮಾತ್ಮ ಕೆಲಸ ಮಾಡುತ್ತಿದೆಯಾ?**

ಉ. ಮಾಡಲಿಲ್ಲ.

**ವಿವರ :** ನಿದ್ರೆಯಲ್ಲಾಗಲಿ, ಎಚ್ಚರದಲ್ಲಾಗಲಿ, ಸ್ವಪ್ನದಲ್ಲಾಗಲಿ ಆತ್ಮ ಕೆಲಸ ಮಾಡುತ್ತಿರುತ್ತದೆ ಆದರೆ ಪರಮಾತ್ಮ ಕೆಲಸ ಮಾಡುವುದಿಲ್ಲ. ಯಾವಾಗಲೂ ಏನೂ ಮಾಡದೆ ಎಲ್ಲದಕ್ಕೂ ಸಾಕ್ಷಿಯಾಗಿ ಎಲ್ಲಾ ಎಲ್ಲರಲ್ಲೂ ಇರುವುದು ಪರಮಾತ್ಮ. ನಿರಂತರ ಕದಲದೆ ಮೆದಲದೆ ಒಂದೇ ವಿಧವಾಗಿ ಇರುವವನು ಪರಮಾತ್ಮ.

**840. (5) ನಮ್ಮ ದೇಶದಲ್ಲಿನ ಒಂದು ಪುಣ್ಯ ಕ್ಷೇತ್ರದಲ್ಲಿನ ಹೆಸರು ಬರೆಯಿರಿ?**

ಉ. ಪುಣ್ಯಕ್ಷೇತ್ರ ಇಲ್ಲ.

**ವಿವರ :** ದೇಶದಲ್ಲಿ ಪುಣ್ಯಕ್ಷೇತ್ರಗಳಿರುವುದಿಲ್ಲ. ಇಲ್ಲಿ ಕೇಳಿರುವುದು ದೇಶದಲ್ಲಿ ಆದ್ದರಿಂದ ಯಾವುದೋ ಒಂದು ಪ್ರದೇಶವನ್ನು ಕೆಲವರು ಪುಣ್ಯಕ್ಷೇತ್ರವೆಂದು ಆ ಸ್ಥಾನವೊಂದರ ಪ್ರತ್ಯೇಕತೆಯನ್ನು ಅನುಸರಿಸಿ ಕರೆಯುತ್ತಿದ್ದಾರೆ. ಅದು ನಿಜವಾ ಎಂದು ಯೊಚಿಸಿದರೆ ಪಾಪ ಪುಣ್ಯಗಳೆನ್ನುವವು ಒಂದು ಜೀವಾತ್ಮಕ್ಕೆ ಹೊರತು ಸ್ಥಳಗಳಿಗೆ ಇರುವುದಿಲ್ಲ. ಪಾಪಾತ್ಮನು ಪುಣ್ಯಾತ್ಮನು ಎನ್ನುವ ಜೀವಾತ್ಮರು ಇದ್ದಾರೆ ಆದರೆ ಪಾಪಕ್ಷೇತ್ರ ಪುಣ್ಯಕ್ಷೇತ್ರಗಳೆನ್ನುವವು ಇರುವುದಿಲ್ಲ.

**841. (6) ಭಗವದ್ಗೀತೆಯಲ್ಲಿ ಎಷ್ಟು ಅಕ್ಷರಗಳು ಇವೆ?**

ಉ. ಒಂದು ಇದೆ.

**ವಿವರ :** ಭಗವದ್ಗೀತೆಯಲ್ಲಿ ತ್ರೈತವಾದ ಮೂರು ಆತ್ಮಗಳನ್ನು ಕುರಿತು ಹೇಳಿದ್ದಾರೆ. ಅದರಲ್ಲಿ ಒಂದು ಜೀವಾತ್ಮ ಕ್ಷರವಾದದ್ದು ಎಂದರೆ ನಾಶವಾಗುವುದು. ಎರಡನೆಯದು ಆತ್ಮ ಅಕ್ಷರವಾದದ್ದು ಎಂದರೆ ನಾಶ ವಿಲ್ಲದ್ದು. ಮೂರನೆಯದು ಪರಮಾತ್ಮ. ಇದು ಯಾವುದು ಅಲ್ಲದ್ದು. ಇದನ್ನನುಸರಿಸಿ ನೋಡುವುದಾದರೆ ಭಗವದ್ಗೀತೆಯಲ್ಲಿ ಆತ್ಮ ಎನ್ನುವ ಒಂದೇ ಅಕ್ಷರವಿದೆಯೆಂದು ಹೇಳಬಹುದು.

**842. (7) ಮೂಗಿನ ನೇರವಾಗಿ ಹೋಗಬೇಕೆಂದರೆ ಅರ್ಥವೇನು?**

ಉ. ಶರೀರದಲ್ಲಿನ ಆತ್ಮನನ್ನು ತಿಳಿಯುವುದು.

**ವಿವರ :** ಮೂಗಿನ ನೇರವಾಗಿ ಹೋಗಬೇಕೆಂದರೆ ಹೊರಗಿನ ಅರ್ಥ ತೆಗೆದುಕೊಳ್ಳಬಾರದು. ಮೂಗು ಹೊರಗೇ ಇರುವುದರಿಂದ ಶರೀರದ ಒಳಗೆ ಅನ್ವಯಿಸಿಕೊಳ್ಳಬೇಕು. ಮೂಗಿನ ಕೆಳಗೆ ಕೊನೆಯನ್ನು ತೆಗೆದುಕೊಳ್ಳದೆ ಮೇಲಿನ ಕೊನೆಯನ್ನು ತೆಗೆದುಕೊಳ್ಳಬೇಕು. ಮೂಗಿನ ಮೇಲೆ ಕೊನೆಯನ್ನು ಭೃಕುಟಿ ಎಂದು ಅಥವಾ ಭ್ರೂಮಧ್ಯ ಎಂದು ಕರೆಯುತ್ತಾರೆ. ಭೃಕುಟಿಗೆ ಸಮಾನವಾಗಿ ತಲೆಯೊಳಗಿನ ಭಾಗದಲ್ಲಿ ಮಧ್ಯೆ ಇರುವ ಎಚ್ಚರದ ಮೇಲೆ ಧ್ಯಾಸವನ್ನಿಡುವುದನ್ನು ಮೂಗಿನ ನೇರವಾಗಿ ನೋಡುವುದೆನ್ನುತ್ತಾರೆ. ಹೊರಗಿನ ಕಣ್ಣುಗಳಿಂದ ನೋಡುವ ದೃಷ್ಠಿ ಅಲ್ಲದೆ ಮನೋ ಧ್ಯಾಸದಲ್ಲಿ ನೋಡುವುದೆಂದು ತಿಳಿಯಬೇಕು. ಈ ವಿಷಯವನ್ನೇ ವೇಮನ ಯೋಗಿ ಉಪ ಜಿಹ್ವೆಯ ಪ್ರಾಕ್ ದಿಕ್ಕಿನಲ್ಲಿ ಭೃಕುಟಿಗೆ ಮಧ್ಯೆದಲ್ಲಿ ಎಚ್ಚರದಿಂದ ನೋಡೆಂದಿದ್ದಾನೆ. ಕಿರುನಾಲಿಗೆಯಿಂದ ಮೇಲಕ್ಕೆ ಭ್ರೂಮಧ್ಯದಿಂದ ಒಳಗೆ ರೇಖೆಗಳನ್ನು ಗೀಚಿದ, ಎರಡು ರೇಖೆಗಳು ಎಲ್ಲಿ ಸೇರುತ್ತವೋ ಅಲ್ಲಿ ಮನೋಧ್ಯಾಸವನ್ನು ನಿಲ್ಲಿಸಿದರೆ, ಅಲ್ಲಿರುವ ಆತ್ಮ ತಿಳಿಯಬಲ್ಲದು. ಆದ್ದರಿಂದ ಪೂರ್ವದ ಹಿರಿಯರು ಶರೀರದಲ್ಲಿನ ದೇವರಾದ ಆತ್ಮನನ್ನು ತಿಳಿಯಬೇಕೆಂದರೆ ಮೂಗಿನ ಕೊನೆ ಭಾಗವನ್ನು ನೋಡಿಕೋ ಎಂದಿದ್ದಾರೆ.

**843. (8) ಶರೀರ ಬಲ ಯಾರ ಅಧೀನದಲ್ಲಿ ಇದೆ?**

ಉ. ಆತ್ಮ ಅಧೀನದಲ್ಲಿ ಇದೆ.

**ವಿವರ :** ಶರೀರಕ್ಕೆ ಬಲ ಅಬಲ ನಿರ್ಣಯಿಸುವುದು ಶರೀರದಲ್ಲಿನ ಎರಡನೆ ಆತ್ಮವೇ. ದೇಹದಲ್ಲಿನ ಏಳುನಾಡೀ ಕೇಂದ್ರಗಳಿಂದ ಆತ್ಮ ತನ್ನ ಶಕ್ತಿಯನ್ನು ಶರೀರವೆಲ್ಲಾ ವ್ಯಾಪಿಸಿ ಬಲವನ್ನು ಕೊಡುತ್ತಿದೆ. ಬಲಕ್ಕೂ ಬಲಹೀನಕ್ಕೂ ಆತ್ಮವೇ ಕಾರಣವಾಗಿದೆ. ಆತ್ಮ ಪ್ರಾರಬ್ಧಕರ್ಮವನ್ನು ಅನುಸರಿಸಿ ಶರೀರಕ್ಕೆ ಬಲವನ್ನು ಕೈಗೂಡಿಸುತ್ತಿದೆ.

**844. (9) ಕರ್ಮಕ್ಕೆ ಅಧೀನದಲ್ಲಿ ಇರುವುದು ಯಾವುದು, ಇಲ್ಲದಿರುವುದು ಯಾವುದು?**

ಉ. ಪ್ರಪಂಚವಿದೆ. ಜ್ಞಾನವಿದೆ.

**ವಿವರ :** ಸರ್ವ ಪ್ರಪಂಚದಲ್ಲಿನ ಸರ್ವ ಜೀವರಾಶಿಗಳು ಕರ್ಮಕ್ಕೆ ಒಳಪಟ್ಟಿದ್ದು ಕರ್ಮವನ್ನು

ಅನುಭವಿಸುತ್ತಿವೆ. ಪ್ರಪಂಚದಲ್ಲಿ ಕರ್ಮದಿಂದ ಬಂಧಿಸಲ್ಪಡದ ಜೀವರಾಶಿಯೇ ಇಲ್ಲ. ಸರ್ವ ಪ್ರಪಂಚ ಕರ್ಮಾಧೀನದಲ್ಲೇ ಇದೆಯೆಂದು ಹೇಳಬಹುದು. ದೈವಜ್ಞಾನ ಮಾತ್ರ ಕರ್ಮಾಧೀನದಲ್ಲಿ ಇಲ್ಲ. ಎಲ್ಲವನ್ನು ಶಾಶಿಸುವ ಕರ್ಮ ಜ್ಞಾನವನ್ನು ಶಾಸಿಸಲಾರದು. ಜ್ಞಾನವೇ ಕರ್ಮವನ್ನು ಶಾಸಿಸಿ ಸ್ಥಂಭಿಸುವ ಹಾಗೆ ಮಾಡಬಲ್ಲದು. ಪ್ರಪಂಚದಲ್ಲಿ ಯಾವುದು ಯಾರು ಕರ್ಮವನ್ನು ನಶಿಸುವ ಹಾಗೆ ಮಾಡಲಾರರು. ಜ್ಞಾನ ಮಾತ್ರ ಕರ್ಮವನ್ನು ಸರ್ವ ನಾಶ ಮಾಡಬಲ್ಲದು. ಈ ವಿಷಯವಾಗಿ ಭಗವದ್ಗೀತೆಯಲ್ಲಿ ***"ಜ್ಞಾನಾಗ್ನಿ ಸರ್ವ ಕರ್ಮಾಣಿ ಭಸ್ಮಸಾತ್"*** ಎಂದಿದ್ದಾರೆ. ಜ್ಞಾನವೆನ್ನುವ ಅಗ್ನಿ ಸರ್ವ ಕರ್ಮಗಳನ್ನು ಸುಟ್ಟು ಬೂದಿ ಮಾಡಬಲ್ಲದೆಂದು ಹೇಳಿದ್ದಾರೆ. ಆದ್ದರಿಂದ ಪ್ರಶ್ನೆಗೆ ಉತ್ತರವಾಗಿ ಕರ್ಮಾಧೀನದಲ್ಲಿ ಸರ್ವ ಪ್ರಪಂಚವಿದೆಯೆಂದು, ಕರ್ಮಾಧೀನದಲ್ಲಿ ಇಲ್ಲದಿರುವುದು ಜ್ಞಾನವೆಂದು ಹೇಳಿದ್ದಾರೆ.

**845. (10) ಪಂಚ ಪ್ರಾಣಗಳು ಯಾರಿಗೆ ಇವೆ?**

ಉ. ಆತ್ಮಕ್ಕೆ ಇವೆ.

**ವಿವರ :** ಶರೀರದಲ್ಲಿನ ಜೀವಾತ್ಮ ಯಾವ ಕೆಲಸವನ್ನು ಮಾಡುತ್ತಿಲ್ಲ. ಮಾಡುತ್ತಿರುವುದೆಲ್ಲಾ ಆತ್ಮನೇ. ಶರೀರ ಬದುಕಿ ಇದೆ ಎಂದರೇ ಆತ್ಮದಿಂದಲೇ ಬದುಕಬೇಕು. ಆತ್ಮ ಶ್ವಾಸವನ್ನು ಆಡಿಸಿದರೆ ಉಚ್ಛ್ವಾಸ ನಿಚ್ಛ್ವಾಸಗಳು ನಡೆಯುತ್ತಿವೆ. ಪ್ರಾಣ ಎಂದರೆ ಗಾಳಿ, ಪಂಚ ಪ್ರಾಣಗಳೆಂದರೆ ಐದು ಗಾಳಿಗಳು. ಉದಾನ, ವ್ಯಾನ, ಸಮಾನ, ಪ್ರಾಣ, ಅಪಾಣ ವಾಯುಗಳನ್ನು ಪಂಚ ಪ್ರಾಣಗಳೆನ್ನುತ್ತಿದ್ದೇವೆ. ನಿವಾಸಿಸುವ ಪ್ರದೇಶ ಮಾಡುವ ಕೆಲಸವನ್ನು ಅನುಸರಿಸಿ ವಾಯುಗಳನ್ನು ಐದು ವಿಧಗಳಾಗಿ, ಐದು ಭಾಗಗಳಾಗಿ ಗುರ್ತಿಸಿದ್ದೇವೆ. ಐದು ವಾಯುಗಳು ಶರೀರವೆಲ್ಲಾ ವ್ಯಾಪಿಸಿ ಇರುವ ಆತ್ಮಕ್ಕೇ ಇವೆ. ಒಂದು ಕಡೆ ಇರುವ ಜೀವಾತ್ಮಕ್ಕೆ ಐದು ವಾಯುಗಳಿಗೆ ಸಂಬಂಧವಿಲ್ಲ. ಆದ್ದರಿಂದ ಪಂಚ ಪ್ರಾಣಗಳೆನ್ನುವ ಐದು ವಾಯುಗಳು ಆತ್ಮಕ್ಕೆ ಇವೆಯೆಂದು ಹೇಳಬಹುದು.

## ಜ್ಞಾನ ಪರೀಕ್ಷೆ

**ಚಿನ್ನಪೊಲಮಡ** **ದಿನಾಂಕ–28–03–2002**

**846. (1) ಶರೀರದಲ್ಲಿ ಮೂಲ ಪುರುಷನು ಯಾರು?**

ಉ. ಪರಮಾತ್ಮ.

**ವಿವರ :** ಪ್ರಪಂಚಕ್ಕೆಲ್ಲಾ ಮೂಲ ಪುರುಷನು ಪರಮಾತ್ಮ. ಶರೀರದ ಹೊರಗೆ ಎಲ್ಲದಕ್ಕೂ ಮೂಲ ಪುರುಷನಾದ ಪರಮಾತ್ಮ ಶರೀರದೊಳಗೂ ಸಹ ಮೂಲವಾಗಿದ್ದಾನೆ. ಶರೀರದೊಳಗೆ ಕರ್ಮ ವಿಧಾನವನ್ನು, ಆತ್ಮ ಚೈತನ್ಯವನ್ನು, ಇಟ್ಟು ಅವುಗಳಿಂದ ಜಾದುಗಾರ ಗೊಂಬೆಗಳನ್ನು ಆಡಿಸಿದಹಾಗೆ ಸರ್ವ ಶರೀರಗಳನ್ನು ಆಡಿಸುತ್ತಿದ್ದಾನೆ. ತಾನು ಸ್ವತಃವಾಗಿ ಏನೂ ಮಾಡದೆ, ತಾನು ನಿರ್ಮಿಸಿದ ವಿಧಾನಗಳಿಂದ ಮಾಡಿಸುತ್ತಾ, ಸಾಕ್ಷಿಯಾಗಿ ಮೂಲ ಪುರುಷನಾಗಿ ತಟಸ್ಥನಾಗಿ ಇದ್ದಾನೆ.

**847. (2) ಶರೀರದ ಹೊರಗೆ ಮೂಲ ಪುರುಷನು ಯಾರು?**

ಉ. ಪರಮಾತ್ಮ.

**ವಿವರ :** ಶರೀರದ ಹೊರಗೂ ಒಳಗೂ ಎಲ್ಲದಕ್ಕೂ ಮೂಲ ಪುರುಷನು ಪರಮಾತ್ಮ ಎಂದು ತಿಳಿದುಕೊಂಡಿದ್ದೇವೆ. ಶರೀರದ ಹೊರಗೆ ಪಂಚ ಭೂತಗಳನ್ನು ಅವುಗಳಿಂದ ಕೆಲಸ ಮಾಡಿಸುತ್ತಾ ತಟಸ್ಥನಾಗಿ ಇದ್ದು ಎಲ್ಲದಕ್ಕೂ ಮೂಲ ಪುರುಷನಾಗಿ ಸಾಕ್ಷಿ ಭೂತನಾಗಿ ಇದ್ದಾನೆ. ಶರೀರದಲ್ಲಿ ಕರ್ಮ, ಆತ್ಮ, ಜೀವಾತ್ಮ ಮುಖ್ಯ ವಿಧಾನಗಳಾದಾಗ ಶರೀರದ ಹೊರಗೆ ಪಂಚಭೂತಗಳೇ ತನ್ನ ವಿಧಾನಗಳಾಗಿ ಇವೆ.

**848. (3) ತಿರುನಾಲ ಎನ್ನುವ ಪದವನ್ನು ಪೂರ್ವದಲ್ಲಿ ಹೇಗೆ ಏನನ್ನುತ್ತಿದ್ದರು?**

ಉ. ತಿರುನಾಮ.

**ವಿವರ :** ಸಂವತ್ಸರಕ್ಕೆ ಒಂದು ಸಲ ತಿರುನಾಮ ಎನ್ನುವ ಹೆಸರೊಂದಿಗೆ ಒಂದು ದೊಡ್ಡ ಉತ್ಸವ ಮಾಡುತ್ತಿದ್ದರು. ಆ ದಿನದ ತಿರುನಾಮ ಎನ್ನುವ ಉತ್ಸವ ಕಾಲಕ್ರಮದಲ್ಲಿ ಈದಿನ ತಿರುನಾಲ ಎನ್ನುವ ಹೆಸರಾಗಿ ಬದಲಾಗಿ ಹೋಗಿದೆ. ತಿರುನಾಮ ಎಂದರೆ ನಾಮಗಳಲ್ಲಿ ಮಧ್ಯದಲ್ಲಿರುವುದು. ವೆಂಕಟೇಶ್ವರ ನಾಮ ಮೂರು ನಾಮಗಳಾಗಿ ಇದೆ ಅಲ್ಲವೆ! ಅದರಲ್ಲಿ ಎರಡು ನಾಮಗಳು ಪಕ್ಕಕ್ಕಿರುವವು ಬೆಳ್ಳಗೆ ಇರುವಾಗ, ಮಧ್ಯೆದಲ್ಲಿರುವುದು ಮಾತ್ರ ಕೆಂಪಾಗಿ ಪಕ್ಕದ ಎರಡು ನಾಮಗಳಗಿಂತಲೂ ಉದ್ದವಾಗಿ ಇರುವುದು. ಎರಡು ಬಿಳಿ ನಾಮಗಳಿಗಿಂತಲೂ ಬಣ್ಣದಲ್ಲಿ ಕೆಂಪಾಗಿ, ಗಾತ್ರದಲ್ಲಿ ಉದ್ದವಾಗಿ, ಮಧ್ಯದಲ್ಲಿರುವ ನಾಮ ಪ್ರತ್ಯೇಕತೆಯನ್ನು ಕಲ್ಪಿಸಿಕೊಂಡಿದೆ. ಈ ನಾಮ ಭೌತಿಕವಾಗಿ ಅಭೌತಿಕವಾಗಿ, ಎರಡು ಅರ್ಥಗಳು ಹೊಂದಿದೆ. ಭೌತಿಕವಾಗಿ ಶರೀರದಲ್ಲಿ ಇರುವ ಮೂರುವರೆ ಲಕ್ಷ

ನಾಡಿಗಳಲ್ಲಿ ಮುಖ್ಯವಾದವುಗಳಲ್ಲಿ ಅತಿ ಮುಖ್ಯವಾದವು ಮೂರು ಮಾತ್ರ ಇವೆ. ಅವುಗಳನ್ನೇ ಇಡಾ ಪಿಂಗಳ ಸುಷುಮ್ನಾ ನಾಡಿಗಳೆಂದು ಅಥವಾ ಸೂರ್ಯ ಚಂದ್ರ ಬ್ರಹ್ಮನಾಡಿಗಳೆಂದು ಕರೆಯುವುದು ನಡೆಯುತ್ತಿದೆ. ಅವುಗಳನ್ನೇ ಮುಖದ ಮೇಲೆ ನಾಮವಾಗಿ ಗುರುತಿಸುವುದು ನಡೆಯುತ್ತಿದೆ. ಇಡಾ ಪಿಂಗಳ ನಾಡಿಗಳನ್ನು ಎರಡು ಬಿಳಿ ನಾಮಗಳಾಗಿ ಗುರುತಿಸಿ ಮಧ್ಯದಲ್ಲಿ ಬ್ರಹ್ಮನಾಡಿಯೆನ್ನುವುದನ್ನು ಕೆಂಪು ಉದ್ದವಾಗಿರುವ ನಾಮವಾಗಿ ಗುರುತಿಸಿದ್ದೇವೆ. ಈ ಉದ್ದವಾದ ಕೆಂಪು ನಾಮ ಶರೀರದಲ್ಲಿ ಎಲ್ಲದಕ್ಕಿಂತ ಮುಖ್ಯವಾದ ಆತ್ಮನಾಗಿ ತಿಳಿಯಬೇಕಾಗಿದೆ. ಪಕ್ಕದಲ್ಲಿರುವ ಸೂರ್ಯ ಚಂದ್ರನಾಡಿಗಳು ಮನಸ್ಸಿಗೆ ಸ್ಥಾನವಾಗಿದ್ದು, ಮಧ್ಯೆ ಇರುವ ಬ್ರಹ್ಮನಾಡಿ ಆತ್ಮಕ್ಕೆ ನಿವಾಸಸ್ಥಳವಾಗಿ ಇದೆ. ಬ್ರಹ್ಮನಾಡಿಯನ್ನು ಆತ್ಮನಾಗಿ ಗುರುತಿಸಿದವರು ಅದನ್ನು ತಿಳಿಯುವುದೇ ಜೀವನದ ಸಾರಾಂಶವೆಂದು ಗುರುತಿಸಿದ್ದಾರೆ. ಶರೀರದಲ್ಲಿರುವ ಆತ್ಮಸ್ಥಾನವಾದ ಬ್ರಹ್ಮನಾಡಿಯನ್ನೇ ತಿರುನಾಮ ಎನ್ನುತ್ತಿದ್ದರು. ಆ ತಿರುನಾಮವನ್ನು ಅಂದರೆ ಆತ್ಮನನ್ನು ತಿಳಿದುಕೊಳ್ಳುವುದಕ್ಕೆ ಸಂವತ್ಸರಕ್ಕೆ ಒಮ್ಮೆ ಪ್ರಜೆಗಳೆಲ್ಲರನ್ನು ದೇವಾಲಯಗಳ ಹತ್ತಿರ ಸೇರಿಸಿ ಆತ್ಮ ಬೋಧನೆ ಮಾಡುತ್ತಿದ್ದರು. ಹಾಗೆ ಪ್ರಜೆಗಳೆಲ್ಲರನ್ನು ಆತ್ಮನಬಗ್ಗೆ ಜಾಗ್ರತೆ ಪಡಿಸುತ್ತಿದ್ದರು. ಆ ವಿಧವಾಗಿ ಮಾಡುವುದನ್ನೇ ಜಾತ್ರೆ ಎಂದು, ಆತ್ಮ ವಿಷಯವನ್ನು ತಿಳಿಸಲು ಜನ ಸೇರುವುದರಿಂದ ಅದನ್ನು ತಿರುನಾಮ ಎನ್ನುತ್ತಿದ್ದರು. ಆ ತಿರುನಾಮ ಇಂದಿಗೂ ಇದ್ದರು ಉದ್ದೇಶ ಪೂರ್ತಿ ಬದಲಾಗಿ ಹೋಗಿದೆ. ತಿರುನಾಮ ಅಥವಾ ತಿರುನಾಲ ಎನ್ನುವುದು ದೇವರ ಬಗ್ಗೆ ಭಕ್ತಿಗೇ ಅಲ್ಲದೇ, ಅನೇಕ ವಿಧಗಳ ಅನೇಕ ಉದ್ದೇಶ್ಯಗಳೊಂದಿಗೆ ಹೋಗುತ್ತಿದ್ದಾರೆ. ಯಾವುದು ಹೇಗಿದ್ದರೂ ಶರೀರಾಂತರ್ಗತ ಆತ್ಮನನ್ನು ತಿಳಿಯುವ ಆಧ್ಯಾತ್ಮಿಕ ರಹಸ್ಯವೇ ತಿರುನಾಮ ಎಂದು ತಿಳಿಯಬೇಕು. ಇದು ಭೌತಿಕ ಪರವಾದ ಅರ್ಥವಾದಾಗ, ಅಭೌತಿಕ ಪರವಾದ ಅರ್ಥ ಮತ್ತೊಂದು ಇದೆ.

ಶರೀರದಲ್ಲಿ ನಿವಾಸಿಸುವ ಆತ್ಮಗಳು ಒಟ್ಟು ಮೂರು ಇವೆ. ಅದರಲ್ಲಿ ಶರೀರವೆಲ್ಲಾ ವ್ಯಾಪಿಸಿ ಇರುವುದು ಆತ್ಮನಾದಾಗ, ಶರೀರದಲ್ಲಿ ಅದೂ ಶಿರಸ್ಸಲ್ಲಿ ರವೆಯಷ್ಟು ಇರುವವನು ಜೀವಾತ್ಮ. ಮೂರನೆಯದಾದ ಪರಮಾತ್ಮ ಶರೀರವೆಲ್ಲಾ ಇದ್ದು, ಶರೀರ ಹೊರಗೂ ಸಹ ಪ್ರತಿ ವಸ್ತುವಿನ ಒಳಗೂ ಹೊರಗೂ ವ್ಯಾಪಿಸಿ ಇದೆ. ಕ್ಷರಾಕ್ಷರರೆಂದು ಹೆಸರು ಹೊಂದಿದ ಜೀವಾತ್ಮ ಆತ್ಮಗಳು ಎರಡು ಯಾವಾಗಲೂ ಜೋಡಿಯಾಗಿ ಇರುತ್ತವೆ. ಜೀವಾತ್ಮ ಆತ್ಮಗಳಿಗಿಂತಲೂ ಅತೀತನು ಪರಮಾತ್ಮ, ಆದ್ದರಿಂದ ಮಧ್ಯ ನಾಮಕ್ಕೆ ಕೆಂಪು ಬಣ್ಣವನ್ನು ಇಟ್ಟಿದ್ದಾರೆ. ಎರಡಕ್ಕಿಂತಲೂ ದೊಡ್ಡದಾದ್ದರಿಂದ ಮಧ್ಯ ನಾಮವನ್ನು ದೊಡ್ಡದಾಗಿ ಇಟ್ಟಿದ್ದಾರೆ. ಜೀವಾತ್ಮನಿಗೂ ಆತ್ಮಕ್ಕೂ ಗಮ್ಯಸ್ಥಾನ ಅದೇ, ಆದ್ದರಿಂದ ಎರಡಕ್ಕೂ ಮಧ್ಯದಲ್ಲಿ ಇಟ್ಟಿದ್ದಾರೆ.

ಜೀವಾತ್ಮ ಆತ್ಮ ಒಂದರೊಂದಿಗೆ ಒಂದು ಸೇರಿ ಹೋದಾಗ ಪರಮಾತ್ಮನಾಗಿ ಬದಲಾಗಬಹುದೆಂದು, ಬಿಳಿ ನಾಮಗಳು ಎರಡೂ ಸೇರುವ ಕಡೆಯಿಂದ ಮಧ್ಯನಾಮವನ್ನು ಇಟ್ಟಿದ್ದಾರೆ. ಈ ವಿಧವಾಗಿ ಸ್ಥೂಲದಲ್ಲಿ ನಾಮವನ್ನು ಸೂರ್ಯ ಚಂದ್ರ ಬ್ರಹ್ಮನಾಡಿಗಳೆಂದು, ಸೂಕ್ಷ್ಮವಾಗಿ ಜೀವಾತ್ಮ ಆತ್ಮ ಪರಮಾತ್ಮ ಎಂದು ಗುರುತಿಸಿ ತೋರಿಸಿದ್ದಾರೆ. ಮುಖ್ಯವಾದ ವಿಷಯವಾದ್ದರಿಂದ ಮುಖದ ಮೇಲೆ ಹಣೆಯ ಭಾಗದಲ್ಲಿ ಇಟ್ಟಿದ್ದಾರೆ. ಮೂರು ನಾಮಗಳಲ್ಲಿ ತಿರುನಾಮ ಎಂದು ಕರೆಯಲಾಗುವುದು ಶರೀರದಲ್ಲಿ ಬ್ರಹ್ಮನಾಡಿಯಲ್ಲಿನ ಆತ್ಮನನ್ನು, ಶರೀರ ಬಿಟ್ಟ ನಂತರ ಪರಮಾತ್ಮನನ್ನು ಸೂಚಿಸುತ್ತಿದೆ.

**849. (4) ಪ್ರತಿ ಮನುಷ್ಯನಿಗೂ ಒಂದು ಹದ್ದು ಆಚಾರ ಇರಬೇಕೆನ್ನುತ್ತಾರೆ. ಹದ್ದು (ಎಲ್ಲೆ) ಆಚಾರ ಯಾವುದು?**

ಉ. ಹದ್ದು ಭಗವದ್ಗೀತೆ, ಆಚಾರ ಯೋಗ.

**ವಿವರ :** ಭಗವಂತನು ಜ್ಞಾನ ಎನ್ನುವ ಕಟ್ಟೆಗೆಯಿಂದ, ಮಾನವನು ದೈವತ್ವದಲ್ಲಿ ಇರುವುದಕ್ಕೆ ಪರಿಮಿತಿ ನಿರ್ಣಯಿಸುತ್ತಾ, ಮಾತುಗಳ ರೂಪವಾಗಿ ಗೀಚಿದ ಗೀತೆಯೇ ಭಗವದ್ಗೀತೆ. ಯಾವ ಮನುಷ್ಯನಾದರೂ ಒಂದು ಹದ್ದಲ್ಲಿ ಇರಬೇಕೆನ್ನುವ ಹಿರಿಯರ ವಾಕ್ಯಗಳಲ್ಲಿ ಅಂತರಾರ್ಥ ಜ್ಞಾನವನ್ನು ಹೊಂದಿ ದೈವತ್ವದೊಳಗೇ ಇರಬೇಕೆಂದು, ಇಲ್ಲಿಯವರೆಗು ನೀನು ನಡೆಯಬೇಕೆಂದು ಇದರನಂತರ ನಡೆದರೆ ಮಾಯೆಯೊಳಗೆ ಹೋಗುವೆ ಎಂದು ತಿಳಿಸಿದ ಹದ್ದೇ ಭಗವದ್ಗೀತೆ. ಅದರ ಪ್ರಕಾರ ಇರುವುದೇ ಹದ್ದಿನಲ್ಲಿ ಇದ್ದಹಾಗೆ. ಹದ್ದಿನಲ್ಲಿರುವವನಿಗೆ ಆ ಹದ್ದಲ್ಲಿ ಇರುವ ಪ್ರಕಾರ ನಡೆಯುವುದೇ ಆಚಾರವಾಗುತ್ತದೆ. ಕೆಲವು ನಿಯಮಗಳನ್ನು ತಿಳಿಸುವುದೇ ಹದ್ದು. ಹದ್ದಿನಲ್ಲಿದ್ದು ಆ ನಿಯಮಗಳ ಪ್ರಕಾರ ಆಚರಿಸಬೇಕಾಗಿದೆ. ಜ್ಞಾನವೆನ್ನುವ ಹದ್ದಿನಲ್ಲಿ ಯೋಗವೆನ್ನುವ ಎರಡು ನಿಯಮಗಳು ಇವೆ. ಅವುಗಳನ್ನು ಆಚರಿಸಿದರೆ ಯೋಗವಾಗುತ್ತದೆ. ಜ್ಞಾನದ ಹದ್ದಲ್ಲಿ ಇರುವ ಪದ್ಧತಿ ಪ್ರಕಾರ ಮನಸ್ಸನ್ನು ನಿಯಂತ್ರಿಸಿದರೆ ಬ್ರಹ್ಮಯೋಗ, ಅಹಂಕಾರವನ್ನು ನಿಯಂತ್ರಿಸಿದರೆ ಕರ್ಮಯೋಗವಾಗುತ್ತದೆ. ಇದನ್ನನುಸರಿಸಿ ಪ್ರತಿ ಮನುಷ್ಯನಿಗೂ ಜ್ಞಾನವೆನ್ನುವ ಹದ್ದು ಯೋಗವೆನ್ನುವ ಆಚಾರವಿರಬೇಕು.

**850. (5) ಮನೋ, ಬುದ್ಧಿ, ಚಿತ್ತಗಳಲ್ಲಿ ಬುದ್ಧಿ ಗುಣಾನುಸಾರಿಣಿ, ಚಿತ್ತ ಕರ್ಮಾನುಸಾರಿಣಿ ಆದರೆ ಮನಸ್ಸು ಯಾವುದರ ಆಚಾರಿಣಿಯಾಗುತ್ತದೆ?**

ಉ. ಚಿತ್ತಾನುಸಾರಿಣಿ ಆಗುವುದು.

**ವಿವರ :** ಬುದ್ಧಿ ಗುಣಾನುಸಾರ ಯೋಚಿಸಿದಾಗ ಬುದ್ಧಿ ಯೊಚಿಸಿದ ವಿಷಯಗಳನ್ನು ಚಿತ್ತ ಕರ್ಮಾನುಸಾರ ನಿರ್ಣಯಿಸುತ್ತದೆ. ಬುದ್ಧಿ ಗುಣಗಳ ಪ್ರಕಾರ ಎಷ್ಟು ದೊಡ್ಡದಾಗಿ ಯೊಚಿಸಿದರೂ, ಕೊನೆಗೆ ನಡೆಯಬೇಕಾಗಿರುವ ಕರ್ಮದ ಪ್ರಕಾರವೇ ಚಿತ್ತ ನಿರ್ಣಯ ತೆಗೆದುಕೊಂಡು, ತಾನು ತೆಗೆದುಕೊಂಡ ನಿರ್ಣಯದ ಪ್ರಕಾರ ಕೆಲಸಕ್ಕೆ ಆದೇಶಿಸುತ್ತದೆ. ಚಿತ್ತ ತನ್ನ ಆದೇಶವನ್ನು ಮನಸ್ಸಿಗೆ ತಿಳಿಸುವುದು. ಮನಸ್ಸು ಚಿತ್ತವೊಂದರ ನಿರ್ಣಯವನ್ನು ತೆಗೆದುಕೊಂಡು ಹೋಗಿ ಅವಯವಗಳಿಗೆ ಆದೇಶ ಕೊಟ್ಟು ನಡೆಸುತ್ತದೆ. ಇದನ್ನನುಸರಿಸಿ ಮನಸ್ಸು ಚಿತ್ತಾನುಸಾರವೆಂದು ತಿಳಿಯುತ್ತಿದೆ. ಕಾರ್ಯಗಳು ನಡೆಸುವ ಬಾಹ್ಯೇಂದ್ರಿಯಗಳು ಹತ್ತೂ ಮನಸ್ಸು ತಂದಿರುವ ಆದೇಶಾನುಸಾರ ಕೆಲಸ ಮಾಡುತ್ತಿವೆ. ಆದ್ದರಿಂದ ಮನಸ್ಸಾನುಸಾರಿಣಿ ಇಂದ್ರಿಯಗಳೆಂದು ಹೇಳಬಹುದು.

**851. (6) ಎಲ್ಲ ವೇಳೆಯಲ್ಲೂ ಇಂದ್ರಿಯಗಳು ಮನಸ್ಸಿನೊಂದಿಗೆ ಅನುಬಂಧವಾಗಿ ಇರುತ್ತವಾ ಇರುವುದಿಲ್ಲವಾ?**

ಉ. ಇರುವುದಿಲ್ಲ.

**ವಿವರ :** ಮನುಷ್ಯನಿಗಿರುವ ನಿದ್ರೆ, ಸ್ವಪ್ನ, ಎಚ್ಚರ ಎನ್ನುವ ಮೂರು ಅವಸ್ಥೆಗಳಲ್ಲಿ ಎಚ್ಚರದಲ್ಲಿ ಮಾತ್ರ ಮನಸ್ಸಿಗೆ ಇಂದ್ರಿಯಗಳು ಅನುಬಂಧವಾಗಿ ಇದ್ದು, ಮನಸ್ಸು ಹೇಳಿದ ಹಾಗೆ ಇಂದ್ರಿಯಗಳು ನಡೆಯುತ್ತಿರುತ್ತವೆ. ನಿದ್ರೆ ಸ್ವಪ್ನಗಳಲ್ಲಿ ಮನಸ್ಸಿಗೂ ಇಂದ್ರಿಯಗಳಿಗೂ ಸಂಬಂಧ ಇರುವುದಿಲ್ಲ. ಆ ಸಮಯದಲ್ಲಿ ಮನಸ್ಸು ಬ್ರಹ್ಮನಾಡಿ ಸೇರಿರುತ್ತದೆ. ಆಗ ಮನಸ್ಸು ಚಿತ್ತಾನುಸಾರಿಣಿ ಅಲ್ಲ. ಹಾಗೆ ಇಂದ್ರಿಯಗಳು ಮನಸ್ಸಾನುಸಾರಿಣಿ ಅಲ್ಲ.

**852. (7) ಚಿತ್ರ ವಿಚಿತ್ರಗಳೆನ್ನುವಹಾಗೆ ಚಿತ್ರ ಪುರುಷನು ವಿಚಿತ್ರ ಪುರುಷನು ಇದ್ದಾರೆ. ಚಿತ್ರ ಪುರುಷನ್ಯಾರು? ವಿಚಿತ್ರ ಪುರುಷನ್ಯಾರು?**

ಉ. ಚಿತ್ರ ಪುರುಷನು ಜೀವಾತ್ಮ, ವಿಚಿತ್ರ ಪುರುಷನು ಆತ್ಮ.

**ವಿವರ :** ಚಿತ್ರ ಎಂದರೆ ಕಾಣಿಸುವುದೆಂದು ಅರ್ಥ. ಜೀವಾತ್ಮ ಶರೀರದಲ್ಲಿ ಒಂದು ಆಕಾರವನ್ನು ಹೊಂದಿ ಜ್ಞಾನ ನೇತ್ರಕ್ಕೆ ದೃಶ್ಯರೂಪವಾಗಿ ಇದ್ದಾನೆ. ದೃಶ್ಯವಾಗಿ ಕಾಣಿಸುವುದನ್ನು ಚಿತ್ರ ಎಂದಿದ್ದಾರೆ ಅಲ್ಲವೆ! ಶರೀರದಲ್ಲಿನ ಜೀವಾತ್ಮ ಆಕೃತಿಯ ಹಾಗೆ ಎಲ್ಲಾ ಶರೀರಗಳಲ್ಲಿಯೂ ಜೀವಾತ್ಮಗಳೆಲ್ಲವೂ ಒಂದೇ ಆಕೃತಿ ಹೊಂದಿ ಇರುವುದರಿಂದ ಸರ್ವ ಸಾಧಾರಣವಾಗಿ ಜೀವಾತ್ಮನನ್ನು ಚಿತ್ರ ಎಂದಿದ್ದೇವೆ. ಶರೀರದಲ್ಲಿನ ದೇವರೆಂದು ಹೆಸರು

ಹೊಂದಿದ ಮತ್ತು ಚೈತನ್ಯ ಮೂರ್ತಿಯಾದ ಆತ್ಮಕ್ಕು ಸಹ ಆಕಾರವಿದೆ. ಆಕಾರವನ್ನು ಚಿತ್ರವೆಂದಿದ್ದೇವೆ ಅಲ್ಲವೆ! ಇಲ್ಲಿ ಆತ್ಮ ಮಾತ್ರ ಚಿತ್ರವಾಗಿ ಅಲ್ಲದೆ ವಿಚಿತ್ರವಾಗಿ ಇದೆ. ಏಕೆಂದರೆ! ಆತ್ಮ ಶರೀರ ಆಕೃತಿಯನ್ನು ಹೋಲಿ(ಹೊಂದಿ) ಇದೆಯೆಂದು ಮೊದಲೇ ತಿಳಿದುಕೊಂಡಿದ್ದೇವೆ. ಯಾವ ಶರೀರದಲ್ಲಿನ ಆತ್ಮ ಆ ಶರೀರವೊಂದರ ಆಕೃತಿಯನ್ನು ಹೋಲಿ(ಹೊಂದಿ) ಇರುತ್ತದೆ. ಶರೀರಗಳೆಲ್ಲವೂ ಒಂದೇ ಆಕೃತಿ ಅಥವಾ ಅನೇಕ ವಿಧಗಳಾಗಿ ವಿಚಿತ್ರ ಹೋಲಿಕೆಗಳನ್ನು ಆಕಾರಗಳನ್ನು ಹೊಂದಿದೆ. ಒಂದೇ ಆಕಾರವನ್ನು ಹೊಂದಿದ ಚಿತ್ರವೆಂದು, ಅನೇಕ ಆಕಾರಗಳು ಹೊಂದಿದ ವಿಚಿತ್ರವೆಂದು ಕರೆಯುವುದು ಸಹಜ. ವಿಚಿತ್ರಗಳಾದ ಶರೀರಗಳಲ್ಲಿ ಇರುವ ಆತ್ಮ ಅದೇ ಶರೀರಗಳ ಆಕೃತಿಯನ್ನು ಹೊಂದಿ, ತಾನು ಸಹ ಶರೀರಗಳ ಹಾಗೆ ವಿಚಿತ್ರ ಆಕಾರವನ್ನು ಹೊಂದಿದೆ. ಒಂದೇ ಆಕೃತಿಯನ್ನು ಹೊಂದಿರುವ ಜೀವಾತ್ಮ ಚಿತ್ರವಾದಾಗ, ಅನೇಕ ವಿಧಗಳ ಆಕಾರಗಳು ಹೊಂದಿದ ಆತ್ಮ ವಿಚಿತ್ರವಾಗಿ ಇದೆ.

**853. (8) ಹಾವಿನ ವಿಷದಲ್ಲಿ, ಎಲೆಯ ರಸದಲ್ಲಿ ಇರುವ ಶಕ್ತಿ ಆತ್ಮ ಶಕ್ತಿಯಾ, ಪರಮಾತ್ಮ ಶಕ್ತಿಯಾ?**

ಉ. ಪರಮಾತ್ಮ ಶಕ್ತಿ.

**ವಿವರ :** ಹಾವಿನ ವಿಷ ಮನುಷ್ಯನನ್ನು ಸಾಯಿಸುವ ಸಾಮರ್ಥ್ಯವನ್ನು ಹೊಂದಿರುವಾಗ, ಎಲೆ ರಸ ವಿಷವಿರುವ ಮನುಷ್ಯನಿಗೆ ಔಷದವಾಗಿ ಬದುಕಿಸುವ ಸಾಮರ್ಥ್ಯವನ್ನು ಹೊಂದಿದೆ. ಹಾವಿನ ಶರೀರದಲ್ಲಿರುವ ವಿಷದಲ್ಲಿ ಆತ್ಮ ಶಕ್ತಿ ಕೆಲಸ ಮಾಡುತ್ತಿದೆ. ಆತ್ಮಕ್ಕೆ ಶರೀರದ ವರೆಗು ಪರಿಮಿತಿ ಎಂದು ಹೇಳಿಕೊಂಡಿದ್ದೇವೆ ಅಲ್ಲವೆ! ಹಾಗೇ ಹಾವು ಕಚ್ಚಿದಾಗ ವಿಷ ಹಾವಿನ ಶರೀರದಿಂದ ಹೊರಗೆ ಬಂದು ಬೇರೆ ಶರೀರದಲ್ಲಿ ಪ್ರತ್ಯೇಕ ಪದಾರ್ಥವಾಗಿ ಪ್ರವೇಶಿಸಿದೆ. ಈಗದು ಯಾವ ಶರೀರದಲ್ಲಿನ ಆತ್ಮಕ್ಕೆ ಸಂಬಂಧವಿಲ್ಲ. ಆದ್ದರಿಂದ ಆ ವಿಷದಲ್ಲಿ ಪರಮಾತ್ಮ ಶಕ್ತಿ ಇದೆ. ಆತ್ಮಶಕ್ತಿ ಯಾವ ಮಾತ್ರವೂ ಇಲ್ಲ. ಪರಮಾತ್ಮ ಶಕ್ತಿಯೇ ವಿಷದಲ್ಲಿನ ಪ್ರಭಾವವಾಗಿ ಮನುಷ್ಯನನ್ನು ಸಾಯಿಸುವ ಸಾಮರ್ಥ್ಯದೊಂದಿಗೆ ಇದೆ. ಎಲೆ ಗಿಡಕ್ಕಿರುವವರೆಗು ಆತ್ಮಶಕ್ತಿ ಅದರಲ್ಲಿ ಕೆಲಸ ಮಾಡುತ್ತಿರುತ್ತದೆ. ಗಿಡದಿಂದ ಬೇರೆಯಾಗಿ ಬಂದಿರುವ ಎಲೆಯಲ್ಲಾಗಲಿ, ಎಲೆಯ ರಸದಲ್ಲಾಗಲಿ ಪರಮಾತ್ಮ ಶಕ್ತಿಯೇ ಕೆಲಸ ಮಾಡುತ್ತಿದೆ. ಎಲೆ ರಸದಲ್ಲಿನ ಔಷಧ ಗುಣ ಪರಮಾತ್ಮ ಶಕ್ತಿಯಿಂದಲೇ ಇದೆಯೆಂದು ತಿಳಿಯಬೇಕು. ಸಾಯಿಸುವ ವಿಷದಲ್ಲಾಗಲಿ, ಬದುಕಿಸುವ ರಸದಲ್ಲಾಗಲಿ ಇರುವ ಶಕ್ತಿ

ಒಂದೇ. ವಿಷದಲ್ಲೂ ರಸದಲ್ಲೂ ಪ್ರಪಂಚಕ್ಕೆ ಮೂಲವಾದ ಶಕ್ತಿ ಇದೆ, ಆದ್ದರಿಂದ ಅವನ್ನು ಮೂಲಿಕೆಗಳು ಎನ್ನುತ್ತೇವೆ.

**854. (9) ಬಟ್ಟ ಬಯಲು ಎನ್ನುತ್ತಾರೆ ಬಟ್ಟ ಯಾವುದು, ಬಯಲು ಯಾವುದು?**

ಉ. ಶರೀರ ಬಟ್ಟ, ಪರಮಾತ್ಮ ಬಯಲು.

**ವಿವರ :** ಚಿದಂಬರ ರಹಸ್ಯ ಬಟ್ಟ ಬಯಲೆನ್ನುವ ಮಾತು ಕೇಳಿರುತ್ತೇವೆ. ಅದರ ವಿವರವೇನೆಂದರೆ ಕಲಿಯುಗದಲ್ಲಿ ತಯಾರಾದ ಅನೇಕ ದೇವಾಲಯಗಳಲ್ಲಿ ಶ್ರೀರಂಗಪಟ್ಟಣದಲ್ಲಿನ ಶ್ರೀರಂಗನ ಆಲಯದಲ್ಲಿ ಚಿದಂಬರ ರಹಸ್ಯವೆನ್ನುವುದು ಇದೆಯಂತೆ. ಅಲ್ಲಿಗೆ ಹೋದವರು ಶ್ರೀರಂಗನ ದೇವಾಲಯವನ್ನು ದರ್ಶಿಸಿದ ನಂತರ ಚಿದಂಬರ ರಹಸ್ಯವನ್ನು ನೋಡುವುದು ಪರಿಪಾಟ. ಆದರೆ ಇದು ರಹಸ್ಯವೆಂದು, ಅದು ಯಾರಿಗೂ ಹೇಳಬಾರದೆಂದು, ಅಲ್ಲಿನ ಹಿರಿಯರು ಹೇಳಿ ಉಳಿದವರಿಗೆ ತೋರಿಸುವುದು ನಡೆಯುತ್ತಿದೆ. ರಹಸ್ಯವೆನ್ನುವುದು ಹೇಳಬಾರದ್ದು, ಹೇಳಬಾರದ್ದಾದರೂ ಹೇಳಬಾರದೆಂದೇ ತೋರಿಸುವುದರಲ್ಲಿ ಏನು ರಹಸ್ಯವಿದೆಯೊ ಅಲ್ಲಿ ಯಾರಿಗೂ ತಿಳಿಯದ ಯಾವುದೋ ಒಂದು ವಿಷಯವಿದ್ದೇ ಇರಬೇಕು, ಆದ್ದರಿಂದಲೇ ಅದನ್ನು ರಹಸ್ಯವೆನ್ನುತ್ತಿದ್ದೇವೆ. ಚಿದಂಬರ ರಹಸ್ಯವನ್ನು ಹೇಳಿದರೂ ತಿಳಿಯದೆ ಇರುವುದು, ನೋಡಿದರೂ ಅರ್ಥವಾಗದ ವಿಷಯ, ಆದ್ದರಿಂದ ಅದನ್ನು ಚಿದಂಬರ ರಹಸ್ಯವೆಂದಿದ್ದಾರೆ. ಬಹಳ ಜನಕ್ಕೆ ಚಿದಂಬರವೆನ್ನುವ ಹೆಸರಿನ ವಿವರ ತಿಳಿದಿಲ್ಲ. ಚಿದ ಎಂದರೆ ವಸ್ತ್ರ, ಅಂಬರ ಎಂದರೆ ಆಕಾಶ. ಈ ವಿಧವಾಗಿ ಚಿದಂಬರ ಎಂಬ ಪದದಲ್ಲಿ ವಸ್ತ್ರ ಆಕಾಶ ಅಥವಾ ಬಟ್ಟ ಬಯಲು ಎನ್ನುವ ಅರ್ಥವಿದೆ. ಚಿದಂಬರ ರಹಸ್ಯ ಬಟ್ಟ ಬಯಲು ಎನ್ನುವ ವಾಕ್ಯವು ಸಹ ಇದೆ. ಶ್ರೀರಂಗ ಪಟ್ಟಣದಲ್ಲಿನ ಚಿದಂಬರವೇನೋ ಸ್ವಲ್ಪ ತಿಳಿದುಕೊಳ್ಳೋಣ.

ಭಗವದ್ಗೀತೆ ಸಾಂಖ್ಯ ಯೋಗವೆನ್ನುವ ಅಧ್ಯಾಯದಲ್ಲಿ 22ನೇ ಶ್ಲೋಕದಲ್ಲಿ ಭಗವಂತನು **"ವಾಸಾಂಸಿ"** ಎನ್ನುವ ಪದವನ್ನು ಉಪಯೋಗಿಸಿ ಶ್ಲೋಕವನ್ನು ಹೇಳಿದ್ದಾನೆ. **"ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಪರಾಣಿ ತಥಾ ಶರೀರಾಣಿ ವಿಹಾಯ ಜೀರ್ಣಾ ನನ್ಯಾನಿ ಸಂಯಾತಿ ನವಾನಿ ದೇಹಿ"** ಇದರಲ್ಲಿ ಹಳೆ ವಸ್ತ್ರವನ್ನು ಬಿಟ್ಟು ಹೊಸ ವಸ್ತ್ರವನ್ನು ಧರಿಸಿದ ಹಾಗೆ ಹಳೆ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಜೀವಾತ್ಮನು ಧರಿಸುತ್ತಿದ್ದಾನೆಂದು ಹೇಳಿದ್ದಾನೆ. ಇಲ್ಲಿ ಶರೀರವನ್ನು ಬಟ್ಟೆಯೊಂದಿಗೆ ಹೋಲಿಸಿ ಹೇಳಿದ್ದಾನೆ. ವಸ್ತ್ರ ಎಂದರೂ, ಬಟ್ಟೆ ಎಂದರೂ, ಚೇಲ ಎಂದರೂ ಒಂದೇ ಅರ್ಥ.

ಹಾಗೇ ಅಂಬರ ಎಂದರೂ, ಆಕಾಶವೆಂದರೂ, ಬಯಲು ಎಂದರೂ ಒಂದೇ ಅರ್ಥ. ಶ್ರೀರಂಗ ದೇವಾಲಯದಲ್ಲಿ ಇರುವ ಚಿದಂಬರ ರಹಸ್ಯವೆನ್ನುವುದು ಏನೆಂದು ಪರಿಕ್ಷಿಸಿ ನೋಡಿದರೆ, ಅಲ್ಲಿ ಒಂದು ದ್ವಾರಕ್ಕೆ ಅಡ್ಡವಾಗಿ ವಸ್ತ್ರವನ್ನು ಇಳಿಬಿಟ್ಟಿರುತ್ತಾರೆ. ದ್ವಾರದೊಳಗೆ ಏನಿರುವುದು ಕಾಣಿಸದ ಹಾಗೆ ಆ ವಸ್ತ್ರ ಕಟ್ಟಿರುತ್ತಾರೆ. ಒಳಗೆ ಏನಿರುವುದು ತಿಳಿದಿಲ್ಲ, ಆದ್ದರಿಂದ ಅದೇ ರಹಸ್ಯ. ಒಳಗೆ ಏನಿರುವುದೊ ನೋಡಬೇಕೆಂದುಕೊಳ್ಳುವವರು ಅಲ್ಲಿರುವವರನ್ನು ಕೇಳಿ ಅನುಮತಿ ತೆಗೆದುಕೊಳ್ಳಬೇಕಾಗಿರುತ್ತದೆ. ನೋಡಬೇಕೆನ್ನುವವರಿಗೆ ತೋರಿಸುವವರಿರುತ್ತಾರೆ. ಅವರು ನೋಡುವವರಿಗೆ ಇಲ್ಲಿ ನೋಡಿರುವುದು ರಹಸ್ಯ, ಆದ್ದರಿಂದ ಯಾರಿಗೂ ಹೇಳಬಾರದೆಂದು ಹೇಳಿ ತೋರಿಸುತ್ತಿರುವರು.

ಎಷ್ಟೋ ಜನ ಚಿದಂಬರ ರಹಸ್ಯವನ್ನು ನೋಡಿದರೂ ನೋಡುವುದಕ್ಕಿಂತ ಮೊದಲು ಇರುವ ಆತುರತೆ ನೋಡಿದ ನಂತರ ಇರುವುದಿಲ್ಲ. ಏಕೆಂದರೆ ನೋಡಬೇಕೆಂದು ಕೊಳ್ಳುವವರು ನೋಡುವುದಕ್ಕೆ ಮೊದಲು ರಹಸ್ಯವನ್ನು ಅಂದರೆ ನೋಡತಕ್ಕದನ್ನು ಕುರಿತು ಏನೋ ಊಹಿಸಿಕೊಂಡಿರುತ್ತಾರೆ. ಯಾರೇನು ಊಹಿಸಿಕೊಂಡರು ಬಟ್ಟೆಯನ್ನು ತೊಲಗಿಸುತ್ತಲೇ ಯಾರಿಗೂ ಏನೂ ಕಾಣಿಸದೆ ಹೋಗುವುದೇ ಆಶ್ಚರ್ಯ. ಅಲ್ಲಿ ಒಂದು ದ್ವಾರ ಅದಕ್ಕೆ ಅಡ್ಡವಾಗಿ ಒಂದು ಬಟ್ಟೆ ಇರುತ್ತದೆಂದುಕೊಂಡಿದ್ದೇವೆ ಅಲ್ಲವೆ! ನೋಡಬೇಕಾಗಿರುವವರಿಗೆ ದ್ವಾರದ ಮುಂದೆ ನಿಲ್ಲಿಸಿ ಬಟ್ಟೆ ತೆಗೆದು ತೋರಿಸುವರು. ಬಟ್ಟೆ ತೆಗೆದು ನೋಡಿದ ಕೂಡಲೇ ಅಲ್ಲಿ ಯಾವ ವಸ್ತುವಾಗಲಿ, ಆಕಾರವಾಗಲಿ ಇಲ್ಲದೇ ಹೋಗುವುದು ಆಶ್ಚರ್ಯವೇ ಆಗುತ್ತದೆ. ಮೇಲಿನ ಹೊದಿಕೆ ಇಲ್ಲದ ಆಕಾಶ ಮಾತ್ರ ಕಾಣಿಸುತ್ತದೆ. ಬಟ್ಟೆ ತೆಗೆದು ಅಲ್ಲಿ ಏನೂ ಇಲ್ಲವೆ ಎಂದು ತೋರಿಸುವವರನ್ನು ಕೇಳಿದಾಗ ಆಕಾಶದ ಕಡೆ ತೋರಿಸಿ ಇಲ್ಲಿ ನೀವು ನೋಡಬೇಕಾಗಿರುವುದು ಕಾಣಿಸುವುದು ಇದೇಯೆಂದು ಹೇಳುವರು. ಏನೂ ಇಲ್ಲದಿರುವುದೇ ಚಿದಂಬರ ರಹಸ್ಯ. ಇಲ್ಲಿ ಏನೂ ಇಲ್ಲವೆಂದು ಹೇಳಿದರೆ ಯಾರೂ ಬರುವುದಿಲ್ಲ ಆದ್ದರಿಂದ ನೀವು ಇದನ್ನು ರಹಸ್ಯವಾಗಿ ಯಾರಿಗೂ ಹೇಳಬಾರದೆಂದು ಸಹ ಹೇಳುವರು. ಹೇಳಿದರೆ ಏನಾಗುತ್ತದೋ ಏನು ಕೆಡಕು ನಡೆಯುತ್ತದೋ ಎಂದು ನೋಡಿ ಬಂದಿರುವವರು ಸಹ ಹೇಳದೇ ಇರುವುದು ನಡೆಯುತ್ತಿದೆ. ಆಚಾರವಿದ್ದರೂ ಅರ್ಥವಿಲ್ಲದೇ ಹೋಗಿದೆ. ಆಧ್ಯಾತ್ಮಿಕ ಪರವಾದ ಪರಮಾರ್ಥಿಕವಾದ ಅರ್ಥ ಹೇಳಿಕೊಳ್ಳದೆ ಇಲ್ಲಿ ನೋಡಿರುವುದು ಯಾರಿಗೂ ಹೇಳಬಾರದೆನ್ನುವುದು ತಪ್ಪು. ಯಾರು ಯಾರಿಗೆ ಹೇಳಿದರೂ ಚಿದಂಬರ ಎನ್ನುವುದು ರಹಸ್ಯವೆನ್ನುವ ಅರ್ಥದೊಂದಿಗೆ ಇರುತ್ತದೆ. ಇಂತಹ ರಹಸ್ಯವಿದೆಯೆಂದು ತೋರಿಸುವ ವಿಧಾನವೇ ಚಿದ ಅಂಬರ.

ಜೀವಾತ್ಮನು ಶರೀರದಲ್ಲಿ ಇರುವವರೆಗು ಮೋಕ್ಷ ಹೊಂದಲಾರನು. ಕರ್ಮ ಇಲ್ಲದೇ ಮಾಡಿಕೊಂಡು ಶರೀರವನ್ನು ಹೊಂದದೆ ಹೋದಾಗ ಪರಮಾತ್ಮನೊಳಗೆ ಐಕ್ಯವಾಗಿಹೋಗುವನು. ಇತ್ತ ಶರೀರ ಅತ್ತ ಮೋಕ್ಷ ಎರಡೇ ಗಮ್ಯಗಳು ಜೀವಾತ್ಮನಿಗೆ ಇವೆ ಎನ್ನುವುದು ಸತ್ಯ. ಶರೀರವಿರುವವರೆಗು ದೇವರು ತಿಳಿಯುವುದಿಲ್ಲ. ನಿನಗೆ ಸಾವು ಹುಟ್ಟುಗಳೆನ್ನುವ ಶರೀರ ದೇವರಿಗೂ ನಿನಗೂ ಮಧ್ಯದಲ್ಲಿ ಅಡ್ಡವಾಗಿ ಇದೆ. ಹುಟ್ಟುವಿಕೆ ಯಿಂದ ಪ್ರಾರಂಭವಾಗಿ ಸಾವಿನಲ್ಲಿ ಅಂತ್ಯವಾಗಿ ತಿರುಗಿ ತಕ್ಷಣವೆ ಹುಟ್ಟುವಿಕೆ ಯೊಂದಿಗೆ ಶರೀರ ಜೀವಾತ್ಮನಿಗೆ ತಗುಲಿಕೊಳ್ಳುತ್ತಿದೆ. ಶರೀರ ಬಟ್ಟೆಯಂತದ್ದು, ಹಳೆ ಬಟ್ಟೆ ಹೋದ ಕೂಡಲೇ ಹೊಸ ಬಟ್ಟೆ ತಗುಲಿಕೊಳ್ಳುತ್ತಿದೆಯೆಂದು, ಗೀತೆಯಲ್ಲಿ ದೇವರು ಹೇಳಿದ್ದಾನೆ. ಆದ್ದರಿಂದ ಆ ಬಟ್ಟೆ ಇಲ್ಲದೇ ಹೋದರೆ ನೀನು ದೇವರ ಹತ್ತಿರಕ್ಕೆ ಸೇರಬಹುದೆಂದು ಶರೀರವನ್ನು ಬಟ್ಟೆಯಾಗಿ, ಪರಮಾತ್ಮನನ್ನು ಬಯಲಾಗಿ ತೋರಿಸಿದ್ದಾರೆ. ಶರೀರ ಬಟ್ಟೆ ಎಂದು, ಪರಮಾತ್ಮನನ್ನು ಬಯಲು ಎಂದು, ಶರೀರವನ್ನು ಪರಮಾತ್ಮನನ್ನು ಬಟ್ಟೆ ಬಯಲಾಗಿ ಹೋಲಿಸಿದ್ದಾರೆ.

**855. (10) ಅಚಲವನ್ನು ಪೂರ್ವದಲ್ಲಿ ಏನನ್ನುತ್ತಿದ್ದರು?**

ಉ. ಅಚೇಲ ಎನ್ನುತ್ತಿದ್ದರು.

**ವಿವರ :** ಚೇಲ ಎಂದರೆ ಶರೀರ ಎಂದುಕೊಂಡಿದ್ದೇವೆ ಅಲ್ಲವೆ! ಸಾವಿನೊಂದಿಗೆ ಹೋಗುವ ಶರೀರ ಆ ಕ್ಷಣವೇ ಹುಟ್ಟುವಿಕೆಯೊಂದಿಗೆ ಜೀವಾತ್ಮನಿಗೆ ತಗುಲಿಕೊಳ್ಳುತ್ತಿದೆ. ಆದ್ದರಿಂದ ಯಾವಾಗಲೂ ಬಯಲಾಗಿ ಹೋಲಿಸಲಾಗಿರುವ ಪರಮಾತ್ಮನಿಗೆ, ಚೇಲವಾಗಿ ಹೋಲಿಸಲಾಗಿರುವ ಶರೀರ ಅಡ್ಡವಾಗಿದೆಯೆಂದು ತಿಳಿಸುವುದಕ್ಕೇ ಶ್ರೀರಂಗಪಟ್ಟಣದಲ್ಲಿನ ಚಿದಂಬರವನ್ನು ತಿಳಿಯಬೇಕು. ಬಟ್ಟೆ ಅಡ್ಡವಿರುವಾಗ ಆಕಡೆ ಇರುವ ಬಯಲು ಎಂದಿಗೂ ಕಾಣಿಸುವುದಿಲ್ಲವೆಂದು ತಿಳಿಸುತ್ತಾ, ನಿಮಗೆ ಶರೀರ ಚೇಲ ಅಡ್ಡವಾಗಿರುವುದರಿಂದ ಬಯಲೆನ್ನುವ ಪರಮಾತ್ಮ ತಿಳಿಯುವುದಿಲ್ಲವೆಂದು ತಿಳಿಸುವ ಸಲುವಾಗಿ ರಹಸ್ಯವೆನ್ನುವುದರಲ್ಲಿ ಅರ್ಥವಿದೆ.

ಬಟ್ಟೆ ತೆಗೆದರೆ ಬಯಲು, ಬಟ್ಟೆ ತೆಗೆಯದೇ ಹೋದರೆ ಬಯಲು ಇಲ್ಲ. ಹಾಗೇ ಶರೀರ ಹೋದರೇನೆ ಮೋಕ್ಷವೆಂದು ತಿಳಿಸುತ್ತಾ, ಬಟ್ಟೆ ಇಲ್ಲದ ಸ್ಥಿತಿಯಾದ ಅದನ್ನು ಅಚೇಲ ಎಂದಿದ್ದಾರೆ. ಚೇಲ ಎಂದರೆ ಬಟ್ಟೆ, ಅಚೇಲವೆಂದರೆ ಶರೀರವಿಲ್ಲದ ಮೋಕ್ಷವೆಂದು ಹೇಳಿದ್ದಾರೆ. ಅಜ್ಞಾನದಲ್ಲಿದ್ದು ಶರೀರದೊಂದಿಗೆ ಜನ್ಮಗಳೆತ್ತುತ್ತಿರುವವರನ್ನು

ಚೇಲರೆಂದು, ಜ್ಞಾನವನ್ನು ಹೊಂದಿ ಜನ್ಮವಿಲ್ಲದ ಸ್ಥಿತಿಯನ್ನು ಕೋರುತ್ತಿರುವವರನ್ನು ಅಚೇಲರೆಂದು ಪೂರ್ವದಲ್ಲಿ ಹಿರಿಯರನ್ನುತ್ತಿದ್ದರು. ಶರೀರವನ್ನು ಚೇಲವೆಂದು, ಮೋಕ್ಷವನ್ನು ಅಚೇಲವೆಂದು ಪೂರ್ವದಲ್ಲಿ ಕರೆಯುತ್ತಿದ್ದರು. ಮೋಕ್ಷ ಮಾರ್ಗವನ್ನು ಅಚೇಲವೆಂದು, ಅಜ್ಞಾನವನ್ನು ಚೇಲವೆಂದು ಸಹ ಕರೆಯುತ್ತಿದ್ದರು.ಜ್ಞಾನಮಾರ್ಗವಾದ ಅಚೇಲವೆನ್ನುವ ಪದ ಕಾಲಕ್ರಮದಲ್ಲಿ ಅಚಲವಾಗಿ ಬದಲಾಗಿದೆ. ಜ್ಞಾನಮಾರ್ಗವನ್ನು ಅನುಸರಿಸುವವರು ಈಗಲೂ ಇದ್ದಾರೆ. ಆದರೆ ಅವರು ನಮ್ಮದು ಅಚಲ ಎನ್ನುವುದು ಅರ್ಥವಿಲ್ಲದ ಮಾತು. ಅವರು ನಮ್ಮದು ಅಚೇಲವೆಂದು ಹೇಳಬಹುದು, ಆದರೆ ಅಚಲವೆಂದು ಹೇಳಬಾರದು. ಸರಿಯಾದ ಅರ್ಥದ ಪ್ರಕಾರ ಚಿದ ಅಂಬರವನ್ನು ಚೇಲ ಅಚೇಲವೆನ್ನಬಹುದು. ದೇವಾಲಯದಲ್ಲಿ ತೋರಿಸಿದಹಾಗೆ ನೀವು ಬಟ್ಟೆ ಪಾರ್ಟಿನೋ, ಬಯಲು ಪಾರ್ಟಿನೋ ಯೊಚಿಸಿಕೊಳ್ಳಿ. ಚೇಲವಲ್ಲದ ಅಚೇಲವನ್ನು ಹೊಂದಿರಿ.

## ಜ್ಞಾನ ಪರೀಕ್ಷೆ

**ಚಿನ್ನಪೊಲಮಡ** **ದಿನಾಂಕ–27–04–2002**

**856. (1) ದೇವರ ನಂತರ ದೇವರಾಗಿರುವುದು ಯಾರು?**

ಉ. ಮಾಯೆ.

**ವಿವರ :** ಪ್ರಪಂಚದಲ್ಲಿ ಅತೀ ದೊಡ್ಡ ಶಕ್ತಿಗಳು ಎರಡಿವೆ. ಆ ಎರಡು ಕಣ್ಣಿಗೆ ಕಾಣಿಸದೆ ಇವೆ. ಅವುಗಳೇ ಒಂದು ಪರಮಾತ್ಮ ಎರಡು ಮಾಯೆ. ಪರಮಾತ್ಮ ಕಾಣಿಸುವುದಿಲ್ಲ ಮಾಯೆಯೂ ಕಾಣಿಸುವುದಿಲ್ಲ. ಪರಮಾತ್ಮ ಯಾರಿಗೂ ತಿಳಿಯದೇ ಪ್ರಪಂಚವೆಲ್ಲಾ ವ್ಯಾಪಿಸಿರುವಾಗ, ಮಾಯೆ ಸಹ ಹಾಗೇ ಆವರಿಸಿ ಇದೆ. ಎರಡು ಕಾಣಿಸದೇ ಇರುವವಾದ್ದರಿಂದ ಇದು ಇಂತಹದ್ದೆಂದು ಗುರುತಿಸುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ದೇವರನ್ನು ಮಾಯೆ ಎಂದು, ಮಾಯೆಯನ್ನು ದೇವರೆಂದು ಕೆಲವರು ಭ್ರಮಿಸುವುದಕ್ಕೆ ಅವಕಾಶವಿದೆ. ಬಹಳ ಕಡೆ ಮಾಯೆಯೇ ಪರಮಾತ್ಮನಾಗಿ ಲೆಕ್ಕಿಸಲ್ಪಡುತ್ತಾ ಪೂಜಿಸಲ್ಪಡುತ್ತಿದೆ. ಅನೇಕ ಸ್ಥಳಗಳಲ್ಲಿ ಅನೇಕರ ಹತ್ತಿರ ಮಾಯೆ ದೈವವಾಗಿ ಪೂಜಿಸಲ್ಪಡುತ್ತಾ, ಯಾವ ಕಾರಣದಿಂದಲೂ ಇದು ಮಾಯೆಯೆಂದು ತಿಳಿಯುವುದಕ್ಕೆ ಅವಕಾಶವೇ ಇಲ್ಲದಹಾಗೆ ಇದೆ. ಮಾಯೆ ದೈವಕ್ಕಿಂತಲೂ ಹೆಚ್ಚಾಗಿ ದೈವರೂಪದಲ್ಲಿ ಇದ್ದರೂ, ಅದು ದೈವದಿಂದ

ತಯಾರಿಸಲಾಗಿದೆ. ದೈವದಿಂದ ಶಕ್ತಿ ಹೊಂದಿದೆ. ಆದ್ದರಿಂದ ಪ್ರಪಂಚದಲ್ಲಿ ಮಾಯೆ ಎಷ್ಟು ದೊಡ್ಡದಾದರು, ಅಸಲಾದ ದೈವವಾಗಿ ಮಾನವರನ್ನು ಭ್ರಮಿಸುವಂತೆ ಮಾಡಿ ತನ್ನ ಕಡೆ ಸೆಳೆದುಕೊಂಡರೂ, ಪರಮಾತ್ಮನಿಗಿಂತಲೂ ಮೀರಿರುವುದು ಅಲ್ಲವೆಂದು, ಮಾಯೆ ದೈವದ ನಂತರ ದೈವವಾಗಿ ಇದೆಯೆಂದು ಹೇಳಬಹುದು. ಇದನ್ನು ಸೂತ್ರ ಬದ್ಧವಾಗಿ ತಿಳಿದುಕೊಳ್ಳಬೇಕೆಂದರೆ ಎಲ್ಲಾದರೇ ಪರಮಾತ್ಮನನ್ನು ಹೊರತುಪಡಿಸಿ ಅನ್ಯ ದೇವತಾರಾಧನೆ ನಡೆಯುತ್ತಿದೆಯೋ, ಎಲ್ಲಾದರೆ ಮಹತ್ವಗಳನ್ನು ಅನುಸರಿಸಿ ಮನುಜರು ಹೋಗುತ್ತಿದ್ದಾರೋ, ಎಲ್ಲಾದರೆ ಕೋರಿಕೆಗಳ ಸಲುವಾಗಿ ಆರಾಧಿಸುವುದು ಅವು ನೆರವೇರುವುದು ನಡೆಯುತ್ತಿದೆಯೋ, ಎಲ್ಲಾದರೆ ಆತ್ಮ ಜ್ಞಾನವೆನ್ನುವ ಹೆಸರೊಂದಿಗೆ ಯಜ್ಞಯಾಗಾದಿ ವ್ರತ ಕ್ರತುಗಳು ನಡೆಯುತ್ತಿವೆಯೋ, ಅಲ್ಲಿ ದೈವವಾಗಿ ಮಾಯೆ ಚಲಾವಣೆ ಆಗುತ್ತಿದೆಯೆಂದು ತಿಳಿಯಬಹುದು. ಸಾವಿರಕ್ಕೆ ಒಂಬತ್ತು ನೂರ ತೊಂಬತ್ತೊಂಬತ್ತು ಮಂದಿ ಮಾಯೆಯನ್ನು ಆರಾಧಿಸುತ್ತಿರುವಾಗ, ಕೇವಲ ಒಬ್ಬನು ಪರಮಾತ್ಮನನ್ನು ಆರಾಧಿಸುತ್ತಿದ್ದಾನೆಂದು ಹೇಳುವುದು ಸಹ ಅಪುರೂಪವೇ. ಈ ಮಾತನ್ನು ಭಗವದ್ಗೀತೆಯಲ್ಲಿ ಪರಮಾತ್ಮನೇ ಸ್ವತಃವಾಗಿ **"ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ದಯೇ"** ಎಂದು ತಿಳಿಸಿದ್ದಾರೆ. ಇದನ್ನನುಸರಿಸಿ ಪ್ರತಿ ಒಬ್ಬರಲ್ಲಿ ಅಷ್ಟೋ ಇಷ್ಟೋ ಭಕ್ತಿ ಇದ್ದರೂ, ಅದು ಪರಮಾತ್ಮ ಭಕ್ತಿ ಅಲ್ಲವೆಂದು ಮಾಯೆ ಭಕ್ತಿಯೇ ಎಂದು ತಿಳಿಯುತ್ತಿದೆ. ಜಗತಿ ಎಲ್ಲದಕ್ಕೂ ಪರಮಾತ್ಮ ದೈವವಾದಾಗ, ಮಾಯೆ ಎರಡನೆಯ ದೈವವಾಗಿ ತಯಾರಾಗಿದೆ. ಎಷ್ಟೋ ಜನಕ್ಕೆ ಮಾಯೆ ಮೊದಲನೆಯ ದೈವವಾಗಿ ಇದ್ದರೂ, ಅದಕ್ಕಿಂತ ಮೊದಲಿನವನು ಅದನ್ನು ತಯಾರು ಮಾಡಿದವನು ಪರಮಾತ್ಮ. ಆದ್ದರಿಂದ ಪರಮಾತ್ಮ ಮೊದಲನೆಯ ದೈವವಾದಾಗ, ದೈವದ ನಂತರ ದೈವವಾಗಿ ಮಾಯೆ ಚಲಾವಣೆ ಆಗುತ್ತಿದೆಯೆಂದು ಹೇಳಬಹುದು.

**857. (2) ಆಕಾಶದಲ್ಲಿ ಮಹಡಿ ಕಟ್ಟಬಹುದೆನ್ನುತ್ತಾರೆ. ಯಾವುದರಿಂದ ಕಟ್ಟಬಹುದು?**

ಉ. ಮನಸ್ಸಿನಿಂದ.

**ವಿವರ :** ನಮ್ಮಲ್ಲಿರುವ ಮನಸ್ಸು ಊಹೆಗಳೊಂದಿಗೆ ಆಲೋಚನೆಗಳೊಂದಿಗೆ ತುಂಬಿದೆ. ಗತದಲ್ಲಿ ಅನುಭವವಿರುವ ವಿಷಯಗಳನ್ನು ಜ್ಞಾಪಕ ತರುವುದರಲ್ಲಾಗಲಿ ಗತದಲ್ಲಿ ಅನುಭವವಿಲ್ಲದ ವಿಷಯಗಳನ್ನು ತಿಳಿಯದ ವಿಷಯಗಳನ್ನು ಊಹೆಗೆ ಸೇರಿಸುವುದರಲ್ಲಾಗಲಿ ಅದಕ್ಕೆ ಅದೇ ಸಾಟಿ. ಇರುವವು ಇಲ್ಲದಿರುವವು ಎಲ್ಲವನ್ನು ಮನನ ಮಾಡುವುದು

ಮನಸ್ಸು. ಇರುವ ವಿಷಯಗಳನ್ನು ಜ್ಞಾಪಕ ಮಾಡಿಕೊಳ್ಳುವುದು ಮಹತ್ವ ವಿಚಾರವಲ್ಲದಿದ್ದರೂ, ಇಲ್ಲದ ವಿಷಯಗಳನ್ನು ಎಷ್ಟೋ ವಿಧಗಳಾಗಿ ಜ್ಞಾಪಕ ತಂದುಕೊಳ್ಳುವುದರಲ್ಲಿ ದೊಡ್ಡ ವಿಶೇಷವಿದೆ. ಉದಾಹರಣೆಗೆ ಗತದಲ್ಲಿ ಒಂದು ಮನೆಯನ್ನು ನೋಡಿದ್ದರೇ ಆಗ ಹೇಗೆ ನೋಡಿದ್ದರೆ, ಹಾಗೇ ಆ ಮನೆಯನ್ನು ಮನೋದೃಷ್ಟಿಯಿಂದ ತೋರಿಸಬಲ್ಲದು. ಒಂದೊಂದು ಸಲ ಎಂದಿಗೂ ನೋಡದ ಮನೆಯನ್ನು ಸಹ ತೋರಿಸಬಲ್ಲದು. ನೋಡದ ಮನೆಯನ್ನು ತೋರಿಸುವಾಗ ಆ ಮನೆಯನ್ನು ಇಷ್ಟಬಂದಹಾಗೆ ತಿದ್ದಿ ತೋರಿಸಬಲ್ಲದು. ಯಾರು ನಿರ್ಮಾಣ ಮಾಡಲಾರದಷ್ಟು ಊಹೆಯೊಂದಿಗೆ ಇರುವಹಾಗೇ, ಕಣ್ಣಿಗೆ ಕಾಣಿಸಿದಹಾಗೆ ಮನೋದೃಷ್ಟಿಗೆ ತರಿಸಬಲ್ಲದು. ಮನೋ ಊಹೆಗಳಿಗೆ ಕೈಲಾಗದಿರುವುದು ಸಿಗಲಾರದ್ದು ಇಲ್ಲ. ಆಕಾಶದಲ್ಲಿ ಆಧಾರವಿಲ್ಲದೆ ಮಹಡಿ ಕಟ್ಟಿ ತೋರಿಸಬಲ್ಲದು. ತನ್ನ ದೃಷ್ಟಿಗೆ ಇರುವವು ಇಲ್ಲದಿರುವವು ಎಲ್ಲಾ ಗೋಚರಿಸುವಂತೆ ಮಾಡಬಲ್ಲದು. ಆದ್ದರಿಂದ ಮನಸ್ಸಿನಿಂದ ಗಾಳಿಯಲ್ಲಾಗಲಿ, ಆಕಾಶದಲ್ಲಾಗಲಿ ಮಹಡಿಗಳು ಕಟ್ಟಬಹುದೆನ್ನುತ್ತಾರೆ.

**858. (3) ಮೂಗನಿಗೆ ಮಾತು, ಕುಂಟನಿಗೆ ನಡಿಗೆ ಕೊಡುವ ಸಾಮರ್ಥ್ಯ ಯಾರಿಗೆ ಇದೆ? ಎಷ್ಟು ಜನಕ್ಕೆ ಇದೆ?**

ಉ. ಪರಮಾತ್ಮನಿಗೂ ಮಾಯೆಗು ಇಬ್ಬರಿಗೂ ಇದೆ.

**ವಿವರ :** ಪ್ರಪಂಚದಲ್ಲಿ ಅತಿ ದೊಡ್ಡ ಶಕ್ತಿಗಳು ಎರಡೇ ಇವೆಯೆಂದು ಅದರಲ್ಲಿ ಒಂದು ಪರಮಾತ್ಮ ಎಂದು ಎರಡನೆಯದು ಮಾಯೆ ಎಂದು ತಿಳಿದುಕೊಂಡಿದ್ದೇವೆ. ಎಲ್ಲದಕ್ಕು ಅಧಿಪತಿ ಪರಮಾತ್ಮ. ಮಾನವನು ಮಾಡಿಕೊಂಡ ಕರ್ಮಗಳನ್ನು ಅನುಭವಿಸುವುದರಲ್ಲಿ ಮೂಗ ಕುಂಟ ಮೊದಲಾದ ಅನೇಕ ಅವಯವ ಲೋಪ ಏರ್ಪಡಬಹುದು. ಅಂತಹ ಕರ್ಮಗಳನ್ನು ಎಲ್ಲದಕ್ಕು ಅಧಿಪತಿಯಾದ ಪರಮಾತ್ಮ ತನ್ನ ಶಕ್ತಿಯಿಂದ ಭಸ್ಮ ಮಾಡಬಲ್ಲನು, ಮೂಗ ಕುಂಟರನ್ನು ಸರಿ ಮಾಡಬಲ್ಲನು. ತನ್ನ ಶಕ್ತಿ ಇಂತಹದ್ದೆಂದು ತಿಳಿಸುವ ಸಲುವಾಗಿ ಯಾವುದೋ ಒಂದು ಕಡೆ ಹಾಗೆ ಮಾಡುವನು. ಹಾಗೆಯೇ ಮಾಯೆ ತಾನು ದೇವರ ಹಾಗೆ ಇರಬೇಕೆಂದು, ದೇವರಗಿಂತಲೂ ಹೆಚ್ಚಾಗಿ ಕಾಣಿಸಬೇಕೆಂದು, ತನ್ನನ್ನು ಬಿಟ್ಟು ಯಾರು ದೇವರ ಕಡೆ ಹೋಗಬಾರದೆಂದು, ದೇವರ ಸ್ಥಾನದಲ್ಲಿ ತಾನಿದ್ದು ಅನೇಕ ಕಡೆ ಅನೇಕ ಮಹಿಮೆಗಳನ್ನು ತೋರಿಸುತ್ತಿರುತ್ತದೆ. ಕರ್ಮವನ್ನು ಕ್ಷಮಿಸಿ ಇಲ್ಲದೆ ಮಾಡುವ ಶಕ್ತಿ ಪರಮಾತ್ಮ ಒಬ್ಬನಿಗೆ ಇರುವಾಗ, ಮಾಯೆಗೆ ಆ ಶಕ್ತಿ ಇಲ್ಲದಿದ್ದರೂ ಮೂಗನಿಗೆ ಮಾತು ಕುಂಟನಿಗೆ ನಡಿಗೆ ಕೊಡಬಲ್ಲದು. ಕರ್ಮವನ್ನು ಕ್ಷಮಿಸುವ ಸಾಮರ್ಥ್ಯ ಇಲ್ಲದ ಮಾಯೆ ತಾತ್ಕಾಲಿಕವಾಗಿರುವ ಕರ್ಮವನ್ನು ತೆಗೆದು ನಂತರ ಜನ್ಮದೊಳಗೆ

ಬದಲಾಯಿಸಬಲ್ಲದು. ಮಾಯೆಗೆ ಕರ್ಮವನ್ನು ನಾಶ ಮಾಡುವ ಶಕ್ತಿ ಇಲ್ಲದಿದ್ದರೂ ಕರ್ಮವನ್ನು ಬದಲಾಯಿಸುವ ಶಕ್ತಿ ಇದೆ. ಪ್ರಸ್ತುತ ಕರ್ಮವನ್ನು ನಂತರ ಜನ್ಮದೊಳಗೆ ಬದಲಾಯಿಸಿ ಆಗ ಆ ಕರ್ಮವನ್ನು ಇಲ್ಲದೆ ಮಾಡುತ್ತಿದೆ. ಇದನ್ನನುಸರಿಸಿ ಪ್ರಪಂಚದಲ್ಲಿ ದೇವರಿಗೆ ದಿಟವಾಗಿ, ದೇವರಿಗಿಂತಲೂ ದೊಡ್ಡದಾಗಿ, ಕಾಣಿಸುವುದರಿಂದ ಮಾನವನು ಮಾಯೆಯನ್ನು ಕುರಿತು ತಿಳಿಯದೆ, ಅದನ್ನೇ ದೇವರೆಂದುಕೊಂಡು ನಂಬುತ್ತಿದ್ದಾನೆ. ಈ ದಿನ ಭೂಮಿ ಮೇಲೆ ಮಾಯೆ ಕೆಲವು ವ್ಯಕ್ತಿಗಳಲ್ಲಿ ಆವರಿಸಿ, ಅವರಲ್ಲಿ ತನ್ನ ಶಕ್ತಿಯನ್ನು ಮಹತ್ವಗಳ ರೂಪವಾಗಿ ತಿಳಿಸುತ್ತಾ ಆಕರ್ಷಿಸಿಕೊಂಡು, ಕೆಲವರ ಕರ್ಮಗಳನ್ನು ಇಲ್ಲದೆ ಮಾಡುವುದರಿಂದ ಮಾನವರು ಭ್ರಮೆಪಟ್ಟು ಹಾಗೆ ಮಾಡಿದ ವ್ಯಕ್ತಿಯೇ ನಿಜ ದೈವವೆಂದು ನಂಬಿ ಪರಮಾತ್ಮ ಜ್ಞಾನಕ್ಕೆ ದೂರವಾಗುತ್ತಿದ್ದಾರೆ. ಯಾವುದು ಏನಾದರು ಭೂಮಿ ಮೇಲೆ ಕರ್ಮವನ್ನು ಇಲ್ಲದೆ ಮಾಡುವ ಶಕ್ತಿ ಮಾಯೆಗು ಪರಮಾತ್ಮನಿಗೂ ಇಬ್ಬರಿಗೂ ಇದೆಯೆಂದು ಹೇಳಬಹುದು.

**859. (4) ನೀರಲ್ಲಿ ನಡೆಯುವವನನ್ನು, ಆಕಾಶದಲ್ಲಿ ತೇಲುವವನನ್ನು ತಯಾರು ಮಾಡುವವರಿದ್ದಾರೆ. ಅವರ್‍ಯಾರು?**

ಉ. ಪರಮಾತ್ಮ, ಮಾಯೆ.

**ವಿವರ :** ಪ್ರಪಂಚದಲ್ಲಿ ಅತ್ಯಧಿಕ ಶಕ್ತಿಗಳು ಏನಾದರೂ ಮಾಡಬಲ್ಲವು ಪರಮಾತ್ಮ, ಅದಕ್ಕೆ ವಿರುದ್ಧವಾದ ದಿಶೆಯಲ್ಲಿರುವ ಮಾಯೆ. ಪರಮಾತ್ಮ ಧರ್ಮಗಳನ್ನು ಬೋಧಿಸಿದರೆ, ಮಾಯೆ ಪರಮಾತ್ಮನಿಗೆ ವಿರುದ್ಧವಾಗಿ ಅಧರ್ಮಗಳನ್ನು ಬೋಧಿಸುತ್ತದೆ. ಪರಮಾತ್ಮ ಹೆಸರಿಂದ ಪರಮಾತ್ಮ ಬೋಧಿಸಿದ ಹಾಗೆ ಬೋಧಿಸುತ್ತಾ, ಪರಮಾತ್ಮ ಧರ್ಮಗಳಿಗೆ ವಿರುದ್ಧವಾಗಿ ಬೋಧಿಸುವುದೇ ಮಾಯೆ ಯೊಂದರ ಕೆಲಸ. ಅಂತಹ ಮಾಯೆ ಮಾತುಗಳನ್ನು ದೊಡ್ಡ ಜ್ಞಾನಿಗಳು ಸಹಿತ ಗುರುತಿಸದೇ ಅಧರ್ಮಗಳನ್ನೇ ಧರ್ಮ ಗಳೆಂದುಕೊಳ್ಳುತ್ತಿರುವರು. ಜ್ಞಾನ ವಿಷಯದಲ್ಲಿ ಸಹ ತನ್ನದೇ ಜ್ಞಾನವೆಂದುಕೊಳ್ಳುವ ಹಾಗೆ ಮೋಸಮಾಡುವ ಮಾಯೆಯನ್ನು, ಹೆಸರು ಹೊಂದಿದ ಸ್ವಾಮಿಗಳು ಸಹ ಗುರುತಿಸಲಾರದ ಅಧರ್ಮಗಳನ್ನು ಧರ್ಮಗಳೆಂದುಕೊಳ್ಳುವುದು, ಧರ್ಮಗಳನ್ನು ಅಧರ್ಮಗಳೆಂದುಕೊಳ್ಳುವುದು ನಡೆಯುತ್ತಿದೆ. ಎಂತಹವರನ್ನಾದರೂ ಭ್ರಮಿಸುವಂತೆ ಮಾಡುವ ಮಾಯೆ ಪ್ರಪಂಚದಲ್ಲಿ ಎಂತಹ ಕೆಲಸವನ್ನಾದರೂ ಮಾಡಿ ದೇವರಾಗಿ ಪೂಜ್ಯನಿಯವಾಗುತ್ತಿದೆ. ಅಂತಹ ಕಾರ್ಯಗಳಲ್ಲಿ ಒಬ್ಬ ಮನುಷ್ಯನನ್ನು ನೀರಲ್ಲಿ ನಡೆಸಬಲ್ಲದು. ಆಕಾಶದಲ್ಲಿ ತೇಲುವಹಾಗೆ ಮಾಡಬಲ್ಲದು. ಮಾಯೆ ನಂತರ ಆ ಶಕ್ತಿ ಇರುವುದು

ಪರಮಾತ್ಮನಿಗೇ. ಆದರೆ ಪರಮಾತ್ಮ ತನ್ನ ಮಹತ್ವಗಳನ್ನು ಹೊರಗೆ ತೋರಿಸುವುದಿಲ್ಲ. ತನ್ನನ್ನು ಮಹತ್ವಗಳಿಂದಲೇ ಅಲ್ಲದೆ, ಧರ್ಮಗಳಿಂದ ತಿಳಿಸಬೇಕೆಂದುಕೊಳ್ಳುವವನು ಪರಮಾತ್ಮ. ಧರ್ಮಗಳ ಪ್ರತಿಷ್ಠಾಪನೆಯಲ್ಲಿ ಅವಶ್ಯ ಬಂದಾಗ ಹೊರತು ಮಹತ್ವವನ್ನು ತೋರಿಸದವನು ಪರಮಾತ್ಮ. ಅವಶ್ಯವಿದ್ದಾಗ ಪರಮಾತ್ಮ, ಉಳಿದ ಸಮಯಗಳಲ್ಲಿ ಸಹ ಮಾಯೆ ಆಕಾಶದಲ್ಲಾಗಲಿ, ನೀರಲ್ಲಾಗಲಿ ನಡೆಸುವುದು.

**860. (5) ಶರೀರ ಭಾಗಗಳು ಅಲ್ಲದೆ ಎರಡಕ್ಷರಗಳ ಹೆಸರಿರುವವು ಶರೀರದಲ್ಲಿ ಎರಡಿವೆ. ಅವುಯಾವುವು?**

ಉ. ಆತ್ಮ, ಮಾಯೆ.

**ವಿವರ :** ಜೀವ ಶರೀರವು ಒಟ್ಟು 25 ಭಾಗಗಳಾಗಿ ಇದೆಯೆಂದು ಹೇಳುತ್ತಿರುತ್ತೇವೆ. ಆ ಇಪ್ಪತ್ತೈದು ಭಾಗಗಳಲ್ಲಿ ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ವಾಯುಗಳು, ಐದು ಇಂದ್ರಿಯ ಶಕ್ತಿಗಳು, ಅಲ್ಲದೆ ಜೀವಾತ್ಮನು, ಮನಸ್ಸು, ಬುದ್ಧಿ, ಚಿತ್ತ, ಅಹಂ ಎನ್ನುವ ಐದು ಸೇರಿ ಇಪ್ಪತ್ತೈದು ಶರೀರ ಭಾಗಗಳಿವೆ. ಶರೀರ ಭಾಗಗಳಾಗಿ ಹೆಸರು ಹೊಂದಿದ 25 ಅಲ್ಲದೆ ಪ್ರತಿ ಶರೀರದಲ್ಲೂ ಕಣ್ಣಿಗೆ ಕಾಣಿಸದ ಆತ್ಮ, ಮಾಯೆ ಎನ್ನುವವು ಎರಡು ಇವೆ. ಇವು ಶರೀರ ಭಾಗಗಳಾಗಿ ಲೆಕ್ಕಿಸಲಾಗುವುದಿಲ್ಲ. ಏಕೆಂದರೆ ಈ ಎರಡು ಕರ್ಮಕ್ಕೆ ಅತೀತವಾದವು. ಕರ್ಮಕ್ಕೆ ಒಳಗಾಗಿ ಹುಟ್ಟುವವು ಶರೀರದಲ್ಲಿನ ಒಟ್ಟು 25 ಭಾಗಗಳು. ಜೀವ ಶರೀರವಿರುವ ಕಡೆಯೆಲ್ಲಾ ಆತ್ಮ ಮಾಯೆ ತಪ್ಪದೆ ಇರಬೇಕಾಗಿದ್ದರೂ ಅವು ಸಂಖ್ಯಾಭಾಗಗಳು ಅಲ್ಲ.

**861. (6) ನಿದ್ರೆ ಸ್ವಪ್ನ ಎಚ್ಚರದಲ್ಲಿ ಕೆಲಸ ಮಾಡುವುದು ಯಾವುದು? ಸ್ವಪ್ನ ಎಚ್ಚರದಲ್ಲಿ ಮಾತ್ರ ಕೆಲಸ ಮಾಡುವುದು ಯಾವುದು?**

ಉ. ಆತ್ಮ, ಮಾಯೆ.

**ವಿವರ :** ಶರೀರ ಒಟ್ಟು ಇಪ್ಪತ್ತೈದು ಭಾಗಗಳಾಗಿ ಇರುವಾಗ ಆ ಶರೀರವನ್ನು ಕದಲಿಸುವುದಕ್ಕೆ ಆತ್ಮ, ಯಾವ ವಿಧವಾಗಿ ಕದಲಿಸಬೇಕೆನ್ನುವುದಕ್ಕೆ ಮಾಯ ಜವಾಬ್ದಾರಿಗಳು ಸ್ವೀಕರಿಸಿವೆ. ಶರೀರದಲ್ಲಿ ಜೀವಾತ್ಮನು ಕಷ್ಟ ಸುಖಗಳನ್ನು ಅನುಭವಿಸುವುದಕ್ಕೆ ಯಂತ್ರದ ಹಾಗೆ ಶರೀರ 24 ಭಾಗಗಳಾಗಿ ಇರುವಾಗ, ಆ ಯಂತ್ರವನ್ನು ಕದಲಿಸುವ ಶಕ್ತಿಯಾಗಿ ಆತ್ಮ, ಹೇಗೆ ಕದಲಿಸಬೇಕೆನ್ನುವ ಪದ್ಧತಿಯನ್ನು ತಿಳಿಸುವುದಾಗಿ ಮಾಯೆ ಇದೆ. ಆತ್ಮ ಚೈತನ್ಯ ಶಕ್ತಿ ರೂಪವಾಗಿ ಶರೀರವೆಲ್ಲಾ ವ್ಯಾಪಿಸಿರುವಾಗ, ಮಾಯೆ ತ್ರಿಗುಣ ರೂಪವಾಗಿ

ತಲೆಯಲ್ಲಿ ಇದೆ. ಈ ವಿಷಯ ಭಗವದ್ಗೀತೆಯಲ್ಲಿ ಸಹ **"ಗುಣಮಯೀ ಮಮ ಮಾಯಾ"** ಎಂದು ಹೇಳಲಾಗಿದೆ. ನಿದ್ರೆಯಲ್ಲಿ ಎಚ್ಚರದಲ್ಲಿ ಸ್ವಪ್ನದಲ್ಲಿ ಮೂರು ಅವಸ್ಥೆಗಳಲ್ಲೂ ಆತ್ಮ ಬಿಡುವಿಲ್ಲದೆ ಕೆಲಸ ಮಾಡುತ್ತಿದೆ. ಮಾಯೆ ಮಾತ್ರ ಆತ್ಮದೊಂದಿಗೆ ಎಚ್ಚರದಲ್ಲಿಯೂ ಸ್ವಪ್ನದಲ್ಲಿಯೂ ಕೆಲಸ ಮಾಡುತ್ತಾ ನಿದ್ರಾವಸ್ಥೆಯಲ್ಲಿ ಯಾವ ಕೆಲಸ ಮಾಡದೆ ಇದೆ. ನಿದ್ರಾವಸ್ಥೆಯಲ್ಲಿ ಮಾಯೆ ಪ್ರಭಾವವಿರುವುದಿಲ್ಲ. ಸಾಧಾರಣ ಮನುಷ್ಯನಿಗೆ ಮಾಯೆ ಕೆಲಸ ಮಾಡದ ಒಂದೇ ಒಂದು ಸ್ಥಿತಿ ನಿದ್ರೆ. ಶರೀರದಲ್ಲಿ ಮನಸ್ಸು ಕೆಲಸ ಮಾಡುವಾಗಲೆ ಮಾಯೆ ಕೆಲಸ ಮಾಡುತ್ತದೆ. ಮನೋ ನಿಲುಗಡೆ ಹೊಂದಿರುವಾಗ ಮಾಯೆ ಕೆಲಸ ಮಾಡುವುದಿಲ್ಲ. ಮನಸ್ಸಿಗು ಮಾಯೆಗು ಹೀಗೆ ಬಹಳ ಹತ್ತಿರ ಸಂಬಂಧವಿದೆ. ಆದ್ದರಿಂದ ಮನಸ್ಸನ್ನು ಜಯಿಸಿದವರು ಮಾಯೆಯನ್ನು ಜಯಿಸಬಲ್ಲರು ಎಂದು ಹಿರಿಯರು ಹೇಳಿದ್ದಾರೆ. ಗೀತೆಯಲ್ಲಿ ಭಗವಂತನು ಸಹ ಗಾಳಿ ಇಲ್ಲದ ಕಡೆ ದೀಪ ಕದಲದೇ ನಿಲ್ಲುವ ಹಾಗೆ, ಮನಸ್ಸು ನಿಂತರೆ ಯೋಗವಾಗುವುದೆಂದು ತಿಳಿಸಿದ್ದಾನೆ. ಆದ್ದರಿಂದ ಬ್ರಹ್ಮಯೋಗಿ ಯಾದವನಿಗೆ ಯೋಗದಲ್ಲಿಯೂ ನಿದ್ರೆಯಲ್ಲಿಯೂ ಮಾಯೆ ಕೆಲಸ ಮಾಡುವುದಿಲ್ಲವೆಂದು ಹೇಳಬಹುದು. ಸಾಮಾನ್ಯ ಮಾನವನಿಗೆ ಆತ್ಮ ಮೂರು ಅವಸ್ಥೆಗಳಲ್ಲಿಯೂ, ಮಾಯೆ ಎಚ್ಚರ ಸ್ವಪ್ನಗಳೆನ್ನುವ ಎರಡು ಅವಸ್ಥೆಗಳಲ್ಲಿಯೂ ಕೆಲಸ ಮಾಡುವುದೆಂದು ತಿಳಿಯಬೇಕು.

**862. (7) ಆಲೋಚನೆಗೆ ಸಿಗದಿರುವುದು ಯಾವುದು? ಆಲೋಚನೆಯಲ್ಲಿರುವುದು ಯಾವುದು?**

ಉ. ಆತ್ಮ, ಮಾಯೆ.

**ವಿವರ :** ಮನಸ್ಸಿಗೆ ಒಂದು ಕೆಲಸವಿದೆ. ಯಾವ ವಿಷಯವನ್ನಾದರೂ ಆಲೋಚನೆಗಳಿಂದ ತೋರಿಸುವುದೇ ಅದರ ಕೆಲಸ. ಆಲೋಚನೆಗಳು ಪ್ರಪಂಚ ಸಂಬಂಧವಾದವು. ಪ್ರಪಂಚ ಸಂಬಂಧ ಹೊಂದಿರುವುದು ಮಾಯೆ. ಆದ್ದರಿಂದ ಶರೀರದಲ್ಲಿನ ಮನಸ್ಸಿಗೆ ಆಲೋಚನೆ ಗಳೆಲ್ಲವು ಮಾಯೆ ಸಂಬಂಧವಾದವೆಂದು, ಆಲೋಚನೆಗಳಲ್ಲಿ ಒಳಗೊಂಡಿರು ವುದು ಮಾಯೆ ಎಂದು ತಿಳಿಯಬೇಕು. ಆಲೋಚನೆಗಳಿಲ್ಲದಿರುವಾಗ, ಮನಸ್ಸು ಕೆಲಸ ಮಾಡದಿರುವಾಗ ತಿಳಿಯುವುದೇ ಆತ್ಮ. ಮನಸ್ಸು ಕೆಲಸ ಮಾಡುವಾಗ ಎಷ್ಟು ಯೊಚಿಸಿದರೂ ಆತ್ಮ ತಿಳಿಯುವುದಿಲ್ಲ. ಆದ್ದರಿಂದ **"ಯಥಾ ದೀಪೋ ನಿವಾಸಸ್ಥೋ ನೇಂಗತೋ ಸೋಪ ಮಾಸ್ಮೃತಾ"** ಎಂದು ಭಗವದ್ಗೀತೆಯಲ್ಲಿ ಹೇಳಿದಹಾಗೆ ಗಾಳಿ ಇಲ್ಲದ ಕಡೆ ದೀಪ ಕದಲದೆ ನಿಲ್ಲುವಹಾಗೆ ಮನಸ್ಸು ಕದಲದೆ ನಿಂತರೆ ಆತ್ಮ ತಿಳಿಯುವುದು. ಮನಸ್ಸು ಕದಲುವುದಾದರೆ ಆತ್ಮ ವಿನಹಾ ಇರುವುದೆಲ್ಲವೂ ಮಾಯೆ, ಆದ್ದರಿಂದ ಮನೋ ಕದಲಿಕೆಗಳಾದ

ಆಲೋಚನೆಗಳಲ್ಲಿ ಇರುವುದು ಮಾಯೆ. ಆಲೋಚನೆಗಳಿಗೆ ಸಿಗದಿರುವುದು ಆತ್ಮಯೆಂದು ಹೇಳಬಹುದು.

**863. (8) ಶರೀರದ ಒಳಗೂ ಹೊರಗು ಇರುವವರು ಇಬ್ಬರು ಇದ್ದಾರೆ ಅವರ್‍ಯಾರು?**

ಉ. ಪರಮಾತ್ಮ, ಮಾಯೆ.

**ವಿವರ :** ಪರಮಾತ್ಮ ಅಣುಅಣುವಿನಲ್ಲೂ ವ್ಯಾಪಿಸಿ ಇದೆಯೆಂದು ಭಗವದ್ಗೀತೆಯಲ್ಲೂ ಉಳಿದ ಹಿರಿಯರ ಹತ್ತಿರ ತಿಳಿದುಕೊಂಡಿದ್ದೇವೆ. ಇದನ್ನನುಸರಿಸಿ ಪರಮಾತ್ಮ ಶರೀರವೆಲ್ಲಾ ವ್ಯಾಪಿಸಿ ಇದ್ದಾನೆಂದು ತಿಳಿಯುತ್ತಿದೆ. ಎಲ್ಲಾ ಕಡೆ ವ್ಯಾಪಿಸಿದ ಪರಮಾತ್ಮ ಪ್ರಪಂಚ ಹುಟ್ಟುವುದರಲ್ಲೇ ತನ್ನೊಂದಿಗೆ ಇರುವ ಹಾಗೆ, ತನಗೆ ಸಮಾನವಾಗಿ ಕಾಣಿಸುವ ಹಾಗೆ ತನ್ನೊಂದಿಗೆ ವ್ಯಾಪಿಸಿ ಇರುವಹಾಗೆ, ತನಗೆ ವಿರುದ್ಧವಾಗಿ ಇರುವಹಾಗೆ, ಎಷ್ಟೋ ವಿಧಗಳ ಅಧಿಕಾರಗಳನ್ನು ಕೊಟ್ಟು ಮಾಯೆ ಎನ್ನುವುದನ್ನು ತಯಾರು ಮಾಡಿ ಇಟ್ಟಿದ್ದಾನೆ. ಮಾಯೆ ಪರಮಾತ್ಮನಿಗೆ ಹುಟ್ಟಿರುವುದಾದ್ದರಿಂದ ಮಗುವಂತದ್ದು, ಸಮಾನವಾಗಿರುವುದರಿಂದ ಹೆಂಡತಿಯಂತದ್ದು, ವಿರುದ್ಧವಾಗಿ ಇರುವುದರಿಂದ ಶತ್ರುವಂತದ್ದು. ಪರಮಾತ್ಮನಿಗೆ ಮಗುವಂತದ್ದು, ಹೆಂಡತಿಯಂತದ್ದು, ಶತ್ರುವಿನಂತದ್ದು ಆದ ಮಾಯೆ ಸರ್ವ ವ್ಯಾಪ್ತಿಯಾಗಿರುವುದರಿಂದ ಶರೀರದೊಳಗೆ ಗುಣಗಳ ರೂಪವಾಗಿ, ಶರೀರದ ಹೊರಗೆ ಪಂಚಭೂತಗಳಾಗಿ ಚಲಾವಣೆ ಆಗುತ್ತಿದೆ. ಆದುದರಿಂದ ಶರೀರದ ಹೊರಗೆ ಶರೀರದೊಳಗೆ ವ್ಯಾಪಿಸಿರುವವು ಎರಡೆಂದು, ಅವೇ ಒಂದು ಪರಮಾತ್ಮವೆಂದು, ಎರಡು ಮಾಯೆ ಎಂದು ಹೇಳಬಹುದು.

**864. (9) ಶಿಷ್ಯನು ಕೊಟ್ಟಿರುವ ಹತ್ತುಸಾವಿರ ರೂಪಾಯಿಗಳಲ್ಲಿ ಗುರುಗಳು 5 ಸಾವಿರ ರೂ.ಗಳನ್ನು ಜ್ಞಾನವೊಂದರ ಕೆಲಸಗಳಿಗೂ, ಎರಡು ಸಾವಿರ ಸ್ವಂತ ಕಾರ್ಯಗಳಿಗೂ, ಮೂರು ಸಾವಿರ ಇತರ ಕಾರ್ಯಗಳಿಗೂ ವಿನಿಯೋಗಿಸಿದ್ದಾನೆ. ಆ ಗುರುವು ಮಾಯೆಗೆಷ್ಟು ದೇವರಿಗೆಷ್ಟು ವಿನಿಯೋಗಿಸಿದ್ದಾನೆ?**

ಉ. ಎಲ್ಲಾ ದೇವರಿಗೆ.

**ವಿವರ :** ದೇಶದಲ್ಲಿ ಎಲ್ಲಾದರೂ ಗುರುವು ಒಬ್ಬನೇ ಇರುವನು. ಬೋಧಿಸುವವರೆಲ್ಲರೂ ಗುರುಗಳಲ್ಲ! ಜ್ಞಾನವನ್ನು ಬೋಧಿಸುವವರು ಗುರುಗಳು ಅಲ್ಲದೆ ಏನಾಗುತ್ತಾರೆಂದು

ಪ್ರಶ್ನೆಬರಬಹುದು. ಆ ಪ್ರಶ್ನೆಗೆ ಉತ್ತರವಾಗಿ ಏನೆನ್ನುತ್ತಿದ್ದೇವೆಂದರೆ ಬೋಧಿಸುವವರೆಲ್ಲರೂ ಬೋಧಕರೇ ಆಗಲಿ ಗುರುವು ಅಲ್ಲವೆಂದು ತಿಳಿಯಬೇಕು. ಗುರುವು ಬೇರೆ ಬೋಧಕನು ಬೇರೆ ಎಂದು ತಿಳಿದ ನಂತರವೇ ಗುರುವಿನ ವಿಶಿಷ್ಟತೆ ಏನೋ ನಮಗೆ ತಿಳಿಯುವುದು. ಆದ್ದರಿಂದ ಮೊದಲು ಗುರುವನ್ನು ಬೋಧಕನನ್ನು ಕುರಿತು ತಿಳಿದುಕೊಳ್ಳುವುದಕ್ಕೆ ಈ ಕೆಳಗಿನ ವಿಷಯವನ್ನು ನೋಡೋಣ.

## ಗುರುವು – ಬೋಧಕನು

ಮಾಡಿಕೊಂಡವರಿಗೆ ಮಾಡಿಕೊಂಡಷ್ಟು ಎನ್ನುವ ನಾಣ್ನುಡಿ ಇದೆ. ನಾವು ಏನು ಮಾಡಿದರೆ ಅದಕ್ಕೆ ತಕ್ಕ ಫಲವಿರುತ್ತದೆಂದು ಹಿರಿಯರೆಂದಿದ್ದಾರೆ. ಅದು ವಾಸ್ತವವೇ ಆದರೂ ಬಹಳ ಜನ ಅದನ್ನು ವಿಸ್ಮರಿಸುವುದು ಆಶ್ಚರ್ಯ. ಸಾಧಾರಣ ಮನುಷ್ಯರು ತಾವು ಮಾಡುತ್ತಿರುವುದಕ್ಕೆ ಫಲಿತವನ್ನು ಮರೆತು ಹೋದರೂ ಪರವಾಗಿಲ್ಲ. ಜ್ಞಾನಿಗಳಾದವರು ಸಹ ಅಂತಹ ಸ್ಥಿತಿಗೆ ಇಳಿಯುವುದು ಸರಿಯಲ್ಲ. ಉದಾಹರಣಗೆ ಒಬ್ಬ ಗುರುವು ತನ್ನ ಶಿಷ್ಯರಿಗೆ ಅಪೂರ್ವ ಜ್ಞಾನವನ್ನು ತಿಳಿಸಿ ಅದರ ಪ್ರಕಾರ ನಡೆದುಕೊಳ್ಳಬೇಕೆಂದು ಹೇಳುತ್ತಿದ್ದನು. ಆ ವಿಧವಾಗಿ ಗುರುವು ಹೇಳುತ್ತಾಹೋದರೆ ಶಿಷ್ಯರು ಕೇಳುತ್ತಾ ಹೋಗುತ್ತಿದ್ದರು. ಒಂದು ದಿನ ಗುರುಗಳು ಶಿಷ್ಯರನ್ನು ಕರೆದು ಈ ದಿನ ಅಡುಗೆಗೆ ಕಟ್ಟಿಗೆ ಬೇಕೆಂದು ಅವನ್ನು ತರಬೇಕೆಂದು ಹೇಳಿದ್ದಾರೆ. ಆ ಮಾತು ಕೇಳಿದ ಶಿಷ್ಯರು ಕೆಲವರು ಕಟ್ಟಿಗೆಗಳಿಗಾಗಿ ಕಾಡಿಗೆ ಹೊರಟರು. ಮಾರ್ಗ ಮಧ್ಯದಲ್ಲಿ ಒಬ್ಬರೊಂದಿಗೆ ಒಬ್ಬರು ಮಾತನಾಡುವ ಸಂದರ್ಭದಲ್ಲಿ ಹೀಗೆ ಪ್ರಶ್ನೆ – ಉತ್ತರಗಳ ರೂಪದಲ್ಲಿ ಸಂಭಾಷಣೆ ನಡೆದಿದೆ.

**ಪ್ರ. : ಜ್ಞಾನವಾದರೆ ನಾವು ಕೇಳಬಹುದು ಆದರೆ ಈ ಕೆಲಸಗಳು ಹೇಳುವುದೇನು?**

**ಉ.** : ಗುರುಗಳು ಹೇಳಿರುವುದು ಕೇಳಬೇಕು ತಾನೆ!

**ಪ್ರ. : ಕೇಳಬೇಕು, ಕೇಳುವವರೆಗು ಚೆನ್ನಾಗಿದೆ. ಕೆಲಸಗಳು ಹೇಳುವುದು ಚೆನ್ನಾಗಿರುವುದಿಲ್ಲ ಅಲ್ಲವೆ?**

**ಉ.** ಕೇಳುವುದೆಂದರೆ ಕಿವಿಗಳಿಂದ ಕೇಳುವುದೇ ಅಲ್ಲ. ಹೇಳಿರುವುದು ಮಾಡುವುದು ಸಹ ಕೇಳುವುದೇ ಆಗುತ್ತದೆ.

**ಪ್ರ. : ನನಗೆ ಕೇಳುವ ತಾಳ್ಮೆ ಇದೆ, ಆದರೆ ಮಾಡುವ ತಾಳ್ಮೆ ಇಲ್ಲ?**

**ಉ.** ಹೇಳಿರುವುದನ್ನು ಮಾಡಿದಾಗಲೆ ಸೇವೆ ಮಾಡಿದಂತಾಗುತ್ತದೆ ಅಲ್ಲವೆ!

**ಪ್ರ. : ಸೇವೆ ಎಂದರೆ ಗುರುಗಳ ಕಾಲು ಒತ್ತುವುದು, ಬೀಸಣಿಗೆಯಿಂದ ಬೀಸುವುದು ಆಗುತ್ತದೆ. ಆದರೆ ಕಷ್ಟಪಟ್ಟು ಕಟ್ಟಿಗೆ ತರುವುದೇನು?**

**ಉ.** ಗುರುಗಳ ಜ್ಞಾನಕ್ಕೆ ನಾವು ಬಾಕೀ ಇರುತ್ತೇವೆ. ಏನು ಹೇಳಿದರೆ ಅದು ಮಾಡುವುದರಿಂದ ಗುರುಗಳ ಋಣ ತೀರಿಸಿದಂತಾಗುತ್ತದೆ.

**ಪ್ರ. : ಬಾಯಿಂದ ಹೇಳಿರುವ ಮಾತುಗಳಿಗೆ ಬಾಕೀ ಇದ್ದಂತಾಗುತ್ತದಾ! ಆತನು ಹಣಕೊಟ್ಟಿದ್ದಾನಾ ಬಾಕೀ ಇರುವುದಕ್ಕೆ?**

**ಉ.** ಜ್ಞಾನ ಹಣಕ್ಕಿಂತಲೂ ಬೆಳೆಯುಳ್ಳದ್ದು. ಅದನ್ನು ಹಣದೊಂದಿಗೆ ಹೋಲಿಸಬಾರದು.

**ಪ್ರ. ಆಗಾಗ ನಮ್ಮ ಮನೆ ಹತ್ತಿರ ಕೆಲಸ ಬಿಟ್ಟು ಹೋಗಿ ಕೇಳುತ್ತೇವೆ ಅಲ್ವಾ! ಅದರಿಂದ ನಮಗೆ ಬರುವ ಆದಾಯ ಹೋಗುತ್ತದೆ ಆದರೆ ಆತನದ್ದೇನು ಹೋಗುತ್ತದೆ?**

**ಉ.** ಜ್ಞಾನ ನಮಗೆ ಅವಶ್ಯ. ಅದಕ್ಕೋಸ್ಕರ ನಾವು ಬರುತ್ತಿದ್ದೇವೆ. ಯಾವಾಗೋ ಒಂದು ಸಲ ಬಂದು ಸ್ವಲ್ಪ ಹೊತ್ತು ಕೇಳಿ ಹೋಗುವ ನಮಗೆ ಕೆಲಸ ಹೋಗಿದೆ, ಲಾಭ ಹೋಗಿದೆ ಎಂದರೆ, ಪ್ರತಿ ದಿನ ನಮ್ಮಂತೆ ಬರುವ ಎಷ್ಟೋ ಜನಕ್ಕೆ ಜ್ಞಾನ ಬೋಧನೆ ಮಾಡುವುದರಲ್ಲಿ ಕಾಲ ಕಳೆಯುವ ಆತನಿಗೂ ಸಹ ಪ್ರಪಂಚ ಕೆಲಸಗಳು ನಿಂತು ಹೋದಂತೆ ಅಲ್ಲವೆ! ಆತನೂ ಸಹ ನಮ್ಮಂತೆ ನನ್ನ ಕೆಲಸಗಳು ಹೋಗುತ್ತವೆಂದುಕೊಂಡರೆ ನಮಗೆ ಜ್ಞಾನ ತಿಳಿಯುತ್ತಿತ್ತಾ!

**ಪ್ರ. : ಜ್ಞಾನವನ್ನು ಹೇಳಿದರೆ ಆತನಿಗೇ ಪುಣ್ಯ ಬರುತ್ತದೆ ಅಲ್ವಾ!**

**ಉ.** ಕೇಳಿದರೆ ನಮಗೆ ಏನೋ ಬರುತ್ತದೆಂದು ಏಕೆಂದುಕೊಳ್ಳಬಾರದು. ನಮಗೇನೋ ದುಡ್ಡು ಹೋಗುತ್ತದೆನ್ನುವುದು, ಆತನಿಗೇನೋ ಪುಣ್ಯಬರುತ್ತದೆನ್ನುವುದು. ಇದ್ಯಾವ ನೀತಿ.

**ಪ್ರ. : ಸರಿ ಆತನು ನಮಗೆ ಜ್ಞಾನ ತಿಳಿಸುವುದರಿಂದ ಆತನ ಸಮಯ ವೃಥಾ ಎನ್ನುತ್ತಿದ್ದೀಯ. ನಾವು ಹೀಗೆ ಕೆಲಸ ಮಾಡುವುದಕ್ಕಿಂತ ನಮಗೆ ತೋಚಿದ ಹಣವನ್ನು ಕೊಟ್ಟು ಸಹಾಯಪಡಬಹುದಲ್ಲವೆ! ಅದರಿಂದ ಆತನ ಅವಶ್ಯಗಳು ಸಹ ತೀರುವವು ತಾನೆ?**

**ಉ.** ಇದು ಬಹಳ ತಪ್ಪಾದ ಮಾತು. ನಮಗೆ ತೋಚಿರುವುದು ಕೊಡುವುದಕ್ಕೆ ಆತನೇನು ಬಿಕ್ಷುಕನಲ್ಲ. ನಮಗಿಂತ ಉನ್ನತ ಸ್ಥಾನದಲ್ಲಿ ಇರುವ ಗುರುವು. ಗುರು ಸಾಕ್ಷಾತ್ ಪರಬ್ರಹ್ಮ ಎಂದ ನಾವೇ ಹಾಗೆ ಹೇಳಬಾರದು. ಮೇಲಿನ ಸ್ಥಾನದಲ್ಲಿರುವ ಗುರುವಿಗೆ ನಾವೇ ಬಾಕಿ ಇರುತ್ತಿದ್ದೇವೆ. ಆ ಬಾಕಿ ನಾವೇನುಕೊಟ್ಟರೂ ತೀರುವುದಿಲ್ಲ. ಆದ್ದರಿಂದ ಕೊಡುವುದೆನ್ನುವುದೇ ಅಲ್ಲದೆ, ಕೈಲಾದಷ್ಟು ಮಾಡುವುದೂ ಸಹ ಕರ್ತವ್ಯವೇ. ಗುರು ಋಣ ಅಷ್ಟು ಸುಲಭವಾಗಿ ತೀರುವುದಲ್ಲ. ಆದ್ದರಿಂದ ಪೂರ್ವದ ಹಿರಿಯರು ತಮಗಿರುವ ಸರ್ವವೂ ಗುರುವಿನದೇ ಎಂದಿದ್ದಾರೆ.

**ಪ್ರ. : ಪ್ರಪಂಚದಲ್ಲಿ ಎಷ್ಟೋ ಗುರುಗಳಿದ್ದಾರೆ, ಅವರಲ್ಲಿ ನಿಜವಾದ ಗುರುವ್ಯಾರೋ ತಿಳಿದರೆ ನೀನಂದಹಾಗೆ ನಡೆದುಕೊಳ್ಳಬಹುದು. ಇಷ್ಟು ಜನರಲ್ಲಿ ನಿಜಗುರುವಾಗಿ ಯಾರನ್ನು ತಿಳಿಯಬಹುದು. ಯಾರೋ ಬರೆದ ಗ್ರಂಥವನ್ನು ಓದಿ ಅದರಲ್ಲಿನ ವಿಷಯಗಳನ್ನು ಹೇಳುವವನು ಗುರುವಾ? ಅಥವಾ ಸ್ವತಃ ತಿಳಿದವನು ಗುರುವಾ?**

**ಉ. :** ಯಾರೋ ಬರೆದಿರುವುದು, ಯಾರೋ ಹೇಳಿರುವುದಾದ ವಿಷಯವನ್ನು ಹೇಳುವವನು ಕೇವಲ ಬೋಧಕನೇ ಆಗುತ್ತಾನೆ. ಗುರುವಿಗೂ ಬೋಧಕನಿಗೂ ಬಹಳ ವ್ಯತ್ಯಾಸವಿದೆ. ಗುರುವು ಎಂದಿಗೂ ಇತರರು ಹೇಳಿದ್ದನ್ನು, ಬರೆದಿದ್ದನ್ನು ಹೇಳುವುದಿಲ್ಲ. ಯಾರಿಗೂ ತಿಳಿಯದ ವಿಷಯ ಹೇಳುವವನು ಗುರುವು. ಗುರುವು ಹೇಳಿದ್ದನ್ನು ಬೋಧಿಸಿದವರು ಬೋಧಕರು. ಬೋಧಕರು ಎಷ್ಟಾದರೂ ತಯಾರಾಗಬಹುದು. ಆದರೆ ಗುರುಗಳು ಕೆಲವರೇ ಆಗುತ್ತಾರೆ. ಒಂದು ಊರಿಂದ ಮತ್ತೊಂದು ಊರಿಗೆ ದಾರಿಯನ್ನು ಏರ್ಪಡಿಸಿ ಅದನ್ನು ನಿರ್ಮಿಸುವವನು ಒಬ್ಬನಾದರೆ, ಆ ದಾರಿಯನ್ನು ತೋರಿಸುವವರು, ಆ ದಾರಿ ವಿವರ ತಿಳಿಸುವವರು ಎಷ್ಟಾದರೂ ಇರಬಹುದು. ಅವರು ತೋರಿಸಿದ ದಾರಿಯಲ್ಲಿ ಮತ್ತೆಷ್ಟಾದರೂ ಪ್ರಯಾಣಿಸಬಹುದು. ನಡೆಯುವವನಿಗಿಂತ ದಾರಿಯನ್ನು ತೋರಿಸುವವನು ದೊಡ್ಡವನು. ದಾರಿಯನ್ನು ತೋರಿಸುವವನಿಗಿಂತ ಮೊದಲು ದಾರಿಯನ್ನು ಕಂಡುಕೊಂಡು ನಿರ್ಮಿಸಿದವನು ಎಲ್ಲರಿಗಿಂತ ದೊಡ್ಡವನು. ಹೊರಡುವ ಸ್ಥಳವು ಪ್ರಪಂಚ ಅಥವಾ ಪ್ರಕೃತಿ ಆದಾಗ, ಗಮ್ಯ ಮೋಕ್ಷ ಅಥವಾ ದೇವರು. ಪ್ರಪಂಚದಿಂದ ದೇವರವರೆಗು ಸೇರುವ ಮಾರ್ಗವನ್ನು ಮೊದಲು ಕಂಡುಹಿಡಿದು ಅದನ್ನು ಶಾಸ್ತ್ರಬದ್ಧವಾಗಿ ನಿರ್ಮಿಸಿದವನು ಗುರುವು. ಹಾಗೆ ನಿರ್ಮಿಸಿದ್ದನ್ನು ಕುರಿತು ಎಷ್ಟು ಜನರಾದರೂ ಹೇಳಬಹುದು. ಹಾಗೆ ಹೇಳುವವರು ಬೋಧಕರು. ಶಾಸ್ತ್ರಬದ್ಧವಾದ ಸೂತ್ರವನ್ನು ಕಂಡುಕೊಳ್ಳುವವನು ಒಬ್ಬನೇ.

ಅದನ್ನು ಎಷ್ಟು ಜನರಾದರೂ ಹೇಳಿಕೊಳ್ಳಬಹುದು. ಮತ್ತು ಎಷ್ಟುಜನರಾದರೂ ಆಚರಿಸಬಹುದು. ಪ್ರಪಂಚದಲ್ಲಿ ಒಂದು ವಿಷಯವನ್ನು ಕಂಡುಕೊಳ್ಳುವವನು ಬೇರೆ, ಅದೇ ವಿಷಯವನ್ನು ಬೋಧಿಸುವವನು ಬೇರೆ. ಕಂಡುಕೊಂಡವನನ್ನು ಪರಿಶೋಧಕನು ಎನ್ನುತ್ತಾರೆ. ಅದೇ ವಿಷಯವನ್ನು ಇತರರಿಗೆ ತಿಳಿಸುವವನನ್ನು ಬೋಧಕನು ಎನ್ನುತ್ತಾರೆ. ಹಾಗೇ ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಷಯವನ್ನು ಶೋಧಿಸಿ ಮೊಟ್ಟಮೊದಲಿಗೆ ತಿಳಿಸುವವನು ಗುರುವು. ನಂತರ ಅದನ್ನು ಎಷ್ಟು ಜನ ತಿಳಿಸುತ್ತಾ ಹೋದರೂ ಅವರು ಕೇವಲ ಬೋಧಕರು. ಬೋಧಕರಿಗೂ ಗುರುಗಳಿಗೂ ಬಹಳ ವ್ಯತ್ಯಾಸವಿದ್ದರೂ, ಗುರುತು ಹಿಡಿಯಲಾರದ ಸ್ಥಿತಿಯಲ್ಲಿ ಪ್ರಜೆಗಳಿರುವುದರಿಂದ, ಆಧ್ಯಾತ್ಮಿಕತೆಗೆ ಅಲಸಾದ ಗುರುಗಳಿಗೆ ಸಮಾಜದಲ್ಲಿ ಬೆಲೆ ಇಲ್ಲದೆ ಹೋಗಿದೆ.

**ಪ್ರ. : ನಿಮ್ಮ ಮಾತಿನ ಪ್ರಕಾರವಾದರೆ ಗುರುಗಳೇ ಬಹಳ ಕಡಿಮೆ. ಬೋಧಕರೇ ಹೆಚ್ಚಾಗಿದ್ದಾರೆನ್ನುವ ಮಾತು. ಹಾಗಾದರೆ ಪ್ರಸ್ತುತ ಕಾಲದಲ್ಲಿ ಎಲ್ಲಾ ಬೋಧಕರೇ ಆಗುತ್ತಾರೆ. ಗುರುವು ರಾಜ್ಯಕ್ಕೆ ಒಬ್ಬನು ಸಹ ಸಿಗುವುದು ಅಪರೂಪ.**

ಉ. ರಾಜ್ಯಕ್ಕೆ ಅಲ್ಲ ದೇಶಕ್ಕೊಬ್ಬನು ಸಿಗುವುದು ಸಹ ಅಪರೂಪವೆ.

**ಪ್ರ. : ಹಾಗಾದರೆ ಈಗ ನಮ್ಮ ಗುರುವು ಬೋಧಕನಾ ಅಥವಾ ಗುರುವಾ?**

ಉ. : ಆ ವಿಷಯ ಸ್ವತಃವಾಗಿ ಯಾರಿಗೆ ಅವರು ತಿಳಿದುಕೊಳ್ಳಬೇಕಾಗಿರುವುದು. ಇದಕ್ಕೂ ಮೊದಲೇ ಹೇಳಿದ್ದೇನೆ ತಾನೆ ಗುರುವಿಗು ಬೋಧಕನಿಗೂ ಬಹಳ ವ್ಯತ್ಯಾಸವಿರುತ್ತದೆಂದು.

**ಪ್ರ. : ನಮ್ಮ ಊರಲ್ಲಿ ಒಬ್ಬ ವ್ಯಕ್ತಿ ವಿಕರಣ ಮಹರ್ಷಿ ಭಕ್ತನಿದ್ದು, ಆತನು ಬೋಧೆಗಳನ್ನೇ ಹೇಳುತ್ತಾ, ಕಾಷಾಯ ವಸ್ತ್ರವನ್ನು ಧರಿಸಿ, ಊರಿಗೆ ಉತ್ತರಾಣ ಹಳ್ಳದ ಬದಿಯಲ್ಲಿ ವಿಕರಣ ಮಹರ್ಷಿ ಹೆಸರಿನ ಮೇಲೆ ಹಣ ವಸೂಲು ಮಾಡಿ, ಆಶ್ರಮವನ್ನು ಸಹ ಕಟ್ಟಿಸಿದ್ದಾನೆ. ಆತನನ್ನು ನಾನು ಗುರುವೇ ಎಂದುಕೊಂಡಿದ್ದೆ, ಆದರೆ ಕೇವಲ ಬೋಧಕನೇ ಎನ್ನುವ ಮಾತು.**

ಉ. : ಆತನು ವಿಕರಣ ಮಹರ್ಷಿ ಭಕ್ತನೆಂದು ನಿನ್ನ ಬಾಯಿಂದ ನೀನೆ ಹೇಳುತ್ತಿದ್ದೀಯಲ್ಲ! ಗುರುವೆನ್ನುವವನು ಎಂದಿಗೂ ಯಾವ ಸ್ವಾಮಿಗೂ ಭಕ್ತನಾಗಿ ಇರುವುದಿಲ್ಲ. ಆತನು ಸ್ವತಃವಾಗಿ ಪರಮಾತ್ಮನ ಮೇಲೆ ಭಕ್ತಿ ಶ್ರದ್ಧೆ ಹೊಂದಿರುತ್ತಾನೆ. ಕಾಣಿಸದ ದೇವತೆಗಳಿಗೂ, ಕಾಣಿಸುವ ಮನುಷ್ಯರಿಗೂ ಭಕ್ತನಾಗಿ ಗುರುವು ಇರುವುದಿಲ್ಲ. ಪ್ರಪಂಚವೆಲ್ಲಕ್ಕೂ

ದೊಡ್ಡವನಾದವನು ಯಾರಿರುವನೋ ಅವನನ್ನು ಆರಾಧಿಸುವವನೇ ಗುರುವು. ಉಳಿದವರು ಬೋಧಕರಾಗಬಹುದು.

**ಪ್ರ. : ಹಾಗಾದರೆ ನಮ್ಮ ಗುರುಗಳು ಸಹ ಶ್ರೀ ಕೃಷ್ಣನನ್ನು, ಯೇಸು ಪ್ರಭುವನ್ನು ಗೌರವಿಸಿ ಹೆಚ್ಚಾಗಿ ಅವರ ಬೋಧನೆಯನ್ನು ಹೇಳುತ್ತಿರುತ್ತಾರಲ್ಲ! ಹಿಂದೆ ಯಾವಾಗಲೊ ಹುಟ್ಟಿ ಹೋದ ಯೇಸು ಪ್ರಭು ಕೃಷ್ಣನು ಇಬ್ಬರು ಮನುಷ್ಯರೇ ತಾನೆ! ಮನುಷ್ಯರನ್ನು ಕುರಿತು ಹೇಳುವ ವನಾದ್ದರಿಂದ ಬೋಧಕನೇ ಎನ್ನಬಹುದು.**

**ಉ.** ಹಾಗೆಂದು ನೀನಂದುಕೊಂಡರೆ ಕೆಸರಲ್ಲಿ ಕಾಲು ಹಾಕಿದಹಾಗೆ.

**ಪ್ರ. : ನೀನು ಹೇಳಿದಹಾಗೇ ಅಲ್ಲವೆ! ನನ್ನದೇನು ತಪ್ಪೇನಿದೆ.**

**ಉ. :** ಶ್ರೀ ಕೃಷ್ಣನು, ಯೇಸು ಪ್ರಭುವು ಸಾಮಾನ್ಯ ಮಾನವರಲ್ಲ. ಪ್ರಪಂಚವೆಲ್ಲಾ ವ್ಯಾಪಿಸಿ ಇರುವ ಪರಮಾತ್ಮ ಅಂಶವೇ ಎಂದು ತಿಳಿಯಿರಿ. ಮಾನವ ಶರೀರದೊಳಗೆ ಬಂದಿರುವ ಪರಮಾತ್ಮವೊಂದರ ಪ್ರತಿ ರೂಪಗಳೆಂದುಕೊಳ್ಳಿ. ಅವರನ್ನು ಗೌರವಿಸುವುದರಲ್ಲಿ ಗುರುವಿಗೆ ಯಾವ ಲೋಪ ಇಲ್ಲ.

**ಪ್ರ. : ಶ್ರೀ ಕೃಷ್ಣನ ಬೋಧನೆಯಲ್ಲಿ, ಪ್ರಭುವು ಬೋಧನೆಯಲ್ಲಿ ಬೋಧಿಸುತ್ತಾನೆಂದಿದ್ದೀಯಲ್ಲ! ಹಾಗಾದರೆ ಬೋಧಕನೇ ಅಲ್ಲವೆ! ಗುರುವಲ್ಲ ತಾನೆ?**

**ಉ.** ನಿನ್ನ ತಲೆಗೆ ಎಲ್ಲಾ ವಿರುದ್ಧತೆಯ ಆಲೋಚನೆಗಳೆ ಬರುತ್ತಿರುತ್ತವೆ. ನಮ್ಮ ಗುರುವು ಗುರುವಲ್ಲದೆ ಹೋಗುವುದೇನು. ಅವರು ಹೇಳಿದ ಬೋಧನೆಗಳೆಲ್ಲವು ಹೊಸ ವಿಷಯಗಳೇ. ಕೃಷ್ಣನ, ಪ್ರಭುವಿನ ಬೋಧನೆಗಳು ಒಂದೇ ಎಂದು ಹೇಳುತ್ತಿದ್ದಾನೆ, ಅವುಗಳ ಹೋಲಿಕೆ ಹೇಳಿದ್ದಾನೆ. ಅಷ್ಟೇ ಅಲ್ಲದೆ ಒಂದಲ್ಲ, ಎರಡಲ್ಲ, ನೂರಾರು ವಿಷಯಗಳು ಯಾರು ಹೇಳದಿರುವವು ಹೇಳಿದ್ದಾನೆ. ಅಷ್ಟೇಕೆ ಆತನ ಪ್ರತಿ ಬರವಣಿಗೆಯಲ್ಲೂ, ಪ್ರತಿ ಬೋಧನೆಯಲ್ಲೂ ಹೊಸ ತನವಿರುತ್ತದೆ. ಈಗ ನಿನಗೆ ನಾನು ಹೇಳಿದ ಗುರುವು ಬೋಧಕರ ಕುರಿತ ವ್ಯತ್ಯಾಸವನ್ನು ಸಹ ಆತನೇ ಹೇಳಿದ್ದಾನೆ. ಇದು ಹೊಸ ವಿಷಯ ಅಲ್ಲವೆ! ಸರ್ವ ಜೀವರಾಶಿಗಳು ಬಹಳ ಮುಖ್ಯವಾಗಿ ತಿಳಿಯಬೇಕಾದ ಕರ್ಮ, ಕಾಲ, ಗುಣಚಕ್ರಗಳ ಗಮನಗಳು, ಆಕಾರಗಳು ಹೇಳಿದವನು ನಮ್ಮ ಗುರುವು ತಾನೆ! ಇಲ್ಲಿಯವರೆಗು ಜೀವಾತ್ಮನಿಗೆ ಆಕಾರವಿದೆ ಎಂದು, ಆತ್ಮಕ್ಕೂ ಸಹ ಆಕಾರವಿದೆಯೆಂದು ಮನಸ್ಸಿಗು ಆಕಾರವಿದೆಯೆಂದು ಹೇಳಿದವರಿದ್ದಾರಾ? ಹೀಗೆ ಎಷ್ಟೋ ವಿಷಯಗಳು ತಿಳಿಸಿದ ಗುರುವನ್ನು ಗ್ರಹಿಸಲಾರದ

ನಿನ್ನ ಬುದ್ಧಿ ಬಹಳ ಮಂದವಾದದ್ದೆಂದು ಹೇಳಬಹುದು. ಅಂತಹವನ ಹತ್ತಿರ ಸೇರಿ ಕೆಲಸಗಳು ಮಾಡಬೇಕಾ ಎಂದುಕೊಳ್ಳುವುದು ನಿನ್ನ ಕುರುಡುತನಕ್ಕೆ ನಿದರ್ಶನ. ಆತನು ಹೇಳಬೇಕೆ ಹೊರತು ನಾವು ಮಾಡದೇ ಹೋಗುವುದು ನಮ್ಮ ದುರದೃಷ್ಟ.

**ಪ್ರ. : ಹಾಗಾದರೆ ನನ್ನದು ತಪ್ಪೇ. ನಾನು ತಪ್ಪಾಗಿ ಅರ್ಥೈಸಿಕೊಂಡಂತೆ ಅಲ್ಲವೆ!**

**ಉ.** ಹೊರಗೆ ಹೇಳದೇ ಹೋದರು ನಿನ್ನ ಅಂತರಂಗದಲ್ಲಿ ಒಪ್ಪಿಕೊಂಡರೂ ಪರವಾಗಿಲ್ಲ.

**ಪ್ರ. : ನನ್ನದು ಒಂದು ಸಣ್ಣ ಪ್ರಶ್ನೆ. ಸಜೀವವಾಗಿ ಪ್ರಸ್ತುತವಿರುವ ಗುರುಗಳೇ ಅಲ್ಲದೆ ಪೂರ್ವದಲ್ಲಿ ಎಷ್ಟೋ ಗುರುಗಳು ಇರುತ್ತಿದ್ದರಲ್ಲ! ಅಂತಹ ಗುರುಗಳಲ್ಲಿ ಒಬ್ಬ ಗುರುವೊಂದರ ಪೋಟೋವನ್ನು ಇಟ್ಟುಕೊಂಡು ಆತನನ್ನೇ ಗುರುವಾಗಿ ಬಾವಿಸಿಕೊಂಡು ಕೆಲವರು ಗುರುಗಳಾಗಿ ಚಲಾವಣೆ ಆಗುತ್ತಿದ್ದಾರೆ. ಇವರು ಯಾವು ವರ್ಗಕ್ಕೆ ಸೇರಿದವರು?**

**ಉ.** ಫೋಟೋ ಇಟ್ಟುಕೊಂಡು ಗುರುಗಳಾಗುವುದು ಬಹಳ ಸುಲಭ. ಪೂರ್ವದ ಗುರುಗಳು ಎಂತಹವರಾದರೂ ಅವರ ಫೋಟೋ ಇಟ್ಟುಕೊಳ್ಳುವುದರಿಂದ ಇವರು ಗುರುಗಳಾಗುವುದಿಲ್ಲ. ಪೂರ್ವಿಕರಾದರೂ ಈಗಿನವರಾದರೂ ಗುರುಗಳಾಗುವರೋ ಅಲ್ಲವೋ ಮೊದಲು ಹೇಳಿದ ಸೂತ್ರವನ್ನನುಸರಿಸಿ ಹೇಳಬಹುದು. ಭೂಮಿ ಮೇಲೆ ನಾವು ಗುರುಗಳೆಂದು ಎಷ್ಟು ಜನರಾದರೂ ಹೇಳಬಹುದು. ನಾವು ಮಾತ್ರ ಬಹಳ ಜಾಗ್ರತೆಯಾಗಿ ಶಿಷ್ಯರಾಗಬೇಕು. ನಿಜ ಗುರುವು ಸಿಗುವುದು ಕಷ್ಟ. ಸಿಕ್ಕರೂ ಶಿಷ್ಯರಾಗಿ ಇರುವುದು ಮತ್ತಷ್ಟು ಕಷ್ಟ. ಆದ್ದರಿಂದ ನಿಜ ಗುರುವು ಹತ್ತಿರ ಕಡಿಮೆ ಶಿಷ್ಯರೇ ಇರುತ್ತಾರೆ.

**ಪ್ರ. : ಈ ದಿನ ಗುರುಗಳು ಊರೂರು ತಿರುಗಿ ಉಪದೇಶವನ್ನು ಕೊಡುತ್ತಾ ಹೋಗಿ ಶಿಷ್ಯರ ಸಂಖ್ಯೆಯನ್ನು ಬೆಳೆಸುಕೊಳ್ಳುತ್ತಾ ಇದ್ದಾರೆ, ನಿಜ ಗುರುವು ಶಿಷ್ಯರನ್ನು ಕಡಿಮೆ ಮಾಡಿಕೊಳ್ಳುವುದೇನು?**

**ಉ. :** ನಿಜ ಗುರುವು ತನ್ನ ಶಿಷ್ಯರನ್ನು ಒಂದು ಸಲ ಉಪದೇಶವನ್ನು ಕೊಟ್ಟು ಬಿಡುವುದಿಲ್ಲ. ಅವರನ್ನು ಜ್ಞಾನಿಗಳಾಗಿ ಮಾಡುವುದಕ್ಕೆ ಅನೇಕ ವಿಧಗಳ ಪ್ರಯತ್ನ ಮಾಡುತ್ತಿರುವನು. ಆ ಪ್ರಯತ್ನದಲ್ಲಿ ಮಾತು ಮಾತಿಗೆ ನಿಮ್ಮಲ್ಲಿ ಇಷ್ಟು ಅಜ್ಞಾನ ಉಳಿದಿದೆ ಎನ್ನುವಂತೆ, ಅವರ ತಪ್ಪುಗಳನ್ನು ಹೊರ ಬೀಳುವಹಾಗೆ ಮಾಡುತ್ತಿರುವನು. ಆದ್ದರಿಂದ ಆ ಶಿಕ್ಷಣಕ್ಕೆ ಕೆಲವರು ತಾಳಲಾರದೆ ಮಧ್ಯದಲ್ಲೇ ಜಾರಿಕೊಳ್ಳುತ್ತಾರೆ. ಆದ್ದರಿಂದ ಶಿಷ್ಯರ ಸಂಖ್ಯೆ ಕಡಿಮೆ ಎಂದು ಹೇಳಬಹುದು. ಅವರ ಕಥೆ ಹೇಗಾದರೂ ಇರುತ್ತದಾಗಲಿ ನಿನ್ನ ಪರಿಸ್ಥಿತಿ ಏನು?

ನೀನು ಹೇಳಿರುವುದನ್ನು ಅನುಸರಿಸಿ ನೋಡಿದರೆ ನಾನು ಗುರುವು ಹತ್ತಿರ ಬಹಳ ತಪ್ಪುಗಳನ್ನು ಮಾಡಿದ್ದೇನೆ. ಇನ್ನು ಮುಂದೆ ಎಂತಹ ತಪ್ಪನ್ನು ಮಾಡದೇ ಪ್ರವರ್ತಿಸುವೆನೆಂದು ತಿಳಿದುಕೊಳ್ಳುತ್ತಿದ್ದೇನೆ. ಚೆನ್ನಾಗಿ ಸೇವೆ ಮಾಡಿಕೊಳ್ಳುತ್ತೇನೆ.

ಈ ವಿಧವಾಗಿ ಆ ಇಬ್ಬರ ಶಿಷ್ಯರ ನಡುವೆ ಸಂಭಾಷಣೆ ನಡೆದಿದೆ. ಈ ಸಂಭಾಷಣೆ ಯಿಂದ ಮುಖ್ಯವಾಗಿ ತಿಳಿದಿರುವುದೇನೆಂದರೆ! ಗುರುವು ಬೋಧಕರ ಮಧ್ಯೆ ವ್ಯತ್ಯಾಸ ತಿಳಿದಿದೆ. ಅಷ್ಟೇ ಅಲ್ಲದೆ ನಿಜವಾದ ಗುರುವು ದೊರಕಿದಾಗ ಮಾಯೆಗೆ ಒಳಗಾಗದೆ, ನಮ್ಮ ತಲೆಯಲ್ಲಿನ ಗುಣಗಳ ಹಿಂದೆ ಹೋಗದೆ, ಗುರುವನ್ನೇ ಅನುಸರಿಸಬೇಕೆಂದು ತಿಳಿಯುತ್ತಿದೆ ಅಲ್ಲವೆ!

ಮೇಲಿನ ವಿಷಯವನ್ನು ಅನುಸರಿಸಿ ನೋಡಿದರೆ ಪರಮಾತ್ಮವೊಂದರ ಅಂಶ (ಭಾಗ) ವಾಗಿ ಹುಟ್ಟಿದವನೇ ಗುರುವೆಂದು ತಿಳಿಯುತ್ತಿದೆ. ಗುರುವನ್ನು ದೊಡ್ಡ ಭಾವದಿಂದ ನೆನೆದಾಗ ಆತನ ಜ್ಞಾನಕ್ಕೋಸ್ಕರ ಖರ್ಚು ಮಾಡಿದರು, ತನಗಾಗಿಯೇ ಖರ್ಚು ಮಾಡಿದರು, ತಾನು ಮತ್ಯಾವ ಇತರ ಕೆಲಸಗಳಿಗೆ ಖರ್ಚು ಮಾಡಿದರೂ, ಅದು ಎಲ್ಲವೂ ಆತನಿಗೇ ವಿನಿಯೋಗವಾದಹಾಗೆ ಭಾವಿಸಬೇಕು. ಮಾಯೆಗೆ ಯಾವ ವಿನಿಯೋಗಪಡಲಿಲ್ಲವೆಂದು, ಗುರುವಾದರೂ ಪರಮಾತ್ಮ ಆದರೂ ಒಬ್ಬನೇ ಎನ್ನುವ ಸೂತ್ರದ ಪ್ರಕಾರ, ಎಲ್ಲಾ ದೇವರಿಗೇ ವಿನಿಯೋಗಿಸಲಾಗಿದೆಯೆಂದು ಭಾವಿಸಬೇಕು. ಗುರುವು ಸಿಗುವುದೇ ಅಪರೂಪ. ಗುರುವು ದೊರಕಿದರೂ ಆತನಿಗೆ ಖರ್ಚು ಮಾಡುವುದು ಮತ್ತೂ ಅಪರೂಪ. ಈಗ ಗುಡಿ ಗೋಪುರಗಳಿಗೆ ಖರ್ಚು ಮಾಡುವವರೆಲ್ಲಾ ಯಾರಿಗೆ ಮಾಡುತ್ತಿದ್ದಾರೋ ಆಲೋಚಿಸಬೇಕು.

**865. (10) ಭೂಮಿ ಮೇಲೆ ಗುರುವು ಬೋಧಕನು ಎನ್ನುವವರಿದ್ದಾರೆ. ಅವರಲ್ಲಿ ಭೂಮಿ ಮೇಲೆ ಯಾವಾಗಲೂ ಇರುವವನು ಗುರುವಾ, ಬೋಧಕನಾ?**

ಉ. ಬೋಧಕನು.

**ವಿವರ :** ಗುರುವು ಎನ್ನುವವನು ಭೂಮಿ ಮೇಲೆ ನೂರು ಸಂವತ್ಸರಗಳಿಗೋ ಸಾವಿರ ಸಂವತ್ಸರಗಳಿಗೋ ಬರುವನು. ಏಕೆಂದರೆ ಗುರುವು ಪರಮಾತ್ಮ ಅಂಶದೊಂದಿಗೆ ಹುಟ್ಟುವವನು. ಪರಮಾತ್ಮ ಅಂಶ ತನಗೆ ಬೇಕಾದಾಗ ಮಾನವರೂಪವಾಗಿ ಭೂಮಿ ಮೇಲೆ ಹುಟ್ಟುತ್ತಿರುವನು. ಅವನನ್ನೇ ಜಗದ್ಗುರುವೆಂದು, ಗುರುವು ಎಂದು ಕರೆಯುತ್ತೇವೆ. ಹಾಗಲ್ಲದೆ ಮಾನವನು ಸಹಜವಾಗಿ ಹುಟ್ಟಿ ಸ್ವಲ್ಪ ವಿದ್ಯೆ ಕಲಿತು ಅದನ್ನು ಇತರರಿಗೆ

ಹೇಳುವುದನ್ನು ಅನುಸರಿಸಿ ಆತನನ್ನು ಬೋಧಕನು ಎನ್ನುತ್ತೇವೆ. ಬೋಧಕರು ಯಾವಾಗಲೂ ಭೂಮಿ ಮೇಲೆ ಇರಬಹುದು. ಆದರೆ ಗುರುವು ಯಾವಾಗಲೂ ಭೂಮಿ ಮೇಲೆ ಇರುವುದಿಲ್ಲ.

## ಜ್ಞಾನ ಪರೀಕ್ಷೆ

**ನರಸಾಪುರ** **ದಿನಾಂಕ–26–05–2002**

**866. (1) ಎಲ್ಲಾ ಇವೆ ಮುತ್ತೈದೆತನವಿಲ್ಲವೆಂದು ಹೇಳುತ್ತಾರೆ ಐದೋ ತನ ಯಾವುದು?**

ಉ. ಮೋಕ್ಷ.

**ವಿವರ :** ಜೀವಾತ್ಮನಿಗೆ ಭೂಮಿ ಮೇಲೆ ನಾಲ್ಕು ವಿಧಗಳ ತರಗತಿಗಳು ಇವೆ. ಅವು ಒಂದು ತಾಮಸ, ಎರಡು ರಾಜಸ, ಮೂರು ಸಾತ್ವಿಕ, ನಾಲ್ಕು ಯೋಗ. ಈ ನಾಲ್ಕು ತನಗಳಲ್ಲದೆ ಐದೋ ತನ ಸಹ ಇದೆ. ಪ್ರಪಂಚದಲ್ಲಿ ನಾಲ್ಕು ವಿಧಾನಗಳನ್ನು ಹೊಂದಬಹುದು ಆದರೆ ಐದನೇ ವಿಧಾನವನ್ನು ಹೊಂದಲಾರರು. ಇವುಗಳನ್ನು ತರಗತಿಗಳಾಗಿ ವಿಭಜಿಸಿ ನೋಡಿದರೆ ಮೊದಲು ಮೂರು ಪ್ರಪಂಚ ಸಂಬಂಧ ಗುಣಗಳಾದಾಗ, ನಾಲ್ಕನೆಯದು ದೈವ ಸಂಬಂಧ ಯೋಗವಾಗಿ ಇದೆ. ಪ್ರಜೆಗಳೆಲ್ಲರು ಮೊದಲಿರುವ ಮಾಯೆಗೆ ಸಂಬಂಧಿಸಿದ ಗುಣಗಳಲ್ಲೇ ಹೆಚ್ಚಾಗಿ ಇದ್ದಾರೆ. ಸಾವಿರ ಮನೆಗೊಬ್ಬನು ಅದು ಅಪುರೂಪವಾಗಿ ನಾಲ್ಕನೆಯ ವಿಧಾನವಾದ ಯೋಗದಲ್ಲಿ ಇದ್ದಾರೆ. ಪ್ರಪಂಚ ಸಂಬಂಧ ಗುಣಗಳು, ದೈವಸಂಬಂಧವಾದ ಯೋಗವನ್ನು ಹೊಂದಿರುವವನನ್ನು ಎಲ್ಲಾ ಇರುವವನಾಗಿ ಲೆಕ್ಕಿಸಬಹುದು. ಜಗತಿಯಲ್ಲಿ ಎಲ್ಲಾ ಇದ್ದರೂ ಐದನೆಯದಾದ ಮೋಕ್ಷ ಮಾತ್ರ ಇರುವುದಿಲ್ಲ. ಅದು ಬದುಕಿರುವ ಯಾರಿಗೂ ಇಲ್ಲದಿರುವುದು. ಕರ್ಮ ಮುಗಿದವನಿಗೆ ಸತ್ತುಹೋದ ನಂತರ ಲಭಿಸುವುದು. ಬದುಕಿರುವವನು ಯೋಗಿಯಾದರೂ ಪ್ರಸ್ತುತ ಅವನಿಗೆ ಮೋಕ್ಷ ಇಲ್ಲವಾದ್ದರಿಂದ ಎಲ್ಲಾ ಇದ್ದರೂ ಐದೋ ತನ ಇಲ್ಲ ಎಂದಿದ್ದಾರೆ. ಐದೋ ತನವೆಂದರೆ ಮೋಕ್ಷವೆಂದು ತಿಳಿಯಬೇಕು. ಪ್ರಪಂಚಕ್ಕೆ ಪತಿಯಾದ ಪರಮಾತ್ಮನನ್ನು ಹೊಂದಿದ ಜೀವಾತ್ಮ ಮುತ್ತೈದೆತನವನ್ನು ಹೊಂದಿದಹಾಗಾಗುತ್ತದೆ. ಜೀವಾತ್ಮನು ಮಾಯೆಯಲ್ಲಿ ಇರುವ ಸ್ತ್ರೀಯೆಂದು ತನ್ನ ಪತಿಯನ್ನು ಸೇರಿದಾಗ ಐದನೇತನ ಸಿಗುವುದೆಂದು ತಿಳಿಯಬೇಕು. ಹಾಗಲ್ಲದೆ ಪ್ರಪಂಚ ಸಂಬಂಧವಾದ ಸೌಭಾಗ್ಯವೆಂದು ಭಾವಿಸಬಾರದು.

**867. (2) ಹೆಂಗಸರಿಗೆ ಮುತ್ತೈದೆತನ ಮುಖ್ಯವೆನ್ನುತ್ತಾರೆ ಏಕೆ?**

ಉ. ಮೋಕ್ಷವೆನ್ನುವ ಭರ್ತ (ಪತಿ) ಬೇಕಾಗಿರುವುದರಿಂದ.

**ವಿವರ :** ಒಬ್ಬ ಸ್ತ್ರೀಗೆ ಪತಿ ಎಷ್ಟು ಮುಖ್ಯವೋ, ಜೀವಾತ್ಮನಿಗೆ ಮೋಕ್ಷವೆನ್ನುವ ಪತಿ ಸಹ ಅಷ್ಟೇ ಮುಖ್ಯ, ಸೌಭಾಗ್ಯ ಎಂದರೆ ಎಲ್ಲದನ್ನು ಮೀರಿದ ದೊಡ್ಡ ಭಾಗ್ಯ. ಎಲ್ಲವನ್ನು ಮೀರಿದ ಭಾಗ್ಯ ಪರಮಾತ್ಮ. ಪತಿ ಸಿಗುವವರೆಗೂ ಸ್ತ್ರೀ ಹುಡುಕುವಂತೆ ಜಗದ್ಭರ್ತನಾದ ಪರಮಾತ್ಮ ಸಿಗುವವರೆಗು ಜೀವಾತ್ಮ ಹುಡುಕಬೇಕಾಗಿದೆ. ಹೆಂಡತಿಗೆ ಗಂಡ ಆಧಾರವಾದಹಾಗೆ ಜೀವಾತ್ಮನಿಗೆ ಪರಮಾತ್ಮ ಆಧಾರವಾಗಿದ್ದಾನೆ. ಹೆಸರಿಗೆ ಮಾತ್ರ ನನಗೂ ಗಂಡ ಇದ್ದಾನೆಂದರೆ ಆತನನ್ನು ನಿಜವಾಗಿ ತಿಳಿಯಬೇಕಾಗಿದೆ. ಪ್ರತಿ ಜೀವಾತ್ಮ ಎಂದಿಗಾದರೂ ಎಷ್ಟು ಯುಗಗಳಿಗಾದರೂ ಪರಮಾತ್ಮನನ್ನು ಸೇರಬೇಕಾದ್ದೇ, ಹಾಗೆ ಸೇರುವವರೆಗು ಈ ಕರ್ಮ ಜನ್ಮಗಳು ತಪ್ಪುವುದಿಲ್ಲ. ಆದ್ದರಿಂದ ಪ್ರಕೃತಿ ಲಕ್ಷಣಗಳು ಹೊಂದಿ ಸ್ತ್ರೀಯರಾದ ನಮಗೆ, ಐದನೆತನವಾದ ಮೋಕ್ಷವೆಂಬ ಪರಮಾತ್ಮನು ಬಹಳ ಮುಖ್ಯ. ಅದಕ್ಕಾಗಿ ಕೆಲವರು ಸ್ವಾಮೀಜಿಯರು ಪೀಠಾಧಿಪತಿಗಳು ಭಕ್ತರು ಯೋಗಿಗಳು ಪ್ರಯತ್ನಿಸುತ್ತಿದ್ದಾರೆ. ಎಲ್ಲರೂ ಗಂಡನ (ಮೋಕ್ಷದ) ಬೆಲೆಯನ್ನು ತಿಳಿದು ಆತನಿಗೋಸ್ಕರ ಪ್ರಯತ್ನಿಸಬೇಕು.

**868. (3) ಒಂದು ಸಲ ಹೋಗಿರುವುದು ಯಾವುದು, ಮತ್ತೆ ಸಿಗುವುದು ಯಾವಾಗ?**

ಉ. ಹೋಗಿರುವುದು ಪರಮಾತ್ಮ, ಸಿಗುವುದು ಮೋಕ್ಷಹೊಂದಿದಾಗ.

**ವಿವರ :** ಪರಮಾತ್ಮ ನಿಂದ ಬಿಡುಗಡೆಯಾಗಿ ಜೀವಾತ್ಮನಾಗಿ ಬದಲಾದಾಗ ಪರಮಾತ್ಮನನ್ನು ಕಳೆದುಕೊಂಡಿದ್ದೇವೆ. ಒಂದೇ ಒಂದು ಸಲ ಕಳೆದುಕೊಂಡಿರುವುದು ಪರಮಾತ್ಮನನ್ನು. ಹೋದ ಪರಮಾತ್ಮ ತಿರುಗಿ ಮೋಕ್ಷ ಹೊಂದಿದಾಗಲೆ ಲಭಿಸುವನು. ಪರಮಾತ್ಮ ಮಾತುಮಾತಿಗೂ ಹೋಗುವುದಲ್ಲ, ಮಾತುಮಾತಿಗೂ ಸಿಗುವುದು ಅಲ್ಲ. ಜೀವನದಲ್ಲಿ ಎಷ್ಟೋ ಕಳೆದುಕೊಳ್ಳುತ್ತಿದ್ದೇವೆ. ಎಲ್ಲದಕ್ಕಿಂತ ಬೆಲೆಯುಳ್ಳದ್ದು, ಎಲ್ಲದಕ್ಕಿಂತ ಮೀರಿರುವುದನ್ನು ಮೊಟ್ಟಮೊದಲು ಕಳೆದುಕೊಂಡಿದ್ದೇವೆ. ಮಧ್ಯದಲ್ಲಿ ಎಷ್ಟು ಸಿಕ್ಕರೂ ಕಟ್ಟ ಕಡೆಯದಾಗಿ ಸಿಗುವುದು ಮೋಕ್ಷ. ಅದು ಸಿಕ್ಕ ನಂತರ ಯಾವುದರಿಂದಲೂ ಅವಶ್ಯವಿಲ್ಲ. ಪರಮಾತ್ಮ ಜೀವಾತ್ಮ ನಾಶವಾಗಿ ದೇವರಾಗಿ ಬದಲಾದಾಗ ಸಿಗಬಲ್ಲನು. ಎಲ್ಲದಕ್ಕಿಂತ ಮೊದಲು ಹೋಗಿರುವುದು, ಎಲ್ಲದಕ್ಕಿಂತ ಕೊನೆಯದಾಗಿ ಸಿಗುವುದು ಒಂದೇ ಒಂದು ಪರಮಾತ್ಮ.

**869. (4) ನಿಮ್ಮ ಮನೆಯಲ್ಲಿ 3,7,10 ಸಂವತ್ಸರಗಳಲ್ಲಿ ಯಾರಾದರೂ ಕಾಲವಾಗಿ ಹೋಗಿದ್ದಾರಾ? ಯಾರು?**

ಉ. ಯಾರೂ ಹೋಗಿಲ್ಲ.

**ವಿವರ :** ಕಾಲ ಎಂದರೆ ಪರಮಾತ್ಮಯೆಂದು ಅರ್ಥ. ಕಾಲವಾಗಿ ಹೋಗುವುದು ಎಂದರೆ ಪರಮಾತ್ಮನೊಳಗೆ ಐಕ್ಯವಾಗಿ ಹೋಗುವುದೆಂದು ಅರ್ಥ. ನಮ್ಮ ಮನೆಯಲ್ಲಿ 3, 7, 10 ಸಂವತ್ಸರಗಳೇ ಅಲ್ಲ ನೂರು ಸಂವತ್ಸರಗಳಿಂದಲೂ ಎಷ್ಟು ಜನ ಸತ್ತುಹೋದರೂ ಎಲ್ಲರೂ ಜನ್ಮಗಳಿಗೇ ಹೋಗಿದ್ದಾರೆ. ಯಾರೂ ಮೋಕ್ಷ ಹೊಂದಿ ದೇವರೊಳಗೆ ಐಕ್ಯವಾಗಿಲ್ಲ. ಆದ್ದರಿಂದ ನಮ್ಮ ಮನೆಯಲ್ಲಿ ಎಷ್ಟೋ ಜನ ಸತ್ತುಹೋಗಿದ್ದಾರೆ, ಆದರೆ ಕಾಲವಾಗಿ ಹೋಗಿಲ್ಲವೆಂದು ಹೇಳುತ್ತಿದ್ದೇವೆ.

**870. (5) ಓದಿದವನಿಗಿಂತ ಮಡಿವಾಳ (ಅಗಸ) ಮೇಲು ಎನ್ನುತ್ತಾರೆ. ಜ್ಞಾನರೀತ್ಯಾ ಓದಿದವನಾರು? ಮಡಿವಾಳನ್ಯಾರು?**

ಉ. ಜ್ಞಾನ ತಿಳಿದವನು ಓದಿದವನು. ಕರ್ಮ ಎನ್ನುವ ಕೊಳೆಯನ್ನು ಇಲ್ಲದಂತೆ ಮಾಡುವವನು ಮಡಿವಾಳನು.

**ವಿವರ :** ಇತರರಿಂದಾಗಲಿ, ಗುರುವಿನಿಂದಾಗಲಿ, ಪುಸ್ತಕಳಿಂದಾಗಲಿ ಆತ್ಮ ಜ್ಞಾನ ತಿಳಿದವನು ಓದಿದವನೊಂದಿಗೆ ಸಮಾನ. ವಿದ್ಯೆಯನ್ನು ಕಷ್ಟಪಟ್ಟು ಓದಬೇಕಾಗಿರುತ್ತದೆ, ಬ್ರಹ್ಮ ವಿದ್ಯೆಯನ್ನು ಕಲಿಯುವುದಕ್ಕೆ ಇನ್ನೂ ಕಷ್ಟಪಡಬೇಕಾಗಿರುತ್ತದೆ. ಎಲ್ಲ ವಿದ್ಯೆಗಳಿಗಿಂತಲೂ ದೊಡ್ಡವಿದ್ಯೆಯಾದ ಬ್ರಹ್ಮವಿದ್ಯೆಯನ್ನು ಕಲಿಯುವುದು ಚೆನ್ನಾಗಿ ಓದಿದಂತಾಗುವುದು. ಅಲ್ಲಿಗೆ ಮುಗಿಯದೇ ಓದಿದ ಓದನ್ನು ಆಚರಣೆಯಾಗಿಟ್ಟುಕೊಂಡು ಆಚರಿಸಿದವನು ಇನ್ನೂ ದೊಡ್ಡವನು. ಬ್ರಹ್ಮ ವಿದ್ಯೆಯನ್ನು ಕಲಿತವನಿಗಿಂತ, ಅದನ್ನು ಆಚರಿಸಿ ಜ್ಞಾನಾಗ್ನಿಯನ್ನು ಸಾಧಿಸುವವನು ದೊಡ್ಡವನೆಂದು ಹೇಳಬಹುದು. ಗೀತೆಯಲ್ಲೂ ಸಹ **"ಯೋಗೀ ಜ್ಞಾನಿಭ್ಯೋಮತೋಧಿಕ"** ಯೋಗಿ ಜ್ಞಾನಿಗಳಿಗಿಂತಲೂ ಅಧಿಕನೆಂದು ನನ್ನ ಉದ್ದೇಶ ಎಂದು ಭಗವಂತನೆಂದಿದ್ದಾನೆ. ಜ್ಞಾನಾಗ್ನಿಯಿಂದ ಕರ್ಮ ಎನ್ನುವ ಕಟ್ಟಿಗೆಗಳನ್ನು ಸುಡುವವನೆಂದು, ಜ್ಞಾನವೆನ್ನುವ ನೀರಿನಿಂದ ಕರ್ಮವೆನ್ನುವ ಕೊಳೆಯನ್ನು ಒಗೆದು ತೊಲಗಿಸುವವನೆಂದು ಯೋಗಿಯನ್ನು ತಿಳಿದಿದ್ದಾರೆ. ಕರ್ಮವನ್ನು ಇಲ್ಲದಂತೆ ಮಾಡುವ ಯೋಗಿಯನ್ನು ಮಡಿವಾಳನೊಂದಿಗೆ ಸಮಾನವಾಗಿ ಹೋಲಿಸಿ ಹೇಳಿದ್ದಾರೆ. ಮಡಿವಾಳನು ಬಟ್ಟೆಗಳ ಕೊಳೆಯನ್ನು ತೊಲಗಿಸುವವನು. ಯೋಗಿ ಶರೀರ ಕರ್ಮವನ್ನು ತೊಲಗಿಸುವವನು, ಇದರ ಪ್ರಕಾರ ಜ್ಞಾನ ಕಲಿತವನನ್ನು ಓದಿದವನೆಂದು, ಯೋಗ ಮಾಡುವವನನ್ನು ಮಡಿವಾಳನೊಂದಿಗೆ ಹೋಲಿಸಿ ಓದಿದವನಿಗಿಂತಲೂ ಮಡಿವಾಳನು ಮೇಲೆಂದು ಹೇಳಿದ್ದಾರೆ. ಜ್ಞಾನಿಗಿಂತ ಯೋಗಿ ದೊಡ್ಡವನೆಂದು ಇದರ ಭಾವ.

**871. (6) ನಕ್ಷತ್ರ ಎನ್ನುವ ಪದದಲ್ಲಿ ನಿಜವಾದ ಅರ್ಥ ಏನು ಇದೆ?**

ಉ. ಪ್ರಕೃತಿ ಯಿಂದ ಅಥವಾ ಮೂರು ಗುಣಗಳಿಂದ ನಾಶವಾಗದೆಂದು ಅರ್ಥ.

**ವಿವರ :** ಪ್ರ + ಕೃ + ತಿ = ಪ್ರಕೃತಿ. ಹಾಗೇ ತಾಮಸ + ರಾಜಸ + ಸಾತ್ವಿಕ = ಮೂರು ಗುಣಭಾಗಗಳು. ಪ್ರಕೃತಿಯಿಂದ ಹುಟ್ಟಿರುವವೇ ಮೂರು ಗುಣಗಳು, ಅವನ್ನೇ ಮಾಯೆ ಎಂದು ಸಹ ಕರೆಯುತ್ತಿದ್ದೇವೆ. ಪ್ರಕೃತಿಗೆ ವಿರುದ್ಧವಾದುದು ಪರಮಾತ್ಮ. ಪ್ರಕೃತಿ ಸರ್ವವನ್ನು ನಶಿಸುವಂತೆ ಮಾಡುತ್ತಿದೆ. ತನ್ನನ್ನು ಹುಟ್ಟಿಸಿದ ಪರಮಾತ್ಮನನ್ನು ಮಾತ್ರ ಏನೂ ಮಾಡದೇ ಇದೆ. ಪ್ರಕೃತಿಯಿಂದ ಪರಮಾತ್ಮ ನಾಶನವಾಗದು. ಪರಮಾತ್ಮ ಪ್ರಕೃತಿಗೆ ವಿರುದ್ಧವಾಗಿ ಇರುವುದರಿಂದ ಪರಮಾತ್ಮ ನಿರ್ಣಯದಿಂದ ಪ್ರಕೃತಿ ಎಲ್ಲವೂ ಅಂದರೆ ಪಂಚಭೂತಗಳು ನಾಶವಾಗುತ್ತಿವೆ. ಪರಮಾತ್ಮ ಜ್ಞಾನವನ್ನು ಆಧ್ಯಾತ್ಮಿಕ ರೀತ್ಯಾ ಚಂದ್ರನಾಗಿ, ಪರಮಾತ್ಮನನ್ನು ನಕ್ಷತ್ರವಾಗಿ ಹೋಲಿಸಿ ಹೇಳಿಕೊಂಡಿದ್ದೇವೆ. ಪ್ರಕೃತಿಗೆ ಪರಮಾತ್ಮ ನಾಶವಾಗದು ಎನ್ನುವ ಸೂತ್ರದ ಪ್ರಕಾರ ನಕ್ಷತ್ರ ಎಂಬ ಹೆಸರು ಇಡುವುದು ನಡೆದಿದೆ. ಮೊದಲು ನಕ್ಷತ್ರ ಎನ್ನುವ ಮೂರು ಅಕ್ಷರಗಳಿಗೆ ಅರ್ಥವಿದೆ. "ನ" ಎಂದರೆ ಅಲ್ಲವೆಂದೂ, "ಕ್ಷ" ಎಂದರೆ ನಾಶವೆಂದೂ, "ತ್ರ" ಎಂದರೆ ಮೂರು ಎಂಬ ಭಾವವಿದೆ. ನಕ್ಷತ್ರ ಎನ್ನುವ ಮೂರು ಅಕ್ಷರಗಳಿಗೆ ಅರ್ಥ ಪ್ರಕೃತಿಗೆ ನಾಶವಾಗದೆಂದು, ಮೂರು ಗುಣಗಳಿಗೆ ನಾಶವಾಗದೆಂದು ತಿಳಿಯುತ್ತಿದೆ. ಪ್ರಕೃತಿ ತ್ರಯಕ್ಕು ನಾಶವಾಗದವನನ್ನು ಪರಮಾತ್ಮ ಅನ್ನುತ್ತಿದ್ದೇವೆ. ಪರಮಾತ್ಮನಿಗೆ ಮತ್ತೊಂದು ಗುರುತಾಗಿ ನ, ಕ್ಷ, ತ್ರ ಎನ್ನುವ ಮೂರು ಬೀಜಾಕ್ಷರಗಳನ್ನು ಇಟ್ಟಿದ್ದಾರೆ. ಬೀಜಾಕ್ಷರಗಳೆಂದರೆ ಅರ್ಥವನ್ನು ಹುಟ್ಟಿಸುವ ಬೀಜಗಳೆಂದು ತಿಳಿಯುತ್ತಿದೆ. ಬೀಜ ಎಂದರೆ ಹುಟ್ಟಿಸುವುದೆಂದು, ಬೀಜಾಕ್ಷರಗಳೆಂದರೆ ವಿವರವನ್ನು ಅಥವಾ ಭಾವವನ್ನು ಅಥವಾ ಸಾರಾಂಶವನ್ನು ಹೊಂದಿವೆ ಎಂದು ಅರ್ಥ. ನಕ್ಷತ್ರ ಎನ್ನುವ ಅಕ್ಷರಗಳಲ್ಲಿ ಭಾವವಿದೆ ಆದ್ದರಿಂದ ಅವು ಬೀಜಾಕ್ಷರಗಳಾಗಿವೆ. ಪದಕ್ಕೆ ಭಾವವಿರದೆ ಪ್ರತಿ ಅಕ್ಷರಕ್ಕೂ ಭಾವವಿದ್ದಾಗಲೇ ಬೀಜಾಕ್ಷರಗಳಾಗುತ್ತವೆ. ನಕ್ಷತ್ರದಲ್ಲಿ ಮೂರು ಅಕ್ಷರಗಳಿಗು ಬಿಡಿಬಿಡಿಯಾಗಿ ಅರ್ಥವಿದೆ ಆದ್ದರಿಂದ ಅವನ್ನು ಪರಮಾತ್ಮನಿಗೆ ಬೀಜಾಕ್ಷರಗಳೆನ್ನುತ್ತಿದ್ದೇವೆ.

**872. (7) ತಿಂಗಳಿಂದ ನಿನಗೇನಾದರೂ ರೋಗಬಂದಿದೆಯಾ?**

ಉ. ತಿಂಗಳಿಂದ ರೋಗವಿದೆ.

**ವಿವರ :** ಪ್ರತಿ ಮನುಷ್ಯ ಹುಟ್ಟಿದಾಗಿನಿಂದ ಯಾವುದೋ ಒಂದು ಬಾಧೆಯಿಂದ

ಬಾಧೆಬೀಳುತ್ತಲೇ ಇದ್ದಾನೆ. ಕರ್ಮ ಎನ್ನುವುದೇ ಜೀವಾತ್ಮನಿಗೆ ರೋಗವಾಗಿ ಇದೆ. ಜ್ವರ ಬಂದಾಗ ಶರೀರಕ್ಕೆ ರೋಗವಿದೆಯೆಂದು ತಿಳಿಯುತ್ತಿದೆ. ಜ್ವರ ಇಲ್ಲದಾಗ ಶರೀರಕ್ಕೆ ರೋಗವಿಲ್ಲ. ಶರೀರದೊಳಗಿನ ಜೀವಾತ್ಮನು ಮಾತ್ರ ಜ್ವರ ಇದ್ದಾಗಾಗಲಿ, ಜ್ವರ ಇಲ್ಲದಾಗಾಗಲಿ, ಕರ್ಮವೆನ್ನುವ ರೋಗವನ್ನು ಅನುಭವಿಸುತ್ತಿದ್ದಾನೆ. ಶರೀರಕ್ಕೆ ಜ್ವರವೇ ರೋಗವಾದರೇ ಜೀವಾತ್ಮನಿಗೆ ಕರ್ಮವೇ ರೋಗವಾಗಿದೆ. ಕರ್ಮವೆನ್ನುವ ರೋಗವನ್ನು ಹುಟ್ಟಿದಾಗಿನಿಂದ ಅನುಭವಿಸುತ್ತಿದ್ದಾನೆ. ಶರೀರಕ್ಕೆ ಜ್ವರ ಇಲ್ಲದಾಗ ರೋಗವಿಲ್ಲದಂತೆ, ಜೀವಾತ್ಮನಿಗೆ ಕರ್ಮ ಅನುಭವ ಇಲ್ಲದಾಗ ರೋಗವಿಲ್ಲದಂತೆ. ಕರ್ಮ ಅನುಭವ ಬ್ರಹ್ಮಯೋಗದಲ್ಲಿ ಇಲ್ಲ ಆದ್ದರಿಂದ ಆ ಸಮಯದಲ್ಲಿ ಮಾತ್ರ ರೋಗ ಇಲ್ಲವೆಂದು ಹೇಳಬಹುದು. ತಿಂಗಳಿಂದ ನಾನು ಯೋಗ ಮಾಡಲಿಲ್ಲ ಆದ್ದರಿಂದ ರೋಗದಲ್ಲೇ ಇದ್ದೇನೆಂದು ಹೇಳುತ್ತಿದ್ದೇನೆ. ಶರೀರಕ್ಕೆ ರೋಗ ಬರಬಹುದು ಹೋಗಬಹುದು. ಜೀವಾತ್ಮನಿಗೆ ಮಾತ್ರ ರೋಗ ಎಲ್ಲವೇಳೆಯಲ್ಲೂ ಇದೆ. ಜೀವಾತ್ಮ ಯೋಗದಲ್ಲಿ ಇಲ್ಲ ಆದ್ದರಿಂದ ಆ ಸಮಯದಲ್ಲಿ ರೋಗದಲ್ಲಿದ್ದಾನೆ. ಜೀವಾತ್ಮ ರೋಗದಲ್ಲಾಗಲಿ ಯೋಗದಲ್ಲಾಗಲಿ ಇರಬಹುದು. ಜ್ಞಾನ ತಿಳಿಯದ ಜೀವಾತ್ಮ ಯಾವಾಗಲೂ ರೋಗದಲ್ಲೇ ಇರುತ್ತಿದ್ದಾನೆ. ಜ್ಞಾನ ತಿಳಿದ ಜೀವಾತ್ಮ ಆಗಾಗ ಯೋಗದಲ್ಲೂ, ಆಗಾಗ ರೋಗದಲ್ಲೂ ಇರುತ್ತಿದ್ದಾನೆ. ನನಗೆ ಯೋಗ ತಿಳಿದಿಲ್ಲ ಆದ್ದರಿಂದ ಯಾವಾಗಲೂ ರೋಗದಲ್ಲೇ ಇದ್ದೇನೆ. ನನ್ನ ಶರೀರ ಮಾತ್ರ ಆರೋಗ್ಯವಾಗಿದೆ.

**873. (8) ನಕ್ಷತ್ರಕ್ಕೆ ಎಷ್ಟು ಕೊನೆಗಳಿವೆ?**

ಉ. ಐದು ಕೊನೆಗಳು ಇವೆ.

**ವಿವರ :** ಪ್ರಪಂಚ ಹುಟ್ಟುವ ಮುನ್ನ ಪರಮಾತ್ಮ ಪ್ರಕೃತಿಯನ್ನು ತಯಾರು ಮಾಡಿ ಅದಕ್ಕೆ ಕೆಲವು ವಿಧಾನಗಳನ್ನು ಕೊಟ್ಟು ಜಗತಿಯನ್ನು ನಡೆಸುವಂತೆ ಮಾಡಿದ್ದಾನೆ. ಆ ವಿಧಾನಗಳಲ್ಲಿ ಪ್ರಕೃತಿ ಪರಮಾತ್ಮನಿಗೆ ವಿರುದ್ಧವಾಗಿ ಇರಬೇಕೆನ್ನುವುದೇ ಮುಖ್ಯವಾದ ವಿಧಾನ. ವಿರುದ್ಧವೇ ಆಗಲಿ ಶತ್ರುತ್ವವಲ್ಲ. ಪ್ರಕೃತಿ ಪರಮಾತ್ಮನಿಗೆ ವಿರುದ್ಧವಾಗಿ ಇದ್ದರೂ ಪರಮಾತ್ಮನಿಗೆ ಶತ್ರುವಾಗಿ ಪರಮಾತ್ಮನನ್ನು ನಾಶ ಮಾಡುವ ಶಕ್ತಿ ಇಲ್ಲ. ಪರಮಾತ್ಮನೇ ತನ್ನಿಂದ ಹುಟ್ಟಿಸಲಾಗಿರುವ ಪ್ರಕೃತಿಯನ್ನು ತಕ್ಕ ಸಮಯದಲ್ಲಿ ತಾನೇ ನಾಶಮಾಡುವಹಾಗೆ ಏರ್ಪಡಿಸಿಕೊಂಡಿದ್ದಾನೆ. ಪ್ರಕೃತಿ ಎಂದರೆ ಪಂಚಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ. ಪಂಚಭೂತಗಳಿಗೆ ಪ್ರಕೃತಿ ಬೀಜಾಕ್ಷರಗಳಾಗಿ ಇದೆ. ಪ್ರಕೃತಿಯನ್ನು ಬಿಡಿಸಿ ನೋಡುವುದಾದರೆ ಐದು ಅಕ್ಷರಗಳಿವೆ. ಪ + ರ = ಪ್ರ, ಕ + ರು = ಕೃ, ತಿ

ಹೀಗೆ ಪರಕರುತಿ ಎಂದು ಐದು ಇವೆ. ಭಾವ ಬೀಜ ಇರುವುದು ಬೀಜಾಕ್ಷರವಿದ್ದಹಾಗೆ ಪ = ಆಕಾಶ, ರ = ಗಾಳಿ, ಕ = ಅಗ್ನಿ, ರು = ನೀರು, ತಿ = ಭೂಮಿ ಎನ್ನುವ ಅರ್ಥ ಗಳಿವೆ. ಪ್ರಕೃತಿ ಎನ್ನುವ ಪದದಲ್ಲಿ ಪಂಚಭೂತಗಳು ಒಳಗೊಂಡಿವೆ. ಪಂಚಭೂತಗಳನ್ನು ನಾಶಮಾಡುವುದು ಪರಮಾತ್ಮ. ಪರಮಾತ್ಮನಿಗೆ ನಕ್ಷತ್ರ ಎನ್ನುವ ಬೀಜಾಕ್ಷರಗಳು ಸಹ ಇವೆ. ನಕ್ಷತ್ರ ಪ್ರಕೃತಿಯನ್ನು ಅಂದರೆ ಪಂಚಭೂತಗಳನ್ನು ನಾಶ ಮಾಡುವುದಾದ್ದರಿಂದ ನಕ್ಷತ್ರಕ್ಕೆ ಐದು ಕೊನೆಗಳು ಇವೆ. ನಕ್ಷತ್ರದ ಕೊನೆ ಮೊದಲು ದೊಡ್ಡದಾಗಿದ್ದು ಕಡೆಗೆ ಸಣ್ಣದಾಗಿ ತಯಾರಾಗಿ ಕೊನೆಕನೆಗೆ ಇಲ್ಲದೇ ಹೋಗುತ್ತಿದೆ. ಪಂಚಭೂತಗಳ ನಾಶವನ್ನು, ಪಂಚಭೂತಗಳು ಇಲ್ಲದೇ ಹೋಗುವುದನ್ನು, ನಕ್ಷತ್ರ ತನ್ನ ಐದು ಕೊನೆಗಳಿಂದ ತಿಳಿಸುತ್ತಿದೆ. ಪಂಚಭೂತಗಳಿಗೆ ನಾಶವಾಗದ್ದು, ಪಂಚಭೂತಗಳನ್ನೇ ನಾಶ ಮಾಡುವುದು ಪರಮಾತ್ಮ ಎನ್ನುವ ಅರ್ಥವನ್ನು ನಕ್ಷತ್ರ ತನ್ನ ಕೊನಗಳ ಆಕಾರದಿಂದ ತಿಳಿಸುತ್ತಿದೆ.

**874. (9) ಬೆಳ್ಳಿ, ಬಂಗಾರ, ಕಬ್ಬಿಣ ಜ್ಞಾನರೀತ್ಯಾ ಯಾವುದಕ್ಕೆ ಗುರುತುಗಳು?**

ಉ. ಬೆಳ್ಳಿ ಜ್ಞಾನ, ಬಂಗಾರ ಮೋಕ್ಷ, ಕಬ್ಬಿಣ ಅಜ್ಞಾನಕ್ಕೆ ಗುರುತು.

**ವಿವರ :** ಜ್ಯೋತಿಷ್ಯ ಶಾಸ್ತ್ರರೀತ್ಯಾ ಬೆಳ್ಳಿಗೆ ಅಧಿಪತಿ ಚಂದ್ರನು, ಬಂಗಾರಕ್ಕೆ ಅಧಿಪತಿ ಗುರುವು. ಕಬ್ಬಿಣಕ್ಕೆ ಅಧಿಪತಿ ಶನಿ, ಬೆಳ್ಳಿಗೆ ಅಧಿಪತಿಯಾದ ಚಂದ್ರನು ಜ್ಯೋತಿಷ್ಯದ ಪ್ರಕಾರ ಆತ್ಮಜ್ಞಾನಕ್ಕೆ ಅಧಿಪತಿ. ಬಂಗಾರಕ್ಕೆ ಅಧಿಪತಿಯಾದ ಗುರುವು ಮೋಕ್ಷಕ್ಕು, ಕಬ್ಬಿಣಕ್ಕೆ ಅಧಿಪತಿಯಾದ ಶನಿ ಅಜ್ಞಾನಕ್ಕೂ ಅಧಿಪತಿಗಳು. ಇದನ್ನನುಸರಿಸಿ ಜ್ಞಾನಕ್ಕೆ ಗುರುತಾದ ಲೋಹ ಚಂದ್ರನ ಬೆಳ್ಳಿ, ಮೋಕ್ಷಕ್ಕೆ ಗುರುವಿನ ಬಂಗಾರ, ಅಜ್ಞಾನಕ್ಕೆ ಶನಿ ಯೊಂದರ ಕಬ್ಬಿಣ ಗುರುತಿಸುವ ಲೋಹಗಳಾಗಿ ಇವೆ. ಮೋಕ್ಷ ಎಲ್ಲದಕ್ಕಿಂತಲು ಬಹಳ ದೊಡ್ಡದು ಆದ್ದರಿಂದ ಭೂಮಿ ಮೇಲೆ ಮೋಕ್ಷ ಚಿಹ್ನೆಯಾದ ಬಂಗಾರವು ಸಹ ತನ್ನ ಬೆಲೆಯನ್ನು ಹೆಚ್ಚಾಗಿ ತಿಳಿಯುವಂತೆ ಉಳಿದ ಲೋಹಗಳಿಗಿಂತಲೂ ಬಂಗಾರದ ಬೆಲೆಯೂ ಸಹ ಹೆಚ್ಚಾಗಿ ಇದೆ. ಅಜ್ಞಾನಗಿಂತಲೂ ಹೆಚ್ಚು ಮೋಕ್ಷಕ್ಕಿಂತಲೂ ಕಡಿಮೆ ಆದ ಜ್ಞಾನ ವೊಂದರ ಲೋಹ ಬೆಳ್ಳಿ ಆದ್ದರಿಂದ ಅಜ್ಞಾನ ಸಂಬಂಧಿತ ಲೋಹವಾದ ಕಬ್ಬಿಣಕ್ಕಿಂತ ಹೆಚ್ಚು, ಮೋಕ್ಷ ಸಂಬಂಧಿತ ಬಂಗಾರಕ್ಕಿಂತಲೂ ಕಡಿಮೆ ಬೆಲೆಯೊಂದಿಗೆ ಇದೆ. ಭೂಮಿ ಮೇಲೆ ಮನುಷ್ಯರು ಕಬ್ಬಿಣಕ್ಕಿಂತಲೂ ಬೆಳ್ಳಿ ಬಂಗಾರದ ಮೇಲೆ ಹೆಚ್ಚು ಮೋಜುಬಿದ್ದಹಾಗೆ, ಆಧ್ಯಾತ್ಮಿಕವಾಗಿ ಜ್ಞಾನದ ಮೇಲೆ ಮೋಕ್ಷದ ಮೇಲೆ ಆಸೆಪಡಬೇಕು.

**875. : (10) ಗುರುವು ಯಾವಾಗ ಕಾಲವಾಗಿ ಹೋಗುತ್ತಾನೆ?**

ಉ. ಗುರುವು ಆಗಾಗ ಕಾಲವಾಗುತ್ತಿರುತ್ತಾನೆ. ಯಾವಗಲಾದರೂ ಕಾಲವಾಗಬಹುದು.

**ವಿವರ :** ಗುರುವು ಪರಮಾತ್ಮನ ಅವತಾರವಾದ ಭಗವಂತನೆಂದು ನಮ್ಮ ಉದ್ದೇಶ. ಉದಾಹರಣೆಗೆ ಶ್ರೀಕೃಷ್ಣನನ್ನು, ಏಸುಪ್ರಭುವನ್ನು ಗುರುಗಳಾಗಿ ಹೇಳಿಕೊಳ್ಳಬಹುದು. ಪರಮಾತ್ಮನೇ ಕಾಲವೆಂದು ಸಹ ಹೇಳಿಕೊಂಡಿದ್ದೇವೆ. ಗುರುವಾಗಿ ಬಂದವನು ತನ್ನ ಜೀವನದಲ್ಲಿ ಒಂದುಬಾರಿ ಆತ್ಮನಾಗಿ, ಯಾವಾಗಲೂ ಜೀವಾತ್ಮನಾಗಿ, ಯಾವುದೋ ಒಂದು ಎರಡು ಸಮಯಗಳಲ್ಲಿ ಆಗಾಗ ಪರಮಾತ್ಮನಾಗಿ ವ್ಯವಹರಿಸುವನು. ಪರಮಾತ್ಮನಾಗಿ ವ್ಯವಹರಿಸಿದಾಗ ತಾನೇ ಕಾಲವಾಗಿದ್ದಾನೆಂದು ಹೇಳಬಹುದು. ಆದ್ದರಿಂದ ಗುರು ಆಗಾಗ ಕಾಲವಾಗಿ ಬದಲಾಗುತ್ತಿರುತ್ತಾನೆಂದು ಹೇಳಬಹುದು. ಶರೀರದೊಂದಿಗೆ ಇರುವಾಗ ಯಾವುದೋ ಒಂದು ಸಮಯದಲ್ಲಿ ಕಾಲವಾಗಿ ಬದಲಾಗುವ ಗುರುವು ಶರೀರವನ್ನು ಬಿಡುವಾಗ ತನ್ನ ನಿರ್ಣಯದ ಪ್ರಕಾರ ಯಾವಾಗಾದರೂ ಕಾಲವಾಗಿ ಬದಲಾಗಬಹುದು. ಯೋಗಿಗಳು ಮೋಕ್ಷ ಹೊಂದುವ ಕಾಲವನ್ನು ಭಗವಂತನು ತಿಳಿಸಿದಹಾಗೆ ಹಗಲು, ಶುಕ್ಲ ಪಕ್ಷ, ಉತ್ತರಾಯಣದಲ್ಲಿ ಗುರುವು ಮರಣಿಸಬೇಕಾದ ಕೆಲಸವಿಲ್ಲ. ಮನುಷ್ಯರಲ್ಲಿ ಯೋಗಿಗಳಾದವರಿಗೆ ಆ ಪದ್ಧತಿ ಅನ್ವಯಿಸುತ್ತದೆ. ಕಾಲವೇ ತಾನಾಗಿರುವವನಿಗೆ ಕಾಲದಲ್ಲಿ ಬೆರೆತುಹೋಗುವ ಕಾಲ ನಿರ್ಣಯವಿರುವುದಿಲ್ಲ. ಆದ್ದರಿಂದ ಭಗವಂತನು ಯಾವ ಸಮಯದಲ್ಲಿ ಮರಣಿಸಿದರೂ ಆತನ ಸ್ವಸ್ಥಾನವಾದ ಮೋಕ್ಷವನ್ನೇ ಸೇರುವನು. ಕಾಲವೇ ತಾನಾದ ಭಗವಂತನಿಗೆ ಕಾಲ ನಿರ್ಣಯವಿಲ್ಲ. ಆತನು ಯಾವಾಗಾದರೂ ಮೋಕ್ಷವನ್ನು ಹೊಂದಬಹುದು, ಕಾಲವಾಗಬಹುದು. ಬದುಕಿರುವಾಗಲೇ ಕಾಲವಾಗಿ ಬದಲಾಗುವ ಪರಮಾತ್ಮನಿಗೆ ಪ್ರತ್ಯೇಕಿಸಿ ಕಾಲವಾಗಿ ಬದಲಾಗುವ ಸಮಯವಿಲ್ಲ. ಎಲ್ಲವೇಳೆಯಲ್ಲೂ ಕಾಲವೇ ಆತನೆಂದು ತಿಳಿಯಬೇಕು. ಈ ವಿಷಯವನ್ನು ತಿಳಿಸುತ್ತಾ ಗಾದೆಯಾಗಿ **"ಮುಗಿದು ಹೋದ ಮದುವೆಗೆ ಮೇಳವೇಕೆ"** ಎಂದಿದ್ದಾರೆ. ಮದುವೆ ಎಂದರೆ ಮೋಕ್ಷವೆಂದು ತಿಳಿದುಕೊಂಡಿದ್ದೇವೆ. ಮುಗಿದು ಹೋದ ಮದುವೆ ಎಂದರೆ ಮೊದಲೇ ದೇವರಾದವನಿಗೆ ಮೇಳವೇಕೆ ಎಂದರೆ ಇನ್ನೊಮ್ಮೆ ಮದುವೆ ಮಾಡಬೇಕಾದ ಕೆಲಸವಿಲ್ಲವೆಂದು ಅರ್ಥ. ದೇವರು ಎರಡನೆಯಸಲ ಮೋಕ್ಷ ಹೊಂದುವುದಿಲ್ಲವೆಂದು ಅರ್ಥ ಮಾಡಿಕೊಳ್ಳಬೇಕು.

# ಜ್ಞಾನ ಪರೀಕ್ಷೆ

**ತಾಡಿಪತ್ರಿ** **ದಿನಾಂಕ–26–06–2002**

**876. (1) ಗುರುವು ಆತ್ಮ ಬಂಧುವಾ ಶರೀರ ಬಂಧುವಾ?**

ಉ. ಯಾವ ಬಂಧುವು ಅಲ್ಲ.

**ವಿವರ :** ಶಿಷ್ಯನು ಪೂರ್ತಿ ಜ್ಞಾನ ತಿಳಿಯದವರೆಗು ಗುರುವು ಆತ್ಮ ಬಂಧುವಾಗಿ ಇರುವನು. ಜ್ಞಾನ ಸಂಪೂರ್ಣವಾಗಿ ತಿಳಿದ ನಂತರ ಅಲ್ಲಿಯವರೆಗು ಇರುವ ಗುರುವು ಮತ್ತೊಂದು ವಿಧವಾಗಿ ಕಾಣಿಸುವನು. ಜ್ಞಾನ ಪೂರ್ತಿ ತಿಳಿಯದವರೆಗು ಗುರುವು ಶಿಷ್ಯನಿಗೆ ಸ್ವಲ್ಪಮಟ್ಟಿಗೆ ಅರ್ಥವಾಗಿರುವನು. ಪೂರ್ತಿ ಜ್ಞಾನ ತಿಳಿದ ನಂತರ ಗುರುವಿನ ಪೂರ್ತಿ ಬೆಲೆ, ಗುರುವಿನ ನಿಜಸ್ವರೂಪ ತಿಳಿಯುವುದು. ಆಗ ಗುರುವಿನ ಬಗ್ಗೆ ಇರುವ ಭಕ್ತಿ ದ್ವಿಗುಣಿಕೃತವಾಗುತ್ತದೆ. ಪೂರ್ತಿ ತಿಳಿದ ನಂತರ ಗುರುವಿನ ಬಗ್ಗೆ ಇರುವ ಭಾವಕ್ಕೂ ಮೊದಲಿರುವ ಭಾವಕ್ಕೂ ಬಹಳ ವ್ಯತ್ಯಾಸವಿರುವುದು. ಅಲ್ಲಿಯವರೆಗು ಆತ್ಮ ಬಂಧುವಾಗಿ ಇರುವಹಾಗೆ ಕಾಣಿಸಿದ ಗುರುವು ನಂತರ ಯಾವ ಬಂಧುವು ಅಲ್ಲವೆಂದು ತಿಳಿಯುವುದು. ಪೂರ್ತಿ ಜ್ಞಾನ ತಿಳಿಯದಿರುವಾಗ ಗುರುವು ಯೋಗವೆಂದು ಜ್ಞಾನವೆಂದು ಜೀವಾತ್ಮನಿಗೆ ಕೆಲವು ಕಷ್ಟಗಳನ್ನು ಕೊಟ್ಟಂತಿರುತ್ತದೆ. ಆಗ ಗುರುವು ಶಿಷ್ಯನಿಗೆ ಬಂಡೆಯಾಗಿ ಕಾಣಿಸಬಹುದು. ಜ್ಞಾನಕ್ಕೋಸ್ಕರ ಶಿಷ್ಯನಿಂದ ಗುರುವು ನೂರು ರೂಪಾಯಿಗಳನ್ನು ಖರ್ಚು ಮಾಡಿಸಿದರೂ ಶಿಷ್ಯನು ಗುರುವನ್ನು ನಿಂದಿಸುವ ಸ್ಥಿತಿಯಲ್ಲಿ ಇರುವನು. ನೂರು ರೂಪಾಯಿಗೆ ಕೇಜಿ ಮಾಂಸ ಬರುತ್ತಿತ್ತು ಅನವಶ್ಯಕವಾಗಿ ಹೋಯಿತು ಎಂದುಕೊಳ್ಳುವನು. ವೇಶ್ಯಗೆ ಸಾವಿರ ರೂಪಾಯಿಗಳನ್ನಾದರೂ ಕೊಡುವರು ಗುರುವಿಗೆ ಹುಳುಕು ತರಕಾರಿಯನ್ನು ಸಹ ಕೊಡುವುದಿಲ್ಲ ಎಂದು ವೇಮನಯೋಗಿ ಒಂದು ಮಾತನ್ನು ಹೇಳಿದ್ದಾನೆ. ಅಂತಹ ಸಮಯದಲ್ಲಿ ಗುರುವು ತನಗೊಂದು ಬಂಧವಾಗಿ ಕಾಣಿಸುವನು. ತನ್ನ ಇಷ್ಟ ಪ್ರಕಾರ ಹೋಗದೆ ಗುರುವು ಇಷ್ಟ ಪ್ರಕಾರ ನಡೆಯಬೇಕೆನ್ನುವುದೇ ಶಿಷ್ಯನಿಗೆ ದೊಡ್ಡ ಬಂಧವಾಗುತ್ತದೆ. ಮೊದಲು ಪ್ರಪಂಚದಲ್ಲಿ ಇಚ್ಛಾನುಸಾರ ಇರುವವನು, ಗುರುವಿನ ಶಿಕ್ಷಣದಲ್ಲಿ ಆ ಸ್ವೇಚ್ಛೆ ಇಲ್ಲದೇ ಹೋಗುವುದೇ ತನಗೆ ಬಂಧವಾಗುತ್ತದೆ. ಆದ್ದರಿಂದ ಪೂರ್ತಿ ಜ್ಞಾನ ತಿಳಿಯದ ಶಿಷ್ಯನಿಗೆ ಗುರುವು ಆತ್ಮ ಬಂಧುವಾಗುವನು. ಜೀವಾತ್ಮನಿಗೆ ಬಂಧನಗಳು ಮಾಡುವವನು ಆದ್ದರಿಂದ ಆ ಹೆಸರು ಬಂದಿದೆ. ನಂತರ ಸ್ವಲ್ಪ ಕಾಲಕ್ಕೆ ಪೂರ್ತಿ ಜ್ಞಾನ ತಿಳಿದಾಗ ಗುರುವು ಬಂಧನ ಮಾಡುವವನಲ್ಲ, ಕರ್ಮ ಬಂಧನಗಳಿಂದ ಬಿಡಿಸುವವನೆಂದು

ತಿಳಿಯುವನು. ಆದ್ದರಿಂದ ತಿಳಿಯದಿರುವಾಗ ಬಂಧುವಿನಂತೆ ಕಾಣಿಸಿದವನು ತಿಳಿದಾಗ ಯಾವ ಬಂಧುವು ಅಲ್ಲವೆಂದು ತಿಳಿಯುತ್ತಿದೆ.

**877. (2) ಮನೋನೇತ್ರದಿಂದ ಯಾವುದನ್ನು ನೋಡಬಹುದು. ಯಾವುದನ್ನು ನೋಡಲಾರೆವು?**

ಉ. ಪ್ರಪಂಚ ವಿಷಯಗಳನ್ನು ನೋಡಬಹುದು. ಆತ್ಮ ಪರಮಾತ್ಮರನ್ನು ನೋಡಲಾರೆವು.

**ವಿವರ :** ಮನೋ ನೇತ್ರವನ್ನು ಮೂರನೆ ಕಣ್ಣು ಎಂದು ಕರೆಯುತ್ತಿದ್ದೇವೆ. ಮೂರನೆ ಕಣ್ಣಿನಿಂದ ಎರಡು ಕಣ್ಣುಗಳಿಂದ ನೋಡಿದ ವಿಷಯಗಳನ್ನು ಮತ್ತೆ ನೋಡಬಹುದು. ಎಂದಿಗೂ ನೋಡದವುಗಳನ್ನು ಸಹ ಅವುಗಳಿಗೆ ರೂಪವನ್ನು ಕಲ್ಪಿಸಿ ತೋರಿಸುವುದು. ಮೊದಲನೆ ಕಣ್ಣುಗಳಿಂದ ನೋಡಿರುವವು ನೋಡಿದಹಾಗೇ ತೋರಿಸುವ ಮನೋ ನೇತ್ರ ನೋಡದ ವಿಷಯಗಳನ್ನು ಸಹ ಕಲ್ಪಿಸಿ ತೋರಿಸುತ್ತದೆ. ಕಲ್ಪಿಸಿ ತೋರಿಸುವವು ನಿಜವಾಗಬಹುದು, ನಿಜವಾಗದೆ ಇರಬಹುದು. ಮನೋ ನೇತ್ರ ಏನು ತೋರಿಸಿದರೂ ಅವು ಇಂದ್ರಿಯಗಳಿಗೆ ಸಂಬಂಧಿಸಿದ ವಿಷಯಗಳೇ ಇರುತ್ತವೆ. ಇಂದ್ರಿಯಾತೀತವಾದ ಆತ್ಮ ಪರಮಾತ್ಮನ ವಿಷಯಗಳನ್ನು ತೋರಿಸಲಾರದು. ಮನಸ್ಸಿನಿಂದಲೇ ಆತ್ಮನನ್ನು ತಿಳಿಯುವಹಾಗೆ ಎಷ್ಟೋ ಸಲ ಹೇಳಿದ್ದಾರೆ ಅಲ್ಲವೆ! ಎಂದು ಪ್ರಶ್ನೆ ಬರಬಹುದು. ಅದಕ್ಕೆ ಉತ್ತರವೇನೆಂದರೆ! ಮನಸ್ಸಿನಿಂದ ಅಂದರೆ ಮನಸ್ಸು ಅಡಗಿ ಹೋಗುವುದರಿಂದ ಎಂದು ಅರ್ಥ. ಮನಸ್ಸು ಹೊರಗಿನ ವಿಷಯಗಳನ್ನು ತಂದಿಡದೆ ಹೋದರೆ ಉಳಿಯುವುದು ಆತ್ಮ ವಿಷಯವೇ. ಆತ್ಮ ಹೀಗಿದೆಯೆಂದು ಆತ್ಮವೊಂದರ ವಿವರವನ್ನು ಜೀವಾತ್ಮನಿಗೆ ಬುದ್ಧಿ ವಿವರಿಸಿ ತಿಳಿಸಬೇಕಾಗಿದೆ. ಗೀತೆಯಲ್ಲಿ ಸಹ ಬುದ್ಧಿಯಿಂದಲೇ ಆತ್ಮ ತಿಳಿಯುತ್ತಿದೆ ಯೆಂದು ಹೇಳಿದ್ದಾರೆ. ಮನಸ್ಸನ್ನು ಕೆಲಸ ಮಾಡದಂತೆ ಮಾಡಿದಾಗ ಮನೋನಿಲುಗಡೆ ಉಂಟಾಗುವುದರಿಂದ ಆತ್ಮ ಬುದ್ಧಿಯಿಂದ ತಿಳಿಯುತ್ತದೆಂದಿದ್ದೇವೆ. ಆದರೆ ಮನಸ್ಸೇ ಆತ್ಮನನ್ನು ಜೀವಾತ್ಮನಿಗೆ ಪ್ರತ್ಯಕ್ಷವಾಗಿ ತಿಳಿಸುತ್ತದೆಂದು ಹೇಳಲಿಲ್ಲ. ಪರಮಾತ್ಮ ವಿಷಯ ಮನಸ್ಸಿಗಾಗಲಿ, ಬುದ್ಧಿಗಾಗಲಿ ತಿಳಿಯುವುದಲ್ಲ. ಆದ್ದರಿಂದ ಮನಸ್ಸಿಗೆ ಪ್ರಪಂಚ ವಿಷಯಗಳು ಹೊರತು ಆತ್ಮ ಪರಮಾತ್ಮರ ವಿಷಯಗಳು ತಿಳಿಯುವುದಿಲ್ಲವೆಂದು ಹೇಳಬಹುದು.

**878. (3) ಪರಮಾತ್ಮ ಅಂಶ ಜನ್ಮ ತೆಗೆದುಕೊಳ್ಳುವುದು ಸ್ತ್ರೀ ಶರೀರದಲ್ಲಾ ಅಥವಾ ಪುರುಷಶರೀರದಲ್ಲಾ?**

ಉ. ಪುರುಷ ಶರೀರದಲ್ಲಿ.

**ವಿವರ :** ಜಗತಿ ಇಲ್ಲದಿರುವಾಗ ಪರಮಾತ್ಮ ಸ್ತ್ರೀ ಅಲ್ಲ ಪುರುಷನು ಅಲ್ಲ. ಏನೂ ಅಲ್ಲದ ಪರಮಾತ್ಮ ಜಗತಿಯನ್ನು ಸೃಷ್ಠಿಸಬೇಕೆಂದು ಸ್ತ್ರೀತತ್ತ್ವವನ್ನು ಹೊಂದಿದ ಪ್ರಕೃತಿಯನ್ನು ತಯಾರು ಮಾಡಿದ್ದಾನೆ. ಅದಕ್ಕಿರಬೇಕಾದ ಲಕ್ಷಣಗಳನ್ನು ಇರಬೇಕಾದ ಪದ್ಧತಿಗಳನ್ನು ಎಲ್ಲವನ್ನು ನಿರ್ಣಯಿಸಿದ್ದಾನೆ. ಪ್ರಕೃತಿ ಸ್ತ್ರೀ ಸ್ವರೂಪವಾದ್ದರಿಂದ ಅದಕ್ಕಿಂತ ಪೂರ್ತಿ ವಿಲಕ್ಷಣವಾಗಿ ನಿಂತಿದ್ದಾನೆ, ಆ ವಿಲಕ್ಷಣವೇ ಪುರುಷನು. ತನಗೆ ಪ್ರಕೃತಿ ಪ್ರಕೃತಿಗೆ ತಾನು ಪೂರ್ತಿ ವಿರುದ್ಧ ದಿಶೆಗಳಲ್ಲಿ ಇರುವಂಥೆ ಅಂದುಕೊಂಡ ಪರಮಾತ್ಮ, ಇಬ್ಬರು ಸಮವಾಗಿ ಇರುವಾಗಲೇ ತಾನು ಆಡುವ ಆಟ ರಸವತ್ತಾಗಿ ಇರುತ್ತದೆಂದು, ತನಗೆ ಸಮಾನವಾಗಿ ಪ್ರಕೃತಿಗೆ ಅಧಿಕಾರಗಳನ್ನು ಕೊಟ್ಟಿದ್ದಾನೆ. ಪ್ರಕೃತಿ ಪರಮಾತ್ಮನಿಗೆ ವಿರುದ್ಧವೇ ಆಗಲಿ ಶತ್ರುವಲ್ಲ. ಪ್ರಕೃತಿ ಕೈಯಲ್ಲಿ ವಿರುದ್ಧತೆಯನ್ನು ಪರಮಾತ್ಮ ಎದುರುಗೊಳ್ಳುವುದು ಸಹಜವೇ ಆದರೂ ಒಬ್ಬರಿಗೊಬ್ಬರು ಶತ್ರುಗಳಲ್ಲ. ಒಂದು ಸಮಯದಲ್ಲಿ ಪ್ರಕೃತಿಯನ್ನು ಹುಟ್ಟಿಸಿದ ಪರಮಾತ್ಮ ಮತ್ತೆ ತಿರುಗಿ ಒಂದುಸಲ ತನ್ನಲ್ಲೇ ಲೀನ ಮಾಡಿಕೊಂಡು ಪ್ರಕೃತಿಯನ್ನು ಇಲ್ಲದಂತೆ ಮಾಡುವನು. ಪ್ರಕೃತಿಯನ್ನು ಹುಟ್ಟಿಸಿದವನು, ಪೋಷಿಸುವವನು ತಿರುಗಿ ಇಲ್ಲದಂತೆ ಮಾಡುವವನು ಪರಮಾತ್ಮ. ಹುಟ್ಟಿಸಿದ ತಂದೆಯಾಗಿ, ಭರಿಸುವ ಭರ್ತನಾಗಿ, ನಶಿಸುವಂತೆ ಮಾಡುವ ಕಾಲನಾಗಿ ಪ್ರಕೃತಿಗೆ ಎಲ್ಲಾ ತಾನಾಗಿದ್ದು ಪ್ರಕೃತಿಯಲ್ಲಿನ ಶಕ್ತಿಯಾಗಿ ಸಹ ತಾನಾಗಿದ್ದಾನೆ. ಎಷ್ಟೋ ವಿಶಾಲವಾಗಿರುವವನು, ಸ್ವಲ್ಪ ವಿಶಾಲವಾದ ಪ್ರಕೃತಿಯನ್ನು ತಯಾರುಮಾಡಿ, ಜಗತಿ ಎನ್ನುವ ಆಟವನ್ನು ಆಡುತ್ತಿದ್ದಾನೆ. ಈ ಆಟದಲ್ಲಿ ಏನೂ ಅಲ್ಲದ ಪರಮಾತ್ಮ ಪುರುಷನ ವೇಷದಾರಿಯಾಗಿದ್ದಾನೆ. ಜಗತಿ ನಾಟಕದ ಪ್ರಕಾರ ಪರಮಾತ್ಮ ಪುರುಷನು. ನಾಟಕಕ್ಕೆ ಅತೀತವಾಗಿ ನೋಡಿದರೆ ಸ್ತ್ರೀ ಪುರುಷನು ಏನೂ ಅಲ್ಲದವನು. ಪ್ರಕೃತಿಯನ್ನು ಪಂಚಭೂತಗಳಾಗಿ ಮಾಡಿ ಪ್ರಪಂಚ ಎಂದಿದ್ದೇವೆ. ಪ್ರಪಂಚವನ್ನು ಸೃಷ್ಠಿಸಿದ ಪರಮಾತ್ಮ ಸಾವು ಹುಟ್ಟುಗಳು ಇರುವ ಜಗತಿಯನ್ನು ಸೃಷ್ಠಿಸಬೇಕೆಂದು ಕೊಂಡಿದ್ದಾನೆ. ಹುಟ್ಟು ಸಾವುಗಳಿರುವ ಜೀವರಾಶಿಗಳನ್ನು ಸೃಷ್ಠಿಸಿ ಪ್ರಪಂಚದಲ್ಲಿ ಜಗತಿಯನ್ನು ನಿರ್ಮಿಸಿದ್ದಾನೆ. **"ಜ"** ಎಂದರೆ ಹುಟ್ಟುವುದು **"ಗತಿ"** ಎಂದರೆ ಸಾಯುವುದೆಂದು, **"ಜಗತಿ"** ಎಂದರೆ ಹುಟ್ಟು ಸಾವುಗಳಿರುವುದೆಂದು ತಿಳಿಯುವಹಾಗೆ ಜೀವಸಮುದಾಯಕ್ಕೆ ಜಗತಿ ಎಂದು ಹೆಸರಿಟ್ಟಿದ್ದಾರೆ. ಪ್ರಕೃತಿಯೆನ್ನುವ ಪ್ರಪಂಚವನ್ನು ತಯಾರು ಮಾಡಿದ ಪರಮಾತ್ಮ, ಅದರಲ್ಲಿ ಜಗತಿ ಎನ್ನುವ ಜೀವರಾಶಿಗಳನ್ನು ತಯಾರಿಸಿದ್ದಾನೆ. ಪ್ರಕೃತಿ ಪುರುಷರು ಸಮಾನವಾದವರಾಗಿ, ಅಂದರೆ ಪ್ರಪಂಚ ಪರಮಾತ್ಮ ಸಮಾನವಾದವರಾದಾಗ, ನಂತರ

ಪ್ರತ್ಯೇಕವಾಗಿ ಹುಟ್ಟಿ ಬಂದಿರುವುದು ಜಗತಿ. ಇಂದಿಗೂ ಪರಮಾತ್ಮ ಪ್ರಪಂಚವನ್ನು ಜಗತಿಯನ್ನು ಎರಡನ್ನೂ ಸೃಷ್ಠಿಸಿದ್ದಾನೆ. ತನ್ನನ್ನು ಲೆಕ್ಕಿಸಿಕೊಂಡರೆ ಮೂರಾಗುತ್ತವೆ. ಮೊದಲು ಏನೂ ಆಗದ ಪರಮಾತ್ಮ ಪ್ರಕೃತಿಯನ್ನು ತಯಾರಿಸಿ, ತಾನು ಪುರುಷನಾಗಿ ಪ್ರಕೃತಿಯನ್ನು ಸತಿಯನ್ನಾಗಿಸಿಕೊಂಡು, ತಾನು ಭರ್ತನಾಗಿದ್ದು ಜಗತಿ ಎನ್ನುವ ಪ್ರತ್ಯೇಕವಾದ ಸಂತಾನವನ್ನು ತಯಾರು ಮಾಡಿದ್ದಾನೆ. ಈ ವರಸೆಗಳು ಇಲ್ಲದೆ ನೋಡಿದರೆ ಏನುಅಲ್ಲದ ಪರಮಾತ್ಮ ತನ್ನಿಂದ ಮೂರು ಭಾಗಗಳನ್ನು ಸೃಷ್ಠಿಸಿದ್ದಾನೆ. ಪ್ರಕೃತಿಯನ್ನು, ಪುರುಷನನ್ನು, ಜಗತಿಯನ್ನು. ಪ್ರಕೃತಿ ಸ್ತ್ರೀ, ಪರಮಾತ್ಮ ಪುರುಷನು, ಜಗತಿ ನಪುಂಸಕನೆಂದು ತಿಳಿಯಬೇಕು. ಮಧ್ಯದಲ್ಲಿರುವ ನಪಂಸಕನನ್ನು ಈಕಡೆ ಪ್ರಕೃತಿ ತನ್ನ ಕಡೆಗೆ ಎಳೆದುಕೊಳ್ಳುವುದು, ಆಕಡೆ ಪರಮಾತ್ಮ ತನ್ನ ಕಡೆ ಎಳೆದುಕೊಳ್ಳುವುದು ಮುಖ್ಯವಾದ ಆಟ. ಆಟ ಆಡುವುದಕ್ಕೆ ಒಂದು ಪದ್ಧತಿ ಇರುತ್ತದೆ, ಆಟದ ಪದ್ಧತಿಗಳನ್ನು ನಿರ್ಣಯಿಸಿ ಆಟವನ್ನು ಇಟ್ಟಿರುವ ಪರಮಾತ್ಮ, ತಾನು ಎಲ್ಲದಕ್ಕು ಸೃಷ್ಠಿಕರ್ತ ದೊಡ್ಡವನಾದರೂ ತಾನು ನಿರ್ಣಯಿಸಿದ ಪದ್ಧತಿಗಳ ಪ್ರಕಾರ ಆಟ ಆಡುತ್ತಿದ್ದಾನೆ. ಈ ಆಟಕ್ಕೆ ಉಳಿದ ಆಟಗಳ ಹಾಗೆ ಸ್ವಲ್ಪ ಕಾಲ ನಿರ್ಣಯವಿದೆ. ಫುಟ್ ಬಾಲ್‌ಗೆ ಒಂದುವರೆ ತಾಸು, ಕ್ರಿಕೆಟ್‌ಗೆ 50 ಓವರುಗಳು ಎನ್ನುವಹಾಗೆ ಜಗತಿ ಎನ್ನುವ ಆಟಕ್ಕೆ ಸಾವಿರ ಯುಗಗಳು ಅಥವಾ 108 ಕೋಟಿ ಸಂವತ್ಸರಗಳ ಪರಿಮಿತಿ ಇದೆ. ನಂತರ ಸ್ವಲ್ಪ ವಿರಾಮ, ಆ ನಂತರ ಆಟ ಮತ್ತೆ ಸಾಗುತ್ತಾ ನಡೆಯುತ್ತಿದೆ. ಆಟದ ಸಮಯ 108 ಕೋಟಿ ಸಂವತ್ಸರಗಳು ವಿರಾಮ ಸಹ ಅಷ್ಟೇ ಸಮಯ.

ಏನೂ ಆಗದವನು, ಇಂತಹವನೆಂದು ಯಾರಿಂದಲೂ ಹೇಳಲಾಗದವನು, ಮೊದಲು ಪ್ರಪಂಚವನ್ನು ನಂತರ ಜಗತಿಯನ್ನು ತಯಾರು ಮಾಡಿದ್ದಾನೆ ಅಲ್ಲವೆ! ಪ್ರಕೃತಿಯನ್ನು ತಯಾರು ಮಾಡಿ ತಾನು ಪುರುಷನೆಂದು ಗುರುತನ್ನು ತಂದುಕೊಂಡಿದ್ದಾನೆ. ತಾನು ಪುರುಷನಾಗಿ ತನ್ನ ಬೀಜವನ್ನು ಭರಿಸಲ್ಪಟ್ಟು ಗರ್ಭ ಧರಿಸುವ ಪ್ರಕೃತಿಯನ್ನು ಐದು ಭಾಗಗಳನ್ನಾಗಿ ಮಾಡಿದ್ದಾನೆ. ಅಂತಹ ಪ್ರಕೃತಿಯನ್ನೇ ಪಂಚಭೂತಗಳೆಂದು ಪ್ರಪಂಚವೆಂದು ಕರೆಯುತ್ತಿದ್ದೇವೆ. ತನ್ನಿಂದಲೇ ತಯಾರುಮಾಡಲಾದ ಜಗತಿಯನ್ನು ಮೂರು ಭಾಗಗಳಾಗಿ ವಿಭಜಿಸಿದ್ದಾನೆ. ಜೀವರೂಪವಾದ ಜಗತಿ ಜೀವಾತ್ಮಯೆಂದು, ಆತ್ಮಯೆಂದು, ಪರಮಾತ್ಮಯೆಂದು ಮೂರು ವಿಧಗಳಾಗಿ ವಿಭಜಿಸಿದ್ದಾನೆ. ಜೀವಾತ್ಮರನ್ನು, ಆತ್ಮನನ್ನು ತಯಾರು ಮಾಡಿ ತಾನು ಪರಮಾತ್ಮನೆನ್ನುವ ಗುರುತನ್ನು ತಂದುಕೊಂಡಿದ್ದಾನೆ. ಪ್ರಕೃತಿ ಪಕ್ಕದಲ್ಲಿ ಪುರುಷನಾಗಿ ಆತ್ಮಗಳ ಪಕ್ಕದಲ್ಲಿ ಪರಮಾತ್ಮನಾಗಿ ಗುರುತನ್ನು ತಂದುಕೊಂಡಿದ್ದಾನೆ. ಪ್ರಕೃತಿ ಇದ್ದಾಗ, ಆತ್ಮಗಳಿದ್ದಾಗ ಮಾತ್ರ ಪುರುಷನು ಪರಮಾತ್ಮ

ಎಂದು ಕರೆಯುವುದಕ್ಕೆ ಆಧಾರವಿದೆ. ಅವು ಇಲ್ಲದಿದ್ದರೇ ಆತನನ್ನು ಏನೆಂದು ಹೇಳುವುದಕ್ಕೂ ಅವಕಾಶವಿಲ್ಲ. ಏನೂ ಆಗದವನು ಪ್ರಪಂಚದಿಂದ ಪುರುಷನೆಂದು, ಆತ್ಮಗಳಿಂದ ಪರಮಾತ್ಮನೆಂದು ಅರ್ಥವಾಗಿದೆಯೆಂದುಕೊಳ್ಳುತ್ತೇನೆ. ಪ್ರಕೃತಿ ಪುರುಷರಿಗೆ ಹುಟ್ಟಿರುವುದು ಜೀವಸಮುದಾಯವಾದ ಜಗತಿ. ಜಗತಿಯಲ್ಲಿ ತಾಯಿತಂದೆಯರಾದ ಪ್ರಕೃತಿ ಪುರುಷರ ಲಕ್ಷಣಗಳಿರುವಹಾಗೆ ಪರಮಾತ್ಮನಿಂದ ತಯಾರಿಸಲಾಗಿದೆ.

ಪ್ರಕೃತಿಯಲ್ಲಿ ಪುರುಷನಿಗಿಂತ ವಿರುದ್ಧ ಲಕ್ಷಣಗಳಿರುವ ಹಾಗೆ ಜೋಡಣೆ ಇದೆ. ಜಗತಿಯಲ್ಲಿ ಮಾತ್ರ ಪ್ರಕೃತಿ ಪುರುಷರ ಎರಡರ ಲಕ್ಷಣಗಳು ಮಿಳಿತವಾಗಿವೆ. ಜೀವರೂಪವಾದ ಜಗತ್ತಲ್ಲಿ ಪರಮಾತ್ಮ ಸಂಬಂಧಿತ ಜೀವಾತ್ಮ ಆತ್ಮರು, ಪ್ರಕೃತಿ ಸಂಬಂಧಿತ ಶರೀರಗಳು ಎರಡು ಇವೆ. ಅಷ್ಟೇ ಅಲ್ಲದೆ ದೇವರಿದ್ದಾನೆನ್ನುವ ನಂಬಿಕೆ ಆತ್ಮ ಪರವಾಗಿ, ಇಲ್ಲ ಎನ್ನುವ ದೇವರಿಗೆ ವಿರುದ್ಧತೆ ಪ್ರಕೃತಿ ಪರವಾಗಿ ಎರಡು ಇವೆ. ಜಗತಿಯಾಗಿರುವ ಮಾನವರಲ್ಲಿ ಪ್ರಕೃತಿ ಪುರುಷರ ಲಕ್ಷಣಗಳಿದ್ದು, ಪ್ರಕೃತಿ ಪುರುಷರು ಹೀಗಿದ್ದಾರೆಂದು ತಿಳಿಸುವ ಸಲುವಾಗಿ ಪ್ರಕೃತಿಗೆ ಪ್ರತಿರೂಪವಾಗಿ ಸ್ತ್ರೀ ಶರೀರಗಳು, ಪರಮಾತ್ಮನಿಗೆ ಪ್ರತಿ ರೂಪವಾಗಿ ಪುರುಷರ ಶರೀರಗಳು ತಯಾರಾಗಿವೆ. ಪ್ರಕೃತಿ ಪರಮಾತ್ಮರೇ ಅಲ್ಲದೇ ಜಗತ್ತು ಸಹ ಇದೆಯೆಂದು ತಿಳಿಯುವಹಾಗೆ ಜಗತ್ತಿಗೆ ಪ್ರತಿರೂಪವಾಗಿ ನಪುಂಸಕರು ಸಹ ತಯಾರಾಗಿದ್ದಾರೆ. ಸ್ತ್ರೀ, ಪುರುಷರು, ನಪುಂಸಕರು ಮೂವರು ಪ್ರಕೃತಿ, ಪರಮಾತ್ಮ, ಜಗತಿಗೆ ಪ್ರತಿರೂಪಗಳಾಗಿ ಇದ್ದಾರೆ. ಪ್ರಕೃತಿ = ಸ್ತ್ರೀ, ಜಗತಿ = ನಪುಂಸಕನು, ಪರಮಾತ್ಮ = ಪುರುಷನು (ಗಂಡು). ಹುಟ್ಟಿದ ಪ್ರಪಂಚಕ್ಕೆ ಹೆಂಗಸರು, ಜಗತ್ತಿಗೆ ಗಂಡುಜೋಗತಿ (ನಪುಂಸಕರು), ಹುಟ್ಟದ ಪರಮಾತ್ಮನಿಗೆ ಪುರುಷನನ್ನು ಗುರುತಾಗಿ ಇಟ್ಟು ತನ್ನ ಸೃಷ್ಠಿ ಹೀಗಿದೆಯೆಂದು ಎಲ್ಲರಿಗೂ ತಿಳಿಯುವಹಾಗೆ ಮಾಡಿದ್ದಾನೆ. ಅಷ್ಟೇ ಅಲ್ಲದೆ ಪರಮಾತ್ಮ ಪ್ರಕೃತಿ ಎಂಬ ಎರಡರಿಂದಲೇ ಜಗತ್ತು ಹುಟ್ಟಿದೆಯೆಂದು ತಿಳಿಯುವಹಾಗೆ ಹೆಣ್ಣು ಗಂಡಿಗೆ ಸಂತಾನವನ್ನು ಹುಟ್ಟುವಹಾಗೆ ಮಾಡಿದ್ದಾನೆ. ಎಲ್ಲರಿಗೂ ಕಾಣಿಸುವ ತಾಯಿ, ತಂದೆ, ಸಂತಾನ ಆದಿಯಲ್ಲಿನ ಸೃಷ್ಠಿ ವಿಧಾನ. ಎಲ್ಲದರಲ್ಲೂ ಬುದ್ಧಿಯನ್ನು ಉಪಯೋಗಿಸುವ ಮಾನವನು ಸ್ತ್ರೀಗೆ ಭಿನ್ನವಾಗಿರುವ ಪುರುಷನನ್ನು ಕುರಿತು, ಅವರಿಗೆ ಉಂಟಾಗುವ ಸಂತಾನವನ್ನು ಕುರಿತು, ಏಕೆಹೀಗಿದೆಯೆಂದು ಯೋಚಿಸುತ್ತಿಲ್ಲ. ಆಧ್ಯಾತ್ಮಿಕ ವಿದ್ಯೆಯಲ್ಲಿ ಅಕ್ಷರಾಭ್ಯಾಸವಾದ ಸೃಷ್ಠಿ ರಹಸ್ಯವನ್ನು ತಿಳಿಯದೇ ಹೋದರೆ ಆಧ್ಯಾತ್ಮಿಕವೇ ತಿಳಿಯದೇ ಹೋಗುವುದು.

ಇದು ಒಂದು ಆಟವೆಂದು ದೇವರಿಗು ಪ್ರಕೃತಿಗೂ ಮಧ್ಯದಲ್ಲಿ ನಡೆಯುವ ಶತ್ರುತ್ವರಹಿತ ಹೋರಾಟವೆಂದು ತಿಳಿಯಬೇಕು. ಪ್ರಕೃತಿ ಪರಮಾತ್ಮರ ಆಟದಲ್ಲಿ ಜೀವಾತ್ಮನನ್ನು ತಮ್ಮ ಕಡೆ ಅವರು ಸೆಳೆದುಕೊಳ್ಳುವುದಕ್ಕೆ ನೋಡುತ್ತಿರುವರು. ಪರಮಾತ್ಮ ತನ್ನ ಜ್ಞಾನವನ್ನು ಬೋಧಿಸಿ ತನ್ನ ಕಡೆ ಬರುವಹಾಗೆ ಮಾಡಿಕೊಳ್ಳುವುದು ತನ್ನ ಆಟದಲ್ಲಿ ಕರ್ತವ್ಯವಾದಾಗ, ಪ್ರಕೃತಿ ತನ್ನ ಆಯುಧಗಳಾದ ಗುಣಗಳೊಂದಿಗೆ ಮನುಷ್ಯನಿಗೆ ಬಿಡುವು ತಾಳ್ಮೆ ಇಲ್ಲದಂತೆ ಮಾಡಿ, ದೇವರನ್ನು ಕುರಿತು ಯೋಚಿಸುವ ಅವಕಾಶವೇ ಮನುಷ್ಯನಿಗೆ ಇಲ್ಲದಂತೆ ಮಾಡುತ್ತಿದೆ. ಎಲ್ಲರನ್ನು ಅವರವರ ಕೆಲಸಗಳಲ್ಲಿ ಸಿಲುಕಿಸಿ, ಧ್ಯಾಸ ಆ ಕೆಲಸಗಳ ಮೇಲೆ ಮರಳಿಸಿ, ಆಸೆಯಿಂದ ಅದಕ್ಕೆ ಅನುಬಂಧ ಗುಣಗಳಿಂದ ಮನುಷ್ಯನನ್ನು ದೇವರಕಡೆ ಹೋಗದಂತೆ  ಮಾಡುತ್ತಿದೆ. ಸೃಷ್ಠಿಯಲ್ಲಿ ಪರಮಾತ್ಮ ಪ್ರಕೃತಿ ಮಧ್ಯೆ ನಡೆಯುವ ಅತಿ ದೊಡ್ಡ ಈ ಆಟಕ್ಕೆ ಹೆಸರಿಲ್ಲ. ಪ್ರಕೃತಿ ಮಾಯೆ ರೂಪದಲ್ಲಿ ತನ್ನನ್ನು ಯಾರೂ ಗುರುತಿಸದ ಹಾಗೆ ಆಡುತ್ತಾ ಎಲ್ಲರನ್ನು ತನ್ನ ಕಡೆ ಸೆಳೆದುಕೊಳ್ಳುತ್ತಿದೆ. ಜಗತ್ತಲ್ಲಿ ಯಾರಾದರೂ ದೇವರ ಧ್ಯಾಸ ಹೊಂದಿದರೂ, ದೇವರನ್ನು ಕುರಿತು ತಿಳಿದುಕೊಳ್ಳಬೇಕೆಂದು ಪ್ರಯತ್ನಿಸಿದರೂ, ಮಾಯೆ (ಪ್ರಕೃತಿ) ಪ್ರತ್ಯೇಕವಾಗಿ ಅವನ ಮೇಲೆ ದೃಷ್ಠಿ ಇಟ್ಟು ಅವನನ್ನು ಸಹ ತನ್ನ ಬುಟ್ಟಿಯಲ್ಲಿ ಹಾಕಿಕೊಳ್ಳುತ್ತದೆ. ದೇವರು ಮಾಯೆಯೊಂದರ ಹೋರಾಟದಲ್ಲಿ ಪ್ರಸ್ತುತ ಕಾಲದಲ್ಲಿ ಮಾಯೆಗೇ ಬಹಳ ಬಲವಿರುವಹಾಗೆ, ಅದರ ಕಡೆಯೇ ಶೇ.99 ರಷ್ಟು ಮನುಷ್ಯರಿದ್ದಹಾಗೆ ತಿಳಿಯುತ್ತಿದೆ. ಇಂತಹ ಸಂದರ್ಭಗಳಲ್ಲಿ, ದೇವರ ಸೋಲು ತಪ್ಪುವುದಿಲ್ಲವೇನೋ ಅನಿಸುವ ಸಮಯದಲ್ಲಿ, ಪರಮಾತ್ಮ ಸಹ ತಾನು ಚೆನ್ನಾಗಿ ಆಡಿ ಗೆಲ್ಲುವುದಕ್ಕೆ ಪ್ರಯತ್ನಿಸಬೇಕು ಅಲ್ಲವೆ! ಆದ್ದರಿಂದ ಆತನ ಪ್ರಯತ್ನದಲ್ಲಿ ಭಾಗವಾಗಿ ಮನುಷ್ಯನಾಗಿ ಮನುಷ್ಯರ ಮಧ್ಯೆದಲ್ಲಿ ಬಂದು, ತನ್ನನ್ನು ಕುರಿತು ತಾನೇ ಹೇಳಿಕೊಂಡು, ತನ್ನ ಕಡೆ ಮರಳಿಸುವುದಕ್ಕೆ ಪ್ರಯತ್ನಿಸುತ್ತಾನೆ. ಆಟ ಎಂದರೆ ಗೆಲುವು ಸೋಲುಗಳ ಮಧ್ಯೆ ಸಾಗುವ ಹೋರಾಟವೇ ಅಲ್ಲವೆ! ಮೊದಲೇ ಹೇಳಿಕೊಂಡಿದ್ದೇವೆ ಇದು ಶತ್ರುತ್ವರಹಿತ ಯುದ್ಧವೆಂದು. ಈ ಹೋರಾಟದಲ್ಲಿ ಯಾರ ವ್ಯೂಹ ಅವರದ್ದು. ಮನುಷ್ಯನಲ್ಲೇ ಮಾಯೆ ದೇವರು ಇಬ್ಬರು ಇದ್ದರೂ ಅವರ ವಿಷಯ ಮನುಷ್ಯನಿಗೆ ತಿಳಿಯದಂತಿದೆ. ಆದ್ದರಿಂದ ಮನುಷ್ಯ ದೇವರನ್ನಾಗಲಿ, ಮಾಯೆಯನ್ನಾಗಲಿ ಗುರುತಿಸದೇ ಇದ್ದಾನೆ. ತಾನು ಯಾವಕಡೆ ಇದ್ದಾನೆನ್ನುವುದು ಸಹ ತಿಳಿದಿಲ್ಲ. ತಮಗೆ ತಿಳಿಯದೆ ಮಾಯೆ ಕೈಯಲ್ಲಿ ಸಿಲುಕಿಕೊಂಡ ಮನುಷ್ಯರನ್ನು ಅದರಿಂದ ಬಿಡಿಸಬೇಕೆಂದು ದೇವರು ಸಹ ಪ್ರಯತ್ನಿಸುತ್ತಿರುವನು. ಆ ಪ್ರಯತ್ನದಲ್ಲೇ ಪರಮಾತ್ಮ ಭಗವಂತನಾಗಿ ಭೂಮಿ ಮೇಲೆ ಹುಟ್ಟಬೇಕಾಗಿದೆ. ಆದರೆ ಆಟದ ನಿಯಮಗಳ ಪ್ರಕಾರ ತಾನು ಪರಮಾತ್ಮನೆಂದು ಮನುಷ್ಯರಿಗೆ ತಿಳಿಯಬಾರದು.

ಯಾರಿಗೂ ತಿಳಿಯದ ಹಾಗೆ ತಾನು ಮನುಷ್ಯನ ಹಾಗೆ ಪರಮಾತ್ಮನನ್ನು ಕುರಿತು ತಾನೇ ಹೇಳಬೇಕಾಗಿ ಬರುತ್ತದೆ. ತನ್ನ ವಿಷಯವನ್ನು ತಾನೇ ಹೇಳುತ್ತಿದ್ದರೂ, ತನ್ನ ಧರ್ಮಗಳನ್ನು ಪುನರುದ್ಧರಿಸಿದರೂ, ಮಾಯೆ ಮನುಷ್ಯರಲ್ಲಿ ಇದ್ದು ಭಗವಂತನನ್ನು ಮನುಷ್ಯರಲ್ಲಿ ಅಧಮನಾಗಿ ಅಜ್ಞಾನಿಯಾಗಿ ತೋರಿಸುತ್ತಿದೆ. ಆತನ ಮಾತುಗಳು ಅಧರ್ಮಗಳೆಂದು, ತನ್ನವೇ ನಿಜವಾದ ಧರ್ಮಗಳೆಂದು ಬೋಧಿಸುವಹಾಗೆ ಗುರುಗಳನ್ನೇ ತಯಾರಿಸಿಟ್ಟಿದೆ. ಮಾಯೆಯೇ ಸ್ವತಃವಾಗಿ ಗುರುಗಳು, ಸ್ವಾಮಿಗಳ ರೂಪದಲ್ಲಿ ಭಗವಂತನಿಗೆ ಪೋಟಿಯಾಗಿ ಬರುತ್ತಿದೆ. ತನ್ನ ಸಿಹಿಯಾದ ಮಾತುಗಳನ್ನು ದೈವಜ್ಞಾನವಾಗಿ ವರ್ಣಿಸಿ, ದೇವರ ಜ್ಞಾನವನ್ನು ನಂಬದೆಹಾಗೆ, ತಾನು ಹೇಳುವ ಜ್ಞಾನವನ್ನೇ ನಂಬುವಹಾಗೆ ಮಾಡುತ್ತಿದೆ. ಯಾವುದು ದೇವರ ಧರ್ಮಗಳೋ ತಿಳಿಯದ ಹಾಗೆ ತಾನೂ ಸಹ ಪರಮಾತ್ಮ, ಮೋಕ್ಷ, ಜ್ಞಾನ, ಸಾಧನೆ ಎನ್ನುವ ಪದಗಳನ್ನು ಉಪಯೋಗಿಸಿ ಹೇಳುತ್ತಲೇ ತನ್ನ ಧರ್ಮಗಳನ್ನು ಮಾನವರಿಗೆ ಅಂಟಿಸುತ್ತಿದೆ. ಮಾಯೆ ಯೊಂದರ ಧರ್ಮಗಳ ಹತ್ತಿರ ದೇವರ ಧರ್ಮಗಳನ್ನು ಗುರುತಿಸದ ಹಾಗೆ ಮಾಡುತ್ತಿದೆ. ದೇವರ ಕಡೆ ಹೋಗಬೇಕೆಂದುಕೊಳ್ಳುವವನಿಗೆ ಯಾವುವು ಧರ್ಮಗಳೋ, ಯಾವುವು ಅಧರ್ಮಗಳೋ ತಿಳಿಯದ ಹಾಗೆ ಮಾಡಿ ಯಾರು ಏನು ಹೇಳಿದರೂ ನಂಬುವ ಹಾಗೆ ಮಾಡುತ್ತಿದೆ. ಮಾಯೆ ದೇವರು ಇಬ್ಬರಲ್ಲಿ ಯಾರು ಅವತರಿಸಿದರೂ ಅವರ ಇರುವಿಕೆಯನ್ನು ಹೇಳಿಕೊಳ್ಳಬಾರದೆನ್ನುವುದು ಆಟದ ನಿಯಮ. ಪರಮಾತ್ಮ ಭೂಮಿ ಮೇಲೆ ಭಗವಂತನಾಗಿ ಅವತರಿಸಿ ತಾನು ಪರಮಾತ್ಮನೆಂದು ಹೇಳಿಕೊಳ್ಳದ ನಿಯಮದ ಪ್ರಕಾರ ಪ್ರಕೃತಿ ಸಹ ಭೂಮಿ ಮೇಲೆ ಜನ್ಮಿಸಿ ತಾನು ಮಾಯೆಯೆಂದು ಹೇಳಿಕೊಳ್ಳುವುದಿಲ್ಲ. ಮಾಯೆ ಅವತರಿಸಿದರೂ ನಾನು ಭಗವಂತನೆಂದು ಹೇಳಿಕೊಳ್ಳಬಹುದು ಆ ಸೂತ್ರದ ಪ್ರಕಾರ ಮಾನವನಿಗೆ ತಾನೇ ಭಗವಂತನೆಂದು ತಿಳಿಸುತ್ತಾ, ಎಷ್ಟೋ ಮಹತ್ವಗಳನ್ನು ತೋರಿಸುತ್ತಾ, ಎಷ್ಟೋ ಸ್ವಾಮಿಗಳಾಗಿ ಮಾಯೆ ಅವತರಿಸುತ್ತಿದೆ. ಪರಮಾತ್ಮ ಭೂಮಿ ಮೇಲೆ ಒಂದು ಕಡೆ ಭಗವಂತನಾಗಿ ಅವತರಿಸಿದರೆ, ಪ್ರಕೃತಿ ಭೂಮಿ ಮೇಲೆ ಎಷ್ಟೋ ಜನರನ್ನು ಭಗವಂತನೆನ್ನುವ ಹೆಸರೊಂದಿಗೆ ತಯಾರಿಸುತ್ತಿದೆ. ತನ್ನ ಧರ್ಮಗಳನ್ನು ತಿಳಿಸುವುದಕ್ಕೆ ಪರಮಾತ್ಮ ಒಂದು ಕಡೆ ಹುಟ್ಟಿ ತಾನು ಭಗವಂತನೆಂದು ಗುರುತು ಇಲ್ಲದೆ ಇದ್ದರೆ, ಮಾಯೆ ಮಾತ್ರ ಆತನ ಜನ್ಮಕ್ಕೆ ಮೊದಲಿನಿಂದಲೇ ಎಷ್ಟೋ ಜನರನ್ನು ಭಗವಂತನೆಂದು ಹೆಸರು ಹೊಂದಿದವರನ್ನು ತಯಾರಿಸಿ, ಅವರ ಮಾತನ್ನೇ ಕೇಳುವ ಹಾಗೇ, ನಿಜವಾದ ಭಗವಂತನು ಹೇಳಿದ ಮಾತುಗಳನ್ನು ಕೇಳದಹಾಗೆ ಮಾಡುತ್ತಿದೆ. ಯಾರ ಪ್ರಯತ್ನ ಅವರದೆನ್ನುವಂತೆ ಮಾಯೆ ಕೆಲಸ ಮಾಯೆ, ದೇವರ ಕೆಲಸ ದೇವರು ಮಾಡಿಕೊಳ್ಳುತ್ತಾ ಹೋಗುತ್ತಿದ್ದಾರೆ. ಮಾಯೆ ಯಾವಾಗಲೂ ಗುಣಗಳ ರೂಪದಲ್ಲಿ

ಮನುಷ್ಯ ಶರೀರದಲ್ಲಿರುವಾಗ, ದೇವರು ಸಹ ಆತ್ಮ ರೂಪವಾಗಿ ಇದ್ದಾನೆ. ಮಾಯೆ ಪರಮಾತ್ಮರು ಭೂಮಿ ಮೇಲೆ ಮನುಷ್ಯರ ರೂಪದಲ್ಲಿ ಬರುತ್ತಾರೆಂದುಕೊಂಡಿದ್ದೇವಲ್ಲವೆ! ಹಾಗೆ ಬರುವವರು ಯಾವ ಶರೀರಗಳನ್ನು ಧರಿಸಿ ಬರುತ್ತಾರೆಂದು ತಿಳಿಯಬೇಕಾಗಿದೆ. ಮಾಯೆ ಭೂಮಿ ಮೇಲೆ ಪುರುಷ ಶರೀರವನ್ನು ಧರಿಸಿ ಭಗವಂತನಾಗಿ, ಹಾಗೇ ಸ್ತ್ರೀ ಶರೀರವನ್ನು ಧರಿಸಿ ಭಗವತಿಯಾಗಿ ಬರುತ್ತಿದೆ. ಪರಮಾತ್ಮ ಮಾತ್ರ ಪುರುಷ ಶರೀರವನ್ನು ಧರಿಸಿ ಬರುತ್ತಿದ್ದಾನೆ. ಪರಮಾತ್ಮ ವಾಸ್ತವಕ್ಕೆ ಪುರುಷನೇ ಆದ್ದರಿಂದ ಪುರುಷ ಶರೀರ ಮಾತ್ರ ಧರಿಸುತ್ತಿದ್ದಾನೆ. ಪ್ರಕೃತಿ ಸ್ತ್ರೀಯೇ ಆದ್ದರಿಂದ ಸ್ತ್ರೀ ಶರೀರವನ್ನು ಧರಿಸುತ್ತಿದೆ. ಹಾಗೇ ತಾನೂ ಸಹ ಪುರುಷನೇ ಎಂದು ಯಾಮಾರಿಸಲು ಪುರುಷ ಶರೀರವನ್ನು ಸಹ ಧರಿಸುತ್ತಿದೆ. ಭಗವತಿ ಭಗವಂತರಲ್ಲಿ ಯಾವನು ನಿಜವಾದ ಭಗವಂತನೋ ಅರ್ಥವಾಗದೆ ಹೋಗುತ್ತಿದೆ. ಒಟ್ಟಾರೆ ಭಗವಂತನು ಪುರುಷನಾಗಿಯೇ ಜನ್ಮಿಸುವನೆಂದು ತಿಳಿಯಬೇಕು.

**879. (4) ಮೋಕ್ಷ ಹೊಂದುವ ಕಾಲ ಯಾರ್ಯಾರಿಗೆ ವರ್ತಿಸುತ್ತದೆ?**

ಉ. ಆತ್ಮ ಜೀವಾತ್ಮರಿಗೆ.

**ವಿವರ :** ಮೋಕ್ಷ ಹೊಂದುವ ಕಾಲ ಯೋಗಿಗಳಿಗೆ ಮಾತ್ರ ವರ್ತಿಸುವುದೆಂದು ಸಹ ಕೆಲವರು ಹೇಳಬಹುದು. ಯೋಗಿಗಳು ಮುಕ್ತಿ ಹೊಂದುವ ಕಾಲವನ್ನು ಗೀತೆಯಲ್ಲಿಯೂ ಸಹ ತಿಳಿಸಿದ್ದಾರೆ. ಇಲ್ಲಿ ಪ್ರಶ್ನೆಯಲ್ಲಿ ಯಾರ್ಯಾರಿಗೆಂದು ವಿವರವನ್ನು ಕೇಳಿದ್ದೇವೆ. ಆದ್ದರಿಂದ ಇಂತಹ ಯೋಗಿಗಳೆಂದು ಮೊದಲೇ ಹೇಳಲಾರೆವು. ಯೋಗಿಗಳೆನ್ನುವ ಮಾತು ಸರಿಯಾದ ಉತ್ತರವಲ್ಲ. ಕೆಲವರು ಬ್ರಹ್ಮಯೋಗಿಗಳನ್ನು ಕರ್ಮಯೋಗಿಗಳೆಂದು ವಿವರ ಹೇಳಿದರೂ ಅದು ಉತ್ತರವಲ್ಲ. ಏಕೆಂದರೆ! ಬ್ರಹ್ಮಯೋಗಿಗಳು ಕರ್ಮಯೋಗಿಗಳನ್ನು ಸೇರಿಸಿ ಯೋಗಿ ಗಳೆನ್ನುತ್ತಿದ್ದೇವೆ. ನಿಜವಾದ ಉತ್ತರ ಒಬ್ಬ ಯೋಗಿ ಮೋಕ್ಷವನ್ನು ಹೊಂದಿದರೆ, ಕಾಲ ಸರಿಹೋಗಬೇಕಾದ್ದೇ, ಕಾಲ ಸರಿಹೋಗಿ ಮೋಕ್ಷ ಹೊಂದಿದವನಲ್ಲಿ ಜೀವಾತ್ಮ ಒಬ್ಬನೇ ಮೋಕ್ಷ ಹೊಂದುತ್ತಿಲ್ಲ. ಜೀವಾತ್ಮದೊಂದಿಗೆ ಜೊತೆಯಾಗಿರುವ ಆತ್ಮನು ಸಹ ಮುಕ್ತಿ ಹೊಂದುತ್ತಿದೆ. ಆದ್ದರಿಂದ ಮೋಕ್ಷ ಹೊಂದುವ ಕಾಲ ಯೋಗಿ ಶರೀರದಲ್ಲಿ ಆತ್ಮ ಜೀವಾತ್ಮರೆನ್ನುವ ಇಬ್ಬರಿಗು ಅನ್ವಯಿಸುತ್ತಿದೆ.

**880. (5) ಗುಣ ಚಕ್ರ ಎಷ್ಟು ಭಾಗಗಳಾಗಿ ಇದೆ?**

ಉ. ನಾಲ್ಕು ಭಾಗಗಳಾಗಿ.

**ವಿವರ :** ಈ ಪ್ರಶ್ನೆಗೆ ಬಹಳ ಜನ ಸುಲಭವಾಗಿ ಮೂರು ಭಾಗಗಳಿದೆಯೆಂದು, ಅವುಗಳೇ ಸಾತ್ವಿಕ, ರಾಜಸ, ತಾಮಸಗಳೆಂದು ಹೇಳುತ್ತಿದ್ದಾರೆ. ಅದು ಸರಿಯಾದ ಉತ್ತರವಲ್ಲ. ಈ ಉತ್ತರ ಗುಣಭಾಗಗಳು ಎಷ್ಟು ಎಂದು ಕೇಳಿದರೆ ಸರಿಹೋಗುವುದು. ಇಲ್ಲಿ ಕೇಳಿರುವುದು ಒಟ್ಟು ಗುಣಚಕ್ರ ಎಷ್ಟು ಭಾಗಗಳೆಂದು ಪ್ರಶ್ನೆ. ಗುಣಚಕ್ರವನ್ನು ಶ್ರೀಕೃಷ್ಣನು ನವಿಲುಗರಿಯ ರೂಪದಲ್ಲಿ ತೋರಿಸಿದ್ದಾನೆ. ತೋರಿಸುವುದೇ ಅಲ್ಲದೆ **ಚಾತುರ್ವರ್ಣ್ಯಂ** ಎಂದು ಗೀತೆಯಲ್ಲಿ ಸಹ ಹೇಳಿದ್ದಾನೆ. ನವಿಲುಗರಿಯಲ್ಲಾಗಲಿ, ಆತನು ಹೇಳಿದ ಮಾತುಗಳಲ್ಲಾಗಲಿ ನಾಲ್ಕು ಭಾಗಗಳಿವೆ. ಗುಣಚಕ್ರ ಗುಣಗಳೊಂದಿಗೆ ಕೂಡಿಕೊಂಡಿರುವ ಭಾಗಗಳು ಮೂರು ಒಂದು ಗುಣವಿಲ್ಲದ ಭಾಗ ಸೇರಿ ಒಟ್ಟು ನಾಲ್ಕಾಗಿವೆ. ಗುಣಗಳಲ್ಲಿ ಇರುವವರನ್ನು ಸಾತ್ವಿಕರು, ರಾಜಸರು, ತಾಮಸರೆಂದು ಕರೆಯುತ್ತಿದ್ದೇವೆ. ಗುಣಗಳಿಲ್ಲದ ಭಾಗದಲ್ಲಿರುವವನನ್ನು ಯೋಗಿ ಎನ್ನುತ್ತಿದ್ದೇವೆ ಆದ್ದರಿಂದ ಗುಣಚಕ್ರ ನಾಲ್ಕು ಭಾಗಗಳೆಂದು ಹೇಳಬಹುದು.

**881. (6) ಧರ್ಮಕ್ಕೆ ಎಷ್ಟು ಪಾದಗಳು ಇವೆ?**

ಉ. ಪಾದಗಳು ಇಲ್ಲ.

**ವಿವರ :** ಧರ್ಮ ಒಂದು ವಸ್ತುವಲ್ಲ. ಒಂದು ವಸ್ತುವಾದರೆ ಅಥವಾ ಒಂದು ಪದಾರ್ಥವಾದರೆ ಅದನ್ನು ನಾಲ್ಕು ಭಾಗಗಳನ್ನು ಮಾಡಿ ಒಂದೊಂದು ಭಾಗಕ್ಕೆ ಒಂದೊಂದು ಪಾದವೆಂದು ಹೇಳಬಹುದು. ನಾಲ್ಕೆಂದೇ ಅಲ್ಲ ಒಂದು ಪೂರ್ಣವಾದದ್ದನ್ನು ಎಷ್ಟು ಭಾಗಗಳು ಮಾಡಿದರೆ ಅಷ್ಟು ಭಾಗಗಳೆಂದು ಹೇಳಬಹುದು. ಧರ್ಮ ಒಂದಾಗಿ ಎಲ್ಲಿಯೂ ಇಲ್ಲ. ಧರ್ಮಗಳು ಅನೇಕವಾಗಿವೆ. ಒಂದು ವೇಳೆ ಧರ್ಮ ಒಂದು ಜಂತುವಲ್ಲ, ಅದಕ್ಕೆ ಇಷ್ಟು ಪಾದಗಳಿವೆಯೆಂದು ಹೇಳುವುದಕ್ಕೆ. ಬಹಳ ಜನ ತಮ್ಮ ಮಾತುಗಳಲ್ಲಿ ಧರ್ಮಕ್ಕೆ ನಾಲ್ಕು ಪಾದಗಳಿರುತ್ತಿದ್ದವೆಂದು, ಕೃತ ಯುಗದಲ್ಲಿ ಧರ್ಮ ನಾಲ್ಕು ಪಾದಗಳೊಂದಿಗೆ ನಡೆಯುತ್ತಿದೆಂದು, ಕಲಿಯುಗದಲ್ಲಿ ಒಂದು ಪಾದದಿಂದ ಕುಂಟುತ್ತಾ ನಡೆಯುತ್ತಿದೆಯೆಂದು ಹೇಳುತ್ತಿರುವಾಗ ಕೇಳಿದ್ದೇವೆ. ಧರ್ಮಕ್ಕೆ ಪಾದಗಳೆನ್ನುವ ಮಾತು ಶುದ್ದ ಅಸತ್ಯ. ಗೀತೆಯಲ್ಲಿ ಎಷ್ಟೋ ಧರ್ಮಗಳಿರುವಹಾಗೆ ಹೇಳಿದ್ದಾರೆ. **ಸರ್ವಧರ್ಮಾನ್** ಎಂದು ಸಹ ಹೇಳಿದ್ದಾರೆ. ಧರ್ಮಗಳು ಬೋಧರೂಪದಲ್ಲಿ, ಜ್ಞಾನರೂಪದಲ್ಲಿ ಇವೆಯಾಗಲಿ ಪಾದಗಳು ಕೈಯಿಗಳ ರೂಪದಲ್ಲಿ ಇಲ್ಲ.

**882. (7) ತನಗೆ ಹತ್ತಿರವಾಗಿರುವ ಸ್ತ್ರೀಗೆ ಗಂಡನಾಗಲಿ, ಪುರುಷನಿಗೆ ಹೆಂಡತಿಯಾಗಲಿ ದೂರವಾಗುತ್ತಾರೇನೋ ಎಂದು ಬಾಧೆಬೀಳುತ್ತಾರೆ. ಆ ಬಾಧೆ ಪ್ರೇಮದಿಂದಲಾ,**

**ಕಾಮದಿಂದಲಾ ಅಥವಾ ಮತ್ತೆ ಯಾವ ಗುಣದಿಂದಾದರೂ ಬಂದಿದೆಯಾ ಅಥವಾ ಹೃದಯದಿಂದ ಬಂದಿದೆಯಾ?**

ಉ. ಮೋಹಗುಣದಿಂದ ಬಂದಿದೆ.

**ವಿವರ :** ನನ್ನವರು ನನಗೆ ದೂರವಾಗುತ್ತಾರೇನೋ ಎನ್ನುವ ಬಾಧೆ ಒಂದು ಮೋಹ ಗುಣದಿಂದಲೇ ಉಂಟಾಗುತ್ತಿದೆ. ಈ ವಿಷಯ ಉಳಿದ ಗುಣಗಳಿಗೆ ಸಂಬಂಧವಿಲ್ಲ. ಇದು ಗುಣಗಳಿಂದ ಬಂದಿರುವುದೇ ಆಗಲಿ ಹೃದಯದಿಂದ ಬಂದಿರುವುದಲ್ಲ. ಈ ವಿಷಯವನ್ನೇ ಮೋಹ ಗುಣದಿಂದ ಅರ್ಜುನನು ಸಹ ಯುದ್ಧಸಮಯದಲ್ಲಿ ಬಾಧೆಪಟ್ಟು ಯುದ್ಧ ಮಾಡದೇ ಕುಳಿತಿದ್ದಾನೆ.

**883.** **(8) ದೇವತೆಗಳು ಸಾತ್ವಿಕರಾ, ರಾಜಸರಾ, ತಾಮಸರಾ?**

ಉ. ಮೂರು ಗುಣಗಳಲ್ಲಿರುವವರು.

**ವಿವರ :** ಒಂದು ಗುಣದವರೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಗುಣ ಭಾಗಗಳಾದ ಸಾತ್ವಿಕದಲ್ಲಿ ದೇವತೆಗಳಿದ್ದಾರೆ. ಹಾಗೇ ರಾಜಸದಲ್ಲೂ ತಾಮಸದಲ್ಲೂ ಸಹ ದೇವತೆಗಳಿದ್ದಾರೆ. ಮೂರು ಗುಣಭಾಗಗಳಲ್ಲಿಯೂ ದೇವತೆಗಳಿಗೆ ಸಂಬಂಧಿಸಿದ ಗುಣಗಳಿವೆ ಆದ್ದರಿಂದ ತಾಮಸ ದೇವತೆಗಳಿದ್ದಾರೆ, ರಾಜಸ ದೇವತೆಗಳಿದ್ದಾರೆ, ಸಾತ್ವಿಕ ದೇವತೆಗಳಿದ್ದಾರೆ.

**884.** **(9) ರಾಕ್ಷಸರು ಹೆಚ್ಚಾಗಿ ಯಾವ ಗುಣದಲ್ಲಿರುತ್ತಾರೆ?**

ಉ. ಎಲ್ಲ ಗುಣಗಳಲ್ಲೂ ಇರುತ್ತಾರೆ.

**ವಿವರ :** ಮೂರು ಗುಣಗಳಲ್ಲಿ ರಾಕ್ಷಸ ಗುಣಗಳು, ದೇವತಾ ಗುಣಗಳಿವೆ. ಆದ್ದರಿಂದ ಮೂರರಲ್ಲಿಯೂ ರಾಕ್ಷಸರಿದ್ದಾರೆ. ತಾಮಸದಲ್ಲಿಯೂ, ರಾಜಸದಲ್ಲಿಯೂ, ಸಾತ್ವಿಕದಲ್ಲಿಯೂ ಸಹ ರಾಕ್ಷಸರಿದ್ದಾರೆ. ರಾಕ್ಷಸರಾಗಲಿ, ದೇವತೆಗಳಾಗಲಿ ಒಂದೇ ಗುಣಭಾಗದಲ್ಲಿ ಇರುತ್ತಾರೆನ್ನುವುದಕ್ಕೆ ಅವಕಾಶವಿಲ್ಲ.

**885.** **(10) ಮೀನುಗಳನ್ನು ಹಿಡಿಯುವವನು ಒಬ್ಬನು ಹಿಡಿದ ಮೀನುಗಳನ್ನು ದಡದ ಮೇಲೆ ಹಾಕಿದಾಗ ದಡದ ಮೇಲೆ ಕೊಕ್ಕರೆ ಮೀನುಗಳನ್ನು ತಿನ್ನುತ್ತಿದೆ. ಇನ್ನೊಬ್ಬನು ಈ ವಿಷಯವೆಲ್ಲಾ ನೋಡುತ್ತಾ ಕೊಕ್ಕರೆಯನ್ನು ಓಡಿಸಲಿಲ್ಲ. ದಡದ ಮೇಲೆ ಹಾಕಬೇಡೆಂದು ಹಿಡಿಯುವವನಿಗೂ ಹೇಳಲಿಲ್ಲ. ಇನ್ನೊಂದು ಕೊಕ್ಕರೆ ಮೀನು ಹಿಡಿಯುವವನನ್ನು, ತಿನ್ನುವ**

**ಕೊಕ್ಕರೆಯನ್ನು ನೋಡಿ ಅವನು ಕಷ್ಟಪಟ್ಟು ಮೀನುಗಳನ್ನು ಹಿಡಿದು ಹೋರಗೆ ಹಾಕಿದರೆ ಕೊಕ್ಕರೆ ತಿನ್ನುತ್ತಾ ಇದೆ ಎಂದುಕೊಂಡು, ಅವರ ಕೆಲಸ ಅವರದೇ ನನಗೇಕೆ ಎಂದುಕೊಂಡಿದೆ. ಇಬ್ಬರು ಮನುಷ್ಯರನ್ನು, ಎರಡು ಕೊಕ್ಕರೆಗಳನ್ನು ಆಧ್ಯಾತ್ಮಿಕರೀತ್ಯಾ ಯಾರಾಗಿ ಹೋಲಿಸಬಹುದು.**

ಉ. ಆತ್ಮ, ಜೀವಾತ್ಮ, ಪರಮಾತ್ಮ, ಜ್ಞಾನ ತಿಳಿದ ಜೀವಾತ್ಮ.

**ವಿವರ :** ಶರೀರದಲ್ಲಿ ಆತ್ಮ ಕೆಲಸ ಮಾಡುತ್ತಿದೆ. ಕರ್ಮವನ್ನನುಸರಿಸಿ ಯಾವ ಸಮಯಕ್ಕೆ ಯಾವ ಕೆಲಸ ಮಾಡಬೇಕೋ ಆ ಕೆಲಸವನ್ನು ಆತ್ಮ ಮಾಡುತ್ತಿದೆ. ಕರ್ಮ ಆತ್ಮನಿಂದ ಆಚರಣೆಗೆ ಬಂದು, ಆಚರಣೆಯಲ್ಲಿ ಕಷ್ಟ ಸುಖಗಳ ರೂಪವಾಗಿ ಬದಲಾಗುತ್ತಿದೆ. ಆಚರಣೆಯಲ್ಲಿ ಕಷ್ಟ ಸುಖಗಳನ್ನು ಜೀವಾತ್ಮನು ಅನುಭವಿಸುವುದೊಂದಿಗೆ ಕರ್ಮ ಮುಗಿಯುತ್ತದೆ. ಪ್ರಾರಬ್ಧಕರ್ಮ ಮುಗಿದುಹೋಗಬೇಕೆಂದರೆ, ಜೀವಾತ್ಮನು ಅದನ್ನು ಅನುಭವಿಸಬೇಕೆಂದರೆ, ಶರೀರದಲ್ಲಿ ಚೈತನ್ಯ ಶಕ್ತಿಯಾದ ಆತ್ಮ ಆ ಕರ್ಮವನ್ನನುಸರಿಸಿ ಕೆಲಸ ಮಾಡಿ ಫಲಿತವನ್ನು ಜೀವಾತ್ಮನನ್ನು ಅನುಭವಿಸುವಂತೆ ಮಾಡುತ್ತದೆ. ಜೀವಾತ್ಮ ಅನುಭವಿಸುವುದು, ಆತ್ಮ ಕೆಲಸ ಮಾಡುವುದನ್ನು, ಪರಮಾತ್ಮ ಸಾಕ್ಷಿಯಾಗಿ ಶರೀರದಲ್ಲಿ ನೋಡುತ್ತಲೇ ಇದೆ. ಪರಮಾತ್ಮ ಕೇವಲ ಸಾಕ್ಷೀ ಭೂತನೇಯಾಗಲಿ, ಆತ್ಮನನ್ನು ಮಾಡೆಂದಾಗಲಿ, ಜೀವಾತ್ಮನನ್ನು ಅನುಭವಿಸೆಂದಾಗಲಿ, ಅಥವಾ ಅದಕ್ಕೆ ವಿರುದ್ಧವಾಗಿ ಹೇಳುವುದಾಗಲಿ ಮಾಡುವುದಿಲ್ಲ. ಇದು ಶರೀರದಲ್ಲಿರುವ ತತಂಗ. ಆ ತತಂಗವನ್ನು ಬೇರೆ ವಿಧವಾಗಿ ಹೋಲಿಸಬಹುದು. ಶರೀರದಲ್ಲಿ ಕೆಲಸ ಮಾಡುವ ಆತ್ಮನನ್ನು ಮೀನುಗಳು ಹಿಡಿಯುವವನನ್ನಾಗಿ ವರ್ಣಿಸಿಕೊಳ್ಳೋಣ. ಕರ್ಮಾನುಸಾರ ಲಭಿಸುವ ಕಷ್ಟ ಸುಖಗಳು ಮೀನುಗಳೆಂದು ತಿಳಿದುಕೊಳ್ಳೋಣ. ಒಳಗೆ ಅನುಭವಿಸುವ ಜೀವಾತ್ಮನನ್ನು ದಡದ ಮೇಲೆ ಹಿಡಿದವನು ಹಾಕಿದ ಮೀನುಗಳನ್ನು ತಿನ್ನುವ ಕೊಕ್ಕರೆಯಾಗಿ ತಿಳಿಯೋಣ. ಒಳಗಿನ ವಿಷಯವೆಲ್ಲವನ್ನೂ ನೋಡುತ್ತಾ ಸಾಕ್ಷಿಯಾಗಿ ಮೌನವಾಗಿ ಇರುವ ಪರಮಾತ್ಮನನ್ನು ಏನೂ ಹೇಳದ ಮತ್ತೊಬ್ಬ ಮನುಷ್ಯನಾಗಿ ಲೆಕ್ಕಿಸಿಕೊಳ್ಳೋಣ. ಇಲ್ಲಿಯವರೆಗು ಒಂದು ಶರೀರದಲ್ಲಿರುವ ವಿಷಯ. ಇದೆಲ್ಲವೂ ಅಂದರೆ ಆತ್ಮ ಕೆಲಸ, ಜೀವಾತ್ಮ ಅನುಭವ, ಪರಮಾತ್ಮ ಸಾಕ್ಷಿತ್ವ ಎಲ್ಲವೂ ಜ್ಞಾನ ತಿಳಿದವನಿಗೆ ತಿಳಿಯುವುದು. ಇದೆಲ್ಲವೂ ಅಜ್ಞಾನಿ ಶರೀರದಲ್ಲಿ ನಡೆಯುತ್ತಿದೆಯೆಂದು ತಿಳಿದ ಜ್ಞಾನಿ ಅವನ ಕರ್ಮಾನುಸಾರ ಅವನಿಗೆ

ನಡೆಯುವುದೆಂದು, ಯಾರು ಯಾವ ಕ್ರಿಯೆಯನ್ನು ನಿಲ್ಲಿಸುವುದಿಲ್ಲವೆಂದುಕೊಳ್ಳುವನು. ಬೇರೊಬ್ಬನನ್ನು ನೋಡಿ ಅವನ ಕರ್ಮ ಪ್ರಕಾರ ಅವನು ನಡೆಯುವುದು ತಪ್ಪುವುದಿಲ್ಲ ವೆಂದುಕೊಳ್ಳುವನು. ಈ ವಿಷಯ ಸರ್ವ ಸಾಧಾರಣವಾಗಿ ಎಲ್ಲರಲ್ಲಿಯೂ ನಡೆಯುವುದೆಂದು ತಿಳಿದವನು ಬೇರೆ ಶರೀರಗಳಲ್ಲಿನ ಆತ್ಮನನ್ನು ಕೆಲಸ ಮಾಡಬೇಡೆಂದಾಗಲಿ, ಜೀವಾತ್ಮನಿಗೆ ಬಂದಿರುವ ಕಷ್ಟ ಸುಖಗಳನ್ನು ಅನುಭವಿಸಬೇಡೆಂದಾಗಲಿ ಹೇಳುವುದಿಲ್ಲ. ಯಾರ ಕರ್ಮ ಅವರದೇ ಎಂದುಕೊಳ್ಳುವನು. ಹಾಗೆಂದುಕೊಳ್ಳುವ ಜ್ಞಾನಿ ಮೇಲಿನ ಪ್ರಶ್ನೆಯಲ್ಲಿನ ಎರಡನೆಯ ಕೊಕ್ಕರೆಯಾಗಿ ಭಾವಿಸಬೇಕು.

1. ಮೀನುಗಳನ್ನು ಹಿಡಿಯುವವನು = ಕೆಲಸ ಮಾಡುತ್ತಿರುವ ಆತ್ಮ
2. ಮೀನುಗಳು = ಕಷ್ಟ ಸುಖಗಳು
3. ದಡದ ಮೇಲೆ ತಿನ್ನುವ ಕೊಕ್ಕರೆ = ತಲೆಯೊಳಗೆ ಅನುಭವಿಸುವ ಜೀವಾತ್ಮ
4. ಕೊಕ್ಕರೆಯನ್ನು ಓಡಿಸದವನು, ಹಿಡಿಯುವವನಿಗೆ ಏನೂ ಹೇಳದವನು = ಸಾಕ್ಷೀಭೂತನಾದ ಪರಮಾತ್ಮ
5. ಅವರ ಕೆಲಸ ಅವರದೆಂದುಕೊಂಡ ಕೊಕ್ಕರೆ= ಜ್ಞಾನ ತಿಳಿದ ಮತ್ತೊಬ್ಬನು.

## ಜ್ಞಾನ ಪರೀಕ್ಷೆ

**ಧರ್ಮವರಮು** **ದಿನಾಂಕ–24–07–2002**

**886. (1) ಪ್ರಪಂಚ ಜಗತಿ ಎನ್ನುವವು ಎರಡೂ ಒಂದೇ ಸಲ ಹುಟ್ಟಿವೆಯಾ? ಅಥವಾ ಬೇರೆ ಬೇರೆಯಾಗಿ ಹುಟ್ಟಿವೆಯಾ?**

ಉ. ಬೇರೆ ಬೇರೆಯಾಗಿ ಹುಟ್ಟಿವೆ.

**ವಿವರ :** ಪ್ರಪಂಚ ಜಗತಿ ಎರಡೂ ಒಂದೇ ಎಂದು ಬಹಳ ಜನ ತಿಳಿದುಕೊಳ್ಳಬಹುದು. ಸವಿವರವಾಗಿ ನೋಡುವುದಾದರೆರೆ ಎರಡು ಬೇರೆ ಬೇರೆಯೆಂದು ತಿಳಿಯುತ್ತದೆ. ಪ್ರಪಂಚ ವೆಂದರೆ ಪಂಚಭೂತಗಳೆಂದು ಅರ್ಥ. ಪ್ರಕೃತಿಯನ್ನು ಪ್ರಪಂಚವೆಂದು ಕರೆಯುತ್ತಿದ್ದೇವೆ. ಪ್ರಕೃತಿ, ಎಂದರೂ ಪ್ರಪಂಚವೆಂದರೂ, ಪಂಚಭೂತಗಳೆಂದರೂ ಎಲ್ಲವೂ ಒಂದೇ.

ಜೀವ ಸಮುದಾಯವನ್ನು ಜಗತಿ ಎನ್ನುತ್ತಿದ್ದೇವೆ. ಹುಟ್ಟು ಸಾವು ಇರುವವಾದ್ದರಿಂದ ಜೀವರಾಶಿಗಳೆಲ್ಲವನ್ನು ಸೇರಿಸಿ ಜಗತಿ ಎನ್ನುವುದು ನಡೆದಿದೆ. ಪ್ರಪಂಚ ಬೇರೆ ಜಗತಿ ಬೇರೆ. ಪ್ರಪಂಚದಲ್ಲಿ ಜಗತಿ ಇದೆ. ಮೊದಲು ಏನೂ ಇಲ್ಲದಿರುವಾಗ, ಏನೂ ಅಲ್ಲದ ದೇವರು ಸೃಷ್ಟಿಯನ್ನು ತಯಾರಿಸಿದ್ದಾನೆ. ದೇವರು ತನ್ನ ಸೃಷ್ಟಿಯಲ್ಲಿ ಮೊದಲು ಪ್ರಪಂಚವನ್ನು ಸೃಷ್ಟಿಸಿದ್ದಾನೆ. ಪ್ರಪಂಚವೆನ್ನುವ ಪ್ರಕೃತಿಯನ್ನು ತಯಾರು ಮಾಡಿದ ನಂತರ ಜೀವಸಮುದಾಯವನ್ನು ಒಂದೊಂದಾಗಿ ತಯಾರು ಮಾಡಿದ್ದಾನೆ. ದೇವರಿಂದ ಮೊದಲು ಪ್ರಪಂಚ ನಂತರ ಅದರಲ್ಲಿ ಜಗತಿ ತಯಾರಾಗಿದೆ. ಒಂದೇ ಸಲ ಎರಡೂ ಹುಟ್ಟಲಿಲ್ಲ.

**887. (2) ಪರಮಾತ್ಮನನ್ನು ಪುರುಷನೆಂದು, ಪುರುಷರಲ್ಲಿ ಉತ್ತಮ ಪುರುಷನೆಂದು, ಪುರುಷೋತ್ತಮನೆಂದು ಕರೆಯುತ್ತಿದ್ದೇವೆ. ಅಂತಹದರಲ್ಲಿ ಪರಮಾತ್ಮನನ್ನು ಸ್ತ್ರೀ ಅಲ್ಲ ಪುರುಷನು ಅಲ್ಲ ಎಂದು ಏನೂ ಆಗದಿರುವನೆಂದು ಏಕೆ ಕರೆಯಬೇಕು?**

ಉ. ಮೊದಲು ಏನೂ ಅಲ್ಲದವನು ಆದ್ದರಿಂದ ಹಾಗೆ ಕರೆಯುತ್ತಿದ್ದೇವೆ.

**ವಿವರ :** ಈಗಿರುವ ಪ್ರಪಂಚವೇ ಇಲ್ಲದಿರುವಾಗ ಏನೂ ಆಗದವನಾಗಿರುವುದು ಸಹಜವೇ. ಯಾರ ಊಹೆಗೂ ಸಹ ಸಿಗದ ಸ್ಥಿತಿಯಲ್ಲಿ ಪರಮಾತ್ಮ ಎನ್ನುವ ಹೆಸರಾಗಲಿ, ಪುರುಷೋತ್ತಮನೆನ್ನುವ ಹೆಸರಾಗಲಿ ದೇವರಿಗೆ ಇಲ್ಲವೆಂದು ಹೇಳಬಹುದು. ಇರುವವನು ಏನೂ ಅಲ್ಲದ ಏನೆಂದು ಹೇಳುವುದಕ್ಕು ಸಾಧ್ಯವಿಲ್ಲದೆ ಪುರುಷನು ಅಲ್ಲದ ಸ್ತ್ರೀಯು ಅಲ್ಲದ ಪರಮಾತ್ಮನೆಂದು ಹೇಳುವುದಕ್ಕೂ ಸಹ ಆಗಲಾರದ ವಿಧವಾಗಿ ಇದ್ದಾನೆ. ಈಗಿನ ಪರಮಾತ್ಮ, ಪುರುಷೋತ್ತಮ ಎಂದು ಕರೆಯಲಾಗುತ್ತಿರುವವನು ಆಗ ಇದ್ದರೂ ಆ ವಿಧವಾಗಿ ಕರೆಯುವುದಕ್ಕೂ ಸಹ ಆಗುವುದಿಲ್ಲ. ಮೊದಲು ಒಂದಿದ್ದರೆ ಎರಡನೆಯದ್ದನ್ನು ಯಾವುದೋ ಒಂದು ವಿಧವಾಗಿ ಒಂದರೊಂದಿಗೆ ಒಂದು ಹೋಲಿಸಿ ಕರೆಯಬಹುದು. ಎರಡನೆಯದು ಯಾವುದು ಇಲ್ಲದಿರುವಾಗ ಮೊದಲನೆಯದನ್ನು ಹೋಲಿಸುವುದಕ್ಕೆ ಆಧಾರವೇ ಇರುವುದಿಲ್ಲ. ಆತ್ಮ ಇರುವಾಗ ಎರಡನೆಯದನ್ನು ಪರಮಾತ್ಮನೆಂದು ಕರೆಯುವುದಕ್ಕೆ ಅವಕಾಶವಿದೆ. ಸ್ತ್ರೀ ಇದ್ದರೆ ಅದನ್ನನುಸರಿಸಿ ಪುರುಷನೆನ್ನುವುದಕ್ಕೆ ಅವಕಾಶವಿದೆ. ಪ್ರಪಂಚವೇ ಇಲ್ಲದ ಸಮಯದಲ್ಲಿ, ಏನೂ ಇಲ್ಲದ ಸಮಯದಲ್ಲಿ, ಏನೂ ಆಗದವನೆಂದೇ ಕರೆಯಬೇಕು. ಆಗ ಪುರುಷನು ಅಲ್ಲ, ಪುರುಷೋತ್ತಮನು ಅಲ್ಲ. ಈಗ ಪ್ರಕೃತಿ ಇರುವುದರಿಂದ ಪುರುಷನೆಂದು, ಜೀವಾತ್ಮ ಆತ್ಮಗಳಿರುವುದರಿಂದ ಪರಮಾತ್ಮ, ಪುರುಷೋತ್ತಮ ಎನ್ನುತ್ತಿದ್ದೇವೆ.

**888**. **(3) ಆಧ್ಯಾತ್ಮಿಕವಾಗಿ ಸ್ತ್ರೀ ಪುರುಷನು ಅಲ್ಲದಿರುವನ್ಯಾರು?**

ಉ. ಜೀವಾತ್ಮ.

**ವಿವರ :** ಪ್ರಕೃತಿಯನ್ನು ಸ್ತ್ರೀಯೆಂದು ಪರಮಾತ್ಮನನ್ನು ಪುರುಷನೆಂದು ಹೇಳಿಕೊಂಡಿದ್ದೇವೆ. ಪರಮಾತ್ಮ ಬೀಜದಾತನಾಗಿ, ಪ್ರಕೃತಿ ಯೊಂದರ ಗರ್ಭದಿಂದ ಜೀವರಾಶಿ ಹುಟ್ಟುತ್ತಿದೆ. ಪ್ರಕೃತಿ ಪುರುಷರಿಗೆ ಹುಟ್ಟಿದ ಜೀವಾತ್ಮನಲ್ಲಿ ಪ್ರಕೃತಿ ಲಕ್ಷಣಗಳು, ಪುರುಷ ಲಕ್ಷಣಗಳು ಮೂರ್ತೀಭವಿಸಿ ಇವೆ. ಆತ್ಮ ಅಂಶ ಎಂದರೆ ಪುರುಷ ಅಂಶದೊಂದಿಗೆ ಜೀವಾತ್ಮ ಆದಾಗ, ಪ್ರಕೃತಿ ಅಂಶದೊಂದಿಗೆ ಶರೀರ ಗುಣಗಳಿವೆ. ಸ್ತ್ರೀತನ, ಪುರುಷತನ ಎರಡೂ ಇರುವ ಜೀವರಾಶಿಗಳು ಆಕಡೆ ಪೂರ್ತಿ ಪರಮಾತ್ಮನ ಕಡೆ ಹೋಗದೆ ಮಾಯೆಯಲ್ಲಿ ಮುಳಿಗಿರುವುದರಿಂದ, ಪರಮಾತ್ಮ ಜ್ಞಾನ ಇಲ್ಲದಿರುವುದರಿಂದ, ಪುಂಸತ್ವ ಇಲ್ಲದವನಾಗಿ ಜೀವಾತ್ಮನನ್ನು ವರ್ಣಿಸುತ್ತಿದ್ದೇವೆ. ಪ್ರಕೃತಿ ಸ್ತ್ರೀ ಆದಾಗ, ಪರಮಾತ್ಮ ಪುರುಷನಾದಾಗ, ಶರೀರ ಧರಿಸಿದ ಜೀವಿಗಳು ನಪಂಸಕರೆಂದು ಹೇಳಬಹುದು.

**889**. **(4) ಬಂಧುಗಳು ಎಷ್ಟು ವಿಧದವರಿದ್ದಾರೆ?**

ಉ. ಎರಡು ವಿಧಗಳಾಗಿದ್ದಾರೆ.

**ವಿವರ :** ಬಂಧುಗಳು ಎಂದರೆ ಬಂಧಿಸುವವರೆಂದು, ಬಂಧನಗಳನ್ನು ಉಂಟುಮಾಡುವ ವರೆಂದು ಅರ್ಥವಿದೆ. ಅಮ್ಮ, ಅಪ್ಪ, ಚಿಕ್ಕಮ್ಮ, ಚಿಕ್ಕಪ್ಪ, ದೊಡ್ಡಮ್ಮ, ದೊಡ್ಡಪ್ಪ, ಅತ್ತೆ, ಮಾಮ, ಅಜ್ಜಿ, ತಾತ ಎನ್ನುವ ವರಸೆಗಳಿರುವವರು ಶರೀರಕ್ಕೆ ಬಂಧುಗಳಾಗುತ್ತಾರೆ. ಶರೀರ ಬಂಧುಗಳು ಹುಟ್ಟಿದ ಪ್ರತಿಯೊಬ್ಬನಿಗೂ ಇದ್ದಾರೆ. ಆತ್ಮ ಬಂಧುಗಳು ಕೆಲವರಿಗೇ ಇದ್ದಾರೆ. ಆತ್ಮ ಬಂಧುವು ಜ್ಞಾನ ಹೇಳುವ ಗುರುವಾಗುತ್ತಾನೆ. ಶರೀರ ಬಂಧುವು, ಆತ್ಮ ಬಂಧುವೆನ್ನುವ ಎರಡು ವಿಧಗಳ ಬಂಧುಗಳಲ್ಲಿ ಶರೀರ ಬಂಧುಗಳು ಶರೀರವಿರುವವರೆಗು ಇರುವರು. ಆತ್ಮ ಬಂಧುವಾದ ಗುರುವು ಶಿಷ್ಯನು ಜ್ಞಾನ ಪೂರ್ತಿಯಾಗಿ ತಿಳಿಯುವವರೆಗೆ ಮಾತ್ರ ಇರುವನು. ಪೂರ್ತಿ ಜ್ಞಾನ ತಿಳಿದ ಶಿಷ್ಯನಿಗೆ ಗುರುವು ಆತ್ಮ ಬಂಧುವು ಸಹ ಅಲ್ಲ. ಜ್ಞಾನ ತಿಳಿಯುವ ದಶೆಯಲ್ಲಿದ್ದ ಆತ್ಮಬಂಧು ಜ್ಞಾನ ತಿಳಿದ ಸ್ಥಿತಿಯಲ್ಲಿ ಇರುವುದಿಲ್ಲ. ಲೆಕ್ಕಕ್ಕೆ ಮಾತ್ರ ಎರಡು ವಿಧಗಳಾದ ಬಂಧುಗಳಿದ್ದಾರೆಂದು ಹೇಳಬೇಕು.

**890**. **(5) ಪರಮಾತ್ಮ ಆಡುವ ಆಟದಲ್ಲಿ ಪ್ರತ್ಯರ್ಥಿ ಆತ್ಮನಾ ಜೀವಾತ್ಮನಾ?**

ಉ. ಆತ್ಮ ಜೀವಾತ್ಮ ಇಬ್ಬರು ಅಲ್ಲ.

**ವಿವರ :** ಪರಮಾತ್ಮ ಆಡುವ ಆಟಕ್ಕೆ ಪ್ರತ್ಯರ್ಥಿ ಪ್ರಕೃತಿ ಅಥವಾ ಮಾಯೆ ಎನ್ನಬಹುದು. ಸೃಷ್ಠಿ ಆದಿಯಲ್ಲೇ ಪರಮಾತ್ಮ ತನಗೆ ಎದುರಾಗಿ ನಿಲ್ಲುವಹಾಗೆ ಪ್ರಕೃತಿಯನ್ನು ತಯಾರಿಸಿಟ್ಟಿದ್ದಾನೆ. ಪ್ರಕೃತಿಯಿಂದ ತಯಾರಾಗಿರುವುದು ಮಾಯೆ. ಮಾಯೆಗು ದೇವರಿಗು ಮಧ್ಯೆ ನಡೆಯುವ ಹೋರಾಟವನ್ನೇ ಆಟ ಎನ್ನುತ್ತಿದ್ದೇವೆ. ಪ್ರಕೃತಿಗೂ ಪರಮಾತ್ಮನಿಗೂ ನಡೆಯುವ ಆಟದಲ್ಲಿ ಗೊಂಬೆಗಳಾಗಿರುವವರು ಜೀವಾತ್ಮ ಆತ್ಮರು. ಜೀವಾತ್ಮ ಆತ್ಮ ಪ್ರತ್ಯರ್ಥಿಗಳಲ್ಲ. ಜೀವಾತ್ಮನನ್ನು ತನ್ನ ಕಡೆ ಸೆಳೆದುಕೊಳ್ಳಬೇಕೆಂದು ಮಾಯೆ, ಪರಮಾತ್ಮ ಪ್ರಯತ್ನಿಸುವುದೇ ಇಬ್ಬರ ನಡುವಿನ ಆಟವಾಗಿದೆ. ಜೀವಿಗಳನ್ನು ಪ್ರಸ್ಥುತ ಕಾಲದಲ್ಲಿ ಮಾಯೆಯೇ ಹೆಚ್ಚಾಗಿ ತನ್ನ ಕಡೆ ಸೆಳೆದುಕೊಳ್ಳುತ್ತಿದೆ. ಈ ಆಟ ಹೆಸರಿಲ್ಲದ ಆಟವಾಗಿದೆ.

**891. (6) ಭೂಮಿ ಮೇಲೆ ಹುಟ್ಟಿ ತಾನಲ್ಲದಿದ್ದರೂ ನಾನು ಇಂತಹವನೆಂದು ಹೇಳುವುದ್ಯಾವುದು, ಹೇಳದೇ ಇರುವುದ್ಯಾವುದು?**

ಉ. ಮಾಯೆ, ಭಗವಂತ (ಪರಮಾತ್ಮ).

**ವಿವರ :** ವಿಶ್ವವೆಲ್ಲಾ ವ್ಯಾಪಿಸಿರುವ ಪರಮಾತ್ಮ ಭೂಮಿ ಮೇಲೆ ಭಗವಂತನಾಗಿ ಆಗಾಗ ಸಾವಿರಾರು ವರ್ಷಗಳ ವ್ಯತ್ಯಾಸದಿಂದ ಹುಟ್ಟುತ್ತಿದ್ದಾನೆ. ಪರಮಾತ್ಮ ಭಗವಂತನಾಗಿ ಹುಟ್ಟಿ ತನ್ನ ಧರ್ಮಗಳನ್ನು ತಾನು ತಿಳಿಸಿ ಹೋಗುವನು. ಆ ಸಮಯದಲ್ಲಿ ನಾನು ಇಂಥವನೆಂದು ಯಾರಿಗೂ ತಿಳಿಯ ಹೇಳುವುದಿಲ್ಲವೆನ್ನುವ ನಿಯಮದೊಂದಿಗೆ ಭೂಮಿ ಮೇಲೆ ಬಂದಿದ್ದಾನೆ. ಆದ್ದರಿಂದ ತಾನು ಭಗವಂತನೆಂದು ಯಾರಿಗು ಹೇಳುವುದಿಲ್ಲ, ಸಾಧ್ಯವಿರುವವರೆಗು ತಿಳಿಸುವುದಿಲ್ಲ. ಅದೇ ನಿಯಮದೊಂದಿಗೆ ಮಾಯೆ ಸಹ ಭೂಮಿ ಮೇಲೆ ಜನ್ಮ ತೆಗೆದುಕೊಂಡು ತಾನು ಮಾಯೆಯೆಂದು ಯಾರಿಗೂ ಹೇಳುವುದಿಲ್ಲ, ಸಾಧ್ಯವಿರುವವರೆಗು ಯಾರಿಗು ತಿಳಿಸುವುದಿಲ್ಲ. ತಾನು ಇಂತಹವಳೆಂದು ನಿಜ ಹೇಳಬಾರದೆನ್ನುವ ನಿಯಮವೇ ಆಗಲಿ ತಾನು ಯಾರಾಗಿಯಾದರೂ ಅಸತ್ಯವನ್ನು ಹೇಳಿಕೊಳ್ಳಬಹುದು, ಆದ್ದರಿಂದ ಮಾಯ ಜನ್ಮಿಸಿ ನಾನೇ ಭಗವಂತನೆಂದು ಪ್ರಚಾರ ಮಾಡಿಕೊಳ್ಳುತ್ತಿದೆ. ಅದರಿಂದ ಬಹಳ ಜನ ಮಾಯೆ ಮಾತುಗಳನ್ನು ನಂಬಿ ನಿಜದೈವವನ್ನು ತಿಳಿದುಕೊಳ್ಳದೇ ಹೋಗುತ್ತಿದ್ದಾರೆ. ತಾನಲ್ಲದಿದ್ದರೂ ನಾನು ಭಗವಂತನೆಂದು ಹೇಳುವುದು ಮಾಯೆ. ಹೇಳದಿರುವುದು ಪರಮಾತ್ಮ ಆದರೂ ನಾನು ಇಂತಹವನೆಂದು ಹೇಳದವನು ಭಗವಂತನು.

**892. (7) ಹಸ್ತ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದೆ ಆ ಮೂರು ಭಾಗಗಳಾವುವು?**

ಉ. 1. ಆತ್ಮಗಳು, 2. ಗುಣಗಳು, 3. ಜ್ಞಾನ ಯೋಗ ಮೋಕ್ಷಗಳು.

**ವಿವರ :** ಹಸ್ತವನ್ನು ಮೂರು ಭಾಗಗಳಾಗಿ ಗುರುತಿಸಿಕೊಳ್ಳಬಹುದು. ಒಂದು ಅಂಗೈ, ಎರಡು ಬೆರಳುಗಳು, ಮೂರು ಉಗುರುಗಳು. ಅಂಗೈಯೆಲ್ಲವನ್ನು ಒಂದು ಭಾಗವಾಗಿ ಏಕೆ ಗುರುತಿಸಬೇಕೆಂದು ಕೆಲವರಿಗೆ ಪ್ರಶ್ನೆಬರಬಹುದು. ಅದಕ್ಕೆ ಉತ್ತರವೇನೆಂದರೆ! ಅಂಗೈಯಲ್ಲಿ ಒಂದು ವಿಧಾನ, ಬೆರಳುಗಳಲ್ಲಿ ಮತ್ತೊಂದು ವಿಧಾನ, ಉಗುರುಗಳಲ್ಲಿ ಮತ್ತೊಂದು ಪ್ರತ್ಯೇಕ ವಿಧಾನವಿದೆ. ಆದ್ದರಿಂದ ಹಸ್ತವನ್ನು ಮೂರು ಭಾಗಗಳಾಗಿ ವಿಭಜಿಸಿದ್ದೇವೆ. ಅಂಗೈಯಲ್ಲಿ ಮೂರು ಆತ್ಮಗಳಾದ ಜೀವಾತ್ಮ, ಆತ್ಮ, ಪರಮಾತ್ಮರನ್ನು ತಿಳಿಸುವ ವಿಧಾನವಿದೆ. ಮೂರು ಆತ್ಮಗಳಿಗೆ ಗುರುತಾಗಿ ಮೂರು ರೇಖೆಗಳು ಅಂಗೈಯಲ್ಲಿ ಇವೆ. ಆತ್ಮ ಜೀವಾತ್ಮ ರೇಖೆಗಳ ಎರಡು ಕೊನೆಗಳು ಸೇರಿದ್ದು, ನಾವು ಯಾವಾಗಲೂ ಜೋಡು ಆತ್ಮಗಳಾಗಿ ಇದ್ದೇವೆನ್ನುವಹಾಗೆ, ಒಂದರೊಂದಿಗೆ ಒಂದು ಸಂಬಂಧವನ್ನು ಹೊಂದಿದ್ದೇವೆಂದು ತಿಳಿಸುವಹಾಗೆ, ಕೆಳಗಿನ ಎರಡು ರೇಖೆಗಳ ಕೊನೆಗಳು ಒಂದು ಕಡೆ ಸೇರಿವೆ. ಮೂರನೆಯ ರೇಖೆ ಪರಮಾತ್ಮನಾಗಿ ಲೆಕ್ಕಿಸಲಾಗುತ್ತಿದೆ. ಶರೀರದಲ್ಲಿ ಜೀವಾತ್ಮ ಆತ್ಮಗಳಿಗಿಂತ ಪರಮಾತ್ಮ ಬೇರೆಯಾಗಿ ಇರುತ್ತಿದ್ದಾನೆ, ಆದ್ದರಿಂದ ಮೂರನೆ ರೇಖೆ ಎರಡು ರೇಖೆಗಳಿಗೆ ಸಂಬಂಧವಿಲ್ಲದೆ ಮೇಲೆ ಪ್ರತ್ಯೇಕವಾಗಿ ಇದೆ. ಈ ಮೂರು ಆತ್ಮಗಳನ್ನು ತೋರಿಸುವ ಅಂಗೈಯ್ಯಿ ಎಲ್ಲವೂ ಒಂದು ಭಾಗವೆಂದು ತಿಳಿಯಬೇಕು.

ಅಂಗೈನ ಮೇಲೆ ಬೆರಳುಗಳಿವೆ. ಬೆರಳುಗಳು ಮೂರು ಗಣ್ಣುಗಳಾಗಿ ಇದ್ದು ಮೂರು ಭಾಗಗಳಾಗಿ ಕಾಣಿಸುತ್ತಿವೆ. ಬೆರಳುಗಳ ಮೂರು ಗಣ್ಣುಗಳು ಮೂರು ಗುಣಭಾಗಗಳನ್ನು ತಿಳಿಸುವ ವಿಧಾನವಾಗಿ ಇದೆ. ಆದ್ದರಿಂದ ಬೆರಳುಗಳನ್ನು ಪ್ರತ್ಯೇಕ ಭಾಗವಾಗಿ ಗುರುತಿಸಿಕೊಳ್ಳಬೇಕು. ಸಾತ್ವಿಕ, ರಾಜಸ, ತಾಮಸ ಗುಣಭಾಗಗಳಾಗಿ ಬೆರಳುಗಳ ಭಾಗಗಳಿದ್ದೂ ತ್ರಿಗುಣಗಳ ವಿಷಯ ತಿಳಿಸುತ್ತಿವೆ. ಇನ್ನು ಮೇಲಿನ ಉಗುರೆಲ್ಲವು ಒಂದು ಭಾಗವಾಗಿ ಇದೆ. ಉಗುರು ಕೆಳಗಿನ ಅಂಚಲ್ಲಿ ಬಿಳಿಯಾದ ಚಂದ್ರಬಿಂಬವನ್ನು ಹೋಲುವ ಗುರುತು ಇರುತ್ತದೆ. ಅದರ ನಂತರ ಚಂದ್ರ ಬಿಂಬಕ್ಕಿಂತಲೂ ಸ್ವಲ್ಪ ಬಿಳುಪು ಕಡಿಮೆಯಾಗಿ ಉಗುರಿರುತ್ತದೆ. ಉಗುರು ಕೊನೆಯ ಮೇಲಿನ ಭಾಗ ಮತ್ತೆ ಸ್ವಲ್ಪ ಕಡಿಮೆ ಬಣ್ಣದಲ್ಲಿ ಪ್ರತ್ಯೇಕವಾದ ಉಗುರಿರುತ್ತದೆ. ಒಂದೇ ಉಗುರು ಬಿಳುಪಿನಲ್ಲಿಯೇ ಮೂರು ಬಣ್ಣಗಳು ಬಿಡಿ ಬಿಡಿಯಾಗಿ ಕಾಣಿಸುತ್ತಾ, ಕೆಳಗೆ ಚಂದ್ರಬಿಂಬವನ್ನು ಹೋಲಿರುವ ಬಿಳಿಯ ಭಾಗ ಜ್ಞಾನಕ್ಕೆ ಗುರುತಾಗಿ, ನಂತರ ಉಗುರು ಯೋಗಕ್ಕೆ ಗುರುತಾಗಿ, ನಂತರ ಕೊನೆಯ ಉಗುರು ಮೋಕ್ಷಕ್ಕೆ ಗುರುತಾಗಿ ನಿಂತಿವೆ. ಈ ವಿಧವಾಗಿ ಹಸ್ತದಲ್ಲಿ ಆತ್ಮಗಳ ತರಗತಿ

ಒಂದು, ಗುಣಗಳ ತರಗತಿ ಮತ್ತೊಂದು, ಜ್ಞಾನಗಳ ತರಗತಿ ಇನ್ನೊಂದು ಇದ್ದಹಾಗೆ ಕಾಣಿಸುತ್ತಿದೆ. ಇದನ್ನನುಸರಿಸಿ ಹಸ್ತ ಮೂರು ಭಾಗಗಳಾಗಿ ಇದೆಯೆಂದು ಹೇಳಬಹುದು. ಹಾಗೆ ಮೂರು ತರಗತಿಗಳ ಜ್ಞಾನವು ಸಹ ತಿಳಿಸುತ್ತದೆಂದು ಹೇಳಬಹುದು

**893. (8) ಸ್ವತ್ತಿದೆ ಬೆಲೆ ಇಲ್ಲ ಯಾರಿಗೆ? ಬೆಲೆಯಿದೆ ಸ್ವತ್ತಿಲ್ಲ ಯಾರಿಗೆ?**

ಉ. ಭಗವಂತನಿಗೆ, ಮಾಯೆಗೆ.

**ವಿವರ :** ಸ್ವತ್ತು ಎಂದರೆ ಜ್ಞಾನವೆಂದು, ಜ್ಞಾನ ಧನವೆಂದು ಅರ್ಥಮಾಡಿಕೊಳ್ಳಬೇಕು. ಭಗವಂತನಿಗೆ ಜ್ಞಾನಧನ ಸಂಪೂರ್ಣವಾಗಿ ಇರುತ್ತದೆ. ಅಂತ್ಯವಿಲ್ಲದ ಜ್ಞಾನ ಧನ ಇದ್ದರೂ ತಾನು ಧನವಂತನೆಂದು ಭಗವಂತನೆಂದು ಹೇಳಿಕೊಳ್ಳುವ ಅವಕಾಶವಿಲ್ಲ. ಸಂಪೂರ್ಣ ಜ್ಞಾನಿಯಾದರೂ ತನಗೆ ಹೊರಗಿನ ಪ್ರಜೆಗಳಲ್ಲಿ ಅಷ್ಟು ಹೆಸರುವಾಸಿಯಾಗಿಲ್ಲ. ಭಗವಂತನಿಗೆ ವಿರುದ್ಧವಾದದ್ದು ಮಾಯೆ. ಮಾಯೆಗೆ ಜ್ಞಾನಧನವಿಲ್ಲ. ಜ್ಞಾನವಿಲ್ಲದಿದ್ದರೂ ಎಲ್ಲರಲ್ಲೂ ಪ್ರಚಾರವಿದೆ. ಸ್ವತ್ತಿರುವವನಿಗೆ ಅಂದರೆ ಭಗವಂತನಿಗೆ ಬೆಲೆ ಇಲ್ಲ ಅಂದರೆ ಗುರುತೆಂಬ ಪ್ರಚಾರವಿಲ್ಲ. ಬೆಲೆ ಇದ್ದವನಿಗೆ ಅಂದರೆ ಮಾಯೆಗೆ ಸ್ವತ್ತಿಲ್ಲ ಅಂದರೆ ಜ್ಞಾನಧನವಿಲ್ಲವೆಂದು ಅರ್ಥ. ಇದರ ಪ್ರಕಾರ ಜ್ಞಾನವಿರುವವರು ಎಷ್ಟೋ ಪ್ರಜೆಗಳಲ್ಲಿ ಹೆಸರು ಹೊಂದಲಾರರು. ಜ್ಞಾನವಿಲ್ಲದವರೆಷ್ಟೋ ಜನ ಪ್ರಜೆಗಳಲ್ಲಿ ಹೆಸರು ಹೊಂದಿದ್ದಾರೆಂದು ತಿಳಿಯುತ್ತಿದೆ. ಆತ್ಮಜ್ಞಾನ ಇಲ್ಲದವರು ಮಾಯೆ ಜ್ಞಾನದೊಂದಿಗೆ ದೇಶವೆಲ್ಲಾ ಪ್ರಚಾರವಾಗಿದ್ದಾರೆ. ಆತ್ಮ ಜ್ಞಾನವಿರುವವರು ಯಾರಿಗೂ ಚೆನ್ನಾಗಿ ಕಾಣಿಸುತ್ತಿಲ್ಲ.

ಸ್ವತ್ತು = ಜ್ಞಾನಧನ.
ಸ್ವತ್ತಿರುವವನು = ಜ್ಞಾನ ಧನವಿರುವವನು.
ಸೋಗು = ಗುರುತು, ಬೆಲೆ, ಹೆಸರು, ಪ್ರಚಾರ
ಸೋಗಿಲ್ಲ = ಬೆಲೆ ಇಲ್ಲ, ಗುರುತು ಇಲ್ಲ.
ಭಗವಂತನು ಸಂಪೂರ್ಣ ಜ್ಞಾನಿಯಾದರೂ ಯಾರಿಗೂ ಚೆನ್ನಾಗಿ ಕಾಣಿಸುವುದಿಲ್ಲ
= ಸ್ವತ್ತಿದೆ ಬೆಲೆಯಿಲ್ಲ.
ಮಾಯೆ ಅಜ್ಞಾನಿಯಾದರೂ ಎಲ್ಲರಿಗೂ ಅಂದವಾಗಿ ಚೆನ್ನಾಗಿ ಕಾಣಿಸುತ್ತಿದೆ
= ಬೆಲೆಯಿದೆ ಸ್ವತ್ತಿಲ್ಲ.

**894**. **(9) ಕುಡಿಯದೆ ಇರುವಾಗ ದಾಹವಿಲ್ಲ. ಕುಡಿಯುತ್ತಿದ್ದರೆ ದಾಹವಾಗುತ್ತದೆ. ಕುಡಿಯುವವನಾರು? ಕುಡಿಯುವುದೇನು?**

ಉ. ಜ್ಞಾನಿ, ಜ್ಞಾನ.

**ವಿವರ :** ಯಾವ ಮಾತ್ರವು ಜ್ಞಾನ ತಿಳಿಯದ ಸಾಧಾರಣ ವ್ಯಕ್ತಿಗೆ ಜ್ಞಾನವನ್ನು ತಿಳಿದುಕೊಳ್ಳಬೇಕೆನ್ನುವ ಕೋರಿಕೆ ಏನೂ ಇರುವುದಿಲ್ಲ. ಅಂತಹವನಿಗೆ ಜ್ಞಾನವೊಂದರ ಅವಶ್ಯ ತನಗೆ ಬೇಕೆನ್ನುವ ತಪನೆ ಮಾತ್ರ ಇರುವುದಿಲ್ಲ. ಸ್ವಲ್ಪ ಜ್ಞಾನ ತಿಳಿದುಕೊಳ್ಳುವುದಕ್ಕೆ ಪ್ರಾರಂಭಿಸಿದ ನಂತರ ತಿಳಿದುಕೊಂಡಂತೆಲ್ಲ ಇನ್ನೂ ತಿಳಿದುಕೊಳ್ಳಬೇಕೆನ್ನುವ ತಪನೆ ಅವನಲ್ಲಿ ಏರ್ಪಡುತ್ತಿದೆ. ತಿಳಿಯದಿರುವಾಗ ಅದರ ಧ್ಯಾಸ ಸಹಿತ ಇಲ್ಲದವನು ತಿಳಿದು ಕೊಳ್ಳುತ್ತಿದ್ದರೆ ಇನ್ನೂ ತಿಳಿದುಕೊಳ್ಳಬೇಕೆಂದುಕೊಳ್ಳುವುದು ಆಶ್ಚರ್ಯ ಅಲ್ಲವೆ! ಜ್ಞಾನವನ್ನು ತಿಳಿದುಕೊಳ್ಳುವವನನ್ನು ಮೇಲಿನ ಪ್ರಶ್ನೆಗೆ ಉತ್ತರವಾಗಿ ಕುಡಿಯುವವನೆಂದು ಹೇಳಬಹುದು. ಕುಡಿಯುತ್ತಿರುವುದು ಜ್ಞಾನವೆಂದು ಸಹ ಹೇಳಬಹುದು. ತಿಳಿದುಕೊಂಡಂತೆಲ್ಲಾ ಇನ್ನೂ ಬೇಕೆಂದುಕೊಳ್ಳುವುದನ್ನು ಕುಡಿದಂತೆಲ್ಲಾ ಬಾಯಾರಿಕೆ ಆಗುತ್ತಿದೆಯೆಂದು ಹೇಳಲಾಗಿದೆ.

**895**. **(10) ಹಸ್ತದಲ್ಲಿ ನಾಲ್ಕು ಬೆರಳುಗಳು ಒಂದು ಕಡೆ, ಪ್ರತ್ಯೇಕಿಸಿ ಒಂದು ಬೆರಳು ಮತ್ತೊಂದು ಕಡೆ ಇರುವುದು ಯಾವ ಸೂಚನೆ?**

ಉ. ಯೋಗವನ್ನು ಹೊಂದಿದ ಕೂಡಲೇ ಮೋಕ್ಷಬರುವುದಿಲ್ಲವೆಂಬ ಸೂಚನೆ.

**ವಿವರ :** ಮೂರು ಗುಣಗಳನ್ನು ದಾಟಿ ಯೋಗವನ್ನು ಹೊಂದಿದಹಾಗೆ ಮೋಕ್ಷವನ್ನು ಹೊಂದಲಾರೆವು. ಜ್ಞಾನದಿಂದ ಮೂರು ಗುಣಭಾಗಗಳನ್ನು ದಾಟಿ ಯೋಗಿಯಾಗಿ ನಾಲ್ಕನೇ ಸ್ಥಾನವನ್ನು ಸೇರಿದವನು ಸಹ ಐದನೆಯದಾದ ಮೋಕ್ಷ ಹೊಂದುವುದಕ್ಕೆ ಸ್ವಲ್ಪ ಕಾಲ ಬೇಕಾಗುತ್ತದೆಂದು, ಗುಣಗಳಿಗೆ ಯೋಗವಿದ್ದಷ್ಟು ಹತ್ತಿರವಾಗಿ ಯೋಗಕ್ಕೆ ಮೋಕ್ಷ ಇಲ್ಲವೆಂದು, ತಿಳಿಸುವ ಸೂಚನೆ ಎಂದು ತಿಳಿಯಬೇಕು. ಐದನೆಯ ಬೆರಳು ಮೋಕ್ಷವೆಂದು, ನಾಲ್ಕು ಬೆರಳುಗಳು ಮೂರು ಗುಣಗಳು, ಒಂದು ಯೋಗವೆಂದು ತಿಳಿಯಬೇಕು. ಯೋಗಿಗೆ ಕರ್ಮ ಮುಗಿಯದೇ ಮೋಕ್ಷ ಲಭಿಸದೆಂದು, ಅದಕ್ಕೆ ಸ್ವಲ್ಪ ಕಾಲ ಕೆಲವು ಜನ್ಮಗಳು ಬೇಕಾಗುತ್ತದೆಂದು, ತಿಳಿಸುವ ಸಲುವಾಗಿ ನಾಲ್ಕು ಬೆರಳುಗಳಿಗೆ ಐದನೇ ಬೆರಳು ದೂರವಾಗಿದೆ. ದೇವರು ಹಸ್ತದಲ್ಲಿ ಎಷ್ಟೋ ಜ್ಞಾನವನ್ನು ಸೇರಿಸಿ ಕಳಿಸಿದ್ದಾನೆಂದು ತಿಳಿಯಬೇಕು.

# ಜ್ಞಾನ ಪರೀಕ್ಷೆ

**ಕೊತ್ತಕೋಟ** **ದಿನಾಂಕ–30–08–2002**

**896. (1) ಜೀವಾತ್ಮನಿಗೆ ಕದಲಿಕೆಗಳು ಇವೆಯಾ?**

ಉ. ಇವೆ.

**ವಿವರ :** ಶರೀರಕ್ಕೆ ಕದಲಿಕೆಗಳಿವೆಯೆಂದು ಎಲ್ಲರಿಗೂ ತಿಳಿದ ವಿಷಯವೇ. ಶರೀರದೊಳಗೆ ಜೀವಾತ್ಮನಿಗೆ ಕದಲಿಕೆಗಳಿರುವವು ಇಲ್ಲದಿರುವುದು ಯಾರಿಗೂ ತಿಳಿಯದ ವಿಷಯ. ಅದನ್ನು ಕುರಿತು ನಾವು ಹೇಳಿಕೊಳ್ಳುವುದೇನೆಂದರೆ! ಜೀವಾತ್ಮನು ಶರೀರದಲ್ಲಿ ಕರ್ಮವನ್ನು ಅನುಭವಿಸುತ್ತಾ ಯಾವ ಕೆಲಸ ಮಾಡದವನಾದರೂ, ಬುದ್ಧಿಯೊಂದಿಗೆ ಅಂಟಿಕೊಂಡು ಇರುವುದರಿಂದ ಬುದ್ಧಿ ಎಲ್ಲಿದ್ದರೇ ತಾನು ಅಲ್ಲಿರಬೇಕಾಗಿಬರುತ್ತದೆ. ಮನಸ್ಸು ಸೇರಿಸುವ ವಿಷಯವನ್ನು ಅನುಸರಿಸಿ ಬುದ್ಧಿ ಯೋಚನೆ ಮಾಡಬೇಕಾಗಿದೆ. ಆ ಯೋಚನೆಗಳು ಗುಣಗಳಿಂದಲೇ ಬರುತ್ತವೆ. ವಿಷಯವನ್ನನುಸರಿಸಿ ಬುದ್ಧಿ ಗುಣಗಳೊಂದಿಗೆ ಯೋಚಿಸಲು ಶುರುಮಾಡುತ್ತದೆ. ಮೂರು ಭಾಗಗಳಲ್ಲಿರುವ ಗುಣಗಳಲ್ಲಿ ಯಾವುದರಿಂದಾದರೂ ಯೋಚಿಸುವ ಸಾಮರ್ಥ್ಯ ಬುದ್ಧಿಗೆ ಇದೆ. ಆದ್ದರಿಂದ ಬುದ್ಧಿ ತನ್ನ ಇಷ್ಟಾನುಸಾರ ಮೂರು ಗುಣಭಾಗಗಳಲ್ಲಿ ಪ್ರವೇಶಿಸುತ್ತಿರುತ್ತದೆ. ಬುದ್ಧಿಯೊಂದಿಗೆ ಅಂಟಿಕೊಂಡಿರುವ ಜೀವಾತ್ಮನು ಸಹ ಆ ಗುಣಗಳೊಳಗೆ ಹೋಗಬೇಕಾಗಿದೆ. ಹೀಗೆ ಶರೀರದಲ್ಲಿನ ಜೀವಾತ್ಮನು ಗುಣಗಳ ಭಾಗಗಳಲ್ಲಿ ಬದಲಾಗುತ್ತಿದ್ದಾನೆ, ಆದ್ದರಿಂದ ಜೀವಾತ್ಮನು ಕದಲುತ್ತಿದ್ದಾನೆಂದು ಹೇಳಬಹುದು.

**897. (2) ನಮ್ಮ ಶರೀರದಲ್ಲಿ ಕರ್ಮ ಗುಣಗಳೊಂದಿಗೆ ಸಂಬಂಧವನ್ನಿಟ್ಟುಕೊಳ್ಳದೆ ಜೀವಿಗೆ ಕೆಟ್ಟದ್ದನ್ನು ಮಾಡುವ ಅವಯವ ಯಾವುದು?**

ಉ. ಅಹಂ

**ವಿವರ :** ಶರೀರದಲ್ಲಿ ಎಲ್ಲಾ ಭಾಗಗಳು ಕರ್ಮದೊಂದಿಗೆ ಗುಣಗಳೊಂದಿಗೆ ಸಂಬಂಧ ಪಟ್ಟಿರುವಾಗ, ಯಾವುದರಿಂದಲೂ ಸಂಬಂಧವಿಲ್ಲದೆ ತನ್ನ ವೃತ್ತಿಯನ್ನು ಮಾತ್ರ ತಾನು ಮಾಡುವ ಅವಯವ ಅಹಂ. ಬುದ್ಧಿ ಗುಣಾನುಸಾರಿಣಿ, ಚಿತ್ತ ಕರ್ಮಾನುಸಾರಿಣಿ, ಮನಸ್ಸು ಚಿತ್ತಾನುಸಾರಿಣಿ, ವಿಷಯಾನುಸಾರಿಣಿ ಆದಹಾಗೆ ಅಹಂ ಯಾವುದನ್ನು ಅನುಸರಿಸದೆ ಶರೀರದಲ್ಲಿ ಯಾವ ಉದ್ದೇಶದಿಂದ ಹುಟ್ಟುವುದೋ ಆ ಉದ್ದೇಶವನ್ನೇ ನೆರವೇರಿಸುವುದು. ಶರೀರದಲ್ಲಿ ತನ್ನ ವೃತ್ತಿ ಜೀವಾತ್ಮನಿಗೆ ಎಲ್ಲಾ ನೀನೇ ಮಾಡುತ್ತಿದ್ದೀ

ಯೆಂದು ಬೋಧಿಸುವುದೇ. ಆ ಕೆಲಸವನ್ನು ಯಾರ ಸಂಬಂಧವಿಲ್ಲದೆ ಮಾಡುತ್ತಿದೆ. ಅಹಂ ಮಾಡುವ ಕೆಲಸ ಜೀವಾತ್ಮನಿಗೆ ಕರ್ಮವನ್ನು ಅಂಟಿಸುವುದೆ. ಆದ್ದರಿಂದ ಅಹಂ ಜೀವಗೆ ಮುಕ್ತಿ ಬಾರದಂತೆ ಕೆಡಕು ಮಾಡುತ್ತಿದೆಯೆಂದು ಹೇಳಬಹುದು.

**898. (3) ಯೋಗವನ್ನು ಮಾಡುವಾಗ ಲಭಿಸುವ ಜ್ಞಾನಶಕ್ತಿ (ಆತ್ಮಶಕ್ತಿ) ಪರಮಾತ್ಮನಿಂದ ಬರುತ್ತದಾ ಅಥವಾ ಆತ್ಮನಿಂದ ಬರುತ್ತದಾ?**

ಉ. ಪರಮಾತ್ಮ ನಿಂದ.

**ವಿವರ :** ಯೋಗ ಸಮಯದಲ್ಲಿ ಜ್ಞಾನಶಕ್ತಿ ಪರಮಾತ್ಮನಿಂದ ಬರುತ್ತಿದೆ. ಅಣುವಣುವಿನಲ್ಲೂ ಜ್ಞಾನಶಕ್ತಿ ವ್ಯಾಪಿಸಿಕೊಂಡಿದೆ. ಪರಮಾತ್ಮನೇ ಶಕ್ತಿಯಾಗಿ ಬದಲಾಗಿ ಜ್ಞಾನಶಕ್ತಿ ಆಗುತ್ತಿದೆ. ಪರಮಾತ್ಮ ಎಲ್ಲಿದ್ದಾನೋ ಅಲ್ಲಿ ಜ್ಞಾನಶಕ್ತಿ ಇದೆಯೆಂದೇ ತಿಳಿಯಬೇಕು. ಧರ್ಮಗಳ ಪದ್ಧತಿ ಪ್ರಕಾರ ಬ್ರಹ್ಮಯೋಗ ಆಚರಿಸುವವನಿಗೆ ಅವನ ಶರೀರ ಹೊರಗಿನಿಂದ ಶಕ್ತಿಯೊಳಗೆ ಪ್ರವೇಶಿಸುವುದು. ಧರ್ಮಗಳ ಪ್ರಕಾರವಲ್ಲದೆ ಭಕ್ತಿಯೋಗ ಆಚರಿಸುವವನಿಗೆ ಶರೀರದಲ್ಲೇ ಶಕ್ತಿ ಉತ್ಪತ್ತಿ ಆಗಬಲ್ಲದು. ಜ್ಞಾನಯೋಗದಲ್ಲಿ ಶರೀರ ಹೊರಗಿನಿಂದ ಶಕ್ತಿ ಲಭಿಸಿದಾಗ ಕರ್ಮಯೋಗದಲ್ಲೂ, ಭಕ್ತಿಯೋಗದಲ್ಲೂ ಶರೀರದೊಳಗೇ ತಯಾರಾಗುತ್ತಿದೆ. ಬ್ರಹ್ಮಯೋಗ ದಲ್ಲಿ ಶರೀರದ ಹೊರಗಿನಿಂದ ಲಭಿಸುತ್ತಿದೆ. ಆದ್ದರಿಂದ ಜ್ಞಾನಾಗ್ನಿ ಪರಮಾತ್ಮನಿಂದ ಲಭಿಸುತ್ತಿದೆಯೆಂದು, ಆತ್ಮನಿಂದ ಲಭಿಸುತ್ತಿಲ್ಲವೆಂದು ತಿಳಿಯುತ್ತಿದೆ. ಶರೀರದ ಒಳಗೂ ಸಹ ಪರಮಾತ್ಮ ಇದೆ, ಆದ್ದರಿಂದ ಒಳಗೆ ಲಭಿಸುವ ಶಕ್ತಿ ಸಹ ಪರಮಾತ್ಮನದೇ ಎಂದು ತಿಳಿಯಬೇಕು.

**899. (4) ಯೋಗಿಗೆ ಲಭಿಸಿದ ಜ್ಞಾನಶಕ್ತಿ ಕರ್ಮವನ್ನು ಸುಡುವಾಗ ಸ್ವಲ್ಪ ಉಳಿಯುವು ದೆಂದು ಹೇಳಿದ್ದಾರೆ. ಹಾಗೆ ಉಳಿಯುತ್ತಾ ಹೋಗಿ ಸ್ವಲ್ಪ ಕೂಡಲಿಯಾಗಿ ತಯಾರಾಗುತ್ತದೆಂದು ಹೇಳಿದ್ದೀರಾ. ಅದು ತಲೆಯಲ್ಲಿ ಇರುತ್ತದೆಂದು ಅದರ ಪ್ರಕಾಶವೇ ಕೆಲವರಿಗೆ ತಲೆ ಹಿಂದೆ ಬೆಳಕಿನಂತೆ ಇರುವುದಾಗಿ ಚಿತ್ರಿಸಿರುತ್ತಾರೆಂದು ಸಹ ಹೇಳಿದ್ದೀರಾ. ತಲೆಯಲ್ಲಿ ಜ್ಞಾನಶಕ್ತಿ ಎಲ್ಲಿ ನಿಲುವಿಕೆ ಇರುತ್ತದೋ ತಿಳಿಸಬೇಕು?**

ಉ. ಜೀವಾತ್ಮನ ಹತ್ತಿರ.

**ವಿವರ :** ಜ್ಞಾನಾಗ್ನಿ ಅಥವಾ ಜ್ಞಾನಶಕ್ತಿ ಎನ್ನುವುದು ಕರ್ಮವನ್ನು ಸುಡುವಾಗ ಉಳಿಯುತ್ತಾ ಹೋಗುವುದೆನ್ನುವುದು ವಾಸ್ತವವೇ. ಹಾಗೆ ಉಳಿದ ಶಕ್ತಿ ಅಹಂ, ಚಿತ್ತ, ಬುದ್ಧಿ ಎನ್ನುವ

ಮೂರು ಪೊರೆಗಳ ಮಧ್ಯೆದಲ್ಲಿರುವ ಖಾಲೀ ಪ್ರದೇಶವಾದ ಜೀವಾತ್ಮನಲ್ಲಿ ಸೇರಿಹೋಗುವುದು. ಅಲ್ಲಿಯವರೆಗು ಪ್ರಕಾಶವಿಲ್ಲದ ಜೀವಾತ್ಮನಿಗೆ ಪ್ರಕಾಶ ಸೇರುತ್ತಾ ಬರುತ್ತದೆ. ಜ್ಞಾನಶಕ್ತಿ ಅಧಿಕವಾದಂತೆಲ್ಲಾ ಚೆಂಡಿನ ಆಕೃತಿಯಲ್ಲಿ ಸುತ್ತಲೂ ಮೂರು ಪೊರೆಗಳ ಮಧ್ಯೆದಲ್ಲಿ ಸಿಲುಕಿಕೊಂಡಿರುವ ಜೀವಾತ್ಮನಿಗೆ ಬೆಳಕಿನ ಸಾಂದ್ರತೆ ಹೆಚ್ಚುತ್ತಾ ಬರುತ್ತಿರುತ್ತದೆ. ಆ ಬೆಳಕಿನ ತೀವ್ರತೆ ಯಾವ ಯೋಗಿಯಲ್ಲಿ ಎಷ್ಟು ಇದೆಯೋ ಹೊರಗೆ ಸ್ಥೂಲವಾಗಿರುವ ಕಣ್ಣುಗಳಿಗೆ ಕಾಣಿಸುವುದಿಲ್ಲ. ಭೌತಿಕ ಕಾಯವಿಲ್ಲದ ಸೂಕ್ಷ್ಮಶರೀರಗಳಿಗೆ ಅಂದರೆ ಗ್ರಹಗಳಿಗೂ, ವಿಗ್ರಹಗಳಿಗೂ ಆ ಬೆಳಕು ಕಾಣಿಸುವುದು. ಆದ್ದರಿಂದಲೇ ಜ್ಞಾನಾಗ್ನಿ ಇರುವ ಯೋಗಿಗಳಿಗೆ ಗ್ರಹಗಳು, ವಿಗ್ರಹಗಳು ಭಯಪಡುತ್ತವೆ. ತಮ್ಮಲ್ಲಿ ಎಷ್ಟು ಜ್ಞಾನಶಕ್ತಿ ಇರುವುದು ಯೋಗಿಗೆ ಮಾತ್ರ ತಿಳಿಯುವುದಿಲ್ಲ. ಒಬ್ಬ ಯೋಗಿಯಲ್ಲಿ ಎಷ್ಟು ಶಕ್ತಿ ಇರುವುದು ಇತರರಿಗೆ ತಿಳಿಯಬಹುದು, ಆದರೆ ಸ್ವತಃವಾಗಿ ಆ ಯೋಗಿ ತಿಳಿದುಕೊಳ್ಳುವುದಕ್ಕೆ ಸಾಧ್ಯವಿಲ್ಲ. ಶಕ್ತಿ ಇರುವವನನ್ನು ಪ್ರಕಾಶಿಸುವ ಜೀವಾತ್ಮ ಎನ್ನಬಹುದು. ಆತನನ್ನೇ ಸಾಮಾನ್ಯನಲ್ಲವೆಂದು ಮಾನ್ಯನೆಂದು ಹೇಳಬಹುದು.

**900. (5) ನಮ್ಮ ಶರೀರದಲ್ಲಿ ಕರ್ಮಚಕ್ರ ಗುಣಚಕ್ರ ತಿರುಗದಂತೆ ಯಾವಾಗಾದರೂ ನಿಲ್ಲುವುದಾ?**

ಉ. ಬ್ರಹ್ಮಯೋಗ ಸಮಯದಲ್ಲಿ.

**ವಿವರ :** ಮನಸ್ಸನ್ನು ಕದಲದಹಾಗೆ ಮಾಡುವುದರಿಂದ ಬ್ರಹ್ಮಯೋಗ ಲಭ್ಯವಾಗುತ್ತದೆ. ಬ್ರಹ್ಮಯೋಗ ಸಮಯದಲ್ಲಿ ಕರ್ಮ, ಗುಣಗಳು ಎಲ್ಲವೂ ನಿಂತು ಹೋಗುವವು. ಆ ಸಮಯದಲ್ಲಿ ಕರ್ಮ ಆಚರಣೆ ಇರುವುದಿಲ್ಲ. ಗುಣಗಳ ವಿವರವೂ ಇರುವುದಿಲ್ಲ. ಅದರಿಂದ ಕರ್ಮಚಕ್ರ ಗುಣಚಕ್ರ ನಿಂತುಹೋಗುವುದು. ಇವುಗಳಿಗೆ ಅನುಸಂಧಾನವಾಗಿ ಇರುವ ಕಾಲಚಕ್ರವು ಸಹ ನಿಂತುಹೊಗುವುದು. ಆದ್ದರಿಂದ ಆ ಯೋಗ ಸಮಯದಲ್ಲಿ ಅವನ ಆಯುಸ್ಸು ಖರ್ಚಾಗುವುದಿಲ್ಲವೆಂದು ಹಿರಿಯರು ತಿಳಿಸಿದ್ದಾರೆ. ಅವನ ಶರೀರದಲ್ಲಿನ ಕಾಲ, ಕರ್ಮ, ಗುಣ ಚಕ್ರಗಳು ನಿಂತು ಹೋಗುವವು ಆದರೆ ಬ್ರಹ್ಮಚಕ್ರ ಮಾತ್ರ ನಿಲ್ಲುವುದಿಲ್ಲ. ಬ್ರಹ್ಮಚಕ್ರ ಎಲ್ಲದಕ್ಕೂ ಅತೀತವಾದದ್ದು, ಆದ್ದರಿಂದ ಯೋಗಿಗಳಿಗೂ ಸಹ ನಿಲ್ಲುವುದು ಅಲ್ಲ. ಬ್ರಹ್ಮ ಚಕ್ರವನ್ನನುಸರಿಸಿ ಕಾಲಚಕ್ರವು ಸಹ ತಿರುಗುತ್ತಾ ಇರುತ್ತದೆ. ಇಲ್ಲಿ ತಿಳಿಯಬೇಕಾಗಿರುವು ದೇನೆಂದರೆ! ಗುಣ, ಕರ್ಮ, ಕಾಲ, ಬ್ರಹ್ಮ ಚಕ್ರಗಳಲ್ಲಿ ಎರಡು ವೈಯಕ್ತಿಕವಾದವು, ಎರಡು ಎಲ್ಲರಿಗೂ ಸಂಬಂಧಿಸಿರುವವು. ವೈಯಕ್ತಿಕವಾದ ಕರ್ಮ,

ಗುಣಚಕ್ರಗಳು ಯೋಗಿಗಳಲ್ಲಿ ನಿಂತು ಹೋದರು, ಎಲ್ಲರಿಗೂ ಅನ್ವಯಿಸುವ ಕಾಲ, ಬ್ರಹ್ಮಚಕ್ರಗಳು ನಿಲ್ಲುವುದಿಲ್ಲ. ಬ್ರಹ್ಮಯೋಗಿಗಳಲ್ಲಿ ಕಾಲಚಕ್ರ ನಿಂತುಹೋದಹಾಗೆ ಲೆಕ್ಕಿಸಿದರೂ, ಎಲ್ಲರ ದೃಷ್ಟಿಯಲ್ಲಿ ಅದು ತಿರುಗುತ್ತಲೇ ಇರುತ್ತದೆ. ಬ್ರಹ್ಮಯೋಗಿಯಲ್ಲಿ ಮಾತ್ರ ಕಾಲಚಕ್ರ ತಿರುಗಿದ ಕಾಲ ಲೆಕ್ಕಿಸಲಾಗುವುದಿಲ್ಲ. ಆದ್ದರಿಂದ ಅದನ್ನು ಸಹ ನಿಂತ ಹಾಗೇ ಲೆಕ್ಕಿಸಿಕೊಳ್ಳುತ್ತಿದ್ದೇವೆ. ವಾಸ್ತವವಾಗಿ ನಿಲ್ಲುವವು ಎರಡು, ನಿಲ್ಲದೆ ಇರುವವು ಎರಡು ಎಂದು ತಿಳಿಯಬೇಕು. ಬ್ರಹ್ಮಯೋಗಿಯಲ್ಲಿ ಕಾಲಚಕ್ರ ತಿರುಗಿದರೂ ತಿರುಗದಹಾಗೆ. ಆದ್ದರಿಂದ ಯೋಗಸಮಯದಲ್ಲಿ ಮೂರು ಚಕ್ರಗಳು ನಿಂತಿವೆಯೆಂದು ಹೇಳಬಹುದು.

## ಜ್ಞಾನ ಪರೀಕ್ಷೆ

**ಕೆ. ನರಸಾಪುರ** **ದಿನಾಂಕ–28–09–2002**

**901. (1) ಈಗಿರುವ ನಿನ್ನ ದೇಹ ನಿನಗೆ ಅಶಾಶ್ವತವಾದದ್ದಾದರೆ, ಶಾಶ್ವತವಾದದ್ದು ಯಾವುದು**?

ಉ. ಆತ್ಮ.

**ವಿವರ :** ಜೀವಿಗಳಾದ ನಮಗೆ ಶರೀರ ಶಾಶ್ವತವಲ್ಲವೇ ಅಲ್ಲ. ಪ್ರತಿ ದಿನ ಪ್ರತಿ ಕ್ಷಣ ಶರೀರ ಒಂದೇ ರೀತಿ ಇರದೇ ಬದಲಾವಣೆ ಆಗುತ್ತಿದೆ. ಕೆಲವು ಸಂವತ್ಸರಗಳಿಗೆ ಜೀವಾತ್ಮನಿಗೆ ನಿವಾಸ ಯೋಗ್ಯವಾಗದೆ ಹೋಗಿ ಕೊನೆಗೆ ಶಿಥಿಲವಾಗುತ್ತಿದೆ. ಜೀವಾತ್ಮನೊಂದಿಗಿರುವ ಆತ್ಮ ಮಾತ್ರ ಎಂದಿನಂತೆ ಇರುತ್ತದೆ. ಎಷ್ಟು ಶರೀರಗಳು ಬದಲಾದರೂ ಜೀವಾತ್ಮನೊಂದಿಗೆ ಪ್ರಯಾಣಿಸುತ್ತಾ ಜೀವಾತ್ಮನನ್ನು ಅಂಟಿಕೊಂಡಿರುವುದರಿಂದ ಆತ್ಮ ಶಾಶ್ವತ, ಶರೀರ ಅಶಾಶ್ವತವೆಂದು ಹೇಳಬಹುದು. ಕೆಲವರು ಜೀವಾತ್ಮನಿಗೆ ಕರ್ಮ ಸಹ ಶಾಶ್ವತವೇ ತಾನೇ ಎಂದು ಕೇಳಬಹುದು. ಕರ್ಮ ಇರುವವರೆಗು ಜೀವಾತ್ಮನಿರುವುದು ವಾಸ್ತವವೇ ಆದರೂ, ಕರ್ಮ ಯಾವುದು ಯಾವಾಗಲೂ ನಿಂತಿರದೆ ಹಳೆದು ಹೋಗುತ್ತಾ ಹೊಸದು ಬರುತ್ತಿದೆ. ಆದ್ದರಿಂದ ಇಂತಹ ಕರ್ಮ ಶಾಶ್ವತವೆಂದು ಹೇಳಲಾರೆವು. ಕರ್ಮ ಅನೇಕ ವಿಧಗಳಾಗಿ ಇದ್ದು ಅನುಭವಿಸಲಾಗಿ ಮುಗಿದುಹೋಗುತ್ತಿದೆ. ಕರ್ಮ ಹೆಚ್ಚುವುದು ಇಳಿಯುವುದು ಎರಡೂ ಇರುವುದರಿಂದ, ಕರ್ಮ ಸಹ ಶಾಶ್ವತವಲ್ಲವೆಂದು, ಕರ್ಮಕ್ಕಿಂತಲೂ ಆತ್ಮವೇ ಶಾಶ್ವತವಾದದ್ದೆಂದು ಹೇಳಬಹುದು.

**902. (2) ಯೋಗಮಾಡುವುದಕ್ಕೆ ಶ್ವಾಸ ಮುಖ್ಯವಾ, ಧ್ಯಾಸ ಮುಖ್ಯವಾ?**

ಉ. ಧ್ಯಾಸ ಮುಖ್ಯ.

**ವಿವರ :** ಯೋಗಗಳಲ್ಲಿ ಇವೆರಡೂ ಇವೆ. ಕರ್ಮಯೋಗ, ಬ್ರಹ್ಮಯೋಗವೆನ್ನುವವುಗಳಲ್ಲಿ ಬ್ರಹ್ಮಯೋಗದಲ್ಲಿ ಮನೋಧ್ಯಾಸ ಮುಖ್ಯ. ಧ್ಯಾಸಕ್ಕು ಶ್ವಾಸಕ್ಕು ಸಂಬಂಧವಿದ್ದರೂ, ಶ್ವಾಸ ನಿಂತರೇ ಧ್ಯಾಸ ನಿಂತರೂ, ಧ್ಯಾಸ ನಿಂತರೆ ಶ್ವಾಸ ನಿಂತರೂ ಬ್ರಹ್ಮಯೋಗಕ್ಕೆ ಮುಖ್ಯ ಮನೋಧ್ಯಾಸಗಳು ಇಲ್ಲದೇ ಹೋಗುವುದು. ಶ್ವಾಸದಿಂದ ಮನಸ್ಸು ನಿಲ್ಲಿಸುವುದಕ್ಕಿಂತ ಮನಸ್ಸುವೊಂದರ ಧ್ಯಾಸಗಳನ್ನೆ ಇಲ್ಲದಂತೆ ಮಾಡುವುದು, ಅದರಿಂದ ಶರೀರದಲ್ಲಿನ ಎಲ್ಲಾ ಕೆಲಸಗಳನ್ನು ಸ್ಥಂಬಿಸುವಹಾಗೆ ಮಾಡುವುದು ಒಳ್ಳೆದು. ಶ್ವಾಸವನ್ನು ಬಂಧಿಸುವುದು, ಬಲವಂತವಾಗಿ ಕುಂಭಿಸುವುದು, ಒಂದು ವಿಧವಾಗಿ ಅಪಾಯಕರವಾದ ಕೆಲಸ. ಅದರಿಂದ ಶರೀರದಲ್ಲಿ ಯಾವ ಭಾಗದಲ್ಲಾದರೂ ರಕ್ತನಾಳಗಳು ಸಿಡಿದು ಹೋಗಬಹುದು, ರೋಗಗಳು ಉತ್ಪನ್ನವಾಗಬಹುದು. ಶರೀರದಲ್ಲಿ ಎಷ್ಟೋ ಸಮಸ್ಯೆಗಳು ಬರಬಹುದು. ಆದ್ದರಿಂದ ಶ್ವಾಸವನ್ನು ಬಲವಂತವಾಗಿ ಬಂಧಿಸದೆ ಮನಸ್ಸನ್ನೇ ಸಾಧನೆಯಿಂದ ನಿಲ್ಲಿಸುವುದು ಒಳ್ಳೆದು. ಮನೋ ಧ್ಯಾಸವನ್ನು ಸ್ಥಂಭಿಸುವ ಯೋಗವೇ ಮುಖ್ಯವಾದದ್ದಾಗಿ ತಿಳಿಯಬೇಕು.

**903. (3) ದೇವರ ಮಾರ್ಗ, ಮಾಯೆ ಮಾರ್ಗ ಎಲ್ಲಿವೆ?**

ಉ. ದೇಹದಲ್ಲೇ ಇವೆ.

**ವಿವರ :** ದೇವರ ಮಾರ್ಗವಾಗಲಿ, ಮಾಯೆ ಮಾರ್ಗವಾಗಲಿ ಜೀವಾತ್ಮನಿಗೇ ಅವಶ್ಯಕ. ಜೀವಾತ್ಮನು ಶರೀರದಲ್ಲಿ ಇದ್ದಾನೆ, ಆದ್ದರಿಂದ ಶರೀರದಲ್ಲೇ ಎರಡು ಮಾರ್ಗಗಳು ಇವೆ. ಗುಣಗಳ ರೂಪದಲ್ಲಿ ಮಾಯೆ ಮಾರ್ಗ, ಆತ್ಮಗಳ ರೂಪದಲ್ಲಿ ದೇವರ ಮಾರ್ಗ ಶರೀರದಲ್ಲೇ ಇವೆ. ಆದ್ದರಿಂದ ದೇವರ ಮಾರ್ಗವನ್ನು ಅನುಸರಿಸುವುದಾಗಲಿ, ಮಾಯೆ ಮಾರ್ಗವನ್ನು ಅನುಸರಿಸುವುದಾಗಲಿ ಶರೀರದಲ್ಲೇ ನಡೆಯುತ್ತಿದೆ. ಕೆಲವರು ತಿಳಿಯದೆ ದೇವರು ಮಾಯೆ ಎರಡೂ ಹೊರಗೇ ಇವೆಯೆಂದು ತಪ್ಪಾಗಿ ಅರ್ಥೈಸಿಕೊಳ್ಳುತ್ತಿದ್ದಾರೆ. ತಾಯಿ ತಂದೆಯರಾದ ಮಾಯೆ ದೇವರು ನೀನೆಲ್ಲಿದ್ದರೆ ಅಲ್ಲೇ ಇವೆ.

**904. (4) ಪುರ ಎಂದು ಯಾವುದನ್ನು ಕರೆಯುತ್ತೇವೆ?**

ಉ. ಪುರುಷರಿರುವುದು ಪುರ.

**ವಿವರ :** ಪೌರರು ನಿವಸಿಸುವುದು ಪುರ ಎಂದು ಸಹ ಇದೆ. ಪೌರರು ಎನ್ನುವ ಪದ ಪುರುಷರು ಎನ್ನುವ ಪದದಿಂದ ಬದಲಾವಣೆ ಹೊಂದಿದೆ. ಆದ್ದರಿಂದ ಪುರುಷರು ನಿವಸಿಸುವುದು ಪುರ ಎಂದು ಹೇಳಬಹುದು. ಪುರುಷರು ಅಥವಾ ಪೌರರು ನಿವಸಿಸುವ ಪುರ ಪ್ರತ್ಯೇಕಿಸಿ ಎಲ್ಲೂ ಇಲ್ಲ. ಪ್ರತಿ ದೇಹ ಒಂದು ಪುರವಾದಾಗ, ಅದರಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಪುರುಷರು ನಿವಾಸ ಮಾಡುತ್ತಿದ್ದಾರೆ. ಆದ್ದರಿಂದ ಶರೀರವನ್ನೇ ಪುರ ಎಂದು ಪೂರ್ವದಲ್ಲಿ ಕರೆಯುತ್ತಿದ್ದರು.

**905**. **(5) ಪೌರರು ಯಾರು**?

ಉ. ಪೌರುಷವಿರುವವರು.

**ವಿವರ :** ಪುರುಷರೆಂದರೂ ಪೌರರೆಂದರೂ, ಪೌರುಷರೆಂದರೂ ಆಧ್ಯಾತ್ಮಿಕ ಭಾಷೆಯಲ್ಲಿ ಒಂದೇ ಅರ್ಥವೆಂದು ತಿಳಿಯಬೇಕು. ಶರೀರವೆನ್ನುವ ದೇವಾಲಯದಲ್ಲಿ ಮುವ್ವರು ಪುರುಷರು ನಿವಾಸಿಸುತ್ತಿದ್ದರೂ ಅದರಲ್ಲಿ ಇಬ್ಬರು ಪೌರುಷವಿರುವವರಾಗಿ, ಜೀವಾತ್ಮ ಎನ್ನುವವನು ಪುರುಷನಾಗಿದ್ದು ಪುರುಷತ್ವವಿಲ್ಲದವನಾಗಿ ಇದ್ದಾನೆ. ಜೀವಾತ್ಮ ಎನ್ನುವ ನಪುಂಸಕನಿಗೆ ಜ್ಞಾನವೆನ್ನುವ ಔಷಧ ಕೊಟ್ಟು ಅವನನ್ನು ಪೂರ್ತಿ ಪುರುಷನಾಗಿ ಮಾಡಬೇಕಾಗಿದೆ. ಪುಂಸತ್ವವಿಲ್ಲದ ಜೀವಾತ್ಮನಿಗೆ ಜ್ಞಾನವೆನ್ನುವ ಔಷಧ ಕೊಟ್ಟು ಮತ್ತೆ ಪುರುಷನಾಗಿ ಬದಲಾಯಿಸುವ ಸಲುವಾಗಿ, ಪರಮಾತ್ಮನೇ ಮನುಷ್ಯನಾಗಿ ಬಂದು ಭಗವದ್ಗೀತೆ, ಬೈಬಲ್, ಖುರಾನ್‌ಗಳೆನ್ನುವ ವೈದ್ಯಶಾಲೆಗಳನ್ನು ಸ್ಥಾಪಿಸಿ, ಅವುಗಳಲ್ಲಿ ಜ್ಞಾನವೆನ್ನುವ ಔಷಧನ್ನು ಇಟ್ಟು ಹೋಗಿದ್ದಾನೆ. ಈ ಮೂರು ವೈದ್ಯಶಾಲೆಗಳಲ್ಲಿ ಯಾವುದೋ ಒಂದನ್ನು ಆಶ್ರಯಿಸಿ, ಅದರಲ್ಲಿನ ಔಷಧವನ್ನು ತೆಗೆದುಕೊಂಡು ಜೀರ್ಣಿಸಿಕೊಂಡರೆ ಪೂರ್ತಿ ಪುರುಷನಾಗಿ ಜೀವಾತ್ಮ ಬದಲಾಗಬಹುದು. ಅಂದರೆ ತಾನು ದೇವರೊಳಗೆ ಸೇರಿಹೋಗಬಲ್ಲನು.

**906**. **(6) ರಾಜಕೀಯ ಎಂದರೇನು**?

ಉ. ಯೋಗ ಸಾಮ್ರಾಜ್ಯವನ್ನು ಪಾಲಿಸುವುದು (ಹಿರೇತನ)

**ವಿವರ :** ರಾಜ ಎಂದರೆ ಎಲ್ಲರಿಗಿಂತಲೂ ದೊಡ್ಡವನೆಂದು ಅರ್ಥ. ಮನುಷ್ಯರಲ್ಲಿ ಎಲ್ಲರಿಗಿಂತಲೂ ದೊಡ್ಡಸ್ತಿಕೆ ಇರುವವನು ರಾಜ, ಹಾಗೆಯೇ ಎಲ್ಲ ವಿದ್ಯೆಗಳಿಗೆಲ್ಲ ದೊಡ್ಡ

ವಿದ್ಯೆ ಬ್ರಹ್ಮವಿದ್ಯೆ. ಎಲ್ಲದಕ್ಕಿಂತ ದೊಡ್ಡವಿದ್ಯೆ ಆದ್ದರಿಂದ ಬ್ರಹ್ಮವಿದ್ಯೆಯನ್ನು ಭಗವದ್ಗೀತೆಯಲ್ಲಿ ರಾಜವಿದ್ಯೆ ಎಂದು ಹೇಳಿರುವುದು ಸಹ ನಡೆದಿದೆ. ಪೂರ್ವಕಾಲದಲ್ಲಿ ಬ್ರಹ್ಮವಿದ್ಯೆ ತಿಳಿದವರೇ ಪ್ರಜೆಗಳನ್ನು ಪಾಲಿಸಬೇಕೆನ್ನುವ ನಿಯಮವಿರುತ್ತಿತ್ತು. ಆದ್ದರಿಂದ ಆ ಕಾಲದಲ್ಲಿ ಪ್ರಜೆಗಳನ್ನು ಪಾಲಿಸುವವರು ಮೊದಲೇ ಬ್ರಹ್ಮವಿದ್ಯೆಯನ್ನು ಕಲಿಯುತ್ತಿದ್ದರು. ಚಿಕ್ಕಂದಿನಿಂದಲೇ ಗುರುಕುಲ ಆಶ್ರಮಗಳ ಹತ್ತಿರಕ್ಕೆ ಹೋಗಿ ಎಲ್ಲಾ ವಿದ್ಯೆಗಳೊಂದಿಗೆ ಬ್ರಹ್ಮವಿದ್ಯೆಯನ್ನು ಕಲಿಯುತ್ತಿದ್ದರು. ಹಾಗೆ ಕಲಿಯದೆ ಪರಿಪಾಲನೆಗೆ ಬಂದವರು ಒಂದು ಕಡೆ ಪರಿಪಾಲನೆ ಮಾಡುತ್ತಾ, ಒಂದು ಕಡೆ ಕಾಡುಗಳಲ್ಲಿರುವ ಗುರುಗಳ ಹತ್ತಿರಕ್ಕೆ ಹೋಗಿ ಬ್ರಹ್ಮವಿದ್ಯೆಯನ್ನು ಕಲಿಯುತ್ತಿದ್ದರು. ಬ್ರಹ್ಮವಿದ್ಯೆಯನ್ನು ಪೂರ್ವದಲ್ಲಿ ರಾಜವಿದ್ಯೆ ಎನ್ನುತ್ತಿದ್ದರು. ಬ್ರಹ್ಮವಿದ್ಯೆಯನ್ನು ಕಲಿಯುವು ದರಿಂದಲೇ ಪ್ರಜಾ ಪರಿಪಾಲಕರರಿಗೆ ರಾಜ ಎನ್ನುವ ಹೆಸರು ಬಂದಿದೆ. ಈ ದಿನ ಬ್ರಹ್ಮವಿದ್ಯೆ ಇಲ್ಲದ ಪರಿಪಾಲಕರು ಬಂದಿದ್ದಾರೆ ಆದ್ದರಿಂದ ಇವರಿಗೆ ರಾಜ ಎನ್ನುವ ಹೆಸರು ಹೋಗಿ, ಪ್ರಜಾನಾಯಕರೆನ್ನುವ ಹೆಸರು ಮಾತ್ರ ಉಳಿದಿದೆ ಎಂದುಕೊಳ್ಳುತ್ತೇನೆ. ಪೂರ್ವದಲ್ಲಿ ಬ್ರಹ್ಮವಿದ್ಯೆಯನ್ನೇ ರಾಜವಿದ್ಯೆ ಎಂದು, ಅದು ತಿಳಿದಿರುವವನನ್ನು ರಾಜನೆಂದು, ಎಲ್ಲದಕ್ಕಿಂತ ದೊಡ್ಡದು ಬ್ರಹ್ಮವಿದ್ಯೆ ಆದ್ದರಿಂದ ತಿಳಿದವನನ್ನು ದೊಡ್ಡಸ್ತಿಕೆ ಅಥವಾ ರಾಜಕೀಯ ತಿಳಿದವನೆಂದು ಹೇಳುತ್ತಿದ್ದರು. ರಾಜಕೀಯ ತಿಳಿದವನು ಯೋಗರಾಜ್ಯವನ್ನು ಆಳುವವ ನೆಂದು, ಯೋಗರಾಜ್ಯವನ್ನು ಆಳುವವನೇ ಭೂರಾಜ್ಯವನ್ನು ಆಳಬಹುದೆಂದು ನಿಯಮ ವಿರುವುದರಿಂದ ರಾಜ್ಯವನ್ನಾಳುವವರನ್ನು ರಾಜ ಎನ್ನುತ್ತಿದ್ದರು.

**907. (7) ದಾಸರಿಕ ಎಂದರೇನು?**

ಉ. ಮಾಯೆಗೆ ದಾಸನಾಗಿ ಇರುವುದು.

**ವಿವರ :** ಧನಿಕನಿಗೆ ವಿರುದ್ಧ ಪದ ಬಡವ, ಹಾಗೆಯೇ ರಾಜನಿಗೆ ವ್ಯತಿರಿಕ್ತವಾದ ಪದ ದಾಸ. ಬ್ರಹ್ಮವಿದ್ಯೆ ಕಲಿತವನು ರಾಜ ಎಂದುಕೊಂಡಿದ್ದೇವೆ ಅಲ್ಲವೆ! ಹಾಗೆ ಕಲಿಯದವನು ದಾಸನು ಎನ್ನುವುದು ಪೂರ್ವದಲ್ಲಿ ನಡೆಯುತ್ತಿತ್ತು. ಪೂರ್ವದಲ್ಲಿ ಪ್ರಜೆಗಳನ್ನು ಪಾಲಿಸುವ ವ್ಯವಸ್ಥೆ ಇರುತ್ತಿರಲಿಲ್ಲ. ಯಾರಿಗೆ ಯಾರು ಅಧಿಕಾರಿಗಳಲ್ಲದ ಕಾಲದಲ್ಲಿ ರಾಜ್ಯವೆಂದು ರಾಜನೆಂದು ಹೆಸರು ಸಹ ಇಲ್ಲ. ಅಂತಹ ಕಾಲದಲ್ಲಿ ಬ್ರಹ್ಮವಿದ್ಯೆ ಕಲಿತವರು ಇತರರಿಗೆ ಜ್ಞಾನ ತಿಳಿಸುವುದರಿಂದ ತಿಳಿದುಕೊಳ್ಳುವವರು ಕೆಲವರು ಏರ್ಪಡುತ್ತಾಬಂದರು. ಹಾಗೆ ಒಬ್ಬರನ್ನು ಗುರುವಾಗಿ ಮಾಡಿಕೊಂಡು ಆತನನ್ನು ಅನುಸರಿಸುವವರು ನೂರು ಸಾವಿರ ಸಂಖ್ಯೆಗಳಲ್ಲಿ ತಯಾರಾಗಿ ಆತನ ಮಾತನ್ನೇ ಶಿರಸಾವಹಿಸುತ್ತಾ ಬಂದರು. ಹಾಗೆ ಸ್ವಲ್ಪ ಕಾಲಕ್ಕೆ ಗುರುವು ರಾಜನಹಾಗೆ, ಶಿಷ್ಯರೆಲ್ಲರೂ ರಾಜ್ಯದಹಾಗೆ ತಯಾರಾದರು. ಹೀಗೆ

ಒಬ್ಬೊಬ್ಬ ಗುರುವು ಸ್ವಲ್ಪ ಪ್ರಾಂತ್ಯದವರೆಗು ಶಿಷ್ಯರನ್ನು ತಯಾರಿಸಿಕೊಳ್ಳುವುದರಿಂದ, ಆ ಪರಿಸರದಲ್ಲಿರುವವರೆಲ್ಲಾ ಆ ಗುರುವನ್ನೇ ದೊಡ್ಡದಾಗಿ ತಿಳಿದುಕೊಂಡು ಆತನ ಮಾತನ್ನೇ ಆಚರಿಸುವುದರಿಂದ, ಆ ಪ್ರಾಂತ್ಯಕ್ಕೆ ಗುರುವೇ ರಾಜನಾಗಿ ಪರಿಗಣಿಸಲ್ಪಡುತ್ತಿದ್ದನು . ಈ ವಿಧವಾಗಿ ರಾಜ ರಾಜ್ಯವೆನ್ನುವ ವ್ಯವಸ್ಥೆ ಪಾರಂಭವಾಗಿದೆ. ಕಾಲ ಕಳೆದಂತೆಲ್ಲಾ ಶಿಷ್ಯರಾಗಿರುವವರು ಕೆಲವು ತಪ್ಪುಗಳನ್ನು ಮಾಡುವುದು, ಗುರುಗಳಾಗಿರುವವರು ದಂಡಿಸುವುದು ನಡೆಯುತ್ತಿತ್ತು. ದಂಡಿಸುವ ಸಲುವಾಗಿ, ತಪ್ಪು ಒಪ್ಪು ತಿಳಿಸುವ ಸಲುವಾಗಿ, ಗುರುವು ಚೆನ್ನಾಗಿ ತಿಳಿದ ಜ್ಞಾನಿಗಳನ್ನು ಕೆಲವರನ್ನು ನಿಯಮಿಸಿದನು. ಹಾಗೆ ನ್ಯಾಯವ್ಯವಸ್ಥೆ ಏರ್ಪಟ್ಟಿದೆ. ಈ ವಿಧವಾಗಿ ಮೊದಲು ರಾಜವ್ಯವಸ್ಥೆಯಲ್ಲಿ ಕೆಲವರು ಭಾಗಸ್ವಾಮಿಗಳಾದರು. ಇನ್ನೂ ಸ್ವಲ್ಪ ಕಾಲ ಕಳೆದಾಗ ಗುರುವಾಗಿರುವವನು ತನ್ನ ದೊಡ್ಡತನವನ್ನು ಇನ್ನೂ ಕೆಲವು ಜನರಿಗೆ ತಿಳಿಸಿ ತಾನು ಇನ್ನೂ ದೊಡ್ಡರಾಜನಾಗಿ ಆಗಬೇಕೆಂದುಕೊಂಡನು. ಹೇಗೆ ಮಾಡಿದರೆ ತಾನು ದೊಡ್ಡದಾಗಿ ಕಾಣಿಸುತ್ತೇನೆಂದು ಯೋಚಿಸಿ ಕೆಲವು ಮಹತ್ವಗಳನ್ನು ತೋರಿಸಬೇಕೆಂದುಕೊಂಡಿದ್ದಾನೆ. ಮಹತ್ವಗಳು ಜ್ಞಾನದಲ್ಲಿರುವುದಿಲ್ಲ ಆದ್ದರಿಂದ ತನ್ನ ಮಹತ್ವಗಳಿಗೋಸ್ಕರ ಪ್ರತ್ಯೇಕಿಸಿ ಒಬ್ಬ ಮನುಷ್ಯನನ್ನು ನಿಯಮಿಸಿಕೊಂಡನು. ಮಂತ್ರಗಳಿಂದ ಮಹತ್ವಗಳನ್ನು ತೋರಿಸಬಹುದು ಆದ್ದರಿಂದ ಆ ದಿನಗಳಲ್ಲಿ ಟಕ್ಕು, ಟಮಾರ, ಇಂದ್ರಜಾಲ, ಮಹೇಂದ್ರಜಾಲ, ಗಜಕರ್ಣ, ಗೋಕರ್ಣ ಮಂತ್ರ ವಿದ್ಯೆಗಳು ಕಲಿತವರನ್ನು ನಿಯಮಿಸಿ ಕೊಳ್ಳುತ್ತಿದ್ದರು. ಮಂತ್ರಿಸುವವನಾದ್ದರಿಂದ ಅವನನ್ನು ಮಂತ್ರಿ ಎನ್ನುತ್ತಿದ್ದರು. ಈ ವಿಧವಾಗಿ ಮಂತ್ರಿಗಳ ವ್ಯವಸ್ಥೆ ಏರ್ಪಟ್ಟಿದೆ.

ಕಾಲ ಕಳೆಯುತ್ತಾ ಹೋದಂತೆಲ್ಲ ಕೆಲವು ಸಾವಿರ ಲಕ್ಷಗಳ ವರ್ಷಗಳಲ್ಲೇ ಮಾಯೆ ಪ್ರಭಾವದಿಂದ ಗುರುಗಳಾಗಿ ಚಲಾವಣೆ ಆಗುವವರು ವಂಶಪಾರಂಪರ್ಯವಾಗಿ ಚಲಾವಣೆ ಆಗುತ್ತಾ, ಕೊನೆಗೆ ಬ್ರಹ್ಮವಿದ್ಯೆ ಏನೆಂದು ತಿಳಿಯದ ರಾಜರು ಮಾತ್ರ ಉಳಿದುಹೋದರು. ರಾಜಕೀಯ ನಮ್ಮ ವಂಶಪಾರಂಪರ್ಯ ಹಕ್ಕು ಎಂದು ಅವರಲ್ಲಿಯೂ ಸಹ ರಾಜ್ಯಕಾಂಕ್ಷೆ ಶುರುವಾಯಿತು. ಬಂಧುಪ್ರೀತಿ ಸೋದರಭಾವ ಬಿಟ್ಟು ಯಾರು ಬಲವಂತನಾದರೆ ಅವನು ಸ್ವಂತ ಅಣ್ಣ ತಮ್ಮಂದಿರನ್ನೇ ಸಾಯಿಸಿ ರಾಜನಾಗಬೇಕೆಂದು ಪ್ರಯತ್ನಿಸಿದ ಚರಿತ್ರೆಗಳು ಎಷ್ಟೋ ಇವೆ. ಜ್ಞಾನವಿಲ್ಲದ ರಾಜರು ತಯಾರಾಗಿ, ಮಂತ್ರಗಳು ಇಲ್ಲದ ಮಂತ್ರಿಗಳು ಸಹ ತಯಾರಾಗಿ, ಕೇವಲ ಖಂಡಬಲದ ಮೇಲೆಯೇ ರಾಜವ್ಯವಸ್ಥೆ ನಿಂತುಹೋಯಿತು. ಆ ವಿಧಾನದಲ್ಲೇ ಶರೀರ ಬಲಾಢ್ಯವಿರುವವರನ್ನು ಸೈನಿಕರಾಗಿ ತಯಾರು ಮಾಡಿಕೊಂಡಿರುವುದು ನಡೆದಿದೆ. ಈ ವಿಧದಲ್ಲಿ ಸೈನಿಕ ವ್ಯವಸ್ಥೆ ತಯಾರಾಗಿದೆ. ಪ್ರಜೆಗಳಿಂದ

ತೆರಿಗೆಗಳ ರೂಪದಲ್ಲಿ ಹಣವನ್ನು ಬಲವಂತವಾಗಿ ವಸೂಲಿ ಮಾಡುವುದು ತಯಾರಾಗಿದೆ. ಹೀಗೆ ತೆರಿಗೆ ವ್ಯವಸ್ಥೆ ತಯಾರಾಗಿದೆ. ಈ ವಿಧವಾಗಿ ಒಬ್ಬ ರಾಜ, ಒಬ್ಬ ಮಂತ್ರಿ, ಒಬ್ಬ ಸೇನಾಧಿಪತಿ, ಕೆಲವರು ಭಟರಾಗಿ ಇರುವ ರಾಜಕೀಯ ವ್ಯವಸ್ಥೆ ದಿನದನಕ್ಕೂ ದೊಡ್ಡಬಾವ ಕೋತಿ ಆದಹಾಗೆ ವ್ಯವಸ್ಥೆಯ ರೂಪ ಬದಲಾಗಿ, ಮಂತ್ರಿಗಳು ಅನೇಕರಾಗಿ ತಯಾರಾಗಿರುವುದು, ಅವರ ಕೆಳಗೆ ಅಧಿಕಾರಿಗಳು ಎಷ್ಟೋ ಜನ ಆಗಿರುವುದು ನಡೆದಿದೆ.

ಮೊದಲಿರುವ ವ್ಯವಸ್ಥೆಗು, ಈಗಿರುವ ವ್ಯವಸ್ಥೆಗೂ ಯಾವ ಹೋಲಿಕೆ ಇಲ್ಲದೆ ಹೋಗಿದೆ. ರಾಜಾಧಿರಾಜರಾದ ಪರಮಾತ್ಮ ಭೂಮಿ ಮೇಲೆ ಭಗವಂತನಾಗಿ ಅವತರಿಸಿದರೂ ಅತನನ್ನು ರಾಜನಾಗಿ ಗುರುತಿಸದೆ ನಮ್ಮ ಬಲವಿಷ್ಟು ಇದೆನೋಡೆಂದು ಆತನನ್ನೇ ಶಿಕ್ಷಿಸಿದ ರಾಜರು ಇದ್ದಾರೆ. ದ್ವಾಪರ ಯುಗದಲ್ಲಿ ಕೃಷ್ಣನನ್ನು ಎದುರಿಸಿದವರು, ಕಲಿಯುಗದಲ್ಲಿ ಯೇಸುವನ್ನು ಚಿತ್ರಹಿಂಸೆಗಳನ್ನಿಟ್ಟ ರಾಜರು ಇದ್ದಾರೆ. ಇಂದಿನ ಕಾಲದಲ್ಲಿ ಭಗವಂತನು ಭೂಮಿಮೇಲೆ ಬಂದರೆ ರಾಜರು ಮಂತ್ರಿಗಳೇ ಅಲ್ಲದೆ ಸಣ್ಣ ಉದ್ಯೋಗಿಯಾಗಲಿ ಒಬ್ಬ ಪೋಲೀಸ್ (ರಕ್ಷಕ ಭಟ) ಆಗಲಿ ಲೆಕ್ಕವೇ ಮಾಡದ ಪರಿಸ್ಥಿತಿ ತಯಾರಾಗಿದೆ. ಸ್ವತ್ತು ಒಬ್ಬರದು ಗುರುತು ಇನ್ನೊಬ್ಬರದ್ದು ಎನ್ನುವಂತೆ ಜ್ಞಾನಿಗಳೊಂದಿಗೆ ಪ್ರಾರಂಭವಾದ ಜ್ಞಾನಿಗಳ ವ್ಯವಸ್ಥೆಯನ್ನು, ಈದಿನ ಅಜ್ಞಾನಿಗಳು ಅನುಭವಿಸುತ್ತಿದ್ದಾರೆ. ಆ ದಿನದಲ್ಲಿ ಜ್ಞಾನದಿಂದ ಲಭಿಸುವುದು, ಈದಿನ ಬಲದಿಂದ ಲಭಿಸುತ್ತಿದೆ. ಆದಿನ ಶಾಂತಿಯೊಂದಿಗೆ ಕೂಡಿದ ರಾಜ್ಯ, ಈದಿನ ಹಿಂಸೆಯೊಂದಿಗೆ ಕೂಡಿಕೊಂಡಿದ್ದು ಅಶಾಂತಿ ರಾಜ್ಯವಾಗಿ ಹೋಗಿದೆ.

ಆ ದಿನ ಬ್ರಹ್ಮವಿದ್ಯೆಯನ್ನು ತಿಳಿದ ಜ್ಞಾನಿಯನ್ನು ಗುರುವಾಗಿ ಮಾಡಿಕೊಂಡು ದಾಸರಾಗಿ ಪ್ರೇಮದೊಂದಿಗೆ ಸೇವಿಸುವ ಪ್ರಜೆಗಳು ಈ ದಿನ ರಾಜರ ಕೆಳಗಿರುವ ಚಿಕ್ಕ ಸ್ಥಾನ ಅಧಿಕಾರಿಗಳಿಗೆ ಹಣಕ್ಕೋಸ್ಕರ ಪ್ರೇಮ ಇಲ್ಲದಿದ್ದರೂ ಊಳಿಗವನ್ನು ಮಾಡುತ್ತಿದ್ದಾರೆ. ಅಧಿಕಾರಿಗಳು ಹಣಕೊಟ್ಟು ಬಲವಂತವಾಗಿ ಇಷ್ಟು ಗಂಟೆ ಕೆಲಸಮಾಡಬೇಕೆಂದು ನಿಯಮವನ್ನಿಟ್ಟಾಗ, ಯೋಗ ತಿಳಿಯದ ಉದ್ಯೋಗಿಗಳು (ಬರಿದಾದ ಯೋಗಿಗಳಾದವರು) ಅವಿನೀತಿಯೊಂದಿಗೆ ಕೂಡಿಕೊಂಡು ಸರಿಯಾಗಿ ಕೆಲಸ ಮಾಡದ ಸ್ಥಿತಿಯಲ್ಲಿ ಇದ್ದಾರೆ. ನಾಯಕರಲ್ಲಿ ಬ್ರಹ್ಮಜ್ಞಾನವಾಗಲಿ, ಸೇವಕರಲ್ಲಿ ಭಕ್ತಿ ಭಾವವಾಗಲಿ, ಇಲ್ಲದ ಸಮಾಜ ತಯಾರಾದ ಈ ಕಾಲದಲ್ಲಿ, ದೇವರೇ ಇಳಿದುಬಂದರೂ ನಾಯಕರಲ್ಲಿ ದೈವ ಜ್ಞಾನವನ್ನು, ಸೇವಕರಲ್ಲಿ ಭಕ್ತಿ ಭಾವ ಉಂಟುಮಾಡಲಾರನೇನೊ ಎನಿಸುತ್ತದೆ. ಯಾವುದೇನಾದರೂ ಪೂರ್ವದ ಸಮಾಜ ಬರಬೇಕೆಂದು, ಭಗವಂತನ ರಾಜ್ಯ ಏರ್ಪಡಬೇಕೆಂದು, ದೇವರ ರಾಜ್ಯ ಮೋಕ್ಷದಲ್ಲೇ ಅಲ್ಲದೆ ಭೂಮಿ ಮೇಲೆ ಪ್ರಜೆಗಳಲ್ಲಿ ಪ್ರತಿಷ್ಠಿಸಬೇಕೆಂದು ಕೋರುತ್ತಿದ್ದೇವೆ.

**908. (8) ಪುಂಸತ್ವವೆಂದರೇನು?**

ಉ. ಆತ್ಮಜ್ಞಾನವನ್ನು ಹೊಂದಿರುವುದು (ಪುರುಷನನ್ನು ತಿಳಿಯುವುದು)

**ವಿವರ :** ಪುರುಷನಿಗೆ ವಿರುದ್ಧ ಪದ ಸ್ತ್ರೀ, ಸ್ತ್ರೀಗೆ ವಿರುದ್ಧ ಪದ ಪುರುಷನಾದಾಗ, ಎರಡಕ್ಕೂ ಮಧ್ಯೆ ಇರುವ ಪದ ನಪುಂಸಕನು. ಪುರುಷನೆಂದರೆ ಆಧ್ಯಾತ್ಮಿಕ ವಿದ್ಯೆಯ ಪ್ರಕಾರ ಆತ್ಮ ಎಂದು, ಉತ್ತಮ ಪುರುಷನೆಂದರೆ ಪರಮಾತ್ಮಯೆಂದು ಹೇಳಿಕೊಳ್ಳಬಹುದು. ಸ್ತ್ರೀ ಎಂದರೆ ಪ್ರಕೃತಿಯೆಂದು ಹೇಳಲಾಗುತ್ತಿದೆ. ಆತ್ಮ ಜ್ಞಾನ ಹೊಂದಿರುವವನನ್ನು ಪುರುಷತ್ವ ಇರುವವನಾಗಿ, ಆತ್ಮ ಜ್ಞಾನ ಇಲ್ಲದೆ ಪೂರ್ತಿ ಮಾಯೆ ವಿಷಯಗಳ ತಿಳುವಳಿಕೆ ಇರುವವನನ್ನು ಪ್ರಕೃತಿ ತತ್ವ ಹೊಂದಿದ ಸ್ತ್ರೀ ಲಕ್ಷಣಗಳಿರುವ ನಪಂಸಕನೆಂದು ಹೇಳಬಹುದು.

**909. (9) ನಪುಂಸತ್ವವೆಂದರೇನು?**

ಉ. ಪುರುಷನ ವಿಷಯ ತನ್ನ ಹತ್ತಿರ ಇಲ್ಲದೇ ಹೋಗುವುದು.

**ವಿವರ :** ಮೇಲ್ನೋಟಕ್ಕೆ ಆಕಾರ ಪುರುಷನ ಹಾಗೆ ಕಾಣಿಸುತ್ತಾ ಸ್ತ್ರೀ ಸ್ವಭಾವಗಳಿರುವವನನ್ನು ನಪುಂಸಕನೆಂದು ಕರೆಯುತ್ತೇವೆ. ಮೇಲ್ನೋಟಕ್ಕೆ ದೈವಜ್ಞಾನ ತಿಳಿದವನಾಗಿ ಕಾಣಿಸುತ್ತಾ, ಒಳಗೆ ದೇವರ ವಿಷಯ ಯಾವಮಾತ್ರ ತಿಳಿಯದೆ ಪ್ರಕೃತಿ ವಿಷಯಗಳು ತಲೆಯಲ್ಲಿ ತುಂಬಿರುವವನನ್ನು, ಜ್ಞಾನದ ಪ್ರಕಾರ ನಪುಂಸಕನೆಂದು ಕರೆಯಬಹುದು. ಇನ್ನೂ ಒಳಗಿನ ಅರ್ಥವನ್ನು ತೆಗೆದುಕೊಂಡರೆ ಆತ್ಮ ಸಂಬಂಧವನ್ನು ಹೊಂದಿ ಪ್ರಕೃತಿಯಲ್ಲಿ ಸಿಲುಕಿಕೊಂಡ ಜೀವಾತ್ಮನನ್ನು ನಪಂಸಕನೆಂದು ಸಹ ಕರೆಯಬಹುದು. ಒಂದು ವಿಧವಾಗಿ ಮೇಲ್ನೋಟಕ್ಕೆ ಸ್ವಾಮಿಗಳಾಗಿ ಜ್ಞಾನಿಗಳಂತೆ ಕಾಣಿಸುತ್ತಾ ಬೋಧಿಸುವುದು ಪರಮಾತ್ಮ ಮಾರ್ಗವೆಂದು ಕೊನೆಗೆ ಪ್ರಕೃತಿ ಮಾರ್ಗವನ್ನು ಕುರಿತು ಹೇಳುವ ಬೋಧಕರನ್ನು ಜ್ಞಾನರೀತ್ಯ ನಪುಂಸಕರೆಂದು ಹೇಳಬಹುದು.

**910. (10) ಹರ್ಷಿ ಎನ್ನುವ ಪದ ಕಾಲಗಮನದಲ್ಲಿ ಯಾವ ವಿಧವಾಗಿ ಬದಲಾಗಿದೆ?**

ಉ. ಋಷಿ ಎನ್ನುವ ಪದವಾಗಿ ಬದಲಾಗಿದೆ.

**ವಿವರ :** ಹರ್ಷಿ ಎಂದರೆ ಸಂತೋಷಿಸುವವನೆಂದು, ಆನಂದ ಇರುವವನೆಂದು ಅರ್ಥ. ಹರ್ಷಿ ಎನ್ನುವವನು ಮಹರ್ಷಿ, ರಾಜರ್ಷಿ, ದೇವರ್ಷಿ, ಬ್ರಹ್ಮರ್ಷಿ ಎನ್ನುವ ವರ್ಗಗಳಾಗಿ ಇರುತ್ತಿದ್ದರು. ಹರ್ಷಿ ಎನ್ನುವ ಹೆಸರು ಕಾಲಗಮನದಲ್ಲಿ ಋಷಿಯಾಗಿ ಬದಲಾಗಿದೆ.

ಹರ್ಷಿ ಎನ್ನುವಪದ ಋಷಿಯಾಗಿ ಬದಲಾದರೂ ಮಹರ್ಷಿ, ರಾಜರ್ಷಿ, ದೇವರ್ಷಿ, ಬ್ರಹ್ಮರ್ಷಿ ಎನ್ನುವ ಪದಗಳು ಮಾತ್ರ ಬದಲಾಗದೆ ಮೊದಲು ಹೇಗಿವೆಯೋ ಹಾಗೇ ಇವೆ.

## ಜ್ಞಾನ ಪರೀಕ್ಷೆ

**ಚಿನ್ನಪೊಲಮಡ** **ದಿನಾಂಕ–21–10–2002**

**911. (1) ಹುಣ್ಣಿಮೆ ಚಂದ್ರ ಅಮಾವಾಸ್ಯೆ ನಕ್ಷತ್ರ ಎರಡನ್ನೂ ಯಾರೊಂದಿಗೆ ಹೋಲಿಸಬಹುದು?**

ಉ. ಭಗವಂತ, ಪರಮಾತ್ಮ.

**ವಿವರ :** ಹುಣ್ಣಿಮೆ ಚಂದ್ರನು ಸಂಪೂರ್ಣವಾಗಿ ಇರುವನು. ಉಳಿದ ದಿನಗಳಲ್ಲಿ ಚಂದ್ರನ ಪರಿಮಾಣ, ಕಾಂತಿ ಸ್ವಲ್ಪ ಕಡಿಮೆಯಾಗಿ ಇರುವುದು. ಉಳಿದ ದಿನಗಳ ಚಂದ್ರನಿಗಿಂತಲೂ ಹುಣ್ಣಿಮೆ ದಿನ ಚಂದ್ರನು ಕಾಂತಿಯಲ್ಲೂ ಆಕಾರದಲ್ಲೂ ಸಂಪೂರ್ಣತೆ ಹೊಂದಿರುವನು. ಭೂಮಿ ಮೇಲೆ ಎಷ್ಟೋ ಜನ ಜ್ಞಾನಿಗಳಿದ್ದಾರೆ, ಅವರೆಲ್ಲರೂ ಒಂದೇ ಸ್ಥಾನದವರಲ್ಲದೆ ಅನೇಕ ಸ್ಥಾನಗಳ ಜ್ಞಾನವನ್ನು ಹೊಂದಿರುವರು. ಎಷ್ಟು ಜನ ಎಷ್ಟು ಸ್ಥಾನಗಳ ಜ್ಞಾನವಿದ್ದವರಾದರೂ ಸಂಪೂರ್ಣ ಜ್ಞಾನ ಇರುವವನು ಒಬ್ಬನೇ ಇರುವನು. ಅವನೇ ಭಗವಂತನು. ಭಗವಂತನು ಪರಮಾತ್ಮ ಜ್ಞಾನವನ್ನು ಹೊಂದಿ ಸಂಪೂರ್ಣವಾಗಿ ಹುಣ್ಣಿಮೆ ಚಂದ್ರನಹಾಗೆ ಇರುವನು. ಪರಮಾತ್ಮನ ಜ್ಞಾನ ಭಗವಂತನಾದ ಅವನೊಬ್ಬನಿಗೇ ತಿಳಿಯುವುದು. ಏಕೆಂದರೆ ಭಗವಂತನು ಪರಮಾತ್ಮನಲ್ಲಿನ ಭಾಗವಾಗಿದ್ದಾನೆ. ಆದ್ದರಿಂದ ಭೂಮಿ ಮೇಲೆ ಅವತರಿಸಿದ ಭಗವಂತನನ್ನು ಹುಣ್ಣಿಮೆ ಚಂದ್ರನಾಗಿ ಹೋಲಿಸಿ ಹೇಳಬಹುದು.

ಬೆಳಕು ಪ್ರಪಂಚದಲ್ಲಿ ಕೆಲವು ಕಡೆ ಮಾತ್ರ ಇರುತ್ತದೆ. ಕೆಲವು ಕತ್ತಲು ಪ್ರಾಂತ್ಯಗಳು ಹಗಲಿನಲ್ಲೂ ಸಹ ಇವೆ. ಸೂರ್ಯನ ಬೆಳಕು ಪ್ರಸರಿಸದ ಜಾಗ ಇರಬಹುದು, ಆದರೆ ಕತ್ತಲು ವ್ಯಾಪಿಸದ ಜಾಗಾ ಇಲ್ಲವೇ ಇಲ್ಲ. ಸಹಜ ಸಿದ್ಧವಾಗಿ ಇರುವುದು ಕತ್ತಲು. ಬೆಳಕಿಗೆ ದೀಪವೋ ಸೂರ್ಯನೋ ಯಾರೋ ಒಬ್ಬರು ಆಧಾರವಾಗಿ ಇರಬೇಕು. ಇನ್ನೊಂದರ ಆಧಾರದಿಂದ ಇಲ್ಲದಿರುವುದು ಕತ್ತಲು. ಎಲ್ಲಾಕಡೆ ವ್ಯಾಪಿಸಿರುವುದು ಕತ್ತಲು,

ಆದ್ದರಿಂದ ಅದನ್ನು ಎಲ್ಲಾ ಕಡೆ ವ್ಯಾಪಿಸಿರುವ ಪರಮಾತ್ಮ ಶಕ್ತಿಯೊಂದಿಗೆ ಸಮಾನವಾಗಿ ಹೋಲಿಸಿ ಅಮಾವಾಸ್ಯೆ ಎಂದಿದ್ದೇವೆ. ಎಲ್ಲಾಕಡೆ ವ್ಯಾಪಿಸಿ ಶಾಶ್ವತವಾಗಿ ಹಗಲು ರಾತ್ರಿ ಯಾವಾಗಲೂ ಒಬ್ಬನಿದ್ದಾನೆನ್ನುವುದನ್ನು ತಿಳಿಸುವುದಕ್ಕೆ ನಕ್ಷತ್ರವನ್ನು ಪರಮಾತ್ಮನೊಂದಿಗೆ ಸಮಾನವಾಗಿ ಹೋಲಿಸಿ ಹೇಳಿದ್ದಾರೆ. ಚಂದ್ರನು ಭಗವಂತನು, ಬೆಳದಿಂಗಲು ಜ್ಞಾನ, ಹಾಗೇ ನಕ್ಷತ್ರ ಪರಮಾತ್ಮ, ಆಮಾವಾಸ್ಯೆ ಕತ್ತಲನ್ನು ವ್ಯಾಪಿಸಿದ ಪರಮಾತ್ಮ ಶಕ್ತಿಯಾಗಿ ಹೋಲಿಸಿ ಹೇಳಿದ್ದಾರೆ.

**912. (2) ಮತ ಎನ್ನುವುದು ನಮ್ಮ ಶರೀರದಲ್ಲಿದೆಯಾ, ಶರೀರದ ಹೊರಗಿದೆಯಾ?**

ಉ. ಶರೀರದಲ್ಲೇ ಇದೆ.

**ವಿವರ :** ಮತ ಎನ್ನುವುದು ಹೊರಗಿನ ಪ್ರಜೆಗಳಲ್ಲಿ ಕಾಣಿಸುತ್ತಿದ್ದರೂ, ಇವರು ಇಂತಹ ಮತಸ್ಥರೆಂದು ಕರೆದುಕೊಳ್ಳುತ್ತಿದ್ದರೂ, ಮತ ವಾಸ್ತವವಾಗಿ ಶರೀರಗಳ ಹೊರಗಿಲ್ಲ. ಎಲ್ಲರ ಶರೀರಗಳು ಪಂಚಭೂತಗಳ ಸಂಬಂಧವಾದವೇ ಆಗಲಿ ಮತದಿಂದ ಹುಟ್ಟಿರುವವು ಯಾವೂ ಇಲ್ಲ. ಮತ ಶರೀರದೊಳಗಿರುವ ಗುಣಗಳೊಳಗಿನ ಗುಣವಲ್ಲದ ಗುಣವಂತದ್ದೇ ಎಂದು ಹೇಳಬಹುದು. ಮತವೆಂದರೆ ಒಪ್ಪಿಗೆ, ಇಷ್ಟ ಅಥವಾ ಶ್ರದ್ಧೆ ಎಂದು ಸಹ ಹೇಳಬಹುದು. ಮನುಷ್ಯನ ಗುಣಚಕ್ರದಲ್ಲಿ ಇಷ್ಟ ಎನ್ನುವುದು ಸಹ ಒಂದಿದೆ. ಕಾಣಿಸದ ಗುಣಗಳು ಧೈರ್ಯ ಭಯ ಆದಾಗ, ಎರಡು ಪಕ್ಷಗಳ ಗುಣಗಳಿಗೆ ಸಂಬಂಧಿಸಿದ ಸೂಕ್ಷ್ಮವಾದ ಗುಣವಂತದ್ದು ಒಂದಿದೆ. ಅದೇ ಶ್ರದ್ಧೆ ಅಥವಾ ಮತವೆಂದು ಹೇಳಬಹುದು. ಗುಣಗಳೆಲ್ಲವೂ ಕರ್ಮಾಧೀನದಲ್ಲೇ ಇದ್ದು ಕರ್ಮದ ಪ್ರಕಾರ ನಡೆಯುತ್ತಿರುವಾಗ ಶ್ರದ್ಧೆ ಎನ್ನುವುದು ಕರ್ಮ ಅಧೀನದಲ್ಲಿ ಇಲ್ಲದೆ ಸ್ವತಂತ್ರಭಾವವಾಗಿ ಇದೆ. ಆದ್ದರಿಂದ ಗುಣವಲ್ಲ ಎಂದಿದ್ದೇವೆ. ಒಳಗಿರುವ ಶ್ರದ್ಧೆಯನ್ನನುಸರಿಸಿ ಭಕ್ತಿ ಏರ್ಪಡುತ್ತಿದೆ. ಆ ಶ್ರದ್ಧೆಯೇ ಹೊರಗೆ ಮತವಾಗಿದೆಯೆಂದು ತಿಳಿಯಬೇಕು. ಇದೇ ಪದ್ಧತಿಯಲ್ಲಿ ರಾಜಕೀಯಪಾರ್ಟಿಗಳು ಸಹ ಇವೆ. ರಾಜಕೀಯ ಪಾರ್ಟಿಗಳಲ್ಲಿ ಯಾವುದೋ ಒಂದನ್ನು ತಿಳಿಸುವ ಇಷ್ಟತೆಯನ್ನು ಆಂಗ್ಲ ಭಾಷೆಯಲ್ಲಿ ಓಟು ಹಾಕುವುದೆಂದು, ಕನ್ನಡ ಭಾಷೆಯಲ್ಲಿ, ಸಂಸ್ಕೃತ, ಹಿಂದೀ ಕನ್ನಡ ಭಾಷೆಗಳಲ್ಲಿ ಮತದಾನವೆಂದೂ ಕರೆಯುತ್ತಿರುವರು. ರಾಜಕೀಯದಲ್ಲಾಗಲಿ, ಭಕ್ತಿ ಮಾರ್ಗದಲ್ಲಾಗಲಿ ಇರುವ ಪದ್ಧತಿಗಳನ್ನು ಶರೀರದಲ್ಲಿನ ಇಷ್ಟದ ಪ್ರಕಾರ ಆಯ್ಕೆ ಮಾಡಿಕೊಂಡು ಆ ಪದ್ಧತಿಯಲ್ಲಿ ನಡೆದುಕೊಳ್ಳುತ್ತಿದ್ದಾರೆ. ಆದ್ದರಿಂದ ಮತವೆನ್ನುವುದು ಶರೀರಾಂತರ್ಗತದಲ್ಲಿ ಗುಣಚಕ್ರದಲ್ಲಿ ಇದೆಯೆಂದು ಹೇಳಬಹುದು.

**913. (3) ಪುತ್ರನಿಲ್ಲದಿದ್ದರೆ ಪುನ್ನಾಮ ನರಕವೆನ್ನುತ್ತಾರೆ, ಗಂಡಸತನ ಇಲ್ಲದಿದ್ದರೇ ಅವನಗತಿ ಏನು?**

ಉ. ಸಾಧಾರಣ ನರಕವೇ ಬರುತ್ತದೆ.

**ವಿವರ :** ಪ್ರಪಂಚರೀತ್ಯಾ ಸಂತಾನವಿಲ್ಲದವರನ್ನು ನೋಡಿ, ಅಥವಾ ಗಂಡು ಮಕ್ಕಳಿಲ್ಲದವರನ್ನು ನೋಡಿ, ಪುತ್ರನು ಇಲ್ಲದಿದ್ದರೆ ಪುನ್ನಾಮ ನರಕವೆಂದು, ಅದನ್ನು ತಪ್ಪಿಸಿಕೊಳ್ಳುವುದಕ್ಕೆ ತಪ್ಪದೆ ಮಗನು ಬೇಕೆ ಬೇಕೆಂದು ಕೆಲವರು ಕೋರಿಕೊಳ್ಳುತ್ತಿದ್ದಾರೆ. ಎಲ್ಲರ ಉದ್ದೇಶ ಅದೇ ಆದರೂ ಜ್ಞಾನ ತಿಳಿದವರು ಪೂರ್ವದಲ್ಲಿ ಹೇಳಿದ ಉದ್ದೇಶ ಬೇರೆಯಾಗಿದೆ. ಅದು ಏನೆಂದರೆ! ಪುತ್ರರೆಂದರೆ ಎರಡು ವಿಧಗಳ ಪುತ್ರರು ಇದ್ದಾರೆ. ಒಂದು ವಿಧದವರು ಭಿಂದು ಪುತ್ರರು, ಮತ್ತೊಂದು ವಿಧದವರು ನಾದಪುತ್ರರು. ಮೇಲಿನ ಮಾತು ನಾದಪುತ್ರರ ವಿಷಯದಲ್ಲಿ ಹೇಳಿರುವುದೇ, ಆದರೆ ಭಿಂದು ಪುತ್ರರ ವಿಷಯದಲ್ಲಿ ಹೇಳಿರುವುದಲ್ಲ. ಶರೀರ ಸಂಬಂಧದೊಂದಿಗೆ ಹುಟ್ಟಿದವರೆಲ್ಲರೂ ಭಿಂದು ಪುತ್ರರಾಗುವರು. ವೀರ್ಯ ಭಿಂದುವುಗೆ ಹುಟ್ಟುವುದರಿಂದ ಅವರಿಗೆ ಭಿಂದುಪುತ್ರರೆಂದು ಹೆಸರು ಬಂದಿದೆ. ಹಾಗೇ ಒಬ್ಬ ವ್ಯಕ್ತಿ ಜ್ಞಾನ ತಿಳಿಸುವುದರಿಂದ ಮತ್ತೊಬ್ಬನು ಸಂಪೂರ್ಣ ಜ್ಞಾನಿಯಾಗಿ ಬದಲಾದರೆ, ಅವನನ್ನು ಜ್ಞಾನ ತಿಳಿಸಿದ ವ್ಯಕ್ತಿಗೆ ನಾದಪುತ್ರನೆಂದು ಹೇಳಬಹುದು. ಇದನ್ನನುಸರಿಸಿ ಶಬ್ದದೊಂದಿಗೆ ಕೂಡಿದ ಜ್ಞಾನಬೋಧನೆಯಿಂದ ನಾದಪುತ್ರರು ತಯಾರಾಗುವರೆಂದು ತಿಳಿಯುತ್ತಿದೆ. ದೈವಮಾರ್ಗದಲ್ಲಿ ಪುತ್ರನೆಂದರೆ ನಾದಪುತ್ರನಾಗಿಯೇ ಲೆಕ್ಕಿಸಬೇಕು.

ನರಕವೆನ್ನುವುದು ಪ್ರಪಂಚದಲ್ಲಿ ಒಂದೇ ಇದೆ ಆದರೆ ಅದರಲ್ಲಿ ಪುನ್ನಾಮ ನರಕವೆಂದು, ಸಾಧಾರಣ ನರಕವೆಂದು ಅನೇಕವಿಧ ತರಗತಿಗಳು ಇಲ್ಲ. ಆದ್ದರಿಂದ ಪುನ್ನಾಮ ನರಕವೆಂದು ಏಕೆಂದಿದ್ದಾರೋ ನೋಡೋಣ. ತನಗೆ ದೈವಜ್ಞಾನ ತಿಳಿದಿದ್ದು ಮತ್ತೊಬ್ಬನಿಗೆ ತನಗೆ ತಿಳಿದ ಜ್ಞಾನ ಹೇಳಬಾರದೆಂದು, ಹೇಳುವುದರಿಂದ ಮತ್ತೊಬ್ಬನು ಸಹ ಜ್ಞಾನಿಯಾಗಿ ಬದಲಾಗುವನೆಂದು, ಹಾಗೆ ಇತರರು ಜ್ಞಾನಿಗಳಾಗಿ ಬದಲಾಗಬಾರದೆಂದು, ತಾನೇ ಜ್ಞಾನಿಯಾಗಿರಬೇಕೆಂದು, ಉಳಿದವರು ತನಗೆ ಸಮಾನವಾದ ಜ್ಞಾನಿಗಳಾಗಿ ಬದಲಾಗಬಾರದೆಂದು, ಸ್ವಾರ್ಥದಿಂದ ಇತರರಿಗೆ ಜ್ಞಾನ ತಿಳಿಸದಂತಿರುವವನಿಗೆ ಜ್ಞಾನಕ್ಕೆ ಸಂಬಂಧಿಸಿದ ಪಾಪ ಅಂಟುತ್ತದೆ. ಯಾವ ವಿಷಯದಲ್ಲಿ ತಪ್ಪು ಮಾಡಿದರೆ ಆ ವಿಷಯಕ್ಕೆ ಸಂಬಂಧಿಸಿದ ಪಾಪವೇ ಬರುವುದು ಸಹಜ. ಆದ್ದರಿಂದ ಜ್ಞಾನ ವಿಷಯದಲ್ಲಿ ಮಾಡಿದ ತಪ್ಪಿಗೆ ಜ್ಞಾನ ಸಂಬಂಧವಾದ ಪಾಪವೇ ಬರುವುದು ಸಹಜ. ಜ್ಞಾನಿಯನ್ನು ಚಂದ್ರನಾಗಿ, ಜ್ಞಾನವನ್ನು ಹುಣ್ಣಿಮೆಯಾಗಿ ಹೋಲಿಸುವುದು ಆಧ್ಯಾತ್ಮಿಕದಲ್ಲಿರುವ ವಿಷಯವೇ.

ಸಂಪೂರ್ಣ ಜ್ಞಾನವನ್ನು ಪೂರ್ತಿ ಬೆಳಕಿರುವ ಹುಣ್ಣಿಮೆಯೊಂದಿಗೆ ಸಮಾನವಾಗಿ ಹೋಲಿಸುವುದು ನಡೆದಿದೆ. ಆದ್ದರಿಂದ ಜ್ಞಾನ ವಿಷಯಗಳು ಇತರರಿಗೆ ಹೇಳದವರಿಗೆ ಪುನ್ನಮ ನರಕಬರುವುದೆಂದು ಹಿರಿಯರು ಹೇಳಿದ್ದಾರೆ. ಪುನ್ನಮ ನರಕವೆಂದರೆ ಜ್ಞಾನ ಸಂಬಂಧವಾದ ಬಾಧೆಗಳೇ ಎಂದು ಅರ್ಥ. ಕಾಲಕ್ರಮದಲ್ಲಿ ಪೂರ್ವವಿದ್ದ **ಪುನ್ನಮ ನರಕ ಬದಲಾಗಿ ಪುನ್ನಾಮ ನರಕವಾಗಿ** ಹೇಳಲಾಗುತ್ತಿದೆ. ಹೇಳುವುದರಲ್ಲಿ **"ನಾ"** ದೀರ್ಗ ಏರ್ಪಟ್ಟು ಪುನ್ನಾಮ ನರಕವೆಂದಿರುವುದು ನಡೆದಿದೆ. ಜ್ಞಾನ ಇತರರಿಗೆ ಹೇಳುವುದರಿಂದ ನಾದಪುತ್ರರು ತಯಾರಾಗಿರುವುದು ನಡೆಯುತ್ತಿದೆ. ಜ್ಞಾನ ತಿಳಿದು ಹೇಳದವನಿಗೆ ನಾದಪುತ್ರರೇ ಇರುವುದಿಲ್ಲ ಆದ್ದರಿಂದ ಅಂತಹವರನ್ನು ಕುರಿತು ಪುನ್ನಮ ನರಕವನ್ನು ಹೊಂದುವರೆಂದು ಹಿರಿಯರು ತಿಳಿಸಿದ್ದಾರೆ.

ಭೂಮಿ ಮೇಲೆ ಜ್ಞಾನ ತಿಳಿದವರು ಬಹು ಸ್ವಲ್ಪ ಜನರೇ ಇರುವರು. ದ್ವಾಪರ ಯುಗದಲ್ಲೇ ಸಾವಿರ ಜನಕ್ಕೆ ಒಬ್ಬನು ಜ್ಞಾನ ತಿಳಿಯಬೇಕೆಂದು ಆಸಕ್ತಿ ಹೊಂದಿರುವುದು ಅಪರೂಪವೆಂದು ಭಗವದ್ಗೀತೆಯಲ್ಲಿ ಕೃಷ್ಣನು ಹೇಳಿದ್ದಾನೆ. ಆ ಕಾಲದಲ್ಲೇ ಹಾಗಿದ್ದರೇ ನವೀನ ಪರಿಕರಗಳೊಂದಿಗೆ ಪ್ರಪಂಚಕ್ಕೆ ಅಂಟಿಕೊಂಡುಹೋಗಿರುವ ಈ ಕಾಲದಲ್ಲಿ, ಲಕ್ಷ ಜನಸಂಖ್ಯೆಯಲ್ಲಿ ಒಬ್ಬನು ಜ್ಞಾನಾಸಕ್ತನಾಗಿ ಇರುವುದು ಅಪರೂಪ ಎಂದು ಹೇಳಬಹುದು. ಒಂದುಸಾವಿರ ಲಕ್ಷ ಸಂಖ್ಯೆಯಲ್ಲಿ ಯಾರಾದರೂ ಜಿಜ್ಞಾಸೆ ಪರನಿದ್ದರೂ ಮಾಯೆ ಪ್ರಭಾವದಿಂದ ಅವನು ಜ್ಞಾನಿಯಾಗಿ ಬದಲಾಗುವುದು ಇನ್ನೂ ಅಪರೂಪ. ಅಂತಹ ವಾತಾವರಣದಲ್ಲಿಂದ ಯಾರಾದರೂ ಜ್ಞಾನ ತಿಳಿದು ಸಂಪೂರ್ಣ ಜ್ಞಾನಿಯಾಗಿ ಇದ್ದರೇ ಅವನನ್ನು ಗಂಡಸು ಎನ್ನಬಹುದು. ಯಾವುದಾದರೂ ಕಷ್ಟದಿಂದ ಸಾಹಸದಿಂದ ಕೂಡಿಕೊಂಡಿರುವ ಕೆಲಸವನ್ನು ಯಾರಾದರೂ ಮಾಡಿದರೆ ಅವನನ್ನು ಇವನೇ ಕಣೊ ಗಂಡಸು ಎಂದು ಎಲ್ಲರು ಹೇಳುವುದನ್ನು ಕೇಳಿಯೇ ಇದ್ದೇವೆ. ಪ್ರಪಂಚದಲ್ಲಿ ವಾಸ್ತವವಾಗಿ ಕಷ್ಟವಾದದ್ದು ಸಾಹಸವಾದದ್ದು ಎಲ್ಲದಕ್ಕಿಂತ ದೊಡ್ಡದು ಬ್ರಹ್ಮವಿದ್ಯೆಯೇ. ಸಾಹಸದಿಂದ ಕೂಡಿಕೊಂಡ ಬ್ರಹ್ಮವಿದ್ಯೆಯಾದ ಜ್ಞಾನ ತಿಳಿಯುವುದು ನಿಜವಾಗಿ ಗಂಡಸುತನ ಇದ್ದಂತೆ. ಪೂರ್ವದಲ್ಲಿ ಜ್ಞಾನ ತಿಳಿಯದವನನ್ನು ಪುರುಷತ್ವ ಇಲ್ಲದವನೆಂದು, ನಪುಂಸಕನೆಂದು, ಅಂತಹವನಿಗೆ ನಾದಪುತ್ರರು ಹುಟ್ಟುವುದಿಲ್ಲವೆಂದು ಎನ್ನುತ್ತಿದ್ದರು. ನಿಜವಾಗಿ ಜ್ಞಾನಿಯೇ ಪುರುಷತ್ವ ಇರುವವನು, ಅಜ್ಞಾನಿ ಗಂಡಸಲ್ಲವೆನ್ನುವ ಭಾವದಿಂದಲೇ ಎಲ್ಲಾ ತಿಳಿದ ಸಂಪೂರ್ಣ ಜ್ಞಾನಿಯನ್ನು ಇವನೇ ಕಣೊ ಗಂಡಸನೆಂದು ಹೇಳುತ್ತಿದ್ದರು. ಶರೀರದಲ್ಲಿ ಪುರುಷರಾದರೂ ಪ್ರತ್ಯೇಕಿಸಿ ಕೆಲವರಲ್ಲಿ ಒಬ್ಬನನ್ನು ಮಾತ್ರ ಇವನೇ ಕಣೊ ಗಂಡಸನೆಂದು ಹೇಳುವುದು ಇಂದಿಗೂ ಇರುವುದನ್ನು ನೋಡಿದರೆ, ಪೂರ್ವದ ಈ ಮಾತನ್ನು

ಜ್ಞಾನವಿರುವವರ ಬಗ್ಗೆ ಬಳಸುತ್ತಿದ್ದರೆಂದು ತಿಳಿಯುತ್ತಿದೆ. ವೇಷ ಭಾಷೆಗಳಲ್ಲಿ ಸ್ವಾಮಿಯ ಹಾಗೆ ಇದ್ದರೂ, ಗುರುವಿನ ಹಾಗೆ ಬೋಧನೆಗಳನ್ನು ಹೇಳಿದರೂ, ಇತರರನ್ನು ಸಂಪೂರ್ಣ ಜ್ಞಾನಿಗಳಾಗಿ ಬದಲಾಯಿಸದವನು ನಪುಂಸಕರೊಂದಿಗೆ ಸಮಾನವೇ ಎಂದು ಹೇಳಬಹುದು. ಜ್ಞಾನ ತಿಳಿಯದವರೆಲ್ಲರೂ ಸಾಧಾರಣ ಪಾಪಪುಣ್ಯಗಳನ್ನೇ ಹೊಂದುತ್ತಿರು ವರು. ಆದ್ದರಿಂದ ಅಂತಹವರೆಲ್ಲರೂ ಪುನ್ನಮ ನರಕವನ್ನು ಹೊಂದುವುದಿಲ್ಲ ಆದರೆ ಸಾಧಾರಣ ನರಕವನ್ನು ಹೊಂದುವರು. ಜ್ಞಾನ ತಿಳಿದು ಹೇಳದವರು, ಜ್ಞಾನ ತಿಳಿಯದೆ ಹೇಳುವವರು ಪುನ್ನಮ ನರಕವನ್ನು ಹೊಂದುವರು. ಜ್ಞಾನ ಏನೂ ತಿಳಿಯದೆ ಸಾಧಾರಣವಾಗಿ ಇರುವವರಿಗೆ ಸಾಧಾರಣವಾದ ಕರ್ಮಗಳೇ ಬರುತ್ತಿರುವವು.

**914. (4) ಮನುಷ್ಯರೆಲ್ಲರಿಗು ದೇವರೊಬ್ಬನೇ ಎನ್ನುವುದು ಪೂರ್ತಿ ಸತ್ಯ, ಹಾಗೇ ದೇವರಿಗೆ ಮನುಷ್ಯರೆಲ್ಲರೂ ಒಂದೇನಾ?**

ಉ. ಒಂದೆ ಅಲ್ಲ.

**ವಿವರ :** ಜಗತಿಗೆಲ್ಲವೂ ದೇವರೊಬ್ಬನೇ ಇದ್ದಾನೆ. ಎಷ್ಟು ಮತಗಳವರಿದ್ದರೂ ಅವರವರ ಮತಗಳ ಪ್ರಕಾರ ನಮ್ಮ ದೇವರು ನಿಮ್ಮ ದೇವರು ಎನ್ನುತ್ತಿದ್ದರೂ ಎಲ್ಲರಿಗೂ ಒಬ್ಬನೇ ದೇವರಿದ್ದಾನೆ. ಮನುಷ್ಯರು ಗುಣಗಳಿರುವವರಾಗಿ ಇರುವುದರಿಂದ ದೇವರನ್ನು ಅರ್ಥ ಮಾಡಿಕೊಳ್ಳದೆ ಮತಕ್ಕೊಬ್ಬ ದೇವರಿದ್ದಾನೆಂದುಕೊಂಡಿದ್ದಾರೆ. ಮಾಯೆಮನುಷ್ಯರು ಯಾವ ಮತದವರು ಏನೆಂದುಕೊಂಡರು ಎಲ್ಲರಿಗೂ ದೇವರೊಬ್ಬನೇ ಎನ್ನುವುದು ಪೂರ್ತಿ ಸತ್ಯ. ಇನ್ನು ದೇವರಿಗೆ ಮನುಷ್ಯರೆಲ್ಲರೂ ಸಮಾನವೇನಾ ಎನ್ನುವುದು ಪ್ರಶ್ನೆ. ಈ ಪ್ರಶ್ನೆಗೆ ಉತ್ತರವಾಗಿ ದೇವರಿಗೆ ಮನುಷ್ಯರೆಲ್ಲರೂ ಒಂದೇ ಅಲ್ಲವೆಂದು ಹೇಳಬಹುದು. ದೇವರ ದೃಷ್ಠಿಯಲ್ಲಿ ಜ್ಞಾನಿಗಳು ಅಜ್ಞಾನಿಗಳೆನ್ನುವ ಭೇದ ವಿಭಜನೆ ಇದೆ. ಆದ್ದರಿಂದಲೇ ಭಗವದ್ಗೀತೆಯಲ್ಲಿ ಸಹ ಇವರು ನನಗೆ ಇಷ್ಟರು ಇವರು ಅಯಿಷ್ಟರು ಎಂದಿದ್ದಾನೆ. ಮನುಷ್ಯರಲ್ಲಿರುವ ಜ್ಞಾನವನ್ನು ಅನುಸರಿಸಿ ಕೆಲವರು ದೇವರಿಗೆ ಹತ್ತಿರವಾಗಿ, ಕೆಲವರು ದೂರವಾಗಿದ್ದಾರೆ. ದೇವರಿಗೆ ಕೆಲವರು ಹೆಚ್ಚಿನ ಭಕ್ತರಾಗಿ, ಕೆಲವರು ಹೆಚ್ಚಿನ ಶತ್ರುಗಳಾಗಿ ಇದ್ದಾರೆ. ದೇವರಿಗೆ ಇಷ್ಟವಾದ ಭಕ್ತರ ಯೋಗವೊಂದರ ಕ್ಷೇಮವನ್ನು ಸಹ ನಾನೇ ನೋಡುತ್ತಿದ್ದೇನೆಂದಿದ್ದಾನೆ. ಹಾಗೇ ಆತನಿಗೆ ಇಷ್ಟವಿಲ್ಲದ ಅಜ್ಞಾನಿಗಳಿಗೆ ಜ್ಞಾನವೊಂದರ ಗಟ್ಟು ಸಿಗದಹಾಗೆ ಮಾಡಿ, ಜನ್ಮ ಜನ್ಮಕ್ಕೂ ಅಧೋಗತಿ ಹೊಂದುವಹಾಗೆ, ಮೂರ್ಖರ ಗರ್ಭಗಳಲ್ಲಿ ಹುಟ್ಟುವಹಾಗೆ ಮಾಡುವೆನೆಂದಿದ್ದಾನೆ. ಗೀತೆಯಲ್ಲಿ ಹೇಳಿದ ಈ ವಿಷಯ

ಗಳನ್ನನುಸರಿಸಿ ದೇವರಿಗೆ ಎಲ್ಲರೂ ಸಮಾನರಲ್ಲವೆಂದು ತಿಳಿಯುತ್ತಿದೆ. ಮನುಷ್ಯ ದೇವರನ್ನು ಕುರಿತು ನಿರಾಕಾರನೆಂದುಕೊಂಡರು, ಸಾಕಾರನೆಂದುಕೊಂಡರು, ಮತ್ತೆ ಯಾವ ವಿಧವಾಗಿ ತಿಳಿದುಕೊಂಡರೂ ದೇವರೊಬ್ಬನೇ ಇದ್ದಾನೆ. ಅತನನ್ನು ಮೀರಿರುವುದಿಲ್ಲ, ಆದ್ದರಿಂದ ಆತನು ಆತನಾಗಿಯೆ ಇರುವನು. ದೇವರು ಮನುಷ್ಯನನ್ನು ಕುರಿತು ಅಂದುಕೊಂಡರೆ ನೀನು ಎಲ್ಲಾ ಕಡೆ ಇರುತ್ತೀಯೆಂದು ದೇವರಂದಹಾಗೆ ಹಿರಿಯರು ಹೇಳಿದ್ದಾರೆ. ಹೀಗೆ ಎಲ್ಲಾ ವಿಶಧೀಕರಿಸಿ ನೋಡಿದರೆ ಎಲ್ಲರಿಗು ದೇವರೊಬ್ಬನೇ ಎಂದು ದೇವರಿಗೆ ಎಲ್ಲರೂ ಒಂದೇ ಅಲ್ಲವೆಂದು ತಿಳಿಯುತ್ತಿದೆ.

**915. (5) ದೇವರ ಪ್ರತಿನಿಧಿ ಭಗವಂತನು. ಎಷ್ಟೋ ಭಗವಂತರು ದೇವರ ಪ್ರತಿನಿಧಿಗಳಾಗಿ ಹುಟ್ಟಿ ಹೋಗಿದ್ದಾರೆ. ಇಸ್ಲಾಂನಲ್ಲಿ ಹಜರತ್ ಮುಹಮ್ಮದ್ ಅಲ್ಲಾಗು, ಕ್ರೈಸ್ತರಲ್ಲಿ ಯೇಸು ಎಹೋವಾಗು, ಹಿಂದುಗಳಲ್ಲಿನ ಕೃಷ್ಣನು ಪರಮಾತ್ಮನಿಗೆ ಪ್ರತಿನಿಧಿಗಳಾ ಅಥವಾ ಎಲ್ಲರೂ ಒಂದೇ ದೇವರಿಗೆ ಪ್ರತಿನಿಧಿಗಳಾ?**

ಉ. ಎಲ್ಲರೂ ಒಂದೇ ದೇವರಿಗೆ ಪ್ರತಿನಿಧಿಗಳು.

**ವಿವರ :** ಮನಿಷ್ಯನ ಇಷ್ಟವನ್ನನುಸರಿಸಿ ಮತವೆನ್ನುವುದು ಹುಟ್ಟಿದೆ. ಮತ ದೇವರ ಮಾರ್ಗವನ್ನು ಅನುಸರಿಸುವಂತೆ ಮಾಡುವುದಾದರೂ, ದೇವರ ಮಾರ್ಗ ಎಲ್ಲರಿಗು ಒಂದೇ ಆಗಿರುವುದರಿಂದ, ಮತಗಳ ಸಾರಾಂಶವೆಲ್ಲವೂ ಒಂದೇ ಎಂದು ಹೇಳಬಹುದು. ದೇವರಿಗೆ ಪ್ರತಿನಿಧಿಯಾಗಿ ಭೂಮಿ ಮೇಲೆ ಬಂದಿರುವವರಲ್ಲಿ ಮಹಮ್ಮದ್ ಆಗಲಿ, ಏಸು ಆಗಲಿ, ಶ್ರೀಕೃಷ್ಣನಾಗಲಿ ದೇವರ ಮಾರ್ಗವನ್ನನುಸರಿಸಿ ಮಾಯೆ ಮಾರ್ಗವನ್ನು ಬಿಡಬೇಕೆಂದಿದ್ದಾರೆ. ಪವಿತ್ರ ಖೂರಾನ್‌ನಲ್ಲಾಗಲಿ, ಪರಿಶುದ್ಧ ಬೈಬಲ್‌ನಲ್ಲಾಗಲಿ, ಭಗವದ್ಗೀತೆ ಯಲ್ಲಾಗಲಿ ಮಾಯೆಯನ್ನು ದೇವರನ್ನು ಕುರಿತೇ ಹೇಳಿದ್ದಾರಾಗಲಿ ಮತಗಳನ್ನು ಕುರಿತು ಹೇಳಲಿಲ್ಲ. ಮಾಯೆ ಅಥವಾ ಸಾತಾನ್ ಮಾರ್ಗವನ್ನು ಬಿಟ್ಟು ದೇವರ ಮಾರ್ಗವನ್ನು ಅನುಸರಿಸೆಂದು ತಿಳಿಸಿಹೇಳಲಾಗಿದೆ. ಪ್ರವಕ್ತರ ಪ್ರಬೋಧಗಳೆಲ್ಲವೂ ಒಬ್ಬ ದೇವರನ್ನು ಕುರಿತೇ ಇವೆಯಾಗಲಿ ಬೇರೆಯಲ್ಲ. ಇರುವುದು ಒಬ್ಬನೇ ದೇವರಾಗಿರುವುದರಿಂದ ಯಾರು ದೇವರನ್ನು ಕುರಿತು ಹೇಳಿದರೂ, ಯಾವ ಗ್ರಂಥ ಹೇಳಿದರೂ ಆತನನ್ನು ಕುರಿತೇ ಇರುವುದು. ಆದ್ದರಿಂದ ಪ್ರವಕ್ತರೆಲ್ಲರೂ ಒಂದೇ ದೇವರ ಪ್ರತಿನಿಧಿಗಳೆಂದು ಹೇಳಬಹುದು. ಪ್ರತಿನಿಧಿ ಯೊಂದರ ವೇಷ ಭಾಷೆಗಳು ಬೇರೆಯಾದಷ್ಟು ಮಾತ್ರಕ್ಕೆ ಅವರು ಬೋಧಿಸುವ ದೇವರುಗಳು ಬೇರೆ ಬೇರೆಯೆಂದುಕೊಳ್ಳುವುದು ಪೂರ್ತಿ ತಪ್ಪೆಂದು ತಿಳಿಯಬೇಕು.

**916. (6) ಪ್ರವಕ್ತ ಭಗವಂತನು ಇಬ್ಬರು ಒಂದೇನಾ?**

ಉ. ಒಂದೇ.

**ವಿವರ :** ಪ್ರವಕ್ತ ನೆಂದರೂ, ಭಗವಂತನೆಂದರೂ, ಅವಧೂತನೆಂದರೂ, ದೂತ ಎಂದರೂ ಎಲ್ಲವೂ ಒಂದೇ ಅರ್ಥವನ್ನು ಸೂಚಿಸುತ್ತಿವೆ. ಮೂವರು ಒಂದೇ ದೇವರನ್ನು ಒಂದೇ ಮಾಯೆಯನ್ನು ಕುರಿತು ಹೇಳುವವರಾಗಿ ಇರುವರು. ಮಾಯೆಯಿಂದ ತಪ್ಪಿಸಿಕೊಂಡು ದೇವರನ್ನು ಸೇರೆನ್ನುವ ವಿಷಯವೇ ಇವರ ಬೋಧನೆಗಳಲ್ಲಿ ಸ್ಥಳ ಮಾಡಿಕೊಂಡು ಇರುತ್ತದೆ ಹೊರತು ಬೇರೆ ವಿಷಯಗಳಿರುವುದಿಲ್ಲ. ವಕ್ತ ಎಂದರೆ ಬೋಧಿಸುವವನು ಅಥವಾ ವಿವರ ಹೇಳುವವನೆಂದು ಅರ್ಥ. ವಕ್ತ ಎನ್ನುವ ಪದದಲ್ಲಿ ವಿಶೇಷವಿಲ್ಲದಿದ್ದರೂ ಪ್ರ ಎನ್ನುವ ಅಕ್ಷರದಲ್ಲಿ ದೊಡ್ಡ ವಿಶೇಷತೆ ಇದೆಯೆಂದು ಹೇಳಬಹುದು. ಪ್ರ ಎಂದರೆ ಎಲ್ಲದಕ್ಕಿಂತ ದೊಡ್ಡದೆಂದು ಅಥವಾ ಅತಿ ಮುಖ್ಯವಾದದ್ದೆಂದು ಅರ್ಥವಿದೆ. ಪ್ರವಕ್ತ ಎಂದರೆ ಎಲ್ಲದಕ್ಕಿಂತ ದೊಡ್ಡದಾದ ಅಥವಾ ಎಲ್ಲದಕ್ಕಿಂತ ಮುಖ್ಯವಾದ ದೇವರನ್ನು ಕುರಿತು ಹೇಳುವವನೆಂದು ಅರ್ಥ. ದೇವರ ವಿಷಯ ದೇವರಿಗೇ ತಿಳಿಯುವುದು, ಸಾಧಾರಣ ಮನುಷ್ಯನಿಗೆ ತಿಳಿದಿಲ್ಲ. ದೇವರಲ್ಲಿ ಭಾಗವಾದ ಅಥವಾ ದೇವರ ಹತ್ತಿರದಿಂದ ಬಂದಿರುವವನು ಹೊರತು ಯಾರೂ ದೇವರನ್ನು ಕುರಿತು ತಿಳಿಸಲಾರನು. ದೈವದಿಂದ ಬಂದಿರುವವನಾದ್ದರಿಂದ ಆತನನ್ನು ದೂತ ಎಂದು ಸಹ ಹೇಳಬಹುದು. ದೇವರ ಅಂಶವಾಗಿ ತಾಯಿ ಗರ್ಭದಿಂದಲೇ ಜೀವದೊಂದಿಗೆ ಹುಟ್ಟುತ್ತಿದ್ದಾನೆ ಆದ್ದರಿಂದ ಅತನನ್ನು ಭಗವಂತನೆಂದು ಸಹ ಕರೆಯಬಹುದು. ಪ್ರವಕ್ತ ಪ್ರವಚನಗಳು, ಭಗವಂತನ ಮಾತುಗಳು ಎಲ್ಲವೂ ಒಂದೇ ದೇವರನ್ನು ಕುರಿತು ತಿಳಿಸುವವೇ ಎಂದು ತಿಳಿಯಬೇಕು.

**917. (7) ಜಗತಿಯಲ್ಲಿ ದೇವರು ಮಾಯೆ ಎರಡೂ ಇವೆ ಇವರಲ್ಲಿ ಯಾರ ರಾಜ್ಯ ದೊಡ್ಡದು ಶಾಶ್ವತವಾದದ್ದು?**

ಉ. ಮಾಯೆ ರಾಜ್ಯ.

**ವಿವರ :** ಜಗತಿ ಇರುವವರೆಗು ಮಾಯೆ ರಾಜ್ಯ ಶಾಶ್ವತವಾಗಿ ಇರುವುದೆನ್ನುವುದರಲ್ಲಿ ಯಾವ ಸಂದೇಹವಿಲ್ಲ. ಜಗತಿಯಲ್ಲಿ ದೇವರ ರಾಜ್ಯ ಸ್ವಲ್ಪ ಕಾಲವಿದ್ದು ಸ್ವಲ್ಪ ಕಾಲ ಕ್ಷೀಣಿಸುತ್ತಿರುವುದು. ಧರ್ಮಗಳಿಗೆ ಮುಪ್ಪು ಏರ್ಪಟ್ಟು ತನ್ನ ರಾಜ್ಯ ಇಲ್ಲದೇ ಹೋಗಿರುವಾಗ, ದೇವರು ತನ್ನ ಅಂಶವಾದ ವ್ಯಕ್ತಿಯನ್ನು ಭೂಮಿ ಮೇಲೆ ಕಳುಹಿಸಿ, ತನ್ನ ಧರ್ಮಗಳನ್ನು

ಮತ್ತೆ ಬೋಧಿಸಿ, ತನ್ನ ರಾಜ್ಯ ವಿಸ್ತರಿಸುವಹಾಗೆ ಮಾಡುತ್ತಿರುವನು. ದೇವರು ತನ್ನ ರಾಜ್ಯ ವಿಸ್ತರಿಸುವುದಕ್ಕೆ ಬಹಳ ಕಾಲ ಬೇಕಾಗುತ್ತದೆ, ಆದರೆ ಮಾಯೆ ರಾಜ್ಯ ಕ್ಷಣಗಳ ಮೇಲೆ ವಿಸ್ತರಿಸಬಲ್ಲದು. ಜಗತಿಯಿರುವಷ್ಟು ಕಾಲ ಒಂದೇ ಸ್ಥಿತಿಯಲ್ಲಿ ದೇವರ ರಾಜ್ಯವಿರುವುದಿಲ್ಲ. ದೇವರು ಆಗಾಗ ತನ್ನ ರಾಜ್ಯವನ್ನು ವಿಸ್ತರಿಸುವಹಾಗೆ ಮಾಡಿದರೂ ಅದು ಬೇಗ ಕೃಷಿಸುತ್ತಿರುತ್ತದೆ. ಮಾಯೆ ರಾಜ್ಯ ಬೇಗ ವಿಸ್ತರಿಸಿ ಬಹಳ ಕಾಲ ಬಲವಾಗಿ ಇರುವುದು. ದೇವರು ತನ್ನ ದೂತನನ್ನು ಕಳುಹಿಸುವ ಪ್ರದೇಶದಲ್ಲಿ ಮಾಯೆ ತನ್ನ ದೂತನನ್ನು ಮೊದಲೇ ಕಳುಹಿಸಿ, ತನ್ನ ರಾಜ್ಯಕ್ಕೆ ಮುಪ್ಪು ಇಲ್ಲದಹಾಗೆ ನೋಡಿಕೊಳ್ಳುತ್ತಿರುವುದು. ದೇವರು ತನ್ನ ದೂತನೊಬ್ಬನನ್ನು ಕಳುಹಿಸಿ ತನ್ನ ರಾಜ್ಯವನ್ನು ವಿಸ್ತರಿಸುವುದಕ್ಕೆ ಪ್ರಯತ್ನಿಸಿದಾಗ, ಮಾಯೆ ತನ್ನ ದೂತರನ್ನು ಐದಾರು ಮಂದಿಯನ್ನು ತಯಾರು ಮಾಡಿ, ತನ್ನ ರಾಜ್ಯ ಸುಸ್ಥಿರವಾಗಿ ಇರುವಹಾಗೆ ಮೇಧಾವಿಗಳು ಸಹಿತ ದೇವರ ಮಾರ್ಗದೊಳಗೆ ಹೋಗದೆ ತನ್ನ ಮಾರ್ಗದಲ್ಲೇ ಇರುವಹಾಗೆ, ಮಾಡಿಕೊಳ್ಳುತ್ತಿದೆ. ಮಾಯೆ ತನ್ನ ದೂತರನ್ನು ದೈವ ದೂತರಾಗೇ ಹೇಳುತ್ತಾ, ತಾವು ಬೋಧಿಸುವುದು ದೈವಜ್ಞಾನವೇ ಎಂದು ಹೇಳುತ್ತಾ, ದೇವರ ಬಣ್ಣ ಬಳಿದು ಮಾಯೆ ತನ್ನನ್ನು ಬೋಧಿಸುತ್ತಾ, ತನ್ನ ರಾಜ್ಯ ವಿಸ್ತರಿಸಿಕೊಳ್ಳುವಹಾಗೆ ಮಾಡುತ್ತಿದೆ. ಅದರೊಂದಿಗೆ ಬಹಳ ಮಂದಿ ಪ್ರಜೆಗಳು ಮಾಯೆ ಮಾರ್ಗವನ್ನೇ ದೈವಮಾರ್ಗವೆಂದು ನಂಬಿ, ನಿಜವಾದ ದೈವ ದೂತನನ್ನು ಸಹ ನಂಬದೆ, ಆತನು ಹೇಳುವ ದೇವರ ಮಾರ್ಗವನ್ನೇ ವಿರೋಧಿಸುತ್ತಿದ್ದಾರೆ. ಆದ್ದರಿಂದ ದೇವರ ರಾಜ್ಯ ಬಹಳ ಕಷ್ಟವಾಗಿ ವಿಸ್ತರಿಸಿದರೂ ಬೇಗ ನಶಿಸುತ್ತಿದೆ. ಮಾಯೆ ತನ್ನ ದೂತರಿಂದ ಎಷ್ಟೋ ಮಹತ್ವಗಳೊಂದಿಗೆ ಇದೇ ನಿಜವಾದ ಮಾರ್ಗವೆಂದು ಹೇಳುವು ದರಿಂದ, ಮಾಯೆ ರಾಜ್ಯ ದೇವರ ರಾಜ್ಯಕ್ಕಿಂತಲೂ ಸ್ಥಿರವಾದದ್ದೆಂದು ಹೇಳಬಹುದು.

**918. (8) ಶರೀರದಲ್ಲಿ ಜ್ಞಾನೇಂದ್ರಿಯಗಳು ಐದು ಇವೆ, ಅವುಗಳಲ್ಲಿ "ಸರ್ವೇಂದ್ರಿಯಾನಾಂ ನಯನಂ ಪ್ರಧಾನಮ್" ಎಂದು ಕೆಲವರು ಹೇಳಿದ್ದಾರೆ. ಆ ಮಾತು ನಿಜವೇನಾ? ಯಾವುದು ಮುಖ್ಯವಾದ ಇಂದ್ರಿಯ?**

ಉ. ಕಿವಿ ಮುಖ್ಯವಾದ ಅವಯವ.

**ವಿವರ :** ಎಲ್ಲರೂ ಕಣ್ಣೆಂದರೆ ನೀನು ಮಾತ್ರ ಕಿವಿ ಎನ್ನುತ್ತೀಯೆಂದು ಆಶ್ಚರ್ಯವಾ! ಜ್ಞಾನರೀತ್ಯಾ ಕಿವಿಗಳು ಮುಖ್ಯ, ಪ್ರಪಂಚರೀತ್ಯಾ ಕಣ್ಣು ಮುಖ್ಯ. ಪ್ರಪಂಚದಲ್ಲಿ ಕಿವಿಗಿಂತಲೂ ಕಣ್ಣು ಪ್ರಧಾನ ಅವಯವವಾಗಿ ಇದೆ. ಕಣ್ಣು ಇಲ್ಲದೇ ಏನೂ ಕಾಣಿಸುವುದಿಲ್ಲ. ಸ್ಥೂಲ

ಪ್ರಪಂಚ ಅರ್ಥವಾಗುವುದಕ್ಕೆ ಸ್ಥೂಲದೃಷ್ಟಿ ಇರುವ ಕಣ್ಣು ಮುಖ್ಯ. ದೇವರ ಜ್ಞಾನ ಸ್ಥೂಲವಾದದ್ದಲ್ಲ ಸೂಕ್ಷ್ಮವಾದದ್ದು. ಆದ್ದರಿಂದ ಅದನ್ನು ಕೇಳಿ ಅರ್ಥ ಮಾಡಿಕೊಳ್ಳಬೇಕಾಗಿದೇ, ಆದರೆ ನೋಡುವುದಕ್ಕೆ ಕಾಣಿಸುವುದಲ್ಲ. ದೇವಾಲಯಗಳಲ್ಲಿ ಕೆಲವು ಗುರುತುಗಳು ಸ್ಥೂಲವಾಗಿ ದೈವ ಜ್ಞಾನವನ್ನು ಕುರಿತು ಇಟ್ಟಿದ್ದರೂ ಅವುಗಳೊಂದರ ವಿವರ ಕಿವಿಗಳಿಂದ ಕೇಳಿ ತಿಳಿದುಕೊಳ್ಳಬೇಕಾಗಿರುತ್ತದೆ. ಪುಸ್ತಕಗಳಲ್ಲಿ ಬರೆದ ಬರಹದಿಂದ ಜ್ಞಾನವನ್ನು ತಿಳಿದುಕೊಳ್ಳಬಹುದು ಅಲ್ಲವೆ ಎಂದು ತಿಳಿದುಕೊಂಡರೂ, ಆ ಬರಹ ಬರೆಯುವವನು ಮೊದಲು ಕಿವಿಯಿಂದ ಕೇಳಿಯೇ ಇರುವನು. ಅಷ್ಟೇ ಅಲ್ಲದೆ ಗುರು ಮುಖಾಂತರ ಕೇಳುವ ಜ್ಞಾನದಲ್ಲಿ ಸ್ವಲ್ಪ ಶಕ್ತಿಯೂ ಸಹ ಒಳಗೊಂಡಿರುತ್ತದೆ. ಓದುವ ಓದಲ್ಲಿ ಶಕ್ತಿ ಇರುವುದಿಲ್ಲ. ಮುಖಾ ಮುಖಿ ಕಿವಿಗಳಿಂದ ಕೇಳುವ ಜ್ಞಾನದಿಂದ ಸ್ವಲ್ಪ ಬದಲಾಗುವುದಕ್ಕೆ ಅವಕಾಶವಿದೆ. ಪುಸ್ತಕಗಳು ಓದುವುದರಲ್ಲಿ ಅಷ್ಟು ಬದಲಾವಣೆ ಇರುವುದಿಲ್ಲ. ಸ್ಥೂಲವನ್ನು ಸ್ಥೂಲ ದೃಷ್ಟಿಯಿಂದ ಅರ್ಥ ಮಾಡಿಕೊಂಡ ಹಾಗೆ, ಶಬ್ದದೊಂದಿಗೆ ಕೂಡಿದ ಜ್ಞಾನವನ್ನು ಕಿವಿಗಳಿಂದ ಕೇಳಿ ಅರ್ಥ ಮಾಡಿಕೊಳ್ಳಬಹುದು. ಶೃತಿ ಸ್ಮೃತಿಗಳಿಂದ ಜ್ಞಾನವನ್ನು ತಿಳಿಯಬಹುದಾಗಲಿ ದೃಷ್ಠಿಯಿಂದ ಎಂದು ಹೇಳಲ್ಪಟ್ಟಿಲ್ಲ. **ಸರ್ವೇಂದ್ರಿಯಾನಾಂ ನಯನಂ ಪ್ರಧಾನಮ್** ಎನ್ನುವ ವಾಕ್ಯ ಪ್ರಪಂಚ ಸಂಬಂಧವಾದದ್ದೇ ಆಗಲಿ ಪರಮಾತ್ಮ ಸಂಬಂಧವಾದದ್ದಲ್ಲ. ಪರಮಾತ್ಮ ಜ್ಞಾನರೀತ್ಯಾ **"ಸರ್ವೇಂದ್ರಿಯಾನಾಂ ಕರ್ಣಂ ಪ್ರಧಾನಂ"** ಎಂದು ಹೇಳಬೇಕಾಗಿದೆ. ಕಣ್ಣು ಇಲ್ಲದಿದ್ದರು ಕಿವಿಯಿಂದ ಜ್ಞಾನವನ್ನು ಅರ್ಥ ಮಾಡಿಕೊಳ್ಳಬಹುದು, ಆದರೆ ಕಿವಿ ಇಲ್ಲದೇ ಹೋದರೆ ಜ್ಞಾನವನ್ನು ಸಂಪೂರ್ಣ ಭಾವದೊಂದಿಗೆ ಅರ್ಥ ಮಾಡಿಕೊಳ್ಳಲಾರೆವು.

**919. (9) ವಾರಕ್ಕೆ ಏಳು ದಿನಗಳಿವೆ. ಅದರಲ್ಲಿ ಮುಖ್ಯವಾದವು ಮೂರು ದಿನಗಳು ಇವೆ, ಅವು ಯಾವವು?**

ಉ. ಆದಿ, ಸೋಮ, ಮಂಗಳ.

**ವಿವರ :** ಸೃಷ್ಟಿ ಆರಂಭವಾದ ದಿನ ಆದಿವಾರ. ಆದಿವಾರ ಪ್ರಪಂಚ ವ್ಯಾಪ್ತವಾಗಿ ಈಗಲೂ ಪ್ರತ್ಯೇಕತೆ ಹೊಂದಿದ್ದು ರಜಾದಿನವಾಗಿಯೇ ಇದೆ. ಪೂರ್ವದಲ್ಲಿ ಸಹ ಆದಿವಾರವನ್ನು ರಜಾದಿನವಾಗಿ ಯಾವ ಕೆಲಸಗಳು ಮಾಡದೆ ಕಳೆಯುತ್ತಿದ್ದರು. ಪೂರ್ವದಲ್ಲಿ ಉದ್ಯೋಗಗಳು ಇಲ್ಲದಿದ್ದರೂ, ಬಹಳ ಜನ ವ್ಯವಸಾಯ ಕೆಲಸಗಳನ್ನು ಮಾಡಿಕೊಳ್ಳುತ್ತಿದ್ದರೂ, ಆದಿವಾರ ಪ್ರಪಂಚ ಹುಟ್ಟಿದ ದಿನವೆಂದು, ಎಲ್ಲರು ಆಧ್ಯಾತ್ಮಿಕ ವಿಚಾರಣೆ ಹೊಂದಿರಬೇಕೆನ್ನುವ

ಉದ್ದೇಶದಿಂದ, ಯಾವ ಇತರೆ ಕೆಟ್ಟ ಕೆಲಸಗಳನ್ನು ಮಾಡದೆ ಪವಿತ್ರವಾಗಿ ಕಳೆಯುತ್ತಿದ್ದರು. ಪೂರ್ವದ ಆಚರಣೆಯ ಪ್ರಕಾರ ಇಂದಿಗೂ ಆದಿವಾರ ಪ್ರಪಂಚ ಮೊತ್ತವು ರಜಾದಿನವಾಗಿದೆ. ಆದರೆ ಪೂರ್ವದ ಹಾಗೆ ಆದಿವಾರವನ್ನು ಯಾರು ಪ್ರಪಂಚ ಹುಟ್ಟಿದ ದಿನವೆಂದು ತಿಳಿದುಕೊಳ್ಳುವುದಿಲ್ಲ ಮತ್ತು ಪವಿತ್ರವಾಗಿ ಕಳೆಯುತ್ತಿಲ್ಲ. ಆದಿವಾರ ಎಲ್ಲಾ ದುರಭ್ಯಾಸಗಳಿಗೂ ಲೈಸೆನ್ಸು ದಿನದಹಾಗೆ ಇದೆ. ಮಾಂಸ ತಿನ್ನುವುದು, ಮದ್ಯ ಸೇವಿಸುವುದು, ಜೂಜು ಆಡುವುದು, ಸ್ತ್ರೀಯರೊಂದಿಗೆ ವಿಹಾರಿಸುವುದು ವ್ಯಭಿಚರಿಸುವುದು ಮೊದಲಾದ ಕೆಟ್ಟ ಕಾರ್ಯಗಳಲ್ಲೇ ಲಗ್ನವಾಗಿ ಹೋಗುತ್ತಿದ್ದಾರೆ. ಕೆಲವರು ನಮ್ಮ ಜ್ಞಾನ ತಿಳಿದವರು ಆದಿವಾರವನ್ನು ಪವಿತ್ರವಾಗಿ ಕಳೆಯುತ್ತಿದ್ದಾರೆ.

ಎರಡನೆಯ ದಿನ ಸೋಮವಾರ. ಸೋಮವಾರವೆಂದರೆ ಚಂದ್ರನ ದಿನವೆಂದು, ಚಂದ್ರನು ಜ್ಞಾನ ಚಿಹ್ನೆಯಾದ್ದರಿಂದ ಆ ದಿನ ಜ್ಞಾನಕ್ಕೆ ಗುರುತೆಂದು, ಆ ದಿನದಲ್ಲಿ ಜ್ಞಾನವನ್ನು ತಿಳಿದುಕೊಳ್ಳಬೇಕೆಂದು ಹಿರಿಯರು ಹೇಳುತ್ತಿದ್ದರು. ಆದಿವಾರ ಕೆಟ್ಟಕೆಲಸಗಳು ಮಾಡದೆ ಆಧ್ಯಾತ್ಮಿಕ ವಿಷಯಗಳನ್ನೆ ತಿಳಿದುಕೊಳ್ಳಬೇಕೆಂದು ಅವುಗಳ ಕುರಿತೆ ಯೋಚಿಸಬೇ ಕೆಂದು ಸೋಮವಾರ ಜ್ಞಾನವನ್ನು ತಮ್ಮಲ್ಲಿ ಸೇರಿಸಿಕೊಳ್ಳಬೇಕೆಂದು ಪೂರ್ವವು ತಿಳಿಯುತ್ತಿದ್ದರು. ಸೋಮವಾರ ದಿನ ಆಕಾರವಿಲ್ಲದ ದೇವರನ್ನು ತಿಳಿಸುವ ಲಿಂಗ ಪ್ರತಿಷ್ಠೆ ದೇವಾಲಯಕ್ಕೆ ಹೋಗಿ ಲಿಂಗದಲ್ಲಿನ ಅಂತರಾರ್ಥವನ್ನು ತಿಳಿದುಕೊಳ್ಳುತ್ತಿದ್ದರು. ಇಂದಿಗೂ ಸೋಮವಾರ ಈಶ್ವರದೇವಾಲಯಕ್ಕೆ ಹೋಗುವ ಆಚಾರವಿದ್ದರು ಅರ್ಥ ತಿಳಿಯದೆ ಹೋಗಿದೆ. ಆರಾಧನ ರಹಿತನಾದ ಲಿಂಗ ದೇವರಿಗೆ ಸಾಂಪ್ರದಾಯಬದ್ದವಾಗಿ ಸೋಮವಾರ ಹೋಗುತ್ತಿದ್ದರು ಆದರೆ ಅಭಿಷೇಕಗಳು ಆರಾಧನೆಗಳು ಮಾಡುವುದು ತಪ್ಪು. (**ನಮ್ಮ ರಚನೆಗಳಲ್ಲಿನ ದೇವಾಲಯ ರಹಸ್ಯಗಳು ಓದಿರಿ**).

ಮೂರನೆಯ ದಿನ ಮಂಗಳವಾರ. ಮಂಗಳವಾರವೆಂದರೆ ಶುಭಕರವಾದ ದಿನವೆಂದು ಅರ್ಥ. ಮಂಗಳವಾರ ಮೋಕ್ಷಕ್ಕೂ, ಪರಮಾತ್ಮಕ್ಕೂ ಚಿಹ್ನೆಯಾದ ದಿನ. ಆದಿವಾರ ಕೆಟ್ಟಕೆಲಸಗಳು ಬಿಟ್ಟು ಆಧ್ಯಾತ್ಮಿಕ ಚಿಂತನೆ ಮೇಲೆ ಧ್ಯಾಸ ಕಲ್ಪಿಸಿಕೊಳ್ಳುವುದು, ಸೋಮವಾರ ಜ್ಞಾನವನ್ನು ತಿಳಿದುಕೊಳ್ಳುವುದು, ಮಂಗಳವಾರ ಮೋಕ್ಷ ಅಥವಾ ಪರಮಾತ್ಮ ವಿಧಾನವನ್ನು ಕುರಿತು ತಿಳಿದುಕೊಳ್ಳುವುದು ಪೂರ್ವವು ನಡೆಯುತ್ತಿತ್ತು. ಆದ್ದರಿಂದ ಆದಿ, ಸೋಮ, ಮಂಗಳವಾರಗಳು ಮೂರು ಬಹಳ ಮುಖ್ಯವಾದ ದಿನಗಳಾಗಿ ಪರಿಗಣಿ ಸಲಾಗಿವೆ. ಈ ಕಾಲಕ್ಕೆ ಅವುಗಳ ಬೆಲೆ ತಿಳಿಯದೆ ಹೋಗಿದೆ.

**920. (10) ಔಷಧ, ಮಂತ್ರ ಒಂದು ರೋಗವನ್ನು ಅಥವಾ ಹಾವು ವಿಷವನ್ನು ವಾಸಿ ಮಾಡುತ್ತವೆ. ಈ ಎರಡರಲ್ಲಿ ಯಾವುದು ದೊಡ್ಡದು?**

ಉ. ಮಂತ್ರ ದೊಡ್ಡದು.

**ವಿವರ :** ರೋಗಕ್ಕೆ ತಕ್ಕ ಔಷಧ, ವಿಷಕ್ಕೆ ತಕ್ಕ ಮಂತ್ರ ಅವಶ್ಯವೆಂದು ಪೂರ್ವದಲ್ಲಿ ಕೆಲವರನ್ನುತ್ತಿದ್ದರು. ರೋಗಕ್ಕೆ ತಕ್ಕ ಔಷಧ ಹಾಕದಿದ್ದರೂ, ವಿಷಕ್ಕೆ ಸರಿಯಾದ ಮಂತ್ರ ಬಳಸದೆ ಇದ್ದರೂ ಅವು ವಾಸಿ ಆಗುವುದಿಲ್ಲ. ರೋಗ ಶರೀರದಲ್ಲಿ ಕಣ್ಣಿಗೆ ಕಾಣಿಸದೆ ಬಾಧಿಸುತ್ತಿರುವುದು. ಹಾಗೇ ವಿಷವೂ ಸಹ ಕಾಣಿಸದೆ ಬಾಧಿಸುತ್ತಿರುವುದು. ಶರೀರ ಸ್ಥೂಲವಾದರೂ, ಬಾಧೆ ಸೂಕ್ಷ್ಮವಾದದ್ದು. ಸ್ಥೂಲಶರೀರದಲ್ಲಿ ಸೂಕ್ಷ್ಮಬಾಧೆಯನ್ನು ಇಲ್ಲದಂತೆ ಮಾಡುವುದು ಔಷಧ ಮತ್ತು ಮಂತ್ರ. ಪೂರ್ವವು ಔಷಧದಿಂದ ಕೆಲವರು ವೈದ್ಯರು ಶರೀರ ಬಾಧೆಗಳನ್ನು ವಾಸಿ ಮಾಡಿದರೆ, ಮತ್ತೆ ಕೆಲವರು ವೈದ್ಯರು ಮಂತ್ರಗಳಿಂದ ವಾಸಿ ಮಾಡುತ್ತಿದ್ದರು. ಈ ವಿಧವಾಗಿ ಪೂರ್ವದಲ್ಲಿ ವೈದ್ಯರು ಎರಡು ವಿಧಗಳಲ್ಲಿ ಇರುತ್ತಿದ್ದರು. ಔಷಧವೈದ್ಯರು ಸ್ಥೂಲವಾದ ಔಷಧಿಗಳನ್ನು ಕೊಟ್ಟು ರೋಗ ವಾಸಿ ಮಾಡಿದರೆ, ಮಂತ್ರವೈದ್ಯರು ಸೂಕ್ಷ್ಮವಾದ ಮಂತ್ರಗಳಿಂದ ರೋಗಗಳನ್ನು ವಾಸಿ ಮಾಡುತ್ತಿದ್ದರು.

ರೋಗಕ್ಕೆ ತಕ್ಕ ಔಷಧಿ ತಿಳಿಯದೆ ಕೆಲವರು ವೈದ್ಯರು ಬೇರೆ ಔಷಧಗಳನ್ನು ಬಳಸಿ ರೋಗವನ್ನು ವಾಸಿ ಮಾಡದೆ ಹೋಗುತ್ತಿದ್ದರು. ಹಾಗೇ ಕೆಲವರು ಮಂತ್ರವೈದ್ಯರು ರೋಗಕ್ಕೆ ತಕ್ಕ ಮಂತ್ರವನ್ನು ತಿಳಿಯದೆ ಬೇರೆ ಮಂತ್ರವನ್ನು ಬಳಸಿ ರೋಗವನ್ನಾಗಲಿ ವಿಷವನ್ನಾಗಲಿ ವಾಸಿ ಮಾಡದೆ ಹೋಗುತ್ತಿದ್ದರು. ತಕ್ಕ ಔಷಧ, ತಕ್ಕ ಮಂತ್ರ ತಿಳಿದವರು ಯಾವ ರೋಗವನ್ನಾದರೂ ವಾಸಿಮಾಡುತ್ತಿದ್ದರು. ಬಾಧೆಯನ್ನು ನಿವಾರಿಸುವ ಎರಡು ಪದ್ಧತಿಗಳಲ್ಲಿ ಯಾವುದು ದೊಡ್ಡದೆನ್ನುವ ವಿಷಯಕ್ಕೆ ಬಂದರೆ, ಸ್ಥೂಲ ಔಷಧದಲ್ಲಿಯೂ ಸಹ ಸೂಕ್ಷ್ಮವಾದ ಶಕ್ತಿ ಇದ್ದಾಗಲೇ ಬಾಧೆ ನಿವಾರಿಸಲಾಗುವುದು. ಮಂತ್ರದಲ್ಲಿ ಪ್ರತ್ಯಕ್ಷವಾಗಿ ಸೂಕ್ಷ್ಮಶಕ್ತಿಯೇ ಕೆಲಸ ಮಾಡುತ್ತಿದೆ. ಔಷಧದಲ್ಲಿಯೂ ಮಂತ್ರದಲ್ಲಿಯೂ ಸೂಕ್ಷ್ಮಶಕ್ತಿ ಕೆಲಸಮಾಡಿದಾಗ ಎರಡು ಸಮಾನವೇ ತಾನೆ! ಎಂದು ಅಂದುಕೊಳ್ಳಬಹುದು. ಆದರೆ ಔಷಧಿಯಲ್ಲಿ ಔಷಧಶಕ್ತಿ ಮಾತ್ರವಿದ್ದಾಗ, ಮಂತ್ರದಲ್ಲಿ ಸ್ವಲ್ಪ ದೈವಶಕ್ತಿ ಒಳಗೊಂಡಿರುತ್ತದೆ. ಪ್ರತಿ ಮಂತ್ರಕ್ಕೂ ಮೊದಲು ಓಂ ಉಚ್ಚರಿಸುವುದರಿಂದ, ಮಂತ್ರದಲ್ಲಿನ ಬೀಜಾಕ್ಷರ ಶಕ್ತಿಯೊಂದಿಗೆ ಆತ್ಮಶಕ್ತಿ ಅದರಲ್ಲಿ ಸೇರುವುದರಿಂದ, ಔಷಧಕ್ಕಿಂತಲೂ ಮಂತ್ರವೇ ಮೇಲೆಂದು ಪೂರ್ವವೆನ್ನುತ್ತಿದ್ದರು. ಮಂತ್ರವೈದ್ಯ ಪೂರ್ತಿ ಮಾಸಿಹೋಗಿ ಮಂತ್ರಗಳೆಂದರೇ ಏನೋ

ತಿಳಿಯದ ಈ ಕಾಲದಲ್ಲಿ, ಯಾವ ರೋಗಕ್ಕೆ ಯಾವ ಮಂತ್ರವೋ ಯಾರಿಗೂ ತಿಳಿಯದೆ ಹೋಗಿದೆ. ಔಷಧಗಳಲ್ಲಿಯೂ ಸಹ ಎಷ್ಟೋ ಬದಲಾವಣೆಗಳು ಬಂದಿವೆ. ಈಗಲೂ ಸಹ ಬಾಲಗ್ರಹ ಬಾಧೆಗಳಿಗೆ ಔಷಧಕ್ಕಿಂತಲೂ ಮಂತ್ರವೇ ಚೆನ್ನಾಗಿ ಕೆಲಸಮಾಡುವುದು ಅಲ್ಲಲ್ಲಿ ಇದೆ.

## ಜ್ಞಾನ ಪರೀಕ್ಷೆ

**ಯಾಡಿಕಿ** **ದಿನಾಂಕ–19–11–2002**

**921. (1) ಪ್ರಕೃತಿ ಕ್ಷರವಾ ಅಕ್ಷರವಾ?**

ಉ. ಬಹಳ ಅಕ್ಷರ, ಕಡಿಮೆ ಕ್ಷರ.

**ವಿವರ :** ಪ್ರಕೃತಿ ನಾಶನವಾಗುವುದೇ ಅಲ್ಲವೆ! ಕ್ಷರವೇ ಅಲ್ಲವೆ! ಅಕ್ಷರವೇಗೆ ಆಗುತ್ತದೆ ಎಂದು ಕೆಲವರಂದುಕೊಳ್ಳಬಹುದು. ಪ್ರಕೃತಿ ಅಂಶವಾದ ಶರೀರ ಅಥವಾ ಶರೀರವಾದ ಪ್ರಕೃತಿ ನಾಶನವಾಗುವುದೆಂದು ಹೇಳಬಹುದು. ವಿವರವಾಗಿ ಹೇಳಬೇಕೆಂದರೆ ಚರಪ್ರಕೃತಿ ಕ್ಷರವೆಂದು (ನಾಶನವಾಗುವುದೆಂದು) ಹೇಳಬಹುದು. ಅಚರ ಪ್ರಕೃತಿಯಾದ ಪಂಚಭೂತಗಳು ನಾಶವಾಗವೆಂದು ಅವುಗಳನ್ನು ಅಕ್ಷರವೆಂದೇ ಹೇಳಬಹುದೆಂದು ತಿಳಿಯಬೇಕು. ಈ ವಿಷಯ ಆಧಾರ ಇಲ್ಲದ್ದೆಂದು, ಈ ವಿಷಯಕ್ಕೆ ಶಾಸ್ತ್ರಬದ್ದತೆ ಇಲ್ಲೆಂದು ಸಹ ಕೆಲವರನ್ನ ಬಹುದು. ವಿವರಿಸಿ ನೋಡಿಕೊಂಡರೆ ಬ್ರಹ್ಮವಿದ್ಯಾ ಶಾಸ್ತ್ರವಾದ ಭಗವದ್ಗೀತೆಯೇ ಆಧಾರವೆಂದು ಹೇಳಬಹುದು. ಭಗವದ್ಗೀತ ಶಾಸ್ತ್ರವೇ ಶರೀರಗಳಾದ ಚರ ಪ್ರಕೃತಿಗೆ ನಾಶವಿದೆಯೆಂದು ಹೇಳಿದೆ. ಹಾಗೇ ಆತ್ಮ ನಾಶವಿಲ್ಲದೆಂದು, ಜೀವಾತ್ಮ ನಾಶವಾಗುವುದೆಂದು ಸಹ ಹೇಳಲಾಗಿದೆ. ಚರ ಪ್ರಕೃತಿಯಲ್ಲಿನ ಭಾಗ ಜೀವಾತ್ಮ ನಾಶವಾದಾಗ, ಆತ್ಮ ಮಾತ್ರ ನಾಶವಾಗದೆ ಉಳಿದಿರುತ್ತದೆ. ಆತ್ಮ ಜೀವಾತ್ಮ ಎರಡು ಪರಮಾತ್ಮ ಅಂಶವಾದರೂ ಒಂದು ನಾಶವಾಗುವುದು ಮತ್ತೊಂದು ನಾಶವಾಗದಿರುವುದು ವಿಚಿತ್ರವಾಗಿ ಇದೆ ಅಲ್ಲವೆ! ಇಲ್ಲಿ ವಿಚಿತ್ರವೇನೆಂದರೆ ಪರಮಾತ್ಮನಿಂದ ಮೊಟ್ಟಮೊದಲು ಹುಟ್ಟಿರುವುದು ಪ್ರಕೃತಿ. ಮೊದಲು ಹುಟ್ಟಿದ ಪ್ರಕೃತಿ ಎರಡು ಭಾಗಗಳಾಗಿ ಬೇರ್ಪಟ್ಟು, ಒಂದು ಪ್ರಪಂಚ ಮತ್ತೊಂದು ಜೀವರೂಪವಾದ ಜಗತಿಯಾಗಿ ಏರ್ಪಟ್ಟಿದೆ. ಜೀವರೂಪವಾದ ಜಗತಿಗೆ ನಾಶವಿದೆ ಆದರೆ, ಪ್ರಪಂಚರೂಪವಾದ ಪಂಚಭೂತಗಳಿಗೆ ಒಂದು ವಿಧವಾಗಿ ನಾಶನವಿಲ್ಲವೆಂದೇ

ಹೇಳಬಹದು. ಏಕೆಂದರೆ ಪ್ರಪಂಚ ಹುಟ್ಟಿದ ನಂತರವೇ ಆತ್ಮ ಜೀವಾತ್ಮಗಳು ಹುಟ್ಟಿವೆ. ಪ್ರಪಂಚವಿದ್ದರೇನೆ ಆತ್ಮಕ್ಕೂ ಜೀವಾತ್ಮಕ್ಕೂ ಕೆಲಸ. ಪ್ರಪಂಚವಿಲ್ಲದೆ ಹೋದರೆ ಆತ್ಮ ಜೀವಾತ್ಮರ ಇರುವಿಕೆಯೇ ಇರುವುದಿಲ್ಲ. ಜೀವಾತ್ಮ ಹೇಗೂ ಕ್ಷರವೆಂದು (ನಾಶನವಾಗುವುದೆಂದು) ಹೇಳಲಾಗಿದೆ. ಹಾಗೇ ಆತ್ಮ ಅಕ್ಷರ (ನಾಶವಿಲ್ಲದ್ದು) ಎಂದು ಹೇಳಲಾಗಿದೆ. ಆತ್ಮ ನಾಶವಾಗಿಲ್ಲವೆಂದರೆ ಆತ್ಮ ನಿವಾಸಕ್ಕಾಗಿ ಪ್ರಕೃತಿಯಲ್ಲಿನ ಅಚರ ಪ್ರಕೃತಿಯಾದ ಪಂಚಭೂತಗಳು ಇರಬೇಕಾದ್ದೇ. ಆದ್ದರಿಂದ ಆತ್ಮ ಅಕ್ಷರವಾದಹಾಗೇ ಪ್ರಕೃತಿ ಸಹ ಅಕ್ಷರವೇ ಎಂದು ಹೇಳಬಹುದು. ಇಲ್ಲಿ ಅರ್ಥ ಮಾಡಿಕೊಳ್ಳುವುದಕ್ಕೆ ಸ್ವಲ್ಪ ಗೊಂದಲ ಪರಿಸ್ಥಿತಿ ಇರುವುದರಿಂದ ಜಾಗರೂಕತೆಯಿಂದ ಯೋಚಿಸಬೇಕಾಗುತ್ತದೆ. ಪ್ರಕೃತಿಯಲ್ಲಿ ಸ್ವಲ್ಪ ಭಾಗ ನಶಿಸುತ್ತಿದ್ದರೂ, ನಶಿಸದ ಭಾಗ ಹೆಚ್ಚಾಗಿ ಉಳಿದಿದೆ. ಪಂಚಭೂತಗಳು ಎಷ್ಟೋ ವಿಶಾಲವಾದವು, ಅವುಗಳಲ್ಲಿ ಸ್ವಲ್ಪವೇ ಜೀವರಾಶಿಗಳಿವೆ. ಜೀವರಾಶಿಗಳ ರೂಪವಾದ ಚರ ಪ್ರಕೃತಿ ಸ್ವಲ್ಪ ಮಾತ್ರ ನಶಿಸಿದರೂ ವಿಶಾಲವಾದ ಅಚರ ಪ್ರಕೃತಿ ನಾಶನವಾಗದೆ ಆತ್ಮಕ್ಕೆ ಆಧಾರವಾಗಿದೆ. ಆತ್ಮ ಇದೆಯೆಂದರೆ ಪ್ರಕೃತಿ ಇದೆಯೆಂದು, ಪ್ರಕೃತಿ ಇದೆಯೆಂದರೆ ಆತ್ಮ ಇದೆಯೆಂದು ಲೆಕ್ಕಿಸಲಾಗುತ್ತಿದೆ. ಪ್ರಕೃತಿಯಲ್ಲಿ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಭಾಗಗಳು ನಶಿಸಿದರೂ, ನಶಿಸದ ಪ್ರಕೃತಿ ಸಹ ಇದೆಯೆಂದು ಅದು ನಶಿಸದ ಆತ್ಮಕ್ಕಾಧಾರವಾಗಿ ಇದೆಯೆಂದು ತಿಳಿಯಬೇಕು. ಭಗವದ್ಗೀತೆ ಅಕ್ಷರ ಪರಬ್ರಹ್ಮ ಯೋಗ ಎನ್ನುವ ಅಧ್ಯಾಯದಲ್ಲಿ 19ನೇ ಶ್ಲೋಕದಲ್ಲಿ **"ಭೂತ ಗ್ರಾಮ ಸ್ಸ ಏವಾಯಂ ಭೂತ್ವಾಭೂತ್ವಾ ಪ್ರಳೀಯತೇ"** ಎಂದಿದ್ದಾರೆ. ಪ್ರಳಯದಲ್ಲಿ ಜೀವರಾಶಿಗಳೇ ಲಯವಾಗುತ್ತಿವೆ ಎಂದಿದ್ದಾನೆ, ಆದರೆ ಪ್ರಕೃತಿಯನ್ನು ಕುರಿತು ಹೇಳಲಿಲ್ಲ. ಪ್ರಕೃತಿ ಸಹ ಇಲ್ಲದೇ ಹೋಗುವುದು ನಿಜವೇ ಆದರೆ ನಾಶನವಾಗದೆ ಅವ್ಯಕ್ತವಾಗಿ ಹೋಗುವುದೆಂದು ತಿಳಿಯಬೇಕು. ಕಾಣಿಸದಷ್ಟು ಮಾತ್ರಕ್ಕೆ ಇಲ್ಲ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಇದನ್ನನುಸರಿಸಿ ಪ್ರಕೃತಿ ನಾಶನವಾಗಬಲ್ಲದು, ಆದರೆ ಅದು ಚರ ಪ್ರಕೃತಿಯೆಂದು, ಪ್ರಕೃತಿ ನಾಶವಾಗದು ಆದರೆ ಅಚರ ಪ್ರಕೃತಿಯೆಂದು ತಿಳಿಯಬೇಕು. ಚರ ಪ್ರಕೃತಿಗಿಂತಲೂ ಅಚರ ಪ್ರಕೃತಿ ಎಷ್ಟೋ ಪಟ್ಟು ದೊಡ್ಡದು, ಆದ್ದರಿಂದ ನಾಶವಾಗದಿರುವುದೇ ಹೆಚ್ಚಾಗಿರುವುದರಿಂದ ಮೇಲಿನ ಪ್ರಶ್ನೆಗೆ ಪ್ರಕೃತಿ ನಾಶವಾಗದ್ದೆಂದು ಉತ್ತರ ಹೇಳಬೇಕು.

**922. (2) ಪಂಚಾಂಗಗಳಲ್ಲಿ ಯಾವುದು ಮುಖ್ಯ?**

ಉ. ಕಿವಿ ಮುಖ್ಯ.

**ವಿವರ :** ಪಂಚಾಂಗಗಳೆಂದರೆ ಐದು ಅಂಗಗಳೆಂದು ತಿಳಿಯಬೇಕು. ಜ್ಯೋತಿಷ್ಯದಲ್ಲಿನ

ವಾರ, ತಿಥಿ, ನಕ್ಷತ್ರ, ಕರಣ, ವರ್ಜ್ಯಗಳಲ್ಲಿ ತಿಥಿ ಮುಖ್ಯವಾದಹಾಗೆ, ಶರೀರ ಪಂಚಾಂಗಗಳಲ್ಲಿ ಕಿವಿ ಮುಖ್ಯವಾದದ್ದು. ಐದು ಅಂಗಗಳಲ್ಲಿ ಪ್ರಪಂಚರೀತ್ಯಾ ಕಣ್ಣು ಮುಖ್ಯವಾದರೂ, ಆಧ್ಯಾತ್ಮಿಕರೀತ್ಯಾ ಕಿವಿ ಮುಖ್ಯವಾದದ್ದು. ದೇವಾಲಯಗಳಲ್ಲಿ ಶಂಖು ಚಕ್ರ ನಾಮಗಳಲ್ಲಿ ನಾಮ ದೇವರ ಗುರುತಾದಾಗ, ಚಕ್ರ ಕರ್ಮ ನಾಶಕ್ಕೆ ಗುರುತಾದಾಗ, ಶಂಖ ಜ್ಞಾನ ಶಬ್ದಕ್ಕೆ ಗುರುತಾಗಿ ಇದೆ. ಜ್ಞಾನ ಶಬ್ದದಿಂದ ಕೇಳಿ, ಕರ್ಮವನ್ನು ಜ್ಞಾನ ಚಕ್ರ (ಆಯುಧ)ದಿಂದ ಖಂಡಿಸಿದಾಗ, ದೈವ ತಿಳಿಯುವುದೆಂದು ಅಲ್ಲಿಯ ವಿವರ . ಮಾನವನ ಜನ್ಮವೊಂದರ ಮುಖ್ಯ ಉದ್ದೇಶ, ಈ ಜನ್ಮದಲ್ಲೇ ದೇವರನ್ನು ತಿಳಿಯುವುದು. ಆ ಉದ್ದೇಶವನ್ನು ಮರೆತುಹೋಗಿ ಮನುಷ್ಯ ಪ್ರತಿ ನಿತ್ಯ ಧನದ ಮೇಲಿನ ಆಸೆಯಿಂದ ಉಳಿದ ಕೆಲಸಗಳ ಮೇಲೆ ಲಗ್ನವಾಗಿ ಹೋಗುತ್ತಿದ್ದಾನೆ. ಹಾಗಲ್ಲದೆ ಯಾರಾದರು ದೈವವನ್ನು ತಿಳಿಯಬೇಕೆಂದು ಗುರುವಿನ ಹತ್ತಿರ ಸೇರಿದರೂ, ಕಿವಿಗಳಿಲ್ಲದೆ ಕಣ್ಣು ಇದ್ದಷ್ಟು ಮಾತ್ರಕ್ಕೆ ಗುರುವು ಹೇಳುವುದು ತಿಳಿಯದೆ ಜ್ಞಾನ ಲಭಿಸದೆ ಹೋಗುವುದು. ಕಣ್ಣು ನೋಡಿದಷ್ಟು ಮಾತ್ರಕ್ಕೆ, ಗುರುವು ಹೇಳುವ ಶಬ್ದ ತನಗೆ ತಿಳಿಯದಿರುವುದರಿಂದ ಅವನು ಜ್ಞಾನಿ ಆಗಲಾರನು. ಒಂದು ವೇಳೆ ಕಿವಿಗಳಿದ್ದು ಕಣ್ಣು ಇಲ್ಲದೇ ಹೋದರೂ ಗುರುವುನಿಂದ ಬರುವುದು ಶಬ್ದವೇ ಆಗಿರುವುದರಿಂದ ಅದನ್ನು ಗ್ರಹಿಸಿ ಜ್ಞಾನಿ ಆಗಬಲ್ಲನು. ಆದ್ದರಿಂದ **"ಸರ್ವೇಂದ್ರಿಯಾನಾಮ್ ಕರ್ಣಂ ಪ್ರಧಾನಂ"** ಎನ್ನಬಹುದು. ನೇತ್ರ, ಕರ್ಣ, ನಾಸಿಕ, ಜಿಹ್ವ, ಚರ್ಮಗಳಲ್ಲಿ ಕರ್ಣ (ಕಿವಿ) ಶ್ರೇಷ್ಠವಾದುದು.

**923. (3) ಪಂಚಾಗಗಳು ಯಾವ ಶಾಸ್ತ್ರದಿಂದ ಹುಟ್ಟಿರುವವು?**

ಉ. ಬ್ರಹ್ಮವಿದ್ಯಾ ಶಾಸ್ತ್ರ.

**ವಿವರ :** ಕಾಲಕ್ಕೆ ಅಳತೆ ಹನ್ನೆರಡು ಗಂಟೆಗಳಿದ್ದಹಾಗೆ ಮತ್ತೆ ಕೆಲವು ಅಳತೆಗಳು ಕಾಲಕ್ಕೆ ಇವೆ. ಪೂರ್ವದಲ್ಲಿ ಗಡಿಯಗಳು ವಿಗಡಿಯಗಳ ರೂಪದಲ್ಲಿ ಕಾಲವನ್ನು ಅಳೆಯುತ್ತಿದ್ದರು. ಗಡಿಯಗಳ ಅಳತೆ ಅಂದಿಗೂ ಇಂದಿಗೂ ಇದೆ. ಕಾಲಕ್ಕೆ ಪೂರ್ವದಲ್ಲಿ ಗಣಿತರೀತ್ಯಾ ಐದು ಅಂಗಗಳನ್ನು ಗುರುತಿಸಿದ್ದಾರೆ. ಹಾಗೇ ಶರೀರಕ್ಕೂ ಮುಖ್ಯವಾಗಿ ಐದು ಜ್ಞಾನೇಂದ್ರಿಯಗಳನ್ನು ಗುರುತಿಸಿದ್ದಾರೆ. ಪೂರ್ವ ಜ್ಯೋತಿಷ್ಯ ಶಾಸ್ತ್ರದಿಂದ ಗಡಿಯಗಳ ವಿಗಡಿಯಗಳ ರೂಪದಲ್ಲಿ ವಾರ, ತಿಥಿ, ನಕ್ಷತ್ರ, ಕರಣ, ವರ್ಜ ಎನ್ನುವವನ್ನು ಪಂಚಾಂಗಗಳಾಗಿ ಗುರುತಿಸಿದ್ದಾರೆ. ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಶರೀರದಲ್ಲಿನ ಪಂಚಾಂಗ ಗಳನ್ನು ಗುರುತಿಸಿದ್ದಾರೆ.

**924. (4) ವಿಶ್ವವೆಂದರೆ ಏನು?**

ಉ. ಪ್ರಪಂಚ ಜಗತಿ ಎರಡೂ ಸೇರಿ ವಿಶ್ವ.

**ವಿವರ :** ಪರಮಾತ್ಮನಿಂದ ಪ್ರಕೃತಿ ಉದ್ಭವಿಸಿದೆ. ಪ್ರಕೃತಿ ಯಿಂದ ಪ್ರಪಂಚವೆನ್ನುವುದು ಒಂದು, ಜಗತಿ ಎನ್ನುವುದೊಂದು ಎರಡು ಉದ್ಭವಿಸಿವೆ. ರಾಜನಿಗೆ ಕಾಲ್ಬಲವು, ವೈಮಾನಿಕ ಬಲ, ಸಮುದ್ರಬಲ ಎನ್ನುವ ಮೂರು ರೀತಿಯ ಬಲಗಳೆನ್ನುವ ಯುದ್ಧ ಯೋಧರಿದ್ದಾರೆ. ಎಲ್ಲಾ ಬಲಗಳ ಯೋಧರನ್ನು ಸೇರಿಸಿ ಸೈನ್ಯ ಎನ್ನುತ್ತೇವೆ. ಹಾಗೇ ಪ್ರಕೃತಿಗಿರುವ ಜಗತಿ, ಪ್ರಪಂಚ ಎನ್ನುವ ಎರಡು ಭಾಗಗಳನ್ನು ಸೇರಿಸಿ ವಿಶ್ವ ಎನ್ನುತ್ತೇವೆ. ಪ್ರಕೃತಿ ಎಂದರೂ ವಿಶ್ವವೆಂದರೂ ಎರಡು ಒಂದೇ ಅರ್ಥವನ್ನು ಕೊಡುವವೇ ಆಗುವವು. ವಿಶ್ವದಲ್ಲಿ ಇರುವ ಜೀವಕೋಟಿಯನ್ನು ಕುರಿತಾಗಲಿ, ಅಂದರೆ ಜಗತಿಯನ್ನು ಕುರಿತಾಗಲಿ, ಹಾಗೇ ಪಂಚ ಭೂತಗಳಾದ ಪ್ರಪಂಚವನ್ನು ಕುರಿತಾಗಲಿ ಹದ್ದು ಗಿದ್ದು ಯಾರಿಗೂ ತಿಳಿಯವು. ವಿಶ್ವವೇ ತಿಳಿಯದಾಗ ವಿಶ್ವವೆಲ್ಲಾ ವ್ಯಾಪಿಸಿದ ಪರಮಾತ್ಮನನ್ನು ಕುರಿತು ಯಾರಿಗೆ ತಿಳಿಯುವುದು? ಸ್ಥೂಲದಿಂದ ವಿಶ್ವವನ್ನೇ ನೋಡಲಾರೆವು, ಆದ್ದರಿಂದ ಸೂಕ್ಷ್ಮದಿಂದಲೇ ವಿಶ್ವವನ್ನು ನೋಡಬೇಕು. ಅಂದರೆ ಜ್ಞಾನದೃಷ್ಟಿಯಿಂದ ಪ್ರಕೃತಿಯನ್ನು ತಿಳಿಯಬಹುದು. ಪ್ರಕೃತಿಯನ್ನು ತಿಳಿದ ನಂತರ ವಿಶ್ವವೆಲ್ಲಾ ವ್ಯಾಪಿಸಿದವನನ್ನು ತಿಳಿಯಬಹುದು.

**925. (5) ಹೆಜ್ಜೆ ಹೆಜ್ಜೆಗೂ ಗುಡಿ ಇದೆ, ಆ ಗುಡಿಯಲ್ಲಿ ದೀಪವಿದೆ ಎನ್ನುತ್ತಾರೆ. ಆ ದೀಪ ಯಾವುದು?**

ಉ. ಗುಡಿ ಶರೀರ, ದೀಪ ಆತ್ಮ.

**ವಿವರ :** ಪ್ರಪಂಚದಲ್ಲಿ ಭೂಮಿ ಮೇಲೆ ಹೆಜ್ಜೆ ಹೆಜ್ಜೆಗೂ ದೇವರ ನಿಲಯವಾದ ಗುಡಿ ಇದೆ. ಶರೀರವೆನ್ನುವ ಗುಡಿಯಲ್ಲಿ ಪರಮಾತ್ಮ ಎನ್ನುವ ದೇವರು ನೆಲೆಸಿದ್ದಾನೆ. ಲೆಕ್ಕವಿಲ್ಲದಷ್ಟು ಶರೀರಗಳು ಭೂಮಿ ಮೇಲೆ ಇರುವುದರಿಂದ ಅವುಗಳ ಸಂಖ್ಯೆ ದೊಡ್ಡದೆನ್ನುವ ಹಾಗೆ ಗುರುತಿಗೆ ಹೆಜ್ಜೆ ಹೆಜ್ಜೆಗೂ ಗುಡಿ ಇದೆ ಎಂದಿದ್ದಾರೆ. ಶರೀರವೆನ್ನುವ ಗುಡಿಯನ್ನು ಕೆಲವರು "ದೇಹವೇ ದೇವಾಲಯ"ವೆಂದಿದ್ದಾರೆ. ಶರೀರಗುಡಿಯಲ್ಲಿ ಪರಮಾತ್ಮ ಯಾವಾಗಲೂ ದೇವರಾಗಿದ್ದಾನೆ. ಶರೀರವನ್ನಲ್ಲದೇ ಹೊರಗೆ ಮನುಷ್ಯರಿಂದ ಕಟ್ಟಲಾದ ಗುಡಿಯನ್ನು ನೋಡಿದರೆ ಅದರಲ್ಲಿ ಮೂಲ ವಿರಾಟ್ ಆದ ಪ್ರತಿಮೆ ಇರುತ್ತದೆ, ಪ್ರತಿಮೆಯನ್ನು ಆರಾಧಿಸುವ ಪೂಜಾರಿ ಇರುವನು. ಗುಡಿಯಲ್ಲಿ ಮುಖ್ಯವಾಗಿ ದೀಪವಿರುತ್ತದೆ. ಗುಡಿಯಲ್ಲಿ ಪ್ರತಿಮೆ, ದೀಪ, ಅರ್ಚಕನು ಮುಖ್ಯವಾಗಿ ಇರುವರು. ಗರ್ಭಗುಡಿಗೆ ಕಿಟಿಕಿಗಳಿರುವುದಿಲ್ಲ

ಆದ್ದರಿಂದ ಕತ್ತಲಾಗಿರುತ್ತದೆ. ಆದ್ದರಿಂದ ತಪ್ಪದೆ ದೀಪವನ್ನು ಆರಾಧನೆಯಲ್ಲಿ ಭಾಗವಾಗಿ ಬೆಳಗಿಸುತ್ತಿದ್ದರು. ಯಾವಾಗಲೂ ದೀಪ ಬೆಳಗುವಂತೆ ಇರಿಸಿ ಅಖಂಡ ದೀಪಾರಾಧನೆ ಎಂದು ಹೆಸರಿಟ್ಟು ಹೇಳುವುದು ಕೇಳಿದ್ದೇವೆ. ಇನ್ನೂ ಕೆಲವರು ಹಿರಿಯರು ಬಾಗಿಲು ಇಲ್ಲದ ಮನೆ, ದೀಪವಿಲ್ಲದ ಗುಡಿ ಇರಬಾರದೆನ್ನುತ್ತಿದ್ದರು. ಅಷ್ಟೇ ಅಲ್ಲದೆ ಬಾಗಿಲು ಇಲ್ಲದ ಮನೆ ಕಳ್ಳರ ಪಾಲು, ದೀಪವಿಲ್ಲದ ಗುಡಿ ದೆವ್ವಗಳ ಪಾಲು ಎನ್ನುತ್ತಿದ್ದರು. ಆದ್ದರಿಂದ ಪ್ರತಿ ಗುಡಿಯಲ್ಲೂ ದೀಪ ಮುಖ್ಯವಾಗಿ ಇರುತ್ತಿದೆ.

ಭೂಮಿ ಮೇಲೆ ಎಲ್ಲಾ ಕಡೆ ಇರುವ ಶರೀರಗಳು ಹೆಜ್ಜೆ ಹೆಜ್ಜೆಗೂ ಇರುವ ಗುಡಿಗಳೊಂದಿಗೆ ಸಮಾನ. ಶರೀರಗಳು ದೇವರು ಮಾಡಿದ ಗುಡಿಗಳು. ಶರೀರಗಳೇ ದೇವರು ನಿವಾಸವಿರುತ್ತಿರುವ ಗುಡಿಗಳು. ಶರೀರ ಗುಡಿಯಲ್ಲಿ ಪರಮಾತ್ಮ ದೇವರಾದಾಗ ಆತ್ಮ ದೀಪವಾಗಿ ಗುಡಿಯೆಲ್ಲವೂ ಬೆಳಕನ್ನು ಕೊಡುತ್ತಿದೆ. ಶರೀರದಲ್ಲಿನ ಜೀವಾತ್ಮ ದೇವರನ್ನು ಆರಾಧಿಸುವ ಆರಾಧಕನಾಗಿ ಇದ್ದಾನೆ. ಹೊರಗಿನ ಗುಡಿಯಲ್ಲಿ ಅರ್ಚಕನು ದೇವರು ಇದ್ದರೂ ದೀಪ ಇಲ್ಲದಿದ್ದರೇ ಏನೂ ಕಾಣಿಸದೆ ಆರಾಧನೆಗಳೆಲ್ಲವೂ ನಿಂತುಹೋಗುವವು. ಹಾಗೆಯೇ ಶರೀರದಲ್ಲಿ ಆತ್ಮ ಇಲ್ಲದೇಹೋದರೆ ಶರೀರ ಯಾವ ಮಾತ್ರವೂ ಕದಲದೆ ಕೆಲಸಗಳೆಲ್ಲವು ಸ್ಥಂಭಿಸಿ ಹೋಗುವವು. ಆದ್ದರಿಂದ ಗುಡಿಯಲ್ಲಿ ದೀಪ ಎಷ್ಟು ಪ್ರಾಮುಖ್ಯತೆಯನ್ನು ಹೊಂದಿದೆಯೋ, ಶರೀರದಲ್ಲಿ ಆತ್ಮ ಅಷ್ಟು ಪ್ರಾಮುಖ್ಯವನ್ನು ಹೊಂದಿದೆ. ಆತ್ಮ ತನ್ನ ಶಕ್ತಿಯಿಂದ ಶರೀರವೆಲ್ಲದಕ್ಕೂ ಬೆಳಕನ್ನು ಕಲ್ಪಿಸಿ ಚೈತನ್ಯವನ್ನು ಕೊಡುತ್ತಿದೆ. ದೀಪವಿಲ್ಲದ ಕತ್ತಲು ಗುಡಿಯಲ್ಲಿ ಪೂಜಾರಿಗೆ ಕೆಲಸವಿಲ್ಲದಹಾಗೆ ಆತ್ಮವಿಲ್ಲದ ಶರೀರದಲ್ಲಿ ಜೀವಾತ್ಮನಿಗೆ ಕೆಲಸವಿಲ್ಲ. ಆದ್ದರಿಂದ ಆತ್ಮ ಇಲ್ಲದ ದೇಹ ಜೀವಾತ್ಮನು ಸಹ ಇಲ್ಲದಾಗಿ ಶವವಾಗಿ ಹೋಗುವುದು. ಗುಡಿಯಲ್ಲಿ ದೀಪ ಬೆಳಕಾಗಿರುವಹಾಗೆ ಶರೀರದಲ್ಲಿ ಆತ್ಮ ಬೆಳಕಾಗಿ ಇದೆ. **ದೇಹ = ದೇವಾಲಯ, ಜೀವಾತ್ಮ = ಅರ್ಚಕನು, ಆತ್ಮ = ದೀಪ, ಪರಮಾತ್ಮ = ದೇವರು.**

**926. (6) ಪ್ರಕೃತಿಗಿಂತಲೂ ಮೊದಲು ಓಂ ಕಾರ ನಾದ ಹುಟ್ಟಿದೆ ಎನ್ನುತ್ತಾರೆ ನಿಜವೇನಾ?**

ಉ. ನಿಜವಲ್ಲ.

**ವಿವರ :** ಮೊದಲು ಪರಮಾತ್ಮನಿಂದ ಪ್ರಕೃತಿ ಹುಟ್ಟಿದೆ. ಪ್ರಕೃತಿ ಪರಮಾತ್ಮನನ್ನು ಆಧಾರ ಮಾಡಿಕೊಂಡು ಇರುತ್ತಿದೆ. ಪ್ರಕೃತಿ ಪರಮಾತ್ಮನಿಗೆ ಹುಟ್ಟಿರುವುದರಿಂದ ಮಗಳ ಸಮಾನ. ಅದೇ ಪ್ರಕೃತಿ ಪರಮಾತ್ಮ ಗರ್ಭಕ್ಕೆ ಕಾರಣವಾಗಿ ಜೀವರಾಶಿಗಳಿಗೆ ತಾಯಿಯಾಗಿ

ಇರುವುದರಿಂದ ಪರಮಾತ್ಮನಿಗೆ ಪ್ರಕೃತಿ ಹೆಂಡತಿಯಾಗಿಯೂ ಸಹ ಇದೆ. ಇದನ್ನನುಸರಿಸಿ ಪರಮಾತ್ಮನಿಗೆ ಮೊದಲು ಪ್ರಕೃತಿ ಹುಟ್ಟಿ, ಆ ನಂತರ ಪ್ರಕೃತಿಗೆ ಎಲ್ಲಾ ಹುಟ್ಟಿವೆ ಎಂದು ಹೇಳಬಹುದು. ಆದ್ದರಿಂದ ಪ್ರಕೃತಿಗಿಂತಲೂ ಮೊದಲು ಯಾವುದು ಹುಟ್ಟಿಲ್ಲವೆನ್ನುವುದಕ್ಕೆ ಆಧಾರವಿದೆ. ಪ್ರಕೃತಿ ಹುಟ್ಟಿದನಂತರ ಎರಡು ಭಾಗಗಳಾಗಿ ಚರ ಅಚರ ಪ್ರಕೃತಿಗಳಾಗಿ ಬದಲಾಗಿವೆ. ಅಚರ ಪ್ರಕೃತಿ ಪಂಚ ಭೂತಗಳಾಗಿ ನಿಂತು ಹೋಗಿ, ಚರ ಪ್ರಕೃತಿ ಇಪ್ಪತ್ತೈದು ಭಾಗಗಳಾಗಿ ಬದಲಾಗಿ, ಅದರಲ್ಲಿ ಒಂದು ಭಾಗ ನಾದ (ಶಬ್ದ) ವಾಗಿ ಬದಲಾಗಿದೆ. ಇದನ್ನನುಸರಿಸಿ ಪ್ರಕೃತಿ ಹುಟ್ಟಿದ ನಂತರ ಓಂಕಾರ ನಾದ ಹುಟ್ಟಿದೆ. ಆದರೆ ಪ್ರಕೃತಿ ಹುಟ್ಟುವುದಕ್ಕು ಮೊದಲು ಏನೂ ಆಗದ ಪರಮಾತ್ಮ ಹೊರತು ಏನೂ ಇಲ್ಲವೆಂದು ತಿಳಿಯಬೇಕು.

**927. (7) ಪಿಂಡ ಕೂಳು ಎಂದರೇನು? ಯಾರಿಗೆ ಇಡಬೇಕು?**

ಉ. ಕರ್ಮ, ಮೋಕ್ಷ ಹೊಂದಿದವರಿಗೆ ಇಡಬೇಕು.

**ವಿವರ :** ಪಿಂಡಕೂಳು ಎನ್ನುವ ಮಾತು ಬಹುಶ ಎಲ್ಲರೂ ಕೇಳಿರುತ್ತೇವೆ. ಪಿಂಡಕೂಳಿನ ಬಗ್ಗೆ ನಮಗೆ ತಿಳಿದಿರುವುದೇನೆಂದರೆ! ಒಬ್ಬ ಮನುಷ್ಯ ಮರಣಿಸಿದರೆ ಕರ್ಮ ತಂತ್ರಗಳೆನ್ನುವ ಹೆಸರೊಂದಿಗೆ ಮರಣಿಸಿದವನ ಹಸಿವು ತೀರಿಸುವುದಕ್ಕೆ ಇಡುವ ಆಹಾರವನ್ನು ಪಿಂಡಕೂಳೆಂದು ಹೇಳುತ್ತಿರುವರು. ಒಂದೊಂದು ಪ್ರಾಂತ್ಯದಲ್ಲಿ ಒಂದೊಂದು ವಿಧವಾಗಿ ಈ ಕರ್ಮತಂತ್ರಗಳು ಬ್ರಾಹ್ಮಣರಿಂದ ಮಾಡಿಸುತ್ತಿರುವರು. ಕೆಲವರು ಮನುಷ್ಯ ಸತ್ತುಹೋದ ಮೂರು ದಿನಗಳಿಗೆ, ಹನ್ನೊಂದು ದಿನಗಳಿಗೆ, ಸಂವತ್ಸರಕ್ಕೆ ಪಿಂಡಕೂಳನ್ನು ಇಡುವುದು ಮಾಡುತ್ತಿರುವರು. ಕೆಲವರು ತಿಂಗಳಿಗೊಮ್ಮೆ ವಿಧದ ಹೆಸರಿಂದ ಪಿಂಡಕೂಳನ್ನು ಇಡುವುದು ಸಹ ನಡೆಯುತ್ತಿದೆ. ಮತ್ತೆ ಕೆಲವರು ಸಂವತ್ಸರಕ್ಕೆ ಒಮ್ಮೆ ಪುಣ್ಯಕ್ಷೇತ್ರಗಳ ಹತ್ತಿರ ನದಿ ದಂಡೆಯಲ್ಲಿ ಕರ್ಮ ತಂತ್ರಗಳು ಮಾಡುತ್ತಾ ಪಿಂಡಕೂಳು ಇಡುವುದು ಸಹ ನಡೆಯುತ್ತಿದೆ. ತರ್ಪಣವೆಂದು, ತಿಥಿ ಎಂದು ಬಗೆಬಗೆಯ ಹೆಸರೊಂದಿಗೆ ಈ ಕಾರ್ಯಗಳು ಮಾಡುತ್ತಿರುವರು. ಈ ವಿಷಯವಾಗಿ ಕೆಲವರನ್ನು ಕೇಳಿದಾಗ ಅವರು ಹೇಳುವ ಸಮಾಧಾನವೇನೆಂದರೆ! ಸತ್ತುಹೋದವನನ್ನು ಯಮದೂತರು ಅವರ ಹಿಂದೆ ಕರೆದುಕೊಂಡು ಹೋಗುವರೆಂದು, ಹಾಗೆ ಸಂವತ್ಸರ ಕಾಲ ಅವರನ್ನು ನಡೆಸುತ್ತಾ ಕರೆದುಕೊಂಡು ಹೋಗುವುದರಿಂದ ಆ ಜೀವಾತ್ಮನು ಹಸಿವುನೊಂದಿಗೆ ಬಾಧೆಬೀಳುತ್ತಿರುವನೆಂದು, ತಿಂಗಳಿಗೊಮ್ಮೆ ಇಡುವುದರಿಂದ ಜೀವಾತ್ಮನ ಹಸಿವು ತೀರುವುದೆಂದು, ತಿಂಗಳು ತಿಂಗಳು

ಇಡುವವರು ಹೇಳುತ್ತಿರುವರು. ಮರಣಿಸಿದ ಜೀವಿಯು ಒಂದು ಸಂವತ್ಸರಕ್ಕೆ ಯಮ ಲೋಕಕ್ಕೆ ಸೇರುವನೆಂದು, ಆ ದಿನ ಸಂವತ್ಸರದಿನವೆಂದು ಪಿಂಡಾಕೂಳು ಇಡುವುದರಿಂದ ಅವನ ಹಸಿವು ತೀರಿ  ಯಮಲೋಕಕ್ಕೆ ಹೋಗುವನೆಂದು ಕೆಲವರನ್ನುತ್ತಿದ್ದಾರೆ. ಯಮಲೋಕಕ್ಕೆ ಹೋಗುವ ದಾರಿಯಲ್ಲಿ ದೂತರಿಂದ ಬಂದಿತನಾಗಿ ಹೋಗುವವನು ನಾವು ಇಡುವ ಪಿಂಡಕೂಳನ್ನು ಹೇಗೆ ತಿನ್ನುತ್ತಿದ್ದಾನೆಂದು ಪ್ರಶ್ನಿಸಿದರೆ, ಸತ್ತುಹೋದವನು ಕಾಗೆ ರೂಪದೊಂದಿಗೆ ಬಂದು ತಿಂದುಹೋಗುವನೆಂದು ಹೇಳುತ್ತಿದ್ದಾರೆ. ನಿನಗೆ ಈ ವಿಷಯ ಅಷ್ಟು ಮಾತ್ರ ತಿಳಿಯದಾ! ನೀನು ನಿಮ್ಮ ಅಪ್ಪನಿಗಾಗಲಿ, ನಿಮ್ಮ ತಾತನಿಗಾಗಲಿ ಪಿಂಡಕೂಳು ಇಟ್ಟಿಲ್ಲವೆ? ಕಾಗೆಗಳು ತಿಂದು ಹೋಗುವುದು ನೋಡಿಲ್ಲವೇ? ಎಂದು ಮಾತನಾಡುತ್ತಿದ್ದಾರೆ. ಗುಂಟೂರು ತಂಬಾಕು ಗೂಡಿನಲ್ಲಿದ್ದರೂ ಒಂದೇ, ಬಾಯಲ್ಲಿದ್ದರೂ ಒಂದೇ ಎಂದಹಾಗೆ ಕೆಲವರು ಯಾವ ವಿಷಯವನ್ನು ತಿಳಿದುಕೊಳ್ಳದೆ, ತಿಳಿದುಕೊಳ್ಳುವುದಕ್ಕೆ ಪ್ರಯತ್ನವೂ ಮಾಡದೆ, ಎಲ್ಲಿದ್ದರೂ ಹೇಗಿದ್ದರೂ ಸಪ್ಪೆ ರುಚಿ ಇಲ್ಲದ ತಂಬಾಕಿನಂತೆ ಇರುವರು.  ಗುಡಿವಾಡ ತಂಬಾಕು ಗೂಡಿನಲ್ಲಿದ್ದರೂ ಘಾಟೇ ಬಾಯಲ್ಲಿದ್ದರೂ ಘಾಟೇ ಎಂದಹಾಗೆ, ಕೆಲವರು ಪ್ರತಿಯೊಂದು ತಿಳಿದುಕೊಳ್ಳಬೇಕೆಂದು ಘಾಟಾದ ಚುರುಕುತನ ಹೊಂದಿರುವರು. ಅಂಥವರ ಮನಸ್ಸಲ್ಲಿ ಎಷ್ಟೋ ಪ್ರಶ್ನೆಗಳು ಉದ್ಭವಿಸುತ್ತಿರುವವು. ಪ್ರತಿಯೊಂದು ತಿಳಿದುಕೊಳ್ಳಬೇಕೆನ್ನುವ ತಪನೆ ಅವರಿಗಿರುತ್ತದೆ. ಪಿಂಡಕೂಳೆಂದರೆ ಅರ್ಥವೇನು? ಹಿಂಡಾಕೂಳೆನ್ನದೆ ಕೂಳು ಅನ್ನಬಹುದು ಅಲ್ಲವೆ! ಮರಣಿಸಿದವರು ಪಿಂಡಕೂಳನ್ನು ತಿನ್ನುತ್ತಾರಾ? ಹಿಂದೆ ಕರೆದೊಯ್ಯುವ ಯಮಕಿಂಕರರು ಪಿಂಡಕೂಳನ್ನು ತಿನ್ನುವುದಗೋಸ್ಕರ ಏನಾದರೂ ಲಂಚ ತೆಗೆದುಕೊಂಡು ಅವರನ್ನು ಬಿಡುತ್ತಾರಾ? ಮರಣಿಸಿದವನು ಅವನ ಕುಮಾರರು ಇಡುವ ಪಿಂಡಾಕೂಳಿಗೋಸ್ಕರ ಕಾಗೆ ಅವತಾರದಲ್ಲಿ ಏಕೆ ಬರುತ್ತಾನೆ? ಹಾಗೆ ಕಾಗೆ ಅವತಾರವನ್ನು ಎತ್ತಿ ಬಂದು ತಿಂದುಹೋಗುತ್ತಾನೆನ್ನುವುದಕ್ಕೆ ನಾನು ನಿತ್ಯ ನೋಡುವ ಕುಂಟಕಾಗೆ ಸ್ಮಶಾನದಲ್ಲಿ ಎಷ್ಟೋಜನರ ಪಿಂಡಾಕೂಳನ್ನು ತಿಂದಿದೆಯೋ, ಈ ಕುಂಟಕಾಗೆಯನ್ನು ಯಾರೆಂದು ಹೇಳಬೇಕು? ಪ್ರತಿ ದಿನ ಎಷ್ಟೋ ಲಕ್ಷಗಳಲ್ಲಿ ಮನುಷ್ಯರು ಕೆಲವುಕೋಟಿ ಜೀವರಾಶಿಗಳು ಸತ್ತುಹೋಗುತ್ತಿವೆ. ಅವರನ್ನು ಕರೆದುಕೊಂಡು ಹೋಗುವುದಕ್ಕೆ ಒಬ್ಬ ಜೀವಾತ್ಮನಿಗೆ ಇಬ್ಬರು ಯಮಕಿಂಕರರ ಪ್ರಕಾರವಾದರೂ ಯಮಕಿಂಕರರು ಎಷ್ಟು ಕೋಟಿ ಜನರಿರಬೇಕು. ಕರೆದೊಯ್ಯುವವರೆ ಎಷ್ಟೋ ಕೋಟಿಜನರಾದರೆ, ಯಮಲೋಕದಲ್ಲಿ ಪಾಪಗಳನ್ನು ಅನುಭವಿಸುವಹಾಗೆ ಮಾಡುವವರು ಇನ್ನೆಷ್ಟು ಕೋಟಿಜನ ಇರಬೇಕು. ಅಲ್ಲಿರುವ ಯಮಕಿಂಕರರು, ಇಲ್ಲಿಂದ ಹೋದವರು ಎಲ್ಲಾರು ಸೇರಿ ಎಷ್ಟು ಕೋಟಿ ಆಗುತ್ತಾರೆ. ಯಮಲೋಕ ಅಷ್ಟು ವಿಶಾಲವಾಗಿ

ಇದೆಯಾ? ಯಮಕಿಂಕರರು ಜೀವಾತ್ಮನನ್ನು ತೆಗೆದುಕೊಂಡು ಹೋಗುವಾಗ ದಾರಿಯಲ್ಲಿ ಹಸಿವಾಗುತ್ತದೆನ್ನುತ್ತಾರೆ. ಜೀವಾತ್ಮನಿಗೆ ಹಸಿವಾದರೆ ಯಮಬಟರಿಗೂ ಹಸಿವಾಗದೆ ಇರುತ್ತದಾ? ಅವರಿಗೆ ಹಸಿವಾದರೆ ಬುತ್ತಿಯನ್ನು ಏನಾದರು ತಂದುಕೊಂಡಿರುತ್ತಾರಾ? ಇಲ್ಲದೇ ಹೋದರೆ ಜೀವಾತ್ಮನೊಂದಿಗೆ ಅವರು ಸಹ ಕೆಳಗೆ ಬಂದು ಯಾವ ಕೂಳನ್ನಾದರು ತಿಂದುಹೋಗುತ್ತಾರಾ? ಪಿಂಡಾಕೂಳು ಇಡುವವರು ಸತ್ತುಹೋದವನು ಕುಡಕನಾದರೆ ಸಾರಾಯಿಯಾಗಲಿ ಬ್ರಾಂದೀ ಆಗಲಿ ಇಟ್ಟು ಬರುವುದನ್ನು ನೋಡಿದ್ದೇವೆ. ಪಿತರರು ಕಾಗೆಯಾಗಿ ಬಂದರೆ ಅಲ್ಲಿಟ್ಟಿರುವ ಸಾರಾಯಿಯನ್ನು ಏಕೆ ಕುಡಿಯಲಿಲ್ಲ. ನಮ್ಮ ಹಿರಿಯರು ಪಿಂಡಾಕೂಳನ್ನು ತಿನ್ನುವುದಕ್ಕೆ ಬಂದರೆ ಅವರ ಮೇಲೆ ಪ್ರೀತಿ ಇರುವ ನಾವು, ಹೇಗೋ ಆ ಕಾಗೆಯನ್ನು ಹಿಡಿದುಕೊಂಡು ನಮ್ಮ ತಂದೆಯೇ ತಾನೆ! ಎಂದು ಪ್ರೀತಿಯಿಂದ ದಿನಾಲೂ ಒಳ್ಳೆಯ ಭೋಜನ ಇಡಬಹುದಲ್ಲವೆ! ಹಾಗೆ ಹಿಡಿದುಕೊಂಡು ನಮ್ಮ ಹತ್ತಿರವೇ ಇಟ್ಟುಕೊಂಡರೆ ಅವನಿಗೆ ಯಮಲೋಕಕ್ಕೆ ಹೋಗುವ ಬಾಧೆ, ಅಲ್ಲಿ ಪಾಪ ಅನುಭವಿಸುವ ಬಾಧೆಗಳು ಎಲ್ಲ ತಪ್ಪಿ ಹೋಗುತ್ತವಲ್ಲವೆ! ಎಲ್ಲರು ಹಾಗೇಕೆ ಮಾಡದೆ ಇದ್ದಾರೆ? ಬದುಕಿರುವಾಗ ಇಡದ ಮಗ ಸತ್ತುಹೋದನಂತರ ಇಡದೇ ಹೋದರೆ ಏನು? ತಂದೆ ಪ್ರಾಣದಿಂದ ಇರುವಾಗ ಆತನಮೇಲೆ ಇಲ್ಲದ ಪ್ರೇಮ ದಿನಗಳನ್ನು ಮಾಡುವಾಗ ಏಕೆಬರುತ್ತಿದೆ? ಈ ವಿಧವಾಗಿ ಅನೇಕವಾದ ಪ್ರಶ್ನೆಗಳು ಚುರುಕಾದ ಬುದ್ಧಿ ಇರುವವರಲ್ಲಿ ಉದ್ಭವಿಸುತ್ತಿರುವವು. ನಿಜವಾಗಿ ಇಂತಹ ಪ್ರಶ್ನೆಗಳಿಗೆ ಉತ್ತರಗಳಿವೆಯಾ? ಎಂದು ನಾವು ಯೋಚಿಸಬೇಕಾದ ಕೆಲಸವಿದೆ. ಈ ಪದ್ಧತಿ ಪ್ರಕಾರ ಪೂರ್ವದಲ್ಲಿ ಜ್ಞಾನ ತಿಳಿದ ಹಿರಿಯರು ಈ ಸಂಪ್ರದಾಯಗಳಿಟ್ಟಿದ್ದಾರಾ? ಇಟ್ಟರೇ ಯಾವ ಉದ್ದೇಶದಿಂದ ಇಟ್ಟಿದ್ದಾರೆ? ಪಿಂಡಕೂಳನ್ನು ಏಕೆ ಇಡಬೇಕು? ಎಷ್ಟು ದಿನಗಳಿಗೆ ಇಡಬೇಕು? ಈ ಕಾರ್ಯದಲ್ಲಿ ಅಸಲು ಸಾರಾಂಶವಾದ ವಿಷಯವೇನಾದರೂ ಇದೆಯಾ? ಇದು ವಾಸ್ತವಕ್ಕೆ ಇಂದೂ ಸಾಂಪ್ರದಾಯವಾ? ಎಂದು ಯೋಚಿಸಿದರೆ ಏನು ಸಮಾಧಾನ ಸಿಗುತ್ತದೋ ನೋಡೋಣ.

ಪಿಂಡ ಎಂದರೆ ಶರೀರವೆಂದು ಹೇಳಬಹುದು. ಏಕೆಂದರೆ ತಾಯಿ ಗರ್ಭ ದಲ್ಲಿರುವದನ್ನು ಪಿಂಡ ಎನ್ನುತ್ತೇವೆ. ತಾಯಿ ಗರ್ಭದಲ್ಲಿ ಪಿಂಡ ಅಡ್ಡ ತಿರುಗಿದೆಯೆನ್ನುವ ಮಾತು ಸಹ ಕೇಳಿದ್ದೇವೆ. ತಾಯಿ ಗರ್ಭದಿಂದ ಪ್ರಸವಿಸಲ್ಪಟ್ಟ ಶರೀರದಲ್ಲಿ ಆತ್ಮ ಚೈತನ್ಯವಿದ್ದು ಬೆಳೆದು ದೊಡ್ಡದಾಗಿ, ಅನೇಕ ಕರ್ಮಗಳನ್ನು ಆಚರಿಸುವುದು, ಹೊಸದಾಗಿ ಅನೇಕ ಕರ್ಮಗಳನ್ನು ಸಂಘಾದಿಸಿಕೊಳ್ಳುವುದು ಎರಡು ನಡೆಯುತ್ತಿವೆ. ನಡೆಯುತ್ತಿರುವ ಕೆಲಸದಲ್ಲಿ ಎಷ್ಟು ಕರ್ಮ ಬರುತ್ತಿದೆ ಎಂದು ತಿಳಿಯದೆ ಹೋದರು, ಆಗಿನ ಕೆಲಸದಲ್ಲಿ ಅನುಭವಿಸುವುದು

ಮಾತ್ರ ತಿಳಿಯುತ್ತಿದೆ. ಅನುಭವಿಸುವಾಗ ಕೆಲವರು **"ಇದು ನನ್ನಕರ್ಮ"** ಎಂದು ತಿಳಿಯದೇ ಹೇಳುತ್ತಿರುತ್ತಾರೆ. ಹಿಂದಿನ ಜನ್ಮದಲ್ಲಿ ಮಾಡಿಕೊಂಡಿರುವ ಕರ್ಮಗಳನ್ನು ಅನುಭವಿಸುವುದಕ್ಕೇ ನಾವು ಹುಟ್ಟಿದ್ದೇವೆ ಕ್ಷಣ ಕ್ಷಣ ಅನುಭವಿಸುವುದೆಲ್ಲಾ ಕರ್ಮವೇ. ಇರುವ ಕರ್ಮವನ್ನು ಇಲ್ಲದಂತೆ ಮುಗಿಸಿಕೊಳ್ಳುವುದನ್ನು ಅಥವಾ ಅನುಭವಿಸುವುದನ್ನು ಕರ್ಮಾನುಭವವೆನ್ನುತ್ತೇವೆ. ಆಹಾರ ಪದಾರ್ಥಗಳನ್ನು ತಿಂದು ಇಲ್ಲದಂತೆ ಮಾಡಿದಹಾಗೆ ಕರ್ಮಗಳನ್ನು ಅನುಭವಿಸಿ ಇಲ್ಲದಂತೆ ಮಾಡುತ್ತಿದ್ದೇವೆ. ತಿನ್ನುವ ಅನ್ನವನ್ನು ಅಚ್ಚ ಕನ್ನಡ ಭಾಷೆಯಲ್ಲಿ ಕೂಳು ಎನ್ನುತ್ತೇವೆ. ಅನ್ನವನ್ನು ತಿಂದು ಮುಗಿಸಿದ ಹಾಗೆ ಕರ್ಮಗಳನ್ನು ಸಹ ಅನುಭವಿಸಿ ಮುಗಿಸುತ್ತಿದ್ದೇವೆ. ಆದ್ದರಿಂದ ಜೀವಾತ್ಮನು ಪ್ರತಿ ನಿತ್ಯ ಕರ್ಮಗಳನ್ನು ತಿನ್ನುತ್ತಿದ್ದಾನೆಂದು ಪೂರ್ವದಲ್ಲಿ ಹೇಳುತ್ತಿದ್ದರು. ನಾವು ತಿಂದು ಮುಗಿಸುವ ಅನ್ನದೊಂದಿಗೆ ಹೋಲಿಸಿ ಕರ್ಮವನ್ನು ಕೂಳು ಎನ್ನುತ್ತಿದ್ದರು. ಕರ್ಮಗಳೆಲ್ಲವನ್ನು ಸಜೀವವಾದ ಶರೀರವೇ ಅನುಭವಿಸಬೇಕಾಗಿರುತ್ತದೆ. ಆದ್ದರಿಂದ ಶರೀರವನ್ನು ಪಿಂಡವೆಂದು, ಅನುಭವಿಸುವ ಕರ್ಮಗಳನ್ನು ಕೂಳು ಎಂದು, ಒಬ್ಬ ಮನುಷ್ಯನ ಕರ್ಮವನ್ನು ಪಿಂಡಾಕೂಳೆಂದು ಕರೆಯುತ್ತಿದ್ದರು. ಶರೀರದಿಂದ ಅನುಭವಿಸುವ ಕರ್ಮವನ್ನು ತಿಳಿದ ಹಿರಿಯರು ಪಿಂಡಾಕೂಳು ಎನ್ನುತ್ತಿದ್ದರು. ಈ ಕಾಲದಲ್ಲಿ ಸಹ ಸಂದರ್ಭಾನುಸಾರ ನಿನ್ನ ಪಿಂಡಾಕೂಳು ಎನ್ನುವುದು ನಡೆಯುತ್ತಿದೆ. ನಿತ್ಯ ಪ್ರತಿ ಜೀವಿ ಅನುಭವಿಸುವ ಕರ್ಮವನ್ನೇ ಪಿಂಡಾಕೂಳು ಎಂದಿರುವುದು ನಡೆದಿದೆ. ಇಂದಿಗೂ ಆಗಾಗ ಅದು ನಿನ್ನ ಕರ್ಮ ಎನ್ನುವುದಕ್ಕೆ ಬದಲು, ನಿನ್ನ ಪಿಂಡಾ ಕೂಳು ಎಂದು ಸ್ವತಃ ನಾವೇ ಎನ್ನುತ್ತಿರುವೆವು. ಕೆಲವರು ತಿಳಿಯದೆಯೂ ಹೇಳುತ್ತಿರುವರು.

ಒಬ್ಬ ವ್ಯಕ್ತಿ ಮರಣಿಸಿದ ನಂತರ ಬಾಹ್ಯಾರ್ಥವಾಗಿ ಪಿಂಡಾಕೂಳನ್ನು ಇಡುವುದು ಪೂರ್ವದಿಂದ ನಡೆಯುವ ಸಾಂಪ್ರದಾಯವೇ. ಆದರೆ ಪೂರ್ವದಲ್ಲಿ ಸತ್ತುಹೋದ ವ್ಯಕ್ತಿಗಳೆಲ್ಲರಿಗು ಪಿಂಡಾಕೂಳು ಇಡುವವರಲ್ಲ. ಭಗವದ್ಗೀತೆಯಲ್ಲಿ ಹೇಳಿದಹಾಗೆ ಮರಣಿಸಿದವನು ತನ್ನ ಜೀವನದಲ್ಲಿ ಯೋಗಿಯಾಗಿದ್ದು ಮೋಕ್ಷಾಸಕ್ತನಾಗಿ ಇದ್ದರೆ, ಅವನ ಮರಣ ಹಗಲು ಶುಕ್ಲಪಕ್ಷ ಉತ್ತರಾಯಣವಾಗಿ ಸೂರ್ಯರಶ್ಮಿ ಇದ್ದಾಗ ಮರಣಿಸಿದರೆ, ಮತ್ತೆ ಹುಟ್ಟುವುದಿಲ್ಲವೆಂದು, ಅವನು ಮೋಕ್ಷ ಹೊಂದಿ ದೇವರಲ್ಲಿ ಐಕ್ಯವಾಗಿದ್ದಾನೆಂದು ಭಾವಿಸುತ್ತಿದ್ದರು. ಅಂತಹವನಿಗೆ ಕರ್ಮ ಇಲ್ಲವೆಂದು, ಅವನು ಇನ್ನೂ ಮುಂದೆ ಹುಟ್ಟುವುದಿಲ್ಲವೆಂದು ತಿಳಿಸುವ ಸಲುವಾಗಿ, ಕರ್ಮ ತಂತ್ರ ಎನ್ನುವ ಹೆಸರೊಂದಿಗೆ ಪಿಂಡಾಕೂಳು ಇಡುವುದು ನಡೆದಿದೆ. ಸಜೀವದೊಂದಿಗಿರುವ ಪ್ರತಿ ಜೀವಿಗು ನವಗ್ರಹ ಗಳಿಂದಲೇ ಕರ್ಮ ಆಚರಣೆಗೆ ಬರುತ್ತಿದೆ. ಮೋಕ್ಷ ಹೊಂದಿದವನಿಗೆ ನವಗ್ರಹಗಳೊಂದಿಗೆ

ಸಂಬಂಧ ಇಲ್ಲದಂತೆ ಹೋಗುವುದು. ಬದುಕಿರುವಾಗ ಕರ್ಮವನ್ನು ಒದಗಿಸುವ ನವಗ್ರಹಗಳು ಮೋಕ್ಷ ಹೊಂದಿದವನಿಗೆ ಕರ್ಮ ಇಲ್ಲದಂತೆ ಹೋಗುವುದರಿಂದ ಅವನನ್ನು ಏನೂ ಮಾಡಲಾರವು, ಜನ್ಮಕ್ಕೆ ತರಲಾರವು. ಆದ್ದರಿಂದ ಕರ್ಮದಿಂದ ಬಿಡುಗಡೆ ಆದವನೆಂದು ತಿಳಿಸುವ ಸಲುವಾಗಿ, ಮೋಕ್ಷ ಹೊಂದಿದವನಿಗೆ ಒಂಬತ್ತನೆ ದಿನದಲ್ಲಿ ಕರ್ಮ ತಂತ್ರಗಳು ಮಾಡುತ್ತಿದ್ದರು.

ಮೋಕ್ಷ ಹೊಂದಿದವನಿಗೆ ಕರ್ಮ ಇಲ್ಲವೆಂದು ತಿಳಿಸುವ ಸಲುವಾಗಿ, ಮರಣಿಸಿದ ದಿನದಿಂದ ಸರಿಯಾಗಿ ಒಂಬತ್ತನೇ ದಿನದಲ್ಲಿ ಕರ್ಮದೊಂದಿಗೆ ಸಮಾನವಾದ ಅನ್ನವನ್ನು ಅಂದರೆ ಪಿಂಡಾಕೂಳೆಂದು ಹೆಸರಿಟ್ಟಿರುವ ಅನ್ನವನ್ನು, ಬಯಲು ಪ್ರಾಂತದಲ್ಲಿ ಇಟ್ಟು ಜಂತುಗಳಾಗಲಿ, ಪಕ್ಷಿಗಳಾಗಲಿ ತಿನ್ನುವಹಾಗೆ ಇಟ್ಟು, ಇಟ್ಟಿರುವ ಪಿಂಡಾಕೂಳನ್ನು ಇಲ್ಲದಂತೆ ಮಾಡುತ್ತಿದ್ದರು. ಹಾಗೆ ಮಾಡುವುದರಲ್ಲಿ ಪಿಂಡಾಕೂಳೆನ್ನುವ ಕರ್ಮ ಇನ್ನು ಇಲ್ಲವೆಂದು ಬಾಹ್ಯಾರ್ಥವಾಗಿ ತಿಳಿಯುವುದಕ್ಕೆ ಪಿಂಡಾಕೂಳನ್ನು ಇಲ್ಲದೇ ಮಾಡುತ್ತಿದ್ದರು. ಮೋಕ್ಷ ಹೊಂದಿದವನಿಗೆ ಇಟ್ಟಿರುವ ಕೂಳನ್ನು ಇತರ ಯಾವ ಜೀವಿರಾಶಿಯಾದರು ತಿನ್ನಬಹುದು. ಒಂದು ಕಾಗೆಗಳೆ ತಿನ್ನಬೇಕೆಂದು ಹೇಳಿಕೊಳ್ಳುವುದು ತಪ್ಪು. ಪೂರ್ವದ ಹಿರಿಯರು ಇಟ್ಟಿರುವ ಆಚಾರಗಳೆಲ್ಲವು ದಾರಿ ತಪ್ಪಿ ಅಧರ್ಮಗಳಾದ ಹಾಗೆ, ಈ ವಿಷಯವು ಸಹ ಕಾಲಗಮನದಲ್ಲಿ ತಿಳಿಯದೇ ಹೋಗಿ, ಸತ್ತುಹೋದ ಹಿರಿಯರು ಕಾಗೆಗಳ ರೂಪದಲ್ಲಿ ಬಂದು ಆಹಾರ ತಿಂದು ಹೋಗುವರೆನ್ನುವುದು ಬರೀ ಕಟ್ಟು ಕಥೆ ಹೊರತು ಅದರಲ್ಲಿ ಸತ್ಯವಿಲ್ಲ. ಸತ್ತುಹೋದವನು ತಿರುಗಿ ಕಾಗೆಯಾಗಿ ಬರುವುದು ಅಸಂಭವ, ಅಸತ್ಯ. ಈ ವಿಷಯವಾಗಿ ವೇಮನ ಯೋಗಿ ಸಹ ವ್ಯತಿರೇಖಿಸುತ್ತಾ ಹೀಗೆ ಹೇಳಿದ್ದಾನೆ.

***ಪಿಂಡಗಳನ್ನು ಮಾಡಿ ಪಿತ್ರರೆಂದು ತಿಳಿದು***
***ಕಾಗೆಗಳಿಗೆ ಇಡುವ ಕತ್ತೆಗಳಿರಾ***
***ಹೊಲಸು ತಿನ್ನುವ ಕಾಗೆ ಪಿತ್ರರು ಹೇಗಾಯಿತು***
***ವಿಶ್ವದಾಭಿರಾಮ ಕೇಳೊ ವೇಮಾ.***

ಈ ಕಾಲದಲ್ಲಿ ಮರಣಿಸಿದ ಹಿರಿಯರನ್ನು ಕಾಗೆಗಳಾಗಿ ಹೋಲಿಸುವುದು, ಆ ಕಾಗೆಗಳಿಗೆ ಪಿಂಡಾಕೂಳು ಇಡುವುದನ್ನು ನೋಡಿ ಅಂತಹವರನ್ನು ಕತ್ತೆಗಳಾ ಎಂದು ಬಯ್ಯುತ್ತಾ ಮಲವನ್ನು ತಿನ್ನುವ ಕಾಗೆ ಪಿತ್ರುಗಳು ಹೇಗಾಗುವರೆಂದು ಪ್ರಶ್ನಿಸಿದ್ದಾನೆ. ಈ ಪದ್ದತಿ ತಪ್ಪೆಂದು ವೇಮನಯೋಗಿ ಸಹ ತನ್ನ ಪದ್ಯದಲ್ಲಿ ಹೇಳಿದ್ದಾನೆ. ಕರ್ಮವನ್ನು ಸೂಚಿಸುವ ಕೂಳನ್ನು ಇಲ್ಲದಂತೆ ಮಾಡುವುದು ಪದ್ಧತಿಯಾಗಲಿ, ಕಾಗೆಗಳೇ

ತಿನ್ನಬೇಕೆನ್ನುವುದು ಪದ್ಧತಿಯಲ್ಲ. ಅಲ್ಲಿಟ್ಟಿರುವ ಆಹಾರವನ್ನು ಪಕ್ಷಿಗಳು ತಿನ್ನಬಹುದು ಜಂತುಗಳು ತಿನ್ನಬಹುದು. ಈ ಪದ್ದತಿ ಬಯಲು ಪ್ರಾಂತದಲ್ಲಿ ಆಚರಿಸುವವರಿಗಲ್ಲದೆ, ನದಿ ದಡದಲ್ಲಿ ಕರ್ಮ ತಂತ್ರಗಳು ಮಾಡುವವರು ನದಿಯಲ್ಲಿ ಬೆರೆಸುವರು. ಪಿಂಡವೆಂದರೆ ಶರೀರವೆಂದಿದ್ದೇವೆ ಅಲ್ಲವೆ ಸತ್ತವನು ಮೋಕ್ಷ ಹೊಂದಿದ್ದಾನೆ. ಅವನಿಗಿನ್ನು ಶರೀರ ಅವಶ್ಯವಿಲ್ಲವೆಂದು, ಪಿಂಡಾಕೂಳೆನ್ನುವ ಹೆಸರನ್ನಿಟ್ಟು ಮಾಡುವುದು ಒಳ್ಳೆಯದೇ ಆಗಲಿ, ಸತ್ತುಹೋದವನು ಮೋಕ್ಷಕ್ಕೆ ಹೋಗದಿದ್ದರು, ಅವನು ಅಜ್ಞಾನಿಯಾದರು, ಅವನಿಗೆ ಕರ್ಮತಂತ್ರಗಳು ಮಾಡುವುದು ವಿಡ್ಡೂರವಲ್ಲವೆ! ನವಗ್ರಹಗಳ ಜೋಕ್ಯ ಇವನಮೇಲೆ ಇರುವುದಿಲ್ಲವೆಂದು ಒಂಬತ್ತನೇದಿನ ಕರ್ಮ ತಂತ್ರಗಳನ್ನು ಪೂರ್ವದಲ್ಲಿ ಮಾಡಿದರೆ, ಈ ದಿನ ಒಂದು ಪದ್ದತಿ ಎನ್ನುವುದು ಇಲ್ಲದೇ ಹನ್ನೊಂದನೇದಿನ ಕೆಲವರು, ಹದಿನಾರನೆ ದಿನವೆಂದು ಕೆಲವರು, ಐದನೇ ದಿನವೆಂದು ಕೆಲವರು, ಮೂರನೆದಿನವೆಂದು ಕೆಲವರು, ಎಲ್ಲದಕ್ಕಿಂತ ಮುಖ್ಯ ಸಂವತ್ಸರ ದಿನವೆಂದು ಕೆಲವರು ಮಾಡುವುದು ವಿಚಿತ್ರವಲ್ಲವೆ! ಶರೀರ ಅನುಭವಿಸುವ ಕರ್ಮವನ್ನು ಪಿಂಡಾಕೂಳೆಂದು ಹೆಸರಿಟ್ಟು ಬಾಹ್ಯಾರ್ಥವಾಗಿ ಪೂರ್ವದಲ್ಲಿ ಮಾಡಿದರೆ, ಈ ದಿನ ಪಿಂಡಾಕೂಳೆಂದು ಸಾರಾ ಬ್ರಾಂದೀ, ಬೀಡಿ ಸಿಗರೆಟು ಇಡುವುದು ವಿಚಿತ್ರ ತಾನೆ! ತಿರುಗಿ ಜನ್ಮ ಹೊಂದದ ಸ್ಥಿತಿಗೆ ಸೇರಿಕೊಂಡಿದ್ದಾನೆಂದು, ಮೋಕ್ಷ ಹೊಂದಿದವನಿಗೆ ಮಾಡಿದ ವಿಧಾನವನ್ನು ಮರೆತು, ಯಮಲೋಕಕ್ಕೆ ಯಮಭಟರಿಂದ ಕರೆದೊಯ್ಯುವನೆಂದು ಹೇಳುವುದು ಅಜ್ಞಾನ ಅಲ್ಲವೆ! ಬಯಲಲ್ಲಾದರೆ ಇತರ ಜಂತುಗಳು ಪಕ್ಷಿಗಳು ಪಿಂಡಾಕೂಳನ್ನು ತಿನ್ನುವುದು, ನೀರಲ್ಲಾದರೆ ಜಲಚರಗಳು ತಿಂದು ಅಲ್ಲಿ ಇಟ್ಟಿರುವುದು ಇಲ್ಲದೇ ಹೋಗುತ್ತಿದೆ. ಶರೀರಕ್ಕಿರುವ ಕರ್ಮ ಹೋಗಿದೆಯೆಂದು ಪಿಂಡಾಕೂಳು ಇಟ್ಟರೆ, ಯಾರ ಹೆಸರಿಂದ ಇಟ್ಟಿದ್ದೇವೋ ಅವನೆ ಮತ್ತೆ ಬಂದು ತಿನ್ನುತ್ತಾನೆ ಎನ್ನುವುದು ಸಮಂಜಸವೇನಾ!

ಶರೀರವನ್ನು ಪಿಂಡವೆಂದು, ಶರೀರ ಅನುಭವಿಸುವ ಕರ್ಮವನ್ನು ಪಿಂಡಾಕೂಳೆಂದು, ಕರ್ಮ ಶೇಷವಿಲ್ಲದೆ ಮುಗಿದೋಗುವುದು ಪಿಂಡಾಕೂಳಿಲ್ಲದೆ ಹೋಗುವುದೆಂದು, ನವಗ್ರಹಗಳ ಅಧಿಕಾರವಿನ್ನು ಇಲ್ಲವೆಂದು ತಿಳಿಸುವುದು ಸತ್ತದಿನದಿಂದ ಒಂಬತ್ತು ದಿನಗಳಿಗೆ ದಿವಸಗಳು ಮಾಡುವುದೆಂದು, ಮಾಡಬೇಕಾಗಿರುವುದು ಮೋಕ್ಷಹೊಂದಿದವನಿಗೆಂದು, ಮಾಡುವವರು ಜ್ಞಾನ ತಿಳಿದವರು ಯಾರಾದರೂ ಆಗಬಹುದೆಂದು ಹಿರಿಯರು ತಿಳಿಸಿರುವಾಗ, ಮಕ್ಕಳೇ ಈ ತಂತು ಮಾಡಬೇಕೆಂದು, ಪುತ್ರರಿಂದ ವಂಶಸ್ಥರಿಂದ ಮಾಡಿಸುವುದು ಅಜ್ಞಾನವೇ ಆಗುತ್ತದೆ. ಹೋದವನು ಮೋಕ್ಷಕ್ಕೆ

ಹೋಗಿದ್ದಾನೆಂದು ತಿಳಿಸುವುದಕ್ಕೆ, ಅಷ್ಟೋ ಇಷ್ಟೋ ಜ್ಞಾನ ತಿಳಿದವರು ಈ ವಿಧಾನವಿದುಯೆಂದು ತಿಳಿಸುತ್ತಾ ಹೋದರೆ, ಈ ಸಾಂಪ್ರದಾಯ ಎಲ್ಲರಿಗೂ ತಿಳಿದಿರುತ್ತಿತ್ತು. ಈ ಕಾಲದಲ್ಲಿ ಮಾಡಬೇಕೆನ್ನುವುದು ಇದೆ, ಆದರೆ ಏಕೆ ಮಾಡಬೇಕು, ಹೇಗೆ ಮಾಡಬೇಕೆನ್ನುವ ವಿವರ ಪೂರ್ತಿ ಇಲ್ಲದಂತಾಗಿದೆ. ಈಗಲಾದರೂ ಜೀವನದಲ್ಲಿ ಜ್ಞಾನ ಯೋಗ ತಿಳಿದು ಮೋಕ್ಷವನ್ನು ಹೊಂದಬೇಕೆನ್ನುವ ಉದ್ದೇಶ ಇರುವವರು ಮರಣಿಸಿದರೆ, ಭಗವದ್ಗೀತೆಯಲ್ಲಿ ಹೇಳಿದಹಾಗೆ ಕಾಲ ಸೂತ್ರ ಅವರಿಗೆ ಅನ್ವಯಿಸಿದರೆ, ಅಂಥವರಿಗೆ ಸ್ವಲ್ಪ ಜ್ಞಾನ ತಿಳಿದ ಬ್ರಾಹ್ಮಣರಿಂದಾಗಲಿ, ಗುರುಗಳಾದವರಿಂದಾಗಲಿ, ಈ ವಿಧಾನ ಮಾಡಿಸಿ ಅವನು ಇಂತಹ ಸ್ಥಿತಿಗೆ ಸೇರಿಕೊಂಡಿದ್ದಾನೆಂದು ಹೊರಗೆ ತಿಳಿಸಬೇಕು. ಹಾಗಲ್ಲದೆ ಸಾಧಾರಣ ಅಜ್ಞಾನಿಗಳೆಲ್ಲರಿಗೂ ದಿವಸಗಳನ್ನು ಮಾಡುವುದು, ಪಿಂಡಾಕೂಳು ಇಡುವುದನ್ನು ಮಾಡಬಾರದು. ಮಾಡದಿದ್ದರೇ ಇವನ ಪೀಡೆ ನಮಗಂಟುತ್ತದೆಂದುಕೊಂಡು, ತಪ್ಪದೆ ಮಾಡಿ ಈ ಪೀಡೆ ಇಲ್ಲಿಗೆ ಹೋಗಲಿ ಎಂದು ಸ್ನಾನಮಾಡಿ ಬರುವುದು ಸಾಂಪ್ರದಾಯ ವಿರುದ್ಧವಾಗುತ್ತದೆ. ಪೂರ್ವದ ಹಿರಿಯರು ಈ ಕಾರ್ಯವನ್ನು ಪವಿತ್ರವಾಗಿ ಆಚರಿಸಬೇಕೆಂದಿದ್ದಾರೆ ಆದರೆ, ಅಪವಿತ್ರ ಪೀಡೆ ಪಿಶಾಚಿ ಎಂದು ಮಾಡಬಾರದು. ಇಷ್ಟು ಹೇಳಿದರೂ ಕೆಲವರಿಗೆ ಅನುಮಾನ ಪೀಡಿಸುತ್ತಾ ಇದು ನಿಜವೇನಾ, ಈಗ ಇಷ್ಟು ಜನಕ್ಕೆ ಇಷ್ಟು ದೊಡ್ಡವರಿಗೆ ತಿಳಿಯದೇ ಇರುತ್ತದಾ, ಎಂದುಕೊಂಡರೆ ನಾವೇನೂ ಹೇಳಲಾರೆವು.

**928.** **(8) ಪ್ರಣವ ಎಂದರೇನು?**

ಉ. ಪರಮಾತ್ಮ.

**ವಿವರ :** ಪ್ರಣವವೆಂದರೆ ಮೊದಲನೆಯದೆಂದು, ಎಲ್ಲದಕ್ಕಿಂತ ಮುಖ್ಯವಾದುದೆಂದು, ಸಮಸ್ತಕ್ಕೂ ದೊಡ್ಡದೆಂದು ಹೀಗೆ ಎಷ್ಟೋ ಅರ್ಥಗಳು ಹೇಳಿಕೊಳ್ಳಬಹುದು. ಪರಮಾತ್ಮ ಆದವನೇ ಮೊದಲನೆಯವನು, ಮುಖ್ಯವಾದವನು, ದೊಡ್ಡವನು. ಪರಮಾತ್ಮಕ್ಕೆ ಗುರುತಾಗಿ ಒಂದು ಬೀಜಾಕ್ಷರವನ್ನು ಪ್ರಪಂಚದಲ್ಲಿ ತೋರಿಸಿದ್ದಾರೆ. ಅದೇ "ಓಂ" ಎನ್ನುವುದು. ಓಂ ಅನ್ನು ಪ್ರಣವವೆನ್ನಬಹುದು. ಪರಮಾತ್ಮ ಎಲ್ಲರಿಗಿಂತ ಮೀರಿರುವುದೆಂದು, ಅದನ್ನು ಪ್ರಕೃತಿ ಏನು ಮಾಡಲಾರದೆಂದು, ಪ್ರಕೃತಿಗೆ ನಾಶವಾಗದೆಂದು, ತಿಳಿಸುವುದಕ್ಕೆ ಕ್ಷರಗಳಾದ ಚರ ಪ್ರಕೃತಿಗೆ ಬೀಜಾಕ್ಷರಗಳಾದ ನಮಃ ಶಿವಾಯಕ್ಕೆ ಮೊದಲು ಓಂ ನಿಟ್ಟು, ಇದು ಪಂಚಗಳಿಗೆ ನಾಶವಾಗದೆಂದು ಪಂಚಾಕ್ಷರಿ ಎಂದಿದ್ದಾರೆ. ಪಂಚಾಕ್ಷರಿ ಎನ್ನುವ ಹೆಸರು ಬಹಳ ಸಲ ನಾವು ಕೇಳುತ್ತಿದ್ದರೂ, ಅದನ್ನು "ಓಂ ನಮಃ ಶಿವಾಯ" ಎನ್ನುವ ರೂಪವಾಗಿ

ನೋಡುತ್ತಿದ್ದರೂ ಇದು ಪರಮಾತ್ಮನ ಹಿರಿಮೆಯನ್ನು, ನಾಶವಿಲ್ಲದ ತನವನ್ನು ತೋರಿಸುವ ಗುರುತೆಂದು ತಿಳಿಯದೆ ಇದನ್ನು ಮಂತ್ರವಾಗಿ ಹೋಲಿಸಿಕೊಂಡು ಜಪಿಸುತ್ತಿದ್ದಾರೆ. ಇದು ಜಪಿಸತಕ್ಕದಲ್ಲವೆಂದು, ಐದು ಕ್ಷರಗಳಿಗೆ ಅಕ್ಷರವಾಗಿದೆಯೆಂದು, ಐದಕ್ಕು ನಾಶವಿಲ್ಲದ ಪಂಚಾಕ್ಷರಿ ಎಂದು ಗುರ್ತಿಸದೇ ಹೋಗಿದ್ದಾರೆ. ಕೆಲವರು ತಿಳಿದು ತಿಳಿಯದ ಹಿರಿಯರು ಇದು ಐದು ಅಕ್ಷರಗಳ ಮಂತ್ರವೆಂದು ಆದ್ದರಿಂದ ಪಂಚಾಕ್ಷರಿ ಎಂಬ ಹೆಸರು ಬಂದಿದೆಯೆಂದು ಅನ್ನುತ್ತಿದ್ದಾರೆ. ಅವರು ಹೇಳುವ ಮಾತು ತಪ್ಪೆಂದು, ಪಂಚಾಕ್ಷರಿಯನ್ನು ಲೆಕ್ಕಿಸಿ ನೋಡಿದರೂ ಆರು ಅಕ್ಷರಗಳು ಇವೆಯೆಂದು ಗಮನಿಸದೆ ಹೋಗಿದ್ದಾರೆ. ಭಾಷೆಗೆ ಸಂಬಂಧಿಸಿದ ಅಕ್ಷರಗಳಾಗಿ ಗುರುತಿಸಿಕೊಳ್ಳದೆ, ಭಾವಕ್ಕೆ ಸಂಬಂಧಿಸಿದ ಸೂಕ್ಷ್ಮವಾದ ಪರಮಾತ್ಮನಿಗೆ ಸಂಬಂಧಿಸಿದ ಅರ್ಥದಿಂದ ಕೂಡಿಕೊಂಡ ಭಾವವೆಂದು ತಿಳಿಯಬೇಕು. ಇಂದಿನಿಂದಾದರು ಪರಮಾತ್ಮನನ್ನು ಪಂಚಾಕ್ಷರಿಯಾದ ಪ್ರಣವವಾಗಿ, ಪ್ರಣವಕ್ಕೆ ಭಾಷಾ ಗುರುತಾದ ಓಂ ಬೀಜಾಕ್ಷರವೆಂದು ತಿಳಿಯಬೇಕಾಗಿದೆ.

**929. (9) ಆದಿ ಮಧ್ಯಾಂತ ರಹಿತ, ಪ್ರಭು, ಪುರುಷೋತ್ತಮ, ಪರಂಧಾಮ, ಪರಮಾತ್ಮ, ಖುದಾ, ಅವ್ಯಕ್ತಾ, ರಾಜಾ, ಪರಬ್ರಹ್ಮ ಎನ್ನುವಹಾಗೆ ಪರಮಾತ್ಮನನ್ನು ಹೇಳುವುದಕ್ಕೆ ಮತ್ತ್ಯಾವುದಾದರು ಪದವಿದೆಯಾ? ಯಾವುದು?**

ಉ. ಇದೆ, ದೊಡ್ಡವ (ಹಿರಿಯನು).

**ವಿವರ :** ಆದಿ ಮಧ್ಯಾಂತ ರಹಿತ ಎಂದರೆ ಮೊದಲು, ಮಧ್ಯೆ, ಕೊನೆ ಎನ್ನುವುದು ಇಲ್ಲದವನೆಂದು ಅರ್ಥ. ಮತ್ತೊಂದು ವಿಧವಾಗಿ ಹುಟ್ಟುವಿಕೆ ಎಂದರೆ ಮೊದಲು, ಬೆಳೆಯುವುದು ಎಂದರೆ ಮಧ್ಯೆ, ಮರಣ ಎಂದರೆ ಕೊನೆ ಎನ್ನುವವು ಇಲ್ಲದವನೆಂದು ಅರ್ಥ. ಇದನ್ನೇ ಸಾವು ಹುಟ್ಟುಗಳು ಇಲ್ಲದವನೆಂದು ಒಂದೇ ಮಾತಲ್ಲಿ ಹೇಳಬಹುದು. ಆದಿ ಮಧ್ಯಾಂತರಹಿತ ಎನ್ನುವುದು ಹೆಸರಲ್ಲವೆಂದು, ದೈವವೊಂದರ ಹಿರೆಮೆಯನ್ನು ಆತನವೊಂದರ ಸ್ಥಿತಿಯನ್ನು ತಿಳಿಸುತ್ತಿದೆಯೆಂದು ತಿಳಿಯುತ್ತಿದೆ. ಪ್ರಭು ಎಂದರೆ "ಭು" ಎಂದರೆ ಹುಟ್ಟಿರುವುದು "ಪ್ರ" ಎಂದರೆ ಮುಖ್ಯವಾದದ್ದು, ಸಾರಾಂಶವಾದದ್ದು, ದೊಡ್ಡದು ಎನ್ನುವ ಅರ್ಥ ಇದೆ. ಹುಟ್ಟಿದವುಗಳಿಗೆಲ್ಲ ಅತೀತವಾದುದು, ಸೃಷ್ಟಿಗೆಲ್ಲಾ ಮುಖ್ಯವಾದುದು ಮತ್ತು ದೊಡ್ಡದು, ಸಾರಾಂಶ ಇರುವುದೆಂಬ ಅರ್ಥವಿದೆ ಆದ್ದರಿಂದ ಪ್ರಭು ಎನ್ನುವುದು ಸಹ ಹೆಸರಲ್ಲ.

ಸೃಷ್ಠಿ ಎಲ್ಲದಕ್ಕು ಕ್ಷರನು ಅಕ್ಷರನೆನ್ನುವ ಪುರುಷರಿರುವಾಗ, ಅವರಿಬ್ಬರಿಗಿಂತಲೂ ಅತೀತವಾದ, ಅನ್ಯವಾದ, ಉತ್ತಮವಾದವನು ಪರಮಾತ್ಮ ಆದ್ದರಿಂದ ಅದೇ

ಅರ್ಥದೊಂದಿಗೆ ಪುರುಷೋತ್ತಮ ಎಂದಿದ್ದಾರೆ. ಪುರುಷೋತ್ತಮ ಎನ್ನುವುದು ಸಹ ಹೆಸರಲ್ಲವೆಂದು, ಆತನ ಸ್ಥಾನವನ್ನು ತಿಳಿಸುವ ಪದವೆಂದು ತಿಳಿಯಬೇಕು. ಪರಮಾತ್ಮನಿಗೆ ಒಂದು ನಿವಾಸ ಸ್ಥಳವೆನ್ನುವುದು ಇಲ್ಲ. ಒಂದು ಊರಂತು ಇಲ್ಲದ ಆತ ವಿಶ್ವವೆಲ್ಲಾ ವ್ಯಾಪಿಸಿದ್ದಾನೆ. ಒಂದು ಸ್ಥಳ ಊರು ಇಲ್ಲದವನು ಆದ್ದರಿಂದ ನಿವಾಸಕ್ಕೆ ಅತೀತವಾದವನಾ ಎಂದು ಅರ್ಥಬರುವಂತೆ ಪರಂಧಾಮ ಎಂದಿದ್ದಾರೆ. ಪರಂಧಾಮ ಎನ್ನುವುದು ಸಹ ಆತನ ವ್ಯಾಪಕವನ್ನು ತಿಳಿಸುವ ಪದವೇ ಆಗಲಿ ಒಂದು ಹೆಸರಲ್ಲ. ಆತ್ಮ ಜೀವಾತ್ಮರು ಪರಮಾತ್ಮ ಅಂಶದಿಂದ ಇವೆ. ಜೀವಾತ್ಮಗಿಂತಲೂ ಆತ್ಮ ಎಷ್ಟೋ ದೊಡ್ಡದಾದರೆ, ಆತ್ಮಗಿಂತಲೂ ಬೇರೆಯಾದವನು ಪರಮಾತ್ಮ. ಪರ ಎಂದರೆ ಬೇರೆಎಂದು ಅರ್ಥ. ಪರಮಾತ್ಮ ಎಂದರೆ ಆತ್ಮನು ಸಹ ಅಲ್ಲದೆ ಅದಕ್ಕಿಂತ ಬೇರೆಯಾಗಿರುವವನೆನ್ನುವ ಅರ್ಥ ಪರಮಾತ್ಮ ಎನ್ನುವ ಈ ಪದವೂ ಸಹ ಹೆಸರು ಅಲ್ಲವೆಂದು ತಿಳಿಯಬೇಕು.

ಪ್ರಪಂಚದಲ್ಲಿ ಎಲ್ಲರನ್ನು ಆಡಿಸುವುದನ್ನು, ಕೆಲಸ ಮಾಡಿಸುವುದನ್ನು ವಿಧಿ ಅಥವಾ ಕರ್ಮ ಎಂದು ಕರೆಯುತ್ತೇವೆ. ಯಾರು ಸಹ ತಾನು ಸ್ವತಃವಾಗಿ ಯಾವ ನಿರ್ಣಯ ತೆಗೆದುಕೊಳ್ಳಲಾರನು, ಯಾವ ಕೆಲಸವನ್ನು ಮಾಡಲಾರನು. ಎಲ್ಲರೂ ಕರ್ಮಾಧೀನದಲ್ಲಿದ್ದು ಅದರ ಪ್ರಕಾರ ನಡಿಯಬೇಕಾಗಿದೆ. ಪರಮಾತ್ಮ ಒಬ್ಬನು ಮಾತ್ರ ಕರ್ಮಾಧೀನದಲ್ಲಿಲ್ಲ. ಎಲ್ಲರನ್ನು ಆಡಿಸಿದಹಾಗೆ ಕರ್ಮ ಪರಮಾತ್ಮನನ್ನು ಆಡಿಸಲಾರದು. ಪರಮಾತ್ಮ ಅಧೀನದಲ್ಲಿ ಕರ್ಮ ಇದೆ, ಆದರೆ ಅದರ ಅಧೀನದಲ್ಲಿ ಆತನಿಲ್ಲ. ಏನಾದರು ಮಾಡಬೇಕಾಗಿಬಂದರೆ ಪರಮಾತ್ಮಯೇ ಸ್ವತಃವಾಗಿ ನಿರ್ಣಯ ತೆಗೆದುಕೊಂಡು, ತಾನೇ ಸ್ವತಃವಾಗಿ ಮಾಡಬಲ್ಲನು. ಯಾವುದನ್ನಾದರೂ ತಾನೇ ಖುದ್ದಾಗಿ ಮಾಡಬಲ್ಲನು ಆದ್ದರಿಂದ ಇಂತಹವನೆಂದು ತಿಳಿಸುವ ಸಲುವಾಗಿ ಆತನನ್ನು ಖುದಾ ಎಂದಿದ್ದಾರೆ. ಖುದಾ ಎನ್ನುವುದು ಸ್ವಯಂ ನಿರ್ಣಯಾಧಿಕಾರನೆಂದು ತಿಳಿಸುವ ಪದ ಆದರೆ ಹೆಸರಲ್ಲ.

ಪರಮಾತ್ಮ ಕಾಣಿಸುವವನಲ್ಲ, ಕೇಳಿಸುವವನಲ್ಲ, ಯಾವ ಇಂದ್ರಿಯಗಳಿಗೂ ತಿಳಿಯದ ಇಂದ್ರಿಯಾತೀತನು. ಶರೀರದಿಂದಿರುವವನು ಯಾರಾದರಾಗಲಿ ಯಾವ ಸಾಧನೆಯಿಂದಾಗಲಿ ಆತನನ್ನು ತಿಳಿಯಲಾರನು. ಯೋಗಿಗಳಿಗು ಸಹಿತ ವ್ಯಕ್ತವಾಗದವನು. ಪ್ರಪಂಚವೆಲ್ಲಾ ವ್ಯಾಪಿಸಿ ನಮಗೆ ಹೊರಗೆ, ನಮ್ಮ ಮುಂದೆ, ನಮ್ಮೊಳಗು ಸಹ ಇರುವ ಪರಮಾತ್ಮ ಯಾರಿಗೂ ಯಾವ ವಿಧವಾಗಿ ಗೋಚರವಾಗದವನು. ಆದ್ದರಿಂದ ಆತನನ್ನು ಅವ್ಯಕ್ತಾ ಎಂದಿದ್ದಾರೆ. ಈ ಪದವೂ ಸಹ ಆತನವೊಂದರ ಪದ್ಧತಿಯನ್ನು ತಿಳಿಸುವುದೇ ಆಗಲಿ ನಿರ್ದಿಷ್ಟವಾದ ಹೆಸರಲ್ಲ.

ಎಲ್ಲರಮೇಲೆ ಆಧಿಪತ್ಯವನ್ನು ಹೊಂದಿದವನನ್ನು ರಾಜ ಎನ್ನುತ್ತಾರೆ. ಎಲ್ಲರಿಗಿಂತ ಎಲ್ಲದರಲ್ಲೂ ದೊಡ್ಡವನನ್ನು ರಾಜ ಎನ್ನುವುದಿದೆ. ಸ್ವಲ್ಪ ರಾಜ್ಯದ ಮೇಲೆ ಅಧಿಕಾರಹೊಂದಿ ತಾನೇನೆಂದುಕೊಂಡರೆ ಅದು ಜಾರಿ ಮಾಡುವ ಅಧಿಕಾರವಿರುವವನು ರಾಜ. ತನ್ನ ರಾಜ್ಯದಲ್ಲಿರುವವರೆಲ್ಲರಲ್ಲಿ ಹಿರಿಯತನವನ್ನು ಹೊಂದಿ ಎಲ್ಲರಮೇಲೆ ಅಧಿಕಾರವನ್ನು ಹೊಂದಿ ಎಲ್ಲರನ್ನು ಶಾಶಿಸಿ ತನ್ನ ಅನುಚರರಿಂದ ನಡೆಸುವವನು ರಾಜ. ಪರಮಾತ್ಮನಿಗೆ ಪ್ರಪಂಚವೇ ರಾಜ್ಯವಾಗಿದೆ. ಆತನು ಎಲ್ಲಾಕಡೆ ವ್ಯಾಪಿಸಿ ಎಲ್ಲದರ ಮೇಲೆ ಅಧಿಕಾರವನ್ನು ಹೊಂದಿದ್ದಾನೆ. ಪರಮಾತ್ಮ ಪ್ರತಿ ಮನುಷ್ಯನ ಮೇಲೆ, ಪ್ರತಿ ಜೀವರಾಶಿ ಮೇಲೆ ತನ್ನ ಪ್ರಕೃತಿಯಿಂದ ಅಧಿಕಾರ ಹೊಂದಿದ್ದು ಜಾದುಗಾರನು ಗೊಂಬೆಗಳನ್ನು ಆಡಿಸಿದ ಹಾಗೆ ಎಲ್ಲರನ್ನು ಆಡಿಸುತ್ತಿದ್ದಾನೆ. ಪ್ರಪಂಚದಲ್ಲಿ ಆತನಿಗಿಂತಲೂ ದೊಡ್ಡವನಾಗಲಿ, ಆತನ ಆಜ್ಞೆಯನ್ನು ಅತಿಕ್ರಮಿಸುವುದಾಗಲಿ ಯಾವುದು ಇಲ್ಲ, ಆದ್ದರಿಂದ ಆತನು ಎಲ್ಲರಿಗು ರಾಜ. ರಾಜ ಎನ್ನುವಪದ ಆತನ ಸ್ಥಾನವನ್ನು ತಿಳಿಸುವ ಪದವೇ ಆಗಲಿ ಹೆಸರಲ್ಲ.

ಎಲ್ಲದಕ್ಕಿಂತ ದೊಡ್ಡದು ಪರಮಾತ್ಮ, ಪರಮಾತ್ಮನನ್ನು ಮೀರಿರುವುದು ಸರ್ವ ಜಗತ್ತಲ್ಲಿಯೂ, ಯಾವತ್ ಪ್ರಪಂಚದಲ್ಲಿಯೂ, ಯಾವುದೇ ಆಗಲಿ ಯಾರೇ ಆಗಲಿ ಇಲ್ಲ. ಆದ್ದರಿಂದ ಎಲ್ಲದಕ್ಕಿಂತ ದೊಡ್ಡವನಾದ ಪರಮಾತ್ಮನನ್ನು ದೊಡ್ಡವ ಎನ್ನುವ ಪದದಿಂದ ಕರೆಯುವರು. ಆ ಭಾವದಿಂದಲೇ ತ್ರಿಮೂರ್ತಿಗಳಿಗೆ ಜನ್ಮ ಕೊಟ್ಟ ಆದಿಶಕ್ತಿ ಎಂದಿದ್ದಾರೆ. ಪ್ರಕೃತಿಗೆ ಮೂರು ಗುಣಗಳನ್ನು ಸೃಷ್ಠಿಸಿದವನು ಪರಮಾತ್ಮ ಆದ್ದರಿಂದ ಮುವ್ವರನ್ನು ಹೆತ್ತವ ಎಂದಿದ್ದಾರೆ. ಎಲ್ಲದಕ್ಕೂ ಮೂಲವಾದುದು ಆಧಾರವಾದುದು ಆದ್ದರಿಂದ ಮೂಲ ಎಂದಿದ್ದಾರೆ. ಎಲ್ಲದಕ್ಕೂ ದೊಡ್ಡವನಾದ ಪರಮಾತ್ಮ ಹೆಣ್ಣೋ, ಗಂಡೋ ಯಾರಿಗೂ ತಿಳಿದಿಲ್ಲ, ಆದ್ದರಿಂದ ಪರಮಾತ್ಮನನ್ನು ಒಂದು ಕಡೆ ಅದು, ಎಂದು ಮತ್ತೊಂದು ಕಡೆ ಆತನು ಎಂದು ಕರೆಯುತ್ತಿದ್ದೇವೆ. ಎಲ್ಲರನ್ನು ಹುಟ್ಟಿಸಿರುವುದೆಂದು ಕೆಲವರು ಅಮ್ಮ ಎಂದು ಕರೆದಿದ್ದಾರೆ. ಎಲ್ಲರಿಗು ದೊಡ್ಡದಾಗಿರುವುದರಿಂದ ದೊಡ್ಡಮ್ಮ ಎಂದಿದ್ದಾರೆ. ಹಾಗೆಂದು ಹೆಣ್ಣಾಗಿ ಹೋಲಿಸಿಕೊಳ್ಳುತ್ತಾರೇನೋ ಎಂದು, ಪರಮಾತ್ಮ ಹೆಣ್ಣು ಅಲ್ಲ ಗಂಡು ಅಲ್ಲ ಎಂದು ತಿಳಿಸುವುದಕ್ಕೆ ದೊಡ್ಡಮ್ಮನಿಗೆ ಮೀಸೆಗಳು ಇಟ್ಟಿದ್ದಾರೆ. ಇಂದಿಗೂ ಎಲ್ಲಾದರೂ ದೊಡ್ಡಮ್ಮ ಗುಡಿಗಳಲ್ಲಿ ಪ್ರತಿಮೆಗೆ ಮೀಸೆಗಳನ್ನು ಇಡುವುದು ಸಾಂಪ್ರದಾಯವಿದೆ. ಕರೆಯುವುದು ದೊಡ್ಡಮ್ಮ ಎಂದು, ಕಾಣಿಸುವುದು ಮೂತಿ ಮೇಲೆ ಮೀಸೆಗಳ ಗುರುತು. ಇದರಿಂದ ಪರಮಾತ್ಮ ಹೆಣ್ಣೋ ಗಂಡೋ ಯಾರಿಗು ಅರ್ಥ ವಾಗುವುದಿಲ್ಲ. ಹಾಗೆ ಏನೂ ಅಲ್ಲ ಎನ್ನುವ ವಿಷಯ ತಿಳಿಸುವುದಕ್ಕೆ ಪೂರ್ವದ ಹಿರಿಯರು

ದೊಡ್ಡಮ್ಮನಿಗೆ ಕೋರೆ ಮೀಸೆ ಇಡುತ್ತಿದ್ದರು. ಗಂಡು ಜಾತಿ ಜಂತುಗಳಿಗೆ ಕೋರೆಗಳಿರುವುದರಿಂದ ಗಂಡು ಜಾತಿಯನ್ನು ತಿಳಿಸುವ ಕೋರೆಗಳು ಮೀಸೆ ಇಟ್ಟು ದೊಡ್ಡಮ್ಮ ಎಂದಿದ್ದಾರೆ. ಇದರಿಂದ ಹೆಣ್ಣೋ ಗಂಡೋ ಯಾವುದು ಅಲ್ಲವೆಂದು, ಏನೂ ಅಲ್ಲದವನೇ ಪರಮಾತ್ಮನೆಂದು ತಿಳಿಯುತ್ತಿದೆ. ಪೂರ್ವದಲ್ಲಿ ಜ್ಞಾನ ತಿಳಿದ ಹಿರಿಯರು ತಮ್ಮ ಜ್ಞಾನವನ್ನು ಇತರರಿಗೆ ತಿಳಿಸುವುದಕ್ಕೆ ದೊಡ್ಡವ ಎನ್ನುವ ಹೆಸರು ಮುಖ್ಯವಾಗಿ ಇಟ್ಟು ಅಯ್ಯ ಎಂದೋ ಅಪ್ಪ ಎಂದೋ ಅರ್ಥವಾಗದ ಹಾಗೆ, ತಾಯಿ ತಂದೆ ಎಲ್ಲಾ ಆತನೇ ಎನ್ನುವಂತೆ ಗುರುತಿಗೆ ದೊಡ್ಡಮ್ಮನನ್ನು ಇಟ್ಟಿದ್ದಾರೆ. ಈ ದಿನ ಆ ಭಾವ ಯಾವ ಮಾತ್ರವೂ ಇಲ್ಲದೇ ಹೋಗಿರುವುದಲ್ಲದೇ, ದೊಡ್ಡಮ್ಮನಿಗೂ ಸಹ ಆರು ಜನ ತಂಗಿಯರನ್ನು ಒಬ್ಬ ತಮ್ಮನನ್ನು ಸೃಷ್ಟಿಸಿ ಕಥೆ ಬರೆದು, ಸಾಧಾರಣ ದೇವತೆ ಕೆಳಗೆ ಕ್ಷುದ್ರ ದೇವತೆಕೆಳಗೆ ಜಮಕಟ್ಟಿದ್ದಾರೆ. ಅಕ್ಕನಿಗಿರುವುದರಿಂದ ತಂಗಿಯರಿಗು ಇರಬೇಕೆಂದು ಸುಂಕಲಮ್ಮ, ಮಾರೆಮ್ಮ, ಪೋಲೇರಮ್ಮ, ಮಾಚಮ್ಮ, ಪೋಚಮ್ಮ, ಮೈಸಮ್ಮ ಎನ್ನುವವರಿಗೆ ಕೆಲವು ಕಡೆ ಬೆಳ್ಳಿ ಮೀಸೆ ಕೋರೆ ಇಡುವುದು ಸಹ ಇರುವ ವಿಷಯವೇ. ಇವರೆಲ್ಲರೂ ಗ್ರಾಮ ದೇವತೆಗಳಾದಾಗ ಇವರಲ್ಲಿ ದೊಡ್ಡಮ್ಮನನ್ನು ಸೇರಿಸುವುದು ತಪ್ಪು. ಏಳುಜನ ಅಕ್ಕತಂಗಿಯರಿರುವುದು ನಿಜವೇ ಆದರೆ ದೊಡ್ಡಮ್ಮ ಇವರೊಳಗಿರುವುದಲ್ಲ. ಎಲ್ಲಮ್ಮ ಎನ್ನುವ ಗ್ರಾಮ ದೇವತೆಯನ್ನು ಸೇರಿಸಿಕೊಂಡರೆ 1. ಸುಂಕುಲಮ್ಮ, 2. ಮಾರೆಮ್ಮ, 3. ಎಲ್ಲಮ್ಮ, 4. ಪೋಲೇರಮ್ಮ, 5. ಮಾಚಮ್ಮ, 6. ಪೋಚಮ್ಮ, 7. ಮೈಸಮ್ಮ ಆದಾಗ ಇವರ ತಮ್ಮ ಪೋತುಲಯ್ಯ ಒಂದು ಗ್ರಾಮ ದೇವರನ್ನು ಸಹ ಇಟ್ಟುಕೊಂಡಿದ್ದಾರೆ. ಇವರೆಲ್ಲರವೂ ವಾಸ್ತವವಾಗಿ ಹೆಸರುಗಳಾದಾಗ, ದೊಡ್ಡಮ್ಮ ಎನ್ನುವಪದ ಹೆಸರಲ್ಲವೆಂದು ತಿಳಿಯಬೇಕು. ಎಲ್ಲರ ಮೇಲೆ ದೊಡ್ಡತನವನ್ನು ತಿಳಿಸುವ ಪರಮಾತ್ಮನ ಗುರುತಾಗಿದೆಯೆಂದು ಅರ್ಥವಾಗುತ್ತದೆ. ಪರಮಾತ್ಮ ಹೆಣ್ಣು ಗಂಡಿಗೆ ಅತೀತವಾದ್ದರಿಂದ ದೊಡ್ಡಮ್ಮನಿಗೆ ಕೋರೆಗಳು ಮೀಸೆಗಳಿನ್ನಿಟ್ಟಿದ್ದಾರೆ. ಎಲ್ಲಾ ವಿಧಗಳ ಪರಮಾತ್ಮನಿಗೆ ದೊಡ್ಡವ ಎನ್ನುವ ಪದ ಸರಿಹೋಗುವುದೆಂದು ದೊಡ್ಡಮ್ಮ ಎಂದಿದ್ದಾರೆ. ಪುರುಷೋತ್ತಮ ಎನ್ನುವ ಪದದಲ್ಲಿ ಉತ್ತಮ ಎನ್ನುವ ಪದ ವಿಶೇಷಾರ್ಥವನ್ನು ತಿಳಿಸುವಹಾಗೆ, ದೊಡ್ಡಮ್ಮ ದೊಡ್ಡಣ್ಣ ಎನ್ನುವ ಪದದಲ್ಲಿ ದೊಡ್ಡವ ಎನ್ನುವ ಪದ ವಿಶೇಷಾರ್ಥವನ್ನು ತಿಳಿಸುತ್ತದೆ. ಆದ್ದರಿಂದ ಎಲ್ಲಾ ಲೋಕಗಳಿಗು ತಾಯಿ ತಂದೆ ಎರಡು ತಾನೇ ಆದ ಪರಮಾತ್ಮನಿಗೆ ದೊಡ್ಡವ ಎನ್ನುವುದು ಸರಿಹೋಗುವುದೆಂದು ಹೇಳಬಹುದು. ತಾಯಿ ತಂದೆ ಎಲ್ಲಾ ಆತನೇ ಎಂದು ತಿಳಿಸುವ ಸಲುವಾಗಿ ದೊಡ್ಡದಕ್ಕೆ ಅಮ್ಮ ಎಂದು ಜೋಡಿಸಿ ದೊಡ್ಡಮ್ಮ ಎಂದು ತಾಯಿಯನ್ನು ಸೂಚಿಸುತ್ತಾ, ಮೀಸೆ ಇಟ್ಟು ತಂದೆಯನ್ನು

ಸೂಚಿಸುತ್ತಾ ದೊಡ್ಡಮ್ಮ ಎನ್ನುವ ಗೊಂಬೆಯನ್ನು ತೋರಿಸಿದ್ದಾರೆ. ದೊಡ್ಡಮ್ಮನಿಗೆ ಮೀಸೆ ಇಡಬಹುದು ಆದರೆ, ಸುಂಕಲಮ್ಮ ಮೊದಲಾದ ಗ್ರಾಮ ದೇವತೆಗಳಿಗೆ ಮೀಸೆ ಇಡಬಾರದು. ಪ್ರಾಂತಗಳನ್ನನುಸರಿಸಿ ಉಳಿದ ದೇವತೆಗಳಿಗೆ ಹೆಸರು ಬದಲಾಗುತ್ತಿರಬಹುದು ಆದರೆ ದೊಡ್ಡಮ್ಮ ಎನ್ನುವುದು ಹೆಸರಲ್ಲ, ಆದ್ದರಿಂದ ದೊಡ್ಡಮ್ಮ ಎನ್ನುವುದು ಬದಲಾಗದೆ ಎಲ್ಲಾದರೂ ದೊಡ್ಡಮ್ಮನಾಗೇ ಇದೆ.

**930. (10) ನೋಟ ರೂಪ ಏಕವಾಯಿತು ಎನ್ನುತ್ತಾರೆ, ನೋಟ ರೂಪ ಯಾವುದು?**

ಉ. ನೋಟ ಮನಸ್ಸು, ರೂಪ ಆತ್ಮ.

**ವಿವರ :** ರೂಪ ನೋಟ ಏಕವಾಯಿತು ಎನ್ನುವ ವಾಕ್ಯ ತತ್ವಗಳು ಎನ್ನುವ ಹಾಡುಗಳಲ್ಲಿ ಕಾಣಿಸುತ್ತಿದೆ. ನೋಟ ವಿವರಿಸಿಕೊಂಡರೆ ಎರಡು ವಿಧಗಳ ನೋಟಗಳು ನಮಗೆ ಇವೆ. ಒಂದು ಸ್ಥೂಲ ನೋಟ, ಎರಡನೆಯದು ಸೂಕ್ಷ್ಮನೋಟ ಎನ್ನುತ್ತೇವೆ. ಸ್ಥೂಲ ನೋಟ ಕಣ್ಣಿರುವವರೆಲ್ಲರಿಗು ಇದೆ. ಎರಡನೆಯದಾದ ಸೂಕ್ಷ್ಮ ನೋಟ ಸಹ ಸ್ವಲ್ಪಕ್ಕೆ ಸ್ವಲ್ಪ ಎಲ್ಲರಿಗು ಇದೆಯೆಂದೇ ಹೇಳಬಹುದು. ಕಣ್ಣಿಗಿರುವ ನೋಟವನ್ನು ದೃಷ್ಟಿ ಎನ್ನುತ್ತಾರೆ. ಹಾಗೆಯೇ ಎರಡನೆಯ ದೃಷ್ಟಿ ಆದ ಸೂಕ್ಷ್ಮ ನೋಟವನ್ನು ಜ್ಞಾನದೃಷ್ಟಿ ಎನ್ನುತ್ತಾರೆ. ದೃಷ್ಟಿ ಸ್ಥೂಲ ಕಣ್ಣಿಗಳಿಗೆ ಇರುವಾಗ ಜ್ಞಾನದೃಷ್ಟಿ ಜ್ಞಾನ ನೇತ್ರಕ್ಕಿದೆ. ಸ್ಥೂಲದೃಷ್ಠಿ ಎರಡು ಕಣ್ಣುಗಳಿಂದ ಸಂಚರಿಸುತ್ತಿರುವಾಗ ಜ್ಞಾನದೃಷ್ಟಿ ಒಂದು ಕಣ್ಣಿನಿಂದ ಸಂಚರಿಸುತ್ತದೆ. ಸರ್ವರಿಗು ಎರಡು ಸ್ಥೂಲ ಕಣ್ಣು, ಒಂದು ಜ್ಞಾನ ನೇತ್ರ ಒಟ್ಟು ಮೂರು ಕಣ್ಣುಗಳಿವೆ. ಸ್ಥೂಲಕಣ್ಣುಗಳಿಗೆ ಪರಿಮಿತವಾದ ನೋಟವಿರುತ್ತದೆ. ಸ್ಥೂಲ ಕಣ್ಣುಗಳ ನೋಟ ವಯಸ್ಸು ಬೆಳೆದಂತೆಲ್ಲಾ ಕಡಿಮೆ ಆಗುವ ಅವಕಾಶವಿದೆ, ಆದರೆ ಸ್ಥೂಲ ನೋಟವನ್ನು ಯಾರು ಹೆಚ್ಚಿಸಿಕೊಳ್ಳಲಾರರು. ಸೂಕ್ಷ್ಮವಾದ ಜ್ಞಾನದ ಕಣ್ಣುವೊಂದರ ನೋಟ ಸಾಧಾರಣ ಮನುಷ್ಯರಿಗೆ ಒಂದೇ ಸಮವಾಗಿ ಇರುವುದಿಲ್ಲ. ಜ್ಞಾನದೃಷ್ಟಿ ಎನ್ನುವ ಸೂಕ್ಷ್ಮದೃಷ್ಟಿ ಸ್ವಲ್ಪ ಹೆಚ್ಚು ಕಡಿಮೆಗಳಾಗಿ ಮನುಷ್ಯರಿಗಿರುತ್ತದೆ. ಸೂಕ್ಷ್ಮದೃಷ್ಟಿ ಮನಸ್ಸಿಗೆ ಅಂಟಿಕೊಂಡಿರುವುದರಿಂದ ಅದನ್ನು ಮನೋದೃಷ್ಟಿ ಎಂದು ಸಹ ಕರೆಯುವರು. ಮನೋದೃಷ್ಟಿ ಎನ್ನುವ ಜ್ಞಾನದೃಷ್ಟಿ ಕುರುಡರಿಗೆ ಸಹಿತ ಇದೆಯೆಂದು ಹೇಳಬಹುದು. ಜ್ಞಾನ ದೃಷ್ಟಿಗೆ ಪರಿಮಿತಿ ಇಲ್ಲ. ಮನುಷ್ಯನಿಗಿರುವ ಶ್ರದ್ಧೆಯನ್ನು ಅನುಸರಿಸಿ ಜ್ಞಾನದೃಷ್ಟಿಯನ್ನು ಎಷ್ಟಾದರೂ ಬೆಳಸಿಕೊಳ್ಳಬಹುದು. ಹಾಗೆ ಶ್ರದ್ಧೆಯಿಂದ ಜ್ಞಾನದೃಷ್ಟಿಯನ್ನು ಬೆಳೆಸಿಕೊಂಡವರೂ ಸಹ ಕೆಲವರಿದ್ದಾರೆ. ಈಗ ಕೊಟ್ಟಿರುವ ಪ್ರಶ್ನೆಗಳಿಗು ಸಹ ಉತ್ತರಗಳು ಸೂಕ್ಷ್ಮದೃಷ್ಟಿಯಿಂದ ಹೇಳಬೇಕಾಗಿದೆ. ಈ ಜ್ಞಾನ ಪರೀಕ್ಷೆಗಳು ಜ್ಞಾನ ದೃಷ್ಟಿ ಪರಿಮಿತಿಯನ್ನು

ಲೆಕ್ಕಿಸಿ ಅಳೆಯುವವೆಂದು ತಿಳಿಯಬೇಕು. ಇಂತಹ ಪರೀಕ್ಷೆಗಳಲ್ಲಿ ನಿಮ್ಮ ದೃಷ್ಟಿಯನ್ನು ಲೆಕ್ಕಿಸಿಕೊಂಡು ಕಡಿಮೆ ಇದ್ದರೆ ಇನ್ನೂ ಬೆಳಸಿಕೊಳ್ಳಬೇಕೆಂದು ತಿಳಿಸುತ್ತಿದ್ದೇವೆ. ಇಲ್ಲಿಯವರೆಗು ನೋಟದ ವಿಷಯವನ್ನು ತಿಳಿದುಕೊಂಡಿದ್ದೇವೆ, ಈಗ ರೂಪದ ವಿಷಯವನ್ನು ತಿಳಿದುಕೊಳ್ಳೋಣ.

ನೋಟವನ್ನು ದೃಷ್ಟಿ ಎಂದು, ರೂಪವನ್ನು ದೃಶ್ಯ ಎಂದು ಹೇಳುವುದು ಸಹಜವೇ. ದೃಶ್ಯಗಳು ಸಹ ನೋಡುವ ನೋಟವನ್ನು ಅನುಸರಿಸಿ ಎರಡು ವಿಧಗಳಾಗಿ ಇರುತ್ತದೆ. ದೃಶ್ಯಗಳು ಸಹ ಸ್ಥೂಲ, ಸೂಕ್ಷ್ಮ ಎನ್ನುವುದರಲ್ಲಿ ಅತಿಶಯೋಕ್ತಿಯಲ್ಲ. ಸ್ಥೂಲ ಕಣ್ಣುಗಳ ದೃಷ್ಟಿ ಪರಿಮಿತವೆಂದಿದ್ದೇವೆ ಅಲ್ಲವೆ! ಸ್ಥೂಲ ದೃಷ್ಟಿಗೆ ಒಂದು ಹದ್ದು ಇದೆ. ಕಣ್ಣು ಎಲ್ಲಿಯವರೆಗು ನೋಡಬಲ್ಲದೋ ಅದೇ ಅದರ ಹದ್ದು ಎಂದು ಹೇಳಬಹುದು. ಸ್ಥೂಲ ಕಣ್ಣಿನ ನೋಟಕ್ಕೆ ಹದ್ದು ಇರುವಂತೆ, ಜ್ಞಾನನೇತ್ರವೊಂದರ ಜ್ಞಾನದೃಷ್ಟಿಗೂ ಸಹ ಒಂದು ಹದ್ದು ಇದೆ. ಸಾಧಾರಣವಾಗಿ ಒಬ್ಬನು ನೋಡಿದಷ್ಟು ದೂರ ಮತ್ತೊಬ್ಬನು ನೋಡದೆ ಹೋದರೆ ಅವನಿಗೆ ನೋಟ ಕಡಿಮೆ ಎನ್ನುತ್ತೇವೆ. ಹಾಗೇ ಒಬ್ಬ ವ್ಯಕ್ತಿ ತನ್ನ ಜ್ಞಾನ ದೃಷ್ಟಿಯೊಂದಿಗೆ ಆತ್ಮದ ವರೆಗು ನೋಡುತ್ತಿರುವಾಗ ಮತ್ತೊಬ್ಬನು ಆತ್ಮದ ವರೆಗು ನೋಡಲಾರದೆ ಹೋದರೆ, ನೋಡದೆ ಹೋದವನಿಗೆ ಜ್ಞಾನದೃಷ್ಟಿ ಕಡಿಮೆಯೇ ಎಂದು ಹೇಳಬಹುದು. ವಾಸ್ತವವಾಗಿ ಜ್ಞಾನ ದೃಷ್ಟಿ ಸಂಪೂರ್ಣವಾಗಿ ಹೊಂದಿದವನು ಕೊನೆಯ ದೃಶ್ಯವಾಗಿ ಆತ್ಮನನ್ನು ನೋಡಬಲ್ಲನು. ಆತ್ಮ ವಿನಹಾ ಯಾರ ದೃಷ್ಟಿ ಹರಿಯುವುದಿಲ್ಲ, ಆದ್ದರಿಂದ ಜ್ಞಾನದೃಷ್ಟಿ ಯೊಂದರ ಹದ್ದು ಆತ್ಮಯೆಂದು ತಿಳಿಯುತ್ತಿದೆ. ನೋಟವೊಂದರ ಕೊನೆಯ ಸಾಮರ್ಥ್ಯವನ್ನೇ ರೂಪವಾಗಿ ಲೆಕ್ಕಿಸಬೇಕಾಗಿರುತ್ತದೆ. ಕಾಣಿಸುವುದು ರೂಪ ಅಥವಾ ದೃಶ್ಯ ಎನ್ನಬಹುದು. ಜ್ಞಾನ ನೇತ್ರ ನೋಟವೊಂದರ ರೂಪ ಆತ್ಮ ಎಂದು ತಿಳಿಯಬೇಕು. ಮನಸ್ಸು ಅಥವಾ ಜ್ಞಾನ ದೃಷ್ಠಿ ಆತ್ಮದ ಮೇಲೆ ಲಗ್ನವಾಗಿ ಹೋದಾಗ ನೋಟ ರೂಪ ಏಕವಾಯಿತು ಎಂದಿದ್ದಾರೆ. ದೃಶ್ಯದ ಮೇಲೆ ಧ್ಯಾಸ ಲಗ್ನವಾಗುವುದನ್ನು ಏಕವಾಗುವುದು ಎನ್ನಬಹುದು. ಜ್ಞಾನದೃಷ್ಟಿಗೆ ಕಾಣಿಸುವ ದೃಶ್ಯವಾದ ಆತ್ಮದ ಮೇಲೆ ಧ್ಯಾಸವನ್ನು ಕೇಂದ್ರೀಕರಿಸಿ ನಡೆಸುವ ನೋಟ ರೂಪ ಏಕವಾದಂತೇ ಎಂದು ತಿಳಿಯಬೇಕು. ಇದನ್ನನುಸರಿಸಿ ಜ್ಞಾನರೀತ್ಯಾ ನೋಟ ಎಂದರೆ ಜ್ಞಾನದೃಷ್ಟಿ ಎಂದು, ರೂಪ ಎಂದರೆ ಆತ್ಮ ದರ್ಶನವೆಂದೂ, ಧ್ಯಾಸವನ್ನು ಲಗ್ನ ಮಾಡುವುದನ್ನು ಆತ್ಮದೊಂದಿಗೆ ಏಕವಾಗುವು ದೆಂದು ಅರ್ಥವಾಗುತ್ತಿದೆ.

# ಜ್ಞಾನ ಪರೀಕ್ಷೆ

**ಕೆ. ನರಸಾಪುರ** **ದಿನಾಂಕ : 18–1–2003**

**931. (1) ಮನುಷ್ಯ ಹುಟ್ಟಿದಾಗಿನಿಂದ ಪ್ರಾರಂಭವಾಗುವುದು ಯಾವುದು?**

ಉ. ಪ್ರಾರಬ್ಧಕರ್ಮ ಅನುಭವ.

**ವಿವರ :** ಮನುಷ್ಯನಾಗಲಿ ಮತ್ತು ಯಾವ ಜೀವರಾಶಿಯಾಗಲಿ ಪ್ರಾರಬ್ಧಕರ್ಮ ಕಾರಣದಿಂದಲೇ ಹುಟ್ಟುತ್ತಿವೆ. ನಾವು ಸಂಪಾದಿಸಿಕೊಂಡ ಕರ್ಮವೆಲ್ಲವೂ ನಮ್ಮ ತಲೆಯಲ್ಲಿನ ಕರ್ಮಚಕ್ರದಲ್ಲಿ ಉಳಿದಿರುತ್ತದೆ. ಆ ಉಳಿದಿರುವ ಕರ್ಮವನ್ನು ಸಂಚಿತ ಕರ್ಮ ಎನ್ನುತ್ತಿದ್ದೇವೆ. ಮನುಷ್ಯ ಸತ್ತುಹೋದ ನಂತರ ತಿರುಗಿ ಹುಟ್ಟಬೇಕಾದ ಜನ್ಮಕ್ಕೆ ಸಂಚಿತ ಕರ್ಮದಿಂದ ಸ್ವಲ್ಪ ಕರ್ಮ ನಿರ್ಣಯಿಸಲಾಗುತ್ತದೆ. ಅದನ್ನೇ ಪ್ರಾರಬ್ಧಕರ್ಮ ಎನ್ನುತ್ತಿದ್ದೇವೆ. ಮನುಷ್ಯ ಹುಟ್ಟಿದಾಗ ಹುಟ್ಟುವಿಕೆಯನ್ನು, ಕೊನೆಯಲ್ಲಿ ಮರಣಿಸಿದ ಮರಣವನ್ನು ನಿರ್ಣಯಿಸುವುದು ಸಹ ಪ್ರಾರಬ್ಧ ಕರ್ಮವೆ. ಮನುಷ್ಯ ಹುಟ್ಟಿದಾಗಿನಿಂದ ಪ್ರಾರಬ್ಧಕರ್ಮ ಜಾರಿಗೆ ಬಂದು ಪ್ರತಿ ಸಣ್ಣ ಕೆಲಸಕ್ಕು ಕಾರಣವಾಗುತ್ತಿದೆ. ರೋಗಗಳು, ಸುಖಗಳು ಕಷ್ಟಗಳು, ಬಾಧೆಗಳು ಮೊದಲಾದ ಜೀವನದಲ್ಲಿನ ಎಲ್ಲಾ ಅನುಭವಗಳು ಪ್ರಾರಬ್ಧಕರ್ಮವನ್ನು ಅನುಸರಿಸಿ ನಡೆಯುತ್ತಿವೆ. ಜೀವನದಲ್ಲಿ ಮೊದಲನೆ ಶ್ವಾಸದಿಂದ ಪ್ರಾರಂಭವಾಗುವುದು ಪ್ರಾರಬ್ಧಕರ್ಮ.

**932. (2) ಮನುಷ್ಯ ಹುಟ್ಟಿದ ನಂತರ ಸ್ವಲ್ಪ ಕಾಲದಿಂದ ಪ್ರಾರಂಭವಾಗುವುದು ಯಾವುದು?**

ಉ. ಆಗಾಮಿಕರ್ಮ ಸಂಪಾದನೆ.

**ವಿವರ :** ಮನುಷ್ಯನಿಗೆ ಅಥವಾ ಯಾವ ಜೀವರಾಶಿಗಾದರೂ ಉಳಿದಿರುವ ಕರ್ಮವನ್ನು ಸಂಚಿತಕರ್ಮ ಎನ್ನುತ್ತೇವೆ. ಸಂಚಿತಕರ್ಮದಿಂದ ಒಂದು ಜನ್ಮಕ್ಕೆ ಸರಿಹೋಗುವಹಾಗೆ ನಿರ್ಣಯಿಸಲಾದ ಕರ್ಮವನ್ನು ಪ್ರಾರಬ್ಧಕರ್ಮ ಎನ್ನುತ್ತಿದ್ದೇವೆ. ಪ್ರಾರಬ್ಧಕರ್ಮ ಜೀವನದೊಂದಿಗೆ ಪ್ರಾರಂಭವಾಗಿ ಖರ್ಚಾಗುತ್ತಿದೆ. ಪ್ರಾರಬ್ಧಕರ್ಮ ಖರ್ಚಿನಿಂದಲೇ ಕಾರ್ಯ ನಡೆಯುತ್ತಿದೆ. ಕಾರ್ಯ ನಡೆಯುವಾಗ ಆ ಕಾರ್ಯದೊಂದಿಗೆ ಯಾವ ಸಂಬಂಧವು ಇಲ್ಲದ ಜೀವಾತ್ಮ ಶರೀರದಲ್ಲಿನ ಅಹಂನಿಂದ ನಾನೇ ಈ ಕೆಲಸವನ್ನು ಮಾಡುತ್ತಿದ್ದೇನೆಂದು, ಈ ಕೆಲಸಕ್ಕೆ ನಾನೇ ಕಾರಣವೆಂದು ಭಾವಿಸುತ್ತಿದ್ದಾನೆ. ಹಾಗೆ ತನ್ನ ನಿಜಸ್ಥಿತಿಯನ್ನು ತಿಳಿಯದ ಜೀವಾತ್ಮ, ಅಜ್ಞಾನದಿಂದ ಪ್ರಾರಬ್ಧಕರ್ಮವನ್ನು ಮರೆತು, ತಾನೇ ಕಾರ್ಯಕ್ಕೆ ಕಾರಣವೆಂದುಕೊಳ್ಳುವುದರಿಂದ, ನಡೆದ ಕಾರ್ಯದಲ್ಲಿ ಹೊಸಕರ್ಮ

ಬಂದು ಮನುಷ್ಯನನ್ನು ಅಂಟಿಕೊಳ್ಳುತ್ತಿದೆ. ಹಾಗೆ ಬರುವ ಹೊಸಕರ್ಮವನ್ನು ಆಗಾಮಿಕರ್ಮ ಎನ್ನುತ್ತಿದ್ದೇವೆ. ಮನುಷ್ಯ ಹುಟ್ಟಿದಾಗ ಶರೀರದಲ್ಲಿನ ಸೂಕ್ಷ್ಮವಾದ ಬುದ್ಧಿ, ಮನಸ್ಸು, ಅಹಂ ಶರೀರದೊಂದಿಗೆ ಎಳೆ ಪ್ರಾಯವನ್ನು ಹೊಂದಿ ಕೆಲಸಮಾಡುವ ಸಾಮರ್ಥ್ಯ ಇಲ್ಲದಿರುವುದರಿಂದ, ಹುಟ್ಟಿದ ನಂತರ ನಾಲ್ಕು ಐದು ಸಂವತ್ಸರಗಳವರೆಗು ಅಹಂಭಾವ ಜೀವಾತ್ಮನಿಗೆ ಇಲ್ಲದೇ ಇರುವುದರಿಂದ, ಹೊಸಕರ್ಮ ಆದ ಆಗಾಮಿಕರ್ಮ ಜೀವಿಗೆ ಅಂಟುವುದಿಲ್ಲ. ಆದ್ದರಿಂದ ಮನುಷ್ಯ ಹುಟ್ಟಿದ ನಂತರ ಸ್ವಲ್ಪ ಕಾಲದಿಂದ ಆಗಾಮಿಕರ್ಮ ಪ್ರಾರಂಭವಾಗುತ್ತದೆಂದು ಹೇಳಬಹುದು.

**933. (3) ನಮ್ಮ ಕೈಯಲ್ಲಿ ಇಲ್ಲದಿರುವುದು ಏನು?**

ಉ. ವಿಧಿ (ಪ್ರಾರಬ್ಧ).

**ವಿವರ :** ನಮ್ಮ ಕೈಯಲ್ಲಿ ಇಲ್ಲದಿರುವುದು ಪ್ರಾರಬ್ಧಕರ್ಮ. ಅದನ್ನೇ ವಿಧಿ ಎನ್ನುತ್ತೇವೆ. ವಿಧಿ ಎನ್ನುವ ಪ್ರಾರಬ್ಧಕರ್ಮ ಜೀವನ ವಿಧಾನವನ್ನೇ ನಿರ್ಣಯಿಸುತ್ತದೆ. ಆದ್ದರಿಂದ ಅದನ್ನು ವಿಧಿ ಎನ್ನುತ್ತಿದ್ದೇವೆ. ವಿಧಿಯಿಂದಲೇ ಪ್ರತಿಯೊಂದು ನಿನಗೆ ವಿಧಿಸಲ್ಪಡುತ್ತಿದೆ. ನೀನು ಯಾವ ವಿಧವಾಗಿ ತಿನ್ನಬೇಕು, ಕುಡಿಯಬೇಕು, ಮಾತನಾಡುವುದು, ಸುಖಪಡುವುದು, ಕಷ್ಟಪಡುವುದು ಎಲ್ಲವನ್ನು ವಿಧಿಯೇ ನಿರ್ಣಯಿಸುತ್ತಿರುತ್ತದೆ. ಯಾರು ಯಾವುದನ್ನು ಸ್ವತಃವಾಗಿ ನಿರ್ಣಯಿಸಿಕೊಳ್ಳಲಾರರು. ಮೇಲ್ನೋಟಕ್ಕೆ ತಾನು ಮಾಡುವಹಾಗೆ ಕಾಣಿ ಸುತ್ತಿದ್ದರೂ ಒಳಗೆ ತನಗೆ ತಿಳಿಯದೆ ಪ್ರಾರಬ್ಧಕರ್ಮ ಎಲ್ಲದಕ್ಕು ಕಾರಣವಾಗಿದೆ. ಆದ್ದರಿಂದಲೇ ತಾನು ಅಂದುಕೊಂಡಹಾಗೆ ನಡೆಯಬಹುದು ನಡೆಯದಿರಬಹುದು. ಯಾರ ಕೈಯಲ್ಲೂ ಪ್ರಾರಬ್ಧಕರ್ಮ ಇಲ್ಲ. ಪ್ರಾರಬ್ಧಕರ್ಮ ಕೈಯಲ್ಲೇ ಎಲ್ಲರೂ ಇದ್ದಾರೆ.

**934. (4) ನಮ್ಮ ಕೈಯಲ್ಲಿ ಇರುವುದೇನು?**

ಉ. ಆಗಾಮಿಕರ್ಮ.

**ವಿವರ :** ಮನುಷ್ಯ ಮಾಡುವ ಪ್ರತಿ ಕೆಲಸದಲ್ಲೂ ಅಗ್ನಿಗೆ ಬೆಳಕು ಅಂಟಿಕೊಂಡಿರುವ ಹಾಗೆ ಆಗಾಮಿಕರ್ಮ ಅಂಟಿಕೊಂಡಿದೆ. ಪ್ರತಿ ಕಾರ್ಯದಲ್ಲೂ ಹೊಸದಾಗಿ ಬರುವ ಆಗಾಮಿ ಕರ್ಮವನ್ನು ಮನುಷ್ಯ ತನ್ನ ಕರ್ಮವರಸೆಯೊಳಗೆ ಸೇರಿಸಿಕೊಳ್ಳಬಹುದು ಅಥವಾ ಸೇರಿಸಿಕೊಳ್ಳದೇ ಅದನ್ನು ವ್ಯರ್ಥ ಮಾಡಿಕೊಳ್ಳಬಹುದು. ತನ್ನಲ್ಲಿನ ಸೂಕ್ಷ್ಮ ಭಾವದಿಂದ ಮನುಷ್ಯ ಆಗಾಮಿಕರ್ಮ ಹೊಂದುವುದಾಗಲಿ, ಹೊಂದದೆ ಇರುವುದಾಗಲಿ

ನಡೆಯುತ್ತಿದೆ. ಪ್ರಾರಬ್ಧಕರ್ಮದಲ್ಲಿ ಅಸ್ವತಂತ್ರನಾದ ಮನುಷ್ಯ, ಆಗಾಮಿಕರ್ಮ ವಿಷಯದಲ್ಲಿ ಸ್ವತಂತ್ರನೆನ್ನುವ ಮಾತು. ಜ್ಞಾನದಿಂದ ಹೊಸದಾಗಿ ಹುಟ್ಟಿರುವ ಕರ್ಮವನ್ನು ತೊಲಗಿಸಿಕೊಳ್ಳಬಹುದು. ಅಜ್ಞಾನದಿಂದ ಆಗಾಮಿಕರ್ಮವನ್ನು ತಗುಲಿಸಿಕೊಳ್ಳಬಹುದು. ಇದು ಮನುಷ್ಯನೊಂದರ ಜ್ಞಾನಾಜ್ಞಾನಗಳ ಮೇಲೆ ಆಧಾರಪಟ್ಟಿರುವುದರಿಂದ, ಜ್ಞಾನ ಅಜ್ಞಾನಗಳು ಮನುಷ್ಯನೊಂದರ ಇಷ್ಟವನ್ನನುಸರಿಸಿ ಇರುವುದರಿಂದ, ನಮ್ಮ ಕೈಯಲ್ಲಿ ಆಗಾಮಿಕರ್ಮವನ್ನು ಇಟ್ಟುಕೊಳ್ಳಬಹುದೆಂದು ಹೇಳುತ್ತಿದ್ದೇವೆ. ಆಗಾಮಿಕರ್ಮವನ್ನು ತಲೆ ಮೇಲೆ ಎತ್ತಿಕೊಳ್ಳಬಹುದು ಅಥವಾ ಕೆಳಗೆ ಬಿಸಾಡಬಹುದು ಎಲ್ಲಾ ಮನುಷ್ಯನ ಕೈಯಲ್ಲಿರುವ ಕೆಲಸ.

**935. (5) ಮನುಷ್ಯನ ಜೀವನದಲ್ಲಿ ಕೈಲಾಗದಿರುವುದು ಏನು?**

ಉ. ಪರಮಾತ್ಮನನ್ನು ( ದೇವರನ್ನು) ತಿಳಿದುಕೊಳ್ಳುವುದು.

**ವಿವರ :** ಮನುಷ್ಯ ತನ್ನ ಜೀವನದಲ್ಲಿ ದೈವಶಕ್ತಿಯನ್ನು ಸಂಪಾದಿಸಿ ಮಹರ್ಷಿ ಆಗಬಹುದು. ಇನ್ನೂ ಅಧಿಕನಾಗಿ ರಾಜರ್ಷಿ, ದೇವರ್ಷಿ, ಬ್ರಹ್ಮರ್ಷಿ ಆಗಬಹುದು. ಪ್ರಪಂಚ ಧನವನ್ನು ಸಂಪಾದಿಸಿ ಕೋಟೀಶ್ವರನೆಂದು ಹೆಸರು ಹೊಂದಬಹುದು. ಯಾವುದನ್ನಾದರೂ ಸಾಧಿಸುವ ಮನುಷ್ಯ ತನ್ನ ಜೀವನವೆಲ್ಲಾ ಪ್ರಯತ್ನಿಸಿದರೂ ಪರಮಾತ್ಮನನ್ನು ತಿಳಿಯಲಾರನು. ಮನುಷ್ಯ ತನ್ನ ಜೀವನದಲ್ಲಿ ತಿಳಿಯದ ಪರಮಾತ್ಮನನ್ನು, ಶರೀರವನ್ನು ಬಿಟ್ಟ ನಂತರ ದೇವರಲ್ಲಿ ಐಕ್ಯವಾದಾಗ ತಿಳಿಯಬಲ್ಲನು. ಆದ್ದರಿಂದ ಮನುಷ್ಯ ಜೀವನದಲ್ಲಿ ಕೈಲಾಗದ ಕೆಲಸ ದೇವರನ್ನು ತಿಳಿಯುವುದೇ ಎಂದು ಹೇಳಬಹುದು.

**936. (6) ಮನುಷ್ಯ ಜೀವನದಲ್ಲಿ ಕೈಲಾಗುವುದು ಯಾವುದು?**

ಉ. ದೈವಜ್ಞಾನವನ್ನು ಸಂಪಾದಿಸಿಕೊಳ್ಳುವುದು.

**ವಿವರ :** ಮನುಷ್ಯನ ಶ್ರದ್ಧೆ ಮೇಲೆ ಆಧಾರಪಟ್ಟಿರುವುದು ಜ್ಞಾನ. ಮನುಷ್ಯ ದೈವಜ್ಞಾನವನ್ನು ಜೀವನದಲ್ಲಿ ಎಷ್ಟಾದರೂ ಸಂಪಾದಿಸಬಲ್ಲನು. ಎಷ್ಟು ಜ್ಞಾನಿಯಾದರು ದೇವರ ವಿಷಯಗಳು ತಿಳಿಯಬಹುದು ಆದರೆ ದೇವರನ್ನು ಮಾತ್ರ ತಿಳಿಯಲಾರನು. ಮನುಷ್ಯ ಜೀವನವೆಲ್ಲಾ ಪ್ರಯತ್ನಿಸಿದರೂ ದೇವರನ್ನು ತಿಳಿಯುವುದು ಕೈಲಾಗದ ಕೆಲಸವೆಂದು ಹೇಳಬಹುದು. ತನ್ನ ಇಷ್ಟ ಪ್ರಕಾರ ದೈವಜ್ಞಾನವನ್ನು ತಿಳಿಯಬಹುದು.

**937. (7) ಶರೀರದಲ್ಲಿನ ಇಂದ್ರಿಯಗಳಿಗು ಬುದ್ಧಿಗು ಜೀವಾತ್ಮನಿಗು ಮಧ್ಯವರ್ತಿಯಂತೆ ಕೆಲಸಮಾಡುತ್ತಾ ಕರೆದಾಗ ನಿದ್ರೆಯಲ್ಲಿರುವ ವ್ಯಕ್ತಿಗೆ (ಜೀವಾತ್ಮನಿಗೆ) ವಿಷಯವನ್ನು ತಿಳಿಸಿ ಎಚ್ಚರಗೊಳ್ಳುವ ಹಾಗೆ ಮಾಡುವುದು ಯಾವುದು?**

ಉ. ಆತ್ಮ.

**ವಿವರ :** ಶರೀರದಲ್ಲಿ ಹೊರಗಿನ ಇಂದ್ರಿಯಗಳಿಗು ಒಳಗಿನ ಇಂದ್ರಿಯಗಳಿಗು ಮಧ್ಯವರ್ತಿಯಾಗಿ ಕೆಲಸ ಮಾಡುವುದು ಮನಸ್ಸೆಂದು ಬಹಳ ಜನರಿಗೆ ತಿಳಿದಿದೆ. ಮನಸ್ಸೊಂದರ ಮಧ್ಯವರ್ತಿತ್ವ ಮನುಷ್ಯ ಎಚ್ಚರದಲ್ಲಿರುವಾಗ ಮಾತ್ರ ನಡೆಯುತ್ತದೆ. ಮನುಷ್ಯ ನಿದ್ರೆಯೊಳಗೆ ಹೋದಾಗ ಮನಸ್ಸು ಅಂತರೇಂದ್ರಿಯಗಳಿಗು ಬಾಹ್ಯೇಂದ್ರಿಯಗಳಿಗೂ ಮಧ್ಯವರ್ತಿ ಕೆಲಸ ಮಾಡದೆ ಶರೀರದಲ್ಲಿನ ಬ್ರಹ್ಮನಾಡಿಯಲ್ಲಿ ನಿಕ್ಷಿಪ್ತವಾಗಿ ಹೋಗುವುದು. ಅಂತಹ ನಿದ್ರೆ ಸಮಯದಲ್ಲಿ ಸಹ ಹೊರಗಿನ ಇಂದ್ರಿಯಗಳು ಕೆಲಸಮಾಡುತ್ತಲೇ ಇರುವವು. ಕಿವಿಗೆ ಶಬ್ದ ಕೇಳಿಸುತ್ತಲೇ ಇರುತ್ತದೆ. ಒಳಗೆ ಮನಸ್ಸು ಇಲ್ಲವಾದ್ದರಿಂದ ಆ ಶಬ್ದವಿಷಯವನ್ನು ಒಳಗಿರುವ ಬುದ್ಧಿ ಗ್ರಹಿಸಲಾರದು. ಬುದ್ಧಿ ಗ್ರಹಿಸಲಿಲ್ಲ ಆದ್ದರಿಂದ ಉಳಿದ ಚಿತ್ತಕ್ಕೂ, ಅಹಂಗೂ, ಜೀವಾತ್ಮನಿಗೂ ತಿಳಿಯುವ ಅವಕಾಶವೇ ಇಲ್ಲ. ಇದು ಸಾಧಾರಣವಾಗಿ ನಿದ್ರೆ ಸಮಯದಲ್ಲಿ ಇರುವ ಸ್ಥಿತಿ. ಆದರೆ ನಿದ್ರೆಯಲ್ಲೂ ಸಹ ಒಳಗಿರುವ ಬುದ್ಧಿಗೆ ಹೊರಗಿರುವ ಇಂದ್ರಿಯವಿಷಯಗಳು ಸೇರುವ ತತಂಗವು ಸಹ ಇದೆ. ಈ ವ್ಯವಹಾರ ಬಹಳ ಜನರಿಗೆ ತಿಳಿದಿಲ್ಲ. ಕೆಲವು ಅತ್ಯವಶ್ಯಕ ಪರಿಸ್ಥಿತಿಗಳಲ್ಲಿ ಕಿವಿಯಲ್ಲಿ ಕೇಳಿಸುವ ಶಬ್ದವನ್ನು, ಶರೀರದಲ್ಲಿ ಎಲ್ಲಾ ವ್ಯಾಪಿಸಿರುವ ಆತ್ಮ ಒಳಗಿರುವ ಬುದ್ಧಿಗೆ ಸೇರಿಸುತ್ತದೆ. ಶರೀರದಲ್ಲಿನ ಮನಸ್ಸು ಎಚ್ಚರ ಸಮಯದಲ್ಲಿ ಮಾತ್ರ ಶರೀರವೆಲ್ಲಾ ವ್ಯಾಪಿಸಿದ್ದು, ನಿದ್ರೆಯಲ್ಲಿ ಬ್ರಹ್ಮನಾಡಿಯಲ್ಲಿ ಸೇರಿಹೋಗುವುದು. ಹಾಗೇ ಆತ್ಮ ಶರೀರವೆಲ್ಲಾ ನಿದ್ರೆಯಲ್ಲೂ ಎಚ್ಚರದಲ್ಲೂ ವ್ಯಾಪಿಸಿರುತ್ತದೆ. ಎಚ್ಚರದಲ್ಲಿ ಮನಸ್ಸು ಮಾಡುವ ಕೆಲಸವನ್ನು ಆತ್ಮ ಎಷ್ಟುಮಾತ್ರ ಮಾಡುವುದಿಲ್ಲ. ನಿದ್ರೆಯಲ್ಲಿ ಮನಸ್ಸು ಇಲ್ಲವಾದ್ದರಿಂದ ಕೆಲವು ಪ್ರತ್ಯೇಕ ಸಮಯಗಳಲ್ಲಿ ಮಾತ್ರ ಮನಸ್ಸೊಂದರ ಕೆಲಸವನ್ನು ತಾನೇ ಮಾಡುತ್ತದೆ. ಹಾಗೆಂದು ಮನಸ್ಸೊಂದರ ಎಲ್ಲಾ ಕೆಲಸಗಳು ಆತ್ಮ ಮಾಡುವುದಿಲ್ಲ. ನಿದ್ರಿಸುತ್ತಿರುವ ವ್ಯಕ್ತಿಯನ್ನು ಯಾರಾದರೂ ಕರೆದಾಗ, ಅವನವರೆಗು ಆ ವಿಷಯ ಸೇರುವುದಿಲ್ಲ, ಆದ್ದರಿಂದ ಆಗ ಮಾತ್ರ ಆ ಶಬ್ದವನ್ನು ಒಳಗೆ ಸೇರಿಸುವುದು. ಹಾಗೇ ಯಾರಾದರೂ ನಿದ್ರಿಸುವ ವ್ಯಕ್ತಿಯನ್ನು ತಟ್ಟಿದಾಗ ಸಹ ಆ ಸ್ಪರ್ಶವನ್ನು ಬುದ್ಧಿಗೆ ತಿಳಿಸುವುದು. ಆತ್ಮ ಯಾವಾಗಲೂ ಶರೀರವೆಲ್ಲಾ ವ್ಯಾಪಿಸಿರುವುದರಿಂದ ಕೆಲವು ಸಮಯಗಳಲ್ಲಿ ಮಾತ್ರ ಹಾಗೆ ಮಾಡುತ್ತಿದೆ. ಅತ್ಯವಶ್ಯಕ

ಸಮಯಗಳಲ್ಲಿ ಆತ್ಮ ಸೇರಿಸಿದ ವಿಷಯ ಬುದ್ಧಿಗೆ ತಿಳಿದಾಗ, ಬುದ್ಧಿ ಮನಸ್ಸಿಗೆ ತಿಳಿಸುವುದರಿಂದ, ಮನಸ್ಸು ತಕ್ಷಣವೇ ಶರೀರವೆಲ್ಲಾ ವ್ಯಾಪಿಸಿ ಎಚ್ಚರಿಸುತ್ತದೆ. ಶರೀರದಲ್ಲಿ ನಿದ್ರೆಯಾಗಲಿ, ಎಚ್ಚರವಾಗಲಿ ಮನಸ್ಸನ್ನು ಅನುಸರಿಸಿ ಇರುತ್ತದೆ. ಹಗಲು ಶರೀರವೆಲ್ಲಾ ವ್ಯಾಪಿಸಿದ ಮನಸ್ಸು ರಾತ್ರಿ ಬ್ರಹ್ಮನಾಡಿಯನ್ನು ಸೇರಿ ನಿದ್ರೆ ಹೊಂದುತ್ತಿದೆ. ಆತ್ಮ ಹಾಗಲ್ಲದೆ ಯಾವಾಗಲೂ ಶರೀರವೆಲ್ಲಾ ವ್ಯಾಪಿಸಿ ಇದೆಯೆಂದು ತಿಳಿಯಬೇಕು. ಮನಸ್ಸಿಗೆ ನಿದ್ರೆ ಎನ್ನುವ ವಿಶ್ರಾಂತಿ ಇದೆ. ಆದರೆ ಆತ್ಮನಿಗೆ ಅಂತಹ ವಿಶ್ರಾಂತಿ ಇಲ್ಲ. ಆತ್ಮಕ್ಕೆ ನಿದ್ರೆ ಇಲ್ಲ ಆದರೆ ನಿದ್ರೆಗಿಂತಲೂ ಭಿನ್ನವಾದ ನಿದ್ರೆಯಂತಹ ವಿಶ್ರಾಂತಿ ಒಂದು ಇದೆಯೆಂದು ಹೇಳಬಹುದು. ಅದೇ ಬ್ರಹ್ಮಯೋಗ. ಬ್ರಹ್ಮಯೋಗವನ್ನು ಮನುಷ್ಯ ಆಚರಿಸುತ್ತಿಲ್ಲ ಆದ್ದರಿಂದ ಮನೋ ವಿಶ್ರಾಂತಿ ಇರುವಹಾಗೆ ಮನುಷ್ಯನಿಗೆ ಆತ್ಮ ವಿಶ್ರಾಂತಿ ಇಲ್ಲವೆಂದೇ ಹೇಳಬಹುದು. ನಿದ್ರೆ ವಿಶ್ರಾಂತಿ ಯೊಂದರ ಸುಖವನ್ನು ಅನುಭವಿಸಿದ ಜೀವಾತ್ಮನು, ಆತ್ಮ ವಿಶ್ರಾಂತಿಯನ್ನು ಒಂದು ಸಲ ಅನುಭವಿಸಿದರೇ, ಅದಕ್ಕಿಂತ ಮೀರಿದ ಸುಖ ಇಲ್ಲವೆಂದು ತಿಳಿಯಬಲ್ಲನು. ಪ್ರಪಂಚದಲ್ಲಿ ಎಷ್ಟೋ ಬುದ್ಧಿಯನ್ನು ಉಪಯೋಗಿಸುತ್ತಿರುವ ಮನುಷ್ಯ ತನ್ನವೊಂದರ ವಿಷಯ ತಾನು ಯೋಚಿಸದೇ ಹೋಗುತ್ತಿದ್ದಾನೆ. ನಿದ್ರೆಯೆಂದರೆ ಏನು? ನಿದ್ರೆಯಲ್ಲಿ ನಾನೇನಾಗುತ್ತಿದ್ದೇನೆಂದು ಆಲೋಚಿಸುತ್ತಿಲ್ಲ. ನಿದ್ರೆಯಲ್ಲಿ ನನಗೆ ತಿಳಿಯದೇನೇ ಕೆಲಸ ಮಾಡುವ ಶಕ್ತಿ ಯಾವುದೆಂದು ಪ್ರಶ್ನಿಸಿಕೊಳ್ಳದೆ ಹೋಗುವುದು ವಿಡ್ಡೂರವಲ್ಲವೆ! ಇಂದಿನಿಂದಾದರೂ ನಿದ್ರೆ ಎಚ್ಚರಗಳನ್ನು ಕುರಿತು ತನ್ನನ್ನು ತಾನು ಪ್ರಶ್ನಿಸಿಕೊಳ್ಳಬೇಕೆಂದು ಕೋರುತ್ತಿದ್ದೇವೆ.

**938. (8) ಆಕಾಶ ನೀಲಿವರ್ಣ ಅದರಲ್ಲಿನ ಮೇಘಗಳು ಕೆಂಪು, ಕಪ್ಪು ಬಿಳಿ ಕಾಣಿಸುತಿರುತ್ತವೆ. ಮೇಲೆ ಹಾಗೆ ನಾಲ್ಕು ಬಣ್ಣಗಳು ಕಾಣಿಸುವುದರಲ್ಲಿ ಏನಾದರೂ ಅರ್ಥವಿದೆಯಾ? ಏನು?**

ಉ. ಜೀವರಾಶಿಗಳು ನಾಲ್ಕುವರ್ಣಗಳಿವೆಯೆಂದು ಅರ್ಥ.

**ವಿವರ :** ನಮ್ಮಿಂದ ಬರುವ ಮಾತುಗಳಲ್ಲಿಯೂ, ಹಾಗೇ ಕಾಣಿಸುವ ದೃಶ್ಯದಲ್ಲಿಯೂ, ಎಷ್ಟೋ ಜ್ಞಾನ ತಿಳಿಯುವಹಾಗೇ ದೇವರು ಹೊಂದಿಸಿದ್ದಾನೆ. ಉದಾಹರಣೆಗೆ ನೀನು ಇರುವೆಯಷ್ಟಿಲ್ಲ ಎಂದು ಜೀವಾತ್ಮನ್ನು ಕುರಿತು ತಿಳಿದಹಾಗೆ, ನನ್ನ ಕರ್ಮ ಎಂದು ಕರ್ಮವನ್ನು ಕುರಿತು ತಿಳಿದಹಾಗೆ, ಅಯ್ಯೋ ಪಾಪವೆಂದು ಪಾಪವನ್ನು ಕುರಿತು ತಿಳಿದಹಾಗೆ, ಅಮಾಯಕನ ಬಾಯಿಂದಲೂ ಸಹ ಮಾತು ಬರುವುದನ್ನು ನೋಡುತ್ತಲೇ ಇದ್ದೇವೆ.

ಬಾಧೆ ಉಂಟಾದಾಗ ತಲೆಯನ್ನು ಹೊಡೆದುಕೊಳ್ಳುವುದು, ಹಣೆಬರಹ ಎಂದು ಕೈಯಿಂದ ತಲೆಯನ್ನು ತೋರಿಸುವುದು ಮೊದಲಾದ ದೃಶ್ಯಗಳಿಂದ ಸಹ ನಮಗೆ ಎಷ್ಟೋ ಜ್ಞಾನ ತಿಳಿಯುವಹಾಗೆ ದೇವರೇ ಹೊಂದಿಸಿದ್ದಾನೆ. ಹಾಗೇ ಆಕಾಶದಲ್ಲಿ ನಾಲ್ಕು ಬಣ್ಣಗಳು ಕಾಣಿಸುವುದರಲ್ಲೂ ಸಹ ಅರ್ಥವಿದೆ. ಕೆಳಗೆ ಭೂಮಿ ಮೇಲೆ ಭಗವದ್ಗೀತೆಯಲ್ಲಿ ಹೇಳಿದ ಹಾಗೆನಾಲ್ಕು ಜಾತಿಗಳ ಜೀವರಾಶಿಗಳು ಇವೆಯೆಂದು, ಮೇಲಿನ ನಾಲ್ಕು ಬಣ್ಣಗಳಲ್ಲಿ ಅರ್ಥ ಒಳಗೊಂಡಿದೆ. ನನ್ನಿಂದಲೇ ತಾಮಸರು, ರಾಜಸರು, ಸಾತ್ವಿಕರು, ಯೋಗಿಗಳೆಂಬ ನಾಲ್ಕು ಜಾತಿಗಳು ಸೃಷ್ಠಿಸಲ್ಪಟ್ಟಿವೆಯೆಂದು ದೇವರ ವಾಕ್ಯ ಎಲ್ಲರಿಗು ನೆನಪಿಗೆ ಬರುವಹಾಗೆ ಆಕಾಶದಲ್ಲಿ ನಾಲ್ಕು ಬಣ್ಣಗಳು ಕಾಣಿಸುವ ಹಾಗೆ ಮಾಡಿದ್ದಾನೆ. ಸ್ಥಿರ ಸ್ಥಾಯಿಯಾದ ದೇವರಿಗೆ ಸಂಬಂಧಿಸಿರುವುದು ಯೋಗ, ಆದ್ದರಿಂದ ಅದಕ್ಕೆ ಗುರುತಾಗಿ ಎಂದಿಗೂ ಇರುವ ನೀಲಿಬಣ್ಣವನ್ನು ಶಾಶ್ವತವಾಗಿ ಆಕಾಶದಲ್ಲಿ ಇಡುವುದು ನಡೆದಿದೆ. ಚಂಚಲವಾದವು ಮೂರು ಗುಣಗಳು, ಆದ್ದರಿಂದ ಸ್ಥಿರವಾಗಿ ಇಲ್ಲದೆ ಬದಲಾಗುವ ಮೂರು ಬಣ್ಣಗಳನ್ನು ಮೇಲೆ ಮೇಘಗಳಲ್ಲಿ ತೋರಿಸುವುದು ನಡೆದಿದೆ. ಚಾತುರ್ವರ್ಣವಾದ ಮೇಲಿನ ಬಣ್ಣಗಳ ಹಾಗೆ ಚಾತುರ್ವರ್ಣವಾದ ಮನುಷ್ಯ ಜಾತಿಗಳಿವೆಯೆಂದು ಅವುಗಳೇ ಯೋಗಿಗಳು, ಸಾತ್ವಿಕರು, ರಾಜಸರು, ತಾಮಸರೆಂದು ತಿಳಿಯಬೇಕು. ನೀಲಿಬಣ್ಣ ಯೋಗವನ್ನು, ಸಾತ್ವಿಕ ಬಿಳುಪನ್ನು, ಕಪ್ಪು ರಾಜಸವನ್ನು, ಕೆಂಪು ತಾಮಸವನ್ನು ಸೂಚಿಸುತ್ತಿವೆಯೆಂದು ತಿಳಿಯಬೇಕು.

**939. (9) ಜೀವರಾಶಿಗಳು ಅಂಡಜ, ಪಿಂಡಜ, ಉದ್ಭಿಜಗಳಾಗಿ ಏಕೆ ಇವೆ?**

ಉ. ತ್ರೈತವನ್ನು ತಿಳಿಸುವುದಕ್ಕೆ.

**ವಿವರ :** ಭೂಮಿ ಮೇಲೆ ಯಾವ ಜೀವರಾಶಿ ಹುಟ್ಟಿದರೂ ಅದು ಮೂರು ಆತ್ಮಗಳ ಸಂಬಂಧದಿಂದಲೇ ಇರುವುದೆಂದು ತಿಳಿಯುವಹಾಗೆ ಜೀವರಾಶಿಗಳಿಗೆ ಮೂರು ವಿಧ ಜನ್ಮಗಳಿವೆಯೆಂದು ತಿಳಿಯಬೇಕು. ಪ್ರಾರಬ್ಧ, ಆಗಾಮಿ, ಸಂಚಿತವೆನ್ನುವ ಮೂರು ಕರ್ಮಗಳು ಇರುವ ಜೀವಿಗಳು ತಾಮಸ, ರಾಜಸ, ಸಾತ್ವಿಕವೆನ್ನುವ ಮೂರು ಗುಣಗಳೊಂದಿಗೆ ಜೀವಾತ್ಮ, ಆತ್ಮ, ಪರಮಾತ್ಮಗಳೆನ್ನುವ ಮೂರು ಆತ್ಮಗಳನ್ನೊಂದಿ ಹುಟ್ಟುತ್ತಿವೆಯೆಂದು ತಿಳಿಯುವಹಾಗೆ ಮೊಟ್ಟೆ ಯಿಂದ, ಪಿಂಡದಿಂದ, ಭೂಮಿಯಿಂದ ಮೂರು ವಿಧಗಳಾಗಿ ಜೀವಿಗಳು ಹುಟ್ಟುವಹಾಗೆ ದೇವರು ನಿರ್ಮಿಸಿದ್ದಾನೆ. ತ್ರೈತವಿಧ ಜನ್ಮಗಳು ತ್ರೈತಾತ್ಮಗಳಿಂದ ಕೂಡಿಕೊಂಡಿವೆಯೆಂದು ಮಾನವನು ತಿಳಿಯುವುದಕ್ಕೇ ಅಂಡ, ಪಿಂಡ, ಬ್ರಹ್ಮಾಂಡಗಳನ್ನು ದೇವರು ಸೃಷ್ಠಿಸಿದ್ದಾನೆ.

**940. (10) ಮನುಷ್ಯರಿಗೆ ಆದಿ ಗುರುಯಾರು?**

ಉ. ಸೂರ್ಯನು.

**ವಿವರ :** ಭೂಮಿ, ಚಂದ್ರ, ಸೂರ್ಯ ಕೆಲವರ ಲೆಕ್ಕದಲ್ಲಿ ದೇವರಾಗಿ ಇದ್ದಾರೆ. ವಾಸ್ತವಕ್ಕೆ ಪರಮಾತ್ಮ, ಖುದಾ, ಪುರುಷೋತ್ತಮ, ಆದಿ ಮಧ್ಯ ಅಂತ್ಯರಹಿತನಾದ ದೇವರು ಹೊರತು ಯಾರು ದೇವರಿಗೆ ಸಮಾನರಲ್ಲ. ಪ್ರಜೆಗಳ ಲೆಕ್ಕದಲ್ಲಿ ಎಷ್ಟು ದೇವತೆಗಳಿದ್ದರು ಆ ದೇವತೆಗಳನ್ನು ಸಹ ಹುಟ್ಟಿಸಿದ ಆದಿದೇವರಾದ ದೇವದೇವನಿದ್ದಾನೆ. ಆತನೊಬ್ಬನೇ ಸೃಷ್ಟಿಗೆ ಅಧಿಪತಿ ಮತ್ತು ಪೂಜ್ಯನೀಯನು. ಭಗವದ್ಗೀತೆಯಲ್ಲಿ ಎಲ್ಲಾ ನನ್ನಲ್ಲೇ ಇವೆ, ಎಲ್ಲದಕ್ಕು ನಾನೇ ಅಧಿಪತಿ ಎಂದು ದೇವರು ಹೇಳಿದ್ದಾನೆ. ಅಷ್ಟೇ ಅಲ್ಲದೆ ಸೃಷ್ಟಿಆದಿ ಕಾಲದಲ್ಲೇ ಸೂರ್ಯನಿಗೆ ಜ್ಞಾನವನ್ನು ತಿಳಿಸಿದ್ದೇನೆಂದು ಸಹ ಹೇಳಿದ್ದಾನೆ. ಅಸಲಾದ ದೇವರಿಂದ ಮೊದಲು ಜ್ಞಾನವನ್ನು ತಿಳಿದವನು ಸೂರ್ಯನು, ಸೂರ್ಯನಿಂದ ಭೂಮಿ ಮೇಲಿರುವ ಮನುಷ್ಯರಿಗೆ ಮೊದಲು ಜ್ಞಾನ ತಿಳಿದಿದೆಯೆಂದು ಗೀತೆಯಲ್ಲಿ ಹೇಳಲಾಗಿದೆ. ಭೂಮಿ ಮೇಲೆ ಅತಿ ಚಿಕ್ಕದಾಗಿರುವ ಮನುಷ್ಯರಿಗೆ ಜ್ಞಾನ ತಿಳಿಯದ ಮೊದಲೇ ಗ್ರಹಗಳಾದ ಗೋಳಗಳಿಗೆ ಜ್ಞಾನ ತಿಳಿದಿದೆ. ಮನುಷ್ಯ ಅಜ್ಞಾನವಶದಲ್ಲಿ ದೇವರನ್ನು ಮರೆತು ಹೋದರೂ ಗೋಳಗಳಲ್ಲಿರುವ ಗ್ರಹಗಳು ದೇವರನ್ನು ಮರೆತುಹೋಗಿಲ್ಲ. ಅವು ದೇವರ ನಿಯಮವನ್ನು ಅನುಸರಿಸಿಯೇ ಪ್ರವರ್ತಿಸುತ್ತಿವೆ. ಅಷ್ಟೇ ಅಲ್ಲದೆ ನಿಮ್ಮ ಹಾಗೆ ನಾವು ಅಂಡಜಗಳಲ್ಲ, ಪಿಂಡಜಗಳಲ್ಲ, ಉದ್ಭಿಜಗಳಲ್ಲವೆಂದು ಸಹ ತಿಳಿಸುತ್ತಿವೆ. ಮುಖ್ಯವಾಗಿ ಆಕಾಶದಲ್ಲಿನ ಗ್ರಹಗಳೆಲ್ಲವೂ ಗೋಳವಾಗಿದ್ದು ಮುಖ್ಯವಾದ ಜ್ಞಾನವನ್ನು ಮನುಷ್ಯರಿಗೆ ತಿಳಿಸುತ್ತಿವೆ. ಗೋಳಕ್ಕೆ ಇದು ಮೊದಲು ಎಂದಾಗಲಿ, ಇದು ಕೊನೆ ಎಂದಾಗಲಿ ಇರುವುದಿಲ್ಲ. ಒಂದು ವೃತ್ತಾಕಾರವನ್ನು ನೋಡಿದರೆ ಅದರಲ್ಲಿನ ಆದಿ ಮಧ್ಯೆ ಅಂತ್ಯಗಳಿರುವುದಿಲ್ಲ. ಯಾವ ಗೋಳಕ್ಕು ಸಹ ಆದಿ ಮಧ್ಯೆ ಕೊನೆಗಳಿಲ್ಲ. ಗೋಳಗಳಾಗಿ ಗ್ರಹಗಳೆಲ್ಲವೂ ಏಕಿವೆಯೆಂದರೆ ನಾವು ದೇವರುಗಳಲ್ಲ, ನಮ್ಮನ್ನು ಸೃಷ್ಟಿಸಿದವನು ಆದಿ ಮಧ್ಯಾಂತರಹಿತನಾದ ದೇವರೆಂದು ಹೇಳುವ ಸಲುವಾಗಿ ಹಾಗೆ ಇವೆ. ಪೂರ್ವದಲ್ಲಿ ಇತರ ದೇಶಗಳಲ್ಲಿ ಸೂರ್ಯನನ್ನು ಹೆಚ್ಚಾಗಿ ಪೂಜಿಸುತ್ತಿದ್ದರು. ಕ್ರಿಸ್ತ ಪೂರ್ವ, ಇಸ್ಲಾಂಗಿಂತ ಪೂರ್ವದಲ್ಲಿ ಅನೇಕ ದೇಶಗಳಲ್ಲಿ ಗ್ರಹಗಳನ್ನೆ ದೇವತೆಗಳಾಗಿ ಪೂಜಿಸುತ್ತಿದ್ದರು. ಇಂದಿಗೂ ಸೂರ್ಯ ಚಂದ್ರರನ್ನು ದೇವರುಗಳಾಗಿ ಭಾರತದೇಶದಲ್ಲಿ ಸಹ ಪೂಜಿಸುವುದು ಇದೆ. ಮನುಷ್ಯರಲ್ಲಿ ಅಂತಹ ಭಾವ ಹೋಗಿ ಗ್ರಹಗಳನ್ನು ಸಹ ತಯಾರು ಮಾಡಿದವನು ಈ ವಿಧವಾಗಿ ಕೊನೆ ಇಲ್ಲದವನಾಗಿದ್ದಾನೆಂದು ತಿಳಿಯುವಹಾಗೆ, ಆದಿ ಮಧ್ಯಾಂತರಹಿತರಾದ ಗೋಳಗಳ

ಮೇಲೆ ತನ್ನ ವಿಧಾನವನ್ನು ಗುರುತಾಗಿ ಕಾಣಿಸುವಹಾಗೆ, ಮೊದಲು ಕೊನೆ ಇಲ್ಲದವನಿಗೆ ಹೆಸರಿಡುವುದಕ್ಕೆ ಸಾಧ್ಯವಿಲ್ಲವೆಂದು ತಿಳಿಯುವಹಾಗೆ ಗುಂಡಾಗಿರುವ ಗೋಳದಲ್ಲಿ ಗುರುತ್ವಾಕರ್ಷಣ ಶಕ್ತಿ ಹೊಂದಿ ಮನುಷ್ಯನಿಗೆ ಜ್ಞಾನ ತಿಳಿಸುವ ಗುರುಎನ್ನುವವನು ಹುಟ್ಟಿದ್ದಾನೆಂದು, ಗುಂಡಾಗಿರುವ ಆಕೃತಿಯಿಂದ ಬಂದಿರುವ ಗುರುವೇ ಎಲ್ಲರಿಗಿಂತ ಮೊದಲು ಬಂದು ಬೋಧಿಸಿದ ಸೂರ್ಯನೆಂದು, ಸೂರ್ಯನು ಮಾನವರಿಗೆ ಆದಿ ಗುರುವೆಂದು, ಆದಿ ಗುರುವಾದ ಸೂರ್ಯನು ಸಹ ಪರಮಾತ್ಮನನ್ನು ಕುರಿತು ತನ್ನ ಬೋಧನೆಯಲ್ಲಿ ತಿಳಿಸಿದ್ದಾನೆಂದು ಎಲ್ಲರು ತಿಳಿಯಬೇಕು. ಸೂರ್ಯನು ಸೂರ್ಯೋದಯದಲ್ಲಿ ಗುಂಡಾಗಿ ಪ್ರಪಂಚದಲ್ಲಿನ ಮಾನವರೆಲ್ಲರಿಗೂ ಕಾಣಿಸುತ್ತಾ ದೇವರು ಪರಿಪೂರ್ಣನೆಂದು, ಆದಿ ಮಧ್ಯೆ ಅಂತ್ಯಗಳು ಇಲ್ಲದವನೆಂದು ಅರ್ಥವಾಗುವಹಾಗೆ ತನ್ನ ದರ್ಶನದಲ್ಲಿ ಎಲ್ಲರಿಗು ತಿಳಿಸುತ್ತಿದ್ದಾನೆ. ಸೂರ್ಯೋದಯದಲ್ಲೇ ತನ್ನ ಬೋಧನೆಯನ್ನು ತಿಳಿಸುವ ದೃಶ್ಯವನ್ನು ತೋರಿಸುತ್ತಿದ್ದಾನೆ. ಆದ್ದರಿಂದ ಸೂರ್ಯನು ಅಂದಿಗೂ ಇಂದಿಗೂ ಮನುಷ್ಯರೆಲ್ಲರಿಗೂ ಆದಿ ಗುರುವೇ ಎಂದು ಹೇಳಬಹುದು. ಭೂಮಿ ಮೇಲೆ ಮನುಷ್ಯರಾದ ಬೋಧಕರು ಯಾವ ಜ್ಞಾನವನ್ನು ಹೇಳಿದರು ತಾನು ಮಾತ್ರ ಪ್ರತಿನಿತ್ಯ ದಿನಕ್ಕೆ ಆದಿಯಾದ ಉದಯವೇ ತನ್ನ ಬೋಧನೆಯನ್ನು ತಿಳಿಸುವ ಆದಿ ಗುರುವು ರವಿ ಎಂದು ತಿಳಿಯಬೇಕು. ಪೂರ್ವದಲ್ಲಿ ಮೊಟ್ಟಮೊದಲು ಮನುಷ್ಯರಿಗೆ ಜ್ಞಾನ ತಿಳಿಸಿ ಆದಿ ಗುರುವಾದ ಸೂರ್ಯನು, ಇಂದಿಗೂ ಉದಯವೇ ದೇವರ ಜ್ಞಾನವನ್ನು ತಿಳಿಸುವ ಆದಿ ಗುರುವಾಗಿಯೇ ಇದ್ದಾನೆ. ಪ್ರಪಂಚದಲ್ಲಿ ಎಂದಿಗೂ ಮನುಷ್ಯರಿಗೆ ತಿಳಿದರೂ ತಿಳಿಯದಿದ್ದರೂ ಚಂದಮಾಮ ಎಲ್ಲರಿಗೂ ಮಾಮನೇ, ಹಾಗೇ ಸೂರ್ಯನು ಎಲ್ಲರಿಗು ಆದಿ ಗುರುವೇ. ಸೂರ್ಯನು ತನ್ನ ಉದಯದೊಂದಿಗೆ ಎಷ್ಟೋ ದೊಡ್ಡ ದೇವರ ಜ್ಞಾನವನ್ನು ತಿಳಿಸುತ್ತಾ, ಅಜ್ಞಾನ ಅಂಧಕಾರ ದೇವರ ಜ್ಞಾನದಿಂದ ತೊಲಗಿ ಹೋಗುತ್ತದೆನ್ನುವಹಾಗೆ, ತನ್ನ ಉದಯ ಬೆಳಕಿನಿಂದ ಕತ್ತಲನ್ನು ಇಲ್ಲದೆ ಮಾಡುತ್ತಿದ್ದಾನೆ. ಮನುಷ್ಯ ಆಧ್ಯಾತ್ಮಿಕ ಚಿಂತೆಯಿಂದ ಸೂರ್ಯನನ್ನು ನೋಡಿದರೆ ಎಷ್ಟೋ ಬೆಲೆಯಿರುವ ದೈವವಿಷಯ ತಿಳಿಯಬಲ್ಲದು. ಹಾಗಲ್ಲದೆ ಆತನನ್ನು ಒಬ್ಬ ದೇವರಾಗಿ ನೆನೆದು ಮುಗಿದರೂ, ಎಷ್ಟು ಸೂರ್ಯ ನಮಸ್ಕಾರಗಳನ್ನು ಮಾಡಿದರೂ ಸ್ವಲ್ಪವಾದರು ಜ್ಞಾನ ಬರುವುದಿಲ್ಲ. ಅಜ್ಞಾನ ಕತ್ತಲು ಮನುಷ್ಯನೊಳಗೆ ಹಾಗೇ ಇರುತ್ತದೆ. ಇಂದಿನಿಂದಾದರೂ ಸೂರ್ಯನನ್ನು ಆದಿ ಗುರುವೆನ್ನುವ ಭಾವದಿಂದ ನೋಡಿದರೆ ಎಷ್ಟೋ ಜ್ಞಾನ ಉಂಟಾಗುತ್ತದೆ.

# ಜ್ಞಾನ ಪರೀಕ್ಷೆ

**ಬಂದರ್ಲ ಪಲ್ಲಿ** **ದಿನಾಂಕ–16–02–2003**

**941. (1) ನೊಣ ಪ್ರಸವಿಸಿದರೆ ಸೊಳ್ಳೆ ನೆಕ್ಕಿದೆಯಂತೆ ನೊಣ ಯಾವುದು? ಸೊಳ್ಳೆ ಯಾವುದು?**

ಉ. ಮನಸ್ಸು, ಬುದ್ಧಿ.

**ವಿವರ :** ನೊಣ ಸೊಳ್ಳೆ ಎರಡೂ ಅಂಡಜಗಳೇ, ಅಷ್ಟೇ ಅಲ್ಲದೆ ನೊಣಕ್ಕು ಸೊಳ್ಳೆಗು ಎರಡಕ್ಕು ಸೊಂಡಿಲು ಇರುತ್ತದೆ. ಅಂಡಜವಾಗಿರುವುದರಿಂದ ನೊಣ ಈಯುವುದಿಲ್ಲ, ಹಾಗೇ ಸೊಳ್ಳೆಗೆ ಸೊಂಡಿಲಿರುವುದರಿಂದ ಸೊಳ್ಳೆ ನೆಕ್ಕುವುದಕ್ಕೆ ಸಾಧ್ಯವಿಲ್ಲ. ಸೊಳ್ಳೆಗೆ ನಾಲಿಗೆ ಇಲ್ಲ, ನೊಣಕ್ಕೆ ಮರಿ ಹುಟ್ಟುವುದಿಲ್ಲ, ಆದ್ದರಿಂದ ಈ ಪ್ರಶ್ನೆಗೆ ಉತ್ತರ ಪ್ರಪಂಚ ಸಂಬಂಧವಾಗಿ ಹೇಳುವುದಕ್ಕೆ ಅವಕಾಶವೇ ಇಲ್ಲ. ಆಧ್ಯಾತ್ಮಿಕ ಸಂಬಂಧದಿಂದಲೇ ಹೋಲಿಕೆ ಸರಿಯಾಗಬಹುದು, ಆದ್ದರಿಂದ ನಮ್ಮ ದೃಷ್ಟಿ ಎಲ್ಲವನ್ನು ಪ್ರಪಂಚ ಸಂಬಂಧವನ್ನು ಬಿಟ್ಟು ಪರಮಾತ್ಮ ಸಂಬಂಧದಕಡೆ ತಿರುಗಿಸಿ ನೋಡಬೇಕು. ಈ ಪ್ರಶ್ನೆಯಲ್ಲಿ ನೊಣದಿಂದ ಹುಟ್ಟಿದ್ದನ್ನು ಸೊಳ್ಳೆ ರುಚಿನೋಡಿದೆಯೆಂದು ಹೇಳುವುದೇ ವಿಶೇಷವಾದ ಸಾರಾಂಶ. ನೊಣ ಒಂದೇ ಪದಾರ್ಥದ ಮೇಲೆ ನಿಗ್ರಹವಾಗಿ ಕೂರುವುದಿಲ್ಲ. ನೊಣಕ್ಕೆ ಪಕ್ಕದ ನಿಘಾ ಹೆಚ್ಚಾಗಿರುತ್ತದೆ. ಪದಾರ್ಥಗಳ ವಾಸನೆಗಳನ್ನು ಗ್ರಹಿಸಿ ಅನುಭವಿಸುತ್ತಿರುವ ಪದಾರ್ಥವನ್ನು ಬಿಟ್ಟು ಪಕ್ಕದಲ್ಲಿರುವ ಮತ್ತೊಂದು ಪದಾರ್ಥದ ಮೇಲೆ ಹೋಗುವುದು ಅದರ ಸಹಜತ್ವ. ಸೊಳ್ಳೆ ಹಾಗಲ್ಲದೆ ಒಬ್ಬ ವ್ಯಕ್ತಿ ಮೇಲೆ ವಾಲಿ, ರಕ್ತವನ್ನು ಸೊಂಡಿಲೊಂದಿಗೆ ಹೀರುವುದನ್ನು ಶುರು ಮಾಡಿದರೆ ಇನ್ನು ಪಕ್ಕ ನೋಟ ನೋಡುವುದಿಲ್ಲ. ಹೊಟ್ಟೆ ತುಂಬಿದರೂ ಬಿಡುವುದಿಲ್ಲ. ಹೊಟ್ಟೆ ತುಂಬಿದರು ರಕ್ತವನ್ನು ಹೀರುತ್ತಾ ವಿಸರ್ಜನಾವಯವದಿಂದ ಹೊರಗೆ ಬಿಡುವುದನ್ನು ನೋಡಿರುತ್ತೇವೆ. ರಕ್ತ ಹೀರುವಾಗ ಪಕ್ಕ ನೋಟ ಇಲ್ಲದಿರುವುದರಿಂದ ಆಗಾಗ ಮನುಷ್ಯನ ಕೈಯ್ಯಿಗೂ ಸಹ ಸೊಳ್ಳೆ ಸಿಗುತ್ತದೆ. ಇದನ್ನನುಸರಿಸಿ ನೋಡಿದರೆ ನೊಣ ಚಂಚಲವಾದದ್ದೆಂದು, ಸೊಳ್ಳೆ ಚಂಚಲವಿಲ್ಲದ್ದೆಂದು ತಿಳಿಯುತ್ತಿದೆ. ನೊಣ ಸೊಳ್ಳೆ ಎರಡು ಅಂಡಜಗಳಾದ ಒಂದೇ ಜಾತಿಯವು, ಆದ್ದರಿಂದ ಈ ಎರಡರನ್ನು ಆಧ್ಯಾತ್ಮಿಕ ದೃಷ್ಟಿಯಲ್ಲಿ ಶರೀರದಲ್ಲಿನ ಆಕಾಶ ತತ್ತ್ವದಿಂದ ಹುಟ್ಟಿದ ಒಂದೇ ಅಂತರೇಂದ್ರಿಯ ಜಾತಿಯಾಗಿ ಹೋಲಿಸಬಹುದೆಂದು ತಿಳಿಯುತ್ತಿದೆ. ನೊಣ ಚಂಚಲವಾದ ದೃಷ್ಟಿ ಇರುವುದಾದ್ದರಿಂದ ಮನಸ್ಸಾಗಿ, ಸೊಳ್ಳೆ ಚಂಚಲವಿಲ್ಲದ್ದಾದ್ದರಿಂದ ಬುದ್ಧಿಯಾಗಿ ಹೋಲಿಸಲಾಗಿದೆ.

ಮನಸ್ಸು ಸೇರಿಸುವ ವಿಷಯಗಳನ್ನೇ ಬುದ್ಧಿ ಗ್ರಹಿಸಿ, ಆ ವಿಷಯದ ಮೇಲೆ ಲಗ್ನವಾಗಿ ಪಕ್ಕದ ಧ್ಯಾಸವಿಲ್ಲದೆ ಯೋಚಿಸಲು ಪ್ರಾರಂಭಿಸುತ್ತದೆ. ಬುದ್ಧಿ ಯೊಚಿಸುವ ವಿಷಯ ಮನಸ್ಸು ತಿಳಿಸಿರುವುದೇ, ಆದ್ದರಿಂದ ಮನಸ್ಸು ಈದರೆ ಸೊಳ್ಳೆ ನೆಕ್ಕುವುದೆಂದಿದ್ದೇವೆ. ಮನಸ್ಸಿನಿಂದ ಆಲೋಚನೆಗಳು ಹುಟ್ಟುತ್ತಾ ಬುದ್ಧಿಯಿಂದ ಯೋಚಿಸಲಾಗುತ್ತಿವೆ. ಆದ್ದರಿಂದ ಶರೀರದಲ್ಲಿನ ಚಂಚಲವಾದ ಮನಸ್ಸನ್ನು ಚಂಚಲವಾದ ನೊಣವಾಗಿ ಹೋಲಿಸಿ, ಚಂಚಲವಿಲ್ಲದ ಬುದ್ಧಿಯನ್ನು ಚಂಚಲವಿಲ್ಲದ ಸೊಳ್ಳೆಯೊಂದಿಗೆ ಹೋಲಿಸಿ ಹೇಳಲಾಗಿದೆ. ಮನಸ್ಸು ಬುದ್ಧಿ ಎರಡೂ ಆಕಾಶದಿಂದ ಹುಟ್ಟಿರುವವು, ಆದ್ದರಿಂದ ಎರಡನ್ನು ಮೊಟ್ಟೆಯಿಂದ ಹುಟ್ಟಿರುವವಾಗಿ ಹೇಳಲಾಗಿದೆ. ನಮ್ಮಲ್ಲಿರುವ ನೊಣ, ಸೊಳ್ಳೆಯಾದರು, ಮನೋ, ಬುದ್ಧಿಯನ್ನು ಗಮನಿಸಿ ವಿಷಯಗಳ ಮೇಲೆ ವಾಲದಹಾಗೆ ನೊಣವನ್ನು, ಪ್ರಪಂಚ ವಿಷಯಗಳ ರುಚಿಯಲ್ಲಿ ಮುಳುಗಿ ಹೋಗದೆ ಸೊಳ್ಳೆಯನ್ನು ಸೋಪ (ಓಡಿಸ) ಬೇಕು. ಶರೀರದಲ್ಲಿನ ಜೀವಾತ್ಮ ಶ್ರದ್ಧೆ ಎನ್ನುವ ಬಟ್ಟೆಯಿಂದ ಮನೋ ಬುದ್ಧಿಗಳೆನ್ನುವ ನೊಣ ಸೊಳ್ಳೆಗಳನ್ನು ಓಡಿಸಿದರೆ ಯೋಗವೆನ್ನುವ ನಿದ್ರೆ ಹಾಯಾಗಿಬರುತ್ತದೆ.

**942. (2) ಹಂದಿಗೆ ಹತ್ತು ಮರಿಗಳು ಹುಟ್ಟಿವೆ. ಆದರೆ ಅವುಗಳ ಅರಚುವಿಕೆ ಒಂದೇ, ಹಂದಿ ಯಾವುದು?**

ಉ. ಗಾಳಿ (ವಾಯು).

**ವಿವರ :** ನಮ್ಮ ಶರೀರದಲ್ಲಿನ ವಾಯು ಹತ್ತು ವಿಧಗಳಾಗಿ ವಿಭಜಿಸಲ್ಪಟ್ಟಿದೆ. ಪಂಚ ವಾಯುಗಳು ಐದಾದಾಗ, ಅವುಗಳಿಗೆ ಉಪವಾಯುಗಳು ಐದು ಇವೆ. ಶರೀರದಲ್ಲಿನ ಗಾಳಿಗೆ ಹುಟ್ಟಿರುವವು ಒಟ್ಟು ಹತ್ತು ಗಾಳಿಗಳು, ಆದ್ದರಿಂದ ಹಂದಿಗೆ ಹತ್ತು ಮರಿಗಳು ಹುಟ್ಟಿವೆ ಎಂದಿದ್ದೇವೆ. ವಾಯು ಶಬ್ದ ಮಾಡುವುದು, ಆದ್ದರಿಂದ ಜೋರಾಗಿ ಅರಚುವ ಹಂದಿಯಾಗಿ ವಾಯುವನ್ನು ಗುರ್ತಿಸಿದ್ದೇವೆ. ಅರಚುವಿಕೆ ಇರುವ ಹಂದಿ ಮರಿಗಳ ಶಬ್ದ ಎಲ್ಲಾ ಒಂದೇ ಆದ್ದರಿಂದ ಅವುಗಳ ಅರುಚುವಿಕೆಯೆಲ್ಲ ಒಂದೇ ಎಂದಿದ್ದೇವೆ. ಹಂದಿ ಮರಿಗಳು ಹತ್ತು ವಿಧಗಳು ಅರಚಿದಹಾಗೆ ಶರೀರದಲ್ಲಿನ ಗಾಳಿ ಶಬ್ದ ದಶವಿಧನಾಧಗಳಾಗಿ ಇದೆಯೆಂದಿದ್ದಾರೆ. ಆಪತ್ತಿನಲ್ಲಿ ಹಂದಿಗಳು ಅರಚಿದಹಾಗೆ ಶರೀರದಲ್ಲಿನ ವಾಯುಗಳ ಶಬ್ದಗಳೆಲ್ಲವು ಶರೀರವೊಂದರ ಆಯುಸ್ಸು ನಿಮಿತ್ತವೇ ಇವೆ. ಮುಖ್ಯವಾಗಿ ಪ್ರಾಣವಾಯು ಲೆಕ್ಕದಲ್ಲಿ ವಾಯುವೊಂದರ ಪಾತ್ರ ಪ್ರಶಂಸನೀಯವಾದದ್ದು. ಶರೀರವೊಂದರ ಪಟುತ್ವ ಇಳಿಕೆಯಾಗುವುದಕ್ಕೂ ಸಹ ವಾಯುವೊಂದರ ಪಾತ್ರ ಇದೆ. ಯಾವುದೇನಾದರೂ

ವಾಯುವೇ ಮಾನವನ ಜೀವನ ಕಾಲವನ್ನು ಅಳೆಯಲು ಉಪಯೋಗವಾಗುತ್ತಿದೆಂದು ಹೇಳಬಲ್ಲೆವು. ಪೂರ್ವದಲ್ಲಿ ಶರೀರವೊಂದರ ಜೀವನ ಕಾಲವನ್ನು ನಿರ್ಣಯಿಸುವುದು ವಾಯುವೇ ಎನ್ನುತ್ತಿದ್ದರು. ಕಾಲಕ್ರಮದಲ್ಲಿ ವಾಯು ಆಯುವಾಗಿ ಬದಲಾಗಿದೆ. 1) ವ್ಯಾನವಾಯು 2) ಸಮಾನವಾಯು 3) ಉದಾನವಾಯು 4) ಪ್ರಾಣವಾಯು 5) ಅಪಾನವಾಯುಗಳಾದಾಗ ಉಪವಾಯುಗಳು 1) ನಾಗವಾಯು 2) ಕೂರ್ಮವಾಯು 3) ಕೃಕುರವಾಯು 4) ದೇವದತ್ತ ವಾಯು 5) ಧನಂಜಯ ವಾಯು ಎನ್ನುವವು ಇವೆ. ಹತ್ತು ವಾಯುಗಳಿಗೂ ಮೂಲವಾದ ಗಾಳಿಯನ್ನೇ ಹಂದಿ ಎನ್ನುವುದು ನಡೆದಿದೆ.

**943. (3) ಕನ್ನಡಿಯಲ್ಲಿ ಮುಖ ಕಾಣಿಸುತ್ತದೆ. ಮುಖದಲ್ಲಿ ಏನು ಕಾಣಿಸುತ್ತದೆ?**

ಉ. ಗುಣ ಭಾವಗಳು.

**ವಿವರ :** ಮನುಷ್ಯನ ತಲೆಯಲ್ಲಿ 12 ವಿಧಗಳ ಗುಣಗಳಿವೆ. ಒಂದೊಂದು ಸಮಯದಲ್ಲಿ ಒಂದೊಂದು ಗುಣ ಉದ್ರೇಕಗೊಳ್ಳುವುದು ನಡೆಯುತ್ತಿರುತ್ತದೆ. 12 ಗುಣಗಳು ಒಂದೊಂದು 9 ವಿಧಗಳಾಗಿ ವಿಭಜಿಸಲ್ಪಟ್ಟಿವೆ. ಆದ್ದರಿಂದ ಒಟ್ಟು 108 ಗುಣಗಳಾಗಿ ಇವೆ. ಇದರಲ್ಲಿ 12 ಮೊದಲ ಗುಣಗಳು ಪ್ರಾರಂಭವಾಗಿ ಎರಡು ಮೂರು ಭಾಗಗಳವರೆಗಿರುವ ದೊಡ್ಡ ಗುಣಗಳು ತಗುಲಿಕೊಂಡಾಗ, ಅವುಗಳ ಪ್ರಭಾವದಿಂದ ಮುಖಬದಲಾಗುತ್ತದೆ. ಮುಖದಲ್ಲಿನ ವರ್ಚಸ್ಸು ಬದಲಾವಣೆಗಳು ಗುಣಗಳನ್ನನುಸರಿಸಿ ಇರುತ್ತದೆ. ಮುಖದಲ್ಲಿ ಬರುವ ಬದಲಾವಣೆಯನ್ನನುಸರಿಸಿ ಅಥವಾ ಮುಖದಲ್ಲಿ ಏರ್ಪಡುವ ಬದಲಾವಣೆಯನ್ನನುಸರಿಸಿ ಪ್ರಸ್ತುತ ತಲೆಯಲ್ಲಿ ಯಾವಗುಣವಿರುವುದು ಹೇಳಬಹದು, ಆದ್ದರಿಂದ ಮುಖದಲ್ಲಿ ಗುಣ ಭಾವಗಳು ಕಾಣಿಸುತ್ತವೆಂದು ಹೇಳಬಹುದು. ಉದಾಹರಣೆಗೆ ಕೋಪ ಗುಣವೊಂದರ 9 ಭಾಗಗಳಲ್ಲಿ ಮೂರು ಭಾಗಗಳವರೆಗು ಯಾವುದು ಜೀವಾತ್ಮನಿಗೆ ಏರ್ಪಟ್ಟರು ಅವುಗಳ ಪ್ರಭಾವ ಮುಖದ ಮೇಲೆ ಕಾಣಿಸುತ್ತದೆ. 9 ಭಾಗಗಳಲ್ಲಿ ಮೊದಲನೆಯ ಕೋಪ ದೊಡ್ಡದಾಗಿ, ನಂತರ ಭಾಗಗಳು ಒಂದರನಂತರ ಸಣ್ಣದಾಗಿರುವುದರಿಂದ ಮೊದಲು ಮೂರು ಭಾಗಗಳ ಪ್ರಭಾವ ಮೇಲಕ್ಕೆ ಕಾಣಿಸುತ್ತದೆ. ನಂತರ ಸಣ್ಣವಾದ ಆರು ಭಾಗಗಳ ಪ್ರಭಾವ ಕಾಣಿಸುವುದಿಲ್ಲ. ಕೋಪವೊಂದರ ಮೊದಲನೆಯ ಭಾಗ ಜೀವಾತ್ಮನಿಗೆ ಅಂಟಿಕೊಂಡಾಗ ಮುಖ ಬಹಳ ರೌದ್ರವಾಗಿ ಕಾಣಿಸುತ್ತದೆ. ನಂತರ ಭಾಗಕ್ಕೆ ಸ್ವಲ್ಪ ಕಡಿಮೆ, ಆ ನಂತರ ಭಾಗಕ್ಕೆ ಇನ್ನು ಸ್ವಲ್ಪ ಕಡಿಮೆ ಕಾಣಿಸುತ್ತಾ ಉಳಿದ ಭಾಗಗಳಿಗೆ ಅಷ್ಟಾಗಿ ಕಾಣಿಸದೆ ಹೋಗುವುದು. ಆದ್ದರಿಂದ ಒಬ್ಬ ಮನುಷ್ಯ ಕೋಪಿಸಿಕೊಂಡಾಗ ಅವನ ಮುಖವರ್ಚಸ್ಸನ್ನು ಅನುಸರಿಸಿ ಇವನಿಗೆ

ಬಹಳ ಕೋಪ ಬಂದಿದೆಯೆಂದು, ಸ್ವಲ್ಪ ಕೋಪಬಂದಿದೆಯೆಂದು, ಸ್ವಲ್ಪ ಕೋಪ ಬಂದಿದೆಯೆಂದು ಹೇಳುತ್ತಿರುತ್ತೇವೆ. ಸಣ್ಣ ಕೋಪ ಹೊರಗೆ ಕಾಣಿಸುವುದಿಲ್ಲ, ಆದ್ದರಿಂದ ಅದನ್ನು ಗುರುತಿಸಲಾರೆವು. ಕನ್ನಡಿಯಲ್ಲಿ ಮುಖ ಕಾಣಿಸಿದಹಾಗೆ ಮುಖದಲ್ಲಿ ಗುಣಗಳ ಭಾವಗಳು ಕಾಣಿಸುವುದು ಸತ್ಯವಾದ ಮಾತು.

**944. (4) "ಕಂಚು ಮೊಳಗಿದಹಾಗೆ ಕನಕವು ಮೊಳಗುತ್ತದಾ" ಎಂದಿದ್ದಾರೆ. ಕಂಚು ಯಾವುದು? ಕನಕಯಾವುದು?**

ಉ. ಅಜ್ಞಾನ. ಜ್ಞಾನ.

**ವಿವರ :** ಈ ವಿಷಯವನ್ನೆ ವೇಮನ ಯೋಗಿ ಒಂದು ಪದ್ಯರೂಪದಲ್ಲಿ ಸಹ ಹೇಳಿದ್ದಾನೆ.

ಆ ಪದ್ಯವೇನೆಂದರೆ :

**ಅಲ್ಪನ ಮಾತು ಆಡಂಬರವಾಗಿಯೂ**
**ಸಜ್ಜನನ ಮಾತು ತಂಪಾಗಿಯೂ**
**ಕಂಚು ಮೊಳಗಿದ ಹಾಗೆ ಕನಕ ಮೊಳಗುತ್ತದಾ**
**ವಿಶ್ವದಾಭಿರಾಮ ಕೇಳು ವೇಮ.**

ಈ ಪದ್ಯದಲ್ಲಿ ಜ್ಞಾನಿ ಅಜ್ಞಾನಿಗಳ ವಿಷಯ ಹೇಳುವುದು ನಡೆದಿದೆ. ಅಜ್ಞಾನವನ್ನು ಕುರಿತು ಮಾತನಾಡುವವರು ಅಜ್ಞಾನಿಗಳೇ ಆಗುತ್ತಾರೆ. ಹಾಗೇ ಜ್ಞಾನವನ್ನು ಕುರಿತು ಮಾತನಾಡುವವರು ಜ್ಞಾನಿಗಳೇ ಆಗುತ್ತಾರೆ. ಪ್ರಸ್ತುತ ಕಾಲದಲ್ಲಿ ಅಜ್ಞಾನ ವಿಷಯಗಳನ್ನು ಮಾತನಾಡುವವರು ಹೊರತು ಜ್ಞಾನ ವಿಷಯಗಳನ್ನು ಮಾತನಾಡುವವರು ಎಲ್ಲೂ ಕಾಣಿಸುವುದಿಲ್ಲ. ಜ್ಞಾನ ವಿಷಯಗಳನ್ನು ಮಾತನಾಡುವವರು ಜಿಲ್ಲೆಗೊಬ್ಬರು ಕಾಣಿಸುವುದು ಸಹ ಅಪರೂಪವೇ ಎಂದು ಹೇಳಬಹುದು. ಲೋಹಗಳಲ್ಲಿ ಕಂಚುಲೋಹವನ್ನು ಹೊಡೆದರೆ ಹೆಚ್ಚಿನ ಶಬ್ದವನ್ನು ಮಾಡುತ್ತಾ ಪಕ್ಕದಲ್ಲಿರುವ ನೂರು ಜನ ಕೇಳುವ ಹಾಗೆ ಶಬ್ದ ಮಾಡುತ್ತದೆ. ಅದೇ ವಿಧವಾಗಿ ಬಂಗಾರವನ್ನು ಹೊಡೆದರೆ ಪಕ್ಕದಲ್ಲಿರುವ ಒಬ್ಬನಿಗೂ ಸಹ ಕೇಳಿಸುವ ಶಬ್ದವನ್ನು ಮಾಡುವುದಿಲ್ಲ. ಬಂಗಾರನ್ನು ಕಂಚಿನೊಂದಿಗೆ ಹೋಲಿಸಿ ನೋಡಿದರೆ ಬಂಗಾರ ಎಷ್ಟೋ ದೊಡ್ಡ ಬೆಲೆಯುಳ್ಳದ್ದು. ಬೆಲೆಯುಳ್ಳ ಬಂಗಾರ ಶಬ್ದ ಮಾಡುವುದರಲ್ಲಿ, ಬೆಲೆ ಕಡಿಮೆಯಾದ ಕಂಚಿಗಿಂತ ಬಹಳ ಕಡಿಮೆ. ಹಾಗೇ ಪ್ರಪಂಚದಲ್ಲಿ ಪವಿತ್ರವಾದದ್ದು, ಅದರೊಂದಿಗೆ ಸಮಾನವಾದದ್ದು ಯಾವುದು ಇಲ್ಲದ ಜ್ಞಾನ ಮನುಷ್ಯರನ್ನು

ತನ್ನ ಕಡೆ ಆಕರ್ಷಿಸದೇ ಇದೆ. ಪವಿತ್ರತೆ ಇಲ್ಲದಿರುವ ಅಜ್ಞಾನ ಪ್ರಜೆಗಳೆಲ್ಲರನ್ನು ತನ್ನ ಕಡೆ ಸೆಳೆದುಕೊಳ್ಳುತ್ತಿದೆ. ಜ್ಞಾನಿ ಮಾತನಾಡುವ ಜ್ಞಾನಕ್ಕಿಂತಲೂ, ಅಜ್ಞಾನಿ ಮಾತನಾಡುವ ಅಜ್ಞಾನವೇ ದೊಡ್ಡದಾಗಿ ಕಾಣಿಸುವುದು ಸಹಜವಾಗಿದೆ. ಉದಾಹರಣೆಗೆ ಒಂದು ದೇವಾಲಯದಲ್ಲಿ ಸಾಯಂಕಾಲ ಜ್ಞಾನವನ್ನು ಕುರಿತು ಹೇಳುತ್ತಾರೆ, ಕೊನೆಯಲ್ಲಿ ಪ್ರಸಾದವನ್ನು ಸಹ ಕೊಡಲಾಗುತ್ತದೆ, ಎಂದು ಹೇಳಿದರೂ ಜ್ಞಾನವನ್ನು ಕೇಳುವುದಕ್ಕೆ ಹತ್ತು ಜನರು ಸಹ ಬರುವುದಿಲ್ಲ. ಒಂದು ವೇಳೆ ಬಂದರು ವಯಸ್ಸಾದ ಮುದುಕರು ಬಿಟ್ಟರೆ ಉಳಿದವರಿರುವುದಿಲ್ಲ. ಬಂದವರು ಕೇಳಿರುವ ವಿಷಯವನ್ನು ಅರ್ಥ ಮಾಡಿಕೊಳ್ಳದೆ ಬುದ್ಧಿಮಾಂದ್ಯ ಇರುವವರೇ ಇರುತ್ತಾರೆ. ವಯಸ್ಸಾದವರ ಮೆದುಳು ಬಲಹೀನವಾಗಿರುತ್ತದೆ. ಯುವಕರಾಗಲಿ, ಮೆದಳು ಗ್ರಹಿಸುವ ಸಾಮರ್ಥ್ಯ ಇರುವವರಾಗಲಿ ಬಂದಿರುವುದಿಲ್ಲ. ಅದೇ ಒಂದು ಸಿನಿಮಾ ಸಾಯಂಕಾಲ ಹೊಸದಾಗಿ ಬಂದಿದೆಯೆಂದರೆ ನೂರಾರು ಜನ ಪ್ರಯಾಣವಾಗಿ ಹೋಗುತ್ತಾರೆ. ಟಿಕೆಟ್ ಸಿಗದಿದ್ದರೆ, ಅಂಗಿ ಹರಿದುಕೊಂಡಾದರೂ, ಸಿನಿಮಾ ನೋಡಿ ಬರಬೇಕೆನ್ನುವುದು ಉದ್ದೇಶ. ಸಿನಿಮಾಗೆ ಯುವಕರೇ ಅಲ್ಲದೆ ಮುದುಕರು ಸಹ ಹೋಗುವುದನ್ನು ನೋಡುತ್ತಲೇ ಇದ್ದೇವೆ. ಸಿನಿಮಾಗೆ ಹೋದರೆ ಜೇಬಿನಲ್ಲಿನ ಹಣ ಸಹ ಹೋಗುವುದು ತಪ್ಪುವುದಿಲ್ಲ. ಅದೇ ಗುಡಿ ಹತ್ತಿರಕ್ಕೆ ಬಂದರೆ ನಿನ್ನದು ಹೋಗದಿದ್ದರೂ ಪ್ರಸಾದವಾದರೂ ಸಿಗುತ್ತದೆ. ತಲೆಗೇರಿಸಿಕೊಂಡರೆ ಜ್ಞಾನ ಸಿಗುತ್ತದೆ. ಜ್ಞಾನಲಾಭ ಪ್ರಸಾದಲಾಭವಿರುವ ಜ್ಞಾನ ಬೋಧನೆಗಳನ್ನು ಬಿಟ್ಟು ಹಣವನ್ನು ಕಳೆದುಕೊಳ್ಳುವ ಸಿನಿಮಾಗೆ ಹೋಗುವುದನ್ನು ನೋಡಿದರೆ ಕಂಚು ಮೊಳಗಿದಹಾಗೆ ಕನಕ ಮೊಳಗುತ್ತದಾ ಎನ್ನುವಂತಿದೆ ಅಲ್ಲವೆ!

**945. (5) ಮನುಷ್ಯನಿಗೆ ಹಸಿವು ಯಾವುದರಿಂದ ಯಾವುದಕ್ಕೆ ತಿಳಿಯುತ್ತದೆ?**

ಉ. ಆತ್ಮನಿಂದ ಬುದ್ಧಿಗೆ ತಿಳಿಯುತ್ತದೆ.

**ವಿವರ :** ಹೊರಗಿನ ಜ್ಞಾನೇಂದ್ರಿಯ ವಿಷಯಗಳು ಒಳಗೆ ಬುದ್ಧಿಗೆ, ಒಳಗಿನ ಚಿತ್ತ ಹೇಳಿದ ವಿಷಯಗಳು ಹೊರಗೆ ಕರ್ಮೇಂದ್ರಿಯಗಳಿಗೆ ತಿಳಿಸುವುದು ಮನಸ್ಸುವೊಂದರ ಕೆಲಸ. ಹೊರಗಿನ ವಿಷಯಗಳು ಒಳಗೆ ಸೇರಿಸುವುದು ಅಂದರೆ ಒಳಗಿನ ವಿಷಯಗಳು ಹೊರಗೆ ಸೇರಿಸುವುದು ಮನಸ್ಸುವೊಂದರ ಕೆಲಸ ಎಂದು ಸುಲಭವಾಗಿ ಹೇಳಬಹುದು. ಆದರೆ ಒಳಗಿನ ವಿಷಯಗಳು ಒಳಗೆ ಸೇರಿಸುವುದು ಮನಸ್ಸಲ್ಲ. ಒಳಗಿನ ವಿಷಯಗಳನ್ನು ಒಳಗೆ ಸೇರಿಸಿ ಜೀವಾತ್ಮನನ್ನು ಅನುಭವಿಸುವಂತೆ ಮಾಡುವುದು ಶರೀರದಲ್ಲಿರುವ ಆತ್ಮವೇ.

ಹಸಿವು ಭಾದೆಯಾಗಲಿ, ರೋಗಗಳ ಬಾಧೆಗಳಾದರೂ, ಹೊಟ್ಟೆ ನೋವು, ಕಾಲು ನೋವು, ತಲೆನೋವು ಆಗಲಿ, ತಿಳಿಸುವುದು ಶರೀರವೆಲ್ಲಾ ವ್ಯಾಪಿಸಿದ ಆತ್ಮವೇ ಎಂದು ತಿಳಿಯಬೇಕು. ಶರೀರ ಮೇಲ್ಭಾಗವೊಂದರ ಐದು ಜ್ಞಾನೇಂದ್ರಿಯಗಳ ವಿಷಯಗಳನ್ನು ಮಾತ್ರ ಮನಸ್ಸು ತೆಗೆದುಕೊಂಡು ಹೋಗಬಲ್ಲದು. ಶರೀರ ಅಂತರಂಗದಲ್ಲಿರುವ ಯಾವುದನ್ನಾಗಲಿ ಮನಸ್ಸು ತಿಳಿಯಲಾರದು. ಹಾಗೆ ತಿಳಿದಿದ್ದರೆ ನೇರವಾಗಿ ಶರೀರದಲ್ಲಿನ ಆತ್ಮವನ್ನೇ ತಿಳಿಯಬಹುದು. ಶರೀರದಲ್ಲಿನ ಎಲ್ಲಾ ವಿಷಯಗಳನ್ನು ತಿಳಿಯಬಹುದು. ಶರೀರದಲ್ಲಿನ ಬಾಧೆಗಳನ್ನಾಗಲಿ, ಸುಖಗಳನ್ನಾಗಲಿ ತಿಳಿಯಬಹುದು. ಬುದ್ಧಿ ರಹಸ್ಯವನ್ನು, ಚಿತ್ತವೊಂದರ ನಿರ್ಣಯಾಧಿಕಾರವನ್ನು ತಿಳಿಯದೇ ಹೋಗುವುದಕ್ಕೆ ಕಾರಣ ಮನಸ್ಸಿಗೆ ಅವುಗಳ ವಿಷಯ ತಿಳಿದಿಲ್ಲ. ಶರೀರದೊಳಗಿನ ವಿಷಯಗಳೆಲ್ಲವನ್ನು ಒಂದು ಆತ್ಮ ಹೊರತು ಉಳಿದ ಯಾವುದಕ್ಕೂ ತಿಳಿದಿಲ್ಲ. ಆದ್ದರಿಂದಲೇ ಮನುಷ್ಯ ಪ್ರಯತ್ನಮಾಡಿ ಮನಸ್ಸಿಗೆ ಒಳಗಿನ ವಿಷಯಗಳನ್ನು ತಿಳಿದುಕೊಳ್ಳುವಹಾಗೆ ಅಭ್ಯಾಸ ಮಾಡುವುದೇ ಯೋಗವೆಂದು ಕೆಲವರನ್ನುತ್ತಿದ್ದಾರೆ. ಮನಸ್ಸಿಗೆ ಅಭ್ಯಾಸ ಮಾಡಿ ಒಳಗಿನ ವಿಷಯಗಳಲ್ಲಿ ಲಗ್ನ ಮಾಡುವುದನ್ನು ಬ್ರಹ್ಮಯೋಗ ಅನ್ನುತ್ತಿದ್ದೇವೆ. ಮನಸ್ಸಿಗೆ ಅಭ್ಯಾಸ ಮಾಡದೆ ಒಳಗಿನ ವಿಷಯಗಳಾವುವೋ ತಿಳಿಯುವುದಿಲ್ಲ. ಒಳಗಿನ ವಿಷಯಗಳನ್ನು ಬುದ್ಧಿಗೆ ಸೇರಿಸುವುದು ಆತ್ಮವೇಯೆಂದು, ಹೊರಗಿನ ವಿಷಯಗಳನ್ನು ಒಳಗೆ ಸೇರಿಸುವುದು ಮನಸ್ಸೆಂದು ತಿಳಿಯಬೇಕು.

**946. (6) ನೀನು ಕೈತುತ್ತು ತಿಂದಿದ್ದೀಯಾ ಇಲ್ವಾ?**

ಉ. ತಿಂದಿದ್ದೇನೆ.

**ವಿವರ :** ಪ್ರಬೋಧ ಸೇವಾ ಸಮಿತಿಯಲ್ಲಿ ಸದಸ್ಯರಾಗಿರುವವರೆಲ್ಲಾ ಕೈತುತ್ತು ತಿಂದಹಾಗೆ ಲೆಕ್ಕ, ಏಕೆಂದರೆ ಉಗುರು ತಾಕಿದ ತುತ್ತುಗಳೆನ್ನುವ ಜ್ಞಾನವೊಂದರ ರುಚಿ ಅವರು ನೋಡಿದಹಾಗೇ. ಆದ್ದರಿಂದ ಜ್ಞಾನವನ್ನು ತಿಳಿಯುತ್ತಿರುವವರೆಲ್ಲಾ ಕೈತುತ್ತು ತಿಂದಹಾಗೆ. ಉಗುರು ತಾಕಿದ ತುತ್ತು ಎಂದರೆ ಜ್ಞಾನವೆಂದು ತಿಳಿಯಬೇಕು. ಸಣ್ಣವರಿದ್ದಾಗ ಹೆತ್ತ ತಾಯಿ ಆಹಾರವನ್ನು ತುತ್ತುಗಳಾಗಿ ತಿನಿಸುತ್ತಾಳೆ. ಅನ್ನವನ್ನು ಸಣ್ಣ ಸಣ್ಣ ತುತ್ತುಗಳಾಗಿ ತಿನ್ನಿಸುವುದನ್ನು ನೋಡಿದರೆ ಅವು ಬೆರಳಿನ ತುತ್ತುಗಳೇ ಆಗಲಿ, ಉಗುರಿನ ತುತ್ತುಗಳು ಅಲ್ಲವೆಂದು ತಿಳಿಯಬೇಕು. ತಾಯಿ ಬೆರಳುಗಳಿಂದ ತಿನಿಸುವುದು ಆಹಾರವೇ. ಅದೇ ವಿಧವಾಗಿ ಗುರುವು ಹತ್ತಿರ ಹೊಸ ಜನ್ಮ ತೆಗೆದುಕೊಂಡವನಿಗೆ ಗುರು ಕೈ ತುತ್ತುಗಳು ತಿನಿಸುವುದು ನಡೆಯುತ್ತದೆ. ಜ್ಞಾನವನ್ನು ಬಾಯಿಂದ ಹೇಳುತ್ತಾನಾಗಲಿ ಕೈ ತುತ್ತುಗಳೆನ್ನುವು ದೇನೆಂದು ಪ್ರಶ್ನೆ ಬರಬಹುದು. ಅದಕ್ಕೆ ಸಮಾಧಾನ ಏನೆಂದರೆ! ಬೆರಳಿಗೆ ಮೂರು

ಗಣ್ಣುಳಿದ್ದು, ಅವು ಮೂರು ಗುಣಗಳೆಂದು ಗುರುತಿಸಲಾಗಿದೆ. ಆದ್ದರಿಂದ ಬೆರಳು ತುತ್ತುಗಳೆಂದರೆ ಮೂರು ಗುಣಗಳೊಂದಿಗೆ ಕೂಡಿದ ಪ್ರಪಂಚ.

**947. (7) ಶರೀರಕ್ಕೆ ಬಟ್ಟೆಯನ್ನು ಸುತ್ತಿದರೆ ಅಂದ ಬರುತ್ತದೆ, ಹಾಗೇ ಶರೀರದೊಳಗೆ ________ಗೆ_________ನ್ನು ಸುತ್ತಿದರೆ_________ ಎನ್ನುವುದು ತಯಾರಾಗುತ್ತದೆ?**

ಉ. ಮನಸ್ಸಿಗೆ ಯೋಗವನ್ನು ಸುತ್ತಿದರೆ ಜ್ಞಾನ ಯಜ್ಞ ಎನ್ನುವುದು ಏರ್ಪಡುವುದು.

**ವಿವರ :** ಶರೀರಕ್ಕೆ ಬಟ್ಟೆಯನ್ನು ಸುತ್ತಿದರೆ ಅಂದ ಏರ್ಪಡುವುದು ಸಹಜವೇ. ಹಾಗೇ ಶರೀರದೊಳಗಿನ ಮನಸ್ಸಿ ಗೆ ಯೋಗವ ನ್ನು ಸುತ್ತಿದರೆ ಜ್ಞಾನಯಜ್ಞ ಎನ್ನುವುದು ಏರ್ಪಡುತ್ತದೆ. ಈ ವಿಷಯದಲ್ಲಿ ಬಹಳ ಜನರಿಗೆ ಬಹಳ ಊಹೆಗಳು ಬಂದಿರಬಹುದು. ಅವರ ಊಹೆಯಲ್ಲಿ ಮುಖ್ಯವಾದದ್ದು ಜೀವಾತ್ಮನಿಗೆ ಆತ್ಮನನ್ನು ಸುತ್ತಿದರೆ ಮೋಕ್ಷವೆನ್ನುವುದು ತಯಾರಾಗುವುದೆಂದು ಹೇಳುವುದಿದೆ. ಹಾಗೇ ಜೀವಾತ್ಮನಿಗೆ ಆತ್ಮನನ್ನು ಸುತ್ತಿದರೂ ಕೂಡಲೇ ಮೋಕ್ಷ ಬರುವುದಿಲ್ಲ. ಜೀವಾತ್ಮನಿಗೆ ಆತ್ಮನನ್ನು ಸುತ್ತಿದರೆ ಯೋಗವೇ ಆಗುತ್ತದೆಂದು ಮರೆಯಬಾರದು. ಆದೂ ಆಳವಾಗಿ ಯೋಚಿಸುವುದಾದರೆ ಜೀವಾತ್ಮನಿಗೆ ಆತ್ಮನನ್ನು ಸುತ್ತುವುದು ನಡೆಯುವುದಿಲ್ಲ, ಮನಸ್ಸಿಗೆ ಯೋಗವೆನ್ನುವುದನ್ನು ಸುತ್ತಬಹುದು. ಮನಸ್ಸನ್ನು ಯೋಗವೆನ್ನುವ ಹಗ್ಗದಿಂದ ಸುತ್ತಿ ಕದಲದೆ ಕಟ್ಟಿಹಾಕಬಹುದು. ಮನಸ್ಸನ್ನು ಕದಲದೆ ಕಟ್ಟಿಹಾಕಿದಾಗ ಜ್ಞಾನ ಯಜ್ಞ ಏರ್ಪಡುತ್ತದೆ.

**948. (8) ಹಾರದಲ್ಲಿ ಹುಡಿಕಿದರೆ ದಾರವನ್ನು ನೋಡಬಹುದು. ಶರೀರದಲ್ಲಿ ಶೋಧಿಸಿದರೆ ಆತ್ಮನನ್ನು ತಿಳಿಯಬಹುದು ಮಧ್ಯೆ ಊರಲ್ಲಿರುವ ಬುಡ್ಡೆಕಲ್ಲಿನಲ್ಲಿ ಹುಡಿಕಿದರೆ ಏನು ಗೋಚರಿಸುತ್ತದೆ?**

ಉ. ಪರಮಾತ್ಮ ಅರ್ಥ. (ಪರಮಾತ್ಮ ಗುರುತು).

**ವಿವರ :** ಪೂರ್ವಕಾಲದಲ್ಲಿ ಒಂದು ಊರನ್ನು ನಿರ್ಮಿಸುವಾಗ ಮೊದಲು ಒಂದು ಬುಡ್ಡೆಕಲ್ಲನ್ನು ಊತಿಟ್ಟು ಅದರ ಸುತ್ತಾ ಊರನ್ನು ನಿರ್ಮಿಸುಕೊಳ್ಳುತ್ತಿದ್ದರು. ಎಲ್ಲಿ ನೋಡಿದರೂ ಊರಿಗೆ ಮಧ್ಯೆದಲ್ಲಿರುವಹಾಗೆ ಬುಡ್ಡೆಕಲ್ಲನ್ನು ಇಡುತ್ತಿದ್ದರು. ಹಾಗೆ ಇಡುವುದರಲ್ಲಿ ಪೂರ್ವಿಕರ ಉದ್ದೇಶ ಈ ವಿಧವಾಗಿ ಇರುತ್ತಿತ್ತು. ಸರ್ವ ಪ್ರಪಂಚಕ್ಕು ಮೂಲವಾದವನು ಮತ್ತು ಆಧಾರದಂತವನು ಪರಮಾತ್ಮ ಎಂದು, ಪರಮಾತ್ಮನನ್ನು ಆಧಾರ ಮಾಡಿಕೊಂಡು ಪ್ರಕೃತಿ ಪರಿಭ್ರಮಿಸುತ್ತಿದೆಯೆಂದು ಅವರ ಉದ್ದೇಶ. ಆ ಉದ್ದೇಶದ

ಪ್ರಕಾರವೇ ಬುಡ್ಡೆಕಲ್ಲನ್ನು ಮಧ್ಯೆದಲ್ಲಿಟ್ಟು, ಅದನ್ನು ಪರಮಾತ್ಮನಾಗಿ ಭಾವಿಸಿ, ಊರನ್ನು ಪ್ರಪಂಚವಾಗಿ ಭಾವಿಸಿ ಕಟ್ಟುತ್ತಿದ್ದರು. ಮನುಷ್ಯನಿಗೆ ಮಧ್ಯೆದಲ್ಲಿ ಹೊಕ್ಕಳವಿದೆ. ಹೊಕ್ಕಳ ಆಧಾರದಿಂದಲೇ ತಾಯಿ ಹೊಟ್ಟೆಯಲ್ಲಿ ಶಿಶು ಬೆಳೆಯುವುದು ನಡೆಯುತ್ತಿದೆ. ಶರೀರ ಮೊದಲು ತಯಾರಾಗುವುದಕ್ಕೆ ಹೊಕ್ಕಳವೇ ಮೂಲಾಧಾರ. ಪ್ರಪಂಚಕ್ಕೆ ಮೂಲಾಧಾರ ಪರಮಾತ್ಮಯೇ. ಆದ್ದರಿಂದ ಊರುಮಧ್ಯೆದಲ್ಲಿ ಊತಿಟ್ಟಿರುವ ಕಲ್ಲಿಗೆ ಹೊಕ್ಕಳ (ಬುಡ್ಡೆಕಲ್ಲು) ಕಲ್ಲು ಎಂದು ಹೆಸರಿಡುವುದು ನಡೆದಿದೆ. ಹೊಕ್ಕಳ ಕಲ್ಲು ಭೂಮಿಯೊಳಗೆ ಅರ್ಧ ಊತು, ಅರ್ಧ ಮೇಲೆ ಕಾಣಿಸುವಹಾಗೆ ಇಡಲಾಗಿದೆ. ಬುಡ್ಡೆಕಲ್ಲು ಈಶ್ವರಲಿಂಗವೊಂದರ ಆಕಾರವನ್ನು ಹೊಂದಿರುತ್ತದೆ. ಗುಡಿಯಲ್ಲಿನ ಈಶ್ವರಲಿಂಗ ಪಾಣಿಮಟ್ಟದೊಂದಿಗೆ ಸಹ ಇರುತ್ತದೆ. ಮಧ್ಯೆ ಊರಲ್ಲಿರುವ ಬುಡ್ಡೆ ಕಲ್ಲು ಪಾಣಿಮಟ್ಟವಿಲ್ಲದ ಈಶ್ವರಲಿಂಗವಾಗಿ ಕಾಣಿಸುತ್ತದೆ. ಪಾಣಿಮಟ್ಟ ಇಲ್ಲದಿರುವುದರಿಂದ ಭೂಮಿ ಯೊಳಗೆ ಊತಿಟ್ಟ ಗುಂಡಾದ ಕಲ್ಲಿನಂತೆ ಕಾಣಿಸುತ್ತಿದೆ. ಬುಡ್ಡೆ ಕಲ್ಲು ಪ್ರಪಂಚಕ್ಕೆ ಆಧಾರವಾದ ಪರಮಾತ್ಮನನ್ನು ತಿಳಿಸುವ ಗುರುತಾಗಿದೆ. ಆದ್ದರಿಂದ ಅದನ್ನು ಪುರುಷನೆಂದು ತಿಳಿಯುವಹಾಗೆ ಪೋತುಲಯ್ಯ ಎನ್ನುವುದು ಸಹ ನಡೆದಿದೆ. ಪೋತುಲಯ್ಯ ಎಂದರೆ ಪುರುಷೋತ್ತಮನೆಂದು ಅರ್ಥ. ಸರ್ವ ಪ್ರಪಂಚಕ್ಕು ಸೃಷ್ಟಿಕರ್ತ ಆಗಿರುವುದರಿಂದ ಊರಿಗಿಂತ ಮೊದಲೇ ಬುಡ್ಡೆ ಕಲ್ಲನ್ನಿಟ್ಟು, ನಂತರ ಊರನ್ನು ನಿರ್ಮಿಸುವವರು. ಊರಿಗಾಧಾರವಾಗಿರುವುದು, ಊರಿಗೆ ಮೂಲ ಮತ್ತು ಹೊಕ್ಕಳಂತದ್ದು, ಆದ್ದರಿಂದ ಅದನ್ನು ಬುಡ್ಡೆಕಲ್ಲು ಎನ್ನುವುದು ನಡೆದಿದೆ. ಊರೆಲ್ಲವು ಪ್ರಪಂಚವೆಂದು, ಮಧ್ಯದಲ್ಲಿನ ಕಲ್ಲನ್ನು ಪುರುಷನಾದ ಪರಮಾತ್ಮ ಎಂದು ತಿಳಿಯುವಹಾಗೆ ಮತ್ತು ಪುರುಷೋತ್ತಮನೆಂದು ತಿಳಿಯುವಹಾಗೆ, ಬುಡ್ಡೆ ಕಲ್ಲನ್ನು ಪೋತುಲಯ್ಯ ಎನ್ನುವುದು ಸಹ ನಡೆದಿದೆ. ಆದ್ದರಿಂದ ಬುಡ್ಡೆಕಲ್ಲಿನಲ್ಲಿ ಪೋತುಲಯ್ಯ ಆದ ಪರಮಾತ್ಮ ಭಾವ ಕಾಣಿಸುತ್ತಿದೆಯೆಂದು ಹೇಳಬಹುದು.

**949. (9) ನಿನಗೆ ಶೋಭನವಾಗಿದೆಯಾ? ಶೋಭನವೆಂದರೆ ಏನು?**

ಉ. ಜ್ಞಾನದ ಪ್ರಕಾರ ನಡೆದವನಿಗೆ ಶೋಭನವಾದಹಾಗೆ, ನಡೆಯದವನಿಗೆ ಆಗದಹಾಗೆ.

**ವಿವರ :** ಮದುವೆ, ಶೋಭನ ಎಲ್ಲವೂ ಇಂದೂಸಾಂಪ್ರದಾಯಗಳು. ಮದುವೆ ದಿನ ಅಕ್ಷತೆಗಳು ಸ್ತ್ರೀ ಪುರುಷರು ತಲೆ ಮೇಲೆ ಹಾಕಿಕೊಳ್ಳುವುದು ತಿಳಿದ ವಿಷಯವೇ. ಅಕ್ಷತೆಗಳ ಅರ್ಥವನ್ನು ಆಚರಿಸಿದಾಗಲೇ ನಿಜವಾಗಿ ಹೆಂಡತಿ ಗಂಡರಾಗುವರೆಂದು ಅವುಗಳ ವಿವರದಲ್ಲಿ ತಿಳಿಸಲಾಗಿದೆ. ಅಕ್ಷತೆಗಳ ಅರ್ಥದ ಪ್ರಕಾರ ಗಂಡ ಹೆಂಡತಿ ಒಬ್ಬರಿಗೊಬ್ಬರು

ಜ್ಞಾನವನ್ನು ತಿಳಿಸಿಕೊಳ್ಳದೆ ಹೋದರೆ, ಅವರದು ದಾಂಪತ್ಯ ಜೀವನವಲ್ಲವೆಂದು, ಅದು ಅಕ್ರಮ ಸಂಬಂಧವೇ ಎಂದು ಮೊದಲೇ ತಿಳಿಸಿದ್ದೇವೆ. ಸಾಂಪ್ರದಾಯ ಪದ್ಧತಿ ಪ್ರಕಾರ ಶೋಭನವು ಸಹ ಇದೆ. ಅದನ್ನು ವಿವರವಾಗಿ ನೋಡಿದರೆ **ಶೋಭಿಸುವುದು ಎಂದರೆ ಪ್ರಕಾಶಿಸುವುದು ಎಂದು ಅರ್ಥ,** ಶೋಭ ಎಂದರೆ ಪ್ರಕಾಶ ಅಥವಾ ಬೆಳಕು ಎಂದರ್ಥ. ಪ್ರಕಾಶವಾಗಲಿ ಬೆಳಕಾಗಲಿ ಒಂದು ಅಗ್ನಿಯಿಂದಲೇ ಏರ್ಪಡುತ್ತದೆ. ಜ್ಞಾನವೆನ್ನುವ ಅಗ್ನಿ ಯಾವಾಗ ಶರೀರದಲ್ಲಿ ಪ್ರಜ್ವಲಿಸುತ್ತಿದೆಯೋ ಆಗ ಶೋಭನ ನಡೆಯುತ್ತದೆ. ಗಂಡ ಹೆಂಡತಿ ಶಾರೀರಕವಾಗಿ ಸೇರುವುದು ಶೋಭನವಾದರೆ, ಆ ಕಾರ್ಯವನ್ನು ಎಂದಿಗೂ ಶೋಭನವೆಂದೇ ಹೇಳಬೇಕು. ಹಾಗಲ್ಲದೆ ಮೊದಲನೆಯ ಸೇರುವಿಕೆಯನ್ನೇ ಶೋಭನ ವೆನ್ನುವುದರಲ್ಲಿ ಅರ್ಥವೇನಿದೆಯೆಂದು, ಯೊಚಿಸಿದರೆ, ಸ್ತ್ರೀ ಪುರುಷರು ಮೊದಲನೆಯ ಸೇರುವಿಕೆ ಬಹಳ ಪ್ರಾಮುಖ್ಯವಾದುದಾಗಿ ಆಧ್ಯಾತ್ಮಿಕದ ಪ್ರಕಾರ ಹೇಳಲಾಗಿದೆ. ಮದುವೆ ಕಾರ್ಯದಲ್ಲಿ ಇಂದೂ ಸಾಂಪ್ರದಾಯಗಳ ಪ್ರಕಾರ ಅನೇಕ ತಂತು ಕಾರ್ಯಗಳಿಗೆ ಅರ್ಥಗಳಿರುವುದು ತಿಳಿದ ವಿಷಯವೇ. ಮದುವೆ ಅರುಂದತಿ ನಕ್ಷತ್ರ ದರ್ಶನದೊಂದಿಗೆ ಮುಗಿದರೆ ಅವರ ಜೀವನಗಳು ಶೋಭನದೊಂದಿಗೆ ಪ್ರಾರಂಭವಾಗುತ್ತವೆ. ಸ್ತ್ರೀ ಪುರುಷರಿಬ್ಬರಿಗೂ ಶೋಭನವನ್ನೇ ಅವರ ಆಧ್ಯಾತ್ಮಿಕ ಜೀವನ ಪ್ರಾರಂಭ ದಿನವೆಂದು ಸಹ ಹೇಳುತ್ತಾರೆ. ಆದ್ದರಿಂದಲೇ ಆ ದಿನವನ್ನು ಮೊದಲನೆಯ ದಿನವೆಂದು, ಮೊದಲನೆಯ ರಾತ್ರಿಯೆಂದು ಹೇಳಿಕೊಳ್ಳುತ್ತಿರುವರು. ಶೋಭನ ದಿನವೆಂದರೆ ಪ್ರಕಾಶದಿನವೆಂದು ಅರ್ಥ. ಜೀವನದಲ್ಲಿ ಅಲ್ಲಿಯವರೆಗು ಇಲ್ಲದ ಜ್ಞಾನಾಗ್ನಿ ಆ ದಿನದಿಂದ ಪ್ರಜ್ವಲಿಸುತ್ತದೆ, ಆದ್ದರಿಂದ ಅದನ್ನು ಶೋಭನ ಎನ್ನುತ್ತಿದ್ದೇವೆ. ಮದುವೆ ಕಾರ್ಯದಲ್ಲಿ ಅಲ್ಲಿಯವರೆಗು ತಿಳಿದುಕೊಂಡ ಸಾಂಪ್ರದಾಯಗಳೆಲ್ಲವುಗಳಿಗು ಜ್ಞಾನಾಗ್ನಿಯೇ ಮುಖ್ಯ. ಗಂಡ ಹೆಂಡತಿ ಸೇರಿ ಒಂದು ಕುಟುಂಬವಾಗಿ ಪ್ರಾರಂಭಿಸುವ ದಿನದಿಂದ ನಡೆಯುವ ಕಾರ್ಯಗಳೆಲ್ಲವನ್ನು ಯಜ್ಞ ಕರ್ಮವಾಗಿ ಮಾಡಬೇಕೆಂದು ತಿಳಿಸುವ ದಿನವೇ ಶೋಭನ ದಿನ ಅಥವಾ ಪ್ರಕಾಶದಿನ ಎನ್ನುತ್ತಾರೆ. ಅರ್ಥ ತಿಳಿಯದ ಈ ಕಾಲದಲ್ಲಿ ಶೋಭನವೆಂದರೆ ಬೇರೆ ಭಾವವನ್ನು ಹೊಂದಿದ್ದಾರೆ. ಅರ್ಥ ತಿಳಿಯದೆ ಶೋಭನಕ್ಕೆ ಪವಿತ್ರ ಭಾವ ಇಲ್ಲದೆ ಹೋಗಿದೆ. ಜ್ಞಾನಾಗ್ನಿಯನ್ನು ಹೆಚ್ಚಿಸಿಕೊಳ್ಳುವ ಮೊದಲನೆಯ ದಿನ ಜೀವನ ಸಾಫಲ್ಯತೆಗೇ ಮೊದಲನೆಯ ದಿನ. ಜ್ಞಾನಾಗ್ನಿಯನ್ನು ಇಲ್ಲಿಯವರೆಗು ಹೆಚ್ಚಸಿಕೊಳ್ಳದೆ ಹೋದರೆ ಇಲ್ಲಿಯವರೆಗು ನಿಮಗೆ ಶೋಭನವಾಗದ ಹಾಗೆ. ಒಂದು ವೇಳೆ ಇಲ್ಲಿಯವರೆಗು ನೀವು ಶೋಭನ ಮಾಡಿಕೊಳ್ಳದೆ ಇದ್ದರೆ ನಿಮಗೆ ವಯಸ್ಸು ಎಷ್ಟಿದ್ದರೂ ಪರವಾಗಿಲ್ಲ, ಈ ವಯಸ್ಸಲ್ಲಿ ನನಗೆ ಶೋಭನವಾ! ಎಂದುಕೊಳ್ಳದೆ ಶೋಭನ ಮಾಡಿಕೊಳ್ಳಿ. ಶೋಭನದ ಅರ್ಥ, ಪದ್ದತಿ, ಇತರರಿಗು ಸಹ

ತಿಳಿಸಿರಿ ಅದು ಜೀವನದಲ್ಲಿ ಮುಖ್ಯವಾದ ದಿನವೆಂದು ತಿಳಿಸಿ. ಜ್ಞಾನಾಗ್ನಿಯನ್ನು ಪ್ರಾರಂಭಿಸುವ ದಿನವಾದ್ದರಿಂದ ಆದಿನವನ್ನು ಗಂಡ ಹೆಂಡತಿಯರು ಹಬ್ಬದಂತೆ ಪ್ರಾರಂಭಿಸಬೇಕೆನ್ನುವ ಉದ್ದೇಶದಿಂದಲೇ ಮಾಡಿಕೊಳ್ಳುತ್ತಿದ್ದರು. ಮನುಷ್ಯ ಜೀವನದಲ್ಲಿ ಮದುವೆ ಕಾರ್ಯ ಮರೆಯಲಾರದ ಹಬ್ಬದ ಕಾರ್ಯವಾದಾಗ, ಎರಡನೆಯ ಹಬ್ಬವಂತದ್ದು ಶೋಭನವೆಂದು ತಿಳಿಯಬೇಕು. ಜೀವನದಲ್ಲಿ ಮರೆಯಲಾರದ ದಿನಗಳಿಗೆ ಜ್ಞಾನಪರವಾಗಿ ಪವಿತ್ರ ಭಾವವನ್ನು ಜೋಡಿಸಿದರೆ ಎಷ್ಟೋ ಗಂಭೀರ ಅರ್ಥದಿಂದ ತುಂಬಿಹೋಗುವುದು. ನಮ್ಮ ಜೀವನಗಳಿಗೆ ಸಾಫಲ್ಯವೇರ್ಪಡುತ್ತದೆ.

**950. (10) ಬೆಣ್ಣೆಯಿಂದ ಇಟ್ಟಿರುವ ವಿದ್ಯೆ ಎನ್ನುತ್ತಾರೆ, ಅಂತಹದ್ದು ನಿನಗೇನಾದರು ಇದೆಯಾ?**

ಉ. ಇದೆ.

**ವಿವರ :** ಭೂಮಿ ಮೇಲೆ ಬಹಳ ಜನರಿಗೆ ಬಹಳ ವಿದ್ಯೆಗಳಿರುತ್ತವೆ. ಅವುಗಳಲ್ಲಿ ಬೆಣ್ಣೆಯಿಂದ ಇಟ್ಟಿರುವ ವಿದ್ಯೆ ಇದೆಯೋ ಇಲ್ಲವೋ ತಿಳಿದಿಲ್ಲ. ಬಹುಶ ಎಲ್ಲರಿಗು ಸೊಪ್ಪಿನಿಂದ ಸಾರಿನಿಂದ ಇಟ್ಟಿರುವ ವಿದ್ಯೆಗಳಿರುತ್ತವೆ. ಆದರೆ ಬೆಣ್ಣೆ ಯಿಂದ ಇಟ್ಟಿರುವ ವಿದ್ಯೆ ಬಹಳ ಅಪರೂಪವಾಗಿ ಇರುತ್ತದೆ. ಅಸಲಿಗೆ ಬೆಣ್ಣೆಯಿಂದ ಇಟ್ಟಿರುವ ವಿದ್ಯೆ ಎಂದರೆ ಏನೋ ತಿಳಿದಿದೆಯಾ! ಈಗ ತಿಳಿದುಕೊಳ್ಳೋಣ. ಬೆಣ್ಣೆ ಚಂದ್ರನಂತೆ ಬೆಳ್ಳಗೆ ಇರುತ್ತದೆ. ಚಂದ್ರನು ಜ್ಞಾನ ಚಿಹ್ನೆಯೆಂದು ಮೊದಲೇ ತಿಳಿದುಕೊಂಡಿದ್ದೇವೆ ಚಂದ್ರಬಿಂಬದಂತಹ ಬೆಣ್ಣೆ ಮುದ್ದೆಯನ್ನು ಕೃಷ್ಣನು ತನ್ನ ಕೈಯಲ್ಲಿ ಸಣ್ಣವನಿರುವಾಗಲೆ ಇಟ್ಟುಕೊಂಡಿದ್ದನೆಂದು ತೋರಿಸಿದ್ದಾರೆ. ಬೆಣ್ಣೆಯಿಂದ ಇಟ್ಟಿರುವ ವಿದ್ಯೆ ಎಂದರೆ ಜ್ಞಾನವೆಂದೇ ತಿಳಿಯಬೇಕು. ದೈವಜ್ಞಾನ ಯಾರಿಗಿರುತ್ತದೋ ಅವರಿಗೆ ಬೆಣ್ಣೆಯಿಂದ ಇಟ್ಟಿರುವ ವಿದ್ಯೆ ಇದೆಯೆಂದು ಹೇಳಬಹುದು. ದೈವಜ್ಞಾನ ಇಲ್ಲದವರಿಗೆ ಬೆಣ್ಣೆಯಿಂದ ಇಟ್ಟಿರುವ ವಿದ್ಯೆ ಇಲ್ಲವೆಂದು ಹೇಳಬಹುದು. ಜ್ಞಾನ ಹೊರತು ಉಳಿದ ವಿದ್ಯೆಗಳೆಷ್ಟಿದ್ದರೂ ಅವು ಎಲ್ಲವು ಸೊಪ್ಪಿನ ಸಾರು ವಿದ್ಯೆಗಳೇ ಎಂದು ಅವು ಅನೇಕ ಪ್ರಪಂಚ ವಿಷಯಗಳನ್ನು ತಿಳಿಸುವವೇ ಎಂದು ತಿಳಿಯುಬೇಕು. ಇಲ್ಲಿ ಪ್ರಬೋಧ ಸೇವಾಸಮಿತಿಯಲ್ಲಿ ಇರುವವರೆಲ್ಲ ಜ್ಞಾನ ತಿಳಿದುಕೊಳ್ಳುವವರೆ, ಆದ್ದರಿಂದ ಅವರಿಗೆ ಬೆಣ್ಣೆಯಿಂದ ಇಟ್ಟಿರುವ ವಿದ್ಯೆ ಇದೆಯೆಂದೋ, ಅಥವಾ ಆವಿದ್ಯೆಯನ್ನು ಕಲಿಯುತ್ತಿದ್ದಾರೆಂದು ಹೇಳಬಹುದು. ಪ್ರಸ್ತುತ ಕಾಲದಲ್ಲಿ ಬೆಣ್ಣೆಯಿಂದ ಇಟ್ಟಿರುವ ವಿದ್ಯೆ ಎಂದರೆ ಅರ್ಥ ಬದಲಾಗಿ ಒಂದು ವಿದ್ಯೆಯಲ್ಲಿ ಪ್ರಾವೀಣ್ಯತೆ

ಹೊಂದಿದವನಿಗೆ ಆ ವಿದ್ಯೆಯನ್ನು ಅವನಿಗೆ, ಬೆಣ್ಣೆಯಿಂದ ಇಟ್ಟಿರುವ ವಿದ್ಯೆ ಎನ್ನುತ್ತಿದ್ದಾರೆ. ಪ್ರತಿ ಮನುಷ್ಯ ಯಾವುದೋ ಒಂದು ಕೆಲಸದಲ್ಲಿ ಅಂದರೆ ವಿದ್ಯೆಯಲ್ಲಿ ಪ್ರಾವೀಣ್ಯತೆ ಹೊಂದಿರಬಹುದು. ಆತನಿಗಿರುವ ವಿದ್ಯೆ ಪ್ರಪಂಚದಲ್ಲಿ ಬದುಕುವುದಕ್ಕೆ ಉಪಯೋಗ ವಾಗುತ್ತದೆ, ಆದ್ದರಿಂದ ಕೂಳಿಗೋಸ್ಕರ ಕೋಟಿ ವಿದ್ಯೆಗಳೆನ್ನುವ ಗಾದೆಯ ಪ್ರಕಾರ, ಜ್ಞಾನವಿಲ್ಲದ ಯಾವ ವಿದ್ಯೆ ಆದರೂ ಅವು ಸೊಪ್ಪಿನ ಸಾರು ವಿದ್ಯೆಗಳೇ ಎಂದು ತಿಳಿಯಬೇಕು. ಜ್ಞಾನ ವಿದ್ಯೆಮಾತ್ರ ದೈವಮಾರ್ಗದಲ್ಲಿ ಬದುಕುವುದಕ್ಕೆ ಉಪಯೋಗವಾಗುತ್ತದೆ. ಆದ್ದರಿಂದ ಅದನ್ನು ಮಾತ್ರ ಬೆಣ್ಣೆಯಿಂದ ಇಟ್ಟಿರುವ ವಿದ್ಯೆ ಎನ್ನಲಾಗಿದೆ. ಇಲ್ಲಿಯವರೆಗು ನಿನಗಿರುವ ವಿದ್ಯೆಗಳು ಕೂಳಿಗೋಸ್ಕರವಾಗಿವೆಯೊ, ದೈವಮಾರ್ಗ ಕ್ಕೋಸ್ಕರ ಇವೆಯೋ ನೋಡಿಕೊಳ್ಳಿ. ಒಂದು ವೇಳೆ ನಿನಗೆ ಸೊಪ್ಪಿನ ಸಾರು ವಿದ್ಯೆಗಳಲ್ಲಿ ಎಷ್ಟು ಪ್ರಾವೀಣ್ಯತೆ ಇದ್ದರೂ ಏನೂ ಪ್ರಯೋಜನವಿಲ್ಲ ಎಂದು ತಿಳಿದು, ಇಂದಿನಿಂದಾದರೂ ಬೆಣ್ಣೆ ಹಾಲು ವಿದ್ಯೆಗಳನ್ನು ಕಲಿತುಕೊಳ್ಳೋಣ. ಜ್ಞಾನವನ್ನು ಸೂಚಿಸುವ ಹಾಲು ಬೆಣ್ಣೆಯನ್ನು ಶ್ರೀ ಕೃಷ್ಣನು ಸಣ್ಣವನಿರುವಾಗಲೇ ಕದ್ದು ಅವುಗಳಿಗೆ ಪ್ರಾಧಾನ್ಯತೆಯನ್ನು ತೋರಿಸಿದಹಾಗೆ, ನಾವು ಜ್ಞಾನ ಯೋಗಗಳನ್ನು ಇತರರಿಂದ ಕಲಿತುಕೊಳ್ಳೋಣ.

## ಜ್ಞಾನ ಪರೀಕ್ಷೆ

**ಚಿನ್ನಪೊಡಮಲ** **ದಿನಾಂಕ–04–05–2004**

**951. (1) ಭಗವದ್ಗೀತೆಗೆ ಆ ಹೆಸರು ಯಾವ ಕಾಲದಿಂದ ಬಂದಿದೆ?**

ಉ. ದ್ವಾಪರಯುಗದಿಂದ ಬಂದಿದೆ.

**ವಿವರ :** ಭಗವಂತನು ಹೇಳಿದ ಬೋಧನೆಯನ್ನು ಭಗವದ್ಗೀತೆ ಎನ್ನುತ್ತಿದ್ದೇವೆ. ಶ್ರೀಕೃಷ್ಣನು ದ್ವಾಪರಯುಗದ ಅಂತ್ಯದಲ್ಲಿ ಹೇಳಿದರೂ, ಅದನ್ನು ಭಗವದ್ಗೀತೆ ಎಂದರೂ, ಆ ಬೋಧನೆ ಎಲ್ಲವೂ ಸೃಷ್ಟಿ ಆದಿಯಲ್ಲೇ ಹೇಳಲಾಗಿದೆ. ಸೃಷ್ಟಿ ಆದಿಯಲ್ಲಿ ಹೇಳಿರುವುದು, ದ್ವಾಪರ ಯುಗದಲ್ಲಿ ಹೇಳಿರುವುದು ಎರಡೂ ಒಂದೇ ಆದರೂ ಸೃಷ್ಟಿಯ ಆದಿಯಲ್ಲಿ ಭಗವಂತನಿಂದ ಹೇಳಲ್ಪಟ್ಟಿಲ್ಲ. ಸ್ವತಃ ಪರಮಾತ್ಮನೇ ಸೂರ್ಯನಿಗೆ ತಿಳಿಸಿರುವುದು. ಶರೀರಧಾರಿಯಾಗಿ ಹೇಳಿರುವುದಲ್ಲ. ಆದುದರಿಂದ ಆದಿಯಲ್ಲಿ ದೇವರು ತಿಳಿಸಿದ ಜ್ಞಾನಕ್ಕೆ ಭಗವದ್ಗೀತೆ

ಎಂದು ಹೆಸರು ಬರಲಿಲ್ಲ. ದ್ವಾಪರಯುಗದಲ್ಲಿ ದೇವರು ಶರೀರಧಾರಿಯಾಗಿ ಹೇಳಿದ ಜ್ಞಾನವನ್ನು ಭಗವದ್ಗೀತೆ ಎಂದಿದ್ದಾರೆ. ದೇವರ ಅಂಶ ಶರೀರದಾರಿಯಾದಾಗ ಭಗವಂತನೆಂದು ಹೆಸರು ಬಂದಿರುವುದರಿಂದ, ದ್ವಾಪರಯುಗದಲ್ಲಿ ತಿಳಿಸಿದ್ದನ್ನು ಭಗವದ್ಗೀತೆ ಎಂದಿದ್ದಾರೆ.

**952. (2) ವೇದಗಳ ಹೆಸರು ಭಗವದ್ಗೀತೆಯಲ್ಲಿ ಹೇಳಿದ್ದಾರೆ. ವೇದಗಳು ಗೀತೆಗಿಂತಲೂ ಮೊದಲಿನಿಂದ ಇವೆಯಾ? ಅಥವಾ ನಂತರ ಬಂದಿವೆಯಾ?**

ಉ. ಗೀತೆ ನಂತರ ಬಂದಿವೆ.

**ವಿವರ :** ವೇದಗಳು ಸೃಷ್ಟಿ ಆದಿಯಲ್ಲಿಲ್ಲ. ಸೃಷ್ಟಿ ನಂತರ ಸ್ವಲ್ಪ ಕಾಲಕ್ಕೆ ವೇದಗಳು ತಯಾರಾಗಿವೆ. ಸೃಷ್ಟಿ ಆದಿಯಲ್ಲೇ ಜ್ಞಾನವನ್ನು ಸೂರ್ಯನಿಗೆ ಪರಮಾತ್ಮ ತಿಳಿಸಿದ್ದಾನೆ. ಆದ್ದರಿಂದ ಮೊದಲು ಹುಟ್ಟಿರುವುದು ದೈವಜ್ಞಾನವೆಂದು ಹೇಳಬಹುದು. ಜ್ಞಾನ ನಂತರ ಸ್ವಲ್ಪ ಕಾಲಕ್ಕೆ ವೇದಗಳು ಹುಟ್ಟಿಬಂದಿವೆ. ಜ್ಞಾನ ದೈವ ರಚಿತವಾದುದಾದರೆ, ವೇದಗಳು ಮಾನವ ರಚಿತವಾದವು. ಮಾನವಜಾತಿ ವೃದ್ಧಿ ಆದನಂತರ ಸ್ವಲ್ಪ ಕಾಲಕ್ಕೆ, ಕೃತಯುಗ ದಲ್ಲಿಯೇ ಮಾನವನ ಗುಣಗಳ ವಿಷಯಗಳಿಂದ ತುಂಬಿದ ವೇದಗಳು ಉದ್ಭವಿಸಿವೆ. ಆದ್ದರಿಂದ ಗೀತೆಯಲ್ಲಿ **"ತ್ರೈ ಗುಣ್ಯ ವಿಷಯಾ ವೇದಾ"** ಎಂದು ಹೇಳಲಾಗಿದೆ. **ದೇವರಿಂದ ಹುಟ್ಟಿರುವುದು ಗೀತೆ, ಗುಣಗಳಿಂದ ಹುಟ್ಟಿರುವುದು ವೇದವೆಂದು ತಿಳಿಯಬೇಕು**. ಸೃಷ್ಟಿ ಆದಿಯಲ್ಲೇ ಶರೀರ ರಹಿತ, ಗುಣರಹಿತ ದೈವದಿಂದ ಹುಟ್ಟಿರುವುದು ಗೀತಾ ಜ್ಞಾನ. ಶರೀರ ಸಹಿತ, ಗುಣ ಸಹಿತ ಮಾನವನಿಂದ ಹುಟ್ಟಿರುವುದು ವೇದ.

**953. (3) ದೇವರ ಬಗ್ಗೆ ದೂಷಣ, ಭೂಷಣ, ತಿರಸ್ಕಾರರೆಂದು ಇಂದಿನ ಮಾನವರಲ್ಲಿ ಯಾರನ್ನು ಕರೆಯಬಹುದು?**

ಉ. ನಾಸ್ತಿಕರು, ಆಸ್ತಿಕರು, ಹೇತುವಾದಿಗಳನ್ನು ಕರೆಯಬಹುದು.

**ವಿವರ :** ದೂಷಣ, ಭೂಷಣ ತಿರಸ್ಕಾರರೆನ್ನುವುದರಲ್ಲಿ ಸ್ವಲ್ಪ ಅರ್ಥವಿದೆ. ದೂಷಣರೆಂದರೆ ದೇವರು ಮತ್ತು ದೇವರ ವಿಷಯವೆಂದರೇ ಕೋಪಿಸಿಕೊಂಡು ದೂಷಿಸುವವರೆಂದು ಅರ್ಥ. ಇಂಥವರಿಗೆ ದೇವರೆಂದರೆ ಯಾವುದೇ ಭಯ ಇರುವುದಿಲ್ಲ. ದೇವರಿದ್ದಾನೆಂದು ತಿಳಿದು ಸಹ ದೇವರಿಗೆ ಬೆಲೆ ಕೊಡದೆ ದೂಷಿಸುವವರನ್ನು ದೂಷಣರೆನ್ನಬಹುದು. ಹಾಗೇ ಭೂಷಣರೆಂದರೆ! ದೇವರನ್ನು, ದೇವರ ವಿಷಯ ಕೇಳಿದ ಕೂಡಲೇ ಸಂತೋಷಿಸಿ

ದೇವರನ್ನು ಕೀರ್ತಿಸುವವರೆಂದು ಅರ್ಥ. ಇಂಥವರು ದೇವರಿಗೆ ಎಷ್ಟೋ ಬೆಲೆ ಕೊಡುತ್ತಿರುವರು. ದೇವರ ವಿಷಯವನ್ನು, ದೇವರನ್ನು ದೊಡ್ಡದಾಗಿ ಹೇಳಿಕೊಳ್ಳುತ್ತಾ, ದೇವರ ಬಗ್ಗೆ ವಿಶ್ವಾಸ ವಿನಯ ಹೊಂದಿದವರನ್ನು ಭೂಷಣರೆಂದು ಕರೆಯಬಹುದು. ಹಾಗೇ ತಿರಸ್ಕಾರರೆಂದರೆ ದೇವರನ್ನು ಮತ್ತು ದೇವರ ವಿಷಯವನ್ನು ತಿರಸ್ಕರಿಸುವವರೆಂದು ಅರ್ಥ. ಇವರು ದೇವರಿದ್ದಾನೆಂದು ಹೇಳುವುದಿಲ್ಲ ಮತ್ತು ಇಲ್ಲವೆಂದು ಹೇಳುವುದಿಲ್ಲ. ಇವರು ದೂಷಣರಲ್ಲದೆ ಭೂಷಣರು ಅಲ್ಲ. ದೇವರು ಹೇತುಬದ್ಧವಾಗಿ ಇದ್ದರೇ ಇದ್ದಾನೆನ್ನುತ್ತೇವೆ. ಹೇತುಬದ್ಧವಾಗಿ ಇಲ್ಲದೇ ಹೋದರೆ ಇಲ್ಲವೆಂದು ಹೇಳುತ್ತೇವೆ ಎಂದು ಮಾತನಾಡುತ್ತಾರೆ. ಇವರು ದೂಷಣ ಭೂಷಣರಿಗೆ ಮಧ್ಯೆ ಇರುವವರೆಂದು ಹೇಳಬಹುದು. ದೈವದೂಷಣರನ್ನು ನಾಸ್ತಿಕರೆಂದು, ದೈವ ಭೂಷಣರನ್ನು ಆಸ್ತಿಕರೆಂದು, ತಿರಸ್ಕಾರರನ್ನು ಹೇತುವಾದರೆಂದು ಸಹ ಹೇಳಬಹುದು.

**954. (4) ಅಭಿಮಾನ, ಅವಮಾನ, ಅನುಮಾನ ಎಂದರೇನು? ಅವುಗಳನ್ನು ದೇವರ ಬಗ್ಗೆ ಯಾರು ತೋರಿಸುತ್ತಿದ್ದಾರೆ.**

ಉ. ಭೂಷಣ, ದೂಷಣ, ತಿರಸ್ಕಾರವೆನ್ನಬಹುದು. ಆಸ್ತಿಕರು, ನಾಸ್ತಿಕರು, ಹೇತು ವಾದಿಗಳು ತೋರಿಸುತ್ತಿದ್ದಾರೆ.

**ವಿವರ :** ಮಾನ ಎನ್ನುವ ಮಾತಿಗೆ ಅಭಿ, ಅವ, ಅನು ಪದಗಳನ್ನು ಸೇರಿಸಿದರೆ ಅಭಿಮಾನ, ಅವಮಾನ, ಅನುಮಾನ ಎನ್ನುವ ಪದಗಳು ಏರ್ಪಡುತ್ತವೆ. ಮಾನ ಎಂದರೆ ಮನುಷ್ಯನಿಗಿರುವ ಬೆಲೆ ಎಂದು ಅರ್ಥ. ಹಾಗೇ ಮನುಷ್ಯ ದೇವರ ಬಗ್ಗೆ ತೋರಿಸುವ ಬೆಲೆ ಎಂದು ಸಹ ಹೇಳಬಹುದು. ಒಬ್ಬ ಮನುಷ್ಯನಿಗಿರುವ ಬೆಲೆಯನ್ನು ಗುರುತಿಸಿ, ಸಮಾನವಾಗಿ ಅಥವಾ ಹೆಚ್ಚಾಗಿ ಗೌರವಿಸುವುದನ್ನು ಅಭಿಮಾನಿಸುವುದು ಅನ್ನುತ್ತೇವೆ. ಹಾಗೇ ಒಬ್ಬ ಮನುಷ್ಯನಿಗಿರುವ ಬೆಲೆಯನ್ನು ಕಡಿಮೆಯಾಗಿ ಗುರುತಿಸಿ, ಗೌರವಿಸದೆ ಹೋಗುವುದು ಅಥವಾ ಕಡಿಮೆ ಗೌರವಿಸುವುದನ್ನು ಅವಮಾನಿಸುವುದು ಎನ್ನುತ್ತೇವೆ. ಹಾಗೇ ಒಬ್ಬ ಮನುಷ್ಯನೊಂದರ ಬೆಲೆಯನ್ನು ಯಾವ ರೀತಿ ಗುರುತಿಸದೆ, ಹೇಗೂ ನಿರ್ಧಾರಿಸದೆ ಹೋಗುವುದರಿಂದ, ಗೌರವಿಸದೆ ಅಗೌರವಪಡಿಸದಿರುವುದು ಅನುಮಾನಿಸು ವುದು ಎನ್ನುತ್ತೇವೆ. ಮನುಷ್ಯನೊಂದರ ಬೆಲೆ ಅಥವಾ ಗೌರವದ ಬಗ್ಗೆ ಅವಮಾನಿ ಸುವವರನ್ನು, ಅಭಿಮಾನಿಸುವವರನ್ನು, ತಿರಸ್ಕರಿಸುವವರನ್ನು ದೂಷಣ, ಭೂಷಣ, ತಿರಸ್ಕಾರಿಗಳೆಂದು ಕರೆಯಬಹುದು. ಅದೇ ವಿಷಯವನ್ನು ದೇವರ ಬಗ್ಗೆ ಸಹ ಲೆಕ್ಕಿಸಬಹುದು. ಅಂತಹವರನ್ನೇ ನಾಸ್ತಿಕರು, ಆಸ್ತಿಕರು, ಹೇತುವಾದಿಗಳೆಂದು ಹೇಳಬಹುದು.

**955. (5) ದ್ವಾಪರಯುಗದಲ್ಲಿ ಆಚರಣೆ ಹೊಂದಿದ ಮಹರ್ಷಿಗಳು, ಋಷಿಗಳು, ವ್ಯಾಸನು ಮೊದಲಾದ ಮುನಿಗಳು, ತಪಸ್ವಿಕರು ಎಷ್ಟೋ ಇದ್ದಾರೆ. ಎಲ್ಲರೂ ಇದ್ದರೂ ಆ ದಿನ ಧರ್ಮಕ್ಕೆ ಮುಪ್ಪು ಏರ್ಪಟ್ಟಿದೆಯೆಂದು ಶ್ರೀ ಕೃಷ್ಣನು ಹೇಳಿದ ಮಾತು ಸತ್ಯವಾ? ಅಸತ್ಯವಾ?**

ಉ. ಸತ್ಯ.

**ವಿವರ :** ದ್ವಾಪರಯುಗ ಅಂತ್ಯದಲ್ಲಿ ವ್ಯಾಸನು ಹದಿನೆಂಟು ಪುರಾಣಗಳನ್ನು ಬರೆದು ಪ್ರಚಾರ ಮಾಡಿರುವುದರಿಂದಲೂ, ಅವನ್ನೇ ಸತ್ಯವೆಂದು ಬಹಳ ಜನ ನಂಬುವುದರಿಂದಲೂ, ಋಷಿಗಳೆಲ್ಲರು ಯಜ್ಞಯಾಗಾದಿಗಳನ್ನು ಮಾಡುವುದರಿಂದಲೂ, ಬಹಳ ಜನ ಮಹರ್ಷಿಗಳು ತಪಸ್ಸನ್ನೇ ಆಚರಿಸುವುದರಿಂದಲೂ, ರಾಜರೆಲ್ಲರೂ ದಾನಗಳನ್ನು ಹೆಚ್ಚಾಗಿ ಮಾಡುವುದ ರಿಂದಲೂ, ಬ್ರಾಹ್ಮಣರೆಲ್ಲರು ವೇದ ಪಠನೆ ಮಾಡುವುದರಿಂದಲೂ ದೈವಧರ್ಮಗಳಿಗೆ ಮುಪ್ಪು ಏರ್ಪಟ್ಟಿದೆ. ಅಧರ್ಮಗಳು ಹೆಚ್ಚಾಗಿ ಧರ್ಮಗಳು ಇಲ್ಲದಂತೆ ಹೋದಾಗ, ಧರ್ಮಗಳನ್ನು ಉದ್ಧರಿಸುವುದಕ್ಕೆ ನಾನು ತಪ್ಪದೆ ಬರುತ್ತೇನೆಂದು ಪರಮಾತ್ಮ ಗೀತೆಯಲ್ಲಿ ಹೇಳಿದಹಾಗೆ, ಶ್ರೀಕೃಷ್ಣನ ರೂಪದಲ್ಲಿ ದೇವರ ಅಂಶ ಹುಟ್ಟಿದೆ. ದೈವ ಕೃಷ್ಣನ ರೂಪವಾಗಿ ಹುಟ್ಟಿ, ತನ್ನ ಧರ್ಮಗಳನ್ನು ತಿಳಿಸಿ ಹೋಗಿದ್ದಾನೆ. ಇಲ್ಲಿ ಕೆಲವರಿಗೆ ದೊಡ್ಡ ಸಂಶಯಬರುವ ಅವಕಾಶವಿದೆ. ಅದೇನೆಂದರೆ! ಯಜ್ಞಯಾಗಾದಿಗಳು, ಜಪತಪಗಳು, ದಾನ, ವೇದಪಠನೆ ಅಧರ್ಮಗಳಾಗುತ್ತವಾ? ಇವೆಲ್ಲವನ್ನು ಕುರಿತು ಮುಖ್ಯವಾಗಿ ತಿಳಿಸಿದ ಪುರಾಣಗಳು, ಅವನ್ನು ಬರೆದ ವ್ಯಾಸನು, ಯಜ್ಞಗಳು, ತಪಸ್ಸು ಮಾಡಿದವರು, ವೇದಗಳನ್ನು ಪಠಿಸುವವರು ಅಧರ್ಮವನ್ನು ಪ್ರೋತ್ಸಹಿಸಿದವರಾ? ವ್ಯಾಸನಿಗೆ ಆದಿನ ಧರ್ಮಗಳು ತಿಳಿದಿಲ್ಲವಾ! ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನವೇನೆಂದರೆ!

ದೈವ ಅಂಶದಿಂದ ಹುಟ್ಟಿದ ಭಗವಂತನು ಧರ್ಮಗಳನ್ನು ತಿಳಿಸುವುದಕ್ಕೇ ಬಂದಿದ್ದಾನೆ. ಅಧರ್ಮಗಳನ್ನು ಖಂಡಿಸಿ, ಧರ್ಮಗಳನ್ನು ನೆಲೆಗೊಳಿಸುವುದೇ ಆತನ ಕೆಲಸ. ಆದ್ದರಿಂದ ಆತನು ಹೇಳಿದ ವಾಕ್ಕುಗಳು ಯಾವುವು ಅಸತ್ಯವಲ್ಲ. ವ್ಯಾಸನು ನಮ್ಮ ದೃಷ್ಟಿಯಲ್ಲಿ ಎಷ್ಟು ದೊಡ್ಡವನಾದರೂ, ಕೃಷ್ಣನು ಭಗವದ್ಗೀತೆ ಹೇಳದ ಮೊದಲು ಪೂರ್ತಿ ಜ್ಞಾನಿ ಅಲ್ಲವೆಂದೇ ಹೇಳಬಹುದು. ಅದಕ್ಕೆ ಪ್ರತ್ಯಕ್ಷ ಆಧಾರ ವ್ಯಾಸನು ಹದಿನೆಂಟು ಪುರಾಣಗಳನ್ನು ಬರೆದಿರುವುದೇ ಎಂದು ಸಹ ಹೇಳಬಹುದು. ಭಗವದ್ಗೀತೆಯಲ್ಲಿ ದೇವರನ್ನು ತಿಳಿಯುವುದಕ್ಕೆ ಯಾವುವು ಕೆಲಸಕ್ಕೆ ಬಾರವೆಂದು ಹೇಳಿದ್ದಾನೋ ಅವುಗಳನ್ನು ಕುರಿತು

ದೊಡ್ಡದಾಗಿ ಹೇಳಿಕೊಂಡ ಪುರಾಣಗಳನ್ನು ಬರೆದಿದ್ದಾನೆ. ಆ ಕಾಲದಲ್ಲಿ ಗೀತೆಗಿಂತಲೂ ಮೊದಲು ಪ್ರಚಾರ ಮಾಡಿರುವವೆಲ್ಲಾ ಅಧರ್ಮಗಳೆಂದು ಭಾವಿಸಿದ ಭಗವಂತನು ಧರ್ಮಗಳನ್ನು ಉದ್ಧರಿಸಲು ಬಂದು ತನ್ನ ಬೋಧನೆಯಲ್ಲಿ ನನ್ನನ್ನು ತಿಳಿಯುವುದಕ್ಕೆ ಯಜ್ಞಗಳು, ದಾನಗಳು, ವೇದಾಧ್ಯಾಯಗಳು, ತಪಸ್ಸುಗಳು ಕೆಲಸಕ್ಕೆ ಬಾರವೆಂದು ಒತ್ತಿ ಹೇಳಿದ್ದಾನೆ. ಶ್ರೀ ಕೃಷ್ಣನು ಭಗವದ್ಗೀತೆಯನ್ನು ಹೇಳಿದ ನಂತರ ವ್ಯಾಸನು ಅದನ್ನು ಗ್ರಹಿಸಿ ಗೀತೆಯನ್ನು ಗ್ರಂಥರೂಪವಾಗಿ ಬರೆದಿದ್ದಾನೆ. ಗೀತೆಗೆ ಮೊದಲು ತಿಳಿಯದ ಜ್ಞಾನವನ್ನು ಗೀತೆಯನ್ನು ಕೇಳಿದ ನಂತರ ತಿಳಿದುಕೊಂಡಿದ್ದಾನೆ. ಶ್ರೀ ಕೃಷ್ಣನು ತಿಳಿಸಿದ ಜ್ಞಾನವನ್ನು ಅರ್ಜುನನಿಂದ ಕೇಳಿದ ವ್ಯಾಸನು ಗ್ರಂಥರೂಪವಾಗಿ ಗೀತೆಯನ್ನು ಬರೆದಿದ್ದಾನೆನ್ನುವುದು ಸತ್ಯವೆಂದು ತಿಳಿಯಬೇಕು. ತನಗೆ ಮೊದಲು ಧರ್ಮಗಳು ತಿಳಿಯವೆಂದು ಅಂತರಂಗದಲ್ಲಿ ವ್ಯಾಸನು ಒಪ್ಪಿಕೊಂಡು ಗೀತೆ ಧರ್ಮಸ್ವರೂಪವೆಂದು ಎಲ್ಲರಿಗು ತಿಳಿಯುವಹಾಗೆ ಗ್ರಂಥರೂಪ ಮಾಡಿದ್ದಾನೆ. ವ್ಯಾಸನು ಮೊದಲಾದವರಿದ್ದ ಆ ಕಾಲದಲ್ಲಿ ಧರ್ಮಗಳು ಹೋಗಿ ಅಧರ್ಮಗಳು ಬಂದಿರುವ ಮಾತು ಸತ್ಯವೇ.

**956. (6) ಜೀವಿತವೆಂದರೆ ಏನು?**

ಉ. ಜೀತಕ್ಕೆ ಕಾರಣವಾದದ್ದು.

**ವಿವರ :** ಜೀವಿತ ಎನ್ನುವ ಪದಕ್ಕಿಂತಲೂ ಜೀತ ಎನ್ನುವ ಪದ ಬಹಳ ಜನಕ್ಕೆ ತಿಳಿದಿರುತ್ತದೆಂದುಕೊಳ್ಳುತ್ತೇನೆ. ಜೀವಿತ ಎನ್ನುವ ಪದದಲ್ಲಿ "ವಿ" ತೆಗೆದುಹಾಕಿದರೆ ಜೀತ ಆಗುತ್ತದೆ. ಜೀತ ಎಂದರೆ ಉದ್ಯೋಗಸ್ತರಿಗೆಲ್ಲರಿಗು ತಿಳಿದ ವಿಷಯವೇ. ತಿಂಗಳ ಆಧಾಯವನ್ನು ಜೀತ ಎನ್ನುತ್ತಿದ್ದೇವೆ. ಮೇಲ್ನೋಟಕ್ಕೆ ಕಾಣಿಸುವ ಹಣ ಒಂದು ತಿಂಗಳ ಜೀತವಾಗಿ ತೆಗೆದುಕೊಂಡು ಅದರಿಂದ ಆಹಾರಪದಾರ್ಥಗಳು ಕೊಳ್ಳುತ್ತಿದ್ದೇವೆ, ಅವಶ್ಯಕಗಳನ್ನು ತೀರಿಸಿಕೊಳ್ಳುತ್ತಿದ್ದೇವೆ. ಒಬ್ಬ ಉದ್ಯೋಗಿ ತಿಂಗಳಿಗೆ ಬರುವ ಜೀತದಲ್ಲಿ ಕಾಲವನ್ನು ಕಳೆಯುತ್ತಾ ಬದುಕುತ್ತಿದ್ದಾನೆ. ಅದೇ ವಿಧವಾಗಿ ವ್ಯಾಪಾರಸ್ತರು ಅವರ ವ್ಯಾಪಾರದಲ್ಲಿ ಬರುವ ಲಾಭದಿಂದ ಬದುಕುತ್ತಿದ್ದಾರೆ. ವ್ಯವಸಾಯದಾರರು ಅವರ ವ್ಯವಸಾಯದಲ್ಲಿ ಬರುವ ಆದಾಯದಿಂದ ಬದುಕುತ್ತಿದ್ದಾರೆ. ಈ ವಿಧವಾಗಿ ಮೇಲ್ನೋಟಕ್ಕೆ ಕಾಣಿಸುವ ಧನದಿಂದ ಮನುಷ್ಯ ಬದುಕಿದಹಾಗೆ ಕಾಣಿಸಿದರೂ ಕಾಣಿಸದ ವಿಧಾನವೊಂದು ಇದೆ. ಒಂದು ಕೆಲಸಕ್ಕೆ ಮೇಲ್ನೋಟಕ್ಕೆ ಕಾಣಿಸುವ ಆದಾಯ ಒಂದಿರುವಹಾಗೆ ಕಾಣಿಸದ ಆದಾಯವು ಸಹ ಇದೆ. ಮೇಲ್ನೋಟಕ್ಕೆ ಕಾಣಿಸುವುದು ಹಣವಾದರೆ, ಕಾಣಿಸದೆ

ಇರುವುದನ್ನು ಕರ್ಮ ಎನ್ನುತ್ತೇವೆ. ಮನುಷ್ಯ ಕೆಲಸಮಾಡಿದರೂ, ವ್ಯಾಪಾರ ಮಾಡಿದರೂ, ವ್ಯವಸಾಯ ಮಾಡಿದರೂ ಅವುಗಳಿಂದ ಬರುವ ಪ್ರತಿಫಲ ಎರಡು ವಿಧಗಳಾಗಿ ಇರುತ್ತದೆ. ಒಂದು ಲಾಭ ಎರಡು ನಷ್ಟ ಎನ್ನುವವು ಮನುಷ್ಯ ಸಂಪಾದನೆಯಲ್ಲಿ ಕಾಣಿಸುತ್ತಿರುತ್ತದೆ. ಹಾಗೆ ಕಾಣಿಸದ ಸಂಪಾದನೆಯಲ್ಲಿ ಸಹ ಒಂದು ಪುಣ್ಯ ಎರಡು ಪಾಪ ಎನ್ನುವವು ಇವೆ. ಲಾಭ ನಷ್ಟಗಳಿರುವಹಾಗೆ ಕಾಣಿಸದ ಪಾಪ ಪುಣ್ಯಗಳಿವೆಯೆಂದು ತಿಳಿಯುತ್ತಿದೆ. ಕಾಣಿಸುವ ಸಂಪಾದನೆಯಲ್ಲಿನ ಎರಡು ಫಲಿತಗಳಾದ ಲಾಭನಷ್ಟಗಳನ್ನು ಜೀತ ಎನ್ನುತ್ತಿದ್ದೇವೆ. ಹಾಗೇ ಕಾಣಿಸದ ಸಂಪಾದನೆಯಲ್ಲಿನ ಎರಡು ಫಲಿತಗಳಾದ ಪಾಪಪುಣ್ಯಗಳನ್ನು ಜೀವಿತ ಎನ್ನುತ್ತಿದ್ದೇವೆ. ಜೀತ ಜೀವಿತ ಎರಡು ಮನುಷ್ಯನೊಂದರ ಕಾಣಿಸದ ಜೀವನ ವಿಧಾನವೆಂದು ತಿಳಿಯಬೇಕು. ಆದರೆ ಮುಖ್ಯವಾಗಿ ತಿಳಿಯಬೇಕಾಗಿರುವುದೇನೆಂದರೆ! ಜೀತದಿಂದ ಜೀವಿತ ಏರ್ಪಡುತ್ತಿದೆಯಾ? ಜೀವಿತ ದಿಂದ ಜೀತ ಏರ್ಪಡುತ್ತದಾ ಎನ್ನುವುದು ಮುಖ್ಯವಾದ ಪ್ರಶ್ನೆಯಾಗಿ ನೋಡಿಕೊಳ್ಳಬೇಕು. ಮಾಡುವ ಕೆಲಸಗಳಿಂದ ಪಾಪಪುಣ್ಯಗಳು ಬರುತ್ತವಾ? ಅಥವಾ ಪಾಪಪುಣ್ಯಗಳಿಂದ ಕೆಲಸಗಳು ನಡೆಯುತ್ತಿವೆಯಾ ಎನ್ನುವುದು ಪ್ರಶ್ನೆ. ಈಗ ಮಾಡುವ ಕೆಲಸಗಳಿಂದ ಪಾಪಪುಣ್ಯಗಳು ಬರುತ್ತಿವೆಯೆಂದು, ಆದ್ದರಿಂದ ಒಳ್ಳೆ ಕೆಲಸಗಳು ಮಾಡೆಂದು ಕೆಲವರ ವಾದವಾದಾಗ, ಗತದಲ್ಲಿನ ಪಾಪಪುಣ್ಯಗಳಿಂದ ಒಳ್ಳೆ ಕೆಟ್ಟ ಕೆಲಸಗಳು ನಡೆಯುತ್ತಿವೆಯೆಂದು ಕೆಲವರ ವಾದ ಕೇಳಿಸುತ್ತಿದೆ. ಈಗ ನೀನು ಆಲೋಚಿಸಿ ಜೀತದಿಂದ ಜೀವಿತವೋ, ಜೀವಿತದಿಂದ ಜೀತವೋ ತಿಳಿದುಕೊಳ್ಳಿ.

**957. (7) ಶ್ರದ್ಧೆ ಜ್ಞಾನದಲ್ಲಿ ಇರುತ್ತದಾ? ಅಜ್ಞಾನದಲ್ಲಿರುತ್ತದಾ?**

ಉ. ಎರಡರಲ್ಲೂ ಇರುತ್ತದೆ.

**ವಿವರ :** ಶ್ರದ್ಧೆ ಎನ್ನುವುದು ಎರಡು ಕಡೆ ಹರಿತವಿರುವ ಚಾಕುವಿನಂಥದ್ದು. ಅದು ಜ್ಞಾನದ ಕಡೆ ಇರಬಲ್ಲದು. ಅಜ್ಞಾನದ ಕಡೆಯು ಇರಬಲ್ಲದು. ಶ್ರದ್ಧೆ ಎನ್ನುವ ಪದಕ್ಕೆ ಸರಿಯಾದ ಭಾವ ತಿಳಿಯದೆ ಅದನ್ನು ಕೆಲವರು ಬೇರೆ ಗುಣವಾಗಿ ಹೋಲಿಸಿಕೊಂಡಿದ್ದಾರೆ. ಇದು ಒಂದು ಗುಣವಲ್ಲದಿದ್ದರು, ಗುಣವಂಥದ್ದೆಂದು ಹೇಳಬಹುದು. ಪ್ರೇಮ ಎನ್ನುವುದು ಒಂದು ಗುಣ, ಅದಕ್ಕೆ ವ್ಯತಿರೇಖವಾದ ಅಸೂಯೆ ಎನ್ನುವ ಗುಣ ಸಹ ಇದೆ. ಬಹಳ ಜನ ಶ್ರದ್ಧೆಯನ್ನು ಪ್ರೇಮವಾಗಿ ಹೋಲಿಸಿಕೊಂಡಿದ್ದಾರೆ. ಹಾಗೆ ಹೋಲಿಸಿಕೊಳ್ಳುವುದು ಶ್ರದ್ಧೆಯೆಂದು ಹೇಳಬೇಕಾದ ಕಡೆ ಪ್ರೇಮ ಎಂದು ಹೇಳುವುದು ಬಹಳ ತಪ್ಪು. ಬಹಳ ಜನ ಆಧ್ಯಾತ್ಮಿಕ ತಜ್ಞರು ಸರಿಯಾಗಿ ಅರ್ಥೈಸಿಕೊಳ್ಳದೆ ಶ್ರದ್ಧೆಯನ್ನು ಪ್ರೇಮವಾಗಿ ಹೇಳುತ್ತಿದ್ದಾರೆ. ಶ್ರದ್ಧೆಯನ್ನು ವಿವರಿಸಿಕೊಂಡು ನೋಡಿದರೆ ಇಷ್ಟ ಎನ್ನುವ ಪದವಾಗಿ

ಸರಿಹೋಗುತ್ತಿದೆ. ಇಷ್ಟ ಅಥವಾ ಶ್ರದ್ಧೆ ಎರಡೂ ಒಂದೇ ಕೆಲವರಿಗೆ ಅಜ್ಞಾನದ ಮೇಲೆ ಇಷ್ಟವಿದ್ದರೆ ಇನ್ನೂ ಕೆಲವರಿಗೆ ಜ್ಞಾನದ ಮೇಲೆ ಇಷ್ಟವಿರುತ್ತದೆ. ಇದನ್ನನುಸರಿಸಿ ಶ್ರದ್ಧೆ ಎರಡು ವಿಧಗಳೆಂದು ತಿಳಿಯುತ್ತಿದೆ.

**958. (8) ಕೃಷ್ಣನಿಗಿಂತಲೂ ರಾಮ ಭೌತಿಕವಾಗಿ, ಅಭೌತಿಕವಾಗಿ ದೊಡ್ಡವನ ಚಿಕ್ಕವನ?**

ಉ. ಭೌತಿಕವಾಗಿ ದೊಡ್ಡವನು, ಅಭೌತಿಕವಾಗಿ ಚಿಕ್ಕವನು.

**ವಿವರ :** ಭೌತಿಕವಾಗಿ ನೋಡಿದರೆ ರಾಮನು ಮೊದಲು ಹುಟ್ಟಿದವನು, ಕೃಷ್ಣನು ಬಹಳ ಹಿಂದೆ ಹುಟ್ಟಿದವನು. ಅಷ್ಟೇ ಅಲ್ಲದೆ ರಾಮನು ಎಷ್ಟೋ ಸುಶೀಲನು, ಏಕಪತ್ನೀ ವ್ರತನು. ಕೃಷ್ಣನು ಸುಶೀಲನಲ್ಲ, ಏಕಪತ್ನೀವ್ರತನು ಅಲ್ಲ. ಆ ವಿಧವಾಗಿ ನೋಡಿದರೆ ಭೌತಿಕವಾಗಿ ರಾಮನು ಕೃಷ್ಣನಿಗಿಂತಲೂ ಎಷ್ಟೋ ವಿಧಗಳ ದೊಡ್ಡವನೆಂದೇ ಹೇಳಬಹುದು. ಆದರೆ ಅಭೌತಿಕವಾಗಿ ನೋಡಿದರೆ ರಾಮನಿಗಿಂತಲೂ ಕೃಷ್ಣನು ಬಹಳ ದೊಡ್ಡವನೆಂದು ಹೇಳಬಹುದು. ಭೌತಿಕ ಆಚರಣೆ ಒಳ್ಳೆದಾಗಿ ಕಾಣಿಸದೆ ಇದ್ದರೂ ಅಭೌತಿಕವಾದ ಜ್ಞಾನದಲ್ಲಿ ಕೃಷ್ಣನ ಸಾಟಿ ಯಾರು ಇಲ್ಲವೆಂದೇ ಹೇಳಬಹುದು. ಅಂತರಂಗದಲ್ಲಿರುವ ಜ್ಞಾನ ಅಪಾರವಾದದ್ದು. ರಾಮನು ಜೀವಾತ್ಮನಾದರೆ, ಕೃಷ್ಣನು ಪರಮಾತ್ಮನಾಗಿದ್ದಾನೆ. ಆದ್ದರಿಂದ ಅಭೌತಿಕವಾಗಿ ಎಲ್ಲಾ ವಿಧಗಳಲ್ಲಿ ರಾಮನಿಗಿಂತಲೂ ಕೃಷ್ಣನು ಬಹಳ ದೊಡ್ಡವನೆಂದು, ರಾಮನೇ ಸಣ್ಣವನೆಂದು ಹೇಳಬಹುದು.

**959. (9) ಗುಂಪಿನಲ್ಲಿ ಗೋವಿಂದ, ನಾಲ್ವರೊಂದಿಗೆ ನಾರಾಯಣ ಎನ್ನುವ ಮಾತುಗಳು ಅಜ್ಞಾನಿಗಳು, ಜ್ಞಾನಿಗಳಲ್ಲಿ ಯಾರನ್ನು ಕುರಿತು ಹೇಳಿರುವವು?**

ಉ. ಅಜ್ಞಾನಿಗಳನ್ನು ಕುರಿತು ಹೇಳಿರುವ ಮಾತುಗಳು.

**ವಿವರ :** ಗೋವಿಂದ ಎನ್ನುವ ಮಾತನ್ನಾಗಲಿ, ನಾರಾಯಣ ಎನ್ನುವ ಮಾತನ್ನಾಗಲಿ ಅವುಗಳ ಅರ್ಥ ತಿಳಿದವರು ಸ್ವತಃವಾಗಿ ಹೇಳುವವು. ಅವುಗಳ ಅರ್ಥ ಬೆಲೆ ತಿಳಿಯದವರು ಸ್ವತಃವಾಗಿ ಅವರಿಷ್ಟಕ್ಕೆ ಅವರು ಹೇಳುವುದಿಲ್ಲ. ಯಾರಾದರೂ ಹೇಳುವಾಗ ತಾವು ಸಹ ಭಕ್ತಿ ಪರರೆಂದುಕೊಳ್ಳುವಹಾಗೆ ಇತರರು ನೋಡುವುದಕ್ಕೆ ಗುಂಪಲ್ಲಿ ಗೋವಿಂದ ಎಂದು ಹೇಳುತ್ತಿರುವರು. ಹಾಗೇ ನಾಲ್ಕರೊಂದಿಗೆ ನಾರಾಯಣ ಎಂದರೆ ಈತನು ಸಹ ನಾರಾಯಣ ಎನ್ನುತ್ತಿರುವನು. ಅಷ್ಟೇ ಆಗಲಿ ಜ್ಞಾನ ತಿಳಿದು ಹೇಳುತ್ತಿಲ್ಲ ಆದ್ದರಿಂದ ಗುಂಪಲ್ಲಿ ಗೋವಿಂದ ಎನ್ನುವ ಪದವನ್ನು, ನಾಲ್ವರೊಂದಿಗೆ ನಾರಾಯಣ ಎನ್ನುವ ಮಾತನ್ನು ಅಜ್ಞಾನಿಗಳನ್ನು ಕುರಿತು ಗಾದೆಯಾಗಿ ಹೇಳಿದ್ದಾರೆ.

**960. (10) ಶರೀರದಲ್ಲಿ ಉತ್ತರಾಯಣ ದಕ್ಷಿಣಾಯಣ ಇದ್ದಹಾಗೆ ಹೊರಗೆ ಏನಾದರೂ ಉದಾಹರಣೆ ಇದೆಯಾ?**

ಉ. ಇವೆ.

**ವಿವರ :** ಶರೀರದಲ್ಲಿನ ಹೋಲಿಕೆಗಳು ಹೊರಗೆ, ಹೊರಗಿನ ಹೋಲಿಕೆಗಳು ಶರೀರದಲ್ಲಿ ಬಹಳ ಇವೆ. ಶರೀರದಲ್ಲಿ ಉತ್ತರಾಯಣಕ್ಕು ದಕ್ಷಿಣಾಯಣಕ್ಕು ಗುರುತಾಗಿ ಹೊರಗಿನ ಪ್ರಪಂಚದಲ್ಲಿಯೂ ಸಹ ಉತ್ತರ ದಕ್ಷಿಣ ದೃವಗಳು ಇವೆ. ಸೂರ್ಯನು ಉತ್ತರ ದೃವದ ಕಡೆ ಪ್ರಯಾಣಿಸುವಾಗ ಉತ್ತರಾಯಣವೆಂದು, ದಕ್ಷಿಣ ದೃವದ ಕಡೆ ಪ್ರಯಾಣಿಸುವಾಗ ದಕ್ಷಿಣಾಯಣವೆಂದು ಹೆಸರು ಹೊಂದಿದೆ. ಹಾಗೆಯೇ ಸೂರ್ಯಕಿರಣದಲ್ಲಿನ ಏಳು ಬಣ್ಣಗಳು, ಆಕಾಶದಲ್ಲಿನ ಸ್ವರ್ಗದಾರಿ ಎನ್ನುವ ನಕ್ಷತ್ರ ಪುಂಜಕ್ಕೆ ಶರೀರದೊಳಗೆ ಹೋಲಿಕೆಗಳಿವೆ.

## ಜ್ಞಾನಪರೀಕ್ಷೆ

**ಚಿನ್ನಪೊಡಮಲ** **ದಿನಾಂಕ–28–10–2004**

**961. (1) ದೂಪ, ದೀಪ, ನೈವೇದ್ಯಗಳು ಯಾವುದಕ್ಕೆ ಗುರುತು?**

ಉ. ಅಜ್ಞಾನ, ಜ್ಞಾನ, ಕರ್ಮನಾಶಕ್ಕೆ ಗುರುತು.

**ವಿವರ :** ದೂಪ ಎಂದರೆ ಹೊಗೆ. ಹೊಗೆ ಬೆಳ್ಳಗೆ ದಟ್ಟವಾಗಿ ಇರುವುದರಿಂದ ಅದರ ಹೊರಗಿರುವ ವಸ್ತು ಕಾಣಿಸುವುದಿಲ್ಲ. ಎದುರಿಗಿರುವ ದೃಶ್ಯ ಹೊಗೆಯಿಂದ ಕಾಣಿಸದೆ ಹೋಗುತ್ತಿದೆ. ಇರುವುದನ್ನು ತಿಳಿಯದಂತೆ ಮಾಡುವುದು ದೂಪ. ಎಲ್ಲರ ಶರೀರದಲ್ಲೂ ಆತ್ಮ ಇದೆ ಮತ್ತು ಪರಮಾತ್ಮ ಸಹ ಇದೆ. ಜೀವಾತ್ಮ ಅಜ್ಞಾನದಿಂದ ಆತ್ಮನನ್ನು ನೋಡಲಾರದೆ ಇದ್ದಾನೆ. ಅಜ್ಞಾನವಿಲ್ಲದೇ ಹೋದಾಗ ಜೀವಾತ್ಮನಿಗೆ ಆತ್ಮ ತಿಳಿಯುತ್ತಿದೆ. ಯಾವ ವಿಧವಾಗಿ ಹೊಗೆಯಿಂದ ಎದುರಿಗಿರುವ ವಸ್ತುಗಳು ಕಾಣಿಸಲಿಲ್ಲವೋ ಅದೇ ವಿಧವಾಗಿ ಅಜ್ಞಾನದಿಂದ ತನ್ನ ಶರೀರದಲ್ಲಿನ ಜೀವಾತ್ಮನಿಗೆ ಎದುರಿಗಿರುವ ಆತ್ಮ ತಿಳಿಯದೆ ಹೋಗುತ್ತಿದೆ. ಆದ್ದರಿಂದ ದೂಪ (ಹೊಗೆಯನ್ನು) ಅಜ್ಞಾನವಾಗಿ ಹಿರಿಯರು ಹೋಲಿಸಿದ್ದಾರೆ.

ದೀಪ ಬೆಳಕನ್ನು ಕೊಡುವುದು. ಕತ್ತಲಲ್ಲಿ ಕಾಣಿಸದ ವಸ್ತುವಾದರೂ ಕಾಣಿಸುವಹಾಗೆ ಮಾಡುವುದು ದೀಪ. ಅಜ್ಞಾನ ಅಂಧಕಾರದಲ್ಲಿ ತಿಳಿಯದ ಆತ್ಮವನ್ನು ಜ್ಞಾನಪ್ರಕಾಶದಲ್ಲಿ

ತಿಳಿದುಕೊಳ್ಳುತ್ತಿದ್ದೇವೆ. ಯಾವ ವಿಧವಾಗಿ ಕತ್ತಲಲ್ಲಿನ ವಸ್ತು ದೀಪದಿಂದ ಕಾಣಿಸುತ್ತಿದೆಯೋ, ಅದೇ ವಿಧವಾಗಿ ಅಜ್ಞಾನ ಕತ್ತಲಲ್ಲಿ ತಿಳಿಯದ ಆತ್ಮ, ಜ್ಞಾನ ಜ್ಯೋತಿ ಇರುವವರಿಗೆ ತಿಳಿಯುತ್ತಿದೆ. ಆದ್ದರಿಂದ ದೀಪವನ್ನು ಜ್ಞಾನವಾಗಿ ಹಿರಿಯರು ಹೋಲಿಸಿದ್ದಾರೆ.

ನೈವೇದ್ಯ ಎಂದರೆ ಕೊನೆಗೆ ಆಹಾರವೆಂದು ಎಲ್ಲರಿಗು ತಿಳಿಯುವುದು. ದೇವರ ಪ್ರತಿಮೆಗಳ ಮುಂದೆ ಆಹಾರಪದಾರ್ಥಗಳನ್ನಿಟ್ಟು ಅವುಗಳಿಗೆ ನೈವೇದ್ಯವೆಂದು ಹೆಸರಿಟ್ಟು ಕೊನೆಗೆ ಪ್ರಸಾದವೆನ್ನುವ ಹೆಸರಿಂದ ನಾವೇ ತಿನ್ನುತ್ತಿದ್ದೇವೆ. ಪ್ರತಿಮೆ ಮುಂದೆ ಇಟ್ಟಿರುವ ಆಹಾರ ಪೂಜಾನಂತರ ಇಲ್ಲದಂತೆ ಹೋಗುತ್ತಿದೆ. ನಮ್ಮ ಶರೀರದಲ್ಲಿಯೂ ಸಹ ಕರ್ಮ ಎನ್ನುವುದು ನಾವು ಅನುಭವಿಸುತ್ತಾ ಮುಗಿಸಿಕೊಳ್ಳುತ್ತಿದ್ದೇವೆ. ಅಂತರಂಗದಲ್ಲಿ ಅನುಭವಿಸುತ್ತಾ ಕರ್ಮವನ್ನು ಮುಗಿಸುತ್ತಿದ್ದೇವೆ. ಬಾಹ್ಯರಂಗದಲ್ಲಿ (ಹೊರಗೆ) ಆಹಾರವನ್ನು ತಿನ್ನುತ್ತಾ ಖಾಲಿ ಮಾಡುತ್ತಿದ್ದೇವೆ. ದೈವ ಪೂಜೆ ಮಾಡಿದ ನಂತರ ಪ್ರಸಾದ ರೂಪದಲ್ಲಿ ಖಾಲಿಯಾಗುವುದು ನೈವೇದ್ಯವಾದಾಗ, ಅದೇ ವಿಧವಾಗಿ ದೈವ ಆರಾಧನೆಯಾದ ಯೋಗವನ್ನು ಆಚರಿಸಿದ ನಂತರ ಯೋಗಶಕ್ತಿಗೆ (ಜ್ಞಾನಾಗ್ನಿಗೆ) ಖಾಲಿಯಾಗುವುದು ಕರ್ಮವೆಂದು ತಿಳಿದ ಹಿರಿಯರು ನೈವೇದ್ಯವನ್ನು ಕರ್ಮದೊಂದಿಗೆ ಹೋಲಿಸಿದ್ದಾರೆ. ಇದರ ಪ್ರಕಾರ ದೂಪವನ್ನು ಅಜ್ಞಾನವಾಗಿ, ದೀಪವನ್ನು ಜ್ಞಾನವಾಗಿ, ನೈವೇದ್ಯವನ್ನು ಕರ್ಮವಾಗಿ ಹೋಲಿಸಬಹುದು.

**962. (2) ವೇದಗಳು ಅಪೌರುಷಗಳು ಎಂದರೇನು?**

ಉ. ಪುರುಷತ್ವ ಇಲ್ಲದಿರುವವು.

**ವಿವರ :** ಸ್ತ್ರೀ ಪುರುಷರು ಜಗತಿಯಲ್ಲಿ ಇರುವುದು ಎಲ್ಲರಿಗೂ ತಿಳಿದಿರುವುದು. ಸ್ತ್ರೀ ಪುರುಷರು ಪ್ರಕೃತಿ ಪರಮಾತ್ಮರಿಗೆ ಗುರುತೆಂದು ಕೆಲವರಿಗೆ ತಿಳಿದಿದೆ. ಭಗವದ್ಗೀತೆಯಲ್ಲಿ ಕಾಣಿಸುವ ಪ್ರಕೃತಿ ಎಲ್ಲವನ್ನು ಸ್ತ್ರೀಯಾಗಿ ವರ್ಣಿಸಿ, ಕಾಣಿಸದ ಪರಮಾತ್ಮನನ್ನು ಪುರುಷನಾಗಿ ವರ್ಣಿಸಲಾಗಿದೆ. ವೇದಗಳು ಪ್ರಕೃತಿ ಜನಿತಗಳೆಂದು, ಅವೇ ಗುಣತ್ರಯವೆಂದು, ತ್ರಿಗುಣಗಳ ವಿಷಯಗಳೆ ವೇದಗಳಲ್ಲಿ ಇವೆಯೆಂದು, ವೇದಗಳನ್ನು ಬಿಟ್ಟು ವೇದಾಂತನಾದಾಗಲೇ ಪುರುಷನಾದ ಪರಮಾತ್ಮನನ್ನು ತಿಳಿಯುತ್ತೀಯೆಂದು, ಗೀತೆಯಲ್ಲಿ ಭಗವಂತನು ಸ್ಪಷ್ಟವಾಗಿ ತಿಳಿಸಿದ್ದಾನೆ. ಇದನ್ನನುಸರಿಸಿ ವೇದಗಳು ಪುರುಷನಾದ ಪರಮಾತ್ಮನನ್ನು ತಿಳಿಸುವವು ಅಲ್ಲವೆಂದು ತಿಳಿಸುವುದಕ್ಕೆ ವೇದಗಳು ಅಪೌರುಷವೆಂದು ಹಿರಿಯರು ಹೇಳಿದ್ದಾರೆ. ಕೆಲವರು ವೇದಗಳು ಪುರುಷನು ಬರೆದಿರುವವಲ್ಲ, ಅವು ಎಲ್ಲವೂ ಪ್ರಕೃತಿ ರಚನಗಳೇ ಎಂದಿದ್ದಾರೆ.

ಇವೆಲ್ಲವೂ ಬಿಟ್ಟು ಮತ್ತೆ ಕೆಲವರು ವೇದಗಳು ಅಪೌರುಷಗಳೆಂದರೆ ಮನುಷ್ಯ ಬರೆದಿರುವವಲ್ಲ ದೇವರೇ ಬರೆದಿರುವವೆಂದು ವಕ್ರೀಕರಿಸಿ ಹೇಳುವುದು ಸಹ ನಡೆದಿದೆ. ಅಪೌರುಷಗಳೆನ್ನುವ ಪದದಲ್ಲಿ ಪುರುಷನಿಗೆ ಸಂಬಂಧಿಸಿರುವವಲ್ಲವೆಂದು ತಿಳಿಯುತ್ತಿದೆ. ಆದರೆ ಮನುಷ್ಯ ಬರೆದಿರುವವೆಂದು ಅರ್ಥ ಬರುವುದಿಲ್ಲ. ಆದ್ದರಿಂದ ವೇದಗಳು ಪ್ರಕೃತಿ ಸಂಬಂಧಗಳೆಂದು, ಪುರುಷನ ಸಂಬಂಧವಲ್ಲವೆಂದು ತಿಳಿಯಬೇಕು.

**963. (3) ಆಲೋಚಿತ ಅನಾಲೋಚಿತಗಳಲ್ಲಿ ಆಲೋಚಿತ ಯಾವುದು? ಅನಾಲೋಚಿತ ಯಾವುದು?**

ಉ. 1. ಆತ್ಮ 2. ಪರಮಾತ್ಮ.

**ವಿವರ :** ನಮ್ಮ ಶರೀರದಲ್ಲಿ ಜೀವಾತ್ಮ ವಿನಃ ಮುಖ್ಯವಾದ ಭಾಗಗಳು 24 ಇವೆ. ಅದರಲ್ಲಿ ಮನಸ್ಸು ವಿಷಯಗಳನ್ನು ಜ್ಞಾಪಕ ಮಾಡಿದರೆ, ಬುದ್ಧಿ ಅವನ್ನು ಆಲೋಚಿಸುತ್ತದೆ. ಪ್ರಪಂಚ ವಿಷಯಗಳನ್ನು ಜ್ಞಾಪಕ ಮಾಡುವುದು ಮನಸ್ಸಿನೊಂದರ ಕೆಲಸ. ಮನಸ್ಸು ಕೆಲಸ ಮಾಡದಿರುವಾಗ ಬುದ್ಧಿ ಆಲೋಚಿಸುವುದಕ್ಕೆ ಪ್ರಪಂಚ ವಿಷಯಗಳಿರುವುದಿಲ್ಲ. ಅಂತಹ ಸಮಯದಲ್ಲಿ ಬುದ್ಧಿ ಒಳಗಿನ ಆತ್ಮನನ್ನು ಕುರಿತು ಯೋಚಿಸುತ್ತದೆ. ಬುದ್ಧಿ ಸ್ವಲ್ಪ ಕಾಲ ಯೋಚಿಸಿದಾಗ, ಆತ್ಮ ಬುದ್ಧಿ ಆಲೋಚನೆಗೆ ತಿಳಿಯುತ್ತಿದೆ. ಲೋಚನೆ ಎಂದರೆ ನೋಡುವುದು ಎಂದು ಅರ್ಥ. ಆಲೋಚನೆ ಎಂದರೆ ಬುದ್ಧಿಯಿಂದ ನೋಡುವುದು. ಆತ್ಮನನ್ನು ಬುದ್ಧಿ ನೋಡಿ ಜೀವಾತ್ಮನಿಗೆ ತಿಳಿಸುತ್ತಿದೆ. ಆದ್ದರಿಂದ ಶರೀರದಲ್ಲಿನ ಆತ್ಮನನ್ನು ಆಲೋಚಿತ ಎನ್ನುತ್ತಿದ್ದೇವೆ. ಶರೀರದ ಒಳಗು ಹೊರಗು ಇರುವ ಪರಮಾತ್ಮ ಬುದ್ಧಿ ಆಲೋಚನೆಗು ಸಹ ಸಿಗದಿರುವುದು. ಸಜೀವವಾಗಿರುವ ಮನುಷ್ಯ ಯಾರೇ ಆಗಲಿ ಪರಮಾತ್ಮನನ್ನು ತಿಳಿಯಲಾರನು. ಪರಮಾತ್ಮ (ದೇವರು) ಎನ್ನುವವನು ಮಾನವನಿಗೆ ಎಂದಿಗೂ ಪ್ರಶ್ನಾರ್ಥಕವಾದವನೆ ಆಗಲಿ ತಿಳಿಯುವವನಲ್ಲ. ಹುಡುಕಲ್ಪಡುವವನು, ದೇವಲಾಡಲ್ಪಡುವವನು ಆದ್ದರಿಂದ ದೇವರು ಎನ್ನುವ ಪದವನ್ನು ಪರಮಾತ್ಮನಿಗೆ ಇಟ್ಟಿದ್ದೇವೆ. ಎಂದಿಗೂ, ಯಾರಿಗು, ಯಾವುದಕ್ಕೂ ತಿಳಿಯದವನು ದೇವರು, ಆದ್ದರಿಂದ ಅನಾಲೋಚಿತ ಪರಮಾತ್ಮ ಎಂದಿದ್ದೇವೆ.

**964. (4) ಜ್ಯೋತಿ ಎಂದರೆ ಕಾಂತಿ ಕೊಡುವುದು. ಜ್ಯೋತಿಗಳು ಎಷ್ಟು ವಿಧಗಳಿವೆ?**

ಉ. ಎರಡು ವಿಧಗಳು.

**ವಿವರ :** ಪ್ರಪಂಚದಲ್ಲಿ ಬೆಳಕು ಕೊಡುವುದು ಸಣ್ಣ ದೀಪದಿಂದ ದೊಡ್ಡ ಸೂರ್ಯನವರೆಗು

ಇವೆ. ಕಣ್ಣಿಗೆ ಬೆಳಕನ್ನು ಕೊಡುವ ಜ್ಯೋತಿಗಳೆಲ್ಲವನ್ನು ಒಂದು ವಿಧವಾಗಿ ಲೆಕ್ಕಿಸಬಹುದು. ಇವುಗಳಿಗೆ ತಿಳಿಯುವವು ಪ್ರತ್ಯಕ್ಷವಾಗಿರುವ ದೃಶ್ಯಗಳು ಮಾತ್ರವೇಯೆಂದು ಹೇಳಬಹುದು. ಶರೀರದಲ್ಲಿ ಪರೋಕ್ಷವಾಗಿದ್ದು ಕೆಲಸಮಾಡುತ್ತಿರುವ ಆತ್ಮ ಹೊರಗೆ ಬೆಳಕು ಕೊಡುವ ಜ್ಯೋತಿಗಳಿಗೆ ಕಾಣಿಸುವುದಿಲ್ಲ. ಆತ್ಮನನ್ನು ನೋಡುವುದಕ್ಕೆ ಪ್ರತ್ಯೇಕವಾದ ಜ್ಯೋತಿ ಬೇಕು. ಅದೇ ಜ್ಞಾನ ಜ್ಯೋತಿ ಎನ್ನಲಾಗುತ್ತಿದೆ. ಜ್ಞಾನಜ್ಯೋತಿಯಿಂದ ಕಣ್ಣಿಗೆ ಕಾಣಿಸದ ಶರೀರದಲ್ಲಿನ ಆತ್ಮನನ್ನು ತಿಳಿಯಬಹುದು ಆದ್ದರಿಂದ, ಜ್ಞಾನಜ್ಯೋತಿ ಜ್ಯೋತಿಗಳಲ್ಲಿ ಪ್ರತ್ಯೇಕತೆ ಹೊಂದಿದ್ದು ಎರಡನೆಯ ವಿಧವಾಗಿದೆ. ಕಾಣಿಸುತ್ತಾ ಬೆಳಕನ್ನು ಕೊಡುವವು ಒಂದು ವಿಧ ಜ್ಯೋತಿಗಳಾದಾಗ, ದೀಪವಾಗಲಿ ಬೆಳಕಾಗಲಿ ಕಾಣಿಸದ ಜ್ಞಾನಜ್ಯೋತಿ ಎರಡನೆಯವಿಧ.

**965. (5) 0 ಯಿಂದ 9 ವರೆಗು ಇರುವ ಸಂಖ್ಯೆಗಳಲ್ಲಿ ಬೆಸ ಸಂಖ್ಯಗಳಾದ 1,3,5,7,9 ಆಧ್ಯಾತ್ಮಿಕದಲ್ಲಿ ಮುಖ್ಯವಾದವುಗಳಾಗಿ ಇವೆಯಾ. ಅದು ಯಾವವಿಧವಾಗಿ?**

ಉ. ಇವೆ.

**ವಿವರ :** ಸೊನ್ನೆಯಿಂದ ಒಂಬತ್ತರವರೆಗು ಇರುವ ಹತ್ತು ಅಂಕೆಗಳಲ್ಲಿ ಐದು ಸರಿಸಂಖ್ಯೆಗಳು ಹೋದರೆ ಉಳಿದಿರುವವು ಐದು ಬೆಸ ಸಂಖ್ಯೆಗಳು. ಬೆಸ ಸಂಖ್ಯೆಗಳು ಆಧ್ಯಾತ್ಮಿಕವಿದ್ಯೆಯಲ್ಲಿ ಗುರ್ತಿರುವ ಸ್ಥಾನವನ್ನು ಹೊಂದಿವೆ. ಯಾವ ವಿಧವಾಗಿ ಇವೆಯೋ ವಿವರಿಸಿಕೊಳ್ಳೋಣ. ಮೊದಲು ಬೆಸ ಸಂಖ್ಯೆ ಒಂದು ಪರಮಾತ್ಮನಿಗೆ ಗುರುತು. ಪರಮಾತ್ಮ ಪ್ರಪಂಚವೆಲ್ಲಾ ವ್ಯಾಪಿಸಿರುವ ಒಂದೇ ಒಂದು ಶಕ್ತಿ. ಅದಕ್ಕೆ ಮೀರಿರುವುದು ಯಾವುದು ಇಲ್ಲ, ಆದ್ದರಿಂದ ಅದ್ವೈತಕ್ಕೆ ಗುರುತಾಗಿ, ಏಕ ಪರಬ್ರಹ್ಮಕ್ಕೆ ಗುರುತಾಗಿ ಒಂದನ್ನಿಟ್ಟಿದ್ದಾರೆ. ಒಂದೇ ಪರಮಾತ್ಮ ಮೂರು ಆತ್ಮಗಳಾಗಿ ವಿಭಜಿಸಲ್ಪಟ್ಟಿದೆ. ಜೀವಾತ್ಮ, ಆತ್ಮ, ಪರಮಾತ್ಮರಾಗಿರುವ ವಿಭಜನೆಗೆ ಮೂರು ಸಂಖ್ಯೆ ಗುರ್ತಾಗಿ ಇದೆ. ಆತ್ಮಗಳಿಗೆ ಸ್ಥಾನವಾಗಿ, ಆತ್ಮಗಳಿಗೆ ವಿರುದ್ಧ ಭಾವ ಹೊಂದಿ ಹುಟ್ಟಿರುವುದು ಪ್ರಕೃತಿ. ಪರಮಾತ್ಮನಿಂದ ಉದ್ಭವಿಸಿದ ಪ್ರಕೃತಿ ಐದು ಭಾಗಗಳಾಗಿ ಇದೆ. ಶರೀರದಲ್ಲಿರುವ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಪ್ರಕೃತಿ ಭಾಗಗಳಿಗೆ ಗುರುತಾಗಿ ಐದು ಸಂಖ್ಯೆಯನ್ನು ಇಟ್ಟಿದ್ದಾರೆ. ಪಂಚಭೂತ ನಿರ್ಮಿತವಾದ ಶರೀರದಲ್ಲಿ ಆತ್ಮ ಏಳುನಾಡೀ ಕೇಂದ್ರಗಳಿಂದ ಶಕ್ತಿಯನ್ನು, ಏಳು ಗ್ರಂಥಿಗಳಿಂದ ಆರೋಗ್ಯವನ್ನು ಹಂಚುತ್ತಿದೆ. ಆತ್ಮ ಶರೀರದಲ್ಲಿ ವ್ಯಾಪಿಸುವ ಏಳು ನಾಡೀಕೇಂದ್ರಗಳಿಗೆ ಗುರುತಾಗಿ ಮತ್ತು ಏಳು ಗ್ರಂಥಿಗಳಿಗೆ ಗುರುತಾಗಿ ಆಧ್ಯಾತ್ಮಿಕದಲ್ಲಿ ಏಳು ಸಂಖ್ಯೆಯನ್ನು ಇಟ್ಟಿದ್ದಾರೆ. ಶರೀರದಲ್ಲಿ ಒಂಬತ್ತು ಗ್ರಹಗಳ ಮೂಲಕ ಕರ್ಮ ಒಂಬತ್ತು ವಿಧಗಳಾಗಿ ಜೀವಾತ್ಮನ ಮೇಲೆ ಪ್ರಸರಿಸಲ್ಪಡುತ್ತಿದೆ. ಆದ್ದರಿಂದ ಒಂಬತ್ತು ಗ್ರಹಗಳಿಗೆ ಗುರುತಾಗಿ ಒಂಬತ್ತು ಸಂಖ್ಯೆಯನ್ನು

ಇಟ್ಟಿದ್ದಾರೆ. ಜಗತಿಯಲ್ಲಿನ ಒಬ್ಬ ಪರಮಾತ್ಮನಿಗೆ, ಶರೀರದಲ್ಲಿನ ಮೂರು ಆತ್ಮಗಳಿಗು, ಶರೀರದಲ್ಲಿ ಐದು ಪ್ರಕೃತಿ ಭಾಗಗಳಿಗು, ಶರೀರದಲ್ಲಿನ ಏಳು ಆತ್ಮ ಕೇಂದ್ರಗಳಿಗು, ಶರೀರದಲ್ಲಿನ ಕರ್ಮವನ್ನು ಪಾಲಿಸುವ ಒಂಬತ್ತು ಗ್ರಹಗಳಿಗು ಗುರುತಾಗಿ ಇರುವವೇ 1,3,5,7,9 ಬೆಸ ಸಂಖ್ಯೆಗಳೆಂದು ತಿಳಿಯಬೇಕು.

**966. (6) ರಹಸ್ಯಕ್ಕೆ ವಿರುದ್ಧವಾದ ಪದ ಯಾವುದು?**

ಉ. ಜ್ಯೋತಿಷ್ಯ.

**ವಿವರ :** ತಿಳಿಯದೆ ಇರುವುದನ್ನು ರಹಸ್ಯ ಎನ್ನುತ್ತೇವೆ. ತಿಳಿಯದೆ ಇರುವುದನ್ನು ತಿಳಿದುಕೊಳ್ಳುವುದಕ್ಕೆ ಎರಡು ವಿಧಾನಗಳು ಇವೆ. ಕತ್ತಲಲ್ಲಿ ಕಾಣಿಸದೆ ಇರುವುದನ್ನು ಜ್ಯೋತಿಯಿಂದ ತಿಳಿದುಕೊಳ್ಳಬಹುದು. ಹೊರಗಿನ ರಹಸ್ಯಗಳನ್ನು ಯಾವುದೋ ಒಂದು ವಿಧವಾಗಿ ತಿಳಿದುಕೊಳ್ಳಬಹುದು. ಆದರೆ ರಹಸ್ಯಗಳಲ್ಲೆ ದೊಡ್ಡ ರಹಸ್ಯವಾದ ಭವಿಷ್ಯತ್ತನ್ನು ತಿಳಿದುಕೊಳ್ಳುವುದು ಬಹಳ ಕಷ್ಟ. ಅದನ್ನು ಸ್ವಲ್ಪದವರೆಗು ತಿಳಿದುಕೊಳ್ಳುವ ವಿಧಾನವಿದೆ. ಭವಿಷ್ಯತ್ತನ್ನು ಜ್ಯೋತಿಯಿಂದಲೇ ತಿಳಿಯಲಾಗುತ್ತದೆ. ಕಾಣಿಸದೆ ಇರುವವನ್ನು ಕಾಣಿಸುವ ದೀಪ ಉಪಯೋಗಿಸಿ ನೋಡಿದಹಾಗೆ, ಕಾಣಿಸದ ವಿಷಯಗಳನ್ನು ಕಾಣಿಸದ ದೀಪದಿಂದ ತಿಳಿಯಲಾಗುತ್ತದೆ. ಕಾಣಿಸದ ದೀಪ ನಮ್ಮ ತಲೆಯಲ್ಲಿ ಇದೆ. ಅದರಿಂದ ಭವಿಷ್ಯತ್ತು ಕರ್ಮವನ್ನು ತಿಳಿದುಕೊಳ್ಳುವುದನ್ನು ಜ್ಯೋತಿಷ್ಯ ಎನ್ನುತ್ತೇವೆ. ಪ್ರಪಂಚದಲ್ಲಿ ಅತಿ ದೊಡ್ಡ ರಹಸ್ಯ ಆತ್ಮ ಎಂದರೆ ಏನೋ ತಿಳಿಯದೆಹೋಗುವುದು. ಶರೀರದಲ್ಲಿನ ಆತ್ಮನನ್ನು ತಿಳಿಯುವುದಕ್ಕು ಸಹ ಒಂದು ಜ್ಯೋತಿ ಅವಶ್ಯ, ಅದೇ ಜ್ಞಾನ ಜ್ಯೋತಿ. ಪ್ರಪಂಚ ಶಾಸ್ತ್ರಗಳಲ್ಲಿ ಕೊನೆಯದು ಐದನೆಯದು ಜ್ಯೋತಿಷ್ಯ ಶಾಸ್ತ್ರ. ಪ್ರಪಂಚ ವಿಧಾನದಲ್ಲಿ ದೊಡ್ಡ ರಹಸ್ಯ ಭವಿಷ್ಯತ್ತು. ತಿಳಿಯದ ಭವಿಷ್ಯತ್ತನ್ನು ತಿಳಿಯುವುದೇ ಜ್ಯೋತಿಷ್ಯ ಎನ್ನುತ್ತೇವೆ. ಆರನೆ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ದೊಡ್ಡ ರಹಸ್ಯ ಆತ್ಮ. ಜ್ಞಾನಜ್ಯೋತಿಯಿಂದ ಆತ್ಮನನ್ನು ತಿಳಿಯುವುದನ್ನು ಜ್ಯೋತಿಷ್ಯ ಎನ್ನುವುದಿಲ್ಲ, ಆತ್ಮ ದರ್ಶನವೆನ್ನುತ್ತೇವೆ. ಪ್ರಪಂಚ ವಿಷಯಗಳಿಗು ಆತ್ಮ ವಿಷಯಗಳಿಗು ವ್ಯತ್ಯಾಸವನ್ನು ತೋರಿಸುವುದಕ್ಕೆ ಹಾಗೆ ಹೇಳಬೇಕಾಗಿ ಬಂದಿದೆ. ಸೂತ್ರದ ಪ್ರಕಾರ ತಿಳಿಯುವ ವಿಧಾನವಿದ್ದು ತಿಳಿಯದೆ ಇರುವುದು ರಹಸ್ಯ. ವಿಧಾನದ ಪ್ರಕಾರ ತಿಳಿಯಲಾಗುವುದು ಜ್ಯೋತಿಷ್ಯ.

**967. (7) ಮೃತ ಎಂದರೆ ಸಾವು. ಅಮೃತ ಎಂದರೆ ಸಾವಿಲ್ಲದ್ದು. ಮೃತ ಯಾವುದು? ಅಮೃತ ಯಾವುದು?**

ಉ. ಮೃತ ಜೀವಾತ್ಮ, ಅಮೃತ ಪರಮಾತ್ಮ.

**ವಿವರ :** ಮೃತ ಎಂದರೆ ನಾಶ ಎಂದು ಅರ್ಥ. ಅಮೃತ ಎಂದರೆ ನಾಶವಿಲ್ಲದ್ದೆಂದು ಅರ್ಥ. ಮನುಷ್ಯ ಮರಣಿಸಿದಾಗ ಜೀವಾತ್ಮನು ಮೃತನಲ್ಲ. ದೇಹ ಮಾತ್ರ ಮೃತವಾಗಿಹೋಗುತ್ತಿದೆ. ಆದ್ದರಿಂದ ಜೀವಾತ್ಮನು ಬಿಟ್ಟ ದೇಹವನ್ನು ಮೃತದೇಹ ಎನ್ನುತ್ತಿದ್ದೇವೆ. ಮರಣದಲ್ಲಿ ಜೀವಾತ್ಮನು ಮೃತವಾಗಲಿಲ್ಲ. ಮರಣದಲ್ಲಿ ನಾಶವಾಗದ ಜೀವಾತ್ಮನು ಶರೀರಗಳನ್ನು ಬದಲಾಯಿಸಿಕೊಳ್ಳುತ್ತಾ ಹೋಗುತ್ತಿದ್ದಾನೆ. ಹೀಗೆ ನಡೆಯುತ್ತಾ ಹೋದರೂ ಮರಣದಲ್ಲಿ ನಾಶವಾಗದ ಜೀವಾತ್ಮನು ಕೊನೆಗೆ ಕೆಲವು ಯುಗಗಳ ನಂತರವಾಗಲಿ, ಎಷ್ಟೋ ಯುಗ ಕಲ್ಪಗಳನಂತರವಾಗಲಿ, ನಾಶ ಹೊಂದಬೇಕಾಗಿದೆ. ಜೀವಾತ್ಮನಾಗಿ ನಾಶ ಹೊಂದಿ ಪರಮಾತ್ಮನಾಗಿ ಬದಲಾಗುವ ಪದ್ದತಿ ಒಂದು ಇದೆ. ಮೂರು ಪೊರೆಗಳ ಮಧ್ಯೆ ಬಂಧಿಯಾಗಿರುವ ಜೀವಾತ್ಮ, ಆತ್ಮ ಅಧೀನದಲ್ಲಿರುವ ಜೀವಾತ್ಮ, ಸುಖ ದುಃಖಗಳನ್ನು ಅನುಭವಿಸುವ ಜೀವಾತ್ಮ, ಜನನ ಮರಣಗಳಲ್ಲಿ ಶರೀರಗಳನ್ನು ಬದಲಾಯಿಸುತ್ತಿರುವ ಜೀವಾತ್ಮ, ಎಲ್ಲದರಿಂದ ಬಿಡುಗಡೆಹೊಂದಿ, ಜೀವಾತ್ಮ ಸ್ಥಿತಿಯನ್ನು ಕಳೆದುಕೊಂಡು ಪರಮಾತ್ಮನಾಗಿ ಬದಲಾಗುತ್ತಿದ್ದಾನೆ. ಜೀವಾತ್ಮ ನಾಶನವಾಗಿ ಪರಮಾತ್ಮ ಸ್ವರೂಪವಾಗಿ ಬದಲಾವಣೆಯಾಗುತ್ತದೆ. ಆದ್ದರಿಂದ ಮೃತ ಜೀವಾತ್ಮವೆಂದು ಎಂದಿಗೂ ಪರಮಾತ್ಮ ಅಮೃತವೆಂದು ಹೇಳಲಾಗುತ್ತಿದೆ.

**968. (8) ಶರೀರದಲ್ಲಿನ ಕಾಮಕ್ರೋದಾದಿ ಗುಣಗಳನ್ನು ಶತ್ರುಗಳಾಗಿ ಹೋಲಿಸಿದಾಗ, ಉಳಿದ ದಾನದಯಾದಿ ಆರು ಗುಣಗಳನ್ನು ಏನೆಂದು ಹೋಲಿಸಬಹುದು?**

ಉ. ಮಿತ್ರರೂಪದಲ್ಲಿರುವ ಶತ್ರುಗಳಾಗಿ.

**ವಿವರ :** ಕೆಲವರು ಹಿರಿಯರು ಅರಿಷಟ್‌ವರ್ಗ ಎಂದು ಕಾಮ ಕ್ರೋದಾದಿ ಆರು ಗುಣಗಳನ್ನು ಹೇಳಿದ್ದಾರೆ. ಅದರ ಅರ್ಥ ಕಾಮ, ಕ್ರೋಧ, ಲೋಭ, ಮೋಹ, ಮಧ, ಮಾತ್ಸರವೆನ್ನುವ ಆರು ಗುಣಗಳು ಮನುಷ್ಯನಿಗೆ ಶತ್ರುಗಳಾಗಿ ಇವೆಯೆಂದು ಇಲ್ಲಿಯವರೆಗು ಹೇಳಿದವರೆಲ್ಲರು ಅದೇ ವಿಷಯವನ್ನು ಹೇಳಿದ್ದಾರೆ. ಎಲ್ಲರಿಗು ಕೆಟ್ಟ ಗುಣಗಳಾದ ಆರು ಗುಣಗಳೇ ಕಾಣಿಸಿವೆ ಆದ್ದರಿಂದ ಅವುಗಳನ್ನು ಶತ್ರುಗಳಾಗಿ ಹೋಲಿಸಿ ಹೇಳಿದ್ದಾರೆ. ಆರು ಕೆಟ್ಟ ಗುಣಗಳಿಗೆ ವಿಭಿನ್ನವಾಗಿ ವ್ಯತಿರಿಕ್ತವಾಗಿರುವ ಉಳಿದ ದಾನ ದಯಾದಿ ಒಳ್ಳೆ ಗುಣಗಳಾದ ಆರನ್ನು ಯಾರು ಎಲ್ಲೂ ಹೇಳಲಿಲ್ಲ. ಇವುಗಳನ್ನು ಕುರಿತು ಕೆಲವರನ್ನು ಕೇಳಿದಾಗ ಕೆಟ್ಟ ಗುಣಗಳು ಶತ್ರುಗಳಾದರೆ ಒಳ್ಳೆ ಗುಣಗಳು ಮಿತ್ರರಾಗುವರು ಎಂದಿದ್ದಾರೆ.

ನಾವು ಹೇಳುವುದೇನೆಂದರೆ! ಕೆಟ್ಟ ಗುಣಗಳು ಪಾಪವನ್ನು ಸಂಪಾದಿಸಿಟ್ಟು ಮಾನವನಿಗೆ ಮರುಜನ್ಮದಲ್ಲಿ ಕಷ್ಟಗಳನ್ನು ದುಃಖಗಳನ್ನು ಉಂಟುಮಾಡುತ್ತವೆ. ಅದೇ ವಿಧವಾಗಿ ಒಳ್ಳೆ ಗುಣಗಳು ಪುಣ್ಯವನ್ನು ಸಂಪಾದಿಸಿಟ್ಟು ಮರು ಜನ್ಮದಲ್ಲಿ ಸುಖಗಳನ್ನುಂಟುಮಾಡುತ್ತಿವೆ. ಕೆಟ್ಟ ಗುಣಗಳಿಂದ ಬರುವ ಪಾಪವಾಗಲಿ, ಒಳ್ಳೆ ಗುಣಗಳಿಂದ ಬರುವ ಪುಣ್ಯವಾಗಲಿ ಎರಡು ಮಾನವನಿಗೆ ಜನ್ಮ ಬಂಧನವನ್ನುಂಟು ಮಾಡುವವೆ. ಆದ್ದರಿಂದ ಎರಡು ವರ್ಗಗಳ ಗುಣಗಳು ಮಾನವನಿಗೆಜನ್ಮ ಬಂಧನಗಳೇ ಆಗಿರುವುದರಿಂದ ಎರಡನ್ನು ಶತ್ರುಗಳಾಗೇ ಹೋಲಿಸಿ ಹೇಳಬಹುದು. ಬಂಧ ವಿಮುಕ್ತಿ ಮಾಡುವ ದೈವಜ್ಞಾನವನ್ನು ಮಾತ್ರ ಮಿತ್ರನಾಗಿ ಹೋಲಿಸಬಹುದು.

**969. (9) ಕುಲ ಎನ್ನುವ ಪದ ಹತ್ತಿರ ಸಂಬಂಧವಾದ ಯಾವ ಪದದಿಂದ ಹುಟ್ಟಿದೆ?**

ಉ. ಹಲ ಎನ್ನುವ ಪದಕ್ಕೆ ಹತ್ತಿರ ಸಂಬಂಧವಾಗಿದೆ.

**ವಿವರ :** ಹೊಲದಲ್ಲಿ ಉಳುಮೆ ಮಾಡುವುದನ್ನು ಹಲ ಎನ್ನುತ್ತೇವೆ. ಹಲವನ್ನು ನೇಗಿಲು ಅಥವಾ ಮಡಿಕೆ ಎಂದು ಸಹ ಕರೆಯುತ್ತಾರೆ. ಚದುರವಾಗಿರುವ ಹೊಲವನ್ನು ಹಲ (ನೇಗಿಲ) ದಿಂದ ಉಳುಮೆ ಮಾಡಿದಾಗ ಚದುರವಾಗಿರುವ ಭೂಮಿ ಎರಡು ಸೀಳಿಕೆಗಳ ಭಾಗಗಳಾಗಿ ತಯಾರಾಗುತ್ತದೆ. ಒಂದು ಸಲ ನೇಗಿಲು (ಹಲ) ನಿಂದ ಉಳುಮೆ ಮಾಡಿದಾಗ ಚದುರಾಗಿ ಸಮತಟ್ಟಾಗಿರುವ ಭೂಮಿ ಮೇಲೆ ಗೆರೆಗಳು ತಯಾರಾಗಿ ಎರಡು ಭಾಗಗಳಾಗಿ ಕಾಣಿಸುತ್ತದೆ. ನೇಗಿಲಿಂದ ಅನೇಕಬಾರಿ ಹೊಲದಲ್ಲಿ ಉಳುಮೆ ಮಾಡಿದಾಗ ಹೊಲವೆಲ್ಲವೂ ಗೆರೆಗಳಾಗಿ ಅನೇಕ ಸೀಳಿಕೆಗಳಾಗಿ ತಯಾರಾಗುತ್ತದೆ. ಮೊದಲು ಸಮತಳವಾಗಿ ಒಂದೇ ಚದುರಾಗಿರುವ ಭೂಮಿ ಒಂದುಬಾರಿ ನೇಗಿಲನ್ನು ತಿರುಗಿಸುವುದರಿಂದ ಒಂದು ಗೆರೆ ತಯಾರಾಗಿ ಎರಡು ಭಾಗಗಳಾದ ಹಾಗೆ ಕಾಣಿಸುತ್ತದೆ. ಎಷ್ಟು ಬಾರಿ ನೇಗಿಲನ್ನು ತಿರುಗಿಸಿದರೆ ಅಷ್ಟು ಗೆರೆಗಳು ಏರ್ಪಟ್ಟು ಅಷ್ಟು ಭಾಗಗಳಾಗಿ ಕಾಣಿಸುತ್ತದೆ. ಒಂದೇ ಭೂಮಿ ಮೇಲೆ ಹಲದಿಂದ ತಯಾರಾಗಿರುವವೇ ಎಷ್ಟೋ ಗೆರೆಗಳ ಹದ್ದು. ಮೊದಲು ಮಾನವ ಸಮಾಜವು ಸಹ ಸಮಾನವಾಗಿ ಯಾವ ಕುಲಗಳಿಲ್ಲದ ವ್ಯವಸ್ಥೆಯಾಗಿ ಇರುತ್ತಿತ್ತು. ಸಮತಲವಾಗಿ ಇರುವ ಭೂಮಿಯಲ್ಲಿ ಯಾವ ವಿಧವಾಗಿ ಹಲದಿಂದ ಗೆರೆಗಳು ಭಾಗಗಳಾಗಿ ತಯಾರಾಗುತ್ತದೊ, ಆ ವಿಧವಾಗಿಯೇ ಸಮ ಸಮಾಜದಲ್ಲಿ ಗೆರೆಗಳ ಹದ್ದುಗಳು ತಯಾರಾಗಿದೆ. ಭೂಮಿ ಮೇಲೆ ಹಲದ ಮೂಲಕ ಗೆರೆಗಳು ಹದ್ದುಗಳು ತಯಾರಾದಹಾಗೆ, ಮಾನವ ಸಮಾಜದಲ್ಲಿ ಕುಲದಿಂದ ಗೆರೆಗಳು ಹದ್ದುಗಳು ಏರ್ಪಟ್ಟಿವೆ. ಸಮಭೂಮಿಯನ್ನು ನೇಗಿಲು (ಹಲವು) ಹೇಗೆ ಸೀಳಿಸುತ್ತಿದೆಯೋ ಸಮಸಮಾಜದಲ್ಲಿ ಕುಲ ಹಾಗೆಯೇ

ಸೀಳುತ್ತಿದೆ. ಆದ್ದರಿಂದ ಭೂಮಿಯನ್ನು ಸೀಳಿಸಿದ ಹಲಕ್ಕೆ ಹತ್ತಿರ ಪದವಾಗಿ, ಸಮಾಜವನ್ನು ಸೀಳಿಸಿದ ಅದರ ಹೆಸರು ಕುಲ ಎಂದು ಇಟ್ಟಿದ್ದಾರೆ. ಹಲದಲ್ಲೂ ಕುಲದಲ್ಲೂ ಒಂದೇ ಅಕ್ಷರ ವ್ಯತ್ಯಾಸವಿದೆ.

**970. (10) ಬ್ರಾಹ್ಮಣ, ಮಂಗಳ, ಯಾದವ, ಮಾದಿಗ ಎನ್ನುವ ಕುಲಗಳು ಅರ್ಥದಿಂದ ಕೂಡಿಕೊಂಡಿರುವವಾಗಿ ಇವೆ. ಹಾಗೆಯೇ ಮತ್ಯಾವುದಾದರು ಅರ್ಥದಿಂದ ಕೂಡಿಕೊಂಡಿರುವ ಕುಲವಿದೆಯಾ!**

ಉ. (ಎರುಕಲ) ಕುಲವಿದೆ.

**ವಿವರ :** ಬ್ರಾಹ್ಮಣ ಎಂದರೆ ಬ್ರಹ್ಮಜ್ಞಾನ ಇರುವವರೆಂದು, ಮಂಗಳ ಎಂದರೆ ಶುಭಕರವಾದ ಮೋಕ್ಷವನ್ನು ತಿಳಿಸುವ ಜ್ಞಾನ ಇರುವವರೆಂದು, ಯಾದವ ಎಂದರೆ ಯಾವಾಗಲೂ ತಮ್ಮಮೇಲೆ ತಾವು ಜ್ಞಾಪಕ ಇರುವವರೆಂದು, ಮಾದಿಗ ಎಂದರೆ ಯಾವ ಜ್ಞಾನವಿಲ್ಲದೆ ಜ್ಞಾನ ಇರುವವರಿಗಿಂತಲೂ ಕಡಿಮೆಯವರೆಂದು ಅರ್ಥವಿರುವಹಾಗೆ, ಆ ವಿಧವಾಗಿ ಅರ್ಥದಿಂದ ಕೂಡಿಕೊಂಡ ಕುಲ ಎರುಕಲ ಕುಲ. ಎರುಕ ಎಂದರೆ ತಿಳಿಯುವುದೆಂದು ಅರ್ಥ. ಎರುಕಲದವರೆಂದರೆ ತಿಳಿದವರೆಂದು ಅರ್ಥ. ಪ್ರಪಂಚದಲ್ಲಿ ಎಲ್ಲದಕ್ಕಿಂತ ಮುಖ್ಯವಾದದ್ದು ಮಾನವನ ಶರೀರವನ್ನು ನಡೆಸುವ ಆತ್ಮನನ್ನು ತಿಳಿದುಕೊಳ್ಳುವುದು. ತಮ್ಮಲ್ಲಿನ ಆತ್ಮನನ್ನು ತಿಳಿದವರೆನ್ನುವ ಅರ್ಥದಿಂದ ಎರುಕ ಇರುವವರು ಎಂದು ಪೂರ್ವದಲ್ಲಿ ಒಂದು ವರ್ಗದವರನ್ನು ಕರೆಯುತ್ತಿದ್ದರು. ಕಾಲಕ್ರಮೇಣ ಆ ಮಾತಿನಲ್ಲಿ ಸ್ವಲ್ಪ ಬದಲಾವಣೆ ಬಂದಿದೆ. ಎರುಕ ಇರುವವರು ಎನ್ನುವ ಪದದಲ್ಲಿ ಒಂದು "ಕ" ಎನ್ನುವ ಅಕ್ಷರ ಇಲ್ಲದೇ ಹೋಗಿದೆ. ಆಗ ಎರುಕಲದವರು ಎನ್ನುವ ಪದ ತಯಾರಾಗಿ ಈದಿನಕ್ಕೂ ಆ ಪದ, ಆ ಕುಲವಿದೆ. ಪೂರ್ವದಲ್ಲಿ ಎರುಕಲದವರು ಅರ್ಥಕ್ಕೆ ತಕ್ಕಹಾಗೆ ಆತ್ಮನನ್ನು ತಿಳಿದ ಜ್ಞಾನ ಇರುವವರಾಗಿ ಇದ್ದರು. ಈ ದಿನ ಹೆಸರಿಗೆ ಮಾತ್ರ ಎರುಕಲದವರು ಇದ್ದಾರೆ, ಆದರೆ ಆತ್ಮ ಎಂದರೆ ಏನೋ, ಆತ್ಮಜ್ಞಾನವೆಂದರೆ ಏನೋ, ಯಾವ ಮಾತ್ರವೂ ತಿಳಿಯದೆ ಹೋಗಿದೆ.

ಆತ್ಮಜ್ಞಾನ ಪವಿತ್ರವಾದದ್ದು ಪರಿಶುದ್ಧವಾದದ್ದು. ಆದ್ದರಿಂದ ಯಾವ ಕಲ್ಮಷವಿಲ್ಲದ ಜ್ಞಾನವನ್ನು ಆತ್ಮಜ್ಞಾನ ಎನ್ನುತ್ತಿದ್ದರು. ಶುದ್ಧವಾದ ಆತ್ಮನನ್ನು ಆತ್ಮಜ್ಞಾನವನ್ನು ತಿಳಿದ ಎರುಕಲದವರು ಪೂರ್ವದಲ್ಲಿ ಇತರರಿಗೆ ಶುದ್ಧವಾದ ಜ್ಞಾನವನ್ನು ತಿಳಿಸುತ್ತಿದ್ದರು. ಜ್ಞಾನವನ್ನು ತಿಳಿಸುವುದೇ ತಮ್ಮ ಕೆಲಸವಾಗಿ, ಮುಖ್ಯವಾದ ವೃತ್ತಿಯಾಗಿ ಇಟ್ಟುಕೊಂಡು ಇರುತ್ತಿದ್ದರು.

ಬಿಡುವಿನ ಸಮಯಗಳಲ್ಲಿ ಪಕ್ಕದ ಊರಿಗೆ ಹೋಗಿ ತಿಳಿಯದವರಿಗೆ ಜ್ಞಾನವನ್ನು ತಿಳಿಸುತ್ತಿದ್ದರು. ಆತ್ಮಜ್ಞಾನ ಮನುಷ್ಯನನ್ನು ಪರಿಶುದ್ಧನನ್ನು ಮಾಡುವುದು, ಆದ್ದರಿಂದ ಆ ದಿನಗಳಲ್ಲಿ ಜ್ಞಾನವನ್ನು ಶುದ್ಧಿ ಎಂದು ಸಹ ಕರೆಯುತ್ತಿದ್ದರು. ಎರುಕಲದವರು ನಾವು ಶುದ್ದಿ ಹೇಳುತ್ತೇವೆಂದು ಇತರರೊಂದಿಗೆ ಹೇಳುತ್ತಿದ್ದರು. ಎರುಕಲದವರ ಮುಖ್ಯವೃತ್ತಿ ಶುದ್ದಿ ಹೇಳುವುದೇ. ಕಾಲ ಕ್ರಮೇಣ ಶುದ್ದಿ ಎನ್ನುವ ಮಾತು ಗದ್ದಿ ಎನ್ನುವ ಮಾತಾಗಿ ಬದಲಾಗಿದೆ. ಎರುಕಲದವರು ಗದ್ದಿ ಹೇಳುತ್ತಾರೆನ್ನುವುದು ಕೆಲವರಿಗೆ ತಿಳಿದ ವಿಷಯವೇ. ಶುದ್ದಿ ಹೋಗಿ ಗದ್ದಿ ಎಂದು ಹೆಸರು ಬದಲಾದಹಾಗೆ ಅವರು ಹೇಳುವುದು ಜ್ಞಾನವಲ್ಲದೆ ಹೋಗಿದೆ. ಗದ್ದಿ ಹೇಳುವವರೆಂದರೆ ಪ್ರಪಂಚ ವಿಷಯಗಳಾದ ನಡೆದಿರುವವು, ನಡೆಯಬೇಕಾಗಿರುವವು ಹೇಳುವವರೆಂದು ಕೆಲವರಿಗೆ ತಿಳಿದ ವಿಷಯವೇ. ಎರುಕಲ ಕುಲ ಇಂದಿಗೂ ಇದ್ದರೂ ಅವರಹತ್ತಿರ ಶುದ್ದಿ ಇಲ್ಲದೆ ಗದ್ದಿಯಾಗಿ ಬದಲಾಗಿದೆ, ಜ್ಞಾನ ಜ್ಯೋತಿಷ್ಯವಾಗಿ ಬದಲಾಗಿದೆ. ಈ ವಿಧವಾಗಿ ಪೂರ್ವದಲ್ಲಿ ಜ್ಞಾನ ಹೊಂದಿ ಎಷ್ಟೋ ಅರ್ಥವಿರುವ ಎರುಕಲ ಕುಲ ಈ ದಿನ ಜ್ಞಾನವಿಲ್ಲದ ಕುಲವಾಗಿ ಬದಲಾಗಿದೆ.

## ಜ್ಞಾನ ಪರೀಕ್ಷೆ

**ಚಿನ್ನಪೊಲಮಡ** **ದಿನಾಂಕ–26–11–2004**

**971. (1) ಕಾಲ, ಕರ್ಮ ಚಕ್ರಗಳ ಸಮುದಾಯದಲ್ಲಿ ಒಟ್ಟು ಎಷ್ಟು ದುಂಡನೆಯ ಭಾಗಗಳು ಇವೆ?**

ಉ. ಐದು ಇವೆ.

**ವಿವರ :** ಕೆಳಗಿರುವ ಗುಣಚಕ್ರದನಂತರ ಇರುವ ಕರ್ಮಚಕ್ರ, ನಂತರ ಕಾಲಚಕ್ರ, ಎಲ್ಲದಕ್ಕಿಂತ ಮೇಲೆ ಇರುವ ಬ್ರಹ್ಮಚಕ್ರ ನಾಲ್ಕು ಗುಂಡಾಗಿರುವ ಚಕ್ರ ಭಾಗಗಳು ಆದಾಗ ಐದನೆಯದು ಸಹ ಒಂದು ಇದೆ. ಎಲ್ಲಾ ಚಕ್ರಗಳಿಗೆ ಮಧ್ಯೆದಲ್ಲಿರುವ ಕೀಲಿನಂತಹ ಬ್ರಹ್ಮನಾಡಿ ಗುಂಡಾಗಿ ಇರುವುದೇ ಆದ್ದರಿಂದ ಅದನ್ನು ಸಹ ಸೇರಿಸಿಕೊಂಡರೆ ಒಟ್ಟು ಐದಾಗುತ್ತಿವೆ. ಪ್ರತ್ಯೇಕವಾದ ವಿಷಯದಿಂದ ಕೂಡಿಕೊಂಡು, ಪ್ರತ್ಯೇಕವಾದ ಕೆಲಸ ಹೊಂದಿದೆ, ಪ್ರತ್ಯೇಕ ಭಾಗವಾಗಿ ಗುರುತಿಸಿದರೆ, ಗುಣಚಕ್ರದಲ್ಲಿ ಪ್ರತ್ಯೇಕ ಗುಣಗಳು ಇವೆ ಮತ್ತು ಪ್ರತ್ಯೇಕವಾದ ಕೆಲಸ ಇದೆ. ಹಾಗೇ ಕರ್ಮಚಕ್ರಕ್ಕೆ ಪ್ರತ್ಯೇಕವಾದ ಕರ್ಮ ಇದೆ ಮತ್ತು ಪ್ರತ್ಯೇಕವಾದ ಗಮನದ

ಕೆಲಸ ಇದೆ. ಅದೇ ವಿಧವಾಗಿ ಕಾಲಚಕ್ರ ಕಾರ್ಯ ಪ್ರತ್ಯೇಕತೆ ಹೊಂದಿ ಪ್ರತ್ಯೇಕ ಕಾರ್ಯಗಳು ಮಾಡುತ್ತಿದೆ. ಅದೇ ವಿಧವಾಗಿ ಬ್ರಹ್ಮಚಕ್ರ ಪ್ರಪಂಚ ಆಯಸ್ಸನ್ನು ಹೊಂದಿ ಪ್ರತ್ಯೇಕವಾಗಿ ಇದೆ. ಎಲ್ಲವುಗಳಿಗು ಕೀಲಿನ ಹಾಗೆ ಆಧಾರವಾಗಿರುವ ಆತ್ಮ ಎಲ್ಲದಕ್ಕು ಮಧ್ಯದಲ್ಲಿ ಗುಂಡಾಗಿ ಇದ್ದು ಎಲ್ಲವನ್ನು ಕೆಲಸ ಮಾಡಿಸುತ್ತಿದೆ. ಆದ್ದರಿಂದ ಎಲ್ಲವನ್ನು ಸೇರಿಸಿ ಐದು ಭಾಗಗಳೆಂದು ಹೇಳಬಹುದು.

**972. (2) ಧರ್ಮಗಳ ಅವಶ್ಯವನ್ನು ಅನುಸರಿಸಿ ಭೂಮಿ ಮೇಲೆ ದೇವರು ಭಗವಂತನಾಗಿ ಜನ್ಮಿಸುವನೆಂದಿದ್ದಾರೆ. ಹಾಗೆ ಜನ್ಮಿಸಿದ ಭಗವಂತನು ಭೂಮಿ ಮೇಲೆ ಎಷ್ಟೋ ಮತಗಳಿರುವು ದನ್ನು ನೋಡಿ ಏನೆಂದುಕೊಳ್ಳುವನು. ಮತದ್ವೇಷ ಆತನಿಗು ಸಹ ಇರುತ್ತದಾ?**

ಉ. ಸರ್ವ ಪ್ರಪಂಚಕ್ಕು ಅಧಿಪತಿಯಾದ, ವಿಶ್ವವೆಲ್ಲವನ್ನು ಸೃಷ್ಠಿಸಿದ ದೇವರು ಕೆಲವು ಸಾವಿರ ಸಂವತ್ಸರಗಳಿಗೊ ಅಥವಾ ಕೆಲವು ಲಕ್ಷ ಸಂವತ್ಸರಗಳಿಗೊ ಭೂಮಿ ಮೇಲೆ ಒಬ್ಬ ಮನುಷ್ಯನಾಗಿ ಹುಟ್ಟಬೇಕಾದ ಅವಶ್ಯವಿದೆ. ದೇವರ ಧರ್ಮಗಳು ಪ್ರಜೆಗಳಿಗೆ ತಿಳಿಯದೆ ಹೋಗಿ ಅಧರ್ಮಗಳು ಮನುಷ್ಯರಲ್ಲಿ ತುಂಬಿಕೊಂಡಾಗ, ದೇವರೇ ಸ್ವತಃವಾಗಿ ಭೂಮಿ ಮೇಲೆ ಹುಟ್ಟಿ ತನ್ನ ಧರ್ಮಗಳನ್ನು ಕುರಿತು ತಿಳಿಸಬೇಕಾದ ಅವಶ್ಯಕವಿದೆ. ತನ್ನ ಧರ್ಮಗಳನ್ನು ತಿಳಿಸುವ ಸಲುವಾಗಿ ದೇವರು ಮನುಷ್ಯನಾಗಿ ಹುಟ್ಟಿದರೆ ಆಗ ದೇವರೆನ್ನುವ ಹೆಸರು ಆ ಮನುಷ್ಯನಿಗೆ ಅನ್ವಯಿಸುವುದಿಲ್ಲ. ಹಾಗೆ ಅವತರಿಸಿದವನನ್ನು ಭಗವಂತನು ಎನ್ನಬೇಕು. ತನಗೆ ಅವಶ್ಯ ಬಂದಾಗ ಮನುಷ್ಯನಾಗಿ ಹುಟ್ಟುವ ದೇವರು ಯಾರಿಗೂ ಹೇಳಿ ಹುಟ್ಟುವುದಿಲ್ಲ. ಆದ್ದರಿಂದ ಭೂಮಿ ಮೇಲೆ ಭಗವಂತನು ಯಾರೆಂದು ಯಾರಿಗೂ ತಿಳಿದಿಲ್ಲ. ಮನುಷ್ಯನಿಗೆ ಕಾಣಿಸುವ ಭಗವಂತನು ತಿಳಿಯುವುದಿಲ್ಲ, ಹಾಗೇ ಕಾಣಿಸದ ದೇವರು ತಿಳಿಯುವವನಲ್ಲ. ಕಾಣಿಸದ ದೇವರನ್ನು ಯೋಗಗಳಿಂದ ಕೊನೆಗೆ ತಿಳಿದುಕೊಳ್ಳಬಹುದು. ಹಾಗೆಯೇ ಕಾಣಿಸುವ ಭಗವಂತನನ್ನು ಜ್ಞಾನದಿಂದ ತಿಳಿದುಕೊಳ್ಳಬಹುದು. ಯೋಗವಿಲ್ಲದೆ ದೇವರನ್ನು, ಜ್ಞಾನವಿಲ್ಲದೆ ಭಗವಂತನನ್ನು ತಿಳಿಯುವುದು ಸಾಧ್ಯವಾಗದು. ಅಭೌತಿಕವಾಗಿರುವ ದೇವರನ್ನು ತಿಳಿಯುವುದು ಎಷ್ಟು ಕಷ್ಟವೋ, ಭೌತಿಕವಾಗಿರುವ ಭಗವಂತನನ್ನು ತಿಳಿಯುವುದು ಸಹ ಅಷ್ಟೇ ಕಷ್ಟವಾಗುತ್ತದೆ. ಭಗವಂತನ ರೂಪದಲ್ಲಿರುವ ದೇವರು ತಿಳಿಸಿದ ಯೋಗಗಳಿಂದ ದೇವರನ್ನು ತಿಳಿಯಬಹುದು. ಹಾಗೇ ದೇವರ ಪ್ರತಿನಿಧಿ ರೂಪದಲ್ಲಿರುವ ಭಗವಂತನು ತಿಳಿಸಿದ ಜ್ಞಾನ, ಧರ್ಮಗಳಿಂದ ಭಗವಂತನನ್ನು ತಿಳಿಯಬಹುದು. ಈ ಸೂತ್ರಗಳಿಂದ ಭಗವಂತನನ್ನು ತಿಳಿಯುವುದಕ್ಕೆ ಆತನು ಹೇಳಿದ ಜ್ಞಾನ, ಧರ್ಮಗಳನ್ನೇ ನೋಡಬೇಕು. ಭಗವಂತನ ಜ್ಞಾನದ ಪ್ರಕಾರ 1) ಬಾಹ್ಯಯಜ್ಞಗಳು, 2) ದಾನಗಳು, 3) ವೇದಾಧ್ಯಯನಗಳು,

4) ತಪಸ್ಸುಗಳು ದೇವರನ್ನು ತಿಳಿಸಲಾರವು. ಹಾಗೇ 1) ಬ್ರಹ್ಮಯೋಗ 2) ಕರ್ಮಯೋಗ 3) ಭಕ್ತಿಯೋಗ ಎನ್ನುವವು ಮಾತ್ರವೇ ದೇವರನ್ನು ತಿಳಿಸಬಲ್ಲವು. ಮುಖ್ಯವಾಗಿ **ನಾಲ್ಕು ಅಧರ್ಮಗಳು, ಮೂರು ಧರ್ಮಗಳು** ಎಲ್ಲಾದರೆ ತಿಳಿಯುತ್ತಿವೆಯೋ ಅಲ್ಲೇ ಭಗವಂತನು ಇದ್ದಾನೆಂದು ತಿಳಿಯಬಲ್ಲದು.

ದೈವಜ್ಞಾನದ ಮೇಲೆ ಆಧಾರವಾಗಿಯೇ ಭೂಮಿ ಮೇಲೆ ಮತಗಳು ಸೃಷ್ಟಿಸಲ್ಪಟ್ಟಿವೆ. ಇಂದಿನ ಕಾಲದಲ್ಲಿ ಎಷ್ಟೋ ಮತಗಳು ಇವೆ. ಒಂದೊಂದು ಮತದಲ್ಲಿ ಒಂದೊಂದು ಬೊಧನೆ, ಒಂದೊಂದು ಆಚರಣೆ ಇವೆ. ದೇವರು ಭಗವಂತನಾಗಿ ಭೂಮಿ ಮೇಲೆ ಬಂದಾಗ ತನ್ನ ಜ್ಞಾನಕ್ಕೆ ಆತಂಕವಾಗಿ ವಿರುದ್ಧವಾಗಿ ಎಷ್ಟೋ ಮತಗಳು ಇವೆಯೆಂದು ಆತನಿಗೆ ತಿಳಿದಿದೆ. ಆದರೂ ಆತನಿಗೆ ಯಾವ ಮತದ ಮೇಲೆ ದ್ವೇಷಭಾವವಿರುವುದಿಲ್ಲ. ವಿಭಿನ್ನ ಧರ್ಮಗಳೊಂದಿಗೆ ಕೂಡಿಕೊಂಡಿರುವ ವಿಭಿನ್ನ ಮತಗಳನ್ನು ನೋಡಿದ ಭಗವಂತನು ಅದರಲ್ಲಿ ತನ್ನ ಧರ್ಮಗಳು ಇಲ್ಲವೆಂದು ಸಹ ಗ್ರಹಿಸುವನು. **ಭೂಮಿ ಮೇಲಿರುವ ಮತಗಳಲ್ಲಿ ತನ್ನ ಧರ್ಮಗಳು ಇಲ್ಲದೇ ಹೋಗಿ ಇತರ ಮತಗಳ ಧರ್ಮಗಳು ಅಭಿವೃದ್ಧಿ ಆದಾಗಲೇ ಭಗವಂತನು ಭೂಮಿ ಮೇಲೆ ಬರುವನು.** ಅಂತಹ ಸಮಯದಲ್ಲಿ ಭಗವಂತನು ಅವಲಂಭಿಸುವ ವಿಧಾನ ಒಂದೇ ಇರುತ್ತದೆ. ತನ್ನ ಜ್ಞಾನವನ್ನು ಮಾತ್ರವೇ ಹೊರಗೆ ತಿಳಿಸುವುದು ತನ್ನ ಏಕೈಕ ವಿಧಾನ. ತನ್ನ ವಿಧಾನದಲ್ಲಿ ನಾಲ್ಕು ಅಧರ್ಮಗಳನ್ನು, ಮೂರು ಧರ್ಮಗಳನ್ನು ತಿಳಿಸುವುದೇ ಇರುತ್ತದೆ. ದೈವ ಪ್ರತಿನಿಧಿಯಾದ ಮನುಷ್ಯ (ಭಗವಂತನು) ತಿಳಿಸುವ ವಿಧಾನದಲ್ಲಿ ಎಲ್ಲಾದರಾಗಲಿ, ಯಾವ ಸಂದರ್ಭದಲ್ಲಾಗಲಿ ಇತರ ಮತಗಳ ಪ್ರಸ್ಥಾವನೆಯೇ ಇರುವುದಿಲ್ಲ, ಅವುಗಳ ದ್ವೇಷ ಇರುವುದಿಲ್ಲ. ತಾನು ತಿಳಿಸಬೇಕಾದ ಧರ್ಮಗಳನ್ನು ಅಧರ್ಮಗಳನ್ನು ಮಾತ್ರವೇ ತಿಳಿಸುವನು, ಆದರೆ ಎಲ್ಲಿಯೂ ಸಹ ಪರಮತ ದೂಷಣೆ ಮಾಡುವುದಿಲ್ಲ. ಅದೇ ಭಗವಂತನಲ್ಲಿನ ದೊಡ್ಡತನ. ಆತನು ತಿಳಿಸಿದ ಧರ್ಮಗಳನ್ನನುಸರಿಸಿ ಭೂಮಿಮೇಲೆ ಅಸಲಾದ ದೇವರ ಮತಯಾವುದೋ, ದೇವರ ಮತವಲ್ಲದ ಮಾಯ ಮತಗಳಾವುವೋ ಸುಲಭವಾಗಿ ತಿಳಿಯಬಲ್ಲವು.

ಮನುಷ್ಯನಿಗೆ ರೋಗಗಳು ಎಷ್ಟಾದರೂ ಇರಬಹುದು, ಆರೋಗ್ಯ ಮಾತ್ರ ಒಂದೇ ಇದೆ. ಒಂದು ರೋಗವಿರುವ ಮನುಷ್ಯ ತನಗೆ ಆ ರೋಗ ಹೋಗಿ, ಬೇರೆ ಮತ್ತೊಂದು ರೋಗ ಬರಬೇಕೆಂದು ಕೋರುವುದಿಲ್ಲ. ಯಾವ ರೋಗವಿದ್ದರೂ ಮನುಷ್ಯನಿಗೆ ಅನಾರೋಗ್ಯವಿದ್ದಹಾಗೇ ಅಲ್ಲವೆ! ಆದ್ದರಿಂದ ಯಾವ ರೋಗವಿದ್ದರೂ ಆ ರೋಗ ಹೋಗಿ ಆರೋಗ್ಯ ಬೇಕೆಂದು ಮನುಷ್ಯ ಕೋರುವನು. ಈ ವಿಧವಾಗಿಯೇ ಭೂಮಿ

ಮೇಲೆ ಎಷ್ಟೋ ರೋಗಗಳನ್ನು ಹೋಲಿದ ಮಾಯೆ ಮತಗಳು ಎಷ್ಟೋ ಇವೆ. ಎಲ್ಲಾ ರೋಗಗಳಿಗಿಂತಲೂ ಆರೋಗ್ಯವೇ ಮುಖ್ಯ ಎನ್ನುವಹಾಗೆ, ಎಲ್ಲಾ ಮತಗಳಿಗಿಂತಲೂ ದೈವಜ್ಞಾನವೇ ಮುಖ್ಯ. ಮನುಷ್ಯ ಯಾವ ವಿಧವಾಗಿ ಆರೋಗ್ಯವನ್ನೇ ಕೋರುತ್ತಿರುವನೋ ಆ ವಿಧವಾಗಿ ಮನುಷ್ಯ ದೈವಜ್ಞಾನವನ್ನೇ ಕೋರಿಕೊಳ್ಳಬೇಕು. ಆರೋಗ್ಯ ಯಾವಾಗ ಇರುತ್ತದೋ ಆಗ ಯಾವರೋಗ ಇರುವುದಿಲ್ಲ ಎನ್ನುವಹಾಗೆ, ಮನುಷ್ಯನಿಗೆ ದೈವ ಜ್ಞಾನ ಯಾವಾಗ ಉಂಟಾಗುತ್ತದೋ ಆಗ ಮನುಷ್ಯ ಮತಾತೀತನು ಆಗಬಲ್ಲನು. ಆದ್ದರಿಂದ ರೋಗವನ್ನು ದ್ವೇಷಿಸುವುದಕ್ಕಿಂತಲೂ ಆರೋಗ್ಯವನ್ನು ಕಾಂಕ್ಷಿಸುವುದು ಒಳ್ಳೆದು ಎನ್ನುವ ಸೂತ್ರದ ಪ್ರಕಾರ, ಮತವನ್ನು ದ್ವೇಷಿಸುವುದಕ್ಕಿಂತ ಮತಾತೀತವಾದ ದೈವಜ್ಞಾನವನ್ನು ಕಾಂಕ್ಷಿಸುವುದು ಮೇಲು. ಆದ್ದರಿಂದ ಭೂಮಿ ಮೇಲೆ ಬಂದ ದೇವರು ಸಹ ಮತಗಳ ಪ್ರಸ್ಥಾವನೆ ಎತ್ತದೆ ಕೇವಲ ಧರ್ಮಗಳನ್ನು, ಅಧರ್ಮಗಳನ್ನು ಮಾತ್ರವೇ ತಿಳಿಸಿದ್ದಾನೆ. ಭಗವಂತನು ತಿಳಿಸಿದ ಮೂರು ಧರ್ಮಗಳನ್ನು, ನಾಲ್ಕು ಅಧರ್ಮಗಳನ್ನು ಅನುಸರಿಸಿ ಭೂಮಿ ಮೇಲಿರುವ ಮಾಯೆ ಮತಗಳಾವುವೋ, ದೇವರ ಧರ್ಮಗಳಾವುವೋ ತಿಳಿಯಬಲ್ಲವು. ಭಗವದ್ಗೀತೆಯಲ್ಲಿ ಧರ್ಮಗಳು, ಅಧರ್ಮಗಳು ಮಾತ್ರವೇ ಹೇಳಲ್ಪಟ್ಟಿವೆ ಆದರೆ ಮತ ಪ್ರಸ್ಥಾವನೆ ಎಲ್ಲೂ ಇಲ್ಲವೆಂದು ಗ್ರಹಿಸಬಹುದು.

**ನೀನು ಆರೋಗ್ಯ ದಲ್ಲಿದ್ದೀಯಾ – ನೀನು ದೈವ ಮತದಲ್ಲಿ ಇದ್ದೀಯಾ?**

**ನೀನು ಆರೋಗ ದಲ್ಲಿದ್ದೀಯಾ – ನೀನು ಮಾಯೆ ಮತದಲ್ಲಿ ಇದ್ದೀಯಾ?**

**973. (3) ಉದಾಹರಣೆಗೆ ಸಮಾನ ಪದ ಯಾವುದು?**

ಉ. ಸಾಮೆತ (ಗಾದೆ).

**ವಿವರ :** ಒಂದನ್ನು ಕುರಿತು ಅರ್ಥವಾಗುವಹಾಗೆ ವಿವರಿಸಿ ಹೇಳುವುದಕ್ಕೆ ಬಳಸುವ ಸಮಾನ ವಿವರವನ್ನು ಉದಾಹರಣೆ ಎಂದು ಹೇಳುತ್ತಿದ್ದೇವೆ. ಹಾಗೆ ಹೇಳುವುದನ್ನು ಸಮತ ಎಂದು ಪೂರ್ವದಲ್ಲನ್ನುತ್ತಿದ್ದರು. ಆತ್ಮಶಕ್ತಿ ಶರೀರವೆಲ್ಲಾ ವ್ಯಾಪಿಸಿ ಇದೆಯೆಂಬುದನ್ನು ಅರ್ಥವಾಗುವಹಾಗೆ ಹೇಳುವುದಕ್ಕೆ ಸೂರ್ಯನೊಬ್ಬನು ಈ ಲೋಕವನ್ನು ಪ್ರಕಾಶಿಸುವ ಹಾಗೆ ಮಾಡಿದಂತೆ ಎಂದು ಸಮಾನವಾದ ವಿವರವನ್ನು ಹೇಳಿದ್ದಾರೆ. ಶರೀರವೆಲ್ಲಾ ಆತ್ಮ ಶಕ್ತಿ ವ್ಯಾಪಿಸಿ ಇದೆಯೆಂದರೆ ಅರ್ಥವಾಗುವುದಿಲ್ಲ ಎಂದು, ಅದಕ್ಕೆ ಹೋಲಿಕೆಯಾಗಿ ಸೂರ್ಯನು ತನ್ನ ಕಿರಣಗಳಿಂದ ಲೋಕವೆಲ್ಲಾ ಪ್ರಕಾಶಿಸುವಹಾಗೆ ಮಾಡಿದಂತೆ ಎಂದು ಹೇಳಿದ್ದಾರೆ. ಇದನ್ನೇ ಸಮತ(ಗಾದೆ) ಎನ್ನುತ್ತಿದ್ದರು. ಕಾಲಕ್ರಮದಲ್ಲಿ ("ಸಮತ" ಎನ್ನುವ

ಪದ 'ಸಾಮೆತ' ಎನ್ನುವ ಪದವಾಗಿ ಬದಲಾಗಿದೆ.) ಆತ್ಮಶಕ್ತಿ ಶರೀರವೆಲ್ಲಾ ವ್ಯಾಪಿಸಿ ಇದೆಯೆಂದು ಹೇಳುವುದಕ್ಕೆ ಸೂರ್ಯನು ಲೋಕವೆಲ್ಲಾ ಪ್ರಕಾಶಿಸುವಂತೆ ಮಾಡಿದಹಾಗೆ ಎಂದು ಬಳಸುವುದನ್ನು ಹೇಗೆ ಸಮತವಾಗಿ ಇದೆಯೋ ವಿವರಿಸಿಕೊಳ್ಳೋಣ.

| | | | |
|---|---|---|---|
| **ಸೂರ್ಯ** | **ಪ್ರಕಾಶವು** | **ಲೋಕವೆಲ್ಲಾ** | **ವ್ಯಾಪಿಸಿರುವಂತೆ** |
| **ಆತ್ಮ** | **ಶಕ್ತಿಯು** | **ಶರೀರವೆಲ್ಲಾ** | **ವ್ಯಾಪಿಸಿರುವಂತೆ** |
| **ಸೂರ್ಯನು** | **ಒಬ್ಬನು** | **ಲೋಕವನ್ನು** | **ಪ್ರಕಾಶಿಸಿರುವಂತೆ** |
| **ಆತ್ಮ** | **ಒಬ್ಬನು** | **ಶರೀರವನ್ನು** | **ಪ್ರಕಾಶಿಸಿದಂತೆ** |
| **ಮನುಷ್ಯ ಹಳೆ** | **ವಸ್ತ್ರವನ್ನು** | **ಬಿಟ್ಟು ಹೊಸ** | **ವಸ್ತ್ರವನ್ನು ಧರಿಸಿದಂತೆ** |
| **ಜೀವಾತ್ಮ ಹಳೆ** | **ಶರೀರವನ್ನು** | **ಬಿಟ್ಟು ಹೊಸ** | **ಶರೀರವನ್ನು ಧರಿಸಿದಂತೆ** |

ಈ ವಿಧವಾಗಿ ಅರ್ಥವಾಗುವ ವಿಷಯವನ್ನು ಮೊದಲು ಹೇಳಿ, ಅದಕ್ಕೆ ಸಮಾನವಾಗಿ ಅರ್ಥವಾಗದ ವಿಷಯವನ್ನು ಹೇಳಿದರೆ, ಸುಲಭವಾಗಿ ಅವಗಾಹನೆ ಆಗಬಹುದೆಂದು ಹೇಳುವುದನ್ನೇ ಸಮತ ಎಂದೂ, ಸಾಮೆತ ಎಂದೂ ಕರೆಯುತ್ತಿದ್ದೇವೆ.

**974. (4) ಉದಾಹರಣೆಗೆ ಹೇಳಲಾಗದಿರುವುದು ಯಾವುದು?**

ಉ. ಪರಮಾತ್ಮ.

**ವಿವರ :** ಪ್ರಪಂಚದಲ್ಲಿನ ಎಲ್ಲಾ ವಸ್ತುಗಳನ್ನು, ಎಲ್ಲಾ ಪದಾರ್ಥಗಳನ್ನು ಅವುಗಳಿಗೆ ಸಮಾನವಾಗಿರುವವನ್ನು ಹೋಲಿಸಿ ಉದಾಹರಣೆಯಾಗಿ ಹೇಳಬಹುದು. ಕೊನೆಗೆ ಜೀವಾತ್ಮನಿಗು ಆತ್ಮನಿಗು ಸಮಾನವಾಗಿ ಸಹ ಹೋಲಿಕೆಗಳಿವೆ. ಒಬ್ಬ ಪರಮಾತ್ಮನನ್ನು ಕುರಿತು ಉದಾಹರಣೆಗೆ ಯಾವುದನ್ನು ಹೇಳಲಾರೆವು. ಪರಮಾತ್ಮನಿಗೆ ಸಮಾನವಾದದ್ದು ಇತ್ತ ಪ್ರಪಂಚದಲ್ಲಿಯೂ ಅತ್ತ ಜಗತ್ತಿನಲ್ಲಿ ಯಾವುದು ಇಲ್ಲ. ಯಾವ ಕಡೆ ನೋಡಿದರೂ ಯಾವ ಹೋಲಿಕೆಗೂ ಸಿಗದೆ ಇರುವುದನ್ನು ಯಾರು ಉದಾಹರಿಸಲಾರರು. ವಿಶ್ವದಲ್ಲಿ ಯಾರು ಒಂದುಬಾರಿಯೂ ಸಹ ನೋಡದ ಪರಮಾತ್ಮನನ್ನು ಹೇಳುವುದಕ್ಕೆ ಸಾಧ್ಯವಿಲ್ಲ.

**975. (5) ನೀನು ರುಚಿ ನೋಡಿದರೂ ಇತರರಿಗೆ ಹೇಳಲಾಗದ್ದು, ತೋರಿಸಲಾಗದ್ದು ಯಾವುದು?**

ಉ. ಆತ್ಮ.

**ವಿವರ :** ತಿಳಿದುಕೊಳ್ಳಬೇಕೆನ್ನುವ ಛಲ ಇದ್ದರೇ ಕೊನೆಗೆ ಆತ್ಮನನ್ನಾದರೂ ತಿಳಿದುಕೊಳ್ಳ

ಬಹುದು. ಮನುಷ್ಯ ವಿಶೇಷವಾದ ಶ್ರದ್ಧೆಯನ್ನು ಜ್ಞಾನದ ಮೇಲೆ ಹೊಂದಿದ್ದರೇ, ಆತ್ಮವೊಂದರ ಅನುಭವವನ್ನು ರುಚಿ ನೋಡಬಹುದು. ತಾನು ತಿಳಿದುಕೊಂಡ ಆತ್ಮನನ್ನು ಇತರರಿಗೆ ಹೀಗಿದೆಯೆಂದು ಹೇಳುವುದಕ್ಕೂ, ಹೀಗಿದೆಯೆಂದು ತೋರಿಸುವುದಕ್ಕೂ ಸಾಧ್ಯವಿಲ್ಲ. ಯಾವ ಮನುಷ್ಯನಾದರೂ ಜ್ಞಾನದಿಂದಲೇ ಆತ್ಮನನ್ನು ತಿಳಿಯಬಹುದು. ಸ್ವಲ್ಪ ಕಾಲ ಜ್ಞಾನ ಹೇಳುವುದರಿಂದ, ಜ್ಞಾನ ಪ್ರಕಾರ ಸ್ವಲ್ಪ ಕಾಲ ಸಾಧನೆ ಮಾಡುವುದರಿಂದ, ಯಾರಿಗೆ ಅವರು ನೋಡಬೇಕಾಗಿರುವುದು ಆತ್ಮ. ಅಷ್ಟೇ ಆಗಲಿ ಒಂದೇ ಬಾರಿ ಯಾರು ಹೇಳಲಾಗದ್ದು, ಒಂದೇ ಬಾರಿ ಯಾರು ತೋರಿಸಲಾಗದ್ದು ಆತ್ಮ. ಆದ್ದರಿಂದ ಆತ್ಮನನ್ನು ಆತ್ಮಜ್ಞಾನದಿಂದಲೇ ತಿಳಿಯಬಹುದು. ಆದರೆ ಇತರ ಮಾತುಗಳಿಂದ ಇತರ ದೃಶ್ಯಗಳಿಂದ ಸಾಧ್ಯವಾಗುವುದಿಲ್ಲ.

**976. (6) ಆತ್ಮ, ಪರಮಾತ್ಮ ಅಲ್ಲದೆ ಎದುರಿಗಿದ್ದು ಕಾಣಿಸದೆ ಇರುವುದು ಯಾವುದು?**

ಉ. ಸೂಕ್ಷ್ಮ ಶರೀರ.

**ವಿವರ :** ಆತ್ಮ ಪರಮಾತ್ಮ ಅಲ್ಲದೆ ಜೀವಾತ್ಮನೊಂದಿಗೆ ಮತ್ತು ಹದಿನಾಲ್ಕು ಭಾಗಗಳಾಗಿರುವ ಸೂಕ್ಷ್ಮ ಶರೀರ ನಮ್ಮ ಎದುರಿಗೆ ಇದ್ದರು ಕಾಣಿಸುವುದಿಲ್ಲ. ಭೂಮಿ ಮೇಲೆ ಎಷ್ಟೋ ಜೀವರಾಶಿಗಳು ಸ್ಥೂಲಶರೀರವನ್ನು ಕಳೆದುಕೊಂಡು ಸೂಕ್ಷ್ಮ ಶರೀರದೊಂದಿಗೆ ಇವೆ. ಅವುಗಳನ್ನು ಸ್ಥೂಲಶರೀರದಿಂದಿರುವ ನಾವು ನೋಡಲಾರದೆ ಇದ್ದೇವೆ. ಸೂಕ್ಷ್ಮಶರೀರ ಸ್ಥೂಲ ಕಣ್ಣುಗಳಿಗೆ ಕಾಣಿಸುವುದಿಲ್ಲ.

**977. (7) ಒಂದು ಪದಾರ್ಥವಾಗಿದ್ದು ಯಾರಿಗು ತಿಳಿಯದೆ ಇರುವುದು ಮತ್ತು ಎಲ್ಲಾ ಪದಾರ್ಥಗಳಾಗಿದ್ದು ಯಾರಿಗು ತಿಳಿಯದೆ ಇರುವುದು ಯಾವುದು?**

ಉ. ಪರಮಾತ್ಮ.

**ವಿವರ :** ಪ್ರತಿ ಅಣುವಿನಲ್ಲೂ ಪರಮಾತ್ಮ ವ್ಯಾಪಿಸಿದೆ. ಆದ್ದರಿಂದ ಒಂದು ಪದಾರ್ಥದಲ್ಲಾಗಲಿ, ಎಲ್ಲಾ ಪದಾರ್ಥಗಳಲ್ಲಾಗಲಿ ಪರಮಾತ್ಮ ವ್ಯಾಪಿಸಿ ಇದೆ. ಪರಮಾತ್ಮ ಇಲ್ಲದ್ದು ವಿಶ್ವದಲ್ಲಿ ಯಾವುದು ಇಲ್ಲ. ಎಲ್ಲದರಲ್ಲೂ ಅಣುವಿನಲ್ಲೂ, ಪರಮಾಣುವಿನಲ್ಲೂ ಇರುವ ಪರಮಾತ್ಮ ಯಾರಿಗೂ ತಿಳಿಯುತ್ತಿಲ್ಲ. ತಿಳಿದುಕೊಳ್ಳಬೇಕೆಂದುಕೊಂಡರೂ ತಿಳಿಯದ ವಿಧಾನದಿಂದ ಎಲ್ಲರಲ್ಲೂ ಎಲ್ಲದರಲ್ಲೂ ಪರಮಾತ್ಮ ಇದೆ.

**978. (8) ದೇಹಿ ಎಂದರೆ ಆತ್ಮ ಎಂದು ಅರ್ಥ. ದ್ರೋಹಿ ಎಂದರೆ ಅರ್ಥವೇನು?**

ಉ. ಆತ್ಮಕ್ಕೆ ಕೆಡಕನ್ನು ಮಾಡಿದವನು.

**ವಿವರ :** ಆತ್ಮ, ಜೀವಾತ್ಮಗಳಿರುವ ಪ್ರತಿ ಶರೀರದಲ್ಲು ಇದೆ. ಜೀವಾತ್ಮ ಶರೀರದಲ್ಲಿ ನಿವಾಸವಾಗುವುದಕ್ಕೆ ಆತ್ಮ ಶಕ್ತಿ ತಪ್ಪದೆ ಅವಶ್ಯ. ಶರೀರದಲ್ಲಿ ಆತ್ಮ ಆಹಾರಶಕ್ತಿಯನ್ನು ಉಪಯೋಗಿಸಿಕೊಂಡು ಎಲ್ಲಾ ಕಾರ್ಯಗಳನ್ನು ಮಾಡುತ್ತಿದೆ. ಇತರ ಶರೀರದಲ್ಲಿನ ಆತ್ಮನಿಗಾಗಲಿ, ತನ್ನ ಶರೀರದಲ್ಲಿನ ಆತ್ಮನಿಗಾಗಲಿ ಯಾರಾದರೂ ತೊಂದರೆಯನ್ನು ಮಾಡಿದರೆ ಅದು ದ್ರೋಹವಾಗುತ್ತದೆ. ಆದ್ದರಿಂದ ತೊಂದರೆ ಮಾಡಿದವನನ್ನು ದ್ರೋಹಿ ಎನ್ನಬಹುದು. ತನ್ನ ಶರೀರದಲ್ಲಿನ ಆತ್ಮನಿಗೆ ಆಹಾರವನ್ನಿಡದೆ ಆತ್ಮಶಕ್ತಿಗೆ ತೊಂದರೆಯನ್ನು ಕೊಡುವುದಾಗಲಿ, ಇತರ ಶರೀರದಲ್ಲಿನ ಆತ್ಮ ನಿವಾಸ ಮಾಡದೆ ಆತ್ಮನನ್ನು ಹತ್ಯೆ ಮಾಡುವುದು, ಎರಡು ಕಾರ್ಯಗಳು ಆತ್ಮದ್ರೋಹವೇ ಆಗುತ್ತದೆ. ಅಂತಹ ಕಾರ್ಯಗಳು ಮಾಡುವವನನ್ನು ಆತ್ಮದ್ರೋಹಿ ಎನ್ನುತ್ತಾರೆ.

**979. (9) ಆಡಿದರೆ ಆಟ, ಹಾಡಿದರೆ ಹಾಡು, ಮಲಗಿದರೆ ನಿದ್ರೆ, ಮಾತನಾಡಿದರೆ ಮಾತು ಬರುತ್ತದೆ. ಏನು ಮಾಡದಿದ್ದರೇ ಏನೂ ಬರುವುದಿಲ್ಲ. ಆದರೂ ಲಾಭವೇ, ಆ ಲಾಭವೇನು?**

ಉ. ಯೋಗ.

**ವಿವರ :** ಯಾವುದು ಮಾಡಿದರೂ ಅದು ಕಾರ್ಯವೇ ಆಗುತ್ತದೆ. ಆ ಕಾರ್ಯಕ್ಕೆ ಕಾಣಿಸುವ ಫಲಿತವಿರುತ್ತದೆ, ಹಾಗೇ ಕಾಣಿಸದ ಕರ್ಮ ಅಂಟಿಕೊಂಡಿರುತ್ತದೆ. ಏನೂ ಮಾಡದಿರುವಾಗ ಕಾಣಿಸುವ ಫಲಿತವಿರುವುದಿಲ್ಲ, ಆದರೆ ಕಾಣಿಸದ ಫಲಿತ ಮಾತ್ರ ಇರುತ್ತದೆ. ಕಾಣಿಸುವ ಫಲವಿರುವಹಾಗೆ ಕಾಣಿಸದ ಫಲಿತಗಳು ಸಹ ಇರುತ್ತವೆ. ಅವು ಒಂದು ಪಾಪಪುಣ್ಯಮಿಶ್ರಿತವಾದ ಕರ್ಮ, ಎರಡನೆಯದು ಕರ್ಮವನ್ನು ಸುಡುವ ಜ್ಞಾನಾಗ್ನಿ. ಯಾವ ಕೆಲಸ ಮಾಡದಿರುವಾಗ ಅದು ಯೋಗವಾಗುತ್ತದೆ. ಯೋಗ ಮಾಡಿದಾಗ ತಪ್ಪದೆ ಜ್ಞಾನಾಗ್ನಿ ಬರುತ್ತದೆ. ಅದೇ ಏನೂ ಮಾಡದಿರುವಾಗ ಬರುವ ಲಾಭ. ಶರೀರದಿಂದ ಕೆಲಸವಾಗಲಿ, ಮನಸ್ಸಿನಿಂದ ಆಲೋಚನೆಗಳಾಗಲಿ ಮಾಡದಿರುವಾಗಲೇ ಏನೂ ಮಾಡದವನಾಗುತ್ತಾನೆ. ಶರೀರದಿಂದ ಕೆಲಸ ಮಾಡದೆ ಒಳಗೆ ಮನಸ್ಸಿನಿಂದ ಆಲೋಚಿಸುತ್ತಿದ್ದರೂ ಅದು ಕೆಲಸ ಮಾಡಿದಹಾಗೇ ಆಗುತ್ತದೆ. ಮನಸ್ಸು ಸಹ ಕೆಲಸಮಾಡದಿರುವಾಗಲೇ ಬ್ರಹ್ಮಯೋಗವಾಗುತ್ತದೆ.

**980. (10) ನಿನ್ನ ನೆರಳು ನಿನ್ನ ಶರೀರವನ್ನು ಅಂಟಿರುವಹಾಗೆ ನೀನು ಎಲ್ಲಿಗೆ ಶರೀರದಿಂದ ಹೋದರೂ, ಶರೀರ ಇಲ್ಲದೆ ಹೋದರೂ ನಿನ್ನನ್ನು ಅಂಟಿಕೊಂಡು ಬರುವವು ಮೂರು ಇವೆ. ಅವು ಯಾವುವು?**

ಉ. 1) ಗುಣಗಳು 2) ಕರ್ಮ 3) ಕಾಲ.

**ವಿವರ :** ಜೀವಾತ್ಮ ಶರೀರವನ್ನು ಧರಿಸಿ ಇದ್ದಾಗಾಗಲಿ, ಶರೀರ ಬಿಟ್ಟು ಮತ್ತೊಂದು ಶರೀರವನ್ನು ಸೇರುವುದಕ್ಕೆ ಹೋದಾಗಾಗಲಿ ಜೀವಾತ್ಮನ ಹಿಂದೆ ಗುಣಗಳು, ಕರ್ಮ, ಕಾಲ ಎನ್ನುವ ಮೂರು ಇರುತ್ತವೆ. ನಮ್ಮ ಶರೀರದಲ್ಲಿ ನಾಲ್ಕು ಚಕ್ರಗಳ ಸಮೂಹ ಒಂದು ಇದೆ. ಕೆಳಗಿನ ಚಕ್ರದಲ್ಲಿ ಗುಣಗಳಿರುತ್ತವೆ. ಗುಣಗಳು ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿವೆ. ಆ ಮೂರು ಭಾಗಗಳಲ್ಲಿ ಯಾವುದೋ ಒಂದರಲ್ಲಿ ಜೀವಾತ್ಮ ನಿವಾಸ ಮಾಡುತ್ತಿದ್ದಾನೆ. ಶರೀರವಿದ್ದಾಗಾಗಲಿ, ಶರೀರವನ್ನು ಬಿಟ್ಟು ಮತ್ತೊಂದು ಶರೀರವನ್ನು ಸೇರುವುದಕ್ಕೆ ಹೋದಾಗಾಗಲಿ ಜೀವಾತ್ಮ ಗುಣಗಳಿಂದ ಹೊರ ಬೀಳುವುದಕ್ಕೆ ಅವಕಾಶವೇ ಇಲ್ಲ. ಗುಣಚಕ್ರದೊಂದಿಗೆ ಕರ್ಮಚಕ್ರ ಕಾಲಚಕ್ರ ಅನುಸಂಧಾನವಾಗಿರುವುದರಿಂದ ಜೀವಾತ್ಮ ಎಲ್ಲಿದ್ದರೂ ಗುಣಗಳು, ಕಾಲ, ಕರ್ಮ ಅವನ ಹಿಂದೆ ನೆರಳಿನಂತೆ ಅಂಟಿಕೊಂಡಿರುತ್ತವೆ. ಜೀವಾತ್ಮ ಇವುಗಳಿಂದ ಬಿಡುಗಡೆ ಹೊಂದುವುದೇ ಮೋಕ್ಷವಾಗುತ್ತದೆ.

## ಜ್ಞಾನ ಪರೀಕ್ಷೆ

**ಚಿನ್ನಪೊಡಮಲ** **ದಿನಾಂಕ–07–09–2006**

**981. (1) ಕತ್ತಲು ಬೆಳಕುಗಳಲ್ಲಿ ಯಾವುದು ಶಾಶ್ವತವಾದದ್ದು? ಅವುಗಳನ್ನು ಜ್ಞಾನ ಅಜ್ಞಾನಗಳಲ್ಲಿ ಏನೆಂದು ಹೋಲಿಸಬಹುದು?**

ಉ. ಕತ್ತಲು. ಬೆಳಕನ್ನು ಜ್ಞಾನದೊಂದಿಗೆ, ಕತ್ತಲನ್ನು ಅಜ್ಞಾನದೊಂದಿಗೆ ಹೋಲಿಸಬಹುದು.

**ವಿವರ :** ಪ್ರಪಂಚವೇ ಕತ್ತಲು ಮಯ. ಸೂರ್ಯನಿರುವ ಸ್ವಲ್ಪ ಪ್ರಾಂತ್ಯ ಮಾತ್ರ ಬೆಳಕಿನಿಂದ ಕೂಡಿಕೊಂಡಿದೆ. ಸೂರ್ಯನು ಇಲ್ಲದ ಪ್ರಾಂತವೆಲ್ಲವೂ ಕತ್ತಲಿಂದ ಕೂಡಿಕೊಂಡಿದೆ. ಇದನ್ನನುಸರಿಸಿ ಭೂಗೋಳವೆಲ್ಲವು ಅರ್ಧ ಭಾಗ ಕತ್ತಲಿಂದ ಕೂಡಿಕೊಂಡಿದೆಯೆಂದು ಹೇಳಬಹುದು. ಯಾವಾಗಾದರೂ ಸಂಪೂರ್ಣ ಸೂರ್ಯ ಗ್ರಹಣ ಏರ್ಪಟ್ಟರೆ ಇರುವ ಅರ್ಧಭಾಗ ಬೆಳಕೂ ಸಹ ಕಡಿಮೆಯಾಗುತ್ತದೆ. ಕತ್ತಲು ಬೆಳಕಲ್ಲಿ ಕತ್ತಲು ಶಾಶ್ವತವಾದುದೆನ್ನುವುದಕ್ಕೆ ಒಂದು ಕತ್ತಲ ಕೋಣೆಯಲ್ಲಿ ದೀಪವನ್ನು ಬೆಳಗಿಸಿದರೆ ಕತ್ತಲು ಇಲ್ಲದಂತೆ ಹೋಗುತ್ತದೆ. ದೀಪ ನಂದಿಸಿದ ಕೂಡಲೆ ಕತ್ತಲಿರುತ್ತದೆ. ಇಲ್ಲಿ ದೀಪ ಅದರ

ಬೆಳಕು ತಾತ್ಕಾಲಿಕವಾಗುತ್ತಿದೆ. ಕತ್ತಲು ಮಾತ್ರ ಶಾಶ್ವತ ಕಾಲವಾಗುತ್ತಿದೆ. ಹಾಗೇ ಒಂದು ಕತ್ತಲು ಪ್ರಾಂತದಲ್ಲಿ ದೀಪವನ್ನು ಬೆಳಗಿಸೋಣ. ಅಲ್ಲಿ ದೀಪದ ಸುತ್ತಲೂ ಸ್ವಲ್ಪ ಬೆಳಕಿದ್ದು ದೂರವಾಗಿ ಹೋದಂತೆಲ್ಲಾ ಕತ್ತಲಿರುತ್ತದೆ. ದೀಪಕಾಂತಿ ಕಿರಣಗಳು ದೂರವಾಗಿ ಹೋದಂತೆಲ್ಲ ಬಲಹೀನವಾಗಿ ಅಂತ್ಯವಾಗಿ ಹೋಗುತ್ತಿವೆ. ಆದ್ದರಿಂದ ದೀಪಕ್ಕೆ ದೂರವಾಗಿ ಕತ್ತಲು ಇರುತ್ತದೆ. ದೀಪವಿದ್ದರೆ ಬೆಳಕು ಇಲ್ಲದೆ ಹೋದರೆ ಕತ್ತಲು ಎನ್ನುವ ಸೂತ್ರದ ಪ್ರಕಾರ ಕತ್ತಲೇ ಶಾಶ್ವತವಾಗಿ ಇದೆ.

ಕತ್ತಲು ಬೆಳಕುಗಳಲ್ಲಿ ಕತ್ತಲನ್ನು ಅಜ್ಞಾನವಾಗಿ, ಬೆಳಕನ್ನು ಜ್ಞಾನವಾಗಿ ಹೋಲಿಸಬಹುದು. ಕತ್ತಲು ಭೂಮಿ ಮೇಲೆ ಶಾಶ್ವತವಾಗಿ ಇದ್ದಹಾಗೆ, ಅಜ್ಞಾನವು ಸಹ ಮನುಷ್ಯರಲ್ಲಿ ಶಾಶ್ವತವಾಗಿ ಇದೆ. ದೀಪವಿದ್ದಾಗ ಬೆಳಕು ಬಂದು, ದೀಪ ಹೋದ ಕೂಡಲೆ ಕತ್ತಲು ಇರುವಹಾಗೆ, ಮನುಷ್ಯನಲ್ಲಿ ಜ್ಞಾನವೆನ್ನುವ ದೀಪ ಬೆಳಗಿದಾಗ ಸ್ವಲ್ಪ ಅಜ್ಞಾನ ಹೋಗುತ್ತಿದೆ. ಜ್ಞಾನವೆನ್ನುವ ದೀಪ ಹೋದ ಕೂಡಲೇ ಅಜ್ಞಾನವೆನ್ನುವ ಕತ್ತಲು ಏರ್ಪಡುತ್ತಿದೆ. ದೀಪ ದೊಡ್ಡದಾದರೆ ಬಹಳ ಬೆಳಕು ಬರುತ್ತದೆ. ಹಾಗೇ ಜ್ಞಾನ ದೊಡ್ಡದಾದರೆ ಅಜ್ಞಾನವೆನ್ನುವ ಕತ್ತಲು ಸಹ ಬಹಳ ಹೋಗುತ್ತದೆ. ದೀಪ ಚಿಕ್ಕದಾದರೆ ಸ್ವಲ್ಪ ಬೆಳಕು ಬರುತ್ತದೆ. ಹಾಗೇ ಚಿಕ್ಕ ಜ್ಞಾನವಾದರೂ ಅದಕ್ಕೆ ತಕ್ಕ ಅಜ್ಞಾನ ಹೋಗುತ್ತದೆ. ಯಾವುದು ಏನಾದರೂ ಪ್ರಪಂಚದಲ್ಲಿ ಕತ್ತಲು ಶಾಶ್ವತವಾಗಿ ಇರುವಹಾಗೆ ಮನುಷ್ಯರಲ್ಲಿ ಅಜ್ಞಾನ ಶಾಶ್ವತವಾಗಿ ಇದೆ. ಆದ್ದರಿಂದ ದೇವರು ಭಗವಂತನ ರೂಪದಲ್ಲಿ ಆಗಾಗ ಭೂಮಿ ಮೇಲೆಗೆ ಬಂದು ಬೆಳಕನ್ನು ಕೊಟ್ಟು ಹೋಗುತ್ತಿದ್ದಾನೆ.

**982. (2) ಊಹೆ ಎಂದರೇನು?**

ಉ. ಹೊಸದಾಗಿ ಹುಟ್ಟಿ ಬಂದು ಹೋಗುವುದು.

**ವಿವರ :** ಹೃದಯದಲ್ಲಿ ಹುಟ್ಟುವುದು ಊಹೆ. ಬಹಳ ಜನ ಊಹೆಯನ್ನು ಆಲೋಚನೆಯನ್ನು ಒಂದಾಗಿ ಹೋಲಿಸಿಕೊಳ್ಳುವರು. ಅದು ಸರಿಯಾದ ಪದ್ಧತಿ ಅಲ್ಲ. ಊಹೆ ಬೇರೆ ಆಲೋಚನೆ ಬೇರೆ. ಆಲೋಚನೆ ಮನಸ್ಸಿನಿಂದ ಹುಟ್ಟುತ್ತಿದೆ. ಊಹೆ ಹೃದಯದಿಂದ ಹುಟ್ಟುತ್ತಿದೆ. ಹೊಸದಾಗಿ ಹುಟ್ಟಿ ಬಂದು ತಿರುಗಿ ಅಡಗಿ ಹೋಗುವುದನ್ನು ಊಹೆ ಎನ್ನುತ್ತೇವೆ. ಒಂದು ಬಾರಿ ಬಂದ ಊಹೆಯನ್ನು ಮನಸ್ಸು ತನ್ನಲ್ಲಿ ಲಗ್ನ ಮಾಡಿಕೊಂಡು ತಿರುಗಿ ಅದನ್ನು ಮನನ ಮಾಡಿಕೊಂಡರೆ ಅದು ಆಲೋಚನೆ ಆಗುತ್ತದೆ. ಊಹೆ ಮೊದಲು ಮನಸ್ಸಿನಿಂದ ಹುಟ್ಟುವುದಿಲ್ಲ. ಊಹೆ ಹೃದಯದಿಂದಲೇ ಹುಟ್ಟುತ್ತಿದೆ. ಹೃದಯ ಎಂದರೆ

ಬಹಳ ಜನ ಮನುಷ್ಯನಲ್ಲಿನ ಗುಂಡಿಗೆ ಅಂದುಕೊಳ್ಳುವುದು ಸಹ ನಡೆಯುತ್ತಿದೆ. ಹೃದಯ ಎಂದರೆ ಗುಂಡಿಗೆ ಅಲ್ಲ. ಹೃದಯ ಎಂದರೆ ಮನುಷ್ಯ ಶರೀರದಲ್ಲಿರುವ ಬೆನ್ನೆಲುಬುನಲ್ಲಿರುವ ಬ್ರಹ್ಮನಾಡಿ ಎಂದು ನಾವು ಅನೇಕ ಸಲ ಹೇಳಿದ್ದೇವೆ, ಈಗಲೂ ಸಹ ಹೃದಯ ಎಂದರೆ ಬ್ರಹ್ಮನಾಡಿ ಎಂದೇ ಹೇಳುತ್ತಿದ್ದೇವೆ. ಬದುಕಿರುವ ಮನುಷ್ಯನಲ್ಲಿರುವ ಬ್ರಹ್ಮನಾಡಿಯಲ್ಲಿ ಆತ್ಮ ಇದೆ. ಆತ್ಮನಿಂದಲೇ ಜ್ಞಾನ, ಊಹೆ ಉಂಟಾಗುತ್ತಿವೆ. ಈ ವಿವರವನ್ನೇ ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗವೆನ್ನುವ ಅಧ್ಯಾಯದಲ್ಲಿ ಹದಿನೈದನೆ ಶ್ಲೋಕದಲ್ಲಿ **"ಸರ್ವಸ್ಯಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜಾನ ಮಪೋಹನಂಚ"** ಎಂದಿದ್ದಾನೆ. ಸ್ಮೃತಿ ಬೇರೆ, ಜ್ಞಾನ ಬೇರೆ, ಊಹೆ ಬೇರೆ ಎಂದು ತಿಳಿದಿದೆ, ಇವುಗಳಲ್ಲಿ ಮೂರನೆಯದಾದ ಊಹೆ ಎನ್ನುವ ಪದ ಒಂದು ವಿಶಿಷ್ಟವಾದದ್ದು. ಯಾರಿಗು ತಿಳಿಯದ್ದನ್ನು ಆತ್ಮ ಊಹೆ ಯಿಂದ ತಿಳಿಸುತ್ತಿದೆ. ಸ್ಮೃತಿ ಎಲ್ಲರಿಗು ಉಂಟಾಗುತ್ತಿದೆ, ಜ್ಞಾನ ಕೆಲವರಿಗೇ ಉಂಟಾಗುತ್ತದೆ. ಊಹೆ ಅಪುರೂಪವಾಗಿ ಯಾರ ಒಬ್ಬರಲ್ಲೋ ಉಂಟಾಗುತ್ತಿದೆ. ಊಹೆ ಒಂದು ಬಾರಿ ಹುಟ್ಟಿ ಹೋಗುತ್ತದೆ. ಅದನ್ನು ಮನಸ್ಸು ಬಚ್ಚಿಟ್ಟುಕೊಂಡರೆ ತಿರುಗಿ ಯೋಚನೆ ಆಗುತ್ತದೆ. ಈ ದಿನ ಮಾನವನು ಹೊಸದಾಗಿ ಸಾಧಿಸಿದ ರೇಡಿಯೋ, ಟೀವಿ, ಕೆಮೆರಾ, ಕಂಪ್ಯೂಟರ್ ಮೊದಲಾದವು. ಎಲ್ಲಿಯೂ ಇಲ್ಲದಿರುವವು ಮಾನವನ ಊಹೆಗೆ ಮೊದಲು ಆತ್ಮನಿಂದ ತಿಳಿಯಲ್ಪಟ್ಟಿವೆ. ಊಹೆ ಎನ್ನುವ ಪದವನ್ನು ಬಾಯಿಂದ ಶಬ್ದವಿಲ್ಲದೆ ಉಚ್ಚರಿಸಿ ನೋಡಿರಿ. "ಊ" ಎಂದಾಗ ಹೊರಗಿರುವ ಗಾಳಿ ಒಳಗೆ ಬಂದು "ಹ" ಎಂದಾಗ ಹೊರಗೆ ಹೋಗುವಂತೆ ತಿಳಿಯುತ್ತಿದೆ. ಕಾಣಿಸದ ಗಾಳಿ ಬಾಯೊಳಗೆ ಬಂದು ಹೊರಗೆ ಹೋಗುವಹಾಗೆ, ಯಾರಿಗು ತಿಳಿಯದ ರಹಸ್ಯ ಒಂದುಬಾರಿ ಮಾನವನ ಹೃದಿಯೊಳಗೆ ಬಂದು ಹೋಗುತ್ತಿದೆ. ಆತ್ಮ ತಿಳಿಸಿದ ಊಹೆಯಿಂದಲೇ ಮನುಷ್ಯ ಪರಿಶೋಧಕನಾಗುತ್ತಿದ್ದಾನೆ. ಈ ದಿನ ಸೈನ್ಸು ಅಭಿವೃದ್ಧಿ ಆಗುವುದಕ್ಕೆ ಶರೀರದಲ್ಲಿನ ಆತ್ಮ ತಿಳಿಸಿದ ಊಹೆಯೇ ಕಾರಣ. ಮನುಷ್ಯ ಕಂಡುಹಿಡಿಯುವ ಹೊಸ ಸಿದ್ಧಾಂತವಾಗಲಿ, ಹೊಸ ಪ್ರಯೋಗವಾಗಲಿ, ಹೊಸ ಪರಿಕರವಾಗಲಿ ಹೃದಯದಿಂದ ಆತ್ಮ ಪ್ರೇರಣೆಯಿಂದ ಬಂದಿರುವವೆಂದು ತಿಳಿಯಬೇಕು. ಊಹೆಗೆ ಮನುಷ್ಯ ಕಾರಣವಲ್ಲ, ಮನುಷ್ಯನೊಳಗಿರುವ ಆತ್ಮ ಕಾರಣವೆಂದೇ ತಿಳಿಯಬೇಕು. ಊಹೆ ಎಂದರೆ ಶೂನ್ಯದಿಂದ ಬರುವ ರಹಸ್ಯವೆಂದು ತಿಳಿಯುವಹಾಗೆ "ಊ" ಎನ್ನುವುದರಲ್ಲಿ ಶೂನ್ಯದಲ್ಲಿನ ಗಾಳಿ ಬರುತ್ತಿದೆ. "ಹ" ಎನ್ನುವುದರಲ್ಲಿ ಒಳಗಿನ ಗಾಳಿ ಹೊರಗೆ ಹೋಗುತ್ತಿದೆ. ಇದನ್ನನುಸರಿಸಿ ಊಹೆ ಬೇರೆಯೆಂದು, ಆಲೋಚನೆ ಬೇರೆಯೆಂದು ತಿಳಿಯುತ್ತಿದೆ. ಊಹೆಯನ್ನು ಆತ್ಮ ತಿಳಿಸಿದಾಗ ಆಲೋಚನೆಯನ್ನು ಮನಸ್ಸು ತಿಳಿಸುತ್ತಿದೆಯೆಂದು ಗ್ರಹಿಸಬೇಕು.

**983. (3) ಭ್ರಮೆ ಎಂದರೆ ಏನು?**

ಉ. ತಿರುಗಿ ಬರುವುದು.

**ವಿವರ :** ಭ್ರಮರ ಎಂದರೆ ತಿರುಗುವುದು. ಭ್ರಮ ಎಂದರೆ ತಿರಿಗಿ ಬರುವುದೆಂದು ಅರ್ಥ. ರೆಕ್ಕೆಗಳಿರುವ ಹುಳ ಆಗಲಿ, ಪಕ್ಷಿ ಆಗಲಿ ತನ್ನ ಗೂಡನ್ನು ಬಿಟ್ಟು ಹೋಗಿ ತಿರುಗಿ ಸಾಯಂಕಾಲಕ್ಕೆ ತನ್ನ ಗೂಡು ಹತ್ತಿರಕ್ಕೆ ಸೇರುತ್ತಿದೆ. ಹಾಗೆ ತಿರುಗಿ ಸೇರುವುದನ್ನು ಅನುಸರಿಸಿ ಅವುಗಳನ್ನು ಭ್ರಮರಗಳು ಎನ್ನುತ್ತಿದ್ದೇವೆ. ನಮ್ಮ ಶರೀರದಲ್ಲಿ ಮನಸ್ಸು ಎನ್ನುವ ಗೂಡಲ್ಲಿರುವ ವಿಷಯ ಮನಸ್ಸಲ್ಲಿ ಇಲ್ಲದಂತೆ ಹೋಗಿ, ತಿರುಗಿ ಒಂದು ಸಮಯಕ್ಕೆ ಮನಸ್ಸಿನೊಳಗೆ ಬರುತ್ತಿದೆ. ಹಾಗೆ ಬರುವ ವಿಷಯವನ್ನು ಭ್ರಮೆ ಎನ್ನುತ್ತಿದ್ದೇವೆ. ಒಬ್ಬನ ಆಲೋಚನೆಯನ್ನು ಮತ್ತೊಬ್ಬನು ಖಂಡಿಸುವಾಗ ಅದು ನಿನ್ನ ಭ್ರಮೆ ಎಂದು ಹೇಳುತ್ತಿದ್ದಾನೆ. ಅಂದರೆ ಅದು ನಿನ್ನ ಯೋಚನೆ ನನ್ನ ಯೋಚನೆ ಹಾಗಲ್ಲವೆಂದು ಅರ್ಥ. ಪರಿಭ್ರಮಿಸುವುದು ಎಂದರೆ ಸುತ್ತಲೂ ತಿರುಗುವುದೆಂದು ಅರ್ಥ. ನಮ್ಮ ಸುತ್ತಾ ಎಷ್ಟೋ ವಿಷಯಗಳು ಪರಿಭ್ರಮಿಸುತ್ತಿವೆ. ಅದರಲ್ಲಿ ಒಂದು ಸಮಯದಲ್ಲಿ ಒಂದು ಮಾತ್ರ ಮನಸ್ಸನ್ನು ಸೇರುತ್ತಿರುತ್ತದೆ. ಹಾಗೆ ಸೇರಿದ ಒಂದು ವಿಷಯ ಮನಸ್ಸನ್ನು ಬಿಟ್ಟು ಹೋದ ನಂತರ ಮತ್ತೊಂದು ವಿಷಯ ಮನಸ್ಸನ್ನು ಸೇರುತ್ತಿರುತ್ತದೆ. ಇದನ್ನನುಸರಿಸಿ ಮನಸ್ಸು ಎನ್ನುವ ಗೂಡು ಒಂದೇ ಅದರಲ್ಲಿ ಸೇರುವ ವಿಷಯಗಳು ಎನ್ನುವ ಭ್ರಮರಗಳು ಎಷ್ಟೋ ಸಾವಿರ. ಯಾವುದು ಮನೋಗೂಡಲ್ಲಿ ಶಾಶ್ವತವಾಗಿ ಇರುವುದಿಲ್ಲ. ವಿಷಯ ಭ್ರಮೆಗಳು ಆಗಾಗ ತಿರುಗಿ ಬರುತ್ತಿರುತ್ತವೆ. ಇದನ್ನನುಸರಿಸಿ ಭ್ರಮೆ ಎನ್ನುವುದು ಒಂದು ವಿಷಯ ಮಾತ್ರವೇ. ಆದ್ದರಿಂದ ವಿಷಯ ಭ್ರಮೆಗಳಲ್ಲಿ ಬೀಳಬೇಡವೆಂದು ಹಿರಿಯರೆಂದಿದ್ದಾರೆ. ಅದರ ಅರ್ಥ ವಿಷಯಗಳಲ್ಲಿ ಸಿಲುಕಿಕೊಳ್ಳಬೇಡವೆಂದು ತಿಳಿಯಬೇಕು.

**984. (4) ಮನುಷ್ಯ ಜೀವನದ ಮೇಲೆ ಕೆಲಸ ಮಾಡುವ ಗ್ರಹಗಳು ಎಷ್ಟು?**

ಉ. 12 ಗ್ರಹಗಳು.

**ವಿವರ :** ಮನುಷ್ಯ ಜೀವನದ ಮೇಲೆ ಕೆಲಸಮಾಡುವ ಗ್ರಹಗಳು ಒಂಬತ್ತು ಎಂದು ಕೇಳಿದ್ದೇವೆ. ಆದರೆ ಅದು ಸರಿಯಾದ ಉತ್ತರವಲ್ಲ. ವಾಸ್ತವವಾಗಿ ಹನ್ನೆರಡು ಗ್ರಹಗಳು ಕೆಲಸಮಾಡುತ್ತಿವೆ. ಅಕಾಲ ಮರಣ ಹೊಂದಿದ ನಂತರ ಮತ್ತು ಸ್ವಪ್ನಾವಸ್ಥೆಯಲ್ಲು ಯಾರಿಗು ತಿಳಿಯದ ಮೂರು ಗ್ರಹಗಳ ಪಾತ್ರ ಬಹಳ ಇದೆ. ಮನುಷ್ಯ ಬದುಕಿರುವಾಗ ಜಾಗ್ರತ್ತಾವಸ್ಥೆ ಮೇಲೆ ಕೆಲಸ ಮಾಡುವ ಒಂಬತ್ತು ಗ್ರಹಗಳನ್ನು ಮಾತ್ರ ಎಲ್ಲರು

ಹೇಳಿಕೊಳ್ಳುವುದು ನಡೆಯುತ್ತಿದೆ. ಜೀವನದ ಮೇಲೆ ಉಳಿದ ಮೂರು ಗ್ರಹಗಳು ಕೆಲಸ ಮಾಡುವ ವಿವರ ತಿಳಿಯದೆ ಹೋಗಿರುವುದರಿಂದ ಜ್ಯೋತಿಷ್ಯ ಶಾಸ್ತ್ರ ಪರಿಶೋಧನೆ ಮುಂದಕ್ಕೆ ಸಾಗಲಿಲ್ಲವೆಂದು ಹೇಳಬಹುದು.

**985. (5) ಮನುಷ್ಯ ಜೀವನದಲ್ಲಿ ಇರುವ ರಾಶಿಗಳೆಷ್ಟು?**

ಉ. 12 ರಾಶಿಗಳು.

**ವಿವರ :** ಮನುಷ್ಯ ಜೀವನಕ್ಕೆ ಸಂಬಂಧಿಸಿರುವವು ಮೊದಲಿನಿಂದ ಹೇಳುತ್ತಿರುವ ಹನ್ನೆರಡು ರಾಶಿಗಳೇ ಎಂದು ಹೇಳಬಹುದು. ಹನ್ನೆರಡು ರಾಶಿಗಳಿಗು ಹನ್ನೆರಡು ಗ್ರಹಗಳು ಅಧಿಪತಿಗಳಾಗಿ ಇವೆ. ಹನ್ನೆರಡು ಗ್ರಹಗಳನ್ನು ಅನುಸರಿಸಿ ಹನ್ನೆರಡು ರಾಶಿಗಳು ಏರ್ಪಟ್ಟಿವೆ.

**986. (6) ಗ್ರಹಗಳು ಎಷ್ಟು ಗುಂಪುಗಳಾಗಿವೆ? ಒಂದೊಂದು ಗುಂಪಿನಲ್ಲಿ ಎಷ್ಟು ಗ್ರಹಗಳು ಇವೆ?**

ಉ. ಎರಡು ಗುಂಪುಗಳಾಗಿ ಇವೆ. ಒಂದೊಂದು ಗುಂಪಿನಲ್ಲಿ ಆರು ಗ್ರಹಗಳಿವೆ.

**ವಿವರ :** ಗ್ರಹಗಳು ಶನಿ ಗುಂಪು, ಗುರು ಗುಂಪು ಎಂದು ಎರಡು ಗುಂಪುಗಳು ಇವೆ. ಶನಿ ಗುಂಪಲ್ಲಿ ಆರು ಗ್ರಹಗಳು, ಗುರು ಗುಂಪಲ್ಲಿ ಆರು ಗ್ರಹಗಳು ಇವೆ. ಒಬ್ಬ ಮನುಷ್ಯನಿಗೆ ಯಾವುದೋ ಒಂದು ಗುಂಪು ಗ್ರಹಗಳು ಅನುಕೂಲವಾಗಿ ಇರುತ್ತವೆ. ಮತ್ತೊಂದು ವಿಧದ ಗುಂಪು ಗ್ರಹಗಳು ಪ್ರತಿಕೂಲವಾಗಿ ಇರುತ್ತವೆ. ಅನುಕೂಲ ಪ್ರತಿಕೂಲಗಳನ್ನು ಅನುಸರಿಸಿ ಗ್ರಹಗಳನ್ನು ಎರಡು ವಿಧಗಳಾಗಿ ವಿಭಜಿಸುತ್ತಿದ್ದೇವೆ.

**987. (7) ಗ್ರಹಗಳು ಎಷ್ಟು ವಿಧಗಳಾಗಿ ಇವೆ?**

ಉ. ಮೂರು ವಿಧಗಳಾಗಿ.

**ವಿವರ :** ಸ್ಥೂಲ ಗ್ರಹಗಳು, ಛಾಯಾಗ್ರಹಗಳು, ಸೂಕ್ಷ್ಮಗ್ರಹಗಳೆಂದು ಗ್ರಹಗಳು ಮೂರು ವಿಧಗಳಾಗಿ ಇವೆ. ಗ್ರಹಗಳು ಸ್ಥೂಲ, ಸೂಕ್ಷ್ಮಗಳು ಅಲ್ಲದಿದ್ದರೂ ಅವನ್ನು ಹಾಗೆ ವಿಭಜಿಸಬೇಕಾಗಿ ಬಂದಿದೆ. ಗ್ರಹಗಳು ಹನ್ನೆರಡೆಂದು, ಅವು ಮೂರು ವಿಧಗಳಾಗಿ ಇವೆಯೆಂದು ತಿಳಿಯದೆ ಹೋಗಿರುವುದರಿಂದ, ಜ್ಯೋತಿಷ್ಯ ಶಾಸ್ತ್ರ ಪೂರ್ತಿ ಪರಿಶೋಧನೆಯಲ್ಲಿ ಇಲ್ಲದೆ ಹೋಗುವುದರಿಂದ, ಜ್ಯೋತಿಷ್ಯವನ್ನು ಶಾಸ್ತ್ರವೇ ಅಲ್ಲವೆಂದು ಕೆಲವರು ವಾದಿಸುತ್ತಿದ್ದಾರೆ. ಸರಿಯಾದ ಪರಿಶೋಧನೆ ನಡೆದರೆ ಜ್ಯೋತಿಷ್ಯ ಶಾಸ್ತ್ರವೆಂದು ಎಲ್ಲರಿಗೂ ತಿಳಿಯಬಲ್ಲದು.

**988. (8) ಮೂಢತ್ವಕ್ಕು, ಮೂರ್ಖತ್ವಕ್ಕೂ ವ್ಯತ್ಯಾಸವಿದೆಯಾ?**

ಉ. ಇದೆ.

**ವಿವರ :** ದೈವಜ್ಞಾನ ತಿಳಿಯದೆ ಇರುವಾಗ ಮೂಢತ್ವವಾಗುತ್ತದೆ. ಪ್ರಪಂಚಜ್ಞಾನ ತಿಳಿಯದಿರುವಾಗ ಮೂರ್ಖತ್ವವಾಗುತ್ತದೆ. ಪರಮಾತ್ಮ ಜ್ಞಾನಕ್ಕೂ, ಪ್ರಪಂಚ ಜ್ಞಾನಕ್ಕೂ ಎಷ್ಟು ವ್ಯತ್ಯಾಸವಿದೆಯೋ ಅಷ್ಟೇ ವ್ಯತ್ಯಾಸ ಮೂಢತ್ವಕ್ಕೂ, ಮೂರ್ಖತ್ವಕ್ಕೂ ಇದೆ. ಪ್ರಪಂಚದಲ್ಲಿ ಮೂರ್ಖರು ಸ್ವಲ್ಪ ಮಂದಿ, ಮೂಢರು ಬಹಳ ಮಂದಿ ಇದ್ದಾರೆ.

**989. (9) ಪ್ರಕೃತಿಗು, ಆಕೃತಿಗೂ ವ್ಯತ್ಯಾಸವಿದೆಯಾ?**

ಉ. ಸ್ವಲ್ಪ ವ್ಯತ್ಯಾಸವಿದೆ.

**ವಿವರ :** ಕೃತಿ ಎಂದರೆ ಮಾಡಿರುವುದು ಅಥವಾ ಬರೆದಿರುವುದು ಎಂದು ಅರ್ಥ. ಪ್ರಕೃತಿ ಎನ್ನುವುದು ಆಕೃತಿ ಎನ್ನುವುದು ಎರಡು ಮಾಡಿರುವವೇ. ದೇವರಿಂದ ಮಾಡಿರುವುದು ಪ್ರಕೃತಿ, ಪ್ರಕೃತಿಯಿಂದ ಮಾಡಿರುವುದು ಆಕೃತಿ. ಪ್ರಕೃತಿ ಚಿರ ಕಾಲವಿರುವುದು, ಆಕೃತಿ ಸ್ವಲ್ಪಕಾಲವಿರುವುದು. "ಪ್ರ" ಎನ್ನುವ ಅಕ್ಷರ ವಿಶೇಷಾರ್ಥ ಇರುವುದು. "ಬೋಧ" ಎಂದರೆ ತಿಳಿಸುವುದೆಂದು ಅರ್ಥ. ಬೋಧ ಎನ್ನುವ ಎರಡಕ್ಷರಗಳ ಮುಂದೆ ಪ್ರ ಎನ್ನುವ ಅಕ್ಷರವನ್ನಿಡುವುದರಿಂದ ವಿಶಿಷ್ಟವಾದ ಬೋಧ ಎಂದೂ, ಸಾರಾಂಶವಿರುವ ಬೋಧ ಎಂದು ತಿಳಿಯುತ್ತಿದೆ. ಹಾಗೇ ಕೃತಿ ಎನ್ನುವ ಪದ ಪ್ರ ಎನ್ನುವ ಅಕ್ಷರವನ್ನು ಸೇರಿಸುವುದರಿಂದ ಪ್ರಕೃತಿ ಎಂದು ವಿಶೇಷಾರ್ಥವಿರುವ ಪದ ತಯಾರಾಗಿದೆ. ಇಂತಹದ್ದೇ ಪ್ರಪಂಚ ಎನ್ನುವ ಪದವನ್ನು, ಪಂಚಭೂತಗಳಿಗೆ "ಪ್ರ" ಎನ್ನುವ ಅಕ್ಷರ ಸೇರಿಸುವುದರಿಂದ ಪಂಚಭೂತಗಳು ಪ್ರತ್ಯೇಕವಾದವೆಂದು ತಿಳಿಯುತ್ತಿದೆ. ಪ್ರಕೃತಿ ಶಾಶ್ವತವಾದಾಗ ಆಕೃತಿ ಅಶಾಶ್ವತವಾದದ್ದು. ಪ್ರಕೃತಿ ಯಿಂದ ತಯಾರಾದ ಆಕೃತಿ ಸ್ವಲ್ಪಕಾಲವಿರುವುದೇ. ಪ್ರಕೃತಿ ಎಂದರೆ ಪಂಚಭೂತಗಳು. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದು ಸೇರಿ ಪ್ರಕೃತಿ ಎನ್ನಲಾಗುತ್ತಿದೆ. ಈ ಐದು ಅಲ್ಲದೆ ಉಳಿದ ಯಾವಾದರೂ ಆಕೃತಿಗೆ ಸಂಬಂಧಿಸಿರುವವೇ. ಗಿಡ ಮರಗಳು, ಹಸಿರಾದ ಬಯಲು ಪ್ರಕೃತಿ ಸೌಂದರ್ಯ ಎನ್ನುತ್ತಾರೆ ಕೆಲವರು. ವಾಸ್ತವಕ್ಕೆ ಅವು ಪ್ರಕೃತಿ ಅಲ್ಲ ಆಕೃತಿ ಮಾತ್ರ. ಕಾಣಿಸುವ ಆಕೃತಿ ಶಾಶ್ವತವಾಗಿ ಇರುವುದಿಲ್ಲ. ಮಾನವರು ಜಂತುಗಳು ಆಕೃತಿಯನ್ನು ಹೊಂದಿವೆ. ಇವೆಲ್ಲವೂ ಶಾಶ್ವತವಲ್ಲ. ಆದ್ದರಿಂದ ಅಶಾಶ್ವತವಾದದ್ದು ಆಕೃತಿ ಎಂದೂ, ಶಾಶ್ವತವಾದದ್ದು ಪ್ರಕೃತಿ ಎಂದು ಹೇಳಲಾಗುತ್ತಿದೆ.

**990. (10) ಶರೀರದಲ್ಲಿ ಪ್ರಪಂಚ ಜ್ಞಾನವನ್ನು ಯಾವುದರೊಂದಿಗೆ ಹೋಲಿಸುತ್ತೇವೆ? ಪರಮಾತ್ಮ ಜ್ಞಾನವನ್ನು ಯಾವುದರೊಂದಿಗೆ ಹೋಲಿಸುತ್ತೇವೆ?**

**ಉ.** ಪ್ರಪಂಚ ಜ್ಞಾನವನ್ನು ಹಸ್ತದಲ್ಲಿನ ಐದು ಬೆರಳುಗಳೊಂದಿಗೆ, ಪರಮಾತ್ಮ ಜ್ಞಾನವನ್ನು ಉಗುರಿನ ಕೆಳಗೆ ಬಿಳಿ ಭಾಗದೊಂದಿಗೆ ಹೋಲಿಸುತ್ತೇವೆ.

**ವಿವರ :** ಹಸ್ತದಲ್ಲಿನ ಐದು ಬೆರಳುಗಳನ್ನು ಪ್ರಪಂಚ ಜ್ಞಾನವಾಗಿ ಲೆಕ್ಕಿಸಿ, ಬೆರಳುಗಳಿಗಿರುವ ಮೂರು ಗಣ್ಣು ಭಾಗಗಳನ್ನು ಮೂರು ಗುಣಗಳಾಗಿ ಲೆಕ್ಕಿಸುತ್ತಿದ್ದೇವೆ. ಐದು ಬೆರಳುಗಳನ್ನು ಐದು ಪ್ರಪಂಚ ಜ್ಞಾನೇಂದ್ರಿಯಗಳಾಗಿ ಲೆಕ್ಕಿಸುತ್ತಿದ್ದೇವೆ. ಐದು ಬೆರಳುಗಳಿಗು ಮೂರು ಭಾಗಗಳು ಇವೆ, ಆದ್ದರಿಂದ ಪ್ರಪಂಚಜ್ಞಾನ ಮೂರು ಗುಣಗಳಾಗಿ ವಿಭಜಿಸಲ್ಪಟ್ಟಿದೆಯೆಂದು ಹೇಳಿಕೊಳ್ಳುತ್ತಿದ್ದೇವೆ. ಬೆರಳಿನ ಕೊನೆಯ ಮೇಲಿನ ಭಾಗದಲ್ಲಿ ಹಿಂದಿನ ಭಾಗದಲ್ಲಿ ಉಗುರಿನ ಮೇಲೆ ಬಿಳಿ ಅರ್ಧಚಂದ್ರಾಕಾರವನ್ನು ದೈವಜ್ಞಾನವಾಗಿ, ಕೆಂಪು ಉಗುರನ್ನು ಯೋಗವಾಗಿ, ಕೆಂಪು ಉಗುರು ಅಂಚಿನಲ್ಲಿರುವ ನೀಲಿ ಬಣ್ಣದ ಉಗುರನ್ನು ಪರಮತ್ಮನಾಗಿ ಅಥವಾ ಮೋಕ್ಷವಾಗಿ ಹೇಳಿಕೊಳ್ಳುತ್ತಿದ್ದೇವೆ. ಇದನ್ನನುಸರಿಸಿ ಶರೀರದಲ್ಲಿನ ಹಸ್ತದಲ್ಲಿ ಪ್ರಪಂಚ ಜ್ಞಾನ ಪರಮಾತ್ಮ ಜ್ಞಾನ ಒಳಗೊಂಡಿವೆಯೆಂದು ತಿಳಿಯುತ್ತಿದೆ.

## ಜ್ಞಾನ ಪರೀಕ್ಷೆ

**ಚಿನ್ನಪೊಡಮಲ** **ದಿನಾಂಕ–18–09–2006**

**991. (1) ಪಾಪಕ್ಕು ಪುಣ್ಯಕ್ಕು ಮಧ್ಯೆದಲ್ಲಿ ಏನಿದೆ?**

ಉ. ಜ್ಞಾನಾಗ್ನಿ ಅಥವಾ ಯೋಗ.

**ವಿವರ :** ಮನುಷ್ಯ ಯಾವ ಕೆಲಸ ಮಾಡಿದರೂ ಅದರಲ್ಲಿ ಪಾಪವಾಗಲಿ, ಪುಣ್ಯವಾಗಲಿ ಇರುತ್ತದೆ. ಮನುಷ್ಯ ಕೆಲಸ ಮಾಡುತ್ತಿದ್ದರೂ ಪಾಪವಾಗಲಿ, ಪುಣ್ಯವಾಗಲಿ ಎರಡು ಅಂಟದ ವಿಧಾನವು ಸಹ ಇದೆ. ಆ ವಿಧಾನವನ್ನು ಯೋಗ ಎನ್ನುತ್ತೇವೆ. ಯೋಗದಲ್ಲಿ ಪಾಪಪುಣ್ಯಗಳನ್ನು ಸುಡುವ ಜ್ಞಾನಾಗ್ನಿ ಇದೆ. ಇತ್ತ ಪಾಪಕ್ಕು ಅತ್ತ ಪುಣ್ಯಕ್ಕು ಮಧ್ಯದಲ್ಲಿ ಜ್ಞಾನಾಗ್ನಿ (ಯೋಗ) ಇರುವುದರಿಂದ ಮನುಷ್ಯ ಯೋಗದಲ್ಲಿ ಇರುವಾಗ ಪಾಪವಾಗಲಿ, ಪುಣ್ಯವಾಗಲಿ ಸುಡುತ್ತದೆ. ಪಾಪಪುಣ್ಯಗಳನ್ನು ಕರ್ಮ ಎನ್ನುತ್ತೇವೆ. ಇತ್ತ ಪಾಪಕರ್ಮ

ವನ್ನಾಗಲಿ ಅತ್ತ ಪುಣ್ಯಕರ್ಮವನ್ನಾಗಲಿ ಇಲ್ಲದೆ ಮಾಡುವ ಯೋಗವೊಂದರ ವಿಧಾನ ಒಳ್ಳೆ ಕೆಟ್ಟ ಕರ್ಮಗಳಿಗೆ ಮಧ್ಯೆದಲ್ಲಿ ಇದೆಯೆಂದು ಹೇಳಬಹುದು.

**992. (2) ನೀತಿ, ನ್ಯಾಯಕ್ಕೆ ಮಧ್ಯೆದಲ್ಲಿ ಏನು ಇದೆ?**

ಉ. ಕಾರ್ಯಾಚರಣೆ ಇದೆ.

**ವಿವರ :** ಪ್ರಪಂಚದಲ್ಲಿ ಮನುಷ್ಯ ನಡೆದುಕೊಳ್ಳುವ ವಿಧಾನವನ್ನು ತಿಳಿಸುವುದು ನೀತಿ. ತಿಳಿದುಕೊಂಡ ವಿಧಾನವನ್ನು ಆಚರಿಸಿದಾಗ ನ್ಯಾಯವಾಗುತ್ತದೆ. ತಿಳಿದುಕೊಂಡ ನೀತಿ ನಂತರ ಆಚರಣೆ, ಆಚರಣೆ ನಂತರ ನ್ಯಾಯ ಇದೆಯೆಂದು ತಿಳಿಯುತ್ತಿದೆ. ಇದರ ಪ್ರಕಾರ ಪ್ರಪಂಚದಲ್ಲಿ ಎಂತಹ ನೀತಿಯಾದರು ಆಚರಣ ಇಲ್ಲದೆ ನ್ಯಾಯವಲ್ಲ. ಆದ್ದರಿಂದ ನೀತಿಗು ನ್ಯಾಯಕ್ಕು ಮಧ್ಯದಲ್ಲಿ ಆಚರಣೆ ಇದೆಯಂದು ಹೇಳಬಹುದು.

**993. (3) ಜ್ಞಾನಕ್ಕು, ಧರ್ಮಕ್ಕು ಮಧ್ಯೆದಲ್ಲಿ ಏನು ಇದೆ?**

ಉ. ಯೋಗಸಾಧನೆ.

**ವಿವರ :** ಪರಮಾತ್ಮ ವಿಧಾನಗಳನ್ನು ತಿಳಿಸುವುದು ಜ್ಞಾನ. ಜ್ಞಾನ ತಿಳಿದುಕೊಂಡ ನಂತರ ಅದರ ಪ್ರಕಾರ ಆಚರಿಸುವುದನ್ನು ಯೋಗ ಸಾಧನೆ ಎನ್ನುತ್ತೇವೆ. ಹಾಗೆ ಆಚರಿಸುವುದನ್ನು ಧರ್ಮ ಎನ್ನುತ್ತೇವೆ. ಮನುಷ್ಯನಿಗೆ ಮೊದಲು ಜ್ಞಾನ ನಂತರ ಯೋಗಸಾಧನೆ ಆದ ನಂತರವೇ ಧರ್ಮವಾಗುತ್ತದೆ. ಆದ್ದರಿಂದ ಜ್ಞಾನಕ್ಕು ಧರ್ಮಕ್ಕು ಮಧ್ಯದಲ್ಲಿ ಸಾಧನೆ ಇದೆಯೆಂದು ಹೇಳಬಹುದು.

**994. (4) ನಿನಗೂ, ನೀರಿಗೂ ಮಧ್ಯದಲ್ಲಿ ಏನು ಇದೆ?**

ಉ. ಪ್ರಕೃತಿ, ಆತ್ಮ ಎರಡು ಇವೆ.

**ವಿವರ :** ನಿನ್ನಲ್ಲೂ, ನೀರಿನಲ್ಲೂ ಪರಮಾತ್ಮವೇ ಇದೆ. ಆದ್ದರಿಂದ ಮಧ್ಯದಲ್ಲಿ ಪರಮಾತ್ಮ ಇದೆಯೆನ್ನುವ ಉತ್ತರ ಸರಿಯಲ್ಲ. ಏಕೆಂದರೆ ಮಧ್ಯದಲ್ಲೇ ಅಲ್ಲದೆ ಆದಿಯಲ್ಲೂ ಅಂತ್ಯದಲ್ಲೂ ಇರುವುದನ್ನು ಮಧ್ಯದಲ್ಲಿ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ನಿನ್ನ ನಂತರ ನೀರಿನ ವರೆಗು ಪ್ರಕೃತಿ, ಆತ್ಮ ಇವೆಯೆಂದು ಹೇಳಬಹುದು. ಏಕೆಂದರೆ ಶರೀರದಲ್ಲಿರುವ ನಿನ್ನ ನಂತರ ಆತ್ಮ ವ್ಯಾಪಿಸಿದೆ. ಆತ್ಮ ನಂತರ ನೀರಿನ ವರೆಗು ಪ್ರಕೃತಿ ವ್ಯಾಪಿಸಿದೆ. ನೀರು ಸಹ ಪ್ರಕೃತಿಯೇ ಆದರೂ ಪ್ರಕೃತಿಯಲ್ಲಿ ಇನ್ನು ನಾಲ್ಕು ವಸ್ತುಗಳಿರುವುದರಿಂದ ಅವನ್ನು ಸಹ

ಪ್ರಕೃತಿಯೇ ಎನ್ನಬೇಕಾಗಿ ಬಂದಿದೆ. ಆದ್ದರಿಂದ ನೀರನ್ನು ಹೊರತು ಇರುವ ಪ್ರಕೃತಿ ಎಂದು ಅರ್ಥಮಾಡಿಕೊಳ್ಳಬೇಕು. ಆದ್ದರಿಂದ ಈ ಪ್ರಶ್ನೆಗೆ ಸರಿಯಾದ ಉತ್ತರವಾಗಿ ಪ್ರಕೃತಿ, ಆತ್ಮ ಎಂದು ಹೇಳಬಹುದು.

**995. (5) ಯೋಗಗಳಲ್ಲಿ ಬ್ರಹ್ಮಯೋಗಕ್ಕು ಕರ್ಮಯೋಗಕ್ಕೂ ಮಧ್ಯದಲ್ಲಿ ಏನು ಇದೆ?**

ಉ. ಭಕ್ತಿ ಯೋಗ.

**ವಿವರ :** ಪ್ರಪಂಚದಲ್ಲಿ ಯೋಗಗಳು ಮೂರೇ ಇವೆ. ಮೂರು ಯೋಗಗಳಲ್ಲಿ ಎರಡು ಯೋಗಗಳ ಹೆಸರುಗಳು ಹೇಳಿ ಅವುಗಳ ಮಧ್ಯದಲ್ಲಿ ಏನಿದೆ ಎಂದಾಗ ಹೆಸರು ಹೇಳದ ಮೂರನೆ ಯೋಗವೆಂದು ಸುಲಭವಾಗಿ ಹೇಳಬಹುದು. ಅದೇ ಗೀತೆಯಲ್ಲಿ ಹೇಳಿದ ಭಕ್ತಿಯೋಗ. ಬ್ರಹ್ಮ ಕರ್ಮ ಯೋಗಗಳಲ್ಲಿ ಇಲ್ಲದ ಯೋಗಿ ಭಕ್ತಿಯೋಗಿ ಎಂದು, ಕರ್ಮಯೋಗ ಬ್ರಹ್ಮಯೋಗವಲ್ಲದ ಯೋಗ ಭಕ್ತಿಯೋಗವೆಂದು ಹೇಳಬಹುದು.

**996. (6) ಜೀವಾತ್ಮನಿಗು, ಪರಮಾತ್ಮನಿಗು ಮಧ್ಯದಲ್ಲಿ ಏನು ಇದೆ?**

ಉ. ಪರಮಾತ್ಮ.

**ವಿವರ :** ಜೀವಾತ್ಮಕ್ಕೆ ಆಕಾರ, ಹದ್ದು ಇದೆ. ಪರಮಾತ್ಮನಿಗೆ ಆಕಾರವಾಗಲಿ, ಹದ್ದಾಗಲಿ ಇಲ್ಲ. ಜೀವಾತ್ಮ ಸಹ ಪರಮಾತ್ಮನಲ್ಲೇ ಇದೆ. ಆದ್ದರಿಂದ ಜೀವಾತ್ಮದ ಒಳಗೂ ಸಹ ಪರಮಾತ್ಮ ಇದೆ. ಜೀವಾತ್ಮನಿಗೆ ಹದ್ದು ಆಕಾರವಿರುವುದರಿಂದ ಜೀವಾತ್ಮನಿಗೂ ಪರಮಾತ್ಮನಿಗೂ ಮಧ್ಯದಲ್ಲಿ ಏನಿದೆಯೆಂದು ಪ್ರಶ್ನೆ ಕೇಳಬಹುದು. ಆದರೆ ಜೀವಾತ್ಮನ ಒಳಗೆ ಪರಮಾತ್ಮ, ಪರಮಾತ್ಮನ ಒಳಗೆ ಜೀವಾತ್ಮ ಇದೆ ಆದ್ದರಿಂದ ಇದಕ್ಕೆ ಸರಿಯಾದ ಉತ್ತರ ಪರಮಾತ್ಮವೇ ಇದೆಯೆಂದು ಹೇಳಬಹುದು.

**997. (7) ಸಾಧಾರಣ ಮನುಷ್ಯವೊಂದರ ಮನಸ್ಸಲ್ಲಿ ಯೋಚನೆಗು, ಆಲೋಚನೆಗು ಮಧ್ಯದಲ್ಲಿ ಏನು ಇದೆ?**

ಉ. ಏನೂ ಇಲ್ಲ.

**ವಿವರ :** ಯೋಚನೆ ಎಂದರೂ ಆಲೋಚನೆ ಎಂದರೂ ಎರಡೂ ಒಂದೇ. ಯೋಚನೆ ಯನ್ನು ಆಲೋಚನೆ ಎಂದು ಸಹ ಕರೆಯಬಹುದು. ಮನುಷ್ಯನೊಂದರ ಮನಸ್ಸಲ್ಲಿ ಒಂದು ಆಲೋಚನೆ ನಂತರ ತಕ್ಷಣವೇ ಮತ್ತೊಂದು ಆಲೋಚನೆ ಬರುತ್ತಿರುತ್ತದೆ.

ಮನುಷ್ಯ ಜಾಗ್ರತ್ತಾವಸ್ಥೆಯಲ್ಲಿ ಇರುವಷ್ಟು ಕಾಲ ಒಂದರನಂತರ ಒಂದು ವಿರಾಮವಿಲ್ಲದೆ ಯೋಚನೆಗಳು ಬರುತ್ತಿರುತ್ತವೆ. ಮನಸ್ಸು ಯಾವಾಗಲೂ ಖಾಲಿಯಾಗಿ ಇರುವುದಿಲ್ಲ. ಯಾವುದೋ ಒಂದು ಆಲೋಚನೆ ಅದರಲ್ಲಿರುತ್ತದೆ. ಒಂದು ಯೋಚನೆ ಮನಸ್ಸಿನಿಂದ ಹೋದರೆ ತಕ್ಷಣವೆ ಮತ್ತೊಂದು ಆಲೋಚನೆ ಮನಸ್ಸಲ್ಲಿ ಸೇರುತ್ತಿರುತ್ತದೆ. ಅಂತಹವನನ್ನು ಸಾಧಾರಣ ಮನುಷ್ಯ ಎನ್ನುತ್ತೇವೆ. ಯೋಚನೆಗು ಯೋಚನೆಗು ಮಧ್ಯದಲ್ಲಿ ಖಾಲಿ ಇದ್ದರೇ ಆಕಾಲವನ್ನು ಯೋಗ ಎನ್ನುತ್ತೇವೆ. ಇಲ್ಲಿ ಕೇಳಿರುವುದು ಸಾಧಾರಣ ಮನುಷ್ಯ ನೊಂದರ ಮನೋ ವಿಧಾನ, ಆದ್ದರಿಂದ ಯೋಚನೆಗು ಯೋಚನೆಗು ಮಧ್ಯದಲ್ಲಿ ಏನೂ ಇಲ್ಲ ಎನ್ನುವುದು ಸರಿಯಾದ ಉತ್ತರ.

**998. (8) ಯೋಗಿವೊಂದರ ಮನಸ್ಸಲ್ಲಿ ಯೋಚನೆಗು, ಆಲೋಚನೆಗು ಮಧ್ಯದಲ್ಲಿ ಏನು ಇದೆ?**

ಉ. ಯೋಗವಿದೆ.

**ವಿವರ :** ಇದು ಬ್ರಹ್ಮಯೋಗಿಗೆ ಸಂಬಂಧಿಸಿದ ವಿಧಾನ. ಯೋಗಿ ಯೋಗದಲ್ಲಿ ಇಲ್ಲದ ಸಮಯದಲ್ಲಿ ಯೋಚನೆಗಳು ಬರುತ್ತಿರುತ್ತವೆ. ಯೋಗಿ ಅಹರ್ನಿಶೆಗಳು ಯೋಗದಲ್ಲಿ ಇರುವುದಿಲ್ಲ. ಯೋಗಿ ಯಾವಾಗಲೋ ಒಂದು ಬಾರಿ ಯೋಗವಾಚರಿಸುವನು. ಯೋಗಿಯೊಂದರ ಯೋಗಕ್ಕೆ ಮೊದಲು ಒಂದು ಯೋಚನೆ ಇರುತ್ತದೆ. ಯೋಗದ ನಂತರ ಒಂದು ಯೊಚನೆ ಬರುತ್ತದೆ. ಬ್ರಹ್ಮಯೋಗಿವೊಂದರ ಯೋಗಕ್ಕೆ ಮೊದಲು ಹಿಂದೆ ಯೊಚನೆಗಳೇ ಇವೆ. ಆದ್ದರಿಂದ ಯೋಗಿವೊಂದರ ಮನಸ್ಸಲ್ಲಿ ಯೊಚನೆಗು, ಯೊಚನೆಗು ಮಧ್ಯದಲ್ಲಿ ಯೋಗ ಇದೆಯೆಂದು ಹೇಳಬಹುದು.

**999. (9) ಸಾಧಾರಣ ಮನುಷ್ಯನೊಂದರ ಮರಣಕ್ಕೂ, ಸಾವಿಗೂ ಮಧ್ಯದಲ್ಲಿ ಏನು ಇದೆ?**

ಉ. ಜೀವನವಿದೆ.

**ವಿವರ :** ಮನುಷ್ಯ ಮರಣಿಸಿದ ನಂತರ ಜನ್ಮ ಬರುತ್ತದೆ. ಜನ್ಮ ನಂತರ ಎಷ್ಟೋ ಸ್ವಲ್ಪ ಕಾಲಕ್ಕೆ ಮರಣ ಸಂಭವಿಸುತ್ತದೆ. ಹುಟ್ಟುವಿಕೆಯಿಂದ ಮರಣದವರೆಗು ಇರುವ ಬದುಕನ್ನೆಲ್ಲ ಜೀವಿತ (ಜೀವನ) ಎನ್ನುತ್ತೇವೆ. ಆದ್ದರಿಂದ ಮರಣಕ್ಕು, ಮರಣಕ್ಕು ಮಧ್ಯದಲ್ಲಿ ಜೀವನವಿದೆ ಎಂದು ಹೇಳಬಹುದು.

**1000. (10) ಯೋಗಿವೊಂದರ ಯೋಗಕ್ಕು, ಯೋಗಕ್ಕು ಮಧ್ಯದಲ್ಲಿ ಏನು ಇದೆ?**

ಉ. ಕಾರ್ಯ (ಯೋಚನೆ).

**ವಿವರ :** ಯೋಗಿ ಯೋಗವನ್ನು ಬಿಟ್ಟಕೂಡಲೆ ಆತನಲ್ಲಿ ಗುಣಗಳ ಯೋಚನೆಗಳು ವೇಗವಾಗಿ ಸೇರುವವು. ಯೋಚನೆಗಳು ಕರ್ಮರೀತ್ಯ ಕಾರ್ಯವನ್ನು ಮಾಡುತ್ತಿರುವವು. ಯೋಗಿ ತಿರುಗಿ ಯೋಗ ಮಾಡುವವರೆಗು ಮಧ್ಯಕಾಲದಲ್ಲಿ ಎಷ್ಟೋ ಕಾರ್ಯಗಳು ಮಾಡಬೇಕಾಗಿ ಬರುತ್ತದೆ. ಒಂದುವೇಳೆ ಕಾರ್ಯ ಮಾಡದಿದ್ದರು ಯೋಚನೆಗಳಾದರೂ ಮಾಡಬೇಕಾಗಿಬರುತ್ತದೆ. ಹೊರಗೆ ಕಾರ್ಯಗಳನ್ನು ಮಾಡದಿದ್ದರು, ಮನಸ್ಸಲ್ಲಿ ಮನೋ ಕಾರ್ಯಗಳಾದ ಯೋಚನೆಗಳನ್ನಾದರೂ ಮಾಡಬೇಕಾಗುತ್ತದೆ. ಹೊರಗಿನ ಕಾರ್ಯಗಳು ಮಾಡದಿದ್ದರೂ ಮನಸ್ಸು ಮನೋ ಕಾರ್ಯಗಳಾದ ಯೋಚನೆಯಾದರು ಮಾಡುವುದರಿಂದ ಆತನು ಕಾರ್ಯ ಮಾಡಿದ್ದಕ್ಕೆ ಸಮಾನವೇ ಆಗುತ್ತದೆ. ಆದ್ದರಿಂದ ಯೋಗಿವೊಂದರ ಯೋಗಕ್ಕು, ಯೋಗಕ್ಕೂ ಮಧ್ಯದಲ್ಲಿ ಕಾರ್ಯ ಇದೆಯೆಂದು ಹೇಳಬಹುದು.

## ಜ್ಞಾನ ಪರೀಕ್ಷೆ

**ಚಿನ್ನಪೊಡಮಲ** **ದಿನಾಂಕ–25–09–2006**

**1001. (1) ನಿನ್ನ ಶರೀರಗೃಹದಲ್ಲಿ ಕರ್ಮಾಚರಣೆ ಇಲ್ಲದವನು ಯಾರು?**

ಉ. ಪರಮಾತ್ಮ.

**ವಿವರ :** ಶರೀರದಲ್ಲಿ ಯಾವ ಕಾರ್ಯ ಮಾಡದವನು ಒಬ್ಬನೇ ಒಬ್ಬ ಪರಮಾತ್ಮ. ಕರ್ಮಾಚರಣೆ ಎಂದರೆ ಪಾಪಪುಣ್ಯ ಕಾರ್ಯಗಳಾದ ಕೆಟ್ಟ ಒಳ್ಳೆ ಕಾರ್ಯಗಳೆಂದು, ಅವುಗಳನ್ನು ಮಾಡುವವನು ಶರೀರವೆಲ್ಲಾ ವ್ಯಾಪಿಸಿದ ಆತ್ಮನೆಂದು ಬಹಳ ಜನ ಸುಲಭವಾಗಿ ತಿಳಿಯಬಹುದು. ಜೀವಾತ್ಮ ಯಾವ ಕಾರ್ಯವನ್ನು ಮಾಡುತ್ತಿಲ್ಲವಲ್ಲ ಎಂದು ಸಹ ತಿಳಿಯಬಹುದು. ಆದರೆ ಜೀವಾತ್ಮ ಸಹ ಸುಖದುಃಖಗಳನ್ನು ಅನುಭವಿಸುವ ಕೆಲಸ ಮಾಡುತ್ತಿದ್ದಾನೆ ಅಲ್ಲವೆ! ಕರ್ಮ ಫಲಿತವನ್ನು ಅನುಭವಿಸುವುದು ಸಹ ಒಂದು ವಿಧವಾದ ಕಾರ್ಯವೇ ಆಗುತ್ತಿದೆ. ಕೆಲಸವಾಗಲಿ, ಅನುಭವವಾಗಲಿ ಎರಡು ಕರ್ಮಕ್ಕೆ ಸಂಬಂಧಿಸಿರುವವೇ. ಆದ್ದರಿಂದ ಎರಡು ಕರ್ಮಾಚರಣೆಯಲ್ಲಿನ ಭಾಗಗಳೇ ಆಗುತ್ತಿವೆ.

ಸುಖವನ್ನು ಅನುಭವಿಸುವ ಜೀವಾತ್ಮ ನನ್ನ ಅದೃಷ್ಟ (ಪುಣ್ಯ) ಎಂದು ಅನ್ನುವುದು, ಹಾಗೇ ದುಃಖವನ್ನು ಅನುಭವಿಸುವಾಗ ನನ್ನ ದುರದೃಷ್ಟ (ಪಾಪ) ಎನ್ನುವುದು ನಡೆಯುತ್ತಿದೆ. ಅನುಭವಗಳು ಎರಡೂ ಜೀವಾತ್ಮನವೇ, ಹಾಗೇ ಜೀವಾತ್ಮನ ಅನುಭವಕ್ಕಾಗಿ ಮಾಡುವ ಒಳ್ಳೆ ಕೆಟ್ಟ ಕಾರ್ಯಗಳು ಎರಡು ಆತ್ಮನವೇ. ಆತ್ಮ ಕಾರ್ಯವಾಗಲಿ, ಜೀವಾತ್ಮ ಅನುಭವ ಗಳನ್ನಾಗಲಿ ಪಾಪಪುಣ್ಯಗಳನ್ನು ಅನುಸರಿಸಿಯೇ ಇವೆ. ಆದುದರಿಂದ ಕಾರ್ಯಗಳು ಅನುಭವಗಳು ಎರಡು ಕಾರ್ಯಾಚರಣೆಗೆ ಸಂಬಂಧಿಸಿರುವವೆ. ಆದ್ದರಿಂದ ಶರೀರದಲ್ಲಿನ ಆತ್ಮ ಜೀವಾತ್ಮಗಳು ಎರಡೂ ಕರ್ಮಾಚರಣೆ ಇರುವವರೆ. ಶರೀರದಲ್ಲಿ ನಡೆಯುವ ಯಾವ ಕಾರ್ಯಕ್ಕಾಗಲಿ, ಯಾವ ಅನುಭವಕ್ಕಾಗಲಿ ಸಂಬಂಧವಿಲ್ಲದೆ ಪರಮಾತ್ಮ ಅತೀತವಾಗಿ ಇದ್ದಾನೆ.

**1002. (2) ನಿನ್ನ ಶರೀರಗೃಹದಲ್ಲಿ ಕರ್ಮಾಚರಣೆ ಇರುವವನ್ಯಾರು?**

ಉ. ಆತ್ಮ ಮತ್ತು ಜೀವಾತ್ಮ.

**ವಿವರ :** ಕಾರ್ಯ+ಅನುಭವ=ಕರ್ಮಾಚರಣೆ. ಈ ಸೂತ್ರದ ಪ್ರಕಾರ ಕಾರ್ಯಗಳು ಮಾಡುವ ಆತ್ಮವಾಗಲಿ, ಪಾಪಪುಣ್ಯಗಳನ್ನು ಅನುಭವಿಸುವ ಜೀವಾತ್ಮವಾಗಲಿ ಇಬ್ಬರು ಕರ್ಮಾಚರಣೆ ಇರುವವರೇ ಎಂದು ಹೇಳಬಹುದು. ಕರ್ಮಾಚರಣೆಯಿಂದ ಪರಮಾತ್ಮನಿಗೆ ಸಂಬಂಧವಿಲ್ಲ.

**1003. (3) ನಿನ್ನ ಶರೀರಗೃಹದಲ್ಲಿ ಆತ್ಮನನ್ನು ನೋಡಬಲ್ಲದು ಯಾವುದು?**

ಉ. ಪರಮಾತ್ಮ.

**ವಿವರ :** ಬ್ರಹ್ಮಯೋಗ ಮಾಡುವ ಸಮಯದಲ್ಲಿ ಮಾತ್ರ ಬುದ್ಧಿ ಆತ್ಮನನ್ನು ನೋಡಬಲ್ಲದು. ಸಾಧಾರಣ ಮನುಷ್ಯ ಬ್ರಹ್ಮಯೋಗಿ ಅಲ್ಲ, ಆದ್ದರಿಂದ ಶರೀರ ಗೃಹದಲ್ಲಿ ಬುದ್ಧಿ ಮನೋ ವಿಷಯಗಳನ್ನು ನೋಡುತ್ತಿದೆ, ಆದರೆ ಆತ್ಮನನ್ನು ನೋಡಲಾರದು. ಶರೀರದಲ್ಲಿ ನಿರಂತರ ಆತ್ಮನನ್ನು ನೋಡುತ್ತಿರುವುದು, ಆತ್ಮನಿಗೆ ಸಾಕ್ಷಿಯಾಗಿ ಇರುವುದು ಒಂದೇ ಒಂದು ಪರಮಾತ್ಮ. ಆತ್ಮನನ್ನು ನೋಡಬಲ್ಲದ್ದು ಪರಮಾತ್ಮ ಹೊರತು ಯಾರು ಇಲ್ಲ.

**1004. (4) ನಿನ್ನ ಶರೀರ ಸಂಸಾರದಲ್ಲಿ ಸಿಲುಕಿಕೊಂಡಿರುವವನು ಯಾರು?**

ಉ. ಆತ್ಮ.

**ವಿವರ :** ಶರೀರದ ಹೊರಗಿನ ಸಂಸಾರದಲ್ಲಿ ಸಿಲುಕಿಕೊಳ್ಳುವುದು ಎಲ್ಲರಿಗು ತಿಳಿದಿದೆ. ಒಂದು ಕುಟುಂಬದಲ್ಲಿ ಎಲ್ಲರ ಮಧ್ಯೆ ಇರುತ್ತಾ ಅವರಿಗೆ ಅನುಗುಣವಾಗಿ ನಡೆದುಕೊಳ್ಳುವುದನ್ನು ಕುಟುಂಬದಲ್ಲಿ ಸಿಲುಕಿಕೊಂಡಂತೆ ಎಂದುಕೊಳ್ಳೋಣ. ಅದೇ ವಿಧವಾಗಿ ಶರೀರದ ಒಳಗೆ 25 ಭಾಗಗಳೊಂದಿಗೆ ಸಂಬಂಧವನ್ನು ಇಟ್ಟುಕೊಂಡು, ಅವುಗಳೊಂದಿಗೆ ಸೇರಿ ಇರುವವನು ಶರೀರ ಕುಟುಂಬದಲ್ಲಿ ಸಿಲುಕಿಕೊಂಡವನೆಂದು ಹೇಳಬಹುದು. ಶರೀರದಲ್ಲಿ ಎಲ್ಲಾ ಅವಯವಗಳ ಮಧ್ಯೆ ಇದ್ದು ಅವುಗಳಿಗೆ ಅನುಗುಣವಾಗಿ ನಡೆಯುತ್ತಿರುವುದು ಆತ್ಮ. ಆದ್ದರಿಂದ ಶರೀರ ಸಂಸಾರದಲ್ಲಿ ಸಿಲುಕಿಕೊಂಡವನು ಆತ್ಮ ಎಂದು ಹೇಳಬಹುದು. ಶರೀರದಲ್ಲಿ 25 ಭಾಗಗಳ ಮಧ್ಯದಲ್ಲಿ ಅಲ್ಲದೆ ಒಂದು ಕಡೆ ಪ್ರತ್ಯೇಕವಾಗಿ ಇರುವವನು ಜೀವಾತ್ಮ ಆದ್ದರಿಂದ ಶರೀರ ಸಂಸಾರದಲ್ಲಿ ಸಿಲುಕಿಕೊಳ್ಳದೆ ಪಕ್ಕದಲ್ಲಿರುವವನು ಜೀವಾತ್ಮವೆಂದು ಹೇಳಬಹುದು.

**1005. (5) ನಿನ್ನ ಶರೀರದ ಸಂಸಾರದಲ್ಲಿ ಅಡಕವಾಗಿರುವವನು ಯಾರು?**

ಉ. ಪರಮಾತ್ಮ.

**ವಿವರ :** ಶರೀರದ ಒಳಗೆ ಶರೀರದ ಹೊರಗೆ ಎಲ್ಲಾ ಆವರಿಸಿ ಇರುವವನು ಪರಮಾತ್ಮ. ಶರೀರ ಭಾಗಗಳಲ್ಲಿಯೂ ಸಹ ಅಂತರ್ಯಾಮಿಯಾಗಿ ಅಡಕವಾಗಿ ಕಾಣಿಸದೆ ಇರುವವನು ಪರಮಾತ್ಮ. ಶರೀರ ಅವಯವ ಬೇರೆಯಾಗಿ ತಾನು ಬೇರೆಯಾಗಿ ಇರುವವನು ಆತ್ಮ. ಶರೀರ ಅವಯವಗಳಿಗಿಂತಲೂ ಬೇರೆಯಾಗಿರುವ ಆತ್ಮ ಶರೀರ ಅವಯವಗಳಿಗೆ ಶಕ್ತಿಕೊಟ್ಟು ನಡೆಸುತ್ತಿದೆ. ಪರಮಾತ್ಮ ಯಾವ ಅವಯವಗಳಿಗು ಬೇರೆಯಾಗಿ ಇಲ್ಲ, ಯಾವ ಅವಯವಗಳನ್ನು ನಡೆಸುತ್ತಿಲ್ಲ. ಯಾವ ಅವಯವಕ್ಕು ಬೇರೆಯಾಗಿ ಅನ್ಯದ ಇಲ್ಲದೆ ಅವಯವಗಳಲ್ಲೇ ಐಕ್ಯವಾಗಿದೆ. ಆದ್ದರಿಂದ ಶರೀರ ಸಂಸಾರದಲ್ಲಿ ಅಡಕವಾಗಿರುವುದು ಪರಮಾತ್ಮ ಎಂದು ಹೇಳಬಹುದು.

**1006. (6) ನಿನ್ನ ಶರೀರ ಗೃಹದಲ್ಲಿ ಎಷ್ಟು ಜನ ಇದ್ದಾರೆ?**

ಉ. 27 ಮಂದಿ.

**ವಿವರ :** ಸ್ತ್ರೀ ತತ್ತ್ವ ಇರುವವರು ಅಂದರೆ ಪ್ರಕೃತಿಗೆ ಸಂಬಂಧಿಸಿದ ಭಾಗಗಳು 24 ಇವೆ. ಹಾಗೇ ಪುರುಷತತ್ತ್ವ ಇರುವವರು ಅಂದರೆ ಪರಮಾತ್ಮನಿಗೆ ಸಂಬಂಧಿಸಿರುವವರು ಮೂವರು ಇದ್ದಾರೆ. ಎಲ್ಲರೂ ಸೇರಿ ಒಟ್ಟು 27 ಮಂದಿ ಇದ್ದಾರೆಂದು ಹೇಳಬಹುದು.

**1007. (7) ನಿನ್ನ ಶರೀರದ ಗೃಹದಲ್ಲಿ ಯಾವನ್ಯಾವನು ಇದ್ದಾನೆ?**

ಉ. ಜೀವಾತ್ಮ, ಆತ್ಮ, ಪರಮಾತ್ಮ.

**ವಿವರ :** ಇಲ್ಲಿ ಯಾವನ್ಯಾವನು ಎಂದು ಪುರುಷರನ್ನು ಮಾತ್ರ ಕೇಳಿದ್ದಾರೆ. ಆದ್ದರಿಂದ ಶರೀರದಲ್ಲಿನ ಮೂವರು ಪುರುಷರನ್ನೇ ಹೇಳುವುದು ಸರಿಯಾದ ಉತ್ತರ, ಆದ್ದರಿಂದ ಜೀವಾತ್ಮ, ಆತ್ಮ, ಪರಮಾತ್ಮ ಇದ್ದಾರೆಂದು ಹೇಳಬಹುದು.

**1008. (8) ನಿನ್ನ ಶರೀರ ಗೃಹ ಯಾವ ಪ್ರದೇಶದಲ್ಲಿ ಇದೆ?**

ಉ. ಪರಮಾತ್ಮವೆನ್ನುವ ಪ್ರದೇಶದಲ್ಲಿ ಇದೆ.

**ವಿವರ :** ದೇಶ ಎಂದರೆ ಕಣ್ಣಿಗೆ ಕಾಣಿಸುವುದು. ಉಪದೇಶ ಎಂದರೆ ಕಾಣಿಸದೆ ಇರುವುದೆಂದು ಆಧ್ಯಾತ್ಮಿಕ ಭಾವ. ಹಾಗೇ ಆಧ್ಯಾತ್ಮಿಕ ಅರ್ಥದಲ್ಲಿ ಪ್ರದೇಶಕ್ಕೂ ಸಹ ಪ್ರತ್ಯೇಕವಾದ ಅರ್ಥವಿದೆ. ಪ್ರಪಂಚ ಜ್ಞಾನರೀತ್ಯ ಕಾಣಿಸುವುದು ಪ್ರದೇಶವಾದರೆ, ಆತ್ಮ ಜ್ಞಾನರೀತ್ಯ ಕಾಣಿಸದ ಪ್ರದೇಶವು ಸಹ ಇದೆ. "ಪ್ರ" ಎನ್ನುವ ಅಕ್ಷರಕ್ಕೆ ಪ್ರತ್ಯೇಕವಾದ ವಿಶೇಷಭಾವ ಇದೆಯೆಂದು ಮೊದಲೇ ತಿಳಿದುಕೊಂಡಿದ್ದೇವೆ. ಬೋಧ ಪ್ರಬೋಧ ಎಂದಹಾಗೆ ದೇಶಕ್ಕು ಪ್ರದೇಶಕ್ಕೂ ವ್ಯತ್ಯಾಸವಿದೆ. ಪ್ರದೇಶ ಎಂದರೂ ಉಪದೇಶದಂತಹ ಪ್ರತ್ಯೇಕವಾದ ದೇಶವೆಂದು ಅರ್ಥ. ಉಪದೇಶವೆಂದರೂ, ಪ್ರದೇಶವೆಂದರೂ ಆಧ್ಯಾತ್ಮಿಕ ಅರ್ಥದ ಪ್ರಕಾರ ಪರಮಾತ್ಮ ಎಂದು ಅರ್ಥ. ಅಣುವಣುವಿನಲ್ಲೂ ಎಲ್ಲಾಕಡೆ ವ್ಯಾಪಿಸಿದ ಪರಮಾತ್ಮವೇ ಪ್ರದೇಶ. ಆದ್ದರಿಂದ ಶರೀರ ಎಲ್ಲಿದ್ದರೂ ಪರಮಾತ್ಮನಲ್ಲೇ ಇದೆ, ಆದ್ದರಿಂದ ಪರಮಾತ್ಮವೆನ್ನುವ ಪ್ರದೇಶದಲ್ಲಿ ಶರೀರ ಗೃಹ ಇದೆಯೆಂದು ಹೇಳಬಹುದು. ಶರೀರವೇ ಪ್ರಕೃತಿ ಆದ್ದರಿಂದ ಶರೀರ ಪ್ರಕೃತಿಯಲ್ಲಿ ಇದೆಯೆಂದು ಬರೆಯಬಾರದು. ಪ್ರಕೃತಿ ಸಹ ಪರಮಾತ್ಮನಲ್ಲೇ ಇದೆ ಆದ್ದರಿಂದ ಶರೀರ ಪ್ರಕೃತಿ ಪರಮಾತ್ಮ ಎನ್ನುವ ಪ್ರದೇಶದಲ್ಲಿ ಇದೆಯೆನ್ನುವುದು ಸರಿಯಾದ ಉತ್ತರ.

**1009. (9) ನಿನ್ನ ಶರೀರ ಗೃಹದಲ್ಲಿ ದೀಪಕ್ಕೆ ಎಣ್ಣೆ ಯಾವುದು?**

ಉ. ಪರಮಾತ್ಮ.

**ವಿವರ :** ಲೋಕದಲ್ಲಿ ಸೂರ್ಯನು ಬೆಳಗಿದ ಹಾಗೆ ಶರೀರದಲ್ಲಿ ಆತ್ಮ ಬೆಳಗುತ್ತಿದೆಯೆಂದು ಭಗವದ್ಗೀತೆಯಲ್ಲಿ ಸಹ ಹೇಳಲಾಗಿದೆ. ಸೂರ್ಯ ಕಿರಣಗಳು ಲೋಕವೆಲ್ಲಾ ಪ್ರಕಾಶಿಸಿದ

ಹಾಗೆ ಆತ್ಮಶಕ್ತಿ ಎಂಬ ಬೆಳಕು ಶರೀರವೆಲ್ಲಾ ವ್ಯಾಪಿಸಿದೆ. ಆತ್ಮನಿಗೆ ಶಕ್ತಿಕೊಟ್ಟು ಬೆಳಗುವಂತೆ ಮಾಡುವವನು ಪರಮಾತ್ಮ. ಆತ್ಮ ಬೆಳಗುವುದಕ್ಕೆ ಎಣ್ಣೆಯಂತೆ ಪರಮಾತ್ಮ ಉಪಯೋಗ ವಾಗುತ್ತಿದೆ. ಬಹಳ ಜನ ಆತ್ಮನಿಗೆ ಕರ್ಮ ಎಣ್ಣೆ ಎಂದುಕೊಳ್ಳುತ್ತಿದ್ದಾರೆ. ಆ ವಿಧವಾಗಿ ಆದರೆ ಶರೀರದಲ್ಲಿ ಪ್ರಾರಬ್ಧಕರ್ಮ ಮುಗಿದರೆ ಆತ್ಮ ದೀಪ ಆರಿಹೋಗಬೇಕು. ಅಂದರೆ ಆತ್ಮನಶಿಸಿಹೋಗಬೇಕು. ಹಾಗೆ ನಶಿಸದೆ ಬೇರೆ ಶರೀರದವರೆಗು ಹೋಗುತ್ತಿದೆ. ಆತ್ಮನಿಗೆ ಎಣ್ಣೆ ಎನ್ನುವ ಶಕ್ತಿಯಾಗಿ ಬೆಳಕನ್ನು ಕೊಡುವವನು ಪರಮಾತ್ಮ. ಆದ್ದರಿಂದ ಆತ್ಮ ಶರೀರದಲ್ಲಿ ಪ್ರಾರಬ್ಧ ಕರ್ಮ ಮುಗಿದ ನಂತರವೂ ಸಹ ಜೀವಿಸುತ್ತಿದ್ದಾನೆ. ಕರ್ಮ ಜೀವನ ನಾಟಕ ಆಡುವ ವಿಧಾನವೇ ಆಗಲಿ ಆಡಿಸುವ ಶಕ್ತಿ ಅಲ್ಲ. ಶರೀರದಲ್ಲಿ ಆತ್ಮಕ್ಕೆ ಆಚರಣೆಯನ್ನು ಸೂಚಿಸುವುದು ಕರ್ಮ. ಆತ್ಮಕ್ಕೆ ಬೆಳಗುವ ಶಕ್ತಿಯನ್ನು ಕೊಡುವುದು ಪರಮಾತ್ಮ.

**1010. (10) ನಿನ್ನ ಶರೀರಗೃಹದಲ್ಲಿ ಬೆಳಗುವ ದೀಪಯಾವುದು?**

ಉ. ಆತ್ಮ.

**ವಿವರ :** ಇಲ್ಲಿ ಶರೀರವನ್ನು ಪ್ರಣತಿಯಾಗಿ, ಆತ್ಮನನ್ನು ದೀಪವಾಗಿ, ಪರಮಾತ್ಮನನ್ನು ಎಣ್ಣೆಯಾಗಿ ಹೇಳಿಕೊಳ್ಳಬೇಕಾಗಿದೆ.

## ಜ್ಞಾನ ಪರೀಕ್ಷೆ

**ಚಿನ್ನಪೊಡಮಲ** **ದಿನಾಂಕ–07–10–2006**

**1011. (1) ನೀನು ಆಹಾರವನ್ನು ತಿನ್ನುತ್ತಿರುವುದು ಹಸಿವಿಗಾ? ರುಚಿಗಾ?**

ಉ. ರುಚಿಗೆ.

**ವಿವರ :** ಆಹಾರವನ್ನು ತಿನ್ನುತ್ತಿರುವುದು ಹೊಟ್ಟೆಗೋಸ್ಕರವೇ ಆದರೂ ಇಲ್ಲಿ ಹಸಿವು, ರುಚಿ ಎನ್ನುವವು ಬಿಡಿಬಿಡಿಯಾಗಿ ಎರಡಿವೆ. ಹಸಿವು ಹೊಟ್ಟೆಯಲ್ಲಿ, ರುಚಿ ಬಾಯೊಳಗೆ ನಾಲಿಗೆ ಮೇಲೆ ಇದೆಯೆಂದು ಎಲ್ಲರಿಗು ತಿಳಿದಿದೆ. ಶರೀರ ಬಲಕ್ಕೋಸ್ಕರ ಹಸಿವು ಆಗುತ್ತಿದೆ. ಜೀವಿಯ ಆಸೆ (ಕಾಮ) ನಿಮಿತ್ತ ರುಚಿ ಇದೆ. ಆತ್ಮ ಶರೀರಕ್ಕೆ ಶಕ್ತಿ ಕೊಡುವುದಕ್ಕೆ ಆಹಾರ ಅಗತ್ಯ, ಆದ್ದರಿಂದ ಹಸಿವು ಆತ್ಮ ಸಂಬಂಧವಾದದ್ದು. ಜೀವಿಯ ಆಸೆ ತೀರಿಸಿ

ಕೊಳ್ಳುವುದಕ್ಕೆ ರುಚಿ ಇದೆ ಆದ್ದರಿಂದ ರುಚಿ ಜೀವಾತ್ಮನ ಸಂಬಂಧವಾಗಿದೆ. ಮಾನವನು ಯಾವಾಗಲೂ ಅಹಂನಿಂದ ಕೂಡಿಕೊಂಡು, ಜೀವ ಭಾವದಿಂದ ಆಹಾರ ತಿನ್ನುತ್ತಾ ರುಚಿಯನ್ನು ಅನುಭವಿಸುತ್ತಿದ್ದಾನೆ. ಆದ್ದರಿಂದ ಇವು ರುಚಿ ಇರುವ ಪದಾರ್ಥಗಳು, ಇವು ರುಚಿ ಇಲ್ಲದ ಪದಾರ್ಥಗಳೆಂದು ಹೇಳುತ್ತಿದ್ದಾನೆ. ತಿಂದಿರುವುದು ಯಾವ ಆಹಾರವಾದರೂ ಹೊಟ್ಟೆ ತುಂಬುತ್ತಿದೆ. ಆದರೆ ತಿಂದಿರುವುದು ಯಾವ ಆಹಾರವಾದರೂ ಅದರಲ್ಲಿನ ರುಚಿಗಳನ್ನು ಅನೇಕವಾಗಿ ಜೀವಾತ್ಮ ಅನುಭವಿಸುತ್ತಿದ್ದಾನೆ. ಮನುಷ್ಯ ಆಹಾರ ತಿನ್ನುತ್ತಿರುವುದು ಹಸಿವಿಗೇ, ಆದರೂ ಅದರಲ್ಲಿನ ರುಚಿಗಳನ್ನೇ ಕೋರುತ್ತಿದ್ದಾನೆ. ಯಾರು ರುಚಿ ಇಲ್ಲದ ಆಹಾರವನ್ನು ತಿನ್ನಬೇಕೆಂದು ತಿಳಿದುಕೊಳ್ಳುವುದಿಲ್ಲ. ಹೊಟ್ಟೆ ತುಂಬಿ ಒಳಗೆ ಹೋಗಲಾರದ ಸ್ಥಿತಿ ಏರ್ಪಡುತ್ತಿದೆ ಆದ್ದರಿಂದ ಮನುಷ್ಯ ಸ್ವಲ್ಪ ಸಮಯವೇ, ಸ್ವಲ್ಪವೇ ತಿನ್ನುತ್ತಿದ್ದಾನೆ. ಅಂತಹ ಪರಿಸ್ಥಿತಿ ಇಲ್ಲದೇ ಹೋದರೆ ರುಚಿ ಗೋಸ್ಕರ ಎಷ್ಟಾದರೂ ಎಷ್ಟೊತ್ತಾದರು ತಿನ್ನುತ್ತಿದ್ದನು. ಆದ್ದರಿಂದ ನಾವು ಹಸಿವಿಗಿಂತಲೂ ರುಚಿಗೇ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಡುತ್ತಿದ್ದೇವೆ. ಆಹಾರ ಆತ್ಮವೊಂದರ ಹಸಿವಿಗೆ ಎಂದುಕೊಳ್ಳದೆ ನಮ್ಮ ರುಚಿಗೇ ಎಂದುಕೊಳ್ಳುತ್ತಿದ್ದೇವೆ ಆದ್ದರಿಂದ ನಾವು ತಿನ್ನುತ್ತಿರುವುದು ರುಚಿಗೋಸ್ಕರವೇ ಎಂದು ಹೇಳಬೇಕು. ಹಸಿವುಗೋಸ್ಕರವೇ ಆಹಾರವಾದರೆ ಒಂದೇ ಆಹಾರವನ್ನು ನಿಗಧಿಪಡಿಸಿಕೊಳ್ಳುತ್ತಿದ್ದೆವು. ಆಹಾರ ರುಚಿಗೋಸ್ಕರವೇ ತಿನ್ನುತ್ತಿದ್ದೇವೆಂದುಕೊಳ್ಳುವುದರಿಂದ ಅನೇಕ ಆಹಾರಗಳನ್ನು ಅನೇಕ ವಿಧಗಳಾಗಿ ಮಾಡಿಕೊಂಡು ತಿನ್ನುತ್ತಿದ್ದೇವೆ. ಇನ್ನೂ ಹೆಚ್ಚಿನ ರುಚಿಗೋಸ್ಕರ ಯಾವ ವಿಧವಾಗಿ ತಯಾರಿ ಮಾಡಿಕೊಳ್ಳಬೇಕೆಂದು ಅಡಿಗೆ ಕಾರ್ಯಕ್ರಮಗಳನ್ನು ನೋಡುತ್ತಿದ್ದೇವೆ. ನಾನು ಎನ್ನುವ ಭಾವದಿಂದ ತಿನ್ನುತ್ತಿರುವವರೆಲ್ಲರೂ ರುಚಿಗೋಸ್ಕರವೇ ಎಂದು ತಿಳಿಯಬೇಕು.

**1012. (2) ನಿನ್ನ ಶರೀರದಲ್ಲಿ ಅಣುವಾದ ಆತ್ಮ ಯಾವುದು?**

ಉ. ಜೀವಾತ್ಮ.

**ವಿವರ :** ಶರೀರದಲ್ಲಿ ಮೂರು ಆತ್ಮಗಳಿವೆ. ಪ್ರಕೃತಿಯೊಂದಿಗೆ ತಯಾರಾದ ಶರೀರದಲ್ಲಿ ಮೂರು ಆತ್ಮಗಳನ್ನು ಪರಿಶೀಲಿಸಿ ನೋಡಿದರೆ ಶರೀರದಲ್ಲಿ ಒಂದು ಕಡೆ ಒಂದು ಅಣುವಿನಂತೆ ಇರುವುದು ಜೀವಾತ್ಮ. ಜೀವಾತ್ಮ ಯಾವ ಶರೀರದಲ್ಲಾದರೂ ರವೆಯಷ್ಟು ಪರಿಮಾಣದಲ್ಲಿ ಇದ್ದಾನೆಂದು ತಿಳಿಯುತ್ತಿದೆ. ಶರೀರದೊಳಗೆ ತಲೆಯಲ್ಲಿ ಎಷ್ಟೋ ಚಿಕ್ಕದಾದ ಗುಣಚಕ್ರದೊಳಗೆ, ಅದರಲ್ಲಿ ಚಿಕ್ಕದಾದ ಒಂದು ಭಾಗದಲ್ಲಿ, ಒಂದೇ ಆಕಾರದಿಂದ

ಅಣುಪರಿಮಾಣದಲ್ಲಿ ಇರುವವನು ಜೀವಾತ್ಮನೆಂದು ತಿಳಿಯಬೇಕು. ಈ ಆತ್ಮಗಳ ವಿಷಯಗಳು, ಅವುಗಳ ಪರಿಮಾಣ, **"ತ್ರೈತ ಸಿದ್ಧಾಂತ ಭಗವದ್ಗೀತೆ"** ಯಲ್ಲಿ ಹೇಳಲಾಗಿದೆ. ಶರೀರ ಎಷ್ಟು ದೊಡ್ಡದಾದರೂ ಜೀವಾತ್ಮ ಒಂದು ಅಣುವಷ್ಟಿರುವವನೇ.

**1013. (3) ನಿನ್ನ ಶರೀರದಲ್ಲಿ ಅಣುವಿಗಿಂತಲೂ ದೊಡ್ಡ ಆತ್ಮ ಯಾವುದು?**

ಉ. ಆತ್ಮ.

**ವಿವರ :** ಶರೀರದಲ್ಲಿ ಒಂದು ಕಡೆ ಅಣುವಾದ ಆತ್ಮ ಜೀವಾತ್ಮವಾದಾಗ, ಶರೀರವೆಲ್ಲಾ ವ್ಯಾಪಿಸಿ ಜೀವಾತ್ಮನಿಗಿಂತಲೂ ದೊಡ್ಡದಾಗಿರುವ ಆತ್ಮ ಎರಡನೆಯ ಆತ್ಮ. ಆತ್ಮ ಶರೀರದಲ್ಲಿ ಮಾತ್ರ ವ್ಯಾಪಿಸಿದ್ದು ಶರೀರದ ಹೊರಗೆ ಇಲ್ಲ. ಆದ್ದರಿಂದ ನಿನ್ನ ಶರೀರದಲ್ಲಿ ಅಣುವಾದ ಜೀವಾತ್ಮಗಿಂತಲೂ ಆತ್ಮ ದೊಡ್ಡದೆಂದು ಹೇಳಬಹುದು.

**1014. (4) ಶರೀರದಲ್ಲಿ ಸಮಾನವಾಗಿ ಇರುವ ಆತ್ಮ ಯಾವುದು?**

ಉ. ಪರಮಾತ್ಮ.

**ವಿವರ :** ಒಂದು ಶರೀರದಲ್ಲಿ ಚಿಕ್ಕದು ಜೀವಾತ್ಮ, ದೊಡ್ಡದು ಆತ್ಮ ಆದಾಗ, ಎಲ್ಲಾ ಶರೀರಗಳಲ್ಲಿ ಸಮಾನವಾಗಿ ವ್ಯಾಪಿಸಿರುವುದು ಪರಮಾತ್ಮ. ಒಂದು ಶರೀರದಲ್ಲೇ ಅಲ್ಲದೆ ಎಲ್ಲಾ ಶರೀರಗಳಲ್ಲಿ ಏನೂ ಮಾಡದೆ ಜೀವಾತ್ಮ ಆತ್ಮಗಳಿಗಿಂತ ದೊಡ್ಡದಾಗಿರುವುದು ಪರಮಾತ್ಮ. ಒಂದು ಶರೀರದಲ್ಲಿ ಕರ್ಮಾಧೀನವಾಗಿ ಕರ್ಮಾಚರಣೆ ಹೊಂದಿರುವವು ಜೀವಾತ್ಮ, ಆತ್ಮಗಳು. ಎಲ್ಲಾ ಶರೀರಗಳಲ್ಲಿ ಯಾವ ಕರ್ಮಾಚರಣೆ ಇಲ್ಲದೆ ಒಂದೇ ಸ್ಥಿತಿಯಲ್ಲಿ ಸಮಾನವಾಗಿರುವುದು ಪರಮಾತ್ಮ.

**1015. (5) ಶರೀರದಲ್ಲಿ ವ್ಯಾಕೋಚ ಸಂಕೋಚಗಳು ಇರುವ ಆತ್ಮ ಯಾವುದು?**

ಉ. ಆತ್ಮ.

**ವಿವರ :** ಶರೀರದಲ್ಲಿ ವ್ಯಾಕೋಚ ಸಂಕೋಚಗಳಿರುವ ಆತ್ಮ ಒಂದೇ ಇದೆ. ಅದೇ ಎರಡನೆಯ ಆತ್ಮ. ಜೀವಾತ್ಮ ಶರೀರದಲ್ಲಿ ದೊಡ್ಡದಾಗಿ ವ್ಯಾಪಿಸುವುದು, ಸಣ್ಣದಾಗಿ ಸಂಕೋಚಿಸುವುದು ಮಾಡುತ್ತಿಲ್ಲ. ಜೀವಾತ್ಮನು ಯಾವಾಗಲೂ ಒಂದೇ ಸ್ಥಿತಿಯಲ್ಲಿ ಇರುವನು. ಜೀವಾತ್ಮನು ಗುಣಚಕ್ರವನ್ನು ಬಿಟ್ಟು ಹೊರಗೆ ಬರುವವನಲ್ಲ. ಪರಮಾತ್ಮ

ಎಂದರೂ ಅದು ಯಾವಾಗಲೂ ಎಲ್ಲಾಕಡೆ ತುಂಬಿರುವುದು. ಪರಮಾತ್ಮ ಎಂದಿಗೂ ಬದಲಾವಣೆ ಹೊಂದುವುದಲ್ಲ. ಇನ್ನು ಶರೀರದಲ್ಲಿ ಎರಡನೆಯ ಆತ್ಮ ಜೀವಿಯ ಜನ್ಮದಲ್ಲಿ ಶರೀರದಲ್ಲಿ ಬ್ರಹ್ಮನಾಡಿಯನ್ನು ಸೇರಿ, ಅಲ್ಲಿಂದ ನಾಡಿಗಳಿಂದ ಶರೀರವೆಲ್ಲಾ ವ್ಯಾಪಿಸುತ್ತಿದೆ. ಹಾಗೆ ಜನ್ಮದಲ್ಲಿ ಒಂದು ಬಾರಿ ವ್ಯಾಪಿಸಿದ ಆತ್ಮ ಜೀವಿಯ ಮರಣದ ವರೆಗು ಶರೀರವೆಲ್ಲಾ ಇದ್ದು ಮರಣ ಸಮಯದಲ್ಲಿ ತಿರುಗಿ ಸಂಕೋಚಿಸಿ ಬ್ರಹ್ಮನಾಡಿಯನ್ನು ಸೇರಿ, ಅಲ್ಲಿಂದ ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳೊಂದಿಗೆ ಸಹ ಮತ್ತೊಂದು ಶರೀರಕ್ಕೆ ಹೋಗುತ್ತಿದೆ. ಮತ್ತೊಂದು ಶರೀರದಲ್ಲಿ ಜನ್ಮದಿಂದ ಪ್ರವೇಶಿಸಿದ ಆತ್ಮ ಅಲ್ಲಿಯೂ ಸಹ ಶರೀರವೆಲ್ಲಾ ವ್ಯಾಪಿಸಿ ಜೀವನವೆಲ್ಲಾ ಇರುತ್ತಿದೆ. ಹೀಗೆ ಆತ್ಮ ಜನ್ಮದಲ್ಲಿ ಶರೀರದಲ್ಲಿ ವ್ಯಾಕೋಚ ಹೊಂದಿ, ಮರಣದಲ್ಲಿ ಸಂಕೋಚ ಹೊಂದುತ್ತಿದೆ. ಆದ್ದರಿಂದ ಶರೀರದಲ್ಲಿ ವ್ಯಾಕೋಚ ಸಂಕೋಚ ಇರುವುದು ಆತ್ಮಕ್ಕೆಂದು ಹೇಳಬಹುದು.

**1016. (6) ಒಬ್ಬ ಅಜ್ಞಾನಿ ಶರೀರದಲ್ಲಿ ಎಷ್ಟು ಆತ್ಮಗಳಿರಬಹುದು?**

ಉ. ಮೂರು ಆತ್ಮಗಳ ನಂತರ ಎಷ್ಟಾದರೂ ಇರಬಹುದು.

**ವಿವರ :** ಒಂದು ಶರೀರದಲ್ಲಿ ಸರ್ವ ಸಾಧಾರಣವಾಗಿ ಮೂರು ಆತ್ಮಗಳಿರುತ್ತವೆ. ಅವುಗಳೆ ಜೀವಾತ್ಮ, ಆತ್ಮ, ಪರಮಾತ್ಮ. ಅಜ್ಞಾನಿ ಶರೀರದೊಳಗೆ ಸೂಕ್ಷ್ಮ ಶರೀರಗಳು ಸಹ ಸೇರಬಹುದು. ಆದ್ದರಿಂದ ಅವನ ಕರ್ಮವನ್ನು ಅನುಸರಿಸಿ ಎಷ್ಟು ಆತ್ಮಗಳಾದರೂ ಇರಬಹುದು.

**1017. (7) ಒಬ್ಬ ಜ್ಞಾನಿ ಶರೀರದಲ್ಲಿ ಎಷ್ಟು ಆತ್ಮಗಳಿರುವುದಿಲ್ಲ?**

ಉ. ನಾಲ್ಕು ಐದು ಆತ್ಮಗಳಿರುವುದಿಲ್ಲ.

**ವಿವರ :** ಜ್ಞಾನಿ ಶರೀರದಲ್ಲಿ ಜ್ಞಾನ ಶಕ್ತಿ ಇರುತ್ತದೆ. ಆದ್ದರಿಂದ ಸೂಕ್ಷ್ಮ ಶರೀರಗಳು ಸೇರುವುದಕ್ಕೆ ಅವಕಾಶವಿರುವುದಿಲ್ಲ. ಸೂಕ್ಷ್ಮಶರೀರಗಳು ಜ್ಞಾನಿ ಶರೀರದಲ್ಲಿ ಇರುವುದಿಲ್ಲ ಆದ್ದರಿಂದ ನಾಲ್ಕೈದು ಆತ್ಮಗಳಿರುವುದಿಲ್ಲವೆಂದು ಹೇಳುತ್ತಿದ್ದೇವೆ. ಸೂಕ್ಷ್ಮ ಶರೀರದಲ್ಲಿ ಎರಡು ಆತ್ಮಗಳಿರುತ್ತವೆ ಆದ್ದರಿಂದ ನಾಲ್ಕೈದು ಎಂದಿದ್ದೇವೆ.

**1018. (8) ನಿನಗು ನನಗೂ ಏನು ವ್ಯತ್ಯಾಸವಿದೆ?**

ಉ. ಕರ್ಮದಲ್ಲಿ ವ್ಯತ್ಯಾಸವಿದೆ.

**ವಿವರ :** ಮನುಷ್ಯ ಮನುಷ್ಯನ ನಡುವೆ ಆಕಾರದಲ್ಲಿ, ಅಂದದಲ್ಲಿ, ಕುಲದಲ್ಲಿ, ಬಲದಲ್ಲಿ, ಅಧಿಕಾರದಲ್ಲಿ, ಅಂತಸ್ಥಲ್ಲಿ, ಧನದಲ್ಲಿ, ದಾನದಲ್ಲಿ, ಮಮತೆಯಲ್ಲಿ, ಮರ್ಯಾದೆಯಲ್ಲಿ, ಮರಣದಲ್ಲಿ, ಹುಟ್ಟುವುದರಲ್ಲಿ ಎಷ್ಟೋ ವ್ಯತ್ಯಾಸಗಳಿರಬಹುದು. ಆ ವ್ಯತ್ಯಾಸಗಳಿಗೆಲ್ಲ ಮೂಲ ಕಾರಣ ಕರ್ಮ. ಆದುದರಿಂದ ಮನುಷ್ಯ ಮನುಷ್ಯನ ನಡುವೆ ಕರ್ಮದಲ್ಲಿ ವ್ಯತ್ಯಾಸವಿದೆಯೆಂದು ಹೇಳಬಹುದು. ಆ ವಿಧವಾಗಿಯೇ ನಿನಗೂ ನನಗೂ ಕರ್ಮದಲ್ಲೇ ವ್ಯತ್ಯಾಸವಿದೆ.

**1019. (9) ಜೀವನದಲ್ಲಿ ಇರುವುದು, ಮೋಕ್ಷದಲ್ಲಿ ಇಲ್ಲದಿರುವುದು ಯಾವುದು?**

ಉ. ಕರ್ಮ.

**ವಿವರ :** ಕರ್ಮ ಇದ್ದರೇನೆ ಜೀವನ, ಕರ್ಮವಿಲ್ಲದಿದ್ದರೆ ಮೋಕ್ಷ. ಈ ಸೂತ್ರದ ಪ್ರಕಾರ ಕರ್ಮಸಾಹಿತ್ಯವೇ ಜೀವನ. ಕರ್ಮ ರಾಹಿತ್ಯವೇ ಮೋಕ್ಷ. ಆದ್ದರಿಂದ ಜೀವನದಲ್ಲಿ ಇರುವುದು, ಮೋಕ್ಷದಲ್ಲಿ ಇಲ್ಲದಿರುವುದು ಒಂದೇ ಒಂದು ಕರ್ಮ ಎಂದು ಹೇಳಬಹುದು.

**1020. (10) ದೇವರಿಗೆ ಇಲ್ಲದ್ದು, ದೆವ್ವಕ್ಕೆ ಇರುವುದು ಯಾವುದು?**

ಉ. ಕರ್ಮ.

**ವಿವರ :** ಶರೀರವಿರುವ ಮನುಷ್ಯನಾದರೂ ಶರೀರವಿಲ್ಲದ ದೆವ್ವವಾದರೂ ಜೀವನವನ್ನೇ ಕಳೆಯುತ್ತಿದ್ದಾರೆ. ಜೀವನ ಕರ್ಮದಿಂದ ಏರ್ಪಡುತ್ತಿದೆ. ದೆವ್ವಕ್ಕೂ ಸಹ ಕರ್ಮ ಇದೆ, ಅದರ ಪ್ರಕಾರ ಜೀವನ ಇದೆ. ದೇವರಿಗೆ ಶರೀವು ಇಲ್ಲ, ಜೀವನವೂ ಇಲ್ಲ, ಅವುಗಳಿಗೆ ಮೂಲಕಾರಣವಾದ ಕರ್ಮ ಇಲ್ಲ. ಆದ್ದರಿಂದ ದೇವರಿಗೆ ಇಲ್ಲದಿರುವುದು, ದೆವ್ವಕ್ಕೆ ಇರುವುದು, ಒಂದೇ ಒಂದು ಕರ್ಮ ಎಂದು ಹೇಳಬಹುದು.

## ಜ್ಞಾನ ಪರೀಕ್ಷೆ

**ಚಿನ್ನಪೊಡಮಲ** **ದಿನಾಂಕ–05–11–2006**

**1021. (1) ಶರೀರದಲ್ಲಿ ಶಬ್ದವನ್ನು ಕೇಳಿ ಬೆಚ್ಚಿಬೀಳುವವನು ಜ್ಞಾನಿಯಾ? ಅಜ್ಞಾನಿಯಾ?**

ಉ. ಜ್ಞಾನಿ.

**ವಿವರ :** ಪ್ರತಿಯೊಂದು ಶರೀರದಲ್ಲೂ ಒಬ್ಬ ಜ್ಞಾನಿ, ಒಬ್ಬ ಅಜ್ಞಾನಿ ಇಬ್ಬರಿರುತ್ತಾರೆ. ಸಜೀವ ಶರೀರದಲ್ಲಿ ಜೀವಾತ್ಮನೊಂದಿಗೆ ಆತ್ಮವೂ ಸಹ ಇರುತ್ತದೆ. ಆತ್ಮವೇ, ಸರ್ವವು ತಿಳಿದ ಜ್ಞಾನಿ, ಜೀವಾತ್ಮನೇ ಸರ್ವವು ತಿಳಿಯದ ಅಜ್ಞಾನಿ ಎಂದು ಹೇಳಬಹುದು. ಜೀವಾತ್ಮ ಎಷ್ಟು ಜ್ಞಾನಿಯಾದರೂ ಸ್ವಲ್ಪ ತಿಳಿಯದಿರುವುದು ಇರುತ್ತದೆ. ಆದ್ದರಿಂದ ಜೀವಾತ್ಮನನ್ನು ಅಸಂಪೂರ್ಣ ಜ್ಞಾನಿ ಎನ್ನಬಹುದು. ಶರೀರದಲ್ಲಿ ಸಂಪೂರ್ಣ ಜ್ಞಾನ ಹೊಂದಿದವನು ಆತ್ಮನೇ ಆದ್ದರಿಂದ ಆತ್ಮನನ್ನು ಸಂಪೂರ್ಣ ಜ್ಞಾನಿ ಎಂದು ಹೇಳಬಹುದು. ಶರೀರದಲ್ಲಿ ಊಹೆಯನ್ನು, ಜ್ಞಾನವನ್ನು ಜೀವಾತ್ಮನಿಗೆ ಸೇರಿಸುವವನು ಆತ್ಮನೇಯೆಂದು ಗೀತೆಯಲ್ಲಿ ಸಹ ಹೇಳಲಾಗಿದೆ. ಶರೀರವೆಲ್ಲಾ ವ್ಯಾಪಿಸಿರುವ ಆತ್ಮ ಜ್ಞಾನಿ ಆದಾಗ ಆತನ ಅನುಮತಿಯಿಂದ ಬದುಕುತ್ತಿರುವ ಜೀವಾತ್ಮ ಅಜ್ಞಾನಿ ಆಗುತ್ತಿದ್ದಾನೆ. ಆತ್ಮ ಜೀವಾತ್ಮ ನಿವಾಸ ಶರೀರವೇ ಆದುದರಿಂದ ಒಬ್ಬ ಜ್ಞಾನಿ, ಒಬ್ಬ ಅಜ್ಞಾನಿ ಶರೀರದಲ್ಲಿ ಇದ್ದಾರೆಂದು ಹೇಳುತ್ತಿದ್ದೇವೆ. ಶರೀರದಲ್ಲಿ ಶಬ್ದವನ್ನು ಜೀವಾತ್ಮಕ್ಕಿಂತಲೂ ಆತ್ಮವೇ ಮೊದಲು ಕೇಳುತ್ತಿದ್ದಾನೆ. ಆತ್ಮದ ನಂತರವೇ ಜೀವಾತ್ಮನಿಗೆ ಶಬ್ದ ಬುದ್ಧಿಯಿಂದ ತಿಳಿಯುತ್ತಿದೆ. ಶಬ್ದವನ್ನು ಮನಸ್ಸು ಬುದ್ಧಿಗೆ ಸೇರಿಸಿದಾಗ, ಬುದ್ಧಿ ಜೀವಾತ್ಮನಿಗೆ ಸೇರಿಸುತ್ತಿದೆ. ಮನಸ್ಸಿಗೆ ಜ್ಞಾನೇಂದ್ರಿಯವಾದ ಕಿವಿ ಸೇರಿಸುತ್ತಿದೆ. ಈ ವರಸೆ ಕ್ರಮದಲ್ಲಿ ಕಿವಿಗೆ ಶಬ್ದ ತಿಳಿದ ಕೂಡಲೇ ಶರೀರವೆಲ್ಲಾ ವ್ಯಾಪಿಸಿರುವ ಆತ್ಮಕ್ಕೆ ಮನಸ್ಸಿಗಿಂತಲೂ ಮೊದಲೇ ತಿಳಿಯುತ್ತಿದೆ. ಈ ವಿಧವಾಗಿ ಶಬ್ದವನ್ನು ಜೀವಾತ್ಮನಿಗಿಂತಲೂ ಮೊದಲೇ ಕೇಳುತ್ತಿರುವ ಆತ್ಮ ಕೆಲವು ಶಬ್ದಗಳಿಗೆ ಮಾತ್ರ ಆಗಾಗ ಬೆಚ್ಚಿ ಬೀಳುವುದು ನಡೆಯುತ್ತಿದೆ. ಶಬ್ದವೊಂದರ ಕೇಳುವಿಕೆಗೇ ಅಲ್ಲದೆ ಆಗಾಗ ಕೆಲವು ದೃಶ್ಯಗಳಿಗೂ, ಕೆಲವು ಸ್ಪರ್ಶಗಳಿಗೂ ಬೆಚ್ಚಿ ಬೀಳುವುದು ನಡೆಯುತ್ತಿದೆ. ಗಮನಿಸಬೇಕಾದ ವಿಷಯವೇನೆಂದರೆ ಶಬ್ದ, ರೂಪ, ಸ್ಪರ್ಶಗಳಿಗೆ ಬೆಚ್ಚಿಬೀಳುವ ಆತ್ಮ ನಾಲಿಗೆ ಒದಗಿಸುವ ರುಚಿಗೂ, ಮೂಗು ಒದಗಿಸುವ ವಾಸನೆಗು ಬೆಚ್ಚಿಬೀಳುತ್ತಿಲ್ಲ. ನಾಲಿಗೆ ಮೂಗು ಎರಡು ದ್ವಂದ್ವ ಕಾರ್ಯಗಳು ಮಾಡುತ್ತಿವೆಯೆಂದು ನೆನಪಲ್ಲಿಟ್ಟಿಕೊಳ್ಳಬೇಕು. ಪ್ರತ್ಯೇಕಿಸಿ ಒಂದು ಕೆಲಸವನ್ನು ಮಾತ್ರ ಮಾಡುತ್ತಿರುವ ಕಣ್ಣು, ಕಿವಿ, ಚರ್ಮವೊಂದರ ಶಬ್ದಕ್ಕು, ದೃಶ್ಯಕ್ಕು, ಸ್ಪರ್ಶಕ್ಕು ಮಾತ್ರವೇ ಆತ್ಮ ಶರೀರವನ್ನು ಬೆಚ್ಚಿಬೀಳುವಹಾಗೆ ಮಾಡುತ್ತಿದೆ.

ಆತ್ಮ ಬೆಚ್ಚಿ ಬೀಳುವುದರಿಂದ ಭಯಪಡುತ್ತಿದೆಯಾ ಎಂದು ಕೆಲವರು ಕೇಳಬಹುದು. ಭಯ ಬೇರೆ ಬೆಚ್ಚಿಬೀಳುವುದು ಬೇರೆ. ಆತ್ಮಕ್ಕೆ ಭಯ ಇರುವುದಿಲ್ಲ. ಭಯ ಬೀಳುವುದು ಜೀವಾತ್ಮನಿಗೆ ಮಾತ್ರವೇ ಇದೆ. ಶರೀರ ಬೆಚ್ಚಿಬಿದ್ದಷ್ಟು ಮಾತ್ರಕ್ಕೆ ಆತ್ಮ ಭಯಪಟ್ಟಹಾಗೆ ಅಲ್ಲ. ಇಲ್ಲಿ ಕೆಲವರಿಗೆ ಮತ್ತೊಂದು ಪ್ರಶ್ನೆ ಬರಬಹುದು. ಅದೇನೆಂದರೆ

ಆತ್ಮ ಭಯಪಡದೇ ಹೋದರೆ ಬೆಚ್ಚಿಬೀಳುವುದು ಏಕೆಂದು ಕೇಳಬಹುದು. ಇದಕ್ಕೆ ಉತ್ತರವೇನೆಂದರೆ! ಬೆಚ್ಚಿ ಬೀಳುವುದರಲ್ಲಿ ದೊಡ್ಡ ಜ್ಞಾನ ಸಂದೇಶವಿದೆಯೆಂದು ಹೇಳಬಹುದು. ಮಾನವನು ಹುಟ್ಟಿದಾಗಿನಿಂದ ಅಜ್ಞಾನದಲ್ಲಿ ಮುಳುಗಿದ್ದಾನೆ. ಶರೀರವೇ ತಾನೆಂದು, ಎಲ್ಲಾ ತಾನೇ ಮಾಡುತ್ತಿದ್ದೇನೆಂದು, ತನ್ನ ಶರೀರ ತಾನು ಹೇಳಿದಹಾಗೇ ಮಾಡುತ್ತಿದೆಯೆಂದು ಅಹಂನ್ನು ಹೊಂದಿದ್ದಾನೆ. ತನಗಿಂತಲೂ ದೊಡ್ಡವನು ತನ್ನ ಶರೀರದಲ್ಲೇ ಇದ್ದಾನೆಂದು ಯಾರಿಗೂ ತಿಳಿದಿಲ್ಲ. ಅಂತಹ ಅಜ್ಞಾನಿಗಳಿಗೆ ಶರೀರದಲ್ಲೇ ತನಗಿಂತಲೂ ಬೇರೆಯಾಗಿರುವ ಆತ್ಮ ಒಂದಿದೆಯೆಂದು, ಅದೇ ಶರೀರಕ್ಕೆ ಶಕ್ತಿಯಾಗಿ ಕದಲಿಸುತ್ತಿದೆಯೆಂದು ತಿಳಿಸುವ ದೊಡ್ಡ ಜ್ಞಾನಸಂದೇಶವೇ ಬೆಚ್ಚಿಬೀಳುವುದು. ಬೆಚ್ಚಿ ಬೀಳುವುದು ಜ್ಞಾನ ಸಂದೇಶವೆಂದು ಯಾವ ನಿಘಂಟಿನಲ್ಲಿ ಇದೆಯೆಂದು, ಯಾವ ಋಷಿಗಳು ಹೇಳಿದ್ದಾರೆಂದು ಕೆಲವರು ಕೇಳಬಹುದು. ಇದು ಇಲ್ಲಿಯವರೆಗು ಯಾವ ನಿಘಂಟುನಲ್ಲೂ ಇಲ್ಲದ ಮಾತು, ಯಾವ ಋಷಿಗಳು ಹೇಳದ ಮಾತು ಈಗ ನಾವು ಹೇಳುತ್ತಿದ್ದೇವೆ. ಹಾಗೆ ಹೇಳುವುದೇ ನನ್ನ ಪ್ರತ್ಯೇಕತೆ. ನಿಮಗೆ ಇಷ್ಟವಾದರೆ ಕೇಳಬಹುದು, ಇಷ್ಟ (ಶ್ರದ್ಧೆ) ಇಲ್ಲದೇ ಹೋದರೆ ಕೇಳದೆ ಹೋಗಬಹುದು. ನಿಮ್ಮ ನಿರ್ಣಯದ ಮೇಲೆಯೇ ಆಧಾರಬಿದ್ದಿರುತ್ತದೆ.

**1022. (2) ಶರೀರದಲ್ಲಿ ಜ್ಞಾನಿ ಇರುತ್ತಾನಾ? ಅಜ್ಞಾನಿ ಇರುತ್ತಾನಾ?**

ಉ. ಜ್ಞಾನಿ ಅಜ್ಞಾನಿ ಇಬ್ಬರು ಇರುತ್ತಾರೆ.

**ವಿವರ :** ಶರೀರದಲ್ಲಿ ಯಾವಾಗಲು ಇಬ್ಬರು ನಿವಾಸವಿರುತ್ತಾರೆ. ಅವರೇ ಆತ್ಮ, ಜೀವಾತ್ಮರು. ಸಜೀವವಾಗಿರುವ ಶರೀರದಲ್ಲಿ ಈ ಎರಡು ಆತ್ಮಗಳು ತಪ್ಪದೆ ಇರುತ್ತವೆ. ಇದರಲ್ಲಿ ಜೀವಾತ್ಮ ಅಜ್ಞಾನಿಯಾದಾಗ, ಆತ್ಮ ಸರ್ವವು ತಿಳಿದ ಜ್ಞಾನಿ ಎಂದು ಮೊದಲಿನ ಪ್ರಶ್ನೆಯ ಉತ್ತರದಲ್ಲಿ ಸಹ ಹೇಳಿಕೊಂಡಿದ್ದೇವೆ. ಶರೀರದಲ್ಲಿನ ಜೀವಾತ್ಮ ಎಷ್ಟು ಜ್ಞಾನಿಯಾದರೂ ಯಾವುದೋ ಒಂದು ವಿಷಯದಲ್ಲಿ ಆತ್ಮಗಿಂತಲೂ ಕಡಿಮೆಯಾಗಿ ತಿಳಿದಿರುವುದರಿಂದ ಆತ್ಮ ಪಕ್ಕದಲ್ಲಿ ಜೀವಾತ್ಮ ಅಜ್ಞಾನಿಯಾಗಿಯೇ ಇದೆ. ಹಾಗೇ ಜೀವಾತ್ಮ ಪಕ್ಕದಲ್ಲಿ ಆತ್ಮ ಜ್ಞಾನಿಯಾಗಿ ಇದೆ. ಈ ವಿಧವಾಗಿ ಶರೀರದಲ್ಲಿ ಜ್ಞಾನಿ ಅಜ್ಞಾನಿ ಇಬ್ಬರು ಇದ್ದಾರೆಂದು ಹೇಳಬಹುದು.

**1023. (3) ಶರೀರದಲ್ಲಿ ರೋಗ ಬಂದಾಗ ರೋಗಗ್ರಸ್ಥನು ಯಾರು?**

ಉ. ಆತ್ಮ.

**ವಿವರ :** ಶರೀರದಲ್ಲಿ ರೋಗ ಬಂದಾಗ ರೋಗ ಶರೀರವೆಲ್ಲಾ ವ್ಯಾಪಿಸಿರುತ್ತದೆ. ಹಾಗಲ್ಲದೆ ಹೋದರೆ ಕೆಲವು ರೋಗಗಳು ಶರೀರದಲ್ಲಿ ಸ್ವಲ್ಪ ಭಾಗಗಳ ವರೆಗೇ ವ್ಯಾಪಿಸಿರುತ್ತವೆ. ಜ್ವರ ಮೊದಲಾದ ಕೆಲವು ರೋಗಗಳು ಶರೀರವೆಲ್ಲಾ ಇರುವಾಗ, ಕ್ಷಯ ಕಾನ್ಸರ್ ಮೊದಲಾದವು ಶರೀರದಲ್ಲಿ ಸ್ವಲ್ಪ ಭಾಗದವರೆಗೆ ಮಾತ್ರ ಇರುತ್ತವೆ. ಶರೀರದಲ್ಲಿ ರೋಗಗ್ರಸ್ಥನು ಯಾರು ಎಂದಾಗ ಶರೀರದಲ್ಲಿರುವ ಆತ್ಮ ಜೀವಾತ್ಮಗಳಿಗೇ ಆ ಪ್ರಶ್ನೆ ಅನ್ವಯಿಸುತ್ತದೆ. ಜೀವಾತ್ಮ ತಲೆಯಲ್ಲಿರುವ ಚತುರ್ ಚಕ್ರ ಸಮುದಾಯದಲ್ಲಿ ಕೆಳಗಿನ ಚಕ್ರವಾದ ಗುಣಚಕ್ರದಲ್ಲಿ ನಿವಾಸಿಸುತ್ತಿದೆ. ಗುಣಚಕ್ರದೊಳಗೆ ಯೋಗ ಹೊರತು ರೋಗ ಸೇರದು. ಆದ್ದರಿಂದ ಜೀವಾತ್ಮ ಎಂದಿಗೂ ರೋಗಗ್ರಸ್ಥನಲ್ಲ. ಶರೀರವೆಲ್ಲಾ ವ್ಯಾಪಿಸಿರುವುದು ಆತ್ಮ. ಆದ್ದರಿಂದ ಶರೀರವೆಲ್ಲಾ ರೋಗಬಂದರೂ ಅಥವಾ ಶರೀರದಲ್ಲಿ ಒಂದು ಭಾಗಕ್ಕೆ ರೋಗಬಂದರೂ ರೋಗ ಹೊಂದುವುದು ಆತ್ಮವೇ ಆದ್ದರಿಂದ ರೋಗಗ್ರಸ್ಥನು ಆತ್ಮನೇಯೆಂದು ಹೇಳಬಹುದು. ರೋಗವೊಂದರ ಬಾಧೆಯನ್ನು ಅನುಭವಿಸುವವನು ಜೀವಾತ್ಮ. ರೋಗವೊಂದರ ಬಾಧೆಯನ್ನು ಅನುಭವಿಸದೆ ಇರುವವನು ಆತ್ಮ.

**1024. (4) ಶರೀರದಲ್ಲಿ ಯೋಗಬಂದಾಗ ಯೋಗಗ್ರಸ್ಥನು ಯಾರು?**

ಉ. ಜೀವಾತ್ಮ.

**ವಿವರ :** ಶರೀರದಲ್ಲಿ ಯೋಗಕ್ಕೂ ರೋಗಕ್ಕೂ ಎಷ್ಟೋ ವ್ಯತ್ಯಾಸವಿದೆ. ರೋಗ ಆತ್ಮಕ್ಕೆ ಮಾತ್ರ ಬರುತ್ತದೆ. ಯೋಗ ಜೀವಾತ್ಮನಿಗೆ ಮಾತ್ರವೇ ಬರುತ್ತದೆ. ಯೋಗ ಗುಣಚಕ್ರದಲ್ಲಿ ಜೀವಾತ್ಮ ಹತ್ತಿರವೇ ಹುಟ್ಟುತ್ತಿದೆ. ಆದ್ದರಿಂದ ಯೋಗವನ್ನು ಜೀವಾತ್ಮನೇ ಹೊಂದುವನು. ಜೀವಾತ್ಮನನ್ನು ಅಂಟಿಕೊಂಡಿರುವ ಬುದ್ಧಿಗೆ ಯೋಗ ತಿಳಿಯುವುದರಿಂದ ಬುದ್ಧಿಯೊಂದಿಗೆ ಜೀವಾತ್ಮನು ಯೋಗಗ್ರಸ್ಥನು ಆಗುತ್ತಿದ್ದಾನೆ. ಇಲ್ಲ ಯೋಗಗ್ರಸ್ಥನು ಯಾರು ಎನ್ನುವುದರಿಂದ ಬುದ್ಧಿ ಪುರುಷನು ಅಲ್ಲ ಆದ್ದರಿಂದ ಪುರುಷನಾದ ಜೀವಾತ್ಮನನ್ನು ಯೋಗಗ್ರಸ್ಥನು ಎನ್ನಬೇಕಾಗಿ ಬಂದಿದೆ. ರೋಗವೊಂದರ ಅನುಭವವನ್ನು ಹಾಗೇ ಯೋಗವೊಂದರ ಅನುಭವವನ್ನು ಬುದ್ಧಿ ಜೀವಾತ್ಮನಿಗೇ ತಿಳಿಸುತ್ತಿದೆ. ಆದ್ದರಿಂದ ರೋಗವಾಗಲಿ, ಯೋಗವಾಗಲಿ ಅನುಭವಿಸುವವನು ಜೀವಾತ್ಮನೇ. ಇತ್ತ ಶರೀರವೆಲ್ಲದಕ್ಕೂ ಅತ್ತ ಜೀವಾತ್ಮನಿಗು ಅನುಸಂಧಾನವಾದದ್ದು ಬುದ್ಧಿ. ಬುದ್ಧಿ ಯೊಂದರ ಕೆಲಸ ಜೀವಾತ್ಮನಿಗೆ ಅನುಭೂತಿಯನ್ನು ಒದಗಿಸುವುದೇ. ಆದ್ದರಿಂದ ಇತ್ತ ಶರೀರದಲ್ಲಿನ ಅತ್ತ ಗುಣಚಕ್ರದಲ್ಲಿನ

ಅನುಭವಗಳನ್ನು ಬುದ್ಧಿ ಜೀವಾತ್ಮನಿಗೆ ತಿಳಿಸುತ್ತಿದೆ. ಯೋಗ ಬಂದಿರುವುದು ಗುಣಚಕ್ರದಲ್ಲೇ ಆದ್ದರಿಂದ ಯೋಗಗ್ರಸ್ಥನು ಜೀವಾತ್ಮನೇ ಆಗುತ್ತಿದ್ದಾನೆ.

**1025. (5) ಶರೀರದಲ್ಲಿ ಉಸಿರನ್ನು ಯಾರು ಊದಿದ್ದಾರೆ?**

ಉ. ಆತ್ಮ.

**ವಿವರ :** ಶರೀರದಲ್ಲಿ ಇರುವುದು ಜೀವಾತ್ಮ ಆತ್ಮವೆ, ಆದರೂ ಜೀವಾತ್ಮ ಯಾವ ಕೆಲಸ ಮಾಡದೆ ಕೇವಲ ಕಷ್ಟ ಸುಖ ಅನುಭವಗಳನ್ನು ಮಾತ್ರ ಅನುಭವಿಸುತ್ತಿರುವನು. ಶರೀರದಲ್ಲಿ ಎಲ್ಲಾ ಕೆಲಸಗಳು ಮಾಡುತ್ತಿರುವುದು ಒಂದೇ ಒಂದು ಆತ್ಮ. ಆತ್ಮ ಶರೀರ ಅವಯವಗಳನ್ನು ಕದಲಿಸಿ ಕೆಲಸ ಮಾಡಿಸುತ್ತಿದೆ. ಶರೀರದೊಳಗಿನ ಶ್ವಾಸಕೋಶಗಳನ್ನು ಕದಲಿಸಿ ಶ್ವಾಸವನ್ನು ಆಡುವಹಾಗೆ ಮಾಡುತ್ತಿರುವುದು ಆತ್ಮವೇ. ಆದ್ದರಿಂದ ಶರೀರದಲ್ಲಿ ಉಸಿರನ್ನು ಊದುವವನು ಆತ್ಮನೆಂದು ಹೇಳಬಹುದು. ಶರೀರದಲ್ಲಿನ ಎಲ್ಲಾ ಕೆಲಸಗಳನ್ನು ಆತ್ಮೇ ಮಾಡುತ್ತಿದೆ, ಮಾಡಿಸುತ್ತಿದೆ. ಅನುಭವಿಸುವುದು ಹೊರತು ಯಾವ ಕೆಲಸ ಮಾಡದವನು ಜೀವಾತ್ಮವೇ.

**1026. (6) ಶರೀರದ ಉಸಿರಿನಲ್ಲಿ ಯಾವ ಆತ್ಮ ಇದೆ?**

ಉ. ಪರಮಾತ್ಮ.

**ವಿವರ :** ಉಸಿರು ಶರೀರಕ್ಕೆ ಬೇರೆಯಾಗಿ ಇದೆ. ಆತ್ಮ ಶರೀರದಲ್ಲಿನ ಶ್ವಾಸಕೋಶಗಳನ್ನು ಅಮುಕಿದಾಗ ಅದರಲ್ಲಿನ ಗಾಳಿ ಹೊರಗೆ ತಳ್ಳಲ್ಪಡುತ್ತದೆ. ಶ್ವಾಸಕೋಶಗಳು ಬೇರೆ, ಗಾಳಿ ಬೇರೆ ಶ್ವಾಸಕೋಶಗಳಲ್ಲಿ ಆತ್ಮ ವ್ಯಾಪಿಸಿದೆ. ಗಾಳಿ ಶರೀರವಲ್ಲ ಆದ್ದರಿಂದ ಉಸಿರಿನಲ್ಲಿ ಆತ್ಮವಿಲ್ಲ. ಉಸಿರಿನಲ್ಲಿ ಪ್ರಪಂಚವೆಲ್ಲಾ ವ್ಯಾಪಿಸಿರುವ ಪರಮಾತ್ಮ ಇದೆ. ಅಣುವಣುವಿನಲ್ಲು ಪರಮಾತ್ಮ ಇದೆ ಆದ್ದರಿಂದ ಉಸಿರಿನಲ್ಲಿ ಪರಮಾತ್ಮವೆ ಇದೆಯೆಂದು ಹೇಳಬಹುದು.

**1027. (7) ಶರೀರದಲ್ಲಿ ಹಸಿವಿಗೆ ಆಹಾರ, ರೋಗಕ್ಕೆ ಔಷಧ ಎನ್ನುತ್ತಾರೆ. ಆಹಾರ ಯಾರಿಗೆ? ಔಷಧ ಯಾರಿಗೆ?**

ಉ. ಆತ್ಮನಿಗೆ.

**ವಿವರ :** ಹಸಿವು ಹೊಟ್ಟೆಯಲ್ಲಿ ಹುಟ್ಟುತ್ತಿದೆ. ಆದ್ದರಿಂದ ಶರೀರವೆಲ್ಲಾ ವ್ಯಾಪಿಸಿರುವ ಆತ್ಮನಿಗೇ ಹಸಿವು ಎಂದು ಹೇಳಬಹುದು. ಹಾಗೇ ರೋಗವು ಸಹ ಶರೀರಕ್ಕೆ ಬರುತ್ತಿದೆ

ಆದ್ದರಿಂದ ರೋಗಗ್ರಸ್ಥನು ಆತ್ಮನೇ ಆಗುತ್ತಿದ್ದಾನೆ. ಆದ್ದರಿಂದ ಹಸಿವಿಗೆ ಹಾಕುವ ಆಹಾರವಾಗಲಿ, ರೋಗಕ್ಕೆ ಹಾಕುವ ಔಷಧಿಯಾಗಲಿ ಎರಡೂ ಆತ್ಮನಿಗೇ ಎಂದು ಹೇಳಬಹುದು. ಹಸಿವಿಗು, ರೋಗಕ್ಕೂ ಬಾಧೆಪಡುವವನು ಜೀವಾತ್ಮನೇ ಆದರೂ ಆಹಾರ, ಔಷಧ ಆತ್ಮಕ್ಕೇ ಉಪಯೋಗವಾಗುತ್ತವೆ.

**1028. (8) ಶರೀರದಲ್ಲಿ ರೋಗಕ್ಕೆ ಔಷಧಿ ಇದ್ದಹಾಗೆ, ಯೋಗಕ್ಕೂ ಔಷಧವೇನಾದರೂ ಇದೆಯಾ? ಇದ್ದರೇ ಯಾವುದು?**

ಉ. ಇದೆ. ಮಾಯೆ.

**ವಿವರ :** ಶರೀರದಲ್ಲಿ ರೋಗವನ್ನು ಇಲ್ಲದಂತೆ ಮಾಡುವುದು ಔಷಧ. ಇದನ್ನನುಸರಿಸಿ ರೋಗಕ್ಕೆ ವಿರುದ್ಧವಾಗಿ ಔಷಧ ಕೆಲಸ ಮಾಡುತ್ತಿದೆಯೆಂದು ತಿಳಿಯುತ್ತಿದೆ. ಆ ವಿಧವಾಗಿಯೇ ಯೋಗಕ್ಕೆ ವಿರುದ್ಧವಾಗಿ ಮಾಯೆ ಕೆಲಸಮಾಡುತ್ತಿದೆ. ಶರೀರದಲ್ಲಿ ಗುಣಗಳ ರೂಪದಲ್ಲಿರುವ ಮಾಯೆ ಯೋಗವನ್ನು ಜೀವಾತ್ಮನು ಕಳೆದುಕೊಳ್ಳುವಹಾಗೆ ಮಾಡುತ್ತಿದೆ. ಆದ್ದರಿಂದ ಯೋಗಕ್ಕೆ ಔಷಧ ಮಾಯೆ ಎಂದು ಹೇಳಬೇಕಾಗಿ ಬಂದಿದೆ.

**1029. (9) ಶರೀರದಲ್ಲಿ ಶಬ್ದವೊಂದರ ಹುಟ್ಟುವಿಕೆ ಕಂಠದಲ್ಲಿಯಾ, ಹೊಟ್ಟೆಯಲ್ಲಿಯಾ, ಕಾಲಿನಲ್ಲಾ, ಬೆರಳಿನಲ್ಲಾ, ಮೂಗಿನಲ್ಲಾ, ಮೂತಿಯಲ್ಲಾ ಎಲ್ಲಿ?**

ಉ. ಶರೀರ ಭಾಗದಲ್ಲಿಯೇ ಶಬ್ಧ ಹುಟ್ಟುತ್ತಿದೆ.

**ವಿವರ :** ಆತ್ಮ ಶರೀರವನ್ನು ಕದಲಿಸುತ್ತಿರುವುದರಿಂದ ಶರೀರದಲ್ಲಿ ಕಾರ್ಯಗಳು ನಡೆಯುತ್ತಿವೆ. ಆತ್ಮಶಕ್ತಿಯಿಂದ ಶರೀರ ನಡೆಯುವಾಗ ಕಾಲು ಕೀಲುಗಳಲ್ಲಿ ಶಬ್ದ ಬರುತ್ತಿದೆ. ಹಾಗೇ ಜೀರ್ಣ ಮಾಡುವಾಗ ಹೊಟ್ಟೆಯಲ್ಲಿ ಶಬ್ದ ಬರುತ್ತಿದೆ. ಮಾತನಾಡುವಾಗ ಕಂಠದಲ್ಲಿ ಶಬ್ದ ಬರುತ್ತಿದೆ. ಕೆಲಸ ಮಾಡುವಾಗ ಕೀಲುಗಳಿಂದ ಬೆರಳುಗಳಲ್ಲಿ ಶಬ್ದ ಹುಟ್ಟುತ್ತಿದೆ. ಶ್ವಾಸ ಆಡುವಾಗ ಮೂಗಿನಲ್ಲಿಯು, ಅನ್ನ ತಿನ್ನುವಾಗ, ಸಿಳ್ಳೆ ಹಾಕುವಾಗ ಬಾಯಿನಲ್ಲೂ ಶಬ್ದ ಬರುತ್ತಿದೆ. ಆತ್ಮ ಶಕ್ತಿ ಯಿಂದಲೇ ಆಯಾ ಸ್ಥಳಗಳಲ್ಲಿ ಶಬ್ದ ಹುಟ್ಟುತ್ತಿದೆ. ಶಬ್ದ ಎಲ್ಲಿ ಹುಟ್ಟುತ್ತಿದೆಯೋ ಅದೇ ಅದರ ಹುಟ್ಟುವ ಸ್ಥಳವೆಂದು ಹೇಳಬಹುದು. ಡೋಲನ್ನು ಹೊಡೆಯುವಾಗ ಶಬ್ದ ಡೋಲಿನಹತ್ತಿರ ಹುಟ್ಟುತ್ತಿದೆ. ಡೋಲನ್ನು ಹೊಡೆಯುವ ಕೈಯಲ್ಲಿ ಶಬ್ದ ಹುಟ್ಟಲಿಲ್ಲ. ಶಬ್ದವೊಂದರ ಹುಟ್ಟುವಿಕೆ ಕೈಯ್ಯಾ, ಡೋಲಾ ಎಂದರೆ ಡೋಲೇ ಎಂದು ಹೇಗೆ ಹೇಳುತ್ತೀವೋ, ಹಾಗೇ ಆತ್ಮ ಶರೀರವನ್ನು ಕದಲಿಸಿ ಶರೀರದಲ್ಲೇ ಶಬ್ದ ಹುಟ್ಟುವುದಕ್ಕೆ ಕಾರಣವಾದರೂ ಆತ್ಮನಲ್ಲಿ ಶಬ್ದ ಹುಟ್ಟಲಿಲ್ಲ. ಶರೀರ ಭಾಗದಲ್ಲೇ ಶಬ್ದ

ಹುಟ್ಟುತ್ತಿದೆ. ಆದ್ದರಿಂದಲೇ ಶರೀರ ಭಾಗಗಳಲ್ಲೇ ಶಬ್ದವೊಂದರ ಹುಟ್ಟುವಿಕೆ ಎಂದು ಹೇಳಬೇಕು.

**1030. (10) ಶರೀರದಲ್ಲಿ ಮರಣಿಸಿದಾಗ ಹೋಗುವವು ಪ್ರಕೃತಿಯಾ? ಆತ್ಮಗಳಾ? ಯಾವುವು ಹೋಗುತ್ತವೆ?**

ಉ. ಪ್ರಕೃತಿ, ಆತ್ಮಗಳು.

**ವಿವರ :** ಮರಣಿಸಿದಾಗ ಶರೀರದಿಂದ ಹೋಗುವವು ಬ್ರಹ್ಮ, ಕಾಲ, ಕರ್ಮ, ಗುಣಚಕ್ರ ಸಮುದಾಯ. ಈ ನಾಲ್ಕು ಚಕ್ರಗಳಲ್ಲಿ ಕೆಳಗೆ ಎರಡು ಚಕ್ರಗಳಲ್ಲಿ ಮುಖ್ಯವಾದ ಸಾರಾಂಶವಿರುತ್ತದೆ. ಕೆಳಗಿನ ಚಕ್ರವಾದ ಗುಣಚಕ್ರದಲ್ಲಿ ಪ್ರಕೃತಿ ಜನಿತವಾದ ಗುಣಗಳು ಇವೆ. ಮತ್ತು ಜೀವಾತ್ಮ ಸಹ ಇದೆ. ಹಾಗೇ ನಾಲ್ಕು ಚಕ್ರಗಳಿಗೆ ಇರಸಾಗಿ ಆತ್ಮ ಸಹ ಇದೆ. ಆದ್ದರಿಂದ ಮರಣದಲ್ಲಿ ಗುಣಮಯವಾದ ಪ್ರಕೃತಿ ಮತ್ತು ಜೀವಾತ್ಮ ಮತ್ತು ಆತ್ಮಗಳು ಹೋಗುತ್ತಿವೆಯೆಂದು ಹೇಳಬಹುದು.

## ಜ್ಞಾನ ಪರೀಕ್ಷೆ

**ದಿನಾಂಕ 04–04–2016 – ತ್ರೈತ ಶಕ–37– ಚಿನ್ನಪೊಡಮಲ (ತಾಡಿಪತ್ರಿ ಮಂ॥)**

---

***ಸೂಚನೆ :– ಪ್ರಶ್ನೆಗೆ ಸರಿಯಾದ ಉತ್ತರವನ್ನು ಒಂದು ಮಾತಲ್ಲಾಗಲೀ, ಒಂದು ವಾಕ್ಯದಲ್ಲಾಗಲೀ ಬರೆಯಬೇಕು.***

ಸಹಜವಾಗಿ ಪ್ರತಿ ಮನುಷ್ಯ ತನ್ನನ್ನು ತಾನು ದೊಡ್ಡದಾಗಿ ತಿಳಿದುಕೊಳ್ಳುತ್ತಿರುತ್ತಾನೆ. ಪ್ರಪಂಚ ಜ್ಞಾನ ವಿಷಯದಲ್ಲಾಗಲೀ, ಪರಮಾತ್ಮ ಜ್ಞಾನ ವಿಷಯದಲ್ಲಾಗಲೀ ಇತರರಿಗಿಂತ ತಾನು ತಿಳಿದವನೆಂದು ಅಂದುಕೊಳ್ಳುತ್ತಿರುತ್ತಾನೆ. ಜ್ಞಾನ ಧನವಂಥಾದ್ದು. ಆದ್ದರಿಂದ ಹಿರಿಯರು ಜ್ಞಾನಧನವೆಂದು ಜ್ಞಾನವನ್ನು ಧನದೊಂದಿಗೆ ಸಮಾನವಾಗಿ ಹೋಲಿಸಿದ್ದಾರೆ. ಪ್ರಪಂಚ ಧನ ಎಷ್ಟಿದ್ದರೂ ತನ್ನ ಹತ್ತಿರ ಧನವಿದೆಯೆಂದು ಹೇಳಿಕೊಳ್ಳದ ಮನುಷ್ಯ, ಜ್ಞಾನಧನ ಕಿಂಚಿತ್ತಾದರೂ ಇಲ್ಲದಿದ್ದರೂ ತನ್ನ ಹತ್ತಿರ ಎಲ್ಲರಿಗಿಂತ ಹೆಚ್ಚಾಗಿ ಇದೆಯೆಂದು ಹೇಳಿಕೊಳ್ಳುತ್ತಿರುತ್ತಾನೆ. ಪ್ರಪಂಚ ಧನ ಇದ್ದರೂ ಇಲ್ಲವೆಂದು ಹೇಳುವ ಮನುಷ್ಯ, ಜ್ಞಾನ ಧನವನ್ನು ಇಲ್ಲದಿದ್ದರೂ ಇದೆಯೆಂದು ಹೇಳಿಕೊಳ್ಳುವುದು ನಡೆಯುತ್ತಿರುವ ವಿಷಯವೇ.

ಕೆಲವರು ದೇವರು ಹೇಳಿದ ಜ್ಞಾನವನ್ನು ಬದಲಾಯಿಸಿ, ತಮ್ಮ ಸ್ವಂತ ಭಾವನೆಗಳನ್ನು ದೇವರ ಭಾವನೆಗಳಾಗಿ ಹೇಳುತ್ತಾ, ಸಮಾಜದಲ್ಲಿ ದೊಡ್ಡ ಜ್ಞಾನಿಗಳಾಗಿ ಚಲಾವಣೆ ಆಗುತ್ತಿದ್ದಾರೆ. ವಾಸ್ತವಕ್ಕೆ ಅವರ ಹತ್ತಿರ ಇರುವುದು ಜ್ಞಾನವಲ್ಲದಿದ್ದರೂ, ತಮ್ಮದು ಜ್ಞಾನವೇ ಎಂದು ಇತರರನ್ನು ನಂಬಿಸಿ ಮೋಸಮಾಡುತ್ತಿರುವರು. ದೈವ ಜ್ಞಾನವನ್ನು ಕಬ್ಜಾ ಮಾಡಿದವರು ಭೂಮಿಮೇಲೆ ಎಲ್ಲ ಸಮಾಜಗಳಲ್ಲಿ ಇದ್ದಾರೆ. ಜ್ಞಾನವನ್ನು ಕಬ್ಜಾ ಮಾಡಿದವರು ಯಾರೂ ಗುರುತು ಹಿಡಿಯಲಾರದ ದೊಡ್ಡ ಮೋಸಗಾರರಂತೆ ಇದ್ದಾರೆ. ಆದರೇ ಕೆಲವರು ಒಬ್ಬರ ಹತ್ತಿರವಿರುವ ಜ್ಞಾನವನ್ನು ಹೈಜಾಕ್ (ಅಪಹರಣ) ಮಾಡಿ, ಇತರರು ಹೇಳುವ ಜ್ಞಾನವನ್ನು ತಮ್ಮ ಜ್ಞಾನವೇ ಎಂದು, ಹೊರಗಿನ ಸಮಾಜದಲ್ಲಿ ದೊಡ್ಡ ಜ್ಞಾನಿಗಳಾಗಿ ಚಲಾವಣೆ ಆಗುತ್ತಿದ್ದಾರೆ. ವಾಸ್ತವಕ್ಕೆ ಅವರ ಹತ್ತಿರ ಜ್ಞಾನವಿಲ್ಲದಿದ್ದರೂ, ತಾವೂ ಸಹ ಗುರುಗಳಾಗಿ ಚಲಾವಣೆ ಆಗಬೇಕೆಂಬ ಉದ್ದೇಶದಿಂದ, ಗುರುವು ಜ್ಞಾನವನ್ನೇ ಹೈಜಾಕ್ ಮಾಡಿ ಗುರುವಿಗಿಂತ ತಮ್ಮನ್ನೇ ದೊಡ್ಡದಾಗಿ ಪ್ರಚಾರ ಮಾಡಿಕೊಳ್ಳುತ್ತಿರುತ್ತಾರೆ.

ಮನುಷ್ಯರಿಗಾಗಿ ದೇವರು ಜ್ಞಾನವನ್ನು ಗ್ರಂಥರೂಪದಲ್ಲಿ ಹೇಳಿದರೇ ಅದನ್ನು ಕಬ್ಜಾ (ಸ್ವಾಧೀನ) ಮಾಡಿ, ದೇವರ ಗ್ರಂಥಕ್ಕಿಂತ ತಮ್ಮನ್ನೇ ದೊಡ್ಡದಾಗಿ ಪ್ರಕಟಿಸಿಕೊಂಡ ಸಮಾಜದ ಹಿರಿಯರು ಕೆಲವರಿರುವಾಗ, ಕೆಲವು ಕಡೆ ಜ್ಞಾನವನ್ನು ಹೇಳುವವರ ಹತ್ತಿರ ಸೇರಿದ ಕೆಲವರು, ಗುರುಗಳ ಜ್ಞಾನವನ್ನು ಹೈಜಾಕ್ ಮಾಡಿ ತಮ್ಮನ್ನು ಗುರುವಿಗಿಂತ ದೊಡ್ಡದಾಗಿ ಪ್ರಕಟಿಸಿಕೊಂಡವರೂ ಸಹ ಇದ್ದಾರೆ. ಈ ರೀತಿ ಯಾರಿಗೆ ಅವರು ನಾವು ದೊಡ್ಡ ಜ್ಞಾನಿಗಳು ಎಂಬ ಉದ್ದೇಶದಲ್ಲಿ ಇದ್ದಾರೆಂದು ತಿಳಿದ ದೇವರು ಅವರ ನಿಜ ಸ್ವರೂಪ ಅವರಿಗೇ ಅರ್ಥವಾಗುವಂತೆ, ಅವರು ಜ್ಞಾನದಲ್ಲಿ ಯಾವ ಸ್ಥಾನದಲ್ಲಿ ಇದ್ದಾರೋ ತಿಳಿಯುವಂತೆ ಅಲ್ಲಲ್ಲಿ ಪರೀಕ್ಷೆಗೆ ಗುರಿಮಾಡಿ ಅವರದು ಅವರಿಗೇ ಅರ್ಥವಾಗುವಂತೆ ಮಾಡುತ್ತಿರುತ್ತಾನೆ. ದೇವರು ಮನುಷ್ಯನನ್ನು ಸಮಸ್ಯೆಗಳ ರೂಪದಲ್ಲಿ ಪರೀಕ್ಷಿಸುತ್ತಿರುತ್ತಾನೆ. **ದೇವರ ಜ್ಞಾನವನ್ನು ದೇವರು ಸಮಸ್ಯೆಗಳ ರೂಪದಲ್ಲಿ ಪರೀಕ್ಷಿಸಿ ಯಾರ ಸಾಮರ್ಥ್ಯ ಎಷ್ಟಿದೆಯೋ ಅವರಿಗೇ ಅರ್ಥವಾಗುವಂತೆ ಮಾಡುತ್ತಿರುವನು.** ಅದು ದೇವರ ಕೆಲಸವಾದರೇ ಒಬ್ಬ ಮನುಷ್ಯನಾಗಿ ನಾವು ಪ್ರಶ್ನೆಗಳ ರೂಪದಲ್ಲಿ ಪ್ರಶ್ನಿಸಿ ಅದರಲ್ಲಿ ನೀವು ಬರೆದ ಉತ್ತರಗಳನ್ನನುಸರಿಸಿ ನಿಮಗೆ ಜ್ಞಾನ ಎಷ್ಟಿದೆಯೋ ತಿಳಿಯುವಂತೆ ಮಾಡುತ್ತಿದ್ದೇವೆ. ಇಲ್ಲಿ ಪ್ರಶ್ನಿಸುವವರು ನಾವೇ ಆಗುವುದರಿಂದ ಅವುಗಳಿಗೆ ಸರಿಯಾದ ಉತ್ತರವನ್ನು ಹೇಳಬೇಕಾದ ಜವಾಬ್ದಾರಿಯೂ ಸಹ ನಮಗಿದೆ. ಆದ್ದರಿಂದ ಇಲ್ಲಿ ಜ್ಞಾನ ಪರೀಕ್ಷೆಯಲ್ಲಿ ಪ್ರಶ್ನಿಸಿದ ನಾವು ಆ ಪ್ರಶ್ನೆಗಳಿಗೆ ಉತ್ತರಗಳನ್ನು ಸಹ ಹೊಂದಿಸಿ ಬರೆಯುತ್ತಿದ್ದೇವೆ.

ಉತ್ತರಗಳನ್ನು ಹೇಳಬೇಕಾಗಿರುವುದು ನಾವೆಂದು ನಮಗಿಷ್ಟ ಬಂದ ಉತ್ತರಗಳನ್ನು ನಾವು ಹೇಳಲಿಲ್ಲ. ಪ್ರಶ್ನೆಗೆ ಸರಿಯಾದ ಉತ್ತರ ಇರುವಂತೆ, ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಒಳಗೊಂಡಿರುವಂತೆ, ದೈವಜ್ಞಾನಕ್ಕೆ ಎಲ್ಲಿಯೂ ವಿರುದ್ಧತೆ ಇಲ್ಲದಂತೆ ಉತ್ತರಗಳನ್ನು ಬರೆಯುವುದು ನಡೆದಿದೆ.

**1031. (1) ಯಾವ ಚರಿತ್ರೆಗೂ ತಿಳಿಯದವನು ಒಬ್ಬನು ಇದ್ದಾನೆ. ಆತನನ್ನು ಮೂರಕ್ಷರಗಳ ಹೆಸರಿನಿಂದ ಕರೆಯುತ್ತೇವೆ. ಎರಡಕ್ಷರಗಳ ಅರ್ಥದಿಂದ ಹೇಳಿಕೊಳ್ಳುತ್ತೇವೆ. ಆತನು ಯಾರು?**

**ಉತ್ತರ :–** ಈ ಪ್ರಶ್ನೆಗೆ ಉತ್ತರವನ್ನು ಬರೆದವರೆಲ್ಲರೂ 'ದೇವರು' ಎಂದು ಉತ್ತರವನ್ನು ಬರೆದಿದ್ದಾರೆ. ಚರಿತ್ರೆಗೆ ಸಿಗದವನು ಎಂದು ಅಂದಾಗ ಚರಿತ್ರೆ ಇಲ್ಲದವನು ದೇವರೇ ಅಲ್ಲವೆ! ಎಂದು ಎಲ್ಲರೂ ಅಂದುಕೊಳ್ಳುವುದು ನಡೆದಿದೆ. ಅಷ್ಟೇ ಅಲ್ಲದೇ ಮೂರಕ್ಷರಗಳ ಹೆಸರಿರುವವನು ಎಂದಾಗ ದೇವರೇ ಎಂದು ನಿರ್ಣಯಿಸಿಕೊಂಡು ಅದೇ ಉತ್ತರವನ್ನೇ ಎಲ್ಲರೂ ಬರೆಯುವುದು ನಡೆದಿದೆ. ಆದರೇ ಇಲ್ಲಿ ದೇವರಿಗೆ ಹೆಸರಿಲ್ಲ ಅಲ್ಲವೆ! ಎಂಬ ವಿಷಯವನ್ನು ಎಲ್ಲರೂ ಮರೆತುಹೋಗಿದ್ದಾರೆ. ವಾಸ್ತವಕ್ಕೆ ಹೆಸರು, ಆಕಾರ ಜೀವಿಗೂ, ಆತ್ಮಕ್ಕೂ ಎರಡಕ್ಕೇ ಇದೆಯೆಂದು, ದೇವರು ಹೆಸರು, ಆಕಾರ ಇಲ್ಲದವನೆಂದು ಮರೆತುಹೋಗಿದ್ದಾರೆ. ಆದ್ದರಿಂದ ಎಲ್ಲರೂ ತಪ್ಪು ಉತ್ತರವನ್ನು ಬರೆದಿದ್ದಾರೆ. ಈ ಪ್ರಶ್ನೆಗೆ ಅಸಲಾದ ಉತ್ತರವನ್ನು ಕೆಳಗಿನ ಪ್ಯಾರಾದಲ್ಲಿ ನೋಡಿರಿ.

ಜೀವಿಯು ಸೃಷ್ಟಿ ಆದಿಯಿಂದ ಇದ್ದಾನೆ. ಒಂದೇ ಜೀವಿಯು ಒಂದು ಬಾರಿ ಹುಟ್ಟಿ, ಒಂದು ಬಾರಿ ಸಾಯುತ್ತಾ ಜನ್ಮಗಳು ಬದಲಾಗುತ್ತಾ ಬರುತ್ತಿದ್ದಾನೆ. ಜನನ ಮರಣ ಗಮನದಲ್ಲಿ ಪ್ರಯಾಣಿಸುತ್ತಿರುವ ಜೀವಿಯು ಸೃಷ್ಟಿ ಆದಿಯಿಂದ ಇಂದಿನವರೆಗು ಇದ್ದಾನೆ. ಈ ದಿನ ಒಬ್ಬ ಮನುಷ್ಯನಾಗಿರುವ ನಾನಾಗಲೀ, ನೀನಾಗಲೀ ಮೊದಲಿನಿಂದ ಈ ಭೂಮಿ ಮೇಲೆಯೇ ಜೀವಿಸುತ್ತಿದ್ದೇವೆ. ಆದರೇ ಗತಕಾಲದಲ್ಲಿ ಭೂಮಿಯ ಮೇಲೆ ನಾವು ಜೀವಿಸಿದ ಚರಿತ್ರೆ ನಮಗಿದ್ದರೂ ಕಳೆದ ಚರಿತ್ರೆ ಅವರದು ಅವರಿಗೆ ತಿಳಿದಿಲ್ಲ. ಒಬ್ಬನದು ಮತ್ತೊಬ್ಬನಿಗೂ ತಿಳಿದಿಲ್ಲ. ಆದ್ದರಿಂದ ಜೀವಿಯನ್ನು ಚರಿತ್ರೆಗೆ ತಿಳಿಯದವನೆಂದು ಅನ್ನಬೇಕಾಯಿತು. ಒಬ್ಬ ಮನುಷ್ಯ (ಜೀವಿಯು) ಗತ ಜನ್ಮದಲ್ಲಿ ಎಷ್ಟೋ ಕಷ್ಟ ಸುಖಗಳನ್ನು ಅನುಭವಿಸಿದ್ದರೂ ಗತ ಜನ್ಮಗಳ ಅನುಭವಗಳನ್ನು ಯಾರೂ ಚರಿತ್ರೆಯಾಗಿ ಬರೆಯಲಾರನು. ಸ್ವಲ್ಪವಾದರೂ ಊಹಿಸಿಕೊಂಡು ಸಹ ಹೀಗೆ ನಡೆದಿದೆ ಎಂದು ಹೇಳಲಾರನು. ಈ ರೀತಿ ಜೀವಿಯು ಚರಿತ್ರೆಗೆ ತಿಳಿಯದವನೇ ಅಲ್ಲದೆ ಆತನು ಆತ್ಮ ಶಕ್ತಿಯಿಂದ ಕೂಡಿಕೊಂಡು ಜೀವಿಸುತ್ತಿದ್ದಾನೆ. ಆದ್ದರಿಂದ ಎರಡಕ್ಷರಗಳ ಅರ್ಥದಿಂದ ಜೀವ+ಆತ್ಮ=ಜೀವಾತ್ಮ ಎಂದು ಹೇಳಲ್ಪಡುತ್ತಿದ್ದಾನೆ. ಪ್ರತಿ ಜೀವಿಯೊಂದಿಗೂ ಆತ್ಮ ಕೂಟಸ್ಥನಾಗಿರುವುದರಿಂದ ಪ್ರತಿ

ಜೀವಿಯನ್ನೂ ಜೀವಾತ್ಮ ಎಂದು ಕರೆಯಬಹುದು. ಅಷ್ಟೇ ಅಲ್ಲದೇ ಪ್ರತಿ ಶರೀರದಲ್ಲಿನ ಜೀವಿಯು ಜೀವಾತ್ಮನಾಗಿ ಕರೆಯಲ್ಪಟ್ಟರೂ, ಜೀವಿಯಾಗಿ ಕರೆಯಲ್ಪಟ್ಟರೂ, ಆತನು ಮೂರಕ್ಷರಗಳ ಹೆಸರಿನಿಂದಲೇ ಕರೆಯಲ್ಪಡುತ್ತಿದ್ದಾನೆ. ಆದ್ದರಿಂದ ಈ ಪ್ರಶ್ನೆಯಲ್ಲಿ ಚರಿತ್ರೆಗೆ ತಿಳಿಯದವನನ್ನು ಮೂರಕ್ಷರಗಳ ಹೆಸರಿನಿಂದ ಕರೆಯಲಾಗುವವನು ಎಂದು ಕೇಳಿದ್ದೇವೆ. ಈ ಪ್ರಶ್ನೆಗೆ ಎಲ್ಲ ವಿಧಗಳಲ್ಲಿ ಸರಿಯಾದ ಉತ್ತರ 'ಜೀವಿಯು' ಎಂದು ಬರೆಯಬೇಕು. ಆದರೇ ಎಲ್ಲರೂ 'ದೇವರು' ಎಂದು ಬರೆದಿರುವುದರಿಂದ ಪೂರ್ತಿ ತಪ್ಪು ಉತ್ತರವಾಗಿ ಲೆಕ್ಕಿಸುವುದು ನಡೆದಿದೆ. ಈ ಪರೀಕ್ಷೆಯಲ್ಲಿ ಏಳು ನೂರು ಜನರು ಪಾಲ್ಗೊಂಡರೇ ಎಲ್ಲರೂ ತಪ್ಪು ಉತ್ತರವನ್ನು ಬರೆದು ಬರಬೇಕಾದ ಅಂಕೆಯನ್ನು ಕಳೆದುಕೊಂಡಿದ್ದಾರೆ.

**1032. (2) ಆಕಾಶವೆಂದು ಯಾವುದನ್ನು ಅನ್ನುತ್ತಾರೆ?**

**ಉತ್ತರ :–** ಈ ಪ್ರಶ್ನೆಗೆ ಬಹಳ ಜನರು ಸ್ವಲ್ಪವೂ ಬುದ್ಧಿಯಿಂದ ಆಲೋಚಿಸದೆ 'ಶೂನ್ಯ' ಎಂದು ಬರೆದಿದ್ದಾರೆ. 'ಗಗನಂ ಶೂನ್ಯಂ' ಎಂಬ ಮಾತಿನ ಪ್ರಕಾರ ನೂರಕ್ಕೆ ತೊಂಭತ್ತು ಮಂದಿ ಶೂನ್ಯವೆಂಬ ಉತ್ತರವನ್ನು ಬರೆದಿದ್ದಾರೆ. ಶೂನ್ಯ ಎನ್ನುವುದರಲ್ಲಿ ತಪ್ಪಿಲ್ಲ ಆದರೇ, ಇಲ್ಲಿ ಕೇಳಿದ ವಿಧಾನಕ್ಕೆ ಹೇಳಿದ ಸಮಾಧಾನ ಸರಿಯಾದುದಲ್ಲ. ಇಲ್ಲಿ 'ಆಕಾಶವೆಂದು ಯಾವುದನ್ನು ಅನ್ನುತ್ತೇವೆ' ಎಂದು ಕೇಳುವುದು ನಡೆದಿದೆ. ಒಂದು ವೇಳೆ ಯಾವುದನ್ನು ಆಕಾಶವೆಂದು, ಆಕಾಶವನ್ನು ಹಿಂದೆ ಹೇಳಿದ್ದರೆ ಶೂನ್ಯವೆಂಬ ಉತ್ತರ ಸ್ವಲ್ಪಮಟ್ಟಿಗೆ ಸರಿಹೋಗುತ್ತಿತ್ತು. ಆದರೆ ಇಲ್ಲಿ ಪ್ರಶ್ನೆಯಲ್ಲಿ ಆಕಾಶವೆಂದು ಮೊದಲೇ ಹೇಳಿ ಯಾವುದನ್ನು ಎಂದು ಹಿಂದೆ ಹೇಳಿದ್ದೇವೆ. ಮೊದಲು ಹೇಳಿದರೂ, ಹಿಂದೆ ಹೇಳಿದರೂ ನೀವು ಕೇಳಿರುವುದು ಆಕಾಶವನ್ನೇ ಅಲ್ಲವೇ! ಎಂದು ಕೇಳಬಹುದು. ಆದರೇ ಮುಂದೆ ಹಿಂದೆ ಕೇಳುವುದರಲ್ಲಿ ಸ್ವಲ್ಪ ವ್ಯತ್ಯಾಸವಿದೆ. 'ಆಕಾಶವೆಂದು ಯಾವುದನ್ನು ಕರೆಯುತ್ತೇವೆ' ಎಂದು ಕೇಳಿದಾಗ ಬಣ್ಣ, ರೂಪ, ಪರಿಮಾಣವಿರುವ ಒಂದು ಪದಾರ್ಥವಾಗಿ ಹೇಳಬೇಕಾಗಿ ಬಂದಿದೆ. ಯಾವುದೋ ಒಂದು ಭಾಗವನ್ನು ತೋರಿಸಿ ಅದನ್ನು ಆಕಾಶವೆಂದು ಹೇಳಬೇಕಾಗಿದೆ. ಒಂದು ವೇಳೆ 'ಶೂನ್ಯ' ಎಂದು ಹೇಳಿದ ಉತ್ತರ, ಒಂದು ಆದ ಯಾವುದನ್ನೂ ತೋರಿಸುವುದಿಲ್ಲ. ಶೂನ್ಯ ಎಂದರೂ ಅದು ಎಲ್ಲಾಕಡೆ ವ್ಯಾಪಿಸಿರುವುದಾಗಿ ಬಣ್ಣ ರೂಪ ಇಲ್ಲದಿರುವುದಾಗಿದ್ದು ಒಂದು ವಸ್ತುವಾಗಿ ಅಥವಾ ಒಂದು ಪರಿಮಾಣವಿರುವ ಆಕಾರವಾಗಿ ಕಾಣಿಸುವುದಿಲ್ಲ. ಹಾಗಿರುವಾಗ 'ಯಾವುದನ್ನು' ಎಂಬ ಮಾತು ಸರಿಹೋಗುವುದಿಲ್ಲ. 'ಯಾವುದನ್ನು' ಎಂದಾಗ ಅದು ಗುರುತಿಸಲ್ಪಡುವುದಾಗಿ ಇರಬೇಕೆಂಬ ಸೂಕ್ಷ್ಮವನ್ನು ಈ ಪ್ರಶ್ನೆಯಲ್ಲಿ ಜ್ಞಾಪಕವಿಟ್ಟುಕೊಳ್ಳಬೇಕು.

ಆಕಾಶ ಪಂಚಭೂತಗಳಲ್ಲಿ ಮೊದಲನೆಯದು, ದೊಡ್ಡದು ಮತ್ತು ಎಲ್ಲಾಕಡೆಯೂ ವ್ಯಾಪಿಸಿರುವುದು. ಹಾಗಿರುವಾಗ ಒಂದು ಭಾಗವಾಗಿಯೋ, ಒಂದು ಆಕಾರವಾಗಿಯೋ ವರ್ಣಿಸಿ ಹೇಳುವುದಕ್ಕೆ ಅವಕಾಶವಿರುವುದಿಲ್ಲ. ಪ್ರಕೃತಿ ರೂಪದಲ್ಲಿರುವ ಪಂಚಭೂತಗಳು ಒಂದೊಂದು ಒಂದೊಂದು ವಿಧವಾದ ಕೆಲಸವನ್ನು ಮಾಡುತ್ತಿರುತ್ತವೆ. ಯಾವ ಕೆಲಸ ಇಲ್ಲದವನು ಕ್ರಿಯಾರಹಿತನು ದೇವರೊಬ್ಬನೇ. ಕೆಲಸ ಮಾಡುವುದು ಪ್ರಕೃತಿ ಆಗಿರುವುದರಿಂದ ಪ್ರಕೃತಿಯಲ್ಲಿನ ಐದು ಭಾಗಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎಲ್ಲವೂ ಅವು ಅವುಗಳ ಕೆಲಸಗಳನ್ನು ಮಾಡಬೇಕಾಗಿದೆ. ಭೂಮಿ ಬೆಳೆಗಳನ್ನು ಕೊಡುವುದೇ ಅಲ್ಲದೇ, ಭೂಕಂಪಗಳನ್ನು ಸೃಷ್ಟಿಸುತ್ತದೆ. ನೀರು ಪೈರಿಗೂ, ಮನುಷ್ಯರಿಗೂ ಒಂದು ಭಾಗವಾದ ಆಹಾರವಾಗಿ ಇರುವುದೇ ಅಲ್ಲದೆ ಪ್ರವಾಹಗಳನ್ನು, ಸುನಾಮೀಗಳನ್ನು ಸೃಷ್ಟಿಸುವುದು. ಅಗ್ನಿ ಆಹಾರವನ್ನು ಪಚನಮಾಡುವುದೇ ಅಲ್ಲದೆ ಆವೇಶದಿಂದ ಎಲ್ಲವನ್ನು ಸುಟ್ಟು ಹಾಕುತ್ತದೆ. ಗಾಳಿ ಎಲ್ಲ ಜೀವರಾಶಿಗಳಿಗೂ ಪ್ರಾಣವಾಯುವನ್ನು ಕೊಡುವುದಲ್ಲದೇ ಯಾವುದನ್ನಾದರೂ ನಾಶಮಾಡುತ್ತದೆ. ಇನ್ನೂ ಆಕಾಶ ಅಲ್ಲಲ್ಲಿ ಮೇಘವಾಗಿ ಬದಲಾಗಿ ಮಳೆಯನ್ನು ಸುರಿಸುವುದೇ ಅಲ್ಲದೆ ಮನುಷ್ಯನಿಗೆ ತಿಳಿಯದ ಎಷ್ಟೋ ಕಾರ್ಯಗಳನ್ನು ಮಾಡುತ್ತಿದೆ. ಆಕಾಶ ಮೇಘರೂಪವಾಗಿ ವ್ಯಾಧಿಗಳನ್ನು ಭೂಮಿ ಮೇಲೆ ಬಿಡುತ್ತಿದೆ. ನಂತರ ಆ ವ್ಯಾಧಿಗಳನ್ನು ಭೂಮಿ ಮೇಲಿಂದ ತೆಗೆದುಕೊಂಡು ಹೋಗುತ್ತಿದೆ. ಈ ರೀತಿ ಆಕಾಶ 'ಮೇಘ' ಎಂಬ ಪರಿಮಾಣವಿರುವ ಒಂದು ಆಕಾರವಾಗಿ ಬದಲಾಗಿ ತನ್ನ ಕಾರ್ಯವನ್ನು ತಾನು ಮಾಡುತ್ತಿದೆ. ಆಕಾಶ ಮೇಘವಾಗಿ ಬದಲಾಗುವುದರಿಂದ ಮೇಘಕ್ಕೆ ಬಣ್ಣ, ರೂಪ, ಕಾರ್ಯ ಎನ್ನುವವು ಏರ್ಪಟ್ಟಿವೆ. ಆದ್ದರಿಂದ ಒಂದು ಪರಿಮಾಣವಿರುವ ಮೇಘವನ್ನು ಒಂದನ್ನಾಗಿ ಭಾವಿಸಿ 'ಯಾವುದನ್ನು?' ಎಂದು ಪ್ರಶ್ನಿಸುವುದು ನಡೆದಿದೆ. ಆಕಾಶವನ್ನು ಒಂದು ಪರಿಮಾಣವಿರುವ ಯಾವುದರಾಗಿ ಇದೆಯೆಂದು ಪ್ರಶ್ನಿಸುವುದು ನಡೆದಿದೆ. 'ಯಾವುದನ್ನು?' ಎಂದು ಪ್ರಶ್ನೆ ಬಂದಾಗ ಆಕಾಶ ಒಂದು ಖಂಡ (ಒಂದು ಭಾಗ) ಅಲ್ಲ ಅಲ್ಲವೆ! ಹಾಗಿರುವಾಗ 'ಯಾವುದನ್ನು' ಎಂದು ಒಂದು ಗುರುತಿಗಾಗಿ ಏಕೆ ಕೇಳಿದ್ದೀರೆಂದು ಉತ್ತರ ಹೇಳುವವರು ಆಲೋಚಿಸಬೇಕಾಗಿದೆ. ಆದರೇ ಅಂತಹ ಆಲೋಚನೆ ಮಾಡದಂತೆ ಮೇಘವೆಂದರೇ ಶೂನ್ಯವೆಂದು ಬರೆಯುವುದರಿಂದ ಆ ಉತ್ತರವನ್ನು ತಪ್ಪಾಗಿ ಲೆಕ್ಕಿಸಬೇಕಾಗಿದೆ. ಈ ಪ್ರಶ್ನೆಗೆ ವಾಸ್ತವವಾದ ಉತ್ತರ "ಮೇಘ" ಎಂದು ಬರೆಯಬೇಕು.

**1033. (3) "ನಾನೇ ಮಾರ್ಗವು, ಸತ್ಯವೂ, ಜೀವವೂ ನನ್ನಿಂದ ಹೊರತು ತಂದೆಯ ಹತ್ತಿರಕ್ಕೆ ಯಾರೂ ಬರಲಾರನು." ಈ ಮಾತನ್ನು ಯಾರು ಹೇಳಿದ್ದಾರೆ?**

**ಉ.** ಈ ಪ್ರಶ್ನೆಗೂ ಸಹ ಬಹು ಸ್ವಲ್ಪ ಜನ ಹೊರತು ಉಳಿದವರೆಲ್ಲಾ ಯೇಸು ಎಂದು ಬರೆದಿದ್ದಾರೆ. ಬೈಬಲ್‌ನಲ್ಲಿ ಯೇಸು ಹಾಗೆ ಹೇಳಿದ್ದಾನೆಂದು ಕ್ರೈಸ್ತರು ಅನ್ನುತ್ತಿರುವುದರಿಂದ ಆ ಮಾತನ್ನು ಕೇಳಿದವರೆಲ್ಲಾ ಯೇಸು ಎಂದು ಉತ್ತರ ಬರೆದಿದ್ದಾರೆ. ಇಲ್ಲಿಯೂ ಸಹ ಈ ಉತ್ತರವನ್ನು ತಪ್ಪಾಗಿ ಪರಿಗಣಿಸುವುದು ನಡೆದಿದೆ. ಇದರಲ್ಲಿ ತಪ್ಪೇನಿದೆ? ಆ ಮಾತನ್ನು ಹೇಳಿರುವುದು ಯೇಸೇ ಅಲ್ಲವೇ! ಎಂದು ಎಲ್ಲರೂ ಅಂದುಕೊಳ್ಳಬಹುದು. ಆದರೇ ಇಲ್ಲಿ ಎಲ್ಲರಿಗೂ ತಿಳಿಯದ ವಿಧಾನ ಒಂದು ಇದೆ. ಅದೇನೆಂದರೇ! ನಾನೇ ಮಾರ್ಗ ಎಂದು ಮೊದಲೇ ಹೇಳುವುದಾಗಿದೆ. ಮಾರ್ಗ ಎಂದ ನಂತರ ಅದಕ್ಕೆ ಗಮ್ಯವೂ ಸಹ ಇರುತ್ತದೆ. ಇಲ್ಲಿ ಆಧ್ಯಾತ್ಮಿಕ ರೀತಿಯಲ್ಲಿ "ಗಮ್ಯ" ಎನ್ನುವುದು "ಮೋಕ್ಷ ಅಥವಾ ದೇವರನ್ನು ಸೇರುವುದು" ಎಂದು ಹೇಳಬಹುದು. **"ದೇವರ ಹತ್ತಿರಕ್ಕೆ ಸೇರುವುದಕ್ಕೆ ನಾನೇ ಮಾರ್ಗ, ನನ್ನಿಂದ ಹೊರತು ತಂದೆ ಹತ್ತಿರಕ್ಕೆ ಯಾರೂ ಬರಲಾರನು"** ಎಂದು ಇರುವುದನ್ನು ಗಮನಿಸಿದರೇ ದೇವರು ಯಾರಿಗೆ ತಂದೆ ಎಂದು ಮೊದಲು ನೋಡಿಕೊಳ್ಳಬೇಕಾಗಿದೆ.

ದೇವರು ಆತ್ಮಕ್ಕೆ ತಂದೆ ಆದಾಗ, ಆತ್ಮ ಭೌತಿಕವಾಗಿ ಕಾಣಿಸುವ ಯೇಸುಗೆ ತಂದೆಯಾಗಿ ಇದೆ. ಯೇಸು ಎಂದು ಉತ್ತರವನ್ನು ಹೇಳಿದರೇ ಆತನು ತನಗೆ ತಂದೆಯೆಂದು ಹೇಳಿಕೊಳ್ಳುವ ಆತ್ಮನ ಹತ್ತಿರಕ್ಕೆ ಹೋಗಬೇಕೆಂದರೆ "ನಾನೇ ಮಾರ್ಗ" ಎಂದು ಹೇಳಿರಬೇಕು. ಆಧ್ಯಾತ್ಮಿಕದ ರೀತಿ ಅಸಲಾದ ಗಮ್ಯ, ಎಲ್ಲರಿಗೂ ಗಮ್ಯ (ಗುರಿ) ದೇವರೇ ಆಗಿರುವುದರಿಂದ ಆತ್ಮ ಗಮ್ಯವಲ್ಲವೆಂದು ತಿಳಿದುಹೋಗಿದೆ. ಭೌತಿಕವಾಗಿ ಕಾಣಿಸುವ ಯೇಸುವಿಗೆ ಆತ್ಮ ತಂದೆಯಾದಾಗ, ಆತ್ಮಕ್ಕೆ ತಂದೆ ದೇವರಾಗಿದ್ದಾನೆ. ಯಾವ ಮನುಷ್ಯನಾದರೂ ಕೊನೆಗೆ ಸೇರಬೇಕಾಗಿರುವುದು ದೇವರ ಹತ್ತಿರಕ್ಕೆ, ಆದ್ದರಿಂದ ಈ ಮಾತನ್ನು ಯೇಸು ಹೇಳಲಿಲ್ಲವೆಂದು ಯೇಸುನೊಳಗಿನ ಆತ್ಮವೇ ಹೇಳಿದೆ ಎಂದು ಹೇಳಬೇಕಾಗಿದೆ. ಯಾರಾದರಾಗಲಿ ದೇವರ ಹತ್ತಿರಕ್ಕೆ ಸೇರಬೇಕೆಂದರೇ ಆತ್ಮನಿಂದಲೇ ಸೇರಬೇಕಾಗಿದೆ. ಆದ್ದರಿಂದ ಯೇಸು ಎಂದು ಬರೆಯಲಾಗಿರುವ ಉತ್ತರ ತಪ್ಪಾಗಿ ಲೆಕ್ಕಿಸಬೇಕಾಗಿದೆ. ಯಾರಾದರೇ ಆತ್ಮ ಎಂದು ಬರೆದಿದ್ದಾರೋ ಅವರ ಉತ್ತರವನ್ನು ಸರಿಯಾಗಿರುವುದಾಗಿ ಪರಿಗಣಿಸಲಾಗಿದೆ.

**1034. (4) ರೋಗಗಳು, ಔಷಧಗಳು ಒಂದು ಕಡೆಯೇ ಇವೆ, ಎಲ್ಲಿ?**

**ಉ :** ಈ ಪ್ರಶ್ನೆಗೆ ಉತ್ತರ 'ರಸ್ತೆಯ ಪಕ್ಕದಲ್ಲಿ' ಎಂದು ಸ್ವಲ್ಪ ಜನ ಬರೆದರೆ, ಬಹಳ ಜನ **'ಶರೀರದಲ್ಲಿ'** ಎಂದು ಬರೆದಿದ್ದಾರೆ. ಅಷ್ಟೇ ಅಲ್ಲದೆ ಒಬ್ಬರು ಅಥವಾ ಇಬ್ಬರು ಸರಿಯಾದ ಉತ್ತರವನ್ನು ಬರೆದಿದ್ದಾರೆ. ರೋಗಗಳು, ಔಷಧಗಳು ಶರೀರದಲ್ಲೇ ಇವೆ ಎಂದು

ಬರೆಯುವುದು ಸ್ವಲ್ಪಮಟ್ಟಿಗೆ ಸಮಂಜಸವೇ ಆದರೂ ಅದಕ್ಕಿಂತ ಉತ್ತಮವಾದ ಉತ್ತರ ಮತ್ತೊಂದು ಇರುವುದರಿಂದ 'ಶರೀರದಲ್ಲಿ' ಎಂಬ ಮಾತನ್ನು ಅಸಲಾದ ಉತ್ತರವಾಗಿ ತೆಗೆದುಕೊಳ್ಳಲಿಲ್ಲ. ಒಂದು ಉತ್ತರ ಹೇಳಿದರೇ ಅದನ್ನು ಕುರಿತು ಎರಡನೆಯ ಪ್ರಶ್ನೆ ಇರಬಾರದೆನ್ನುವುದೇ ನಮ್ಮ ಉದ್ದೇಶ. ಆದ್ದರಿಂದ 'ಶರೀರದಲ್ಲಿ' ಎಂಬ ಮಾತಿಗಿಂತ ಉತ್ತಮವಾದ ಉತ್ತರವನ್ನು ಪರಿಗಣನೆಯೊಳಗೆ ತೆಗೆದುಕೊಳ್ಳುವುದಾಗಿದೆ. ರೋಗಗಳು ಔಷಧಗಳು ಒಂದು ಕಡೆ ಇವೆ ಎಂದಾಗ ಆ ಒಂದು ಜಾಗವನ್ನು ಖಚಿತವಾಗಿ ಗುರುತಿಸಿ ಹೇಳಬೇಕಾದ ಅವಶ್ಯವಿದೆ. ಒಂದುವೇಳೆ 'ಶರೀರದಲ್ಲಿ' ಎಂಬ ಮಾತನ್ನು ತೆಗೆದುಕೊಂಡರೇ ರೋಗಗಳು ಔಷಧಗಳು ಶರೀರದಲ್ಲಿ ಇರುವ ಮಾತು ವಾಸ್ತವವೇ. ಆದರೂ ಎರಡನೆಯ ಉತ್ತರವಾಗಿ ಶರೀರದಲ್ಲಿ ಇಂತಹ ಕಡೆಯೇ ಇವೆಯೆಂದು ಹೇಳಬೇಕಾಗುತ್ತದೆ. ಆದ್ದರಿಂದ ಶರೀರ ಎಂಬ ಉತ್ತರಕ್ಕಿಂತ ಉತ್ತಮವಾದ ಉತ್ತರವಾಗಿ ಶರೀರದಲ್ಲಿ ಒಂದು ಪ್ರತ್ಯೇಕವಾದ ಸ್ಥಳವನ್ನು ಹೇಳಬೇಕಾಗಿದೆ. ರೋಗಗಳು ಪಾಪದಿಂದ, ಔಷಧಗಳು ಪುಣ್ಯದಿಂದ ಇರುತ್ತವೆ. ಇದನ್ನನುಸರಿಸಿ ರೋಗಗಳಿಗು, ಔಷಧಗಳಿಗೂ ಮೂಲ ಕಾರಣವಾದ ಪಾಪ ಪುಣ್ಯಗಳು ಎಲ್ಲಿರುತ್ತವೋ ಅಲ್ಲಿಯೇ ರೋಗಗಳು ಔಷಧಗಳು ಇವೆಯೆಂದು ಹೇಳಬಹುದು. ರೋಗಗಳಿಗೂ, ಔಷಧಗಳಿಗೂ ಮನುಷ್ಯನ ಕರ್ಮವೇ ಕಾರಣವಾಗಿರುವುದರಿಂದ ಮನುಷ್ಯನ ಶರೀರದಲ್ಲಿ ಕರ್ಮ ಎಲ್ಲಿರುತ್ತದೋ ಅಲ್ಲೇ ಆತನ ರೋಗಗಳು ಔಷಧಿಗಳಿವೆಯೆಂದು ಹೇಳಬಹುದು. ಮನುಷ್ಯ ಶರೀರದಲ್ಲಿನ ಕರ್ಮ ಆತನ ತಲೆಯಲ್ಲಿನ ಕರ್ಮಚಕ್ರದಲ್ಲಿ ಇದೆ. ಕರ್ಮಚಕ್ರದಲ್ಲಿನ ಕರ್ಮ ರೋಗಗಳಿಗೂ, ಔಷಧಗಳಿಗೂ ನಿಲಯವಾಗಿರುವುದರಿಂದ ಈ ಪ್ರಶ್ನೆಗೆ ಸರಿಯಾದ ಉತ್ತರವಾಗಿ 'ಕರ್ಮದಲ್ಲಿ' ಎಂದು ಹೇಳಬಹುದು. ಇಲ್ಲದೇ ಹೋದರೆ 'ಕರ್ಮ ಚಕ್ರದಲ್ಲಿರುವ ಕರ್ಮದಲ್ಲಿ' ಎಂದು ಸಹ ಹೇಳಬಹುದು. 'ಶರೀರದಲ್ಲಿ' ಎಂಬ ಮಾತಿಗಿಂತಲೂ 'ಕರ್ಮದಲ್ಲಿ' ಎಂಬ ಮಾತು ಉತ್ತಮವಾದ ಉತ್ತರವಾಗಿ ಇರುವಂತೆ ತಿಳಿಯಬೇಕು.

**1035. (5) ದೈವಜ್ಞಾನವನ್ನು ಒಬ್ಬರು ಹೊರತು ಯಾರೂ ಹೇಳಲಾರರು? ಆ ಒಬ್ಬರು ಯಾರು?**

**ಉ :** 'ದೇವರ ಜ್ಞಾನ ದೇವರಿಗೆ ಹೊರತು ಯಾವ ಮಾನವನಿಗೂ ತಿಳಿದಿಲ್ಲ.' ಎಂದು ಒಂದು ದೈವ ಗ್ರಂಥದಲ್ಲಿ ಬರೆಯಲಾಗಿದೆ. ಒಬ್ಬ ಮನುಷ್ಯ ದೈವ ಜ್ಞಾನವನ್ನು ತಿಳಿಯಬೇಕೆಂದರೇ ಮತ್ತೊಬ್ಬ ಮನುಷ್ಯನಿಂದಲೇ ತಿಳಿಯಬೇಕಾಗಿದೆ. ಆದರೇ ದೈವ ಗ್ರಂಥದಲ್ಲಿನ ವಾಕ್ಯದಲ್ಲಿ ದೇವರಿಗೆ ಹೊರತು ಬೇರೆ ಯಾರಿಗೂ ತಿಳಿದಿಲ್ಲವೆಂದು

ಇರುವುದರಿಂದ ದೇವರ ಜ್ಞಾನವನ್ನು ದೇವರೇ ಹೇಳಬೇಕಾಗಿದೆ. ಆದರೇ ದೇವರಿಗೆ ರೂಪವಿಲ್ಲ ಮತ್ತು ದೇವರು ಮಾತನಾಡುವುದಿಲ್ಲ ಎಂಬ ನಿಯಮದಿಂದ ಇದ್ದಾನೆ. ಆದ್ದರಿಂದ ದೇವರು ಪ್ರತ್ಯಕ್ಷವಾಗಿ ತನ್ನ ಜ್ಞಾನವನ್ನು ಮನುಷ್ಯನಿಗೆ ತಿಳಿಸುವುದಿಲ್ಲ ಎಂದು ಅರ್ಥವಾಗಿದೆ. ಆದರೇ ದೇವರ ಜ್ಞಾನ ದೇವರಿಗೆ ಹೊರತು ಇತರರಿಗೆ ಯಾರಿಗೂ ತಿಳಿಯದಿರುವುದರಿಂದ, ದೇವರೇ ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪರೋಕ್ಷವಾಗಿಯಾದರೂ ಹೇಳಬೇಕಾಗಿದೆ. ದೇವರು ಪರೋಕ್ಷವಾಗಿ ಹೇಳಬೇಕಾಗಿ ಬಂದರೆ ಮನುಷ್ಯ ಆಕಾರದೊಳಗೆ ಬಂದು, ಮನುಷ್ಯರ ಭಾಷೆಯಲ್ಲೇ ಹೇಳಬೇಕಾಗಿದೆ. **ದೇವರು ಮನುಷ್ಯನಾಗಿ ಬರಬಹುದು ಆದರೇ, ಮನುಷ್ಯ ದೇವರು ಆಗಲಾರನು**. ದೇವರು ಮನುಷ್ಯನಾಗಿ ಬಂದಾಗ ದೇವರಾಗಿ ಅಲ್ಲದೆ ಮನುಷ್ಯನಾಗಿ ಕಾಣಿಸಿದರೂ, ಆತನು ಮನುಷ್ಯನಲ್ಲ. ದೇವರ ಜ್ಞಾನವನ್ನು ಹೇಳುವವನು ದೇವರೇ ಆದರೂ ಅತ್ತ ದೇವರೂ ಅಲ್ಲದೆ, ಇತ್ತ ಮನುಷ್ಯನೂ ಅಲ್ಲದೇ ಎರಡಕ್ಕೂ ತಪ್ಪಿದವನಾಗಿ ಇರುವನು. ಕಾಣಿಸುವುದು ಮನುಷ್ಯನ ಆಕಾರವೇ ಆದರೂ ಆತನು ಮನುಷ್ಯನಲ್ಲ. ಹೇಳುವುದು ದೇವರ ಜ್ಞಾನವೇ ಆದರೂ ಆತನು ದೇವರಲ್ಲ. ಅತ್ತ ಮನುಷ್ಯನೂ ಅಲ್ಲದೆ, ಇತ್ತ ದೇವರೂ ಅಲ್ಲದೆ ಮನುಷ್ಯನಾಗಿ ಕಾಣಿಸುವವನನ್ನು ಮನುಷ್ಯ ಎಂದು ಅನ್ನುವುದಿಲ್ಲ. ಹಾಗೆಯೇ ದೇವರು ಎಂದು ಸಹ ಅನ್ನಬಾರದು. ಮನುಷ್ಯನಿಗೂ ದೇವರಿಗೂ ಮಧ್ಯದಲ್ಲಿ ಮತ್ತೊಂದು ಹೆಸರಿರುವವನಾಗಿ ಹೇಳಬಹುದು. ಆ ಹೆಸರೇ ಭಗವಂತನು. ಭಗವಂತನೆಂದರೇ ದೇವರೂ ಅಲ್ಲ, ಮನುಷ್ಯನೂ ಅಲ್ಲ ಎಂದರ್ಥ. ದೇವರು ತನ್ನ ಜ್ಞಾನವನ್ನು ಮನುಷ್ಯರಿಗೆ ಹೇಳಬೇಕಾಗಿ ಬಂದಾಗ ಭಗವಂತನು ಎಂಬ ಮತ್ತೊಂದು ಹೆಸರಿನಿಂದ, ಮಾರು ವೇಷದಿಂದ ಬಂದು ಹೇಳಿಹೋಗುವನು. ಭಗವಂತನು ಮನುಷ್ಯನಾಗಿದ್ದರೂ ಆತನ ಶರೀರದಲ್ಲಿ ಪರಮಾತ್ಮನೇ ಆತ್ಮವಾಗಿ, ಜೀವಾತ್ಮವಾಗಿ ಬೇರ್ಪಟ್ಟು ಕೆಲಸ ಮಾಡುತ್ತಿರುವನು. ಜೀವಾತ್ಮವಾಗಿ ಪ್ರಪಂಚದಲ್ಲಿ ಉಂಟಾಗುವ ಕಷ್ಟ ಸುಖಗಳನ್ನು ಅನುಭವಿಸುತ್ತಾ ಸಾಧಾರಣ ಮನುಷ್ಯನ ಹಾಗೆ ಇದ್ದರೂ, ಭಗವಂತನಾಗಿ ಜ್ಞಾನ ಹೇಳಬೇಕಾಗಿ ಬಂದಾಗ ಆತ್ಮವಾಗಿ ಜ್ಞಾನವನ್ನು ಹೇಳುತ್ತಿದ್ದಾನೆ. ಪರಮಾತ್ಮನಾಗಿ ಸಾಕ್ಷಿಭೂತನಾಗಿ ಒಂದೇ ಶರೀರದಲ್ಲಿ ಇರುವುದು ನಡೆಯುತ್ತಿದೆ. ದೈವಜ್ಞಾನವನ್ನು ಭಗವಂತನು ಅಥವಾ ಗುರುವು ಎಂದು ಕರೆಯಲ್ಪಡುವ ಮನುಷ್ಯ ಹೇಳಿದರೂ ಆತನಲ್ಲಿನ ಮೂವರು ಪುರುಷರಾದ ಜೀವಾತ್ಮ, ಆತ್ಮ, ಪರಮಾತ್ಮರಲ್ಲಿ ಎರಡನೆಯವನಾದ ಆತ್ಮವೇ ಜ್ಞಾನವನ್ನು ಹೇಳುತ್ತದೆ. ಆದ್ದರಿಂದ ಈ ಪ್ರಶ್ನೆಯಲ್ಲಿ ದೈವಜ್ಞಾನವನ್ನು ಒಬ್ಬರು ಹೊರತು ಯಾರೂ ಹೇಳಲಾರರು, ಆ ಒಬ್ಬರು ಯಾರು?" ಎಂದು ಕೇಳಿದ್ದೇವೆ. ಬಹಳ ಜನ 'ಗುರುವು' ಎಂದು ಬರೆದಿದ್ದಾರೆ. ಇನ್ನೂ ಕೆಲವರು

‘ಭಗವಂತನು’ ಎಂದು ಬರೆದಿದ್ದಾರೆ. ಗುರುವು, ಭಗವಂತನು ಎಂದು ಬರೆದರೂ ಎರಡೂ ಸರಿಯಾದ ಉತ್ತರಗಳೇ ಆದರೂ, ಇನ್ನೂ ಆಳವಾಗಿ ಹೇಳುವುದಾದರೇ ಆತ್ಮ ಎಂದು ಹೇಳುವುದೇ ಸರಿಯಾದ ಉತ್ತರವಾಗುತ್ತದೆ. ಗುರು ಅಥವಾ ಭಗವಂತನು ಎಂದು ಹೇಳಿದರೇ ಅದರಲ್ಲಿಯೂ ಸಹ ದೇವರು ಮೂವರು ಪುರುಷರಾಗಿ ವಿಭಜಿಸಲ್ಪಟ್ಟು ಇರುವುದರಿಂದ ಮೂವರಲ್ಲಿ ಖಚಿತವಾಗಿ ಯಾರು ಎಂಬ ಪ್ರಶ್ನೆ ಬರಬಲ್ಲದು. ಕೊನೆಗೆ ಪ್ರಶ್ನೆ ಉಳಿಯದಂತೆ ಹೇಳುವ ಉತ್ತರವೇ ಸರಿಯಾದ ಉತ್ತರವಾಗುತ್ತದೆ. ಆದ್ದರಿಂದ ಈ ಪ್ರಶ್ನೆಗೆ ಆತ್ಮ ಎಂದು ಹೇಳುವುದೇ ಸರಿಯಾದ ಉತ್ತರವಾಗಿ ಲೆಕ್ಕಿಸುವುದು ನಡೆದಿದೆ.

**1036. (6) ಹಾವು ಎಂದು ಕರೆಯಲ್ಪಡುತ್ತಾ ಹಾವಾಗದಿರುವುದು ಯಾವುದು?**

**ಉ :** ಇಲ್ಲಿ ನಾವು ಪ್ರಶ್ನಿಸಿರುವುದು ಆಧ್ಯಾತ್ಮಿಕ ರಂಗದಲ್ಲಿನ ಪ್ರಶ್ನೆ. ಆದ್ದರಿಂದ ಉತ್ತರ ಸಹ ಆಧ್ಯಾತ್ಮಿಕವಾಗಿಯೇ ಇರಬೇಕು. ಈ ಪ್ರಶ್ನೆಗಳನ್ನು ಒಗಟು ಪ್ರಶ್ನೆಗಳಾಗಿ ಲೆಕ್ಕಿಸಬಾರದು. ಕೆಲವರು ಹಾಗೆಯೇ ಲೆಕ್ಕಿಸಿ ಅಂತಹ ಉತ್ತರವನ್ನೇ ಬರೆದಿದ್ದಾರೆ. ಹಾವಾಗದ ಹಾವು ಮಳೆ ಹಾವು ಎಂದು ಬರೆದಿದ್ದಾರೆ. ಆದರೇ ಅದನ್ನು ಮಾತ್ರ ನಾವು ಉತ್ತರವಾಗಿ ಲೆಕ್ಕಿಸಲಿಲ್ಲ. ಕೆಲವರು ಹಾಗೆ ಬರೆದರೂ ಬಹಳ ಮಂದಿ ಸರಿಯಾದ ಉತ್ತರವನ್ನು ಬರೆದು ಅಂಕವನ್ನು ಪಡೆದಿದ್ದಾರೆ. ಈ ಪ್ರಶ್ನೆಗೆ ಸರಿಯಾದ ಉತ್ತರ ‘ಬೆನ್ನು ಹಾವು’ ಎಂದು ಬರೆಯುವುದು ಸರಿಯಾದ ಉತ್ತರವಾಗುತ್ತದೆ. ಹಾವು ತಲೆ ಬಾಲ ಹೊಂದಿ ಸ್ವಲ್ಪ ಉದ್ದವಾಗಿದ್ದು ತಲೆಯಿಂದ ಬಾಲದ ಕಡೆ ಹೋಗುತ್ತಾ ಹೋಗುತ್ತಾ ಚಿಕ್ಕದಾಗಿರುತ್ತದೆ. ನಮ್ಮ ಶರೀರದಲ್ಲಿನ ಬ್ರಹ್ಮನಾಡಿ ಎನ್ನುವ ದೊಡ್ಡ ನರ ಹಾವಿನ ಆಕಾರವನ್ನು ಹೋಲಿರುವುದರಿಂದ ಬೆನ್ನು ಹಾವು ಎಂದು ಹೆಸರಿಟ್ಟು ಬ್ರಹ್ಮನಾಡಿಯನ್ನು ಕರೆಯಲಾಗುತ್ತಿದೆ.

**1037. (7) ಕರ್ಮವಿಲ್ಲದೆ ಜನ್ಮವಿಲ್ಲ ಎನ್ನುತ್ತಾರೆ ವಾಸ್ತವವೇನಾ?**

**ಉ :** ಪ್ರತಿ ಮನುಷ್ಯನಿಗೂ ಕರ್ಮವಿಲ್ಲದೇ ಜನ್ಮ ಉಂಟಾಗುವುದಿಲ್ಲ ಎನ್ನುವ ಮಾತು ವಾಸ್ತವವೇ ಆದರೂ ಇಲ್ಲಿ ಸ್ವಲ್ಪ ಆಲೋಚಿಸಬೇಕಾದ ಅವಶ್ಯವಿದೆ. ಮನುಷ್ಯನಾಗಲೀ, ಯಾವ ಜೀವರಾಶಿಯಾಗಲೀ ಹುಟ್ಟಿದೆಯೆಂದರೇ ಅದರ ಹುಟ್ಟುವಿಕೆಗೆ ಕಾರಣ ಕರ್ಮ ಎಂದು ಎಲ್ಲರಿಗೂ ತಿಳಿದ ವಿಷಯವೇ. ಆದರೇ ದೇವರು ಮನುಷ್ಯನಿಗೆ ತನ್ನ ಜ್ಞಾನವನ್ನು ತಿಳಿಸುವ ನಿಮಿತ್ತ ಮನುಷ್ಯನಾಗಿಯೇ ಬಂದು ಹುಟ್ಟಬೇಕಾಗಿದೆ. ಹಾಗೆ ದೇವರು ಕಾಣಿಸುವ ಮನುಷ್ಯನಾಗಿ ಹುಟ್ಟಿದರೂ ಆತನಿಗೆ ಕರ್ಮ ಇರುವುದಿಲ್ಲ. ದೇವರು ಮನುಷ್ಯನಾಗಿ ಬಂದರೇ ಆತನ ಜನ್ಮಕ್ಕೆ ಕರ್ಮ ಕಾರಣವಲ್ಲ. ದೇವರು ಕರ್ಮ ಇಲ್ಲದವನು. ಕರ್ಮವಿಲ್ಲದ

ದೇವರು ಭಗವಂತನು ಎನ್ನುವ ಮನುಷ್ಯನಾಗಿ ಹುಟ್ಟುವಾಗ ಆತನಿಗೆ ಕರ್ಮವಿಲ್ಲ. ಭಗವಂತನು ಹುಟ್ಟಿದ ನಂತರ ಇಲ್ಲದ ಕರ್ಮವನ್ನು ಸೃಷ್ಠಿಸಿಕೊಳ್ಳುತ್ತಾನೆ ಆದರೆ, ಆತನು ಹುಟ್ಟುವುದಕ್ಕಿಂತ ಮೊದಲು ಆತನಿಗೆ ಕರ್ಮವಿಲ್ಲವೆಂದು ಹೇಳಬಹುದು. ಆದ್ದರಿಂದ ಭಗವಂತನ ಹುಟ್ಟುವಿಕೆಗೆ ಕರ್ಮವಿಲ್ಲವೆಂದು, ಕರ್ಮವಿಲ್ಲದಂತೆ ಹುಟ್ಟುವವನು ಭಗವಂತನೆಂದು ಹೇಳಬಹುದು.

**1038. (8) ಕಣ್ಣನ್ನು ನೇತ್ರವೆಂದು ಏಕೆ ಕರೆದಿದ್ದಾರೆ?**

**ಉ :** 'ಕಣ್ಣು' ಎಂಬ ಪದ 'ಕನ್ನ' ಎಂಬ ಪದದಿಂದ ಹುಟ್ಟಿದೆ. ಕನ್ನ ಎಂದರೆ ರಂಧ್ರ ಎಂದು ಅರ್ಥ. ಮುಖದಲ್ಲಿ ಮೂಳೆಯಿಂದ ಏರ್ಪಟ್ಟ ರಂಧ್ರದಲ್ಲಿ ನೇತ್ರ ಇರುವುದರಿಂದ ಕನ್ನದೊಳಗಿನದು ಎಂದು ತಿಳಿಯುವಹಾಗೆ ಅದನ್ನು ಕಣ್ಣು ಎಂದು ಕರೆಯುವುದು ನಡೆದಿದೆ. ಎಲ್ಲರೂ ಈದಿನ ನೇತ್ರವನ್ನು ಕಣ್ಣು ಎಂಬ ಪದದಿಂದಲೇ ಕರೆಯುತ್ತಿದ್ದಾರೆ. ಶೇ.90ರಷ್ಟು ಮನುಷ್ಯರು ಕಣ್ಣು ಎಂಬ ಪದವನ್ನೇ ಹೇಳುತ್ತಿದ್ದರೂ ಕೆಲವು ಸಂದರ್ಭಗಳಲ್ಲಿ ಕೆಲವು ಕಡೆ ಮಾತ್ರ ಕಣ್ಣನ್ನು ನೇತ್ರ ಎನ್ನುತ್ತಿದ್ದಾರೆ. ನೇತ್ರವನ್ನು ಕಣ್ಣು ಎಂದು ಏಕೆ ಕರೆದಿದ್ದಾರೊ ತಿಳಿದುಹೋಗಿದೆ. ಆದರೇ ಕಣ್ಣನ್ನು ನೇತ್ರವೆಂದು ಏಕೆ ಕರೆದಿದ್ದಾರೋ ಈಗ ಹೇಳಿಕೊಳ್ಳಬೇಕಾಗಿದೆ. ಕನ್ನದಲ್ಲಿರುವುದು ಕಣ್ಣು ಎಂಬಂತೇ ತ್ರೈತದಿಂದಿರುವುದು ನೇತ್ರ ಎಂದು ಹೇಳಬಹುದು. ನಾನು ಈಗ ಹೇಳುವುದಲ್ಲ ಆದರೇ, ಪೂರ್ವದಲ್ಲಿ ಹಿರಿಯರು ಮೂರು ಭಾಗಗಳಾಗಿರುವುದು ನೇತ್ರ ಎಂದು ಕರೆದಿದ್ದಾರೆ. ನೇತ್ರವೊಂದರ ಅರ್ಥವನ್ನು ಪರಿಶೀಲಿಸಿ ನೋಡಿದರೇ, ಈ ನೇತ್ರ ಪದದಲ್ಲಿ 'ನೇತ್ರ' ಎಂಬ ಎರಡು ಅಕ್ಷರಗಳ ಸಾರಾಂಶವಿರುವ ಅರ್ಥದಿಂದ ಕೂಡಿಕೊಂಡಿದೆಯೆಂದು ಹೇಳಬಹುದು. "ತ್ರ" ಎಂಬ ಅಕ್ಷರವನ್ನು ಗಮನಿಸಿದರೇ ಮೂರು ಎಂದು ತಿಳಿಯಬಲ್ಲದು. ತ್ರ ಎಂದರೇ ಮೂರು ಎಂದು ಅರ್ಥ. ತ್ರ ಎಂಬ ಪದದಲ್ಲಿ ಮೊದಲ ಅಕ್ಷರವನ್ನು ತೆಗೆದುಕೊಂಡು ನೇತ್ರದಲ್ಲಿ ಎರಡನೆ ಅಕ್ಷರವಾಗಿ ಹೇಳಿದ್ದಾರೆ. 'ನೇತ್ರ' ಎಂಬ ಎರಡು ಅಕ್ಷರಗಳಲ್ಲಿ 'ತ್ರ' ಹೋದಾಗ ಉಳಿದಿರುವುದು ನೇ ಎಂಬ ಅಕ್ಷರ. ನೇತ್ರ ಎಂದರೇ ಮೂರನ್ನು ಕಲಿಸುವುದು ಎಂದು ಅರ್ಥ. ಮೂರು ಭಾಗಗಳಾಗಿ ಕಣ್ಣು ಇದೆ. ಬಿಳಿ ಗುಡ್ಡಿನಲ್ಲಿ ಕರೆ ಗುಡ್ಡು ಇರುವಾಗ, ಕರೆ ಗುಡ್ಡಿನಲ್ಲಿ ಚಿಕ್ಕದಾಗಿ ಮತ್ತೊಂದು ದುಂಡಾದ ಭಾಗ ಕಪ್ಪಾಗಿ ಕಾಣಿಸುತ್ತಿರುತ್ತದೆ. ಹಾಗೆ ಯಾರ ಕಣ್ಣನ್ನು ನೋಡಿದರೂ ಮೂರು ಭಾಗಗಳಾಗಿಯೇ ಇರುತ್ತದೆ. ನೇತ್ರದಲ್ಲಿನ ಮೂರು ಭಾಗಗಳಿಗೆ ಒಂದೊಂದಕ್ಕೆ ಒಂದೊಂದು ವಿಶೇಷತೆ ಇದೆ. ಅದರಲ್ಲಿ ಪೂರ್ತಿ ಬಿಳಿಯಾಗಿರುವ ವಿಶಾಲ ಭಾಗಕ್ಕೆ ಅಥವಾ ದೊಡ್ಡ ಭಾಗಕ್ಕೆ

ಪರಮಾತ್ಮ ಗುರುತಾಗಿ ಹೇಳಬಹುದು. ಬಿಳಿಯ ಭಾಗದ ನಂತರ ಅದಕ್ಕಿಂತ ಚಿಕ್ಕದಾಗಿ ಕಪ್ಪನೆಯ ದುಂಡಾದ ಭಾಗವಿದೆ. ಬಿಳಿ ಭಾಗದಲ್ಲಿನ ಕಪ್ಪು ಭಾಗವನ್ನು ಆತ್ಮವಾಗಿ ಹೇಳಬಹುದು. ಆತ್ಮವೊಂದರ ಗುರುತಾಗಿರುವ ಕಪ್ಪನೆಯ ಭಾಗದ ಮಧ್ಯದಲ್ಲಿ ಕಪ್ಪನೆಯ ಚಿಕ್ಕ ಆಕಾರವಿರುತ್ತದೆ. ಅದನ್ನು ಜೀವಾತ್ಮವಾಗಿ ಹೇಳಬಹುದು. ಸೃಷ್ಠಿ ಆದಿಯಿಂದ ಪರಮಾತ್ಮನೊಳಗೂ, ಆತ್ಮನೊಳಗೂ ಎಂತಹ ಬದಲಾವಣೆ ಇಲ್ಲ. ಆದ್ದರಿಂದ ಕಣ್ಣಿನಲ್ಲಿ ಆ ಎರಡು ಭಾಗಗಳಲ್ಲಿ ಯಾವ ಬದಲಾವಣೆ ಕಾಣಿಸದಂತಿರುತ್ತದೆ. ಆದರೇ ಜೀವಾತ್ಮ ಆದವನು ಒಂದು ಜನ್ಮದಲ್ಲಿ ಕಡಿಮೆ ಕರ್ಮದಿಂದಲೂ, ಮತ್ತೊಂದು ಜನ್ಮದಲ್ಲಿ ಹೆಚ್ಚಿನ ಕರ್ಮದೊಂದಿಗೂ ಹುಟ್ಟುತ್ತಿದ್ದಾನೆ. ಜೀವಿಯು ಕರ್ಮವನ್ನನುಸರಿಸಿ ಬದಲಾಗುತ್ತಿರುತ್ತಾನೆ. ಅಷ್ಟೇ ಅಲ್ಲದೆ ಕೆಲವು ಕಡೆ ಜ್ಞಾನಿಯಾಗಿ, ಕೆಲವು ಕಡೆ ಅಜ್ಞಾನಿಯಾಗಿ ಸಹ ಇರುವುದು ನಡೆಯುತ್ತಿದೆ. ಜೀವಿಯಲ್ಲಿ ಅಂತಹ ಬದಲಾವಣೆಗಳು ಇರುವುದರಿಂದ ಜೀವಾತ್ಮವಾಗಿ ಹೆಸರು ಪಡೆದು ಚಿಕ್ಕದಾಗಿ ಇರುವ ಕಪ್ಪನೆಯ ಭಾಗವೂ ಸಹ ಬದಲಾವಣೆಗಳೊಂದಿಗೆ ಕೂಡಿರುತ್ತದೆ. ಒಂದು ಸಮಯದಲ್ಲಿ ಚಿಕ್ಕದಾಗಿ ಮುದುಡಿಕೊಂಡಿದ್ದು ಮತ್ತೊಂದು ಸಮಯದಲ್ಲಿ ದೊಡ್ಡದಾಗಿ ವ್ಯಾಕೋಚ ಹೊಂದುವುದು ಸಹ ನಡೆಯುತ್ತಿದೆ. ಬೆಳಕಿನಲ್ಲಿ ಚಿಕ್ಕದಾಗಿರುವ ಜೀವ ಎಂಬ ಕಣ್ಣು ಪಾಪೆ ಕತ್ತಲಲ್ಲಿ ದೊಡ್ಡದಾಗಿ ಬದಲಾಗುವುದು ನಡೆಯುತ್ತಿದೆ. ಜೀವಿಯು ಅನೇಕ ಸಂದರ್ಭಗಳಲ್ಲಿ ಅನೇಕ ಅನುಭವಗಳನ್ನು ಹೊಂದುವುದರಿಂದ ಕಷ್ಟಗಳಲ್ಲಿ ಒಂದು ವಿಧವಾಗಿ, ಸುಖಗಳಲ್ಲಿ ಮತ್ತೊಂದು ವಿಧವಾಗಿ ಇರುವುದರಿಂದ ಜೀವಿಯ ಪ್ರತಿರೂಪವಾಗಿರುವ ಚಿಕ್ಕ ಕಪ್ಪನೆಯ ಭಾಗವೂ ಸಹ ಕತ್ತಲಲ್ಲಿ ಒಂದು ವಿಧವಾಗಿ, ಬೆಳಕಿನಲ್ಲಿ ಮತ್ತೊಂದು ವಿಧವಾಗಿ ಇರುತ್ತದೆ. ಇದರಿಂದ ಕಷ್ಟ ಸುಖಗಳಿಗೆ ಸ್ಪಂದಿಸುವವನು ಅಥವಾ ಬದಲಾವಣೆ ಹೊಂದುವವನು ಜೀವಿಯು ಎಂದು ತಿಳಿಯುತ್ತಿದೆ. ದೇವರು ಮೂರು ಭಾಗಗಳಾಗಿ, ಮೂರು ಆತ್ಮಗಳಾಗಿ ಇದ್ದಾನೆಂದು ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ 16, 17 ಶ್ಲೋಕಗಳಲ್ಲಿ ಇದೆ. ಅಲ್ಲಿ ಹೇಳಿರುವ ತ್ರೈತವು ಕಣ್ಣಿನಲ್ಲಿ ಕಾಣಿಸುತ್ತಿದೆ. ಆದ್ದರಿಂದ ಕಣ್ಣನ್ನು ನೇತ್ರ ಎಂದು ಹಿರಿಯರು ಕರೆದಿದ್ದಾರೆ.

**1039. (9) ಅತ್ಯಂತ ಮೃದುವಾದದು, ಅತ್ಯಂತ ಗಟ್ಟಿಯಾಗಿರುವುದು ಯಾವುದು?**

**ಉ :** ಈ ಪ್ರಶ್ನೆಗೆ ಕೆಲವರು ತಪ್ಪು ಉತ್ತರ ಬರೆದಾಗ, ಕೆಲವರು ಸರಿಯಾದ ಉತ್ತರವನ್ನು ಬರೆದಿದ್ದಾರೆ. ಕೆಲವರು ಮಾಯೆ ಎಂದು ಬರೆದಿದ್ದಾರೆ. ಕೆಲವರು ದೇವರೆಂದು, ಕೆಲವರು ಕಲ್ಲು ಎಂದು ಬರೆಯುವುದು ನಡೆದಿದೆ. ಕೆಲವರು ಮಾತ್ರ "ಮನಸ್ಸು" ಎಂದು ಬರೆದಿದ್ದಾರೆ.

ಮನಸ್ಸು ಎಂಬ ಉತ್ತರವೇ ಸರಿಯಾಗಿರುವುದೆಂದು ನಾವು ಹೇಳುವುದು ನಡೆದಿದೆ. ಒಂದು ವಿಷಯವನ್ನು ನಾನು ನನ್ನ ಇಷ್ಟಬಂದಂತೆ ಹೇಳದಂತೆ ಶಾಸ್ತ್ರಬದ್ಧವಾಗಿ ಇರುವಂತೆ, ಜ್ಞಾನಿಗಳೆಲ್ಲರೂ ಒಪ್ಪಿಕೊಳ್ಳುವಂತೆ ಹೇಳುತ್ತಿರುತ್ತೇವೆ. ನಮ್ಮ ಶರೀರದಲ್ಲಿ ಸ್ಥೂಲ ಅವಯವಗಳು ಕೆಲವು ಇರುವಾಗ, ಸೂಕ್ಷ್ಮ ಅವಯವಗಳು ಕೆಲವು ಇವೆ. ಅದರಲ್ಲಿ ಕಣ್ಣಿಗೆ ಕಾಣಿಸದಿರುವುದು, ಕೈಗೆ ಸಿಗದಿರುವುದು, ಅಳತೆ ಇಲ್ಲದಿರುವುದು ಮನಸ್ಸು. ಮನಸ್ಸು ಕೆಲವು ವಿಷಯಗಳಲ್ಲಿ ಬಹಳ ಮೇದುವಾಗಿ, ಕೆಲವು ವಿಷಯಗಳಲ್ಲಿ ಬಹಳ ಗಟ್ಟಿಯಾಗಿ (ಕಠಿಣವಾಗಿ) ಇರುತ್ತದೆಂದು ಹಿರಿಯರು ಹೇಳುತ್ತಿರುವರು. ಈ ವಿಷಯವನ್ನು ಧೃಢೀಕರಿಸುತ್ತಾ ವೇಮನಯೋಗಿ ಒಂದು ಪದ್ಯವನ್ನು ಸಹ ಹೇಳಿದ್ದಾನೆ.

**ಪದ್ಯ :–** **ಇನುಮುನ ಚೇಸಿನ ಮೈನಪುಕಡ್ಡಿ**
**ಮುಂಟಿಮೊನ ನರ್ರಾವುಲ ದೊಡ್ಡಿ**
**ಕೂರ್ಚುಂಡಿ ಮೇಪಿನ ಕುಂದನಪುಗಡ್ಡಿ**
**ವಿಪ್ಪಿ ಚೆಪ್ಪುರಾ ವೇಮಾರೆಡ್ಡಿ.**

ಈ ಪದ್ಯದಲ್ಲಿ ಮೊದಲ ಚರಣದಲ್ಲಿ ಕಡ್ಡಿ ಎಂದು ಇದೆ. ಆ ಕಡ್ಡಿ ಕಬ್ಬಿಣದಿಂದ ಮಾಡಿರುವುದೆಂದು ಹೇಳುವುದರಿಂದ ಬಹಳ ಗಟ್ಟಿಯಾಗಿ ಇದ್ದು, ಬಗ್ಗದೆ ಇರುತ್ತದೆಂದು ಅರ್ಥವಾಗುತ್ತಿದೆ. ಹಾಗೆಯೇ ವಾಕ್ಯದ ಕೊನೆಯಲ್ಲಿ ಮೇಣದ ಕಡ್ಡೀ ಎಂದು ಹೇಳುವುದರಿಂದ ಅದು ಸುಲಭವಾಗಿ ಬಗ್ಗಿ ಹೋಗುತ್ತದೆಂದು ಸಹ ತಿಳಿಯುತ್ತಿದೆ. ಈ ವಿಧವಾಗಿ ಒಂದೇ ಮನಸ್ಸು ಕೆಲವು ಸಂದರ್ಭಗಳಲ್ಲಿ ಕಬ್ಬಿಣದ ಹಾಗೆ ಕಠಿಣವಾಗಿ ಇರುತ್ತದೆಂದೂ, ಕೆಲವು ಸಂದರ್ಭಗಳಲ್ಲಿ ಮೇಣದ ಕಡ್ಡಿಯ ಹಾಗೆ ಮೃದುವಾಗಿ ಇರುತ್ತದೆಂದು ತಿಳಿಯುತ್ತಿದೆ. ಕೆಲವರು ಸಿನಿಮಾವನ್ನು ನೋಡುವಾಗ ದೃಶ್ಯದಲ್ಲಿ ದುಃಖಕರವಾದ ಸಂಘಟನೆ ಇದ್ದರೇ ನೋಡುವವನಿಗೆ ಸಹ ಕಣ್ಣೀರು ಬರುತ್ತವೆ. ಇದನ್ನನುಸರಿಸಿ ಕೆಲವರ ಮನಸ್ಸು ಕೆಲವು ಸಂಘಟನೆಗಳಲ್ಲಿ ಬೆಣ್ಣೆಯ ಹಾಗೆ ಕರಗಿಹೋಗುತ್ತದೆಂದು ಸಹ ಹೇಳುತ್ತಿರುವರು. ಇದನ್ನು ಕುರಿತು ಹೇಳಿಕೊಂಡರೇ ಎಷ್ಟೋ ಆಳವಾದ ಸಮಾಚಾರವಿದೆ. ಆದರೇ ಇಲ್ಲಿ ಸಂದರ್ಭಾನುಸಾರ ಅತ್ಯಂತ ಮೃದುವಾಗಿರುವುದು, ಅತ್ಯಂತ ಗಟ್ಟಿಯಾಗಿರುವುದು ಮನಸ್ಸೆಂದು ಉತ್ತರ ಹೇಳಬಹುದು.

**1040. (10) ಅತ್ಯಂತ ಕಷ್ಟವಾಗಿರುವುದು, ಅತ್ಯಂತ ಸುಲಭವಾಗಿರುವುದು ಯಾವುದು?**

**ಉ :** ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ನೂರಕ್ಕೆ ತೊಂಭತ್ತು ಮಂದಿ ಬರೆದಿದ್ದಾರೆ.

ಕೆಲವರು ಮಾತ್ರ 'ದೇವರು' ಎಂದು ಸಹ ಬರೆದಿದ್ದಾರೆ. ದೇವರು ಎಂಬ ಮಾತು ಸ್ವಲ್ಪ ಮಟ್ಟಿಗೆ ನಿಜವೇ ಆದರೂ ಅದಕ್ಕಿಂತ ಉತ್ತಮವಾದ ಉತ್ತರ ಮತ್ತೊಂದು ಇರುವುದರಿಂದ ದೇವರು ಎಂಬ ಮಾತನ್ನು ನಾವು ಒಪ್ಪಿಕೊಳ್ಳಲಿಲ್ಲ. ದೇವರನ್ನು ತಿಳಿಯುವುದಕ್ಕೆ ಮೊದಲು ದೇವರ ಜ್ಞಾನ ಅವಶ್ಯ. ದೇವರ ಜ್ಞಾನವನ್ನು ದೇವರೇ ಇಳಿದುಬಂದು ಹೇಳಿದರೂ ಮನುಷ್ಯ ಅರ್ಥ ಮಾಡಿಕೊಳ್ಳದ ಸ್ಥಿತಿಯಲ್ಲಿ ಇದ್ದಾನೆ. ಭೂಮಿ ಮೇಲೆ ಎಷ್ಟೋ ಮೇಧಾವಿಗಳಿದ್ದರೂ ಅವರಿಗೆ ದೇವರ ಜ್ಞಾನ ಅವಗಾಹನೆಗೆ ಬರಲಿಲ್ಲ. **ಮನುಷ್ಯನಿಗೆ ಶ್ರದ್ಧೆ ಇರುವಾಗಲೇ ಜ್ಞಾನ ಲಭಿಸುತ್ತದೆಂದು ದೇವರು ತನ್ನ ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ 39ನೇ ಶ್ಲೋಕದಲ್ಲಿ ಹೇಳಿದ್ದಾನೆ.** ಶ್ರದ್ಧೆ ಇರಬೇಕೆಂದರೇ ಬಹಳ ಕಷ್ಟ. ಪ್ರಕೃತಿ ಆಕರ್ಷಣೆಯಿಂದ ಮನುಷ್ಯನ ಶ್ರದ್ಧೆ ಎಲ್ಲವೂ ಪ್ರಪಂಚದ ಕಡೆ ಹೋಗುತ್ತಿದೆ. ಮನುಷ್ಯನ ತಲೆಯಲ್ಲಿನ ಗುಣಗಳ ಪ್ರಭಾವವನ್ನು ಮಾಯೆ ಎಂದು ಕರೆಯುತ್ತಿದ್ದೇವೆ. ಗುಣ ಪ್ರಭಾವವೆನ್ನುವ ಮಾಯೆಯಿಂದ ಮನುಷ್ಯ ತನ್ನ ಶ್ರದ್ಧೆಯನ್ನು ದೇವರ ಕಡೆ ನಿಲ್ಲಿಸಲಾರದೆ ಹೋಗುತ್ತಿದ್ದಾನೆ. ಮನುಷ್ಯನಿಗಿರುವ ಶ್ರದ್ಧೆ ಎಲ್ಲವೂ ಪ್ರಾಪಂಚಿಕದ ಕಡೆಗೆ ಹೋಗುವುದರಿಂದ ದೇವರ ಜ್ಞಾನ ಮನುಷ್ಯನಿಗೆ ಸ್ವಲ್ಪವೂ ಅರ್ಥವಾಗದೇ ಜ್ಞಾನ ಬಹಳ ಕಷ್ಟವಾಗಿ ಕಾಣಿಸುತ್ತಿದೆ.

ಮನುಷ್ಯನ ಶ್ರದ್ಧೆ ದೇವರ ಮೇಲೆ ಇದ್ದರೇ ದೇವರ ಜ್ಞಾನ ಅತ್ಯಂತ ಸುಲಭವಾಗಿ ಅರ್ಥವಾಗಬಲ್ಲದು. ಆದರೇ ಮನುಷ್ಯನ ಶ್ರದ್ಧೆಯನ್ನು ಮಾಯೆ ದಾರಿ ತಪ್ಪಿಸಿ ಪ್ರಪಂಚದ ಕಡೆ ಕಳುಹಿಸುವುದರಿಂದ ಮನುಷ್ಯ ಎಷ್ಟು ಮೇಧಾವಿಯಾದರೂ ದೇವರ ಜ್ಞಾನ ಸ್ವಲ್ಪವಾದರೂ ಆತನಿಗೆ ಅರ್ಥವಾಗದಂತೆ ಹೋಗಿದೆ. ಮನುಷ್ಯ ದೇವರ ಜ್ಞಾನ ತಿಳಿಯಬೇಕೆಂದುಕೊಂಡು ಪ್ರಯತ್ನ ಮಾಡಿದರೂ, ದೇವರ ಜ್ಞಾನವನ್ನು ಅರ್ಥವಾಗದಂತಿರುವುದಕ್ಕೆ ಮಾಯೆ ಮನುಷ್ಯನ ಶ್ರದ್ಧೆಯನ್ನು ಪಕ್ಕಕ್ಕೆ ಮರಳಿಸುವುದರಿಂದ ಮನುಷ್ಯ ಜ್ಞಾನವನ್ನು ತಿಳಿಯದೇ ಹೋದರೆ ಅದು ಮನುಷ್ಯನ ತಪ್ಪಲ್ಲ ಅಲ್ಲವೆ! ಮನುಷ್ಯನಿಗೆ ಶ್ರದ್ಧೆ ಇಲ್ಲದಂತೆ ಮಾಡಿದ ಮಾಯೆದು ತಪ್ಪಲ್ಲವಾ! ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇದೆ. ಇಲ್ಲಿ ಮೇಲ್ನೋಟಕ್ಕೆ ಕಾಣಿಸುವ ತಪ್ಪು ಮಾಯೆದೇ ಆದರೂ ಆ ತಪ್ಪು ಮನುಷ್ಯನದೇ ಎಂದು, ಮನುಷ್ಯನನ್ನು ಅನುಸರಿಸಿ ಮಾಯೆ ಹಾಗೆ ಮಾಡಿದೆಯೆಂದು ಹೇಳಬಹುದು. ವಿವರದೊಳಗೆ ಹೋಗಿ ನೋಡಿದರೇ, ದೇವರ ಮೇಲೆ ಮೇಲ್ನೋಟಕ್ಕೆ ಇಷ್ಟವನ್ನು ತೋರಿಸಿ ಒಳಗೆ ಪ್ರಪಂಚ ಧ್ಯಾಸದಲ್ಲಿರುವವನನ್ನು ದೇವರು ಇಷ್ಟಪಡುವುದಿಲ್ಲ. ದೇವರ ಮೇಲೆ ವಿಶ್ವಾಸವಿದ್ದಂತೆ ಎಲ್ಲರಿಗೂ ಕಾಣಿಸಿದರೂ ಒಳಗೆ

ದೇವರ ಮೇಲಾಗಲೀ, ದೇವರ ಜ್ಞಾನದ ಮೇಲಾಗಲೀ ವಿಶ್ವಾಸಿಸದವನನ್ನು ದೇವರು ಇಷ್ಟಪಡುವುದಿಲ್ಲ. ಇನ್ನೂ ವಿವರವಾಗಿ ಹೇಳಿದರೇ ತನ್ನ ಮತವನ್ನು ಪ್ರೀತಿಸುವುದರಲ್ಲಿ ಶ್ರದ್ಧೆಹೊಂದಿ ದೇವರ ವಾಕ್ಯವನ್ನು ಸಹಿತ ಲೆಕ್ಕಿಸದವನನ್ನು ದೇವರು ಇಷ್ಟಪಡುವುದಿಲ್ಲ. ಅಂತಹವನನ್ನು ಮಾಯೆ ಕಂಡುಹಿಡಿದು ದೇವರಿಗೆ ಇಷ್ಟವಿಲ್ಲದವನನ್ನು ದೇವರ ಜ್ಞಾನ ಅರ್ಥವಾಗದಂತೆ ಮಾಡುತ್ತದೆ. ಆಗ ಅವನಿಗೆ ದೇವರ ಜ್ಞಾನ ಅತ್ಯಂತ ಕಷ್ಟವಾಗಿ ಕಾಣಿಸುತ್ತದೆ.

ಉದಾಹರಣೆಗೆ ಈ ಮಧ್ಯಕಾಲದಲ್ಲಿ ಶ್ರೀಕಾಕುಳಮು ಜಿಲ್ಲೆಯಲ್ಲಿ ಒಬ್ಬ ಮುಸ್ಲಿಮ್ ವ್ಯಕ್ತಿ ನಾವು ಬರೆದ **"ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು"** ಎಂಬ ಗ್ರಂಥವನ್ನು ನೋಡಿ ನಮ್ಮ ಭಕ್ತರೊಂದಿಗೆ ಚರ್ಚಿಸುವುದು ನಡೆದಿದೆ. ಮುಸ್ಲಿಮ್ ಸಮಾಜದಲ್ಲಿ ಪುನರ್ಜನ್ಮಗಳು ಇಲ್ಲ ಎಂದು ಸಮಾಜವೆಲ್ಲಾ ಹೇಳಿಕೊಳ್ಳುತ್ತಿರುವಾಗ ನೀವು ಎಲ್ಲರಿಗೂ ಪುನರ್ಜನ್ಮಗಳಿವೆಯೆಂದು ಬರೆದಿದ್ದೀರ. ಹಾಗೆ ಬರೆದರೆ ನಮ್ಮ ಸಮಾಜವನ್ನು ಹೀಯಾಳಿಸಿದಂತಲ್ಲವೆ! ಎಂದು ಕೇಳಿದ್ದಾನೆ. ಅದಕ್ಕೆ ನಮ್ಮ ಭಕ್ತರು ದೈವಗ್ರಂಥವನ್ನು ಅದನ್ನು ಬರೆದ ಪ್ರವಕ್ತನನ್ನು ಗೌರವಿಸುತ್ತಾ ಖುರ್‌ಆನ್ ಗ್ರಂಥದಲ್ಲಿರುವ ವಾಕ್ಯದ ಪ್ರಕಾರವೇ ಹೇಳಿದ್ದೇವೆ ಹೊರತು ನಮ್ಮ ಸ್ವಂತವಾಗಿ ಹೇಳಲಿಲ್ಲ ಅಲ್ಲವೆ! ಎಂದು ಕೇಳಿದ್ದಾರೆ. ಅದಕ್ಕೆ ಆತನು ಖುರ್‌ಆನ್ ಗ್ರಂಥದಲ್ಲಿ ಎರಡು ಆಯತ್‌ಗಳನ್ನು ತೋರಿಸಿ ನಮ್ಮ ಸಮಾಜಕ್ಕೆ ವಿರುದ್ಧವಾಗಿ ಹೇಳಿದರೇ ಒಳ್ಳೆಯದಾ! ಎಂದು ಕೇಳಿದ್ದಾನೆ. ಹಾಗೆ ಆತನು ಮಾತನಾಡುವುದರಿಂದ ಆತನಿಗೆ ದೇವರ ವಾಕ್ಯದ ಮೇಲೆ ನಂಬಿಕೆ ಇಲ್ಲವೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಆತನು ಮತದಲ್ಲಿ ಮತ ಹಿರಿಯರು ಹೇಳಬೇಕೆನ್ನುತ್ತಾ, ಮತಕ್ಕೇ ಪ್ರಾಧಾನ್ಯತೆ ಕೊಟ್ಟಿದ್ದಾನೆ ಆದರೆ, ದೇವರ ವಾಕ್ಯಕ್ಕೆ ಪ್ರಾಧಾನ್ಯತೆ ಕೊಡಲಿಲ್ಲ. ಅಂತಹವರನ್ನು ಮಾಯೆ ಕಂಡುಹಿಡಿದು ದೇವರಿಗೆ ಇಷ್ಟವಿಲ್ಲದವರಿಗೆ ದೈವ ಜ್ಞಾನದ ಮೇಲೆ ಶ್ರದ್ಧೆ ಇಲ್ಲದಂತೆ ಮಾಡಿ ಅವನನ್ನು ಮತದ ಕಡೆಗೇ ಕಳುಹಿಸುತ್ತದೆ ಹೊರತು, ದೇವರ ಕಡೆಗೆ ಕಳುಹಿಸುವುದಿಲ್ಲ. ಆದ್ದರಿಂದ ದೈವಗ್ರಂಥವಾದ ಭಗವದ್ಗೀತೆಯಲ್ಲಿ **"ನನ್ನನ್ನು ಆರಾಧಿಸದವನನ್ನು, ನನ್ನ ಮಾತಿನ ಮೇಲೆ ನಂಬಿಕೆ ಇಲ್ಲದವನನ್ನು ಮಾಯೆ ನನ್ನ ಕಡೆಗೆ ಬರಲು ಬಿಡುವುದಿಲ್ಲ"** ಎಂದು ಹೇಳಿದ್ದಾನೆ. ಅಂತಹವನಿಗೆ ಮಾಯೆ ದುಸ್ಸಾಧ್ಯವಾಗಿ ಇರುತ್ತದೆ. ಅಂತಹವನು ಮಾಯೆಯನ್ನು ಜಯಿಸದೇ ನನ್ನ ಹತ್ತಿರಕ್ಕೆ ಬರಲಾರನು ಎಂದು ಸಹ ಹೇಳಿದ್ದಾನೆ. ಆದ್ದರಿಂದ ಶ್ರದ್ಧೆ ಇಲ್ಲದವನಿಗೆ ಜ್ಞಾನ ಬಹಳ ಕಷ್ಟವಾದುದಾಗಿ ಇರುತ್ತದೆ. ಶ್ರದ್ಧೆ ಇರುವವನಿಗೆ ಜ್ಞಾನ ಬಹಳ ಸುಲಭವಾಗಿ ಇರುತ್ತದೆ.

ಇಲ್ಲಿಯವರೆಗು ಒಂದು ಜ್ಞಾನಪರೀಕ್ಷೆ ಪ್ರಶ್ನೆಗಳಿಗೆ ಉತ್ತರಗಳನ್ನು ಹೇಳುವುದು ನಡೆದಿದೆ. ಈಗ ಎರಡನೆಯ ಜ್ಞಾನಪರೀಕ್ಷೆ ಪ್ರಶ್ನೆಗಳಿಗೆ ಉತ್ತರಗಳು ಕೊಡುತ್ತಿದ್ದೇವೆ. ಈ ಪರೀಕ್ಷೆಯಲ್ಲಿ ಪ್ರಶ್ನೆಗಳಿಗೆ ಕೆಳಗೆ ನಾಲ್ಕು ಉತ್ತರಗಳನ್ನು ಕೊಡಲಾಗಿವೆ. ಆ ನಾಲ್ಕು ಉತ್ತರಗಳಲ್ಲಿ ಒಂದು ಸರಿಯಾದ ಉತ್ತರ ಇರುತ್ತದೆ. ನಾಲ್ಕು ಉತ್ತರಗಳಲ್ಲಿ ಸರಿಯಾದ ಉತ್ತರವನ್ನು ಗುರುತಿಸಿ ಬರೆಯಬೇಕು. ಆದರೇ ಇಲ್ಲಿ ಕೊಟ್ಟಿರುವ ಪ್ರಶ್ನೆಗಳಲ್ಲಿ ಒಂದು ಪ್ರಶ್ನೆಗೆ ಮಾತ್ರ ನಾಲ್ಕು ಉತ್ತರಗಳಲ್ಲಿ ಸಹ ಸರಿಯಾದ ಉತ್ತರ ಇರುವುದಿಲ್ಲ. ಆ ಪ್ರಶ್ನೆ ಯಾವುದೋ ಗುರುತಿಸಬೇಕು. ಅದಕ್ಕೆ ಸರಿಯಾದ ಉತ್ತರವನ್ನು ಸ್ವತಃವಾಗಿ ಬರೆಯದಿದ್ದರೂ ಫರವಾಗಿಲ್ಲ. ಈಗ ಎರಡನೆಯ ಪರೀಕ್ಷೆಯಲ್ಲಿನ ಪ್ರಶ್ನೆಗಳನ್ನು ಹಾಗೂ ಉತ್ತರಗಳನ್ನು ಕೆಳಗೆ ನೋಡಬಹುದು.

**1041. (1) ಇವುಗಳಲ್ಲಿ ಅಕ್ಷಯ ಆಹಾರ ಯಾವುದು?**

1) ಚಿತ್ರಾನ್ನ 2) ಹಾಲನ್ನ 3) ಮೊಸರನ್ನ 4) ಪರಮಾನ್ನ

**ಉ ॥ ಪರಮಾನ್ನ.**

**ವಿವರ :–** ಭೂಮಿ ಮೇಲೆ ಮನುಷ್ಯನಿಗೆ ಬೇಕಾದ ಆಹಾರಗಳು ಎರಡು ವಿಧಗಳು ಇವೆ. ಒಂದು ವಿಧವಾದ ಆಹಾರವನ್ನು ಕ್ಷಯ ಆಹಾರ ಎಂದೂ, ಎರಡನೆಯದನ್ನು ಅಕ್ಷಯ ಆಹಾರ ಎಂದೂ ಕರೆಯುತ್ತೇವೆ. ಕ್ಷಯ ಎಂದರೆ ನಾಶವೆಂದೂ, ಅಕ್ಷಯ ಎಂದರೇ ನಾಶವಿಲ್ಲದ್ದೆಂದು ಅರ್ಥ. ಕ್ಷಯ ಆಹಾರವೆಂದರೇ ಜೀರ್ಣಾಶಯದಲ್ಲಿ ಜೀರ್ಣವಾಗಿ ಹೋಗುವುದೆಂದು ಅರ್ಥ. ಅಕ್ಷಯ ಆಹಾರವೆಂದರೇ ನಾಶವಾಗದ ಆಹಾರವೆಂದೂ, ಎಲ್ಲಾ ಕಾಲದಲ್ಲೂ ಒಂದೇ ರೀತಿಯಾಗಿ ಇರುವ ಆಹಾರವೆಂದು ಅರ್ಥ. ಇಲ್ಲಿ ಮೇಲಿನ ಪ್ರಶ್ನೆಗೆ ಕೆಳಗೆ ಕೊಟ್ಟಿರುವ ನಾಲ್ಕು ಉತ್ತರಗಳಲ್ಲಿ ಜೀರ್ಣವಾಗುವ ಆಹಾರಗಳು ಮೂರು ಇವೆ. ಅವು ಕ್ರಮವಾಗಿ ಚಿತ್ರಾನ್ನ, ಹಾಲನ್ನ, ಮೊಸರನ್ನ. ಇನ್ನು ಅಕ್ಷಯ ಆಹಾರ ಕೊನೆಯಲ್ಲಿ ಪರಮಾನ್ನವಿದೆ. ಪರಮಾನ್ನವನ್ನು ಬಿಡಿಸಿ ನೋಡಿದರೇ ಪರಮ+ಅನ್ನ= ಪರಮಾನ್ನ ಎಂದು ಹೇಳಬಹುದು. ಪರಮಾನ್ನ ಎಂದರೇ ಅನ್ನಕ್ಕಿಂತ ಬೇರೆಯಾಗಿರುವುದೆಂದು ಹೇಳಬಹುದು. ಎರಡು ವಿಧಗಳ ಆಹಾರಗಳಲ್ಲಿ ಮೊದಲನೆ ಯದಾದ ಕ್ಷಯಾಹಾರ ಜೀರ್ಣವಾಗಿ (ನಾಶವಾಗಿ) ಹೋಗುತ್ತದೆ. ಎರಡನೆಯ ವಿಧ ಆಹಾರವಾದ ಅಕ್ಷಯಾಹಾರ ನಾಶವಾಗದ (ಜೀರ್ಣವಾಗದ) ಆಹಾರವಾಗಿ ಇದೆ. ಅಂತಹ ಆಹಾರ ದೇವರ ಜ್ಞಾನವೇ ಎಂದು ದೈವಗ್ರಂಥಗಳಲ್ಲಿ ಹೇಳಲಾಗಿದೆ. "ದೇವರನ್ನು

ವಿಶ್ವಾಸಿಸಿದವರಿಗೆ ಜೀವಾಹಾರ ಕೊಡಲಾಗುತ್ತದೆ" ಎಂದು ಹೇಳಲಾಗಿದೆ. ಇಲ್ಲಿ ಜೀವಾಹಾರ ಎನ್ನುವುದು ದೈವಜ್ಞಾನವನ್ನೇ ಎಂದು ತಿಳಿಯಬೇಕು. ಒಬ್ಬ ಮನುಷ್ಯ ದೈವ ಜ್ಞಾನವನ್ನು ತಿಳಿಯುವುದಾದರೇ ಅದು ಅವನ ಹತ್ತಿರ ಆ ಜನ್ಮದಲ್ಲೇ ಅಲ್ಲದೆ ಮುಂಬರುವ ಜನ್ಮಗಳಲ್ಲಿ ಸಹ ಅವನ ಹಿಂದೆಯೇ ಇರುತ್ತದೆ. ಹಾಗೆ ಒಬ್ಬ ಮನುಷ್ಯನನ್ನು ಅಂಟಿಕೊಂಡು ಎಂದಿಗೂ ಅವನ ಹತ್ತಿರವಿರುವ ಜ್ಞಾನವನ್ನು ನಾಶವಿಲ್ಲದ ಆಹಾರವೆಂದೂ, ಅಕ್ಷಯ ಆಹಾರವೆಂದೂ ಹಿರಿಯರು ಹೇಳುತ್ತಿದ್ದಾರೆ. ದೈವ ಗ್ರಂಥಗಳಾದ ಮೂರು ಗ್ರಂಥಗಳಲ್ಲಿ ಅಕ್ಷಯ ಆಹಾರ ಸಂಪೂರ್ಣವಾಗಿ ಇದೆ. ಕ್ಷಯಾಹಾರಕ್ಕಾಗಿ ಮನುಷ್ಯ ಶ್ರಮಿಸಿದರೂ ಅದು ಮೂರು ಗಂಟೆಗಳಿಗೇ ಜೀರ್ಣವಾಗಿ ಹೋಗುತ್ತದೆ. ಅಕ್ಷಯ ಆಹಾರಕ್ಕೆ ಶ್ರಮಿಸಬೇಕಾದ ಕೆಲಸವಿಲ್ಲ. ಒಂದು ಸಲ ಸಂಪಾದಿಸಿಕೊಂಡಿರುವುದು ಶಾಶ್ವತವಾಗಿ ಆತನನ್ನು ಬಿಡುವುದಿಲ್ಲ.

**1042. (2) ಮೋಸಗಳಲ್ಲಿ ದೊಡ್ಡ ಮೋಸ ಯಾವುದು?**

1) ಹೆಂಡತಿ ಗಂಡನನ್ನು ಮೋಸ ಮಾಡುವುದು 2) ಗಂಡ ಹೆಂಡತಿಯನ್ನು ಮೋಸ ಮಾಡುವುದು 3) ಮನುಷ್ಯನನ್ನು ದೇವರೆಂದು ನಮಸ್ಕರಿಸುವುದು 4) ದೇವರನ್ನು ಮನುಷ್ಯನೆಂದು ನಮಸ್ಕರಿಸುವುದು.

ಉ॥ ಮನುಷ್ಯನನ್ನು ದೇವರೆಂದು ನಮಸ್ಕರಿಸುವುದು.

**ವಿವರ :–** ಹೆಂಡತಿ ಗಂಡನನ್ನು ಮೋಸ ಮಾಡಿದರೂ, ಗಂಡ ಹೆಂಡತಿಯನ್ನು ಮೋಸ ಮಾಡಿದರೂ, ಅವು ಮೋಸಗಳೇ ಆದರೂ, ಅವುಗಳೆಲ್ಲವುಗಳಿಗಿಂತ ದೊಡ್ಡ ಮೋಸ ಮನುಷ್ಯನನ್ನು ದೇವರೆಂದು ಭಾವಿಸಿ ನಮಸ್ಕರಿಸುವುದೆಂದು ಹೇಳಬಹುದು. ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ದೇವರು ಮನುಷ್ಯನ ಅವತಾರದಲ್ಲಿ ಬರುವನೆಂದು ನೀವೇ ಹೇಳುತ್ತಿದ್ದೀರಲ್ಲವೆ! ಹಾಗೆ ದೇವರು ಮನುಷ್ಯನಾಗಿ ಬಂದಾಗ ಮನುಷ್ಯನನ್ನು ದೇವರೆಂದು ನಂಬಿ ನಮಸ್ಕರಿಸಬಹುದಲ್ಲವೆ! ಅದರಲ್ಲಿ ತಪ್ಪಿಲ್ಲ ಅಲ್ಲವೆ! ಆದರೇ ನೀವು ಮನುಷ್ಯನನ್ನು ದೇವರೆಂದು ನಮಸ್ಕರಿಸುವುದು ದೊಡ್ಡ ಮೋಸವೆನ್ನುತ್ತಿದ್ದೀರ ಹೇಗೆ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೇ! ದೇವರು ಮನುಷ್ಯನಾಗಿ ಬರಬಹುದು ಆದರೆ, ಹಾಗೆ ಬಂದಿರುವವನನ್ನು ಯಾರೂ ಗುರುತಿಸಲಾರರು. ದೇವರು ಮನುಷ್ಯನಾಗಿ ಬಂದು ದೇವರ ಜ್ಞಾನವನ್ನು ಹೇಳಿದರೂ, ಬಂದಿರುವವನು ಇಂತಹವನೆಂದು ಮನುಷ್ಯ ಗುರುತಿಸಲಾರನು. ಅಷ್ಟೇ ಅಲ್ಲದೆ ದೇವರು ಮನುಷ್ಯನಾಗಿ ಬಂದರೂ ಆತನು ಯಾರಿಂದಲೂ ಸಹ ಗುರುತಿಸಲ್ಪಡುವುದಿಲ್ಲ. ಗುರುತಿಸಲಾಗದವನನ್ನು ಗುರುತಿಸಿ

ನಮಸ್ಕರಿಸಲಾರೆವು. ಆದರೇ ಮನುಷ್ಯನೇ ತಾನು ದೇವರು ಅಲ್ಲದಿದ್ದರೂ ತಾನೇ ದೇವರೆಂದು ಪ್ರಕಟಿಸಿಕೊಳ್ಳುವುದರಿಂದ ಇತರರು ಮನುಷ್ಯನನ್ನು ದೇವರೆಂದು ನಂಬುತ್ತಿದ್ದಾರೆ. ಹಾಗೆ ಯಾರು ನಂಬಿದರೂ ನಾನು ದೇವರೆಂದು ನಂಬಿಸುವವನು ಎಂದಿಗೂ ದೇವರಲ್ಲ. **ದೇವರು ಮನುಷ್ಯನಹಾಗೆ ಬರಬಹುದು ಆದರೆ, ಮನುಷ್ಯ ದೇವರ ಹಾಗೆ ನಟಿಸಿದರೂ ಮಹಿಮೆಗಳನ್ನು ತೋರಿಸಿದರೂ ದೇವರಾಗುವುದಿಲ್ಲ**. ಆದ್ದರಿಂದ ತಾನು ದೇವರೆಂದು ನಮಸ್ಕರಿಸಿಕೊಳ್ಳುವ ಮನುಷ್ಯ ಇತರರನ್ನು ಮೋಸ ಮಾಡಿದಂತಾಗುತ್ತದೆ. ಅಷ್ಟೇ ಅಲ್ಲದೆ ಅದು ದೇವರ ವಿಷಯವಾಗಿರುವುದರಿಂದ ಆತನು ಮಾಡುವುದು ಮೋಸಗಳಿಗೆಲ್ಲಾ ದೊಡ್ಡ ಮೋಸವೆಂದು ಹೇಳಬಹುದು.

**1043**. **(3) ಇವುಗಳಲ್ಲಿ ಹಣ್ಣು ಎಂದು ಕರೆಯಲಾಗುವ ಕಾಯಿ ಯಾವುದು**?

1) ತೆಂಗಿನಕಾಯಿ 2) ಗುಂಡಿಗೆ ಕಾಯಿ 3) ತಲೆ ಕಾಯಿ 4) ಅರಳಿಕಾಯಿ

**ಉ॥** ನಾಲ್ಕು ಉತ್ತರಗಳಲ್ಲಿ ಒಂದೂ ಸಹ ಸರಿಯಾದ ಉತ್ತರವಲ್ಲ. ಇದರಲ್ಲಿ ಹಣ್ಣು ಎಂದು ಕರೆಯಲಾಗುವ ಕಾಯಿ ಯಾವುದೂ ಇಲ್ಲ. ಇಲ್ಲಿ ಮೊದಲೇ ಹೇಳಿದಂತೆ ಒಂದು ಪ್ರಶ್ನೆಗೆ ಮಾತ್ರ ಉತ್ತರ ಇರುವುದಿಲ್ಲ. ಅ ಪ್ರಶ್ನೆ ಇದೇಯೆಂದು ಇಲ್ಲಿ ಕೊಟ್ಟಿರುವ ನಾಲ್ಕು ಉತ್ತರಗಳಲ್ಲಿ ಒಂದೂ ಸಹ ಸರಿಯಾಗಿರುವುದು ಇಲ್ಲವೆಂದು ತಿಳಿದಿದೆ. ಉತ್ತರಗಳಾಗಿ ಪ್ರಕಟಿಸಿದ ನಾಲ್ಕು ಕಾಯಿಗಳಲ್ಲಿ ತೆಂಗಿನಕಾಯಿ ಎನ್ನುವುದು ಎಂದಿಗೂ ಅದೇ ಹೆಸರಿನಿಂದ ಕರೆಯಲಾಗುತ್ತಿದೆ ಆದರೆ, ತೆಂಗಿನ ಹಣ್ಣು ಎಂದು ಕರೆಯಲ್ಪಡಲಿಲ್ಲ. ಹಾಗೆಯೇ ಅರಳಿಕಾಯಿ ಎಂದಿಗೂ ಅದೇ ಹೆಸರಿಂದ ಕರೆಯಲಾಗುತ್ತಿದೆ ಆದರೆ ಅರಳಿ ಹಣ್ಣು ಎಂದು ಎಂದಿಗೂ ಕರೆಯಲ್ಪಡಲಿಲ್ಲ. ತೆಂಗಿನಕಾಯಿ, ಅರಳಿಕಾಯಿ ಎರಡೂ ಭೂಮಿ ಮೇಲೆ ವೃಕ್ಷ ಜಾತಿಗಳಿಗೆ ಬೆಳೆಯುವವು ಆದಾಗ, ವೃಕ್ಷವಾಗದ ವೃಕ್ಷವಾದ ಅಶ್ವರ್ಥ ವೃಕ್ಷವೆಂಬ ಮಾನವ ಶರೀರದಲ್ಲಿ ಕಾಯಿ ಎಂದು ಕರೆಯಲ್ಪಡುವ ಗುಂಡಿಗೆ ಕಾಯಿ, ತಲೆಕಾಯಿ ಎಂದು ಎರಡು ಹೆಸರುಗಳು ಹೇಳಲಾಗಿವೆ. ಅಶ್ವರ್ಥ ವೃಕ್ಷಕ್ಕೆ ಕಾದಿರುವ ಈ ಎರಡು ಕಾಯಿಗಳು ಎಂದಿಗೂ ಅದೇ ಹೆಸರಿಂದ ಕರೆಯಲ್ಪಡುತ್ತಿವೆ, ಎಂದಿಗೂ ಗುಂಡಿಗೆ ಹಣ್ಣೆಂದಾಗಲೀ, ತಲೆಹಣ್ಣೆಂದಾಗಲೀ ಯಾರೂ ಹೇಳಲಾರರು. ಈಗ ಈ ನಾಲ್ಕು ಕಾಯಿಗಳು ಸರಿಯಾದ ಉತ್ತರವಲ್ಲವೆಂದು ತಿಳಿದುಹೋಗಿದೆ.

**1044**. **(4) ಎಲ್ಲದಕ್ಕಿಂತ ವೇಗವಾಗಿ ಹೋಗುವುದು ಯಾವುದು**?

1) ಕಾಲ 2) ವಿಮಾನ 3) ಮನಸ್ಸು 4) ಆತ್ಮ

ಉ ॥ ಆತ್ಮ

**ವಿವರ :–** ಈ ಪ್ರಶ್ನೆಗೆ ಬಹಳ ಜನ ಮನಸ್ಸು ಎಂದು ಉತ್ತರ ಬರೆದಿದ್ದಾರೆ. ಆತ್ಮವನ್ನು ಹೊರತು ಎಲ್ಲದಕ್ಕಿಂತ ವೇಗವಾಗಿರುವುದು ಮನಸ್ಸೇ ಆಗುತ್ತದೆ. ಆದರೇ ಆತ್ಮ ಇರುವುದರಿಂದ ಮನಸ್ಸಿಗಿಂತ ವೇಗವಾಗಿರುವುದು ಆತ್ಮವೆಂದು ಹೇಳಬೇಕಾಗಿದೆ. ವಿವರದೊಳಗೆ ಹೋದರೇ ಕಾಲ ನಿದಾನವಾಗಿ ಒಂದೇ ವೇಗದಲ್ಲಿ ನಡೆಯುತ್ತಿರುತ್ತದೆ. ಆದ್ದರಿಂದ ಕಾಲ ಎನ್ನುವುದು ಯಾವ ರೀತಿಯಲ್ಲೂ ಸಹ ಈ ಪ್ರಶ್ನೆಗೆ ಉತ್ತರವಲ್ಲ. ಎರಡನೆಯದು ವಿಮಾನ ಎಂದು ಇದೆ. ವಿಮಾನ ನಾಲ್ಕು ನೂರಿನಿಂದ ಸಾವಿರ ಕಿಲೋಮೀಟರ್‌ಗಳ ವೇಗದಿಂದ ಮಾತ್ರವೇ ಹೋಗಬಲ್ಲದು. ಮನಸ್ಸಿಗಿಂತ ಬಹಳ ಕಡಿಮೆ ವೇಗವಿರುವುದು ವಿಮಾನ ಆಗಿರುವುದರಿಂದ ವಿಮಾನ ಎನ್ನುವುದು ಸಹ ಸರಿಯಾದ ಉತ್ತರವಲ್ಲ. ಕಾಲವನ್ನು ಹೊರಗೆ ಗಡಿಯಾರದಲ್ಲಿ ಗಂಟೆಗಳು, ನಿಮಿಷಗಳಾಗಿ ಲೆಕ್ಕಿಸಲಾಗುತ್ತಿದೆ. ಹಾಗೆಯೇ ವಿಮಾನದ ವೇಗವೂ ಸಹ ಲೆಕ್ಕಿಸಲಾಗುತ್ತಿದೆ. ಈ ಎರಡೂ ಬಾಹ್ಯ ಸಂಬಂಧವಾಗಿರುವವು ಆದಾಗ, ಶರೀರದಲ್ಲಿ ಅಂತರ್ಮುಖವಾಗಿ ಮನಸ್ಸು, ಆತ್ಮ ಇವೆ. ಆದರೇ ಆತ್ಮ ವಿಷಯ ಇಲ್ಲಿಯವರೆಗು ಯಾರಿಗೂ ತಿಳಿದಿಲ್ಲ. ಈಗ ನಮ್ಮ ಗ್ರಂಥಗಳಲ್ಲಿ ಮಾತ್ರ ಆತ್ಮ ಎನ್ನುವುದು ಪ್ರತ್ಯೇಕವಾಗಿ ಇದೆಯೆಂದು ಹೇಳುತ್ತಿದ್ದೇವೆ. ಮನುಷ್ಯ ಶರೀರದಿಂದ ಬದುಕಿರುವಾಗ ಆತ್ಮ ಚಲಿಸದೇ ಶರೀರದಲ್ಲೇ ಇರುತ್ತದೆ. ಆದರೇ ಮನಸ್ಸು ಮಾತ್ರ ಮನುಷ್ಯ ಬದುಕಿರುವವರೆಗೂ ವಿಷಯಗಳ ಮೇಲೆ ವೇಗವಾಗಿ ಹರಡುತ್ತಿರುತ್ತದೆ. ಮನಸ್ಸು ಹರಡುವ ವೇಗವನ್ನು 'ಮನೋವೇಗ' ಎಂದು ಕೆಲವರನ್ನುತ್ತಿರುತ್ತಾರೆ. ಮನುಷ್ಯ ಬದುಕಿರುವಾಗ ಮಾತ್ರ ವೇಗವಾಗಿ ವಿಷಯಗಳ ಮೇಲೆ ಹರಡುವ ಮನಸ್ಸು, ಮನುಷ್ಯ ಮರಣಿಸಿದಾಗ ಇಲ್ಲದಂತೆ ಹೋಗುತ್ತದೆ. ಆಗ ಮನಸ್ಸು ಇಲ್ಲ, ಮನಸ್ಸಿಗೆ ವೇಗವೂ ಇಲ್ಲ. ಮನುಷ್ಯ ಬದುಕಿರುವಾಗ ಯಾವ ಚಲನೆಯಿಲ್ಲದ ಆತ್ಮ ಮನುಷ್ಯ ಮರಣಿಸಿದ ಕೂಡಲೇ ಆ ಶರೀರದಲ್ಲಿನ ಜೀವಿಯನ್ನು ಆತನ ಕರ್ಮಗಳನ್ನು ತೆಗೆದುಕೊಂಡು ಹೊರಟುಹೋಗಿ, ಆ ಜೀವಿಯು ಎಲ್ಲಿಗೆ ಹೋಗಬೇಕಾಗಿದೆಯೋ ಅಲ್ಲಿಗೆ ಅದೇ ಕ್ಷಣವೆ ಸೇರಿಹೋಗುತ್ತದೆ. ಜೀವಿಯು ಇಂಡಿಯಾದಲ್ಲಿ ಮರಣಿಸಿ ಅಮೆರಿಕಾದಲ್ಲಿ ಹುಟ್ಟಬೇಕಾಗಿದ್ದರೂ ಅದೇ ಸೆಕೆಂಡಿನಲ್ಲಿಯೇ ಅತ್ಮ ಜೀವಿಯೊಂದಿಗೆ ಸಹ ಹೊರಟು ಹೋಗುತ್ತದೆ. ಒಂದು ವೇಳೆ ಭೂಮಂಡಳದಲ್ಲಿ ಅಲ್ಲದೆ ಮರಣಿಸಿದ ಜೀವಿಯು ಬೇರೆ ಗೋಳದ ಮೇಲೆ ಹುಟ್ಟಬೇಕಾಗಿದ್ದರೇ ಆ ಗೋಳ ಖಗೋಳದಲ್ಲಿ ಎಷ್ಟು ದೂರವಿದ್ದರೂ ಆತ್ಮ ಅದೇ ಕ್ಷಣ ಅಲ್ಲಿಗೆ ಹೋಗುವ ವೇಗ ಹೊಂದಿರುವುದಾಗಿ ಇದೆ. ಮನಸ್ಸಿಗಿಂತ ಅತಿ ವೇಗವಾಗಿರುವುದು ಆತ್ಮ ಆಗಿರುವುದರಿಂದ ಈ ಪ್ರಶ್ನೆಗೆ ಸರಿಯಾದ ಉತ್ತರ ಆತ್ಮವೇಯೆಂದು ಹೇಳಬಹುದು.

**1045. (5) ಹೆಚ್ಚಿನ ಆನಂದ ಎಲ್ಲಿದೆ?**

1) ಸುಖದಲ್ಲಾ 2) ದೇವರಲ್ಲಾ 3) ಆತ್ಮದಲ್ಲಾ 4) ಜ್ಞಾನದಲ್ಲಾ

ಉ ॥ ಜ್ಞಾನದಲ್ಲಿ

**ವಿವರ :–** ಈ ಪ್ರಶ್ನೆಗೆ ನೂರಕ್ಕೆ ಶೇ. 95ರಷ್ಟು ಸರಿಯಾದ ಉತ್ತರವನ್ನು ಬರೆದಿದ್ದಾರೆ. ವಾಸ್ತವವಾಗಿ ಜ್ಞಾನದಲ್ಲಿ ಇರುವ ಆನಂದ ಯಾವುದರಲ್ಲೂ ಇರುವುದಿಲ್ಲವೆಂದು ಹೇಳಬಹುದು. ಇಲ್ಲಿ ಕೆಲವರು ಒಂದು ಪ್ರಶ್ನೆ ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೇ! ಸುಖಃದಲ್ಲಿ ಇಲ್ಲದ ಆನಂದವನ್ನು ಮನುಷ್ಯ ಜ್ಞಾನದಲ್ಲಿ ಹೊಂದುತ್ತಿದ್ದಾನೆಂದರೇ ಅದು ನಂಬಬಹುದಾದ ಮಾತೇ ಆಗುತ್ತದೆ. ಆದರೇ ದೇವರು ಮತ್ತು ಆತ್ಮದ ನಂತರವೇ ಜ್ಞಾನವಿದೆ. ದೇವರಿಗೂ ಮತ್ತು ಆತ್ಮಕ್ಕೂ ಸಂಬಂಧಿಸಿರುವುದೇ ಜ್ಞಾನ. ದೇವರಲ್ಲಿ ಇಲ್ಲದ ಆನಂದ ದೇವರ ಜ್ಞಾನದಲ್ಲಿ ಇರುತ್ತದಾ? ಆತ್ಮದಲ್ಲಿ ಇಲ್ಲದ ಆನಂದ ಆತ್ಮ ಜ್ಞಾನದಲ್ಲಿ ಇದೆಯಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಈ ವಿಧವಾಗಿ ಇದೆ. ಮನುಷ್ಯ ಅನೇಕ ವಿಷಯಗಳಲ್ಲಿ ಅಥವಾ ಅನೆಕ ಸಂಘಟನೆಗಳಲ್ಲಿ ಸುಖವನ್ನು ಹೊಂದುತ್ತಿದ್ದಾನೆ. ಸುಖವನ್ನು ಹೊಂದಿದರೂ ಆ ಅನುಭೂತಿಯಲ್ಲಿ ಮನುಷ್ಯ ಪೂರ್ತಿ ಆನಂದವನ್ನು ಹೊಂದಲಾರದೆ ಹೋಗುತ್ತಿದ್ದಾನೆ. ಯಾವಾಗಾದರೆ ಆತ್ಮಜ್ಞಾನವನ್ನು ತಿಳಿಯುತ್ತಿದ್ದಾನೋ ಆಗ ಹೇಳಲಾರದ ಅನುಭೂತಿಯನ್ನು ಹೊಂದುತ್ತಿದ್ದಾನೆ. ಆತ್ಮ ಜ್ಞಾನವನ್ನು ಹೊಂದಿದಾಗ ಅನುಭವಿಸಿದ ಆನಂದ ಅಲ್ಲಿಯವರೆಗೂ ಪ್ರಪಂಚ ಸುಖಗಳು ಎಷ್ಟು ಅನುಭವಿಸಿದರೂ ಎಲ್ಲೂ ಸಿಗಲಿಲ್ಲವೆಂದು ತಿಳಿದುಹೋಗುತ್ತದೆ. ಆನಂದದಲ್ಲಿ ಪಡೆದ ಪ್ರತ್ಯೇಕವಾದ ಅನುಭವದಿಂದ ಮನುಷ್ಯನ ಕಣ್ಣಿನಲ್ಲಿ ನೀರು ಬರುತ್ತಿವೆ. ದೈವಜ್ಞಾನದಲ್ಲಾಗಲೀ ಅಥವಾ ಆತ್ಮಜ್ಞಾನದಲ್ಲಾಗಲೀ ಅಷ್ಟು ಆನಂದವನ್ನು ಮನುಷ್ಯ ಹೊಂದುತ್ತಿದ್ದಾನೆಂದು ಹೇಳುವ ನಾವು ದೇವರಲ್ಲಾಗಲೀ, ಆತ್ಮದಲ್ಲಾಗಲೀ ಮನುಷ್ಯ ಜ್ಞಾನದಲ್ಲಿ ಹೊಂದಿದ ಆನಂದವನ್ನು ಹೊಂದಲಾರನೆಂದು ಹೇಳುತ್ತಿದ್ದೇವೆ. ಇಲ್ಲಿ ಈ ಮಾತು ಕೇಳಿದ ಪ್ರತಿ ಒಬ್ಬರು ಆತ್ಮಜ್ಞಾನದಲ್ಲಿರುವ ಆನಂದ ಆತ್ಮನಲ್ಲಿ ಇಲ್ಲವಾ? ದೈವಜ್ಞಾನದಲ್ಲಿರುವ ಆನಂದ ದೇವರಲ್ಲಿ ಇಲ್ಲವಾ? ಎಂದು ಪ್ರಶ್ನಿಸಬಹುದು. ಈ ಪ್ರಶ್ನೆ ಪದ್ಧತಿ ಪ್ರಕಾರ ಎಲ್ಲರಿಗೂ ಬರುತ್ತದೆ. ಆದರೇ ನಾವು ಹಾಗೆ ಹೇಳುವುದಕ್ಕೆ ಕಾರಣವಿದೆ. ಅದೇನೆಂದರೇ! ಮನುಷ್ಯನಾಗಿರುವವನು ಎಂದರೇ ಮನುಷ್ಯ ಶರೀರದಲ್ಲಿನ ಜೀವಾತ್ಮ ಬ್ರಹ್ಮಯೋಗ ಮಾಡಿದಾಗ ಶರೀರದಲ್ಲೇ ಇರುವ ಆತ್ಮದಲ್ಲಿ ಬೆರೆತುಹೋಗುತ್ತದೆ. 'ಸ್ಪರ್ಶವೇದಿ'

ಎಂಬ ಎಲೆಯರಸದಿಂದ ಕಬ್ಬಿಣದ ತುಂಡು ಬಂಗಾರದಂತೆ ಬದಲಾಗಿ ಹೋದಾಗ ಅಲ್ಲಿ ಕಬ್ಬಿಣದ ತುಂಡು ಎನ್ನುವುದು ಇಲ್ಲ ಅಲ್ಲವೆ! ಹಾಗಿರುವಾಗ ಕಬ್ಬಿಣದ ತುಂಡು ಕಪ್ಪಾಗಿದೆಯೆಂದು ಇಲ್ಲದ ಕಬ್ಬಿಣದ ತುಂಡನ್ನು ಕುರಿತು ಹೇಳಲಾರೆವು ಅಲ್ಲವೆ! ಹಾಗೆಯೇ ಬ್ರಹ್ಮಯೋಗದಿಂದ ಜೀವಾತ್ಮ ಆತ್ಮನಲ್ಲಿ ಬೆರೆತು ಹೋದಾಗ ಪ್ರತ್ಯೇಕಿಸಿ ಜೀವಿಯನ್ನು ಕುರಿತು ಮಾತನಾಡುವುದಕ್ಕೆ ಜೀವಿಯು ಇಲ್ಲ ಅಲ್ಲವೆ! ಸ್ಪರ್ಶವೇದಿಯಿಂದ ಬಂಗಾರವಾಗಿ ಬದಲಾದ ಕಬ್ಬಿಣ ತುಂಡನ್ನು ಕುರಿತು ಹೇಗೆ ಮಾತನಾಡಲಾರೆವೋ, ಹಾಗೆಯೇ ಬ್ರಹ್ಮಯೋಗದಿಂದ ಆತ್ಮವಾಗಿ ಬದಲಾದ ಜೀವಾತ್ಮನನ್ನು ಕುರಿತು ಮಾತನಾಡಲಾರೆವು. ಏಕೆಂದರೇ ಬಂಗಾರದಂತೆ ಬದಲಾದ ನಂತರ ಕಬ್ಬಿಣದ ತುಂಡು ಇಲ್ಲ, ಆತ್ಮವಾಗಿ ಬದಲಾದ ನಂತರ ಜೀವಾತ್ಮವೂ ಇಲ್ಲ. ಆದ್ದರಿಂದ ಇಲ್ಲದ ಕಬ್ಬಿಣವನ್ನು ಕುರಿತು, ಇಲ್ಲದ ಜೀವಿಯನ್ನು ಕುರಿತು ಮಾತನಾಡಲಾರೆವು.

ಆತ್ಮದಲ್ಲಿ ಬೆರೆತು ಹೋದ ಜೀವಾತ್ಮ ಇಲ್ಲದಿರುವುದರಿಂದ ಜೀವಾತ್ಮ ಅನುಭವಿಸುವುದು ಯಾವುದೂ ಇಲ್ಲ. ಅದೇ ರೀತಿ ದೇವರಲ್ಲಿ ಬೆರೆತುಹೋದ ಜೀವಿಯು ಪೂರ್ತಿ ದೇವರಾಗಿ ಬದಲಾಗಿರುತ್ತಾನೆ. ಅಂತಹ ಸಮಯದಲ್ಲಿ ಜೀವಿಯು ಪ್ರತ್ಯೇಕವಾಗಿ ಉಳಿದಿಲ್ಲ ಆದ್ದರಿಂದ ದೇವರಲ್ಲಿರುವ ಜೀವಿಯು ಏನೂ ಅನುಭವಿಸುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಆತ್ಮನಲ್ಲಾಗಲೀ, ದೇವರಲ್ಲಾಗಲೀ ಜೀವಿಯು ಆನಂದವನ್ನು ಹೊಂದಲಾರನೆಂದು ಹೇಳುತ್ತಿದ್ದೇವೆ. ಜೀವಿಯು ದೇವರ ಜ್ಞಾನವನ್ನು ಹೊಂದಿದಾಗ ಆನಂದವನ್ನು ಅನುಭವಿಸುತ್ತಿದ್ದಾನೆ. ಯೋಗ ಹೊಂದಿದಾಗ ಜೀವಿಯು ಆತ್ಮವಾಗಿ ಇರುವುದರಿಂದ, ಮೋಕ್ಷ ಹೊಂದಿದಾಗ ಜೀವಿಯು ದೇವರಾಗಿ ಇರುವುದರಿಂದ ಯಾರೇ ಆದರೂ (ಯಾವ ಜೀವಿಯಾದರೂ) ಆನಂದವನ್ನು ಅನುಭವಿಸುವುದಕ್ಕೆ ಸಾಧ್ಯವಿಲ್ಲ. ಮತ್ತೊಂದು ವಿಷಯವೇನೆಂದರೇ ಬ್ರಹ್ಮಯೋಗದಲ್ಲಿ ಆತ್ಮದಲ್ಲಿ ಬೆರೆತಿರುವ ಜೀವಿಯು ಯೋಗವನ್ನು ಬಿಟ್ಟ ನಂತರ ಆತ್ಮದಿಂದ ಹೊರಗೆ ಬಂದು ಪ್ರತ್ಯೇಕ ಜೀವಿಯಾಗಿ ಇರುತ್ತದೆ. ಆದರೇ ದೇವರಲ್ಲಿ ಒಂದು ಬಾರಿ ಐಕ್ಯವಾಗಿ ಮೋಕ್ಷ ಹೊಂದಿದವನು, ಪುನಃ ದೇವರಿಂದ ಹೊರಬರುವುದು ಅಸಂಭವ. ಒಂದು ಬಾರಿ ಮೋಕ್ಷ ಹೊಂದಿದ ಜೀವಿಯು ಶಾಶ್ವತವಾಗಿ ದೇವರಲ್ಲೇ ನಿಂತುಹೋಗುವನು. ಅಂತಹವನು ಪುನಃ ಎಂದಿಗೂ ಜೀವಿಯಾಗಿ ಹೊರಬಿದ್ದು ಜನ್ಮಗಳೆತ್ತುವುದು ಇರುವುದಿಲ್ಲ. ಆತ್ಮನಲ್ಲಿ ಬೆರೆತ ಜೀವಿಯು ಆತ್ಮನಿಂದ ಹೊರಬರಬಹುದು ಆದರೆ, ದೇವರಲ್ಲಿ ಬೆರೆತು ಹೋದವನು ಪುನಃ ಹೊರಗೆ ಬರುವುದಿಲ್ಲ. ಎಲ್ಲಾ ವಿಧಗಳಲ್ಲಿ ಈ ಪ್ರಶ್ನೆಗೆ ಉತ್ತರ ಜೀವಿಯು ಜ್ಞಾನವನ್ನು ಹೊಂದಿದಾಗ ಆನಂದವನ್ನು ಹೊಂದುವನೆಂದು ಹೇಳಬಹುದು.

**1046. (6) ಜ್ಞಾನಗಳಲ್ಲಿ ಯಾವ ಜ್ಞಾನ ಶ್ರೇಷ್ಠವಾದದ್ದು?**

1) ಪ್ರಕೃತಿ ಜ್ಞಾನ 2) ಪರಮಾತ್ಮ ಜ್ಞಾನ 3) ಆತ್ಮ ಜ್ಞಾನ 4) ಜೀವಾತ್ಮ ಜ್ಞಾನ

ಉ॥ ಪ್ರಕೃತಿ ಜ್ಞಾನ

**ವಿವರ :–** ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಯಾರೂ ಬರೆಯಲಿಲ್ಲ. ಬಹಳ ಜನ ಪರಮಾತ್ಮ ಜ್ಞಾನವೆಂದೋ ಅಥವಾ ಆತ್ಮಜ್ಞಾನವೆಂದೋ ಬರೆದಿದ್ದಾರೆ. ವಾಸ್ತವಕ್ಕೆ ಜ್ಞಾನಗಳಲ್ಲಿ ಪರಮಾತ್ಮ ಜ್ಞಾನ ದೊಡ್ಡದಾದರೂ, ಮನುಷ್ಯ ಕಲಿಯುವುದಕ್ಕೆ ಪ್ರಕೃತಿ ಜ್ಞಾನವೇ ದೊಡ್ಡದೆಂದು ಹೇಳಬಹುದು. ಭಗವದ್ಗೀತೆಯಲ್ಲಿನ ವಿಜ್ಞಾನ ಯೋಗದಲ್ಲಿ 14ನೇ ಶ್ಲೋಕದಲ್ಲಿ **"ನನ್ನಿಂದ ತಯಾರು ಮಾಡಲಾಗಿರುವ ಮಾಯೆಯನ್ನು ದಾಟುವುದು ದುಸ್ಸಾಧ್ಯ"** ಎಂದು ಭಗವಂತನೇ ಹೇಳಿದ್ದಾನೆ. ಆ ಮಾತಿನ ಪ್ರಕಾರ ಮನುಷ್ಯ ದೇವರ ಕಡೆ ಬರಬೇಕೆಂದರೇ ಮೊದಲು ಪ್ರಕೃತಿ ಸಂಬಂಧ ಜ್ಞಾನವನ್ನು ತಿಳಿಯಬೇಕಾಗಿರುತ್ತದೆ. ಪ್ರಕೃತಿ ಸಂಬಂಧ ಜ್ಞಾನವೆಂದರೇ ಪ್ರಪಂಚ ವಿಷಯಗಳೆಂದು ಅಂದುಕೊಳ್ಳಬಾರದು. ಪ್ರಕೃತಿ ಜ್ಞಾನವೆಂದರೇ ಪ್ರಕೃತಿ ಜನಿತಗಳಾದ ಗುಣಗಳನ್ನು ಕುರಿತು, ಗುಣಗಳ ಸಮ್ಮೇಳನವಾದ ಮಾಯೆಯನ್ನು ಕುರಿತು ತಿಳಿದುಕೊಳ್ಳುವುದೆಂದು ಅರ್ಥ. ಮಾಯೆಯನ್ನು ಕುರಿತು ತಿಳಿಯದೇ ಮಾಯೆಯನ್ನು ಜಯಿಸಿ, ದೇವರಕಡೆ ಬರುವುದು ಬಹಳ ಕಷ್ಟವಾದ ಕೆಲಸವಾಗುತ್ತದೆ. ದೇವರನ್ನು ತಿಳಿಯಬೇಕೆಂದರೇ, ದೇವರ ಜ್ಞಾನ ಅರ್ಥವಾಗಬೇಕೆಂದರೇ, ಮೊದಲು ಮಾಯೆಯನ್ನು ಜಯಿಸಬೇಕಾಗಿರುತ್ತದೆ. ಮಾಯೆಯನ್ನು ಜಯಿಸುವುದಕ್ಕೆ ಅಥವಾ ದಾಟುವುದಕ್ಕೆ ಮೊದಲು ಮಾಯೆಯನ್ನು ಕುರಿತು ತಿಳಿಯಬೇಕಾಗಿರುತ್ತದೆ. ಮಾಯೆ ದುಸ್ಸಾಧ್ಯವಾದದ್ದು ಆದ್ದರಿಂದ ದೇವರನ್ನು ನಂಬುವವನು ಮೊದಲು ಮಾಯೆಯನ್ನು ಕುರಿತು ಪೂರ್ತಿ ತಿಳಿಯದಂತೆ ಕೇವಲ ದೇವರನ್ನು ಕುರಿತು ತಿಳಿಯಬೇಕೆಂದರೇ ಅದು ಸಾಧ್ಯವಾಗುವ ಕೆಲಸವಲ್ಲ. ಆದ್ದರಿಂದ ಮೊದಲು ತಿಳಿಯಬೇಕಾದ ಜ್ಞಾನಯಾವುದೋ ಅದೇ ಮನುಷ್ಯನಿಗೆ ದೊಡ್ಡ ಜ್ಞಾನವಾಗಿ ಇದೆ. ಅದರ ಪ್ರಕಾರವೇ ಪ್ರಕೃತಿ ಜ್ಞಾನವೆಂದು ಸಮಾಧಾನ ಹೇಳಬೇಕಾಗಿ ಬಂದಿದೆ. ಭೂಮಿಮೇಲೆ ಬಹಳ ಜನ ಪ್ರಕೃತಿ ಜ್ಞಾನವನ್ನು ಬಿಟ್ಟು ನೇರವಾಗಿ ದೈವಜ್ಞಾನವನ್ನು ಆಶ್ರಯಿಸಿದ್ದಾರೆ. ಆದರೂ ಅವರಿಗೆ ದೈವಜ್ಞಾನ ಅರ್ಥವಾಗದಂತೆ ಹೋಗಿದೆ. ಭೂಮಿ ಮೇಲಿರುವ ಮೂರು ಮುಖ್ಯ ಮತಗಳಾದ ಇಂದೂ, ಇಸ್ಲಾಮ್, ಕ್ರೈಸ್ತದವರು ಪ್ರಕೃತಿ ಜ್ಞಾನವನ್ನು ಬಿಟ್ಟು ಅದನ್ನು ತಿಳಿಯದಂತೆ ನೇರವಾಗಿ ದೇವರ ಜ್ಞಾನವನ್ನು ಹೇಳಿಕೊಳ್ಳುತ್ತಿದ್ದರೂ, ಅವರು ಮಾತ್ರ ಮಾಯೆಯಲ್ಲಿ ಸಿಲುಕಿಕೊಂಡಿದ್ದಾರೆ. ಮಾಯೆ

ಕರುಣಿಸದೇ ದೇವರ ವಾಕ್ಯ ಯಾರಿಗೂ ಅರ್ಥವಾಗುವುದಿಲ್ಲ. ಆದ್ದರಿಂದ ಎಷ್ಟೋ ಅನುಭವವಿರುವ ಜ್ಞಾನಿ, ಯೋಗಿ ಆದ ವೇಮನಯೋಗಿ ತನ್ನ ಪದ್ಯದಲ್ಲಿ **"ಪತಿಯೊಪ್ಪಿದರೆ ಸತಿಯೊಪ್ಪುವಳು"** ಎಂದು ಹೇಳಿದ್ದಾನೆ. ಪತಿ ಎಂದರೇ ದೇವರು ಎಂದೂ, ಸತಿ ಎಂದರೇ ಪ್ರಕೃತಿ ಎಂದು ಆತನ ಭಾವನೆ. ದೇವರು ಒಪ್ಪಿಕೊಂಡರೇನೆ ದೇವರ ಅನುಮತಿಯಿಂದಲೇ ದೇವರಿಗೆ ಸತಿ ಆದ ಮಾಯೆ ಮನುಷ್ಯನಿಗೆ ಜ್ಞಾನವನ್ನು ಅರ್ಥವಾಗುವಂತೆ ಮಾಡುತ್ತದೆ. ಪತಿ ಸತಿ ಇಬ್ಬರ ಸಹಕಾರವಿದ್ದರೇನೆ ಮನುಷ್ಯನಿಗೆ ಜನ್ಮರಾಹಿತ್ಯ ಏರ್ಪಡುತ್ತದೆ. ಆದ್ದರಿಂದ ದೇವರ ಜ್ಞಾನ ಅರ್ಥವಾಗಬೇಕೆಂದರೇ ಮೊದಲು ಮಾಯೆ ಜ್ಞಾನ ತಿಳಿಯಬೇಕು. ದೇವರ ಜ್ಞಾನಕ್ಕಿಂತ ಮನುಷ್ಯನಿಗೆ ಮಾಯೆ ಜ್ಞಾನ ಬಹಳ ಕಷ್ಟವಾದದ್ದು. ಮಾಯಾ ವಿಧಾನ ಶರೀರದಲ್ಲಿ ಹೇಗಿದೆಯೆಂದು ತಿಳಿಯದಂತೆ ಹೊರಗೆ ನಾವು ದೇವರನ್ನು ವಿಶ್ವಾಸಿಸಿದ್ದೇವೆ, ನಾವು ದೇವರ ಭಕ್ತರು ಎನ್ನುವವರಿಗೆ ಇಲ್ಲಿಯವರೆಗೂ ದೇವರ ಜ್ಞಾನ ಅರ್ಥವಾಗಲಿಲ್ಲ. ಯಾವ ರೀತಿಯಾಗಿ ಒಬ್ಬ ಮನುಷ್ಯನಿಗೆ ತಾಯಿ ತಂದೆ ಎಷ್ಟು ಮುಖ್ಯವೋ, ಅದೇ ರೀತಿ ಮನುಷ್ಯನಿಗೆ ಪ್ರಕೃತಿ ಪರಮಾತ್ಮ ಮುಖ್ಯವಾಗಿ ಇದ್ದಾರೆ. ತಾಯಿ ಇಲ್ಲದೆ ಯಾವ ಮನುಷ್ಯ ಹುಟ್ಟಲಿಲ್ಲವೋ ಅದೇ ರೀತಿ ಪ್ರಕೃತಿ ಇಲ್ಲದಂತೆ ಯಾವ ಮನುಷ್ಯ ಹುಟ್ಟಲಿಲ್ಲ. ತಾಯಿ ಸಹಕಾರ ಇಲ್ಲದೇ ತಂದೆ ಹೇಗೆ ತಿಳಿಯುವುದಿಲ್ಲವೋ ಹಾಗೆಯೇ ಮಾಯೆ (ಪ್ರಕೃತಿ) ಸಹಕಾರ ಇಲ್ಲದೆ ದೇವರು ಯಾರಾಗಿರುವುದು ತಿಳಿದಿಲ್ಲ. ಈದಿನ ಮಾಯೆ ವಿಧಾನ ತಮ್ಮ ಶರೀರಗಳಲ್ಲಿ ಹೇಗಿದೆಯೋ ತಿಳಿಯದಂತೆ ಬಹಳ ಮತದವರು ನೇರವಾಗಿ ದೇವರು ಪ್ರಾರ್ಥನೆ ಎಂದು ಅನ್ನುತ್ತಿದ್ದಾರೆ. ಆದ್ದರಿಂದ ಅವರಿಗೆ ದೈವಗ್ರಂಥರೂಪದಲ್ಲಿರುವ ದೇವರ ಜ್ಞಾನ ಸ್ವಲ್ಪವಾದರೂ ಅರ್ಥವಾಗಲಿಲ್ಲ. ಆದರೂ ಅವರಿಗೆ ನಿಮಿಗಿಂತ ತಿಳಿದವರಿಲ್ಲವೆಂದು ಮಾಯೆ ಅವರನ್ನು ನಂಬಿಸಿ, ಎಷ್ಟು ಕಾಲವಿದ್ದರೂ ಅವರಿಗೆ ದೇವರ ವಿಧಾನವೇ ತಿಳಿಯದಂತೆ ಮಾಡಿದೆ. ಅಂತಹವರು ಜ್ಞಾನವೆಲ್ಲಾ ನಮಗೆ ತಿಳಿದಿದೆ ಎಂಬ ಗರ್ವದಿಂದ ಇದ್ದಾರೆ. ವಾಸ್ತವವಾಗಿ ಅವರಿಗೆ ಸ್ವಲ್ಪವೂ ದೇವರ ಜ್ಞಾನ ಅರ್ಥವಾಗಿಲ್ಲವೆಂದು ತಿಳಿಯದಂತೆ ಹೋಗಿದೆ. ಈದಿನ ನಾವು ಉಳಿದ ಪ್ರಜೆಗಳಿಗಿಂತ ದೊಡ್ಡ ಜ್ಞಾನಿಗಳು ಎಂದುಕೊಳ್ಳುವ ಉಳಿದ ಮತಹಿರಿಯರಾಗಲೀ, ಹಿಂದೂ ಮತದಲ್ಲಿ ಉಳಿದ ಪ್ರಜೆಗಳಿಗೆ ಬೋಧಿಸುವ ಬೋಧಕರಾಗಿ ಇರುವವರಾಗಲೀ, ಮಾಯೆ ವಿಧಾನವನ್ನು ತಿಳಿಯದೆ ದೈವಜ್ಞಾನವೆಲ್ಲಾ ತಿಳಿದಿದೆ ಎಂದುಕೊಳ್ಳುತ್ತಿದ್ದಾರೆ. ಅವರ ದೃಷ್ಠಿ ಅವರ ಶರೀರದಲ್ಲಿರುವ ಮಾಯೆ ಕಡೆಗೆ ಹೋಗಲಿಲ್ಲ. ಅವರಿಗೆ ಮಾಯೆ ಜ್ಞಾನವಾದ ಪ್ರಕೃತಿ ಜ್ಞಾನ ತಿಳಿದಿಲ್ಲ. ಜ್ಞಾನಗಳಿಗೆಲ್ಲಾ ದೊಡ್ಡದಾದ ಪ್ರಕೃತಿ ಜ್ಞಾನವನ್ನು ತಿಳಿಯದವರು ನಂತರ ಸುಲಭವಾದ ಪರಮಾತ್ಮ ಜ್ಞಾನವನ್ನು ತಿಳಿಯದೆ ನಾವು ತಿಳಿದವರೆಂದು ಇತರರೊಂದಿಗೆ

ವಾದಿಸುತ್ತಿದ್ದಾರೆ. ತಾಯಿಯಿಂದ ತಂದೆ ತಿಳಿದಹಾಗೆ ಪ್ರಕೃತಿಯಿಂದಲೇ ಪರಮಾತ್ಮನನ್ನು ತಿಳಿಯಬೇಕೆಂಬ ಸೂತ್ರವನ್ನು ಮರೆಯಬಾರದು.

**1047. (7) ಮೂಲಿ ಮೂವರನ್ನು ಕೆಡಿಸಿದರೆ, ಅವನ ಆಲಿ (ಹೆಂಡತಿ) ನಾಲ್ವರನ್ನು ಕೆಡಿಸಿದಳು. ಮೂಲಿ ಯಾರು? ಅವನ ಆಲಿ ಯಾರು?**

1) ಕುರುಡನು 2) ಕುಂಟನು 3) ಏನೂ ಮಾಡದವನು 4) ಏನೂ ಕೈಲಾಗದವನು.

1) ಕುರುಡನ ಹೆಂಡತಿ 2) ಕುಂಟನ ಹೆಂಡತಿ 3) ಏನೂ ಮಾಡದವನ ಹೆಂಡತಿ 4) ಏನೂ ಕೈಲಾಗದವನ ಹೆಂಡತಿ.

ಉ ॥ ಏನೂ ಮಾಡದವನು, ಏನೂ ಮಾಡದವನ ಹೆಂಡತಿ.

**ವಿವರ :–** ಈ ಪ್ರಶ್ನೆಗೂ ಸಹ ಯಾರೂ ಸರಿಯಾದ ಉತ್ತರವನ್ನು ಬರೆಯಲಿಲ್ಲ. ಮೂಲಿ ಎಂಬ ಪದವೇ ಕೆಲವರಿಗೆ ಅರ್ಥವಾಗಲಿಲ್ಲ. ಮೂಲಿ ಎಂಬ ಪದ ಕೆಲವು ಪ್ರಾಂತಗಳಲ್ಲಿ ಬಳಕೆಯಲ್ಲಿದ್ದರೂ, ಕೆಲವು ಪ್ರಾಂತಗಳಲ್ಲಿ ಕಡಿಮೆಯಾಗಿ ಬಳಸುತ್ತಿದ್ದಾರೆ. ಅಷ್ಟೇ ಹೊರತು ಮೂಲಿ ಎಂಬ ಪದ ಪೂರ್ತಿ ಹೊಸಪದವಲ್ಲ. ಮಾತುಗಳು ಬಂದು ಮಾತನಾಡದೇ ಮೌನವಾಗಿ ಇರುವವನನ್ನು, ಮಾಡಲು ಕೈಲಾಗಿ ಏನೂ ಮಾಡದೆ ಸುಮ್ಮನಿರುವವನನ್ನು ಮೂಲಿ ಎಂದು ಕರೆಯುತ್ತಿದ್ದೇವೆ. ಸುಮ್ಮನಿರುವವನನ್ನು ಮುನಿ ಎನ್ನುತ್ತಿದ್ದೇವೆ. ಮುನಿ ಎಂಬ ಪದ ಮೂಲಿಯಾಗಿ ಸಹ ಕರೆಯಲಾಗುತ್ತಿದೆ. ಮೂಲಿ ಎಂದರೇ ಈಗ ಎಲ್ಲರಿಗೂ ಅರ್ಥವಾಗಿರುತ್ತದೆ. ಮೂಲಿ ಮೂವರನ್ನು ಕೆಡಿಸಿದರೇ ಎನ್ನುವುದು ಯಾರಿಗೂ ಅರ್ಥವಾಗಲಿಲ್ಲ. ಕೆಡುವವು ಮೂರು ಯಾವುವು ಎನ್ನುವುದು ಸಹ ಯಾರಿಗೂ ತಿಳಿದಿಲ್ಲ. ಮೂಲಿ ಎಂದ ನಂತರ ಮೂಲಿ ಆಲಿ ಎಂದು ಆತನ ಹೆಂಡತಿಯನ್ನು ಕುರಿತು ಸಹ ಪ್ರಸ್ತಾವನೆ ಬಂದಿದೆ. ಮೂಲಿ ಹೆಂಡತಿ ಯಾರೋ ಒಬ್ಬರಿರಬಹುದು ಆದರೇ, ಆಕೆ ನಾಲ್ವರನ್ನು ಕೆಡಿಸಿದ್ದಾಳೆ ಎಂದಾಗ, ಆ ನಾಲ್ವರು ಯಾರೋ ಯಾರಿಗೂ ಅರ್ಥವಾಗದಿರುವುದರಿಂದ ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಯಾರೂ ಬರೆಯಲಾರದೆ ಹೋಗಿದ್ದಾರೆ.

ಈ ಪ್ರಶ್ನೆಗೆ ಉತ್ತರ ಆರನೇ ಪ್ರಶ್ನೆಯ ಉತ್ತರಕ್ಕೂ ಹತ್ತಿರ ಸಂಬಂಧವಾಗಿ ಇರುತ್ತದೆ. ಅಲ್ಲಿ ಪ್ರಕೃತಿ ಪರಮಾತ್ಮರನ್ನು ಸತಿ ಪತಿ ಎಂದು ಹೇಳಿದ್ದೇವೆ. ಇಲ್ಲಿ ಅದೇ ವಿಧವಾಗಿ ಪರಮಾತ್ಮನನ್ನು ಮೂಲಿಯೆಂದೂ, ಪ್ರಕೃತಿಯನ್ನು ಅವನ ಆಲಿ (ಹೆಂಡತಿ)

ಯೆಂದೂ ಹೇಳಿದ್ದೇವೆ. ಇಲ್ಲಿ ಪರಮಾತ್ಮ ಕೆಲಸಮಾಡದವನೆಂದು, ಹಾಗೆಯೇ ಯಾವುದನ್ನೂ ಹೇಳುವವನಲ್ಲವೆಂದು ಮೌನವಾಗಿ ಸಾಕ್ಷಿಯಾಗಿ ಇರುವವನೆಂದು ತಿಳಿಯುವಹಾಗೆ ಮೂಲಿ ಎಂದು ಅನ್ನುವುದು ನಡೆದಿದೆ. ಮೂಲಿ ಎಂದರೇ ಪರಮಾತ್ಮ (ದೇವರು) ಎಂದೂ, ಆತನ ಹೆಂಡತಿ ಎಂದರೆ ಪ್ರಕೃತಿಯೆಂದು ತಿಳಿದುಹೋಗಿದೆ. ಇನ್ನು ನಮಗೆ ಮೂವರು ಯಾರು ಎಂಬ ವಿಷಯ, ಹಾಗೆ ನಾಲ್ವರು ಯಾರು ಎಂಬ ವಿಷಯ ತಿಳಿಯಬೇಕಾಗಿದೆ. ದೇವರ ಅಧಿಕಾರ ಆತನ ಹೆಂಡತಿಯಾದ ಪ್ರಕೃತಿಯ ಮೇಲೆ ಇದೆ. ಪ್ರಕೃತಿ ದೇವರ ಆಜ್ಞೆಗೆ ಒಳಪಟ್ಟು ನಡೆಯುತ್ತಿದೆ. ಹೆಂಡತಿ ಗಂಡನನ್ನು ಅನುಸರಿಸಿ ಇರುವಂತೆ ಪ್ರಕೃತಿ ಪರಮಾತ್ಮನನ್ನು ಅನುಸರಿಸಿ ಪರಮಾತ್ಮ ಆದೇಶಾನುಸಾರ ನಡೆಯುತ್ತಿದೆ. ಪ್ರಕೃತಿ ಹೊರಗೆ ಪಂಚಭೂತಗಾಳಾಗಿ ಇದ್ದರೂ, ಶರೀರದ ಒಳಗೆ ದೈವಾಜ್ಞೆ ಪ್ರಕಾರ ನಡೆಯುವುದಕ್ಕೆ ಅನುಕೂಲವಾಗಿ ಮೂರು ಗುಣಗಳ ರೂಪದಲ್ಲಿದೆ. ಮೂರು ಗುಣಗಳನ್ನು ಸೇರಿಸಿ ಮಾಯೆ ಎಂದು ಕರೆಯುತ್ತಿದ್ದೇವೆ. ಪಂಚ ಭೂತಗಳ ರೂಪದಲ್ಲಿ ಹೊರಗೆ ಇರುವುದನ್ನು ಪ್ರಕೃತಿಯೆಂದೂ, ಮೂರು ಗುಣಗಳ ರೂಪದಲ್ಲಿ ಶರೀರದೊಳಗಿರುವುದನ್ನು ಮಾಯೆ ಎಂದು ಕರೆಯಲಾಗುತ್ತದೆ.

ಒಬ್ಬ ಮನುಷ್ಯ ದೈವಮಾರ್ಗದಲ್ಲಿ ಇದ್ದೇನೆಂದು ಅಂದುಕೊಂಡರೂ ಅವನು ಸರಿಯಾದ ಮಾರ್ಗದಲ್ಲಿ ಇರಬಹುದು ಅಥವಾ ಇಲ್ಲದಿರಬಹುದು. ಯಾರಾದರೇ ತಾಯಿತಂದೆಯರನ್ನು ಗೌರವಿಸಿದಹಾಗೆ, ಪ್ರಕೃತಿ ಪರಮಾತ್ಮರನ್ನು ಸರಿಯಾಗಿ ಅರ್ಥ ಮಾಡಿಕೊಂಡು ಸಮಾನವಾಗಿ ಗೌರವಿಸುತ್ತಾನೋ, ಅವನಿಗೆ ಮಾತ್ರ ದೇವರು ಕರುಣಿಸಿ ತನ್ನ ಹೆಂಡತಿ ಆದ ಮಾಯೆಗೆ ಆ ಜೀವಿಯನ್ನು ತನ್ನ ಕಡೆಗೆ ಕಳುಹಿಸುವಹಾಗೆ ಆಜ್ಞೆ ಮಾಡುವನು. ಆಗ ಪ್ರಕೃತಿಯಾದ ಮಾಯೆ ತನ್ನ ಗಂಡನ ಮಾತನ್ನು ಗೌರವಿಸಿ ಹಾಗೆಯೇ ಮಾಡುವುದು. ಇಲ್ಲಿ ದೇವರು ಮಾಯೆಗೆ ಆಜ್ಞೆ ಮಾಡುವುದನ್ನು ಎಲ್ಲರಿಗೂ ಅರ್ಥವಾಗದಂತೆ, ಜ್ಞಾನಿಗಳಿಗೆ ಮಾತ್ರವೇ ಅರ್ಥವಾಗುವಂತೆ ಹೇಳುವುದನ್ನೇ "ಮೂಲಿ ಮೂವರನ್ನು ಕೆಡಿಸಿದರೇ" ಎಂದು ಅನ್ನುವುದು ನಡೆದಿದೆ. ಮೂಲಿ ಎಂದರೇ ದೇವರೆಂದೂ, ಮೂವರು ಎಂದರೇ ತಾಮಸ, ರಾಜಸ, ಸಾತ್ವಿಕ ಎಂಬ ಮೂರು ಗುಣಗಳೆಂದೂ, ಕೆಡಿಸಿದರೇ ಎಂದರೇ ಮೂರು ಗುಣಗಳನ್ನು ಕೆಲಸ ಮಾಡದಂತೆ ಮಾಡುವುದೆಂದು ಅರ್ಥವಾಗುವಂತೆ ಆ ವಿಧವಾಗಿ ಹೇಳಿದ್ದಾರೆ. ಮನುಷ್ಯನ ಶರೀರದಲ್ಲಿ ದೇವರ ಜೋಕ್ಯದಿಂದ ಮೂರು ಗುಣಗಳು ಯಾವ ಕೆಲಸ ಮಾಡದಿರುವಾಗ ಬ್ರಹ್ಮಯೋಗ ಏರ್ಪಡುತ್ತದೆ. ಹಾಗೆ ಬ್ರಹ್ಮಯೋಗಿ ಆದವನು ಯೋಗದಲ್ಲಿ ಬರುವ ಜ್ಞಾನಾಗ್ನಿಯಿಂದ ಕರ್ಮವನ್ನು ಸುಟ್ಟುಕೊಂಡು ಅಲ್ಪ ಕಾಲದಲ್ಲಿಯೇ ಮೋಕ್ಷವನ್ನು ಹೊಂದುತ್ತಾನೆ.

ಪರಮಾತ್ಮ ಅಂದುಕೊಂಡರೇ ಯಾವ ಮನುಷ್ಯನಿಗಾದರೂ ಬ್ರಹ್ಮಯೋಗ ಲಭ್ಯವಾಗುತ್ತದೆ. ಇದು ಒಂದು ವಿಧಾನವಾದಾಗ, ಇನ್ನು ಎರಡನೆ ವಿಧಾನವೂ ಸಹ ಮತ್ತೊಂದು ಇದೆ. ಆ ಎರಡನೆ ವಿಧಾನದಲ್ಲಿ ಪರಮಾತ್ಮನ ಹೆಂಡತಿಯಾದ ಪ್ರಕೃತಿ ಅಂದುಕೊಂಡರೇ ನಾಲ್ವರನ್ನು ಕೆಡಿಸುತ್ತದೆಂದು ಇದೆ. ನಾಲ್ವರು ಎಂದರೇ! ಮೂರು ಗುಣಗಳ ಭಾಗಗಳನ್ನು ಮೂವರಾಗಿ ಲೆಕ್ಕಿಸಬಹುದು. ನಾಲ್ಕನೆ ಗುಣರಹಿತ ಭಾಗವನ್ನು ನಾಲ್ಕನೆಯವನಾಗಿ ಲೆಕ್ಕಿಸಬಹುದು. ಪ್ರಕೃತಿ ಅಂದುಕೊಂಡರೇ ನಾಲ್ಕಕ್ಕೂ ಸಂಬಂಧವಿಲ್ಲದ ಕರ್ಮಯೋಗದಲ್ಲಿ ಮನುಷ್ಯನನ್ನು ನಿಲ್ಲಿಸುತ್ತದೆ. ತಮ್ಮ ಮಗುವಿಗೆ ತಾಯಿ ತಂದೆ ಇಬ್ಬರೂ ಹೇಗೆ ಸಹಾಯ ಮಾಡುತ್ತಿದ್ದಾರೋ ಹಾಗೆಯೇ ಒಬ್ಬ ಮನುಷ್ಯ ದೇವರ ಕಡೆ ಹೋಗುವುದಕ್ಕೆ ಬೇಕಾದ ಎರಡು ಯೋಗಗಳನ್ನು ಪ್ರಕೃತಿ, ಪುರುಷರಾದ ಮಾಯೆ ಹಾಗೂ ದೇವರು ಕೈಗೂಡಿಸುತ್ತಿದ್ದಾರೆ. ಸ್ತ್ರೀ ಆದ ಪ್ರಕೃತಿ ಕರ್ಮಯೋಗವನ್ನು, ಪುರುಷನಾದ ದೇವರು ಬ್ರಹ್ಮಯೋಗವನ್ನು ಶರೀರದಲ್ಲಿ ಜೀವಿಗೆ ಕಲ್ಪಿಸುತ್ತಿದ್ದಾರೆ. ಈ ವಿಷಯವನ್ನು ತಿಳಿಸುವುದಕ್ಕೆ ಜ್ಞಾನಿಗಳಿಗೆ ಮಾತ್ರ ಅರ್ಥವಾಗುವಂತೆ ಮೂಲಿ ಮೂವರನ್ನು ಕೆಡಿಸುವುದು, ಅವನ ಆಲಿ (ಹೆಂಡತಿ) ನಾಲ್ವರನ್ನು ಕೆಡಿಸುವುದು ಎಂದು ಹೇಳಿದ್ದಾರೆ.

**1048. (8) ಸೃಷ್ಟಿ ಆದಿಯಲ್ಲಿ ದೇವರು ಆಕಾಶವಾಣಿಯಿಂದ ಜ್ಞಾನವನ್ನು ಹೇಳುವಾಗ ಮೂರು ಧರ್ಮಗಳನ್ನು ಮಾತ್ರ ಹೇಳಿದ್ದಾನೆ. ನಂತರ ದ್ವಾಪರ ಯುಗದಲ್ಲಿ ತನ್ನ ದೂತ ಅಥವಾ ಭಗವಂತನಾದ ಶ್ರೀಕೃಷ್ಣನಿಂದ ಜ್ಞಾನವನ್ನು ಹೇಳಿದಾಗ ನಾಲ್ಕು ಅಧರ್ಮಗಳನ್ನು ಹೇಳಿದ್ದಾನೆ. ಮೊದಲು ಹೇಳಿದ ಮೂರು ಧರ್ಮಗಳು ಯಾವುವು? ನಂತರ ದ್ವಾಪರಯುಗದಲ್ಲಿ ಹೇಳಿದ ನಾಲ್ಕು ಅಧರ್ಮಗಳು ಯಾವುವು?**

ಉ॥ ಮೂರು ಧರ್ಮಗಳು ಬ್ರಹ್ಮಯೋಗ, ಕರ್ಮಯೋಗ, ಭಕ್ತಿಯೋಗ ಎನ್ನುವವು ಆದಾಗ, ದ್ವಾಪರಯುಗದಲ್ಲಿ ಹೇಳಿದ ಅಧರ್ಮಗಳು ನಾಲ್ಕು ಅಧರ್ಮಗಳಲ್ಲಿ ಒಂದು ಯಜ್ಞಗಳು, ಎರಡು ವೇದಗಳು, ಮೂರು ದಾನಗಳು, ನಾಲ್ಕು ತಪಸ್ಸುಗಳು ಎಂದು ಹೇಳಬಹುದು.

**ವಿವರ :–** ಈಗ ನಾವು ಹೇಳಿರುವ ಉತ್ತರಗಳು ಕೆಲವರಿಗೆ ವಿಚಿತ್ರವಾಗಿ ಕಾಣಿಸಿದರೂ ಹೇಳಿದ ವಿಷಯ ಮಾತ್ರ ವಾಸ್ತವ. ಇದು ನಾನು ಪ್ರತ್ಯೇಕಿಸಿ ಹೇಳಿರುವುದಲ್ಲ. ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆಯಲ್ಲೇ ಈ ವಿಷಯಗಳು ಇವೆ. ಮೊದಲು ಸೃಷ್ಟಿ ಆದಿಯಲ್ಲಿ ವಾಣಿಯಿಂದ ಹೇಳಲಾಗಿರುವ ಜ್ಞಾನದಲ್ಲಿ ಮೂರು ಧರ್ಮಗಳು ದೇವರನ್ನು

ಸೇರುವ ಮಾರ್ಗಗಳಾದ ಮೂರು ಯೋಗಗಳಾಗಿ ಇವೆ. ನಂತರ ಮನುಷ್ಯರು ದೇವರು ಹೇಳಿದ ಜ್ಞಾನವನ್ನು ಬಿಟ್ಟು ಅಧರ್ಮಗಳನ್ನು ಆಚರಿಸಲು ಆರಂಭಿಸಿದ್ದಾರೆ. ಅಧರ್ಮಗಳ ಆಚರಣೆ ಹೆಚ್ಚಾದ ನಂತರ ಅವುಗಳನ್ನು ಅಡಗಿಸುವ ನಿಮಿತ್ತ, ಧರ್ಮಗಳನ್ನು ತಿಳಿಸುವ ನಿಮಿತ್ತ ದ್ವಾಪರಯುಗದಲ್ಲಿ ದೇವರು ಮನುಷ್ಯನಾಗಿ ಬಂದು ಜ್ಞಾನವನ್ನು ಹೇಳಿದ್ದಾನೆ. ಆಗ ಧರ್ಮಗಳಾದ ಬ್ರಹ್ಮ, ಕರ್ಮ, ಭಕ್ತಿ ಯೋಗಗಳನ್ನು ತಿಳಿಸುವುದೇ ಅಲ್ಲದೆ ಅವುಗಳೊಂದಿಗೆ ಅಧರ್ಮಗಳನ್ನು ಸಹ ತಿಳಿಸಿದ್ದಾನೆ.

ದೇವರ ಧರ್ಮಗಳನ್ನು ಯೋಗಗಳ ರೂಪದಲ್ಲಿ ಹೇಳಿದರೂ ಮನುಷ್ಯ ಅವುಗಳನ್ನು ಅರ್ಥ ಮಾಡಿಕೊಳ್ಳಲಾರದೆ ಹೋಗಿದ್ದಾನೆ. ಮನುಷ್ಯ ದೇವರ ಕಡೆ ಹೋಗಬೇಕೆಂಬ ಧೃಢ ಸಂಕಲ್ಪ ಇಲ್ಲದವನಾದ್ದರಿಂದ, ದೇವರ ಸತಿಯಾದ ಪ್ರಕೃತಿ ತನ್ನ ಮಾಯೆಯಿಂದ ಮನುಷ್ಯನಿಗೆ ದೇವರ ಜ್ಞಾನವನ್ನು ಅರ್ಥವಾಗದಂತೆ ಮಾಡಿ ಪಕ್ಕದ ದಾರಿಯೊಳಗೆ ಹೋಗುವಂತೆ ಮಾಡಿದೆ. ಮನುಷ್ಯ ದೇವರ ಜ್ಞಾನವನ್ನು ಅರ್ಥ ಮಾಡಿಕೊಳ್ಳಲಾರದ ಸ್ಥಿತಿಯಲ್ಲಿ ಇದ್ದೂ ಸಹ ತಾನು ಎಲ್ಲಾ ತಿಳಿದವನೆಂದು ಗರ್ವ ಬೀಳುವುದರಿಂದ ಆತನಿಗೆ ಅಧರ್ಮಗಳನ್ನು ಸಹ ದೇವರೇ ಜೊತೆಮಾಡಿದ್ದಾನೆ. ದೇವರ ಆದೇಶಾನುಸಾರ ಪ್ರಕೃತಿ ಮನುಷ್ಯನಿಗೆ ನಾಲ್ಕು ಅಧರ್ಮಗಳನ್ನು ಆಚರಿಸುವಂತೆ ಮಾಡಿದೆ. ಆ ನಾಲ್ಕು ಅಧರ್ಮಗಳನ್ನು ಆಚರಿಸುವಂತೆ ಮಾಡಿ ಅವುಗಳನ್ನೇ ಧರ್ಮಗಳಾಗಿ ಲೆಕ್ಕಿಸುವಂತೆ ಮಾಡಿದೆ. ಅದರಿಂದ ಮನುಷ್ಯ ಧರ್ಮಗಳಾದ ಯೋಗಗಳ ಸ್ಥಾನದಲ್ಲಿ ಅಧರ್ಮಗಳಾದ ಯಜ್ಞ, ದಾನ, ವೇದ, ತಪಸ್ಸುಗಳನ್ನು ಇಟ್ಟುಕೊಂಡಿದ್ದಾನೆ. ನಿಜವಾದ ಧರ್ಮಾಚರಣೆಗಳಾದ ಮೂರು ಯೋಗಗಳನ್ನು ಮನುಷ್ಯ ಮರೆತುಹೋಗಿ ಅಧರ್ಮಗಳಾದ ಯಜ್ಞ, ದಾನ, ವೇದ, ತಪಸ್ಸುಗಳನ್ನು ಆಚರಣೆಯಾಗಿ ಇಟ್ಟುಕೊಂಡಿದ್ದಾನೆ. ಈ ವಿಧವಾಗಿ ಮನುಷ್ಯ ಧರ್ಮಗಳನ್ನು ಅರ್ಥ ಮಾಡಿಕೊಳ್ಳದೇ ಅವುಗಳನ್ನು ಪೂರ್ತಿ ಮರೆತುಹೋಗಿ, ಅವುಗಳ ಸ್ಥಾನದಲ್ಲಿ ಯಜ್ಞ, ದಾನ, ವೇದ, ತಪಸ್ಸುಗಳನ್ನು ಕಲ್ಪಿಸಿಕೊಂಡಿದ್ದಾನೆ. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ ಭಗವಂತನ ರೂಪದಲ್ಲಿರುವ ದೇವರು ಪುನಃ ಹೇಳಿದರೂ, ಇಂದಿಗೂ ಮನುಷ್ಯ ದೇವರು ಹೇಳಿದ ಜ್ಞಾನವನ್ನು ಬಿಟ್ಟು ಅಧರ್ಮಗಳನ್ನು ಆಚರಿಸುತ್ತಿದ್ದಾನೆ. ಇತರರಿಂದ ಅಧರ್ಮ ಆಚರಣೆಯೇ ಮುಖ್ಯವೆನ್ನುವಂತೆ ಅವುಗಳನ್ನೇ ಮಾಡಿಸುತ್ತಿದ್ದಾನೆ. ಈ ದಿನ ಸ್ವಾಮಿಗಳು, ಗುರುಗಳಾಗಿ ಇರುವವರೇ ಅಧರ್ಮಗಳನ್ನು ಧರ್ಮಗಳೆಂದು ಆಚರಿಸುವುದರಿಂದ, ಏನೂ ತಿಳಿಯದ ಉಳಿದ ಪ್ರಜೆಗಳೆಲ್ಲರೂ ಅವರನ್ನೇ ಆಶ್ರಯಿಸಿ, ಅವರು ಹೇಳಿರುವುದೇ ಜ್ಞಾನವೆಂದುಕೊಂಡು, ಅಧರ್ಮ ಆಚರಣೆಗಳು ಮಾಡುವುದಕ್ಕೇ

ಅಭ್ಯಾಸವಾಗುತ್ತಿದ್ದಾನೆ. ಯಾವುದೋ ಒಂದು ಭಕ್ತಿ ಇದ್ದರೆ ಸಾಕೆಂದು ಅಂದುಕೊಂಡಿದ್ದಾರೆ ಹೊರತು, ನಾನು ಮಾಡುವುದು ಧರ್ಮಾಚರಣೆಯಾ ಅಥವಾ ಅಧರ್ಮಾಚರಣೆಯಾ ಎಂದು ಸ್ವಲ್ಪವಾದರೂ ಆಲೋಚಿಸದಂತಿದ್ದಾರೆ. ಅದರಿಂದ ಭೂಮಿಮೇಲೆ ಅಧರ್ಮಾಚರಣೆ ಬೆಳೆದುಹೋಗಿದೆ, ಧರ್ಮಗಳೆಂದರೇ ಏನೋ ತಿಳಿಯದ ಸ್ಥಿತಿಯಲ್ಲಿ ಮನುಷ್ಯ ಉಳಿದಿದ್ದಾನೆ.

## ಜ್ಞಾನ ಪರೀಕ್ಷೆ

**ದಿನಾಂಕ 04–04–2016 – ತ್ರೈತ ಶಕ–38– ಚಿನ್ನಪೊಡಮಲ (ತಾಡಿಪತ್ರಿ ಮಂ॥)**

***ಸೂಚನೆ :– ಪ್ರಶ್ನೆಗೆ ಸರಿಯಾದ ಉತ್ತರವನ್ನು ಒಂದು ಮಾತಲ್ಲಾಗಲೀ, ಒಂದು ವಾಕ್ಯದಲ್ಲಾಗಲೀ ಬರೆಯಬೇಕು.***

**1049. (1) ಕಾಲದಲ್ಲಿ ಎಷ್ಟು ಅಕ್ಷರಗಳು ಇವೆ?**

ಉ :– ಒಂದು ಅಕ್ಷರವಾದ ಆತ್ಮ ಇದೆ.

**ವಿವರ :–** ಇದು ಆಧ್ಯಾತ್ಮಿಕ ಪರಿಕ್ಷೆ. ಆದ್ದರಿಂದ ಇವುಗಳ ಉತ್ತರಗಳು ಸ್ಥೂಲವಾಗಿ ಅಲ್ಲದೆ ಸೂಕ್ಷ್ಮವಾಗಿಯೇ ಇರುತ್ತವೆ. ಆದ್ದರಿಂದ **'ಕಾಲ'** ಎನ್ನುವುದು ಎರಡಕ್ಷರಗಳ ಕನ್ನಡ ಪದವಾಗಿ ತೆಗೆದುಕೊಳ್ಳಬಾರದು. ಸ್ಥೂಲವಾಗಿ ಬರೆದ ಪದದಲ್ಲಿ ನೋಡಿದರೇ ಎರಡು ಕಾಣಿಸುವ ಅಕ್ಷರಗಳು ಇರುತ್ತವೆ. ಆದರೇ ಇಲ್ಲಿ ಕಾಣಿಸುವ ಕಾಲ ಎಂದು ಬರೆಯಲಾಗಿರುವ ಪದವನ್ನು ಕುರಿತು ಕೇಳಲಿಲ್ಲ. **'ಕಾಲ'** ಎಂಬ ಪದವೊಂದರ ಪದದಲ್ಲಿರುವ ಅರ್ಥವನ್ನು ಕುರಿತು ಇಲ್ಲಿ ಕೇಳುವುದಾಗಿದೆ. ಕಾಲ ಎಂದರೇ 'ದೈವ' ಎಂದು ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿ 32ನೇ ಶ್ಲೋಕದಲ್ಲಿ **"ಕಾಲವು ನಾನೇ"** ಎಂದು ಹೇಳಿರುವುದರಿಂದ ಕಾಲವೆಂದರೇ ದೇವರೇಯೆಂದು ಹೇಳಬಹುದು. ಇಲ್ಲಿ ದೇವರಲ್ಲಿ ಎಷ್ಟು ಅಕ್ಷರಗಳಿವೆ? ಎಂದು ಪ್ರಶ್ನೆ ಕೇಳುವುದಾಗಿದೆ. **'ಅಕ್ಷರ'** ಎಂದರೇ ನಾಶವಾಗದ್ದೆಂದು ಅರ್ಥ. ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳಲ್ಲಿ ಕ್ಷರನು, ಅಕ್ಷರನು ಎಂದು ಇಬ್ಬರು ಪುರುಷರು ಇದ್ದಾರೆಂದು, ಮೂರನೆ ಪುರುಷನು ಇಬ್ಬರ ಪುರುಷರಿಗಿಂತ ಉತ್ತಮವಾದ ಪುರುಷೋತ್ತಮನೆಂದು (ಪರಮಾತ್ಮಯೆಂದು) ಹೇಳುವುದಾಗಿದೆ. ಇದನ್ನನುಸರಿಸಿ ದೇವರು

ಮೂರು ಆತ್ಮಗಳಾಗಿ ಇದ್ದಾನೆಂದು ಅದರಲ್ಲಿ ನಾಶವಾಗುವ ಆತ್ಮ (ಜೀವಾತ್ಮ) ಒಂದಾದಾಗ, ನಾಶವಾಗಿರುವುದು ಅಕ್ಷರನು (ಆತ್ಮ) ಎರಡನೆಯದಾದಾಗ, ಮೂರನೆಯದು ಪುರುಷೋತ್ತಮನೆಂದು ಇದೆ. ಮೇಲಿನ ಪ್ರಶ್ನೆಯಲ್ಲಿ ಕಾಲದಲ್ಲಿ ಎಷ್ಟು ಅಕ್ಷರಗಳು ಇವೆ? ಎಂದಾಗ ನಾಶವಾಗದ ಆತ್ಮ ಒಂದೇ ಇರುವುದರಿಂದ, ಒಂದು ಅಕ್ಷರವೇ ಇದೆಯೆಂದು ಹೇಳುವುದು ಸರಿಯಾದ ಉತ್ತರವಾಗುತ್ತದೆ.

**1050. (2) ಜನರನ್ನು ಏನೆನ್ನುತ್ತೇವೆ?**

ಉ) 'ಹುಟ್ಟದವನು' ಎಂದು ಅನ್ನುತ್ತೇವೆ. ಹುಟ್ಟಿದರೂ ಹುಟ್ಟದವನೊಂದಿಗೆ ಸಮಾನವಾದವನನ್ನು ಹಾಗೆ ಕರೆಯಬಹುದು.

**ವಿವರ :–** 'ಜನನ' ಎಂದರೇ ಹುಟ್ಟಿದರೂ ಹುಟ್ಟದವನು. 'ಜ' ಎಂದರೇ ಹುಟ್ಟುವುದೆಂದು ಅರ್ಥ. 'ನ' ಎಂದರೇ ಇಲ್ಲ ಎಂದು ಅರ್ಥ. ಇದರ ಪ್ರಕಾರ 'ಜನ' ಎಂದರೇ ಹುಟ್ಟಿದರೂ ಹುಟ್ಟದವನೇಯೆಂದು ಅರ್ಥ. ಮನುಷ್ಯರಲ್ಲಿ ಮನು ಧರ್ಮವನ್ನು ಆಚರಿಸುವ ಮಾನವರು ಇದ್ದಾರೆ. ಹಾಗೆಯೇ ದೈವಧರ್ಮಗಳನ್ನು ಆಚರಿಸುವ ಪ್ರಜೆಗಳು ಇದ್ದಾರೆ. "ಹುತ್ತದಲ್ಲಿನ ಗೆದ್ದಲು ಹುಟ್ಟುವುದಿಲ್ಲವಾ ಸಾಯುವುದಿಲ್ಲವಾ" ಎಂದ ಹಾಗೆ ಜನ್ಮಿಸಿ ಯಾವ ಪ್ರಯೋಜನೆ ಇಲ್ಲದ ಹುಟ್ಟಿದರೂ ಹುಟ್ಟದವರೊಂದಿಗೆ ಸಮಾನವಾದ ಜನ ಇದ್ದಾರೆ.

**1051. (3) ಪ್ರತಿ ಜೀವಿಗೂ ಹನ್ನೊಂದು ಇರುತ್ತವೆ. ಅವು ಯಾವುವು?**

ಉ) ಏಳು ಜೊತೆಗಳ ಕಾಡಿ (ಜೋಡಿ) ಕೇಂದ್ರಗಳು, ನಾಲ್ಕು ಅಂತಃಕರಣಗಳು ಒಟ್ಟು ಹನ್ನೊಂದು ಪ್ರತಿ ಜೀವಿಗೂ ಇವೆ.

**ವಿವರ :–** ಪ್ರತಿ ಮನುಷ್ಯನ ಶರೀರದಲ್ಲಾಗಲೀ, ಪ್ರತಿ ಜೀವರಾಶಿ ಶರೀರದಲ್ಲಾಗಲೀ ಏಳು ನಾಡೀಕೇಂದ್ರಗಳು, ಏಳು ಗ್ರಂಥಿ ಕೇಂದ್ರಗಳು ಇರುತ್ತವೆ. ಒಂದು ನಾಡೀಕೇಂದ್ರ, ಒಂದು ಗ್ರಂಥಿಕೇಂದ್ರ ಎರಡನ್ನೂ ಸೇರಿಸಿ ಒಂದು ಕಾಡಿಕೇಂದ್ರ ಎನ್ನುತ್ತೇವೆ. 'ಕಾಡೀ' ಎಂದರೇ ಜೋಡಿಯೆಂದು ಅರ್ಥ. ಒಂದು ಜೋಡಿ ಸೇರಿ ಕೆಲಸ ಮಾಡುವುದನ್ನು ಒಂದು ಕಾಡಿ ಕೆಲಸವೆಂದು ಹೇಳಬಹುದು. ಯಾವುದಾದರೂ ಒಂದು ಕಾಡಿ ಇದ್ದರೇ ಅದರಲ್ಲಿ ಎರಡು ಇರುತ್ತವೆ. ಒಂದು ನೇಗಿಲಿಂದ ಭೂಮಿಯನ್ನು ಉಳುಮೆ ಮಾಡುವ ಕೆಲಸವನ್ನು ಎರಡು ಎತ್ತುಗಳು ಸೇರಿ ಮಾಡುತ್ತಿವೆ. ಆಗ ಅವುಗಳನ್ನು 'ಕಾಡಿ' ಎನ್ನುವುದು ನಡೆಯುತ್ತಿದೆ. ಒಂದು ಕಾಡಿಯಲ್ಲಿ ಎತ್ತುಗಳು ಇರಬಹುದು. ನಾಡೀ ಹಾಗೂ ಗ್ರಂಥಿ

ಇರಬಹುದು. ಇಬ್ಬರು ವ್ಯಕ್ತಿಗಳಾದರೂ ಇರಬಹುದು. ನಾಡೀ ಕೇಂದ್ರದಲ್ಲಿ ಯಾವ ಶಕ್ತಿ ಇದೆಯೋ ಅದೇ ಶಕ್ತಿಯೇ ಗ್ರಂಥಿಯಲ್ಲಿ ಸಹ ಇದೆ. ನಾಡಿಯಲ್ಲೂ, ಗ್ರಂಥಿಯಲ್ಲೂ ಮಧ್ಯ ಆತ್ಮ ಶಕ್ತಿಯೇ ಇದೆಯೆಂದು ಮರೆಯಬಾರದು. ಆತ್ಮಶಕ್ತಿಯನ್ನು **'ಹರ್ಷ'** ಎಂದು ಹೇಳಲಾಗಿದೆ. **'ಸಪ್ತರ್ಷ'** ಎಂದರೇ ಏಳು ಆತ್ಮಗಳೆಂದು ಹೇಳಬಹುದು ಅಥವಾ ಏಳು ಸಂತೋಷಗಳೆಂದು ಅನ್ನಬಹುದು. ನಾಡೀ ಸ್ಥಾನಗಳನ್ನು, ಗ್ರಂಥಿಗಳನ್ನು ಸ್ತಂಭಿಸುವಂತೆ ಮಾಡುವುದನ್ನು ಬ್ರಹ್ಮಯೋಗ ಎಂದು ಅನ್ನುತ್ತೇವೆ. ಪ್ರತಿ ಜೀವಿ ಬ್ರಹ್ಮಯೋಗವನ್ನು ಮಾಡುವುದಕ್ಕೆ ಅವಕಾಶವಿರುವಂತೆ ಏಳು ಜೋಡಿಗಳಾದ ಏಳು ಕಾಡಿಕೇಂದ್ರಗಳನ್ನು ದೇವರು ತಯಾರು ಮಾಡಿ ಇಟ್ಟಿದ್ದಾನೆ.

**1052. (4) ಜೀವರಾಶಿಗಳಿಗೆ ಬಾಲಗಳಿರುತ್ತವಾ? ಎಲ್ಲಾದರೂ ಮನುಷ್ಯನಿಗೆ ಬಾಲ ಇರುತ್ತದಾ?**

ಉ) ಬಾಲಗಳಿರುತ್ತವೆ. ಪ್ರತಿ ಮನುಷ್ಯನಿಗೂ ಬಾಲ ಇದೆ.

**ವಿವರ :–** ನಾವು ಚಿಕ್ಕಂದಿನಲ್ಲಿ ಒಂದು ಗಾದೆ ಮಾತನ್ನು ಕೇಳಿದ್ದೇವೆ. ಹಳ್ಳಿಗಳಲ್ಲಿ ಇಬ್ಬರು ಸೇರಿ ದಾರಿಯಲ್ಲಿ ಹೋಗುವಾಗ ಇತರರು ಅವರನ್ನು ನೋಡಿ **"ಬಾಲದ ಹಿಂದೆ ನಾರಾಯಣ ಎನ್ನುವಂತೆ ಇಬ್ಬರೂ ಜೊತೆಯಾಗಿದ್ದೀರಾ!"** ಎಂದು ಅನ್ನುತ್ತಿದ್ದರು. ಇಬ್ಬರೂ ಸೇರಿ ಇದ್ದಾಗ ಹಾಗೆ ಅನ್ನುತ್ತಿದ್ದಾರೆಂದರೇ ಅದಕ್ಕೆ ಪ್ರತ್ಯೇಕವಾದ ಅರ್ಥ ವಿರುತ್ತದೆಂದು ತಿಳಿದು ನಾನು ಹಿರಿಯರನ್ನು ಭೇಟಿಮಾಡಿ ಆ ಮಾತಿಗೆ ಅರ್ಥವೇನು? ಎಂದು ಕೇಳಿದ್ದೇವೆ. ಆದರೇ ಅವರು ಸಮಾಧಾನ ಹೇಳದೆ, ಯಾರಾದರೂ ಅನ್ನುವುದನ್ನೇ ನಾವು ಕೇಳದ್ದೇವೆ. ಅದರ ಅರ್ಥ ನಮಗೂ ತಿಳಿದಿಲ್ಲವೆಂದು ಹೇಳಿದ್ದಾರೆ. ಇದನ್ನು ಕುರಿತು ಈ ಮಧ್ಯ ಕಾಲದಲ್ಲಿ ಗುರುವಿನಿಂದ ತಿಳಿದ ವಿವರವನ್ನು ಈಗ ನಿಮಗೆ ತಿಳಿಸುತ್ತಿದ್ದೇವೆ ನೋಡಿರಿ.

ಪ್ರತಿ ಮನುಷ್ಯನಿಗೂ ಕಾಣಿಸದವನು ಒಬ್ಬನು ಜೊತೆಯಾಗಿದ್ದು ಅವನ ಹಿಂದೆಯೇ ಹೋಗುತ್ತಿರುವುದರಿಂದ, ಹಾಗೆ ಹಿಂದೆ ಇರುವವನನ್ನು ಮನುಷ್ಯನಿಗೆ ಅಂಟಿಕೊಂಡಿರುವ ಬಾಲದಂತಹವನೆಂದು, ಕಾಣಿಸದವನನ್ನು (ಆತ್ಮನನ್ನು) ಬಾಲ ಎಂದು ಅಂದಿದ್ದಾರೆ. ಅಷ್ಟೇ ಅಲ್ಲದೆ ಬಾಲದಹಾಗೆ ಮನುಷ್ಯನ ಹಿಂದೆ ಇರುವ ತಿಳಿಯದವನನ್ನು ಕುರಿತು ಅವನು ಇಂತಹವನೆಂದು ಎಲ್ಲರಿಗೂ ತಿಳಿಸುವ ನಿಮಿತ್ತ ಮನುಷ್ಯನ ಹಿಂದೆ ಬಾಲದಂತಿರುವ ವನನ್ನು 'ನಾರಾಯಣ' ಎಂದು ಕರೆಯಲಾಗಿದೆ. ಹಾಗೆ ಅನ್ನುವುದರಲ್ಲಿ 'ಬಾಲದ ಹಿಂದೆ ನಾರಾಯಣ' ಎಂದು ಹೇಳುವುದಾಗಿದೆ. ನಾರಾಯಣ ಎಂದರೇ ನಾಶರಹಿತನೆಂದು

ಅರ್ಥ. ನಾಶ ಎಂದರೆ ಕ್ಷರ ಎಂದು ಅರ್ಥ. ನಾಶ ರಹಿತ ಎಂದರೇ ಅಕ್ಷರ ಎಂದು ಅರ್ಥ. ನಾಶರಹಿತನಾದ ಅಕ್ಷರನು ಎಂಬ ಆತ್ಮ ಪ್ರತಿ ಮನುಷ್ಯನ ಶರೀರದಲ್ಲಿ ಜೀವಿಯೊಂದಿಗೆ ಇದ್ದು ಶರೀರದಲ್ಲಿ ಕೆಲಸವನ್ನು ಮಾಡಿಸುತ್ತಿದೆ. ಆದ್ದರಿಂದ ಆತ್ಮವನ್ನು ಬಾಲ ಎಂದೂ, ಆತ್ಮ ಅಕ್ಷರವಾಗಿರುವುದೆಂದೂ ಹೇಳುವುದಕ್ಕೆ 'ಬಾಲದ ಹಿಂದೆ ನಾರಾಯಣ' ಎಂಬ ವಾಕ್ಯವನ್ನು ಹೇಳಿದ್ದಾರೆ.

**1053. (5) ಆಹಾರಗಳು ಎಷ್ಟು ವಿಧಗಳು. ಅವು ಯಾವುವು?**

ಉ) ಆಹಾರ ಎರಡು ವಿಧಗಳು. ಒಂದು ಕ್ಷಯ ಆಹಾರ. ಎರಡು ಅಕ್ಷಯ ಆಹಾರ.

**ವಿವರ :–** ಇವು ಆಧ್ಯಾತ್ಮಿಕವಾದ ಪ್ರಶ್ನೆಗಳಾದ್ದರಿಂದ ಉತ್ತರ ಪ್ರಪಂಚ ರೀತಿಯಲ್ಲಿ ಹೇಳದೆ ಜ್ಞಾನರೀತಿಯಲ್ಲೇ ಹೇಳಬೇಕಾಗಿದೆ. ಆದ್ದರಿಂದ ಜ್ಞಾನ ಸಂಬಂಧವಾದ ಉತ್ತರವಾಗಿ ಆಹಾರ ಎರಡು ವಿಧಗಳೆಂದು, ಒಂದು ಕ್ಷಯಾಹಾರವೆಂದೂ, ಎರಡು ಅಕ್ಷಯಾ ಹಾರವೆಂದೂ ಹೇಳಬಹುದು. ಕ್ಷಯಾಹಾರವೆಂದರೇ ನಾಶವಾಗುವುದು ಅಥವಾ ಜೀರ್ಣವಾಗುವುದೆಂದು ಅರ್ಥ. ಸ್ಥೂಲವಾಗಿ ಕಾಣಿಸುವ ಆಹಾರಗಳು ಎಷ್ಟು ವಿಧಗಳಿದ್ದರೂ ಅವು ಎಲ್ಲವೂ ತಿಂದ ಮೂರು ಗಂಟೆಗಳಿಗೇ ಜೀರ್ಣವಾಗಿ (ನಾಶವಾಗಿ) ಹೋಗುವವು. ಸ್ಥೂಲ ಆಹಾರ ತಿಂದ ನಂತರ ಅದರ ರೂಪುರೇಖೆಗಳು ಬದಲಾಗಿ ಅದು ಪೂರ್ತಿ ತನ್ನ ಸಾಮರ್ಥ್ಯವನ್ನು ಕಳೆದುಕೊಂಡು ಪೂರ್ತಿಯಾಗಿ ನಾಶವಾಗಿಹೋಗುವುದು. ಇನ್ನೂ ವಿವರವಾಗಿ ಹೇಳಿದರೇ ಹೊಟ್ಟೆಯಲ್ಲಿ ಹಾಕಿರುವ ಆಹಾರ ಅಲ್ಲಿರುವ ಜಠರಾಗ್ನಿಗೆ ಪೂರ್ತಿ ಸುಟ್ಟುಹೋಗಿ ಭಸ್ಮ ಮಾತ್ರ ಉಳಿದುಹೋಗುತ್ತದೆ. ಈ ವಿಧಾನವನ್ನೇ ಭಗವದ್ಗೀತೆಯಲ್ಲಿ **"ದ್ರವ್ಯಯಜ್ಞವೆಂದು"** ಹೆಸರಿಟ್ಟು ಹೇಳುವುದಾಗಿದೆ. ಇನ್ನೂ ಎರಡನೆಯದಾದ ಅಕ್ಷಯಾಹಾರವನ್ನು ಕುರಿತು ಹೇಳಿದರೇ ಅದು ಕಣ್ಣಿಗೆ ಕಾಣಿಸುವುದು ಅಲ್ಲ, ಕಿವಿಗೆ ಮಾತ್ರ ಕೇಳಿಸುವುದು. ಅದನ್ನೇ **"ಜ್ಞಾನ'** ಎಂದು ಅನ್ನುತ್ತೇವೆ. ಜ್ಞಾನ ಬೋಧನೆ ರೂಪದಲ್ಲಿ ಸಿಗುತ್ತದೆ. ಆದ್ದರಿಂದ ಅಕ್ಷಯಾಹಾರ ಕಿವಿಗಳಿಗೆ ಮಾತ್ರ ತಿಳಿಯುವುದೆಂದು ಹೇಳಿದ್ದೇವೆ. ಅಕ್ಷಯವಾದ ಜ್ಞಾನವನ್ನು ಎಷ್ಟು ಕೇಳಿದರೂ ಕ್ಷಯಾಹಾರ ಹೊಟ್ಟೆ ತುಂಬಿದಂತೆ ಜ್ಞಾನಬೋಧನೆಗಳು ತಲೆಯಲ್ಲಿ ತುಂಬುವುದಿಲ್ಲ. ಒಂದು ಬಾರಿ ಕೇಳಿರುವ ಬೋಧನೆಯನ್ನು ಎಷ್ಟು ಜನರಿಗೆ ಹೇಳಿದರೂ ಅದು ತನ್ನ ಹತ್ತಿರದಿಂದ ಇಳಿಕೆಯಾಗುವುದಿಲ್ಲ. ಇದನ್ನು ಕಳ್ಳರು ಕದಿಯಲಾಗುವುದಿಲ್ಲ. ಯಾವ ವಿಧವಾಗಿಯೂ ಅದು ನಾಶವಾಗುವಂತದ್ದಲ್ಲ. ಆದ್ದರಿಂದ ಜ್ಞಾನಬೋಧನೆಗಳನ್ನು ಅಕ್ಷಯ ಆಹಾರವೆಂದು ಹೇಳಲಾಗಿದೆ.

**1054. (6) ಹಣೆಯ ಮೇಲೆ ದೇವರ ಮುದ್ರೆ ಧರಿಸದವರಿಗೆ ಎಷ್ಟು ಬಾಧೆ ಉಂಟಾಗಬಹುದು?**

ಉ) ಒಂದು ಚೇಳು ಕಚ್ಚಿದಷ್ಟು ನೋವಿನಿಂದ ಐದು ತಿಂಗಳವರೆಗು ನೋವನ್ನು ಉಂಟುಮಾಡಬಹುದು.

**ವಿವರ :–** ಈ ವಿಷಯವನ್ನು ಕುರಿತು ಇಂಜೀಲ್ ಗ್ರಂಥದಲ್ಲಿ ಕೊನೆಯಲ್ಲಿನ ಪ್ರಕಟಣೆ ಗ್ರಂಥದಲ್ಲಿ 9ನೇ ಅಧ್ಯಾಯದಲ್ಲಿ 4ನೇ ವಾಕ್ಯದಿಂದ 6ನೇ ವಚನದವರೆಗು ನೋಡಿದರೆ ಹೀಗೆ ಇದೆ. ***(ಪ್ರಕಟಣೆ 9ನೇ ಅಧ್ಯಾಯ 4, 5, 6 ವಚನಗಳು) 4) ಹಣೆಯಲ್ಲಿ ದೇವರ ಮುದ್ರೆ ಇಲ್ಲದ ಮನುಷ್ಯರಿಗೇ ಹೊರತು ಭೂಮಿಮೇಲಿರುವ ಉಲ್ಲಿಗಾದರೂ, ಯಾವ ಗಿಡಗಳಿಗಾದರೂ, ಯಾವ ವೃಕ್ಷಕ್ಕಾದರೂ ಹಾನಿ ಉಂಟುಮಾಡಬಾರದೆಂದು ಅವುಗಳಿಗೆ ಆಜ್ಞೆ ಕೊಡಲಾಗಿದೆ. 5) ಮತ್ತು ಅವರನ್ನು ಸಾಯಿಸುವುದಕ್ಕೆ ಅಧಿಕಾರ ಕೊಡಲಿಲ್ಲ ಆದರೆ ಐದು ತಿಂಗಳವರೆಗು ಹಿಂಸಿಸುವುದಕ್ಕೆ ಅವುಗಳಿಗೆ ಅಧಿಕಾರ ಕೊಡಲಾಗಿದೆ. ಅವುಗಳಿಂದ ಉಂಟಾಗುವ ನೋವು ಚೇಳು ಮನುಷ್ಯನನ್ನು ಕಚ್ಚಿದಾಗ ಇರುವ ನೋವಿನಂತೆ ಇರುತ್ತದೆ. 6) ಆ ದಿನಗಳಲ್ಲಿ ಮನುಷ್ಯರು ಮರಣವನ್ನು ಹುಡುಕುವರು ಆದರೆ ಅದು ಅವರಿಗೆ ಸಿಗುವುದೇ ಇಲ್ಲ. ಸಾಯಬೇಕೆಂದು ಆಸೆ ಪಡುತ್ತಾರೆ ಆದರೆ ಮರಣ ಅವರ ಹತ್ತಿರದಿಂದ ಓಡಿಹೋಗುವುದು.***

**1055. (7) ಭಕ್ತನು ದುಃಖ ಪಟ್ಟರೆ ದೇವರು ಏನು ಮಾಡುವನು?**

ಉ) ಸಾಕ್ಷಿಯಾಗಿ ನೋಡುತ್ತಾ ಇರುವನು.

**ವಿವರ :–** ದೈವಗ್ರಂಥಗಳಲ್ಲಿ ದೇವರು ಸಾಕ್ಷಿ ಮಾತ್ರವೇಯೆಂದು ಹೇಳಲಾಗಿದೆ. ಅಷ್ಟೇ ಅಲ್ಲದೆ "ದೇವರು ನಾಮ, ರೂಪ, ಕ್ರಿಯಾ ರಹಿತನು" ಎಂಬ ಧರ್ಮವನ್ನು ಅನುಸರಿಸಿ ಇರುವನು. ಆದ್ದರಿಂದ ದೇವರು ಸಾಕ್ಷಿಯೇ ಹೊರತು ಏನೂ ಮಾಡುವವನಲ್ಲ.

**1056. (8) ಮೃತಿ ಎನ್ನುವ ಪದ ಯಾವುದರಿಂದ ಬಂದಿದೆ?**

ಉ) 'ಸ್ಮೃತಿ' ಎಂಬ ಪದದಿಂದ 'ಮೃತಿ' ಎಂಬ ಪದ ಹುಟ್ಟಿದೆ.

**ವಿವರ :–** ಸ್ಮೃತಿ ಎಂದರೇ ಜ್ಞಾಪಕವೆಂದು ಅರ್ಥ. ಯಾವಾಗಾದರೆ ಮನುಷ್ಯನಿಗೆ ಜ್ಞಾಪಕ ಇಲ್ಲದಂತೆ ಹೋಗುತ್ತದೊ ಆಗ ಅವನು ಮರಣಿಸಿದವನಂತೆ ಹೇಳಬಹುದು. ಜ್ಞಾಪಕವನ್ನು ಇಲ್ಲದಂತೆ ಮಾಡುವುದೇ ಮರಣ. ಆದ್ದರಿಂದ ಸ್ಮೃತಿ ಇಲ್ಲದವನನ್ನು ಮರಣ ಹೊಂದಿದವನಂತೆ ಲೆಕ್ಕಿಸಬಹುದು.

**1057. (9) ಏಕೇಶ್ವರೋಪಾಸನೆ ಯಾರಿಗೆ ಅವಶ್ಯ? ಹಿಂದೂಗಳಿಗಾ, ಕ್ರೈಸ್ತರಿಗಾ, ಮುಸ್ಲಿಮ್‌ರಿಗಾ?**

ಉ) ಮೂರು ಮತದವರಿಗೂ ಅವಶ್ಯ.

**ವಿವರ :–** ಮೇಲ್ನೋಟಕ್ಕೆ ಒಂದು ಹಿಂದೂಮತದಲ್ಲಿ ಮಾತ್ರವೇ ಏಕೇಶ್ವರೋಪಾಸನೆ ಇಲ್ಲವೆಂದು, ಉಳಿದ ಎರಡು ಮತಗಳಲ್ಲಿ ಮೊದಲೇ ಏಕೇಶ್ವರೋಪಾಸನೆ ಇದೆಯೆಂದು ಎಲ್ಲರೂ ಅಂದುಕೊಳ್ಳುತ್ತಿದ್ದಾರೆ. ಮೇಲ್ನೋಟಕ್ಕೆ ಹಾಗೆಯೇ ಅನಿಸಿದರೂ ವಾಸ್ತವವಾಗಿ ಯಾವ ಮತದಲ್ಲಿಯೂ ಸಹ ಏಕೇಶ್ವರೋಪಾಸನ ಇಲ್ಲವೆಂದೇ ಹೇಳಬಹುದು. **ಏಕೇಶ್ವರೋಪಾಸನೆ ಎಂದರೇ ಒಂದೇ ದೇವರನ್ನು ವಿಶ್ವಾಸಿಸುವುದು, ಒಂದೇ ದೇವರನ್ನು ಆರಾಧಿಸುವುದು, ಇತರೆ ದೇವರು ಮತ್ತೊಬ್ಬನು ಇಲ್ಲವೆಂದು ಪೂರ್ತಿಯಾಗಿ ನಂಬುವುದು.** ಈ ಮೂರು ವಿಧಾನಗಳಿರುವವನು ಯಾರಾದರೂ ಏಕೇಶ್ವರೋಪಾಸನೆಯಲ್ಲಿ ಇದ್ದಂತೆ ಆಗುತ್ತದೆ. ಹಾಗಲ್ಲದೇ ಯಾವ ಒಂದು ವಿಧಾನದಲ್ಲಾದರೂ ಆಚರಣೆ ಭೇದವಿದ್ದರೂ, ಭಾವ ಭೇದವಿದ್ದರೂ ಆತನು ಏಕೇಶ್ವರೋಪಾಸನೆಯಲ್ಲಿ ಇಲ್ಲದಂತೆ! ಹಿಂದೂಗಳು ಅನೇಕ ದೇವತೆಗಳನ್ನು ಪೂಜಿಸುವುದರಿಂದ ಅವರಲ್ಲಿ ಏಕೇಶ್ವರೋಪಾಸನೆ ಇಲ್ಲವೆಂದು ಹೇಳಬಹುದು. ಹಾಗೆಯೇ ಕ್ರೈಸ್ತರು, ಮುಸ್ಲೀಮ್‌ರು ಇತರೆ ದೇವತೆಗಳನ್ನು ಪೂಜಿಸದೆ ಹೋಗಿರುವುದರಿಂದ ಒಂದೇ ದೇವರನ್ನು ಆರಾಧಿಸುವುದರಿಂದ ಅವರು ಏಕೇಶ್ವರೋಪಾಸನೆಯಲ್ಲಿ ಇದ್ದಾರೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಆದರೇ ಇಲ್ಲಿ ಅವರು ಇತರೆ ದೇವತೆಗಳನ್ನಾಗಲೀ, ಇತರೆ ದೇವರನ್ನಾಗಲೀ ಪೂಜಿಸದೇ ಅವರ ದೇವರನ್ನು ಅವರು ಪೂಜಿಸುವುದು ವಾಸ್ತವವೇ, ಆದರೂ ಅವರು ಇತರ ಮತಗಳ ದೇವತೆಗಳಿದ್ದಾರೆಂದು ಅವರ ದೇವರಿಗಿಂತ ನಮ್ಮ ದೇವರೇ ದೊಡ್ಡವನೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಇತರೆ ದೇವರು ಒಬ್ಬನಿದ್ದಾನೆಂದು ತಿಳಿದಾಗಾಗಲೀ, ಇದ್ದಾನೆಂದು ಅಂದುಕೊಳ್ಳುವುದರಿಂದಾಗಲೀ ದೇವರು ಒಬ್ಬನೆಂಬ ನಂಬಿಕೆ ಇಲ್ಲದಂತೇ ಆಗುತ್ತಿದೆ. ಆಗ 'ಏಕೇಶ್ವರನು" ಎಂಬ ಮಾತಿಗೆ ಅರ್ಥವೇ ಇಲ್ಲದಂತಾಗುತ್ತದೆ. ಆರಾಧಿಸುವುದು ಒಬ್ಬನನ್ನೇ ಎನ್ನುವ ಮಾತಿಗಿಂತ 'ಇರುವವನು ಒಬ್ಬನೇ' ಎಂದು ತಿಳಿಯುವುದೇ 'ಏಕೇಶ್ವರನು' ಎಂಬ ಮಾತಿಗೆ ಅರ್ಥ ಸರಿಹೋಗುತ್ತದೆ. ಹಾಗಲ್ಲದೇ ಇತರರು ಇದ್ದರೂ ನನ್ನ ದೇವರೊಬ್ಬನನ್ನೇ ನಾನು ಆರಾಧಿಸುತ್ತಿದ್ದೇನೆಂದು ಅಂದುಕೊಂಡರೂ ಅದು ಏಕೇಶ್ವರೋಪಾಸನೆ ಆದರೂ, ಆತನ ಲೆಕ್ಕದಲ್ಲಿ ಏಕೇಶ್ವರನು ಇಲ್ಲದಂತಾಗುತ್ತದೆ. ಮುಸ್ಲೀಮ್‌ರು ಹಿಂದೂಗಳ ದೇವರು ಬೇರೆ, ನಮ್ಮ ದೇವರು ಬೇರೆ

ಎಂದು ಹೇಳುತ್ತಿದ್ದಾರೆ. ಆಗ ಅವರ ಲೆಕ್ಕದಲ್ಲಿ ದೇವರುಗಳು ಇಬ್ಬರಾಗಿದ್ದಾರೆ ಆದರೆ ಒಬ್ಬರಾಗಲಿಲ್ಲ ಅಲ್ಲವೆ! ಹಾಗೆಯೇ ಕ್ರೈಸ್ತರು ಅನ್ನುತ್ತಿದ್ದಾರೆ. ಆದ್ದರಿಂದ ಹಿಂದೂಗಳು ಅಂದುಕೊಂಡಂತೇ, ಉಳಿದ ಎರಡು ಮತದವರು ಅಂದುಕೊಳ್ಳುವುದರಿಂದ ದೇವರು, ದೇವರ ಜ್ಞಾನ ಅವರಿಗೆ ಬೇರೆಬೇರೆಯಾಗಿ ಕಾಣಿಸುವುದರಿಂದ, 'ನಮ್ಮ ದೇವರು ಬೇರೆ, ನಮ್ಮ ಜ್ಞಾನ ಬೇರೆ' ಎಂಬ ಭಾವವಿರುವುದರಿಂದ ಅವರಿಗೆ ಏಕೇಶ್ವರನು ಕಾಣಿಸದೆ ಬೇರೆ ದೇವರು ಸಹ ಇರುವಂತೆ ಭಾವವಿದೆ. ಆದ್ದರಿಂದ ಅವರು ಒಬ್ಬನೇ ದೇವರನ್ನು ಪೂಜಿಸಿದರೂ ಅದು ಏಕೇಶ್ವರೋಪಾಸನೆಯಾಗಿ ಮೇಲ್ನೋಟಕ್ಕೆ ಕಾಣಿಸಿದರೂ ವಾಸ್ತವವಾಗಿ ಅದು ಏಕೇಶ್ವರೋಪಾಸನೆ ಅಲ್ಲದಂತೆ ಆಗುತ್ತದೆ. ಅನೇಕ ದೇವತೆಗಳಿದ್ದಾರೆನ್ನುವ ಹಿಂದೂಗಳು ತಮ್ಮ ಇಷ್ಟ ದೇವರನ್ನು ಒಬ್ಬನನ್ನೇ ಪೂಜಿಸಿ ನಾವು ಏಕೇಶ್ವರೋಪಾಸನೆ ಮಾಡುತ್ತಿದ್ದೇವೆಂದುಕೊಂಡರೂ ಅದು ಏಕೇಶ್ವರೋಪಾಸನೆ ಅಲ್ಲದಂತೆ, ಉಳಿದ ಮತದವರು ಸಹ ಅವರ ಇಷ್ಟದೈವವನ್ನು ಆರಾಧಿಸುತ್ತಾ ಏಕೇಶ್ವರೊಪಾಸನೆ ಎಂದರೂ ಅದು ಏಕೇಶ್ವರೋಪಾಸನೆ ಅಲ್ಲ. ಆದ್ದರಿಂದ ಪ್ರಪಂಚವೆಲ್ಲದಕ್ಕೂ ಒಬ್ಬನೇ ಈಶ್ವರನು (ಒಬ್ಬನೇ ಅಧಿಪತಿ) ಇದ್ದಾನೆಂದು ನಂಬುವುದೇ ಏಕೇಶ್ವರೋಪಾಸನೆ ಆಗುತ್ತದೆ. ಅಂತಹವನು ಪ್ರತ್ಯೇಕವಾದ ಆರಾಧನೆ ಮಾಡದಿದ್ದರೂ ಅವರ **ನಂಬಿಕೆಯೇ** ಆರಾಧನೆಯಾಗುತ್ತದೆ.

**1058. (10) ನಿನ್ನ ಹಿಂದೆ ಏನಿದೆ? ಯಾರಿದ್ದಾರೆ?**

**ಉ) ಪರಮಾತ್ಮ, ಆತ್ಮ.**

**ವಿವರ :–** ಪ್ರತಿ ಶರೀರದಲ್ಲೂ ಜೀವಿಸುವ ಜೀವಾತ್ಮ ಇರುವಾಗ, ಆತನನ್ನು ನಡೆಸುವುದಕ್ಕೆ ಅಥವಾ ಜೀವಿಸುವಂತೆ ಮಾಡುವುದಕ್ಕೆ ಆತನೊಂದಿಗೆ ಜೊತೆಯಾಗಿ, ಜೋಡಿಯಾಗಿ ಆತ್ಮ ಮೊದಲು ಇದೆ. ಆತ್ಮ ನಡೆಸುತ್ತಿರುವಾಗ ಜೀವಾತ್ಮ ನಡೆಯುತ್ತಿದ್ದಾನೆ. ಇವರಿಬ್ಬರನ್ನು ಸಾಕ್ಷಿಯಾಗಿ ಪರಮಾತ್ಮ ಗಮನಿಸುತ್ತಿರುವನು. ಈ ವಿಷಯವನ್ನು ಮೂರು ದೈವ ಗ್ರಂಥಗಳಲ್ಲಿ ಹೇಳಿದ್ದಾರೆ. ಜೀವಾತ್ಮ ಹಿಂದೆ ಆತ್ಮ, ಪರಮಾತ್ಮರಿದ್ದಾರೆಂದು ಒಂದು ವಿಧವಾಗಿ ಹೇಳಬಹುದು. ಸಂಪೂರ್ಣ ಜ್ಞಾನ ತಿಳಿದ ನಂತರ ಜೀವಾತ್ಮನ ಮುಂದೆ ಆತ್ಮ, ಜೀವಾತ್ಮನ ಹಿಂದೆ ಪರಮಾತ್ಮ ಇದೆಯೆಂದು ಇನ್ನೊಂದು ವಿಧವಾಗಿ ಹೇಳಬಹುದು.

**ಅಸತ್ಯವನ್ನು ಸಾವಿರ ಮಂದಿ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರಮಂದಿ ಅಲ್ಲಗಳೆದರೂ ಅದು ಅಸತ್ಯವಲ್ಲ.**

# 1058
# ಆಧ್ಯಾತ್ಮಿಕ ಪ್ರಶ್ನೆಗಳು – ಉತ್ತರಗಳು





Author :

The Only GURU of Three Religions

The Spiritual Emperor, Thraitha Theorem Originator

**Sri Acharya Prabodhananda Yogeeshwarulu**



**www.thraithashakam.org**